**ಶ್ರೀಪಾದ ರಘುನಾಥ ಭಿಡೆ**—ಜನನ ನಾಗಪುರದಲ್ಲಿ (೧೯೧೯). ಪುಣೆಯ ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ 'ಸಾಹಿತ್ಯ ವಿಶಾರದ' (೧೯೪೨) ಮತ್ತು ಮುಂಬಯಿ ವಿಶ್ವವಿದ್ಯಾನಿಲಯದ ಎಂ.ಎ. (೧೯೪೬) ಪದವಿಗಳನ್ನು ಗಳಿಸಿ ಸುಮಾರು ಆರು ವರ್ಷ ಪುಣೆಯ ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಕರಾಗಿ ದುಡಿದರು. ಅನಂತರ ೧೯೪೬ರಿಂದ ಮೂರು ದಶಕಗಳ ಕಾಲ ವಿಜಾಪುರದ ಸಂಗನಬಸವೇಶ್ವರ ಕಾಲೇಜಿನಲ್ಲಿ ಅರ್ಧಮಾಗಧಿ ಹಾಗೂ ಮರಾಠಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಹುಟ್ಟಿದ್ದು, ಬೆಳೆದದ್ದು, ಉನ್ನತ ಹಂತದವರೆಗಿನ ಶಿಕ್ಷಣ ಪಡೆದದ್ದು, ಎಲ್ಲವೂ ಮಹಾರಾಷ್ಟ್ರದಲ್ಲಾದರೂ, ವಿಜಾಪುರಕ್ಕೆ ನೌಕರಿಗೆಂದು ಬಂದಾರಭ್ಯ ಸೋದರ ಭಾಷೆ ಕನ್ನಡದಲ್ಲಿ ಆಸಕ್ತಿ ತಳೆದು, ಬಳಿಕೆಯ ಕನ್ನಡವನ್ನು ಶೀಘ್ರವಾಗಿ ಕಲಿತು, ಕನ್ನಡ ಸಾಹಿತ್ಯದ ಅಧ್ಯಯನದಲ್ಲೂ ತಮ್ಮನ್ನು ತೊಡಗಿಸಿಕೊಂಡರು.

ಕರ್ನಾಟಕದ ಕಾಲೇಜು ಶಿಕ್ಷಣ ಇಲಾಖೆಯ ಸೇವೆಯಿಂದ ೧೯೭೫ರಲ್ಲಿ ನಿವೃತ್ತರಾದಮೇಲೆ ಪುಣೆಯಲ್ಲಿ ನೆಲೆಸಿರುವ ಭಿಡೆಯವರಿಗೆ 'ಸೋನೋಪಂತ ದಾಂಡೇಕರ ಟ್ರಸ್ಟ್', 'ಇಚಲಕರಂಜೀ ಟ್ರಸ್ಟ್', 'ಮಹಾರಾಷ್ಟ್ರ ಗ್ರಂಥೋತ್ತೇಜಕ ಸಭಾ' ಮುಂತಾದ ಸಂಸ್ಥೆಗಳಿಂದ ಪ್ರಶಸ್ತಿ-ಸಮ್ಮಾನಗಳು ಲಭ್ಯವಾಗಿವೆ. ರಾಮಾಯಣ-ಮಹಾಭಾರತಗಳು ಇವರ ವಿಶೇಷ ಆಸ್ಥೆ-ಅಧ್ಯಯನದ ವಿಷಯಗಳು. ಇವರ ಪ್ರಮುಖ ಸಂಶೋಧನಾ ಕೃತಿಗಳಾದ *ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ, ಮಹಾಭಾರತದ ಶಾಪಗಳು* (ಸಂಪುಟ ೧, ೨), *ಮಹಾಭಾರತದಲ್ಲಿ ಕುಮಾರಸಂಭವ* ಕನ್ನಡ, ಹಿಂದೀ, ತೆಲುಗು ಮತ್ತು ಇಂಗ್ಲಿಷ್ ಭಾಷೆಗಳಿಗೂ ಅನುವಾದವಾಗಿವೆ.

ಮರಾಠಿ ಸಾಹಿತ್ಯಪ್ರಪಂಚದಲ್ಲಿ ನಾಮಾಂಕಿತರಾಗಿರುವ ಭಿಡೆಯವರು ಹಲವಾರು ಸಂಶೋಧನಾ ಕೃತಿಗಳನ್ನು ರಚಿಸಿರುವುದು ಮಾತ್ರವಲ್ಲದೆ, ಕನ್ನಡದ *ಯಯಾತಿ* (ಗಿರೀಶ ಕಾರ್ನಾಡ) ಮತ್ತು *ಕೀಚಕ* (ಕೈಲಾಸಂ) ನಾಟಕಗಳ ಮತ್ತು *ಕನ್ನಡ ರಂಗಭೂಮಿಯ ಇತಿಹಾಸ* ಕೃತಿಯ ಮರಾಠಿ ಅನುವಾದಗಳನ್ನೂ ಪ್ರಕಟಿಸಿದ್ದಾರೆ.

* * *

**(ಶ್ರೀಮತಿ) ಸರಸ್ವತಿ ಗಜಾನನ ರಿಸಬೂಡ**—ಜನನ ಧಾರವಾಡದಲ್ಲಿ (೧೯೩೧). ಬಿ. ಎ. ಪದವೀಧರೆ ; ಹಿರಿಯ ಐ.ಎ.ಎಸ್. ಅಧಿಕಾರಿ ಶ್ರೀ ರಿಸಬೂಡ ಅವರ ಪತ್ನಿ. ಸಾಹಿತ್ಯ-ಸಂಸ್ಕೃತಿಗಳ ಅಧ್ಯಯನದಲ್ಲಿ ತೀವ್ರ ಆಸಕ್ತಿ ತಳೆದಿರುವ ಇವರು ಕನ್ನಡಕ್ಕೆ ಅನುವಾದಿಸಿದ ಭಿಡೆಯವರ *ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ* ಕೃತಿಗೆ ೧೯೯೨ರ ಕೇಂದ್ರ ಸಾಹಿತ್ಯ ಅಕಾದೆಮಿಯ 'ಉತ್ತಮ ಅನುವಾದ-ಕೃತಿ ಪ್ರಶಸ್ತಿ' ಲಭಿಸಿದೆ. ಇವರ ಇತರ ಅನುವಾದ ಕೃತಿಗಳು : *ಯುಗಾಂತ, ಮಾನವ ಎಚ್ಚೆತ್ತಾಗ, ಭಾರತೀಯ ಮುಸಲ್ಮಾನರು, ಭಾರತದ ಸ್ವಾತಂತ್ರ್ಯ ಸಂಗ್ರಾಮ, ಸ್ತ್ರೀ ಪುರುಷ.*

* * *

**ವಿರೂಪಾಕ್ಷ ಕುಲಕರ್ಣಿ**—ವಿಜಾಪುರ ಜಿಲ್ಲೆಯ ಹನಗಡಿಯಲ್ಲಿ ಜನನ (೧೯೪೦). ೧೯೬೩ರಿಂದ ೧೯೯೦ರವರೆಗೆ ಪುಣೆಯಲ್ಲಿನ ಕೇಂದ್ರ ಸರ್ಕಾರದ ಸಂರಕ್ಷಣಾ ಉತ್ಪಾದನೆಯ ಕಾರ್ಖಾನೆಯಲ್ಲಿ ಎಲೆಕ್ಟ್ರಿಕಲ್ ಹಾಗೂ ಇನ್‌ಸ್ಟ್ರುಮೆಂಟೇಷನ್ ಇಂಜನಿಯರಾಗಿ ಸೇವೆ ಸಲ್ಲಿಸಿ, ಸೇವಾವಧಿಗೆ ಮುನ್ನವೇ ಸ್ವ-ಇಚ್ಛೆಯಿಂದ ನಿವೃತ್ತರಾಗಿ ಪುಣೆಯಲ್ಲಿ ನೆಲೆಸಿದ್ದಾರೆ. ಕನ್ನಡಿಗರು ಮತ್ತು ಮರಾಠಿಗರ ಬಾಂಧವ್ಯದ ಸಂವರ್ಧನಾ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಇವರು ಈ ಬಗೆಗಿನ ಅನೇಕ ಲೇಖನಗಳನ್ನೂ *ಪು. ಲ. ದೇಶಪಾಂಡೆ: ವ್ಯಕ್ತಿ ಮತ್ತು ವಾಙ್ಮಯ, ಡಾ. ಶಿವರಾಮ ಕಾರಂತರ ಕಾದಂಬರಿಗಳು—ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ* ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಿಸಿದ್ದಾರೆ. *ಅಂಬೇಡ್ಕರ್ ವಾದ: ತತ್ವ ಮತ್ತು ವ್ಯವಹಾರ, ಮಹಾಭಾರತದ ಶಾಪಗಳು* (ಸಂಪುಟ ೧, ೨) ಮತ್ತು *ಮಹಾಭಾರತದಲ್ಲಿ ಕುಮಾರಸಂಭವ* ಇವರ ಇತರ ಅನುವಾದ ಕೃತಿಗಳು.

ಭಿಡೆಯವರ *ವಾಲ್ಮೀಕಿ ರಾಮಾಯಣ: ಶಾಪ ಮತ್ತು ವರ* ಕೃತಿಯನ್ನು ದ್ವಿತೀಯ ಸಂಸ್ಕರಣಕ್ಕಾಗಿ ಆಮೂಲಾಗ್ರವಾಗಿ ಪರಿಷ್ಕರಿಸುವಲ್ಲಿ ಕುಲಕರ್ಣಿಯವರು ತಮ್ಮ ವಿದ್ವತ್ತು, ಪಾಂಡಿತ್ಯ, ಪರಿಶ್ರಮಗಳನ್ನು ಮೆರೆದಿದ್ದಾರೆ.

# ವಾಲ್ಮೀಕಿ ರಾಮಾಯಣ
## ಶಾಪ ಮತ್ತು ವರ

ಶ್ರೀಪಾದ ರಘುನಾಥ ಭಿಡೆ

ಅನುವಾದ
ಸರಸ್ವತಿ ಗಜಾನನ ರಿಸಬೂಡ

ದ್ವಿತೀಯ ಸಂಸ್ಕರಣದ ಪರಿಷ್ಕರಣ
ವಿರೂಪಾಕ್ಷ ಕುಲಕರ್ಣಿ

ಕೇಂದ್ರ ಸಾಹಿತ್ಯ ಅಕಾಡೆಮಿಯ
ಉತ್ತಮ ಭಾಷಾಂತರ ಕೃತಿ ಪ್ರಶಸ್ತಿ



ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧

***Vālmīki Rāmāyaṇa : Śāpa mattu Vara*** [*Vālmīki Rāmāyaṇa : Curses and Boo*
By Sripad Raghunath Bhide, M.A., Reader in Marathi (Retd.), Sangana Basavesh
Arts College, Bijapur [A/2, 'Shri Laxmi Chhaya', 52, Ideal Colony, Kothrud, Pune - 411
(Maharashtra)]. Translated into Kannada from the Author's Marathi work entitled *Vā*
*Rāmāyaṇa : Śāpa aṇi Vara* by Sou. S. Saraswathi Gajanana Risbud. Translation Re
for the Second Edition by Virupax Kulakarni. Published by Geetha Book House,
Circle, Mysore 570 001. First Publised 1990 ; Second Revised Edition 2001.

ಪ್ರಥಮ ಪ್ರಕಾಶನ ೧೯೯೦
ದ್ವಿತೀಯ ಪರಿಷ್ಕೃತ ಸಂಸ್ಕರಣ ೨೦೦೧

ಕಾಪಿರೈಟ್ © ಸೌ॥ ಶಾಂತಾ ಶ್ರೀಪಾದ ಭಿಡೆ

ಹೊರಹೊದಿಕೆ ಕಲೆ–ವಿನ್ಯಾಸ : ಸೂರಿ

ಡಿಟಿಪಿ ಸಂಯೋಜನೆ : ಹರ್ಷ ಪ್ರಿಂಟರ್ಸ್, ಮೈಸೂರು ೫೭೦ ೦೦೪
ಮುದ್ರಣ : ಶ್ರೀ ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ, ಮೈಸೂರು ೫೭೦ ೦೦೪

# ಪರಿವಿಡಿ


ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರದ ವತಿಯಿಂದ . . . ೬
ಇಂದು ನಾನು ಶಾಪವಿಮುಕ್ತನಾದೆ... . . . ೭
ಋಣಂ ಕೃತ್ವಾ... . . . ೧೦
ಅನುವಾದಕಿಯ ಎರಡು ಮಾತುಗಳು (ಪ್ರಥಮ ಸಂಸ್ಕರಣ) . . . ೧೨
ಪರಿಷ್ಕರಣೆಯನ್ನು ಕುರಿತು (ದ್ವಿತೀಯ ಸಂಸ್ಕರಣ) . . . ೧೩
ಈ ಕೃತಿಯ ದೃಷ್ಟಿಕೋನ . . . ೧೫

**ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ**

ಭಾಗ : ಒಂದು—ಪ್ರಸ್ತಾವನೆ : ಶಾಪಾದಪಿ ವರಾದಪಿ ! . . . ೧೯
ಭಾಗ : ಎರಡು—ಶಾಪವಾಣಿ, ೧-೫೯ . . . ೮೨
ಭಾಗ : ಮೂರು—ವರದಾನ, ೧-೮೯ . . . ೧೩೮
ಭಾಗ : ನಾಲ್ಕು—ಆಣೆಗಳು, ಸತ್ಯಕ್ರಿಯೆಗಳು, ೧-೨೭ . . . ೨೩೫
ಭಾಗ : ಐದು—ಪ್ರತಿಜ್ಞೆಗಳು, ೧-೪೪ . . . ೨೫೨
ಭಾಗ : ಆರು—ಆಶೀರ್ವಾದಗಳು (೧-೧೭) ಹಾಗೂ ಹೊತ್ತ ಹರಕೆಗಳು (೧-೨) . . . ೨೮೬
ಭಾಗ : ಏಳು—ವ್ಯಕ್ತಿವಿಶೇಷ, ೧-೧೬೨ . . . ೨೯೭
ಭಾಗ : ಎಂಟು—ಸ್ಥಳವಿಶೇಷ, ೧-೨೬ . . . ೩೭೨
ಭಾಗ : ಒಂಬತ್ತು—ಪರಿಶಿಷ್ಟಗಳು
೧ : ಸಂದೇಹಾಸ್ಪದ ಶಾಪ / ವರಗಳು, ೧-೧೧ . . . ೩೮೯
೨ : ಶಾಪಗಳ ಕಾರಣಗಳು . . . ೩೯೧
೩ : ಶಾಪಗಳ ಪರಿಣಾಮಗಳು . . . ೩೯೨
೪ : ಶಾಪಗಳ ಪ್ರಕಾರಗಳು, ಉಶ್ಶಾಪಗಳು, ಮರುಶಾಪಗಳು . . . ೩೯೩
೫ : ವರಗಳ ಕಾರಣಗಳು . . . ೩೯೩
೬ : ವರಗಳ ಪರಿಣಾಮಗಳು . . . ೩೯೪
೭ : ವರಗಳ ಸ್ವರೂಪಗಳು . . . ೩೯೫
೮ : ಶಾಪಗಳನ್ನು ಕೊಡು-ಪಡೆವವರ ಸೂಚಿ . . . ೩೯೫
೯ : ಶಾಪಗಳನ್ನು ಪಡೆ-ಕೊಡುವವರ ಸೂಚಿ . . . ೩೯೬
೧೦ : ವರಗಳನ್ನು ಕೊಡು-ಪಡೆವವರ ಸೂಚಿ . . . ೩೯೭
೧೧ : ವರಗಳನ್ನು ಪಡೆ-ಕೊಡುವವರ ಸೂಚಿ . . . ೩೯೯
೧೨ : ಆಕರ ಗ್ರಂಥಗಳು . . . ೪೦೦

# ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರದ ವತಿಯಿಂದ

ಹೆಸರಿಗೆ ತಕ್ಕಂತೆ ಈ ಕೇಂದ್ರವು ಮರಾಠಿ ಹಾಗೂ ಕನ್ನಡ ಜನತೆಯ ನಡುವೆ ಬಾಂಧವ್ಯವನ್ನು ಹೆಚ್ಚಿಸಲೆಂದು ಕಳೆದ ವರ್ಷ ಪುಣೆಯಲ್ಲಿ ಜನ್ಮತಾಳಿತು. ಈ ಬಾಂಧವ್ಯದ ಮಾಧ್ಯಮಗಳೆಂದರೆ ಸಾಹಿತ್ಯ, ಕಲೆ ಮತ್ತು ಪರಿಸಂವಾದ. ಇದರನ್ವಯ ಕೇಂದ್ರವು ಹಲವು ವಿಧಾಯಕ ಯೋಜನೆಗಳನ್ನು ಹಮ್ಮಿಕೊಂಡಿದೆ. ಕನ್ನಡ-ಮರಾಠಿ ವಿಷಯಗಳ ಸಂಯುಕ್ತ ಅಧ್ಯಯನಕ್ಕೆ ಪುರಸ್ಕಾರ ನೀಡುತ್ತಿದೆ. ಪುಣೆ ವಿಶ್ವವಿದ್ಯಾಲಯದಲ್ಲಿ ಇದಕ್ಕಾಗಿ ಒಂದು ಪೀಠ ಸ್ಥಾಪನೆಗೆ ಯತ್ನಿಸುತ್ತಲಿದೆ. ಉಭಯ ಭಾಷೆಗಳ ಲೇಖಕರು, ಕಲಾವಿದರು ಹಾಗೂ ಅವರ ಕೃತಿಗಳನ್ನು ಪರಸ್ಪರ ಪರಿಚಯಿಸಿ ಕೊಡುತ್ತಲಿದೆ.

ಇವಕ್ಕಿಂತ ಹೆಚ್ಚು ಮಹತ್ವದ್ದು ಗ್ರಂಥ, ಲೇಖನಗಳ ಅನುವಾದ ಮತ್ತು ಪ್ರಸರಣ. *ಕಾಖಂಡಕಿಯ ಶ್ರೀ ಮಹೀಪತಿರಾಯರು* ಎಂಬ ಸಂಶೋಧನ ಗ್ರಂಥವನ್ನು, *ಕಾರಂತರ ಕಾದಂಬರಿಗಳು—ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ* ಎಂಬ ಸಮೀಕ್ಷೆಯನ್ನು (ಪುತ್ತೂರಿನ ಕರ್ನಾಟಕ ಸಂಘದವರ ಮೂಲಕ) ಹೊರತಂದಿದೆ.

ಪ್ರಸ್ತುತ ಗ್ರಂಥದ ರಚನೆ-ಪ್ರಸರಣದಲ್ಲಿ ಕೇಂದ್ರವು ಲೇಖಕರಾದ ಶ್ರೀ. ರ. ಭಿಡೆ ಅವರಿಗೆ ಪ್ರೇರಣೆಯನ್ನು ಒದಗಿಸಿದೆ. ಎಷ್ಟೆಂದರೂ ಅವರು ಕೇಂದ್ರದ ಧರ್ಮದರ್ಶಿಗಳಲ್ಲಿ ಒಬ್ಬರು. ಅವರ ಮೂಲ ಮರಾಠಿ ಕೃತಿಗಳ ಅನುವಾದವನ್ನು ಬೇರೆಯವರು ಮಾಡುತ್ತಲಿದ್ದಾರೆ. ಆದರೆ ಸ್ವತಃ ಅವರು ಕನ್ನಡ ಕೃತಿಗಳನ್ನು ಮರಾಠಿಗರಿಗೆ ಪರಿಚಯಿಸುವಲ್ಲಿ ತುಂಬಾ ಆಸಕ್ತರು ; ಅದರಲ್ಲಿ ನಿರತರು.

ಅವರ ಈ ಕನ್ನಡಾನುವಾದ ಕೃತಿಯ ಪ್ರಕಟನೆಗೆ ಪೂರ್ಣತಃ ಪಾಲ್ಗೊಂಡ ಗೀತಾ ಬುಕ್ ಹೌಸ್ ಅವರಿಗೆ ನಾವು ಸದೈವ ಋಣಿಗಳು.

ಕೃ. ಶಿ. ಹೆಗಡೆ
ಪ್ರಧಾನ ಕಾರ್ಯದರ್ಶಿ

ಪುಣೆ
ಸೆಪ್ಟೆಂಬರ್ ೧೯೯೦

# ಇಂದು ನಾನು ಶಾಪವಿಮುಕ್ತನಾದೆ . . .*

ಕಳೆದ ನಾಲ್ಕು-ನಾಲ್ಕೂವರೆ ವರ್ಷಗಳಿಂದ ಶಾಪಿತನಾಗಿದ್ದರೂ ನಾನು ಹಾಗೆ ನೋಡಿದರೆ ಶಾಪಗ್ರಸ್ತನಾದಂತೆ ಇದ್ದೆ. ವಿಜಾಪುರ ಜಿಲ್ಲೆಯಲ್ಲಿ ಮುದ್ದೇಬಿಹಾಳ ಒಂದು ತಾಲ್ಲೂಕಿನ ಸ್ಥಳವಾಗಿದೆ. ಅಲ್ಲಿ ಮಾತೋಶ್ರೀ ಗಂಗವ್ವ ಮಹಾವಿದ್ಯಾಲಯವಿದೆ. ಆ ಮಹಾವಿದ್ಯಾಲಯದ ತರುಣ ಗ್ರಂಥಪಾಲರಾದ ಶ್ರೀ ಪಂಡಿತ ಸಿದ್ದಪ್ಪ ಕನಮಡಿಯವರು ನನ್ನಲ್ಲಿಗೆ ಬಂದು ನನಗೆ ಒಂದು ಶಾಪವನ್ನು ಕೊಟ್ಟರು. ಶಾಪ ಮತ್ತು ವರ ಇವುಗಳ ಸಂಬಂಧದ ಸಂಕಲ್ಪನೆಯು ಬಹು ಪ್ರಾಚೀನ ಕಾಲದಿಂದ ಬಂದಿದ್ದು. ರಾಮಾಯಣ-ಮಹಾಭಾರತದಂಥ ಗ್ರಂಥಗಳಲ್ಲಿ ಅವನ್ನು ವಿಪುಲವಾಗಿ ಬಳಸಿದೆಯಾದರೂ ಇವುಗಳ ಬಗ್ಗೆ ಯಾವದೇ ಮಾಹಿತಿಯು ಕನ್ನಡ ಸಾಹಿತ್ಯದಲ್ಲಿ ಕಂಡುಬಾರದೇ ಇದ್ದ ಹಾಗೆ ಶ್ರೀ ಕನಮಡಿ ಅವರು ಖೇದ ವ್ಯಕ್ತಪಡಿಸಿದರು. ಮರಾಠಿ ಸಾಹಿತ್ಯ ದಲ್ಲಿ ಈ ಬಗ್ಗೆ ಯಾವುದಾದರೊಂದು ಗ್ರಂಥವಿದೆಯೇ ಎಂದು ಪ್ರಶ್ನಿಸಿ, ಅದು ಇರದಿದ್ದರೆ ನಾನು ಏನು ಮಾಡಬೇಕೆಂಬ ಬಗ್ಗೆ ಆಗ್ರಹಿಸಿದರು. ಅವರು ನನ್ನಲ್ಲಿಟ್ಟುಕೊಂಡ ಆದರ-ವಿಶ್ವಾಸಗಳಿಂದ ನಾನು ಸಂತೋಷ ಗೊಂಡೆ. ಅಷ್ಟೇ ಅಲ್ಲದೆ ಈ ರೀತಿ ಸೂಚಿಸಲ್ಪಟ್ಟ ವಿಷಯದ ಹೊಸತನ ನನಗೆ ತುಂಬ ಹಿಡಿಸಿತು. ಹೀಗೆ ಎನಿಸಿದರೂ ನಾನು ಮಹಾಭಾರತ-ರಾಮಾಯಣಗಳಂಥ ಪ್ರಾಚೀನ ಗ್ರಂಥಗಳನ್ನು ಕೂಡ ಅಭ್ಯಸಿಸಿಲ್ಲ ಎಂಬುದ ರಿಂದ ನನಗೆ ವಿಷಾದವೆನಿಸಿತು. ನಾನು ಅವರಿಗೆ ನನ್ನ ಒಪ್ಪಿಗೆ ಅಥವಾ ನಿರಾಕರಣೆಯನ್ನು ಕೂಡಲೇ ತಿಳಿಸದೆ ತುಸು ಅವಧಿಯನ್ನು ಕೇಳಿಕೊಂಡು ಸಾಧ್ಯವಿರುವುದನ್ನು ಮಾಡುವುದಾಗಿ ಆಶ್ವಾಸಿಸಿದೆ. ಈ ನಂತರ ಇದೇ ಉದ್ದೇಶವನ್ನಿಟ್ಟುಕೊಂಡು ಪುಣೆಗೆ ತೆರಳಿ ಅಲ್ಲಿ ಸನ್ಮಾನ್ಯ ಪಂಡಿತ ಮಹಾದೇವಶಾಸ್ತ್ರಿ ಇವರನ್ನು ಭೇಟಿಯಾದೆನು. ಮೇಲಿನ ಶಾಪದ ಕಥೆ ಮತ್ತು ನನ್ನ ಮನಸಿನ ವ್ಯಥೆ ಎರಡನ್ನೂ ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ ಅವರ ಬಳಿ ತೋಡಿಕೊಂಡೆ. ಈವರೆಗೆ ನಾನು ಸಮಗ್ರ ವಾಲ್ಮೀಕಿರಾಮಾಯಣವನ್ನು ಎಂದೂ ಓದಿರಲೂ ಇಲ್ಲ. ಶಾಸ್ತ್ರಿಗಳು ಕೂಡ, ಈವರೆಗೆ ಮರಾಠಿ ಸಾಹಿತ್ಯದಲ್ಲಿಯೂ ಈ ವಿಧದ ಒಂದು ಗ್ರಂಥವೂ ಇಲ್ಲದಿರುವುದಾಗಿ ತಿಳಿಸಿದರು. ಅಲ್ಲದೆ ಈ ಕೆಲಸವನ್ನು ನಾನು ಕೈಕೊಳ್ಳಬೇಕೆಂದು ಆಗ್ರಹಪೂರ್ವಕವಾಗಿ ಹೇಳಿದರು. ವರಗಳ ಬಗ್ಗೆ ಓದಿಕೊಳ್ಳದೇ ಕೇವಲ ಶಾಪಗಳ ಬಗ್ಗೆ ಅಭ್ಯಾಸ ನಡೆಸುವುದು ಅಪೂರ್ಣ ಕಾರ್ಯವೆನಿಸುವುದಾದ್ದರಿಂದ ಶಾಪಗಳ ಜೊತೆಗೆ ವರಗಳ ಜ್ಞಾನವೂ ಆವಶ್ಯಕವೆಂದು ಹೇಳಿದರು. ಈ ಎರಡನ್ನೂ ಅರಿತುಕೊಳ್ಳಿ !—ಎಂದು ಹೇಳಿದರು. ಈ ರೀತಿ ಪಂಡಿತ ಮಹಾದೇವಶಾಸ್ತ್ರಿ ಜೋಶಿ ಇವರಿಂದ ನನಗೆ 'ವರ' ಲಭಿಸಿತು. ಹೀಗೆ ಇಬ್ಬರು ಪಂಡಿತರಿಂದ ನನಗೆ ಶಾಪ / ವರ ಇವುಗಳ ಲಾಭವಾಯಿತು. ರಾಮಾಯಣದ ತೃಣಬಿಂದುಕನ್ಯೆಯರಂತೆ ನನ್ನ ಬಗೆಗೂ ಶಾಪವು ವರಸ್ವರೂಪವಾಯಿತು.

ನನ್ನ ವಿದ್ಯಾರ್ಥಿಜೀವನದಿಂದ ಪ್ರಾರಂಭಿಸಿ ಕಳೆದ ಐವತ್ತು ವರ್ಷಗಳಿಂದ ನನಗೆ ಶ್ರೀ ಶಾಸ್ತ್ರಿಗಳ ಮಾರ್ಗದರ್ಶನ ಲಭಿಸುತ್ತಬಂದಿದೆ. ಅವರು ಉತ್ತೇಜಿಸಿದ್ದರಿಂದ ನಾನು ಓದಿಗೆ ಪ್ರಾರಂಭಿಸಿದೆ. ಶಾಪ ಮತ್ತು ವರಗಳ ಬಗ್ಗೆ ವಿಚಾರ ಮಾಡುವುದೆಂದರೆ ವೇದ, ಪುರಾಣ, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಾಗವತ, ಮುಂತಾದ ಎಲ್ಲ ಪ್ರಾಚೀನ ಗ್ರಂಥಗಳನ್ನು ಓದಿಕೊಳ್ಳಬೇಕಿತ್ತು. ಇದು ನನ್ನ ಶಕ್ತಿಗೆ ಮೀರಿದ ಕೆಲಸ ವಾಗಿತ್ತು ; ನನ್ನಿಂದ ಸಾಧ್ಯವಾಗುವಂತಿರಲಿಲ್ಲ. ಈ ಕಾರಣದಿಂದ ನಾನು ಒಂದೇ ಗ್ರಂಥವನ್ನು, ಮೂಲ ಮಹಾ ಕಾವ್ಯವನ್ನು, ಲಕ್ಷ್ಯಕೇಂದ್ರವನ್ನಾಗಿ ಆಯ್ದುಕೊಂಡೆ. ವಿಷಯದ ವಿಸ್ತಾರವನ್ನು ವೀಕ್ಷಿಸಿದನಂತರ ಈ ಕಾರ್ಯವು ನನ್ನ ಶಕ್ತಿಗೆ ಮೀರಿದ್ದು, ನನ್ನಿಂದ ಪೂರ್ತಿಯಾಗಲಾರದೆಂದು ಅನೇಕಾವರ್ತಿ ಎನಿಸತೊಡಗಿತು. ಈ ಪರಿಸ್ಥಿತಿ ಯಲ್ಲಿ ಈ ಹವ್ಯಾಸವನ್ನು ಬಿಟ್ಟುಕೊಡಬೇಕೆಂಬ ವಿಚಾರ ಸುಳಿಯುತ್ತಿದ್ದಾಗ, ಇಬ್ಬರು ವಿದ್ವಾಂಸರ ಪರಿಚಯ, ಮತ್ತು ತುಸು ಅವಧಿಯಲ್ಲಿಯೇ ಅವರೊಡನೆ ಬೆಳೆದು ವರ್ಧಿಸಿದ ಸ್ನೇಹ, ಒಂದು ಯೋಗಾಯೋಗವೇ ಸರಿ. ಅವರು ಪ್ರೋತ್ಸಾಹಿಸಿದ್ದರಿಂದಲೇ ಇಂದಿನ ಈ ಕೃತಿ ಹೊರಬರಲು ಸಾಧ್ಯವಾಯಿತು.

ಉಡುಪಿಯಲ್ಲಿಯ ಶ್ರೀ ಪೂರ್ಣಪ್ರಜ್ಞ ಸಂಸ್ಕೃತ ಮಹಾವಿದ್ಯಾಲಯದ ನಿವೃತ್ತ ಪ್ರಾಚಾರ್ಯರಾದ ಶ್ರೀ ಕೌಲಗಿ ಶೇಷಾಚಾರ್ಯರು ಲಭಿಸಿದ್ದರಿಂದ ನನಗೆ ರಾಮಾಯಣದ ಸೌಂದರ್ಯದ ಸಾಕ್ಷಾತ್ಕಾರವಾಯಿತು.

---

*ಮರಾಠಿಯ ಮೊದಲ ಮುದ್ರಣಕ್ಕಾಗಿ ಬರೆದದ್ದು.

ಅವರ ಸಂಸ್ಕೃತ ವಾಙ್ಮಯದ ಪ್ರದೀರ್ಘ ವಿಶ್ಲೇಷಣಾತ್ಮಕ ವಿದ್ವತ್ತು, ವಿವಿಧ ಭಾಷೆಗಳ ಮೇಲಿನ ಪ್ರಭುತ್ವ, ಜೊತೆಗೆ ವಿದ್ವತ್ತಿಗೆ ಒಪ್ಪುವ ಸೌಜನ್ಯ ಮತ್ತು ಯಾವ ಅಪೇಕ್ಷೆಯನ್ನೂ ಇಟ್ಟುಕೊಳ್ಳದೇ ನೆರವಾಗುವ ನಿರಾಲಸ್ಯ ಸ್ವಭಾವ—ಇಂಥ ದುರ್ಲಭ ಸದ್ಗುಣಗಳ ಸಂಗಮವೇ ಅವರಾಗಿದ್ದರಿಂದ ಅವರ ಬಗ್ಗೆ ನನ್ನ ಆದರ ಬೆಳೆದು ಇಮ್ಮಡಿ-ಮುಮ್ಮಡಿಯಾಯಿತು. ಅವರ ಪ್ರೋತ್ಸಾಹ, ನೆರವು ಇರದಿದ್ದರೆ ನನ್ನಿಂದ ಈ ಲೇಖನವನ್ನು ಬರೆಯಲು ಸಾಧ್ಯ ಆಗುತ್ತಿರಲಿಲ್ಲ. ಈ ಪುಸ್ತಕದ ಮರಾಠಿ ಭಾಷೆಯ ಮೂಲ ಮುದ್ರಣವು ಪುಣೆಯಲ್ಲಿ ನಡೆಯುತ್ತಿದ್ದಾಗ ಅವರು ಮೈಸೂರಿನಿಂದ ಕರಡಚ್ಚುಗಳನ್ನು ತಿದ್ದಿ ಪರಿಶೀಲಿಸಿ ಕಳುಹಿಸಿದರು. ಪ್ರಾಯದ ಎಪ್ಪತ್ತೈದು ವರ್ಷಗಳನ್ನು ದಾಟಿದ ಅವರ ವ್ಯಾಸಂಗ, ಉತ್ಸಾಹ, ಸಾಮರ್ಥ್ಯ ಹಾಗೂ ಕಾರ್ಯಾಸಕ್ತಿ ಇವುಗಳನ್ನು ಗಮನಿಸಿದರೆ ನಮ್ಮ ಶಿರ ತಾನಾಗಿಯೇ ಅವರೆದುರು ಬಾಗುತ್ತದೆ.

ಇದೇ ರೀತಿಯಲ್ಲಿ ಪೋದ್ದಾರ್ ಮಹಾವಿದ್ಯಾಲಯ, ಮುಂಬಯಿ, ಸಂಸ್ಥೆಯ ಹಿಂದೀ ವಿಭಾಗದ ಪ್ರಮುಖರಾಗಿ ನಿವೃತ್ತರಾದ ಮತ್ತು ಕಿರಿಯ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ ನಿವೃತ್ತರಾದ ಡಾ॥ ಗ. ನ. ಸಾಠೆ ಇವರ ಪರಿಚಯವಂತೂ ಅಂಚೆಯ ಮೂಲಕವೇ ಆಯಿತು. ಅವರು ಬರೆದ ಪತ್ರದ ವೈಖರಿ, ಪ್ರತ್ಯಕ್ಷಭೇಟಿಯ ಸಂಭಾಷಣೆಯನ್ನು ಮೊಟಕುಗೊಳಿಸುವಂತಿತ್ತು. ಡಾ॥ ಸಾಠೆ ಅವರು ರಾಮಾಯಣದ ಗಾಢವ್ಯಾಸಂಗವನ್ನು ಮಾಡಿರುವರಲ್ಲದೆ ಭಾರತದ ಹಲವಾರು ಭಾಷೆಗಳಲ್ಲಿ ಪ್ರಕಾಶಿಸಲ್ಪಟ್ಟ ರಾಮಾಯಣಗಳ ತುಲನಾತ್ಮಕ ಪರಿಶೀಲನೆಯನ್ನು ಮಾಡಿದ್ದಾರೆ. ಹಿಂದಿ ಭಾಷೆಯ ಮೇಲಿನ ಅವರ ಪ್ರಭುತ್ವ ಮಾತೃಭಾಷೆಯಷ್ಟೇ ಬಿಗಿಯಾಗಿದೆ. ಇಂಥ ಗಣ್ಯರ ಪರಿಚಯ ಮತ್ತು ನಂತರ ಬೆಳೆದುಬಂದ ಸ್ನೇಹ—ನನಗೆ ವರಸ್ವರೂಪವಾಯಿತು. ನನ್ನ ಎಲ್ಲ ಲೇಖನಗಳನ್ನೂ ಆಳವಾಗಿ ಅಭ್ಯಸಿಸಿ, ಮಹತ್ವದ ಸೂಚನೆಗಳನ್ನು ಮಾಡಿದರು. ಇದಲ್ಲದೆ ನನ್ನ ವಾಸಸ್ಥಾನ ವಿಜಾಪುರದಲ್ಲಿದ್ದುದರಿಂದ, ಅಲ್ಲಿ ಇದ್ದುಕೊಂಡು ಮರಾಠಿ ಪುಸ್ತಕದ ಮುದ್ರಣವನ್ನು ನೋಡಿಕೊಳ್ಳುವುದು ದುಸ್ತರವಿತ್ತು. ಈ ನನ್ನ ಅಡಚಣೆಗಳನ್ನು ಗಮನಿಸಿ ಡಾ॥ ಸಾಠೆ ಅವರು ತಾವಾಗಿ ನೆರವಿನ ಕೈ ಮುಂದೆ ಚಾಚಿ ಮುದ್ರಣವ್ಯವಸ್ಥೆಯ ಎಲ್ಲ ಕಾರ್ಯವನ್ನು ತಮ್ಮ ಸ್ವಂತದ ಕೆಲಸವೆಂಬಂತಹ ಪ್ರೀತಿಯಿಂದ ಪೂರೈಸಿದರು. ಅವರು ಪಟ್ಟ ಪರಿಶ್ರಮ, ವ್ಯಯ ಮಾಡಿದ ಸಮಯಗಳಿಗೆ ಮಿತಿಯಿಲ್ಲ. ಬರೀ ಮಾತುಗಳಿಂದ ಅದನ್ನು ತುಂಬಿಕೊಡಲು ಅಸಾಧ್ಯವಿದೆ. ಸದ್ಯ ಅವರು ಸಂತ ಏಕನಾಥ ಮಹಾರಾಜರ 'ಭಾವಾರ್ಥ ರಾಮಾಯಣ'ದ ಹಿಂದಿ ಅನುವಾದದಲ್ಲಿ ತೊಡಗಿದ್ದರೂ ಅದನ್ನು ಬದಿಗಿರಿಸಿ ನನ್ನ ಗ್ರಂಥದ ಮುದ್ರಣಕಾರ್ಯವನ್ನು ಸಾರ್ಥಕವಾಗಿ ಮಾಡಿಕೊಟ್ಟರು. ನನ್ನ ಈ ಗ್ರಂಥದ ಅಂತರಂಗವನ್ನು ಶುದ್ಧೀಕರಿಸಿ ಅದಕ್ಕೆ ಸೌಷ್ಠವವನ್ನು ನಿರ್ಮಿಸಿಕೊಟ್ಟ ಎಲ್ಲ ಶ್ರೇಯಸ್ಸು ಈ ಇಬ್ಬರು ಪ್ರಾಚಾರ್ಯರದೇ ಆಗಿದೆ.

## ದ್ವಿತೀಯ ಸಂಸ್ಕರಣ

ನನ್ನ *ವಾಲ್ಮೀಕಿ ರಾಮಾಯಣ: ಶಾಪ ಮತ್ತು ವರ* ಎಂಬ ಈ ಪುಸ್ತಕವು ನನ್ನ ನಿರೀಕ್ಷೆಗಿಂತಲೂ ಹೆಚ್ಚಿನ ಹೊಗಳಿಕೆಯನ್ನು ಪಡೆಯಿತು. ಓದುಗರು, ವಿಮರ್ಶಕರು ಹಾಗೂ ಪ್ರಕಾಶಕರ ತುಂಬು ಬೆಂಬಲದಿಂದಾಗಿ, ಅವರೆಲ್ಲರ ನೆರವಿನಿಂದ ಕಳೆದ ಹತ್ತು ವರ್ಷಗಳಿಂದ ಈ ಪುಸ್ತಕದ ಕನ್ನಡ, ಹಿಂದಿ ಮತ್ತು ತೆಲುಗು ಅನುವಾದಗಳು ಪ್ರಕಟಗೊಂಡಿದ್ದು, ಆಂಗ್ಲಾನುವಾದ ಇಷ್ಟರಲ್ಲಿಯೇ ಪ್ರಕಟಗೊಳ್ಳಲಿದೆ. ದಿಲ್ಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯು ಇ.ಸ. ೧೯೯೨ರಲ್ಲಿ ಈ ಪುಸ್ತಕದ ಕನ್ನಡಾನುವಾದಕ್ಕೆ ರಾಷ್ಟ್ರಮಟ್ಟದ ಪ್ರಶಸ್ತಿಯನ್ನಿತ್ತು ಅದನ್ನು ಗೌರವಿಸಿತು. ಹಿಂದಿಯ ಅನುವಾದದ ಪ್ರಕಟಣೆಗಾಗಿ ತಿರುಮಲ ತಿರುಪತಿ ದೇವಸ್ಥಾನಮ್‌ದ ವಿಶ್ವಸ್ತ ನಿಧಿಯಿಂದ ಹಣಕಾಸಿನ ನೆರವು ದೊರೆತದ್ದರಿಂದ ಅದು ಈ ಪುಸ್ತಕವನ್ನು ಎತ್ತಿಹಿಡಿದಂತಾಯಿತು. ಇವೆಲ್ಲ ಭಾಷೆಗಳ ವೃತ್ತಪತ್ರಿಕೆಗಳು ಈ ಪುಸ್ತಕವನ್ನು ಕುರಿತು ಒಳ್ಳೆಯ ಅಭಿಪ್ರಾಯಗಳನ್ನು ಪ್ರಕಟಿಸಿ ತಮ್ಮ ಮೆಚ್ಚುಗೆಗಳನ್ನು ಸೂಚಿಸಿದ ಕಾರಣಗಳಿಂದಾಗಿಯೇ ಕನ್ನಡ ಹಾಗೂ ಮರಾಠಿಗಳಲ್ಲಿ ಇದರ ಎರಡನೆಯ ಸಂಸ್ಕರಣಗಳು ಪ್ರಕಟಗೊಳ್ಳಲು ಅನುಕೂಲ ಒದಗಿಬಂದಿತು.

ಇದು *ವಾಲ್ಮೀಕಿ ರಾಮಾಯಣ: ಶಾಪ ಮತ್ತು ವರ*ದ ಮರುಮುದ್ರಣವಷ್ಟೆ ಅಲ್ಲ, ಮೊದಲ ಮುದ್ರಣದ ಬರಹದಲ್ಲಿ ಸಾಕಷ್ಟು ಬದಲಾವಣೆಗಳನ್ನು ಕೈಕೊಳ್ಳಲಾಗಿದೆ. ಶಾಪ ಹಾಗೂ ವರಗಳ ಕೋಷ್ಟಕಗಳನ್ನು ಕೈಬಿಡಲಾಗಿದೆ. ಆಣೆ, ಪ್ರತಿಜ್ಞೆ, ಸತ್ಯಕ್ರಿಯೆ ಹಾಗೂ ಆಶೀರ್ವಾದಗಳಂತಹ ಹೊಸ ಸವಿಸ್ತರವಾದ

ಅಧ್ಯಾಯಗಳನ್ನು ಸೇರ್ಪಡಿಸಲಾಗಿದೆ. ಶಾಪ/ ವರಗಳ ಕ್ರಮ ಸಂಖ್ಯೆ ಹಾಗೂ ಒಟ್ಟು ಸಂಖ್ಯೆಗಳೂ ಬದಲಾಗಿವೆ. ಇವುಗಳನ್ನಾಧರಿಸಿಯೇ ಕನ್ನಡದ ಎರಡನೆಯ ಮುದ್ರಣ ಹಾಗೂ ಆಂಗ್ಲ ನುಡಿಯ ಮೊದಲ ಮುದ್ರಣಗಳನ್ನು ತಯಾರಿಸಲಾಗಿದೆ. ಹಾಗೆಯೇ ಕನ್ನಡಾನುವಾದದಲ್ಲಿ ತುಸುಮಟ್ಟಿಗೆ ಪರಿಷ್ಕರಣೆಯ ಅಗತ್ಯ ಕಂಡುಬಂದ ಕಾರಣ ಅದನ್ನು ಕೈಕೊಳ್ಳಲಾಗಿದೆ. ನಾನಿರುವುದು ಪುಣೆಯಲ್ಲಾದರೆ ಅನುವಾದಕಿಯಿರುವುದು ಬೆಂಗಳೂರಿನಲ್ಲಿ. ಅಲ್ಲದೆ ಪ್ರಕಾಶಕರು, ಮುದ್ರಕರಿರುವುದು ಮೈಸೂರಿನಲ್ಲಿ. ಇಂಥ ತ್ರಿಸ್ಥಳಯಾತ್ರೆಯಿಂದಾಗಿ ಹಲವು ಬಗೆಯ ತೊಂದರೆಗಳು ತಲೆದೋರಹತ್ತಿದವು. ಹೊಸ ಸೇರ್ಪಡೆಗಳ ಕನ್ನಡಾನುವಾದ ಹಾಗೂ ಮೊದಲ ಒಕ್ಕಣೆಯ ಪರಿಷ್ಕರಣೆಗಳನ್ನು ಕೈಕೊಳ್ಳಬಹುದಾದ ವ್ಯಕ್ತಿಯೊಂದಿಗಿನ ನೇರ ಸಂಪರ್ಕ ಅನಿವಾರ್ಯದ್ದಾಗಿ ಕಂಡಿತು. ನನ್ನ ಸನ್ಮಿತ್ರರಾದ ಶ್ರೀ ವಿರೂಪಾಕ್ಷ ಕುಲಕರ್ಣಿಯವರೊಂದಿಗೆ ಈ ಬಗೆಗೆ ಚರ್ಚಿಸಿದೆ. ನನ್ನ ತೊಂದರೆಗಳನ್ನರಿತು ಅವರು ತಮ್ಮ ಕೈಲಾದ ನೆರವನ್ನು ನೀಡಲು ಮುಂದೆ ಬಂದರು. ಪರಿಷ್ಕರಣೆಯ ಕೆಲಸವೆಂದರೆ ನಿಜಕ್ಕೂ ತಂತಿಯ ಮೇಲಿನ ದೊಂಬರಾಟ ! ವ್ಯಕ್ತಿಯೊಡನೆ ಭಾಷಾಶೈಲಿಯೂ ಬೇರೆ ತೆರನಾಗುತ್ತದೆ. ಹೊಸ ಸೇರ್ಪಡೆಯ ಅನುವಾದವನ್ನು ಹಳೆಯ ಒಕ್ಕಣೆಯ ಶೈಲಿಯೊಂದಿಗೆ ಸರಿಹೊಂದಿಸುವುದೆಂದರೆ ಸುಮಾರಾಗಿ ಆಗದ ಸಂಗತಿಯೇ ಸರಿ. ಇದರೊಟ್ಟಿಗೆ ಪರಿಷ್ಕರಣೆಯನ್ನೂ ಕೈಕೊಳ್ಳುವುದೆಂದರೆ ತುಂಬ ಬಿಕ್ಕಟ್ಟಿಗೆ ಸಿಲುಕಿಕೊಂಡಂತೆ. ಇಂಥಲ್ಲಿ ಒಳ್ಳೆಯತನ ಅಲಕ್ಷ್ಯಕ್ಕೀಡಾಗಿ ಟೀಕೆಟಿಪ್ಪಣಿಗಳಿಗೆ ಗುರಿಯಾಗುವ ಸಾಧ್ಯತೆ ಇದ್ದೇ ಇರುತ್ತದೆ. ಗೆಲುವಿಗಿಂತಲೂ ಹೆಚ್ಚು ಸೋಲನ್ನೆದುರಿಸುವ ದುರವಸ್ಥೆಗೆ ಈಡಾಗಬಾರದೆಂದಿಲ್ಲ. ಶ್ರೀ ವಿರೂಪಾಕ್ಷ ಕುಲಕರ್ಣಿಯವರು ಇವೆಲ್ಲ ಅಪಾಯಗಳನ್ನು ಅರಿಯದವರೇನಲ್ಲ. ಇಷ್ಟಾಗಿಯೂ ನನ್ನ ಕೋರಿಕೆಯನ್ನು ಮನ್ನಿಸಿ ಕೇವಲ ಒಂದು ಮಿತ್ರಕರ್ತವ್ಯವೆಂಬ ಭಾವನೆಯಿಂದ ಅವರು ಈ ಕೆಲಸವನ್ನು ಕೈಕೊಂಡು ಉತ್ತಮವಾದ ರೀತಿಯಲ್ಲಿ ಪೂರ್ತಿಗೊಳಿಸಿದ್ದಾರೆ. ನನ್ನ ಇನ್ನೊಬ್ಬ ಸನ್ಮಿತ್ರರೂ, ಪ್ರಕಾಶಕರೂ ಆದ ಶ್ರೀ ಎಂ. ಸತ್ಯನಾರಾಯಣರಾವ್ ಇವರು ಈ ಪುಸ್ತಕವು ಎಲ್ಲ ಬದಿಗಳಿಂದಲೂ ಅಂದವಾಗಿ ಹೊರಬರಲೆನ್ನುವ ಕಾರಣಕ್ಕಾಗಿ ನನಗೂ ಹಾಗೂ ಶ್ರೀ ಕುಲಕರ್ಣಿಯವರಿಗೂ ಪೂರ್ತಿ ಸ್ವಾತಂತ್ರ್ಯವನ್ನಿತ್ತರು. ಅವರು ದುಡಿಮೆ ಹಾಗೂ ವೆಚ್ಚಗಳನ್ನು ಲೆಕ್ಕಿಸಲಿಲ್ಲ. ಹೀಗಾಗಿ ಇಂಥ ಸನ್ಮಿತ್ರರಿಂದ ನನಗೆ ದೊರೆತ ನೆರವು ಹಾಗೂ ಸಹಕಾರಗಳನ್ನು ಅದೆಷ್ಟು ನೆನೆದರೂ ಕಡಮೆಯೇ ಸರಿ. ಅವರಿಬ್ಬರಿಗೂ ಕೃತಜ್ಞತೆಗಳನ್ನು ಅರ್ಪಿಸಿ ಪಾರಾಗುವ ಬದಲು ಎಂದೆಂದಿಗೂ ಅವರ ಋಣದಲ್ಲಿಯೇ ಇರಲು ಇಷ್ಟಪಡುತ್ತೇನೆ : ಅದೇ ನನಗೆ ಸಂತೋಷದ ಸಂಗತಿ.

ಈ ದ್ವಿತೀಯ ಸಂಸ್ಕರಣದ ಅಚ್ಚಿನ ಕರಡುಗಳನ್ನು ಆಮೂಲಾಗ್ರವಾಗಿ ಶ್ರದ್ಧೆಯಿಂದ ತಿದ್ದಿ ಉಪಕಾರ ಮಾಡಿರುವ ಶ್ರೀ ರಂಗರಾವ್ ರೋಹಿತೇಕರರಿಗೆ ನಾನು ಆಭಾರಿ ; ಹಾಗೆಯೇ ಸುಂದರ ಡಿಟಿಪಿ ಅಕ್ಷರ ಸಂಯೋಜನೆ ಮಾಡಿರುವ ಶ್ರೀ ಆನಂದ ಅವರಿಗೆ ಮತ್ತು ಅಚ್ಚುಕಟ್ಟಿನ ಮುದ್ರಣಕ್ಕಾಗಿ ಶ್ರೀ ಆರ್. ಎಸ್. ವಾಸುದೇವಮೂರ್ತಿ ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಬಲು ದೀರ್ಘಕಾಲ ಕರ್ನಾಟಕದಲ್ಲಿಯೇ ವಾಸವಾಗಿದ್ದೆನಾದರೂ ನಾನೊಬ್ಬ ಲೇಖಕನೆಂದು ಕನ್ನಡಿಗರಿಗಷ್ಟೇ ಏಕೆ, ಮರಾಠಿಯ ಓದುಗರಿಗೂ ಅಪರಿಚಿತನಾಗಿಯೇ ಉಳಿದೆ. ನನ್ನಂತಹ ಸಾಮಾನ್ಯನೊಬ್ಬನ ಪುಸ್ತಕಕ್ಕೆ ಎರಡನೆಯ ಮುದ್ರಣದ ಭಾಗ್ಯ ಲಭಿಸುತ್ತಿರುವುದರ ಶ್ರೇಯಸ್ಸೆಲ್ಲ ಅರಿವುಳ್ಳ ಕನ್ನಡ ಓದುಗರು ಹಾಗೂ ನನ್ನ ಪ್ರಕಾಶಕರದು. ಅದೇ ನನಗೆ ಪ್ರಿಯವಾದುದೂ ಕೂಡ.

ಈ ಪುಸ್ತಕವನ್ನು ಕೈಗೆ ನೀಡುವಾಗ ನಿಜವಾಗಿಯೂ 'ಇಂದು ನಾನು ಶಾಪಮುಕ್ತನಾದೆ' ಎಂದೆನಿಸುತ್ತಿದೆ.

**ಶ್ರೀಪಾದ ರಘುನಾಥ ಭಿಡೆ**

ಪುಣೆ, ಶ್ರೀ ವಿಕ್ರಮನಾಮ ಸಂವತ್ಸರ
ಸಂಕ್ರಾಂತಿ, ಜನವರಿ ೧೪, ೨೦೦೧

# ಋಣಾಂ ಕೃತ್ವಾ . . .

ದೊರೆಯುವಲ್ಲಿಂದ, ಸಾಧ್ಯವಾದಷ್ಟು, ಋಣವನ್ನು ಪಡೆಯುತ್ತಿರುವುದನ್ನು ಬಯಸುತ್ತೇನೆ. ಮಾತೃಋಣ, ಪಿತೃಋಣ, ಆಚಾರ್ಯಋಣ ಇವುಗಳಷ್ಟೇ ಗ್ರಂಥಋಣ ಮತ್ತು ಮಿತ್ರಋಣಗಳು ಮಹತ್ವದ್ದಾಗಿವೆ, ಆಕರ್ಷಕವೂ ಆಗಿವೆ. ನಾನು ಯಾರ ಮುಂದೆ ಕೈ ಒಡ್ಡಿದೆನೋ ಅವರೆಲ್ಲರೂ ತಡಮಾಡದೆ, ಪ್ರಸನ್ನಚಿತ್ತದಿಂದ ಮುಕ್ತಹಸ್ತಗಳಿಂದ ಕೈತುಂಬಿ ಕೊಟ್ಟರು. ಯಾರೂ ಇಲ್ಲವೆನ್ನಲಿಲ್ಲ ; ತಾತ್ಸಾರ ಮಾಡಲಿಲ್ಲ. ನಾನೆಂದೂ ಬರಿಗೈಯಿಂದ ಮರಳಲಿಲ್ಲ. ಕೆಲವು ಋಣಗಳನ್ನು ತೀರಿಸುವ ಇಚ್ಛೆಯೇ ಇರುವುದಿಲ್ಲವಾದರೆ ಕೆಲವು ಋಣ ಗಳನ್ನು ತೀರಿಸುವುದು ಸಾಧ್ಯವಿರುವುದಿಲ್ಲ. ಈ ರೀತಿ ತೀರಿಸಲು ಅಸಾಧ್ಯ ಋಣಗಳೆಂದರೆ ಗ್ರಂಥಋಣ ಮತ್ತು ಮಿತ್ರಋಣಗಳಾಗಿವೆ. ಇನ್ನೊಂದು ಗಮನಾರ್ಹ ಸಂಗತಿ ಎಂದರೆ ಈ ಋಣಕ್ಕೆ ಬಡ್ಡಿಯನ್ನು ತೆರಬೇಕಿಲ್ಲ. ಅಂದಬಳಿಕ ಚಿಂತೆಯಾದರೂ ಏಕಿರಬೇಕು ?

ಈ ಗ್ರಂಥವನ್ನು ಬರೆಯುತ್ತಿರುವಾಗ, ಇದರ ನಿರ್ಮಿತಿಯಲ್ಲಿ, ಅನೇಕರಿಂದ ಅನೇಕ ರೀತಿಯ ನೆರವನ್ನು ಪಡೆದುಕೊಂಡೆ. ಲೇಖನ, ಮುದ್ರಣ, ಪ್ರಕಾಶನ—ಈ ಮೂರು ಹಂತಗಳಲ್ಲಿ ನಾನು ಸಹಾಯ ಪಡೆದವರ ಹೆಸರುಗಳನ್ನು ಎಷ್ಟೇ ಕೂಲಂಕಷವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕೆಂದರೂ ಈ ಪಟ್ಟಿ ಪರಿಪೂರ್ಣವಾಗುವುದು ಸಾಧ್ಯವಿಲ್ಲ. ಅಜಾಗರೂಕತೆಯಿಂದಾಗಲೀ, ವಿಸ್ಮರಣೆಯಿಂದಾಗಲೀ ಯಾರೊಬ್ಬರ ನಾಮನಿರ್ದೇಶನ ಉಳಿದುಹೋದರೆ, ಆ ವ್ಯಕ್ತಿಗೆ ಇಲ್ಲವೇ ಸಂಸ್ಥೆಗೆ ಅನ್ಯಾಯ ಬಗೆದಂತಾಗಿ ಅದು ಕೃತಘ್ನತೆ ಎಂದೆನಿಸಬಹುದು. ಈ ಕಾರಣದಿಂದಲೇ ನಾನು ಈ ಸೂಕ್ತ ಹೆಸರುಗಳ ಪಟ್ಟಿಯನ್ನು ಕೊಟ್ಟಿಲ್ಲ. ಅದಕ್ಕಾಗಿ ಕ್ಷಮಿಸಬೇಕು. ಅಂಥ ವ್ಯಕ್ತಿಗಳು, ಸಂಸ್ಥೆಗಳು ಮಾಡಿದ ಉಪಕಾರದ ಹೊರೆಯನ್ನು ಹೊತ್ತು ಅವರೆಲ್ಲರಿಗೂ ಕೃತಜ್ಞತೆಯಿಂದ ಕೈಮುಗಿಯುವುದೇ ನನಗೆ ಸರಿ ಎನಿಸುತ್ತದೆ.

ಮರಾಠಿ ಸಾಹಿತ್ಯದಲ್ಲಿಯೂ ಹೆಸರಿಲ್ಲದ, ಸ್ಥಾನವಿಲ್ಲದ ನನ್ನಂತಹನ ಮರಾಠಿ ಪುಸ್ತಕವನ್ನು ಕನ್ನಡಿಸಲು ಸೌ॥ ಸರಸ್ವತಿ ರಿಸಬೂಡ ಅವರನ್ನು ಕೇಳಿದೊಡನೆ ಅವರು ಒಪ್ಪಿಕೊಂಡದ್ದು ನನ್ನ ಭಾಗ್ಯ. ಅವರು ಡಾ॥ ಇರಾವತಿ ಕರ್ವೆ ಅವರ 'ಯುಗಾಂತ'ವನ್ನು ಕನ್ನಡಿಸಿ ತಮ್ಮ ಅನುವಾದಕೌಶಲವನ್ನು ಸಿದ್ಧಪಡಿಸಿದ್ದಾರೆ, ಅದಕ್ಕಾಗಿ ಮಾನ್ಯತೆಯನ್ನು ಹೊಂದಿದ್ದಾರೆ. ಅತ್ಯಂತ ಅಲ್ಪಕಾಲದಲ್ಲಿ ನನ್ನ ಈ ಪುಸ್ತಕದ ಅಂದವಾದ ಅನುವಾದವನ್ನು ಸಿದ್ಧಪಡಿಸಿದ್ದಾರೆ. ಅದೇ ರೀತಿ ಕರ್ನಾಟಕದ ಖ್ಯಾತನಾಮ ಪ್ರಕಾಶಕರಾದ ಮೈಸೂರಿನ ಗೀತಾ ಬುಕ್ ಹೌಸ್‌ನ ಶ್ರೀ ಎಂ. ಸತ್ಯನಾರಾಯಣರಾವ್ ಹಾಗೂ ಶ್ರೀ ಎಂ. ಗೋಪಾಲಕೃಷ್ಣ ಸೋದರರು ನನ್ನ ಪುಸ್ತಕವನ್ನು ಪ್ರಕಟಿಸುತ್ತಿರುವುದು ನನ್ನ ಭಾಗ್ಯವೇ ಸರಿ. ಕನ್ನಡಸಾಹಿತ್ಯಪ್ರಕಾಶನಕ್ಷೇತ್ರದಲ್ಲಿ ಅವರ ಕರ್ತೃತ್ವ ಕರ್ನಾಟಕದಲ್ಲೆಲ್ಲ ಹಿರಿದಾಗಿದೆ.

ಹಲವಾರು ಕನ್ನಡಿಗರು ಈ ಅನುವಾದವನ್ನು ಆಸಕ್ತಿಯಿಂದ ಓದಿ ಅನೇಕ ಮೌಲಿಕ ಸೂಚನೆಗಳನ್ನು ನೀಡಿದ್ದಾರೆ. ಸೊಲ್ಲಾಪುರದ ದಯಾನಂದ ಮಹಾವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಡಾ॥ ವೆ. ಅ. ದಿವಾಣಜಿ, ಮುದ್ದೇಬಿಹಾಳದ ಮಾತೋಶ್ರೀ ಗಂಗವ್ವ ಮಹಾವಿದ್ಯಾಲಯದ ಗ್ರಂಥಪಾಲ ಶ್ರೀ ಪಂಡಿತ ಸಿದ್ದಪ್ಪ ಕನಮಡಿ, ವಿಜಾಪುರದ ವಿದ್ವಾನ್ ಶ್ರೀ ಮಧ್ವಾಚಾರ್ಯ ಮೊಕಾಶಿ, ನಿವೃತ್ತ ಪ್ರಾಚಾರ್ಯ ಶ್ರೀ ಈಶ್ವರಪ್ಪ ಪಾಟೀಲ, ಅವರ ಸೌಭಾಗ್ಯವತಿ ಪ್ರಾಧ್ಯಾಪಿಕೆ ಸ್ವಸ್ತಿಕ ಪಾಟೀಲ, ಪ್ರಾಧ್ಯಾಪಕ ಶ್ರೀ ವೆ. ಗೋಪಾಲನ್, ಪ್ರಾಧ್ಯಾಪಕ ಶ್ರೀ ಕಲಾಲ, ಪ್ರಾಧ್ಯಾಪಕ ಶ್ರೀ ಸಾರಂಗಮಠ, ಪ್ರಾಧ್ಯಾಪಕ ಶ್ರೀ ಆರ್. ಕೆ. ಕುಲಕರ್ಣಿ, ಶ್ರೀ ಎನ್. ಎಚ್. ದೇಸಾಯಿ ಮತ್ತು ಶ್ರೀ ಮಲ್ಲಪ್ಪ ಕುಂಬಾರ ಇವರ ಹೆಸರುಗಳನ್ನು ಉಲ್ಲೇಖಿಸದೆ ಇರಲಾರೆ.

ನನ್ನ ಕೃತಿಯ ಬಗ್ಗೆ ಆಸಕ್ತಿ ತೋರಿ ಇದರ ಕನ್ನಡ ಅನುವಾದದ ಬಗ್ಗೆ ನನ್ನಲ್ಲಿ ಉತ್ಸಾಹ ಮೂಡಿಸಿದ ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರದ ಉಪಾಧ್ಯಕ್ಷರಾದ ಡಾ॥ ಶ್ರೀನಿವಾಸ ಹಾವನೂರ ಅವರಿಗೆ ನಾನು ಋಣಿಯಾಗಿದ್ದೇನೆ.

ಈ ಕೃತಿಯ ಮುದ್ರಣವನ್ನು ಸಮರ್ಪಕವಾಗಿ ಮಾಡಿಕೊಟ್ಟ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರಿಗೆ ಹಾಗೂ ಮುದ್ರಣದ ಕರಡುಗಳನ್ನು ಶ್ರದ್ಧೆ, ಪ್ರೀತಿ, ವಿಶ್ವಾಸಗಳಿಂದ ತಿದ್ದಿಕೊಟ್ಟ ಶ್ರೀ ರಂಗರಾವ್ ರೋಹಿಡೇಕರ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಹೀಗೆ, ಋಣಸಂಚಯವು ನನಗೆ ಸಾಧ್ಯವಿತ್ತು ; ಸುಲಭವಿತ್ತು . ನಾನು ಅದನ್ನು ಸಾಕಷ್ಟು ಮಾಡಿಕೊಂಡಿದ್ದೇನೆ. ನನ್ನ ಕೃತಿಯಿಂದ ಈ ಉಕ್ತಿಯ ಪೂರ್ವಾರ್ಧವನ್ನು ಸಾರ್ಥಕಗೊಳಿಸಿದ್ದೇನೆ. ಉತ್ತರಾರ್ಧವೂ ಸಫಲಾಗಬೇಕೆಂಬ ಆಸೆ ಇದೆ ; ಆದರೆ ಅದು ನನ್ನ ಕೈಯಲ್ಲಿಲ್ಲ. ಆ ಅಧಿಕಾರವು ಸಂಪೂರ್ಣವಾಗಿ ಓದುಗರದಾಗಿದೆ ; ರಸಿಕರದಾಗಿದೆ ; ವಿಮರ್ಶಕರದಾಗಿದೆ. ಅವರೆಲ್ಲರೂ ನನಗೆ ವರವನ್ನು ಕರುಣಿಸಬೇಕೆಂದು ಪ್ರಾರ್ಥಿಸುವುದಷ್ಟೇ ನನ್ನ ಕೈಯಲ್ಲಿದೆ.

ಪುಣೆ ೪೧೧ ೦೨೯
ಆಗಸ್ಟ್ ೨೪, ೧೯೯೦

**ಶ್ರೀಪಾದ ರಘುನಾಥ ಭಿಡೆ**

## ' ಅನುವಾದಕಿಯ ಎರಡು ಮಾತುಗಳು
### (ಪ್ರಥಮ ಸಂಸ್ಕರಣ)

ರಾಮಾಯಣದ ಕಥೆ ಪ್ರತಿಯೊಬ್ಬ ಭಾರತೀಯನಿಗೆ ಗೊತ್ತಿದ್ದ ವಿಷಯ. ಶ್ರೀರಾಮನ ವನವಾಸ, ಸೀತೆಯ ಅಪಹರಣ, ಲಂಕಾದಹನ, ರಾಮರಾವಣರ ಯುದ್ಧ, ಶ್ರೀರಾಮನೆಂದರೆ ದೇವರು, ರಾವಣನೆಂದರೆ ರಾಕ್ಷಸ, ಸೀತೆ ಎಂದರೆ ಪತಿವ್ರತೆ, ಹನುಮಂತನೆಂದರೆ ಬೇಕಾಬೇಕಾದ್ದನ್ನು ಮಾಡುವ ಶಕ್ತಿ ಇದ್ದವನು, ಕುಂಭಕರ್ಣನ ನಿದ್ರೆ—ಇಷ್ಟರಮಟ್ಟಿಗೆ ಎಲ್ಲರಿಗೂ ಗೊತ್ತಿರುತ್ತದೆ. ಚಿಕ್ಕಂದಿನಿಂದಲೂ ಕೇಳಿ, ಓದಿ ಸ್ವಲ್ಪಮಟ್ಟಿಗೆ ತಿಳಿದು ಕೊಂಡಿರುತ್ತಾರೆ. ಆದರೆ ಸಂಪೂರ್ಣರಾಮಾಯಣವನ್ನು ಓದಿಕೊಂಡವರು ಬಹಳ ಕಡಿಮೆ ಎಂದೇ ಹೇಳ ಬಹುದು.

ಶ್ರೀ ಕುವೆಂಪು ಅವರು ಬರೆದ ಜನಪ್ರಿಯ ವಾಲ್ಮೀಕಿ ರಾಮಾಯಣದಲ್ಲಿ 'ಅದೆಂತಹ ಸೈನ್ಯವಾಗಲಿ, ಅದೆಂತಹ ರಾಜಕಾರಣನೈಪುಣ್ಯವಾಗಲಿ, ಹಿಂದೆಂದೂ ಸಾಧಿಸಿ, ರಕ್ಷಿಸಲಾರದಿದ್ದ ಭಾರತವರ್ಷದ ಅಖಂಡತೆ ಯನ್ನೂ ಐಕ್ಯತೆಯನ್ನೂ ಶತಶತಮಾನಗಳಿಂದಲೂ ಸಾಧಿಸಿ ರಕ್ಷಿಸಿಕೊಂಡು ಬಂದಿರುವಂತೆಯೆ ಮುಂದೆಯೂ ಸಾಧಿಸಿ ರಕ್ಷಿಸಿಕೊಂಡು ಬರುವುದರಲ್ಲಿ ಸಂದೇಹವಿಲ್ಲ. ಅಲೋಕಸಾಮಾನ್ಯವಾದ ಶ್ರೀ ರಾಮಾಯಣ ದಿವ್ಯಶಿಲ್ಪ !" ಎಂದು ಬರೆದದ್ದು ಸಾರ್ಥಕವಾಗಿದೆ.

ಶ್ರೀಮಾನ್ ಶ್ರೀಪಾದ ರಘುನಾಥ ಭಿಡೆಯವರು ಈ ಪರಿಯ ಮಹತ್ವದ ಗ್ರಂಥವಾದ ವಾಲ್ಮೀಕಿ ರಾಮಾಯಣದ ಶಾಪ/ವರಗಳನ್ನು ಮಾತ್ರ ಆಯ್ದುಕೊಂಡು ಬಹು ಪರಿಶ್ರಮಪಟ್ಟು ಒಂದು ವಿದ್ವತ್ ಗ್ರಂಥವನ್ನು ಹೊರತಂದಿದ್ದಾರೆ. ಓದುಗರು ಈ ಗ್ರಂಥದ ಪ್ರಸ್ತಾವನೆಯ 'ಶಾಪಾದಪಿ-ವರಾದಪಿ' ಮುನ್ನುಡಿ ಯನ್ನು ಪರಿಶೀಲಿಸಿದರೆ ಇದರಲ್ಲಿಯ ವಿಷಯವ್ಯಾಪಕತೆ ತಿಳಿದುಬರುವುದು ; ಈ ಕೃತಿಯ ಹೊಸ ಆಯಾಮವು ವ್ಯಕ್ತವಾಗುವುದು. ಇದೆಂದರೆ, ಶಾಪ ಮತ್ತು ವರಗಳನ್ನು ತೆಗೆದುಹಾಕಿ ರಾಮಾಯಣವನ್ನು ಬರೆಯುವುದು ಸಾಧ್ಯವಿರಲಿಲ್ಲ ಎಂಬುದನ್ನು ಖಚಿತಪಡಿಸುವ ಒಂದು ಸಂದರ್ಭಗ್ರಂಥವಾಗಿದೆ.

ಪ್ರಸ್ತುತ ಈ ಗ್ರಂಥದಲ್ಲಿ ವಾಲ್ಮೀಕಿರಾಮಾಯಣದ ಅರವತ್ತೊಂದು ಶಾಪಗಳನ್ನು ಮತ್ತು ಎಂಬತ್ತೆರಡು ವರಗಳನ್ನು ಒಂದೆಡೆ ಕೊಟ್ಟಿದ್ದಾರೆ. ಪ್ರತಿಯೊಂದು ಶಾಪದ ಮತ್ತು ವರದ ಬಗ್ಗೆ ಸಂಶೋಧಿತ ವಿವರಣೆಯನ್ನು ಓದುಗರ ಮುಂದಿಟ್ಟಿದ್ದಾರೆ. ಶಾಪ ಮತ್ತು ವರಗಳಿಗೆ ಸಂಬಂಧವಿದ್ದ ವ್ಯಕ್ತಿಗಳ, ಸ್ಥಳಗಳ ಉಲ್ಲೇಖವನ್ನು ಸವಿಸ್ತಾರವಾಗಿ ಮಾಡಿದ್ದಾರೆ. ಶಾಪ ಇಲ್ಲವೇ ವರ ಕೊಡುವಾತನಿಗೆ ಅರ್ಹತೆ, ಸಾಮರ್ಥ್ಯ ಇರಬೇಕಾಗುತ್ತದೆ. ಶಾಪದ ಮೂಲಕಾರಣವು ಕ್ರೋಧವಿರುತ್ತದೆ ; ವರ ಕೊಡುವಾತನು ಪ್ರಸನ್ನಚಿತ್ತನಿರುತ್ತಾನೆ. ಶಾಪದ ಪರಿಣಾಮ ಗಳು ದುಃಖಕಾರಕವಿರುತ್ತವೆ ; ವರಗಳಿಂದ ಸಂತೋಷಕಾರಕ ಘಟನೆಗಳು ಆಗುತ್ತವೆ. ಶ್ರೀಮಾನ್ ಭಿಡೆ ಅವರು ಈ ಎಲ್ಲ ಸಂಗತಿಗಳನ್ನು ವಾಲ್ಮೀಕಿರಾಮಾಯಣದಿಂದ ಆಯ್ದುಕೊಂಡು, ವಿಶ್ಲೇಷಿಸಿ, ಸವಿಸ್ತರವಾಗಿ ಬರೆದು ಈ ಕೃತಿಗೆ ಒಂದು ಹೊಸ ಆಯಾಮವನ್ನು ಒದಗಿಸಿದ್ದಾರೆ.

ವಾಲಿಯ ವಧೆ, ಸೀತಾ-ತ್ಯಾಗ—ಇಂತಹ ಸಂಗತಿಗಳು ಸದ್ಯದ ಕಾಲದಲ್ಲಿ ಸರಿಯೆನಿಸುವುದಿಲ್ಲವೆಂದು ಶ್ರೀಮಾನ್ ಭಿಡೆಯವರು ಪ್ರಕಟಪಡಿಸಿದ್ದಾರೆ.

ಶಾಪ/ವರಗಳ ಸಂದರ್ಭದಲ್ಲಿ ಬಂದ ೧೬೧ ವ್ಯಕ್ತಿವಿಶೇಷ ೨೬ ಸ್ಥಳವಿಶೇಷ ಹಾಗು ಸಂದೇಹಾಸ್ಪದ ವರಗಳ ಬಗ್ಗೆಯೂ ಅವರು ಮಾಹಿತಿಯನ್ನು ಪೂರೈಸಿದ್ದಾರೆ. ಇಷ್ಟೇ ಅಲ್ಲದೆ ಶಾಪ ಮತ್ತು ವರಗಳ ಸಂದರ್ಭದಲ್ಲಿ ಶಾಪ/ವರ ಕೊಡುವವರ ಹೆಸರು, ಪಡೆದಿರುವವರ ಹೆಸರು, ಅವನ ಸ್ಥಾನ, ಅರ್ಹತೆ ಮತ್ತು ಈ ಸಂದರ್ಭದ ಕಾರಣ, ಪರಿಣಾಮಗಳನ್ನು ತಿಳಿಸಿ, ಇವು ವಾಲ್ಮೀಕಿರಾಮಾಯಣದಲ್ಲಿಯ ಯಾವ ಕಾಂಡದಲ್ಲಿ, ಯಾವ ಸರ್ಗದಲ್ಲಿ ಬಂದಿವೆ ಎಂಬುದನ್ನು ಸ್ಪಷ್ಟಪಡಿಸುವ ಒಂದು ಪಟ್ಟಿಯನ್ನು ತಯಾರಿಸಿ ಓದುಗರ ಕೈಗೆ ಕೊಟ್ಟಿದ್ದಾರೆ. ಈ ಪಟ್ಟಿಯಿಂದ ವಾಚಕರು ಕೂಡಲೇ ಸಂದರ್ಭಗಳನ್ನು ಅರಿತುಕೊಳ್ಳಲು ಸುಲಭವಾಗಿದೆ.

*ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ*—ಹೊಸ ಆಯಾಮದ ಈ ವಿದ್ವತ್ ಕೃತಿ ಓದುಗರ ಮೆಚ್ಚುಗೆಯನ್ನು ಪಡೆದು ವರಪ್ರದವಾಗಲಿ !

**ಸರಸ್ವತಿ ಗಜಾನನ ರಿಸಬೂಡ**

# ಪರಿಷ್ಕರಣೆಯನ್ನು ಕುರಿತು

## (ದ್ವಿತೀಯ ಸಂಸ್ಕರಣ)

ಹಿರಿಯರಾದ ಪ್ರಾ॥ ಶ್ರೀ. ರ. ಭಿಡೆಯವರು ತಮ್ಮ *ವಾಲ್ಮೀಕಿ ರಾಮಾಯಣ: ಶಾಪ ಮತ್ತು ವರ* ಪುಸ್ತಕವನ್ನು ಎರಡನೆಯ ಮುದ್ರಣಕ್ಕಾಗಿ ಪರಿಷ್ಕರಿಸಲು ನನಗೆ ಹೇಳಿದರು. ಈ ಕುರಿತು ಅವರು ತಮ್ಮ ಮುನ್ನುಡಿಯಲ್ಲಿ ಪ್ರಸ್ತಾಪಿಸಿದ ಕಾರಣ ಮತ್ತೆ ಅದನ್ನಿಲ್ಲಿ ಬರೆಯುವ ಅಗತ್ಯ ಕಾಣದು.

ಲೇಖಕರು ತಮ್ಮೀ ಪುಸ್ತಕದ ಎರಡನೆಯ ಮುದ್ರಣಕ್ಕಾಗಿ ಕೆಲವು ಮಾರ್ಪಾಡುಗಳನ್ನು, ಹೊಸ ಸೇರ್ಪಡೆಗಳನ್ನು ಕೈಗೊಂಡಿದ್ದಾರೆ. ಅವುಗಳನ್ನು ಪೂರೈಸುವುದಲ್ಲದೆ ಅಗತ್ಯ ಕಂಡಲ್ಲೆಲ್ಲ ಅನುವಾದದ ಕೆಲಸವನ್ನೂ ಮಾಡಿದ್ದೇನೆ. ನನ್ನ ಹಾಗೂ ಮೊದಲ ಕನ್ನಡಾನುವಾದಗಳ ಶೈಲಿಗಳಲ್ಲಿ ವ್ಯತ್ಯಾಸ ಕಂಡುಬರುವುದು ಅಷ್ಟೇ ಸ್ವಾಭಾವಿಕ.

ಈ ಪುಸ್ತಕದ ಮೊದಲ ಮುದ್ರಣದ ಅನುವಾದದ ಸಂದರ್ಭದಲ್ಲಿ ಕಂಡುಬಂದ ಮುಖ್ಯ ಸಂಗತಿಯೆಂದರೆ ಅದರ ಭಾಷೆ ಮರಾಠಿಯ ಪ್ರಭಾವದಿಂದ ಪೂರ್ತಿಯಾಗಿ ಬಿಡಿಸಿಕೊಳ್ಳದಿರುವುದು. ಇಂಥ ಪ್ರಭಾವಕ್ಕೆ ಕಾರಣವಾಗಿರಬಹುದಾದ ಕೆಲವು ಅಂಶಗಳು ಹೀಗಿವೆ :

ಕನ್ನಡಾನುವಾದದ ವಾಕ್ಯರಚನೆ ಸಾಮಾನ್ಯವಾಗಿ ಕರ್ಮ-ಕರ್ತೃ-ಕ್ರಿಯಾಪದ ಎಂಬ ಕ್ರಮದಲ್ಲಿದೆ. ಇಂಥ ರಚನೆಯು ವಿಶಿಷ್ಟವಾದ ಸಂದರ್ಭದಲ್ಲಿ ವಿಶಿಷ್ಟವಾದ ಅರ್ಥವಂತಿಕೆಯನ್ನು ಹೊಂದಿರಬಹುದಾದರೂ ಯಾವಾಗಲೂ ಹಾಗೆಯೇ ಎಂದು ಹೇಳಲಾಗದು. ವಾಕ್ಯರಚನೆಯ ಈ ಕ್ರಮ ಕೃತಕವಾಗಿ ತೋರುತ್ತದೆ. ಮರಾಠಿಗೂ ಈ ಬಗೆಯ ರಚನೆ ಸ್ವಾಭಾವಿಕವಾದುದಲ್ಲ. ಉದಾ : "ಏಳು ಪುತ್ರರನ್ನು ಮಾತ್ರ ಇವಳು ಬಯಸಿದ್ದಳು ; ಆದ್ದರಿಂದ ಎಂಟನೆಯ ಗರ್ಭವನ್ನು ಇವಳು ಒಡೆದಳು..." (ವ್ಯಕ್ತಿವಿಶೇಷ - ೫, ಅದಿತಿ). ಬದಲು, "ಇವಳು ಏಳು ಪುತ್ರರನ್ನು ಮಾತ್ರ ಬಯಸಿದ್ದಳು ; ಆದ್ದರಿಂದ ಇವಳು ಎಂಟನೆಯ ಗರ್ಭವನ್ನು ಒಡೆದಳು" ಎಂದಾಗಬೇಕು.

'ಲಾ' ಪ್ರತ್ಯಯವನ್ನು ಹೊಂದಿದ ಮರಾಠಿಯ ಪದವು ಕನ್ನಡಕ್ಕೆ ಅನುವಾದಗೊಳ್ಳುವಾಗ ಕೆಲವು ಸಲ ದ್ವಿತಿಯಾ ವಿಭಕ್ತಿ ಪ್ರತ್ಯಯವನ್ನು ಹೊಂದಿದರೆ ಇನ್ನು ಕೆಲವೆಡೆ ಚತುರ್ಥಿಯನ್ನು. ಇವು ತಿರುವುಮುರುವಾದರೆ ಅನುವಾದದ ನುಡಿ ತನ್ನ ಕನ್ನಡತನಕ್ಕೆ ಎರವಾಗುವ ಸಾಧ್ಯತೆಯಿರುತ್ತದೆ. ಉದಾ : "ಅನಂತರ ಭೇಟಿಯಾದ ವರುಣನು ತನ್ನೊಡನೆ ವಿವಾಹವಾಗಲು ಉರ್ವಶಿಗೆ ಕೇಳಿಕೊಂಡನು." (ವ್ಯಕ್ತಿವಿಶೇಷ - ೧೭, ಉರ್ವಶಿ). ಈ ವಾಕ್ಯವು "ಅನಂತರ ಭೇಟಿಯಾದ ವರುಣನು ಉರ್ವಶಿಯನ್ನು ತನ್ನೊಡನೆ ವಿವಾಹವಾಗಲು ಕೇಳಿಕೊಂಡನು" ಎಂದಾದೀತು.

ಮರಾಠಿಯ ಸಪ್ತಮಿಯ ವಿಭಕ್ತಿಯ ಪದಗಳು ಕನ್ನಡಕ್ಕೆ ಅನುವಾದಗೊಳ್ಳುವಾಗ ಸಪ್ತಮಿಯಲ್ಲದೆ ಚತುರ್ಥಿಯ ಪದಗಳಾಗಿಯೂ ಬರುವುದುಂಟು. ಈ ಆಯಕ್ತೆ ಕನ್ನಡ ನುಡಿಯ ಜಾಯಮಾನವನ್ನು ಗಮನದಲ್ಲಿರಿಸಿ ನಡೆಯಬೇಕಾದುದು. ಉದಾ : "ಶಂಕರನ ಶಾಪವಿದ್ದ ಶರವನದಲ್ಲಿ ಇಲರಾಜನ ಬೇಟೆಗೆಂದು ಹೋದಾಗ..." (ವ್ಯಕ್ತಿವಿಶೇಷ - ೧೫, ಇಲ, ಇಲಾ). ಬದಲು "ಇಲರಾಜನು ಶಂಕರನ ಶಾಪವಿದ್ದ ಶರವನಕ್ಕೆ ಬೇಟೆಗೆಂದು ಹೋದಾಗ..." ಎಂದಾಗಬೇಕು. ಇದೇ ರೀತಿ, "ಅವನು ಮನೆಗೆ / ಪೇಟೆಗೆ / ಊರಿಗೆ ಹೋದನು" ಎಂಬ ಬಗೆಯ ವಾಕ್ಯಗಳು "ಅವನು ಮನೆಯಲ್ಲಿ/ಪೇಟೆಯಲ್ಲಿ/ಊರಲ್ಲಿ ಹೋದನು" ಎಂಬುದಾಗಿ ಅನುವಾದದಲ್ಲಿ ಕಂಡುಬರುತ್ತವೆ. ಇಲ್ಲಿ ಅರ್ಥವ್ಯತ್ಯಾಸವನ್ನು ಗಮನಿಸುವಂತಿದೆ.

ಅನುವಾದದ ಸಂಯುಕ್ತ ವಾಕ್ಯಗಳು ಅರ್ಥಸಂದಿಗ್ಧತೆಯಿಂದ ಕೂಡಿದವುಗಳಾಗಿವೆ. ಇವುಗಳ ವಾಕ್ಯಾಂಶ (phrases)ಗಳನ್ನು ಸ್ಥಳಾಂತರಿಸಿದಾಗ ಸರಿಯಾದ ಅರ್ಥ ಮೂಡಿಬರಲು ನೆರವಾಗುತ್ತದೆ. ಉದಾ : "ಸೀತೆಯು ಅಗ್ನಿದಿವ್ಯವನ್ನು ಮಾಡಿದನಂತರ ಮಹೇಶ್ವರನ ಕೃಪೆಯಿಂದ ಸ್ವರ್ಗಸ್ಥನಾದ ದಶರಥನು ಭೂಲೋಕಕ್ಕೆ ಬಂದು ಶ್ರೀರಾಮನಿಗೆ ದರ್ಶನವಿತ್ತನು." (ವ್ಯಕ್ತಿವಿಶೇಷ - ೫೪, ದಶರಥ). ಈ ವಾಕ್ಯ ಹೀಗಾಗಲು ಸಾಧ್ಯ : "ಸ್ವರ್ಗಸ್ಥನಾದ ದಶರಥನು, ಸೀತೆಯು ಅಗ್ನಿದಿವ್ಯವನ್ನು ಮಾಡಿದನಂತರ ಮಹೇಶ್ವರನ ಕೃಪೆಯಿಂದ ಭೂಲೋಕಕ್ಕೆ ಬಂದು ಶ್ರೀರಾಮನಿಗೆ ದರ್ಶನವಿತ್ತನು."

ಮರಾಠಿಯ ಕೆಲವು ಪದಗಳ ಏಕವಚನ ಹಾಗೂ ಬಹುವಚನಗಳ ರೂಪಗಳು ಒಂದೇ ಆಗಿರುತ್ತವೆ. ಕನ್ನಡಾನುವಾದದ ಕಾಲಕ್ಕೆ ಈ ಅಂಶವನ್ನು ಗಮನಿಸಬೇಕಿದೆ. ಉದಾ : ಮರಾಠಿಯ ಪ್ರಶ್ನ, ಸಮಸ್ಯಾ, ವರ, ಶಾಪ, ಮುಂತಾದವುಗಳು.

ಕನ್ನಡದ ಗ್ರಂಥಭಾಷೆಯ ವಾಕ್ಯರಚನೆಯಲ್ಲಿ ಕರ್ಮ ಪದಕ್ಕೆ 'ಅನ್ನು' ಪ್ರತ್ಯಯ ಅಗತ್ಯದ್ದು. ಅನುವಾದದಲ್ಲಿ ಈ ಕೊರತೆ ಹಲವೆಡೆ ಉಳಿದುಕೊಂಡಿದೆ. ಉದಾ : "ಶಿವರುದ್ರಸಂಹಿತೆಯಲ್ಲಿ ಈ ಕನ್ಯೆಯು ಗೌತಮ ಋಷಿಯ ಮಗಳೆಂದು ಉಲ್ಲೇಖನವಿದೆ.." (ವ್ಯಕ್ತಿವಿಶೇಷ - ೩, ಅಂಜನಾ) ಇದು, "...ಮಗಳೆಂಬ ಉಲ್ಲೇಖನವಿದೆ" ಎಂದಾಗಲಿ ಇಲ್ಲವೆ "ಶಿವನ ರುದ್ರಸಂಹಿತೆಯಲ್ಲಿ ಈ ಕನ್ಯೆಯನ್ನು ಗೌತಮ ಋಷಿಯ ಮಗಳೆಂದು ಉಲ್ಲೇಖಿಸಲಾಗಿದೆ" ಎಂದಾಗಲಿ ಆಗಬಹುದು. ಅನುವಾದದಲ್ಲಿ, "ಅವನು ಕೆಲಸ / ಊಟ / ಯುದ್ಧ ಮಾಡಿದನು" ಎಂಬ ಬಗೆಯ ವಾಕ್ಯಗಳು ಹಲವೆಡೆ ಕಂಡುಬರುತ್ತವೆ.

ಮರಾಠಿಯ 'ಕಾರಣ' ಎಂಬ ಪದವನ್ನು ಸಂದರ್ಭಕ್ಕೆ ತಕ್ಕಂತೆ 'ಕಾರಣ' ಇಲ್ಲವೆ 'ಏಕೆಂದರೆ' ಎಂಬರ್ಥದಲ್ಲಿ ಬಳಸಲಾಗುತ್ತದೆ. ಅನುವಾದದ ಈ ವಾಕ್ಯವನ್ನು ಗಮನಿಸಿ : "ಕಬಂಧನಿಗೆ ದಿವ್ಯಜ್ಞಾನವಿರಲಿಲ್ಲ ; ಕಾರಣ, ಸೀತೆಯನ್ನು ಯಾರು ಅಪಹರಿಸಿದರೆಂಬುದನ್ನು ಹೇಳಲು ಆತನಿಗೆ ಸಾಧ್ಯವಾಗಲಿಲ್ಲ." (ವ್ಯಕ್ತಿವಿಶೇಷ - ೨೧, ಕಬಂಧ). ಇದನ್ನು, "ಕಬಂಧನಿಗೆ ದಿವ್ಯಜ್ಞಾನವಿರಲಿಲ್ಲ ; ಏಕೆಂದರೆ, ಯಾರು ಸೀತೆಯನ್ನು ಅಪಹರಿಸಿದರೆಂಬುದನ್ನು ಹೇಳಲು ಆತನಿಗೆ ಸಾಧ್ಯವಾಗಲಿಲ್ಲ" ಎಂದಾಗಲಿ ಇಲ್ಲವೆ ಇನ್ನಷ್ಟು ಸರಾಗವಾಗಿ, "ಕಬಂಧನಿಗೆ ದಿವ್ಯಜ್ಞಾನವಿರಲಿಲ್ಲ. ಆದಕಾರಣ, ಯಾರು ಸೀತೆಯನ್ನು ಅಪಹರಿಸಿದರೆಂಬುದನ್ನು ಹೇಳಲು ಆತನಿಗೆ ಸಾಧ್ಯವಾಗಲಿಲ್ಲ" ಎಂಬುದಾಗಿ ತಿದ್ದಬೇಕಾದೀತು.

ಮರಾಠಿಯ ಶಬ್ದಸಮುಚ್ಚಯವೆಲ್ಲ ಮೂರು ಲಿಂಗಗಳಾಗಿ ಬೇರ್ಪಟ್ಟಿವೆ. ಕನ್ನಡಾನುವಾದದಲ್ಲಿ ಈ ಸಂಗತಿಯತ್ತ ಗಮನವನ್ನು ಹರಿಸದಿದ್ದರೆ ಈ ಬಗೆಯ ಮೋಜಿನ ಅನುವಾದ ಸಿದ್ಧಗೊಳ್ಳದಿರದು.—"ವ್ಯಕ್ತಿವಿಶೇಷ - ೧೯. **ಐರಾವತ** : ಈತನು ಇರಾವಾನನ ಮಗನು. ಪುರಾಣವಾಙ್ಮಯದಲ್ಲಿ ಈತನಿಗೆ ಇಂದ್ರನ ಆನೆ ಎಂದಿದ್ದಾರೆ. ಈತನು ಸಮುದ್ರಮಥನದಿಂದ ಉತ್ಪನ್ನನಾಗಿ ಇಂದ್ರನ ವಾಹನವಾದನು. ಈ ಐರಾವತವು ಬಿಳಿಯ ಬಣ್ಣದ್ದಿದ್ದು ಇದಕ್ಕೆ ನಾಲ್ಕು ದಂತಗಳಿವೆ..."

ತಪ್ಪು ಹೊರಿಸುವುದು ನನ್ನ ಗುರಿಯಲ್ಲ. ಒಂದು ಒಳ್ಳೆಯ ಕನ್ನಡಾನುವಾದ ಓದುಗರಿಗೆ ಸಿಕ್ಕುವಂತಾಗಲೆಂದು ತಕ್ಕ ತಿದ್ದುಪಡಿಗಳನ್ನು ಕೈಕೊಂಡೆನಷ್ಟೆ.

ವಿರೂಪಾಕ್ಷ ಕುಲಕರ್ಣಿ

# ಈ ಕೃತಿಯ ದೃಷ್ಟಿಕೋನ

ರಾಮಾಯಣವನ್ನು ಆಳವಾಗಿ ಓದಿಕೊಂಡು ಅದರಿಂದ ಶಾಪ ಮತ್ತು ವರಗಳನ್ನು ಮಾತ್ರ ಆಯ್ದುಕೊಳ್ಳುವ ಒಂದು ಯತ್ನವಿದು. ಇದು ಶಾಪ / ವರಗಳ ಒಂದು ಸಂಕಲನಾತ್ಮಕ ಗ್ರಂಥವಾಗಿದ್ದು ಇದನ್ನು ರಾಮಾಯಣದ ಬಗೆಗಿನ ಪ್ರಬಂಧವೆಂದು ತಿಳಿಯಬಾರದು. ಇದನ್ನು ಬರೆಯುವಾಗ ಒಂದು ವಿಶಿಷ್ಟವಾದ ದೃಷ್ಟಿಕೋನವನ್ನಿಟ್ಟುಕೊಂಡು ಆ ಚೌಕಟ್ಟಿನಲ್ಲಿಯೇ ವಿವೇಚನೆಯನ್ನು ಇಟ್ಟುಕೊಳ್ಳಲಾಗಿದೆ.

(೧) ಇಲ್ಲಿಯ ವಿಷಯ ಕೇವಲ ವಾಲ್ಮೀಕಿರಾಮಾಯಣವನ್ನು ಆಧರಿಸಿದೆ. ಅದನ್ನುಳಿದು ಬೇರೆ ರಾಮಾಯಣಗಳ ಊಹಾಪೋಹ ಇದರಲ್ಲಿಲ್ಲ. ಶಾಪ ಮತ್ತು ವರ ಇವುಗಳನ್ನು ಹೊರತುಪಡಿಸಿ, ಇವುಗಳಿಗೆ ಸಂಬಂಧವಿಲ್ಲದ, ವಾಲ್ಮೀಕಿ ರಾಮಾಯಣದಲ್ಲಿಯ ಇತರ ಸಂದರ್ಭ-ವಿಷಯಗಳನ್ನು ಇದರಲ್ಲಿ ಅಳವಡಿಸಿಲ್ಲ.

(೨) ವಾಲ್ಮೀಕಿರಾಮಾಯಣದ ಎಲ್ಲ ಶಾಪ / ವರಗಳ ಸಂಕಲನವನ್ನು ತಯಾರಿಸುವಾಗ ಸಾಕಷ್ಟು ಎಚ್ಚರಿಕೆ ವಹಿಸಿದ್ದರೂ ಅಪ್ಪಿತಪ್ಪಿ ಯಾವದಾದರೊಂದು ಶಾಪ / ವರವು ಉಳಿದುಹೋಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

(೩) ಇದರಲ್ಲಿ ವಾಲ್ಮೀಕಿರಾಮಾಯಣದಲ್ಲಿದ್ದ ೫೯ ಶಾಪಗಳ ಮತ್ತು ೬೯ ವರಗಳ ಬಗ್ಗೆ ವಿವರಣೆಯನ್ನು ಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಪ್ರತಿಯೊಂದು ಶಾಪ / ವರದ ಪೂರ್ವಸಂದರ್ಭವನ್ನು, ಸಂಸ್ಕೃತ ಸಂಹಿತೆಯ ಜೊತೆಗೆ ಕನ್ನಡ ಅನುವಾದವನ್ನು ಕೊಡಲಾಗಿದೆ. ಅವಶ್ಯಕವೆನಿಸಿದಲ್ಲಿ ಅದರ ವೈಶಿಷ್ಟ್ಯಪೂರ್ಣ ಮಾಹಿತಿಯನ್ನೂ ಕೊಡಲಾಗಿದೆ. ಜೊತೆಗೆ ಆಣೆ, ಸತ್ಯಕ್ರಿಯೆ, ಪ್ರತಿಜ್ಞೆ, ಆಶೀರ್ವಾದ, ಹರಕೆ—ಇವುಗಳ ವಿಮರ್ಶೆಯನ್ನು ಕೇವಲ ಶಾಪ / ವರಗಳ ಸಾಧರ್ಮ್ಯ ಅಥವಾ ಭೇದಗಳನ್ನು ಸ್ಪಷ್ಟೀಕರಿಸಲು ಅವಶ್ಯಕವಿದ್ದ ಮಟ್ಟಿಗೆ ಆಯ್ದುಕೊಳ್ಳಲಾಗಿದೆ. ಇಲ್ಲಿ ಕೊಡಲಾದ ಉದಾಹರಣೆಗಳು ಸಂಪೂರ್ಣವಾಗಿಲ್ಲ. ಶಾಪ / ವರಗಳನ್ನು ಲಕ್ಷಿಸಿ ಬಂದ ವ್ಯಕ್ತಿಗಳ, ಸ್ಥಾನಗಳ ಸಂಕ್ಷಿಪ್ತ ಮಾಹಿತಿಯನ್ನು ಒಂದು ಸ್ವತಂತ್ರ ಪ್ರಕರಣದಲ್ಲಿ ಕೊಡಲಾಗಿದೆ. ಇಷ್ಟೇ ಅಲ್ಲದೆ, ಕೆಲವು ಸಂದೇಹಾಸ್ಪದ ಶಾಪ / ವರಗಳು, ಶಾಪ / ವರಗಳ ಕಾರಣಗಳು, ಪರಿಣಾಮಗಳು, ಪ್ರಕಾರಗಳು ಹಾಗೂ ಸ್ವರೂಪಗಳನ್ನು ಅಳವಡಿಸಲಾಗಿದೆ. ಶಾಪ / ವರಗಳ ಸಂಬಂಧವಾಗಿ ಬರುವ ಅನೇಕ ವಿಷಯಗಳ ಪರಾಮರ್ಶೆಯನ್ನು 'ಶಾಪಾದಪಿ ವರಾದಪಿ !' ಎಂಬ ದೀರ್ಘಪ್ರಸ್ತಾವನೆಯಲ್ಲಿ ಮಾಡಲಾಗಿದೆ. ಶಾಪ / ವರಗಳ ಪಟ್ಟಿಯನ್ನು ತಯಾರಿಸಿ ಈ ಗ್ರಂಥವನ್ನು ಪರಿಪೂರ್ಣಗೊಳಿಸುವ ಪ್ರಯತ್ನವನ್ನು ಮಾಡಿಯಾಗಿದೆ.

(೪) ವಾಲ್ಮೀಕಿರಾಮಾಯಣದ ಸಂಸ್ಕೃತ ಸಂಹಿತೆಗಳನ್ನು ಹೊಂದಿದ ಅನೇಕ ಆವೃತ್ತಿಗಳು ಪ್ರಕಟವಾಗಿದ್ದು, ಕೆಲವು ಸಂಕೀರ್ಣಗಳಲ್ಲಿ ಸಂಸ್ಕೃತದಲ್ಲಿ ಟೀಕೆ, ಭಾರತೀಯ ಭಾಷೆಯ ಅನುವಾದಗಳು ಅಂತರ್ಭೂತವಾಗಿವೆ. ನಿರ್ಣಯಸಾಗರ ಪ್ರೆಸ್, ಮುಂಬಯಿ : ಗುಜರಾತಿ ಪ್ರಿಂಟಿಂಗ್ ಪ್ರೆಸ್, ಮುಂಬಯಿ : ಗೀತಾ ಪ್ರೆಸ್, ಗೋರಖಪುರ ; ಶ್ರೀರಾಮಕೋಶ ಮಂಡಳಿ, ಪುಣೆ—ಇವಲ್ಲದೆ ಮದ್ರಾಸ್, ಕುಂಭಕೋಣಮ್, ಕಲಕತ್ತೆ, ಬಡೋದಾಗಳಲ್ಲಿ ಪ್ರಕಟವಾದ ಆವೃತ್ತಿಗಳು ವಿಶೇಷವಾಗಿ ಉಲ್ಲೇಖನೀಯವಾಗಿದೆ. ಬಡೋದೆಯ ಓರಿಯೆಂಟಲ್ ಇನ್‌ಸ್ಟಿಟ್ಯೂಟ್ ಇವರ ಆವೃತ್ತಿಯಲ್ಲಿ ಸಂಶೋಧಿತ ಶುದ್ಧ ಪಾಠವಿರುವುದರಿಂದ ಈ ಆವೃತ್ತಿಯ ಸಂಹಿತೆಗೆ ಅಧಿಕೃತ ಮನ್ನಣೆ ಇದೆ. ಈ ಆವೃತ್ತಿಯ ಸಂಹಿತೆಗಳನ್ನು ಬಳಸುವುದೇ ಸೂಕ್ತ ; ಆದರೆ ಈ ಆವೃತ್ತಿಗಳು ತುಂಬಾ ಮಹತ್ವದ ಗ್ರಂಥಾಲಯಗಳಲ್ಲಿ ಮಾತ್ರ ಇವೆ. ಮಹಾವಿದ್ಯಾಲಗಳ ಗ್ರಂಥಾಲಯಗಳಲ್ಲಿ, ಅದರಲ್ಲೂ ಗ್ರಾಮೀಣ ಸಂಸ್ಥೆಗಳಲ್ಲಂತೂ, ಈ ಪ್ರತಿಗಳು ಕಣ್ಣಿನಿಂದ ನೋಡಲು ಸಹ ಸಿಗುವುದಿಲ್ಲ. ಈ ಗ್ರಂಥವು ಈ ರೀತಿ ದುರ್ಲಭವಾಗಿರುವುದರಿಂದ ಸರ್ವಸಾಮಾನ್ಯರಿಗೆ ದೊರಕುವಂತಿಲ್ಲ. *ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ* ಗ್ರಂಥವು ಬಹುಮಟ್ಟಿಗೆ ಸರ್ವಸಾಮಾನ್ಯ ಓದುಗರಿಗಾಗಿ ಇರುವುದರಿಂದ ಇದರಲ್ಲಿ ಸಹಜವಾಗಿ ದೊರಕಬಹುದಾದ ಸಂಹಿತೆಗಳನ್ನು ಅಳವಡಿಸುವುದು ಆವಶ್ಯಕ ಮತ್ತು ಸೂಕ್ತವೆನಿಸಿದ್ದರಿಂದ ಗೀತಾ ಪ್ರೆಸ್, ಗೋರಖಪುರ, ಇವರ ಆವೃತ್ತಿಯ ಸಂಸ್ಕೃತ ಸಂಹಿತೆಯನ್ನು, ಅದರಲ್ಲಿದ್ದ ಸಣ್ಣಪುಟ್ಟ ಕೊರತೆಗಳನ್ನು ಕಡೆಗಣಿಸಿ, ಉಪಯೋಗಿಸಲಾಗಿದೆ.

(೫) ವಾಲ್ಮೀಕಿರಾಮಾಯಣದ ಉಪಲಬ್ಧವಿದ್ದ ಮರಾಠಿ ಅನುವಾದಗಳನ್ನು, ಅವುಗಳಲ್ಲಿಯೂ ಕೈ. ಕಾಶೀನಾಥಶಾಸ್ತ್ರೀ ಲೇಲೇ ಇವರಿಂದ ಪ್ರಪ್ರಥಮವಾಗಿ ಪ್ರಕಟಿಸಲ್ಪಟ್ಟ ಪ್ರತಿಯನ್ನು ಈ ವಿವೇಚನೆಯಲ್ಲಿ ಸ್ವೀಕರಿಸಲಾಗಿದೆ.

(೬) ವ್ಯಕ್ತಿವಿಶೇಷ ಸ್ಥಳವಿಶೇಷ—ಪ್ರಕರಣಗಳನ್ನು ಬರೆಯುವಾಗ ಕೈ. ಸಿದ್ಧೇಶ್ವರಶಾಸ್ತ್ರಿ ಚಿತ್ರಾವ ಇವರ *ಪ್ರಾಚೀನ ಚರಿತ್ರಕೋಶ* ಅಲ್ಲದೆ ಪಂಡಿತ ಮಹಾದೇವಶಾಸ್ತ್ರಿ ಜೋಶಿ ಇವರು ಸಂಪಾದಿಸಿದ *ಭಾರತೀಯ ಸಂಸ್ಕೃತಿಕೋಶ* ಇದೇ ರೀತಿ ಶ್ರೀ ಅಮರೇಂದ್ರ ಗಾಡಗೀಳ ಅವರ *ಶ್ರೀರಾಮಕೋಶ*—ಇವನ್ನು ಆಧಾರಗ್ರಂಥಗಳನ್ನಾಗಿಟ್ಟುಕೊಂಡಿದೆ. ಇವುಗಳಿಂದ ಕೆಲವು ಸಂದರ್ಭಗಳಲ್ಲಿ ಬೇಕಿದ್ದ ವಿಷಯಭಾಗವನ್ನು ಅವುಗಳಲ್ಲಿದ್ದಂತೆಯೇ ಬಳಸಿದ್ದರೆ, ಕೆಲವೆಡೆ ತುಸುಮಟ್ಟಿಗೆ ಅವಶ್ಯಕವಿದ್ದಲ್ಲಿ ಬದಲಾವಣೆ ಮಾಡಿ ಬಳಸಲಾಗಿದೆ. ಪ್ರಸ್ತಾವನೆಯನ್ನು ಬರೆಯುವಾಗ ಉಪಯೋಗಿಸಲ್ಪಟ್ಟ ಸಂದರ್ಭಗಳ ಸೂಚಿಯನ್ನು ಕೊನೆಯಲ್ಲಿ ಕೊಡಲಾಗಿದೆ. ಈ ಎಲ್ಲ ಗ್ರಂಥಗಳಿಗೆ ಹಾಗೂ ಗ್ರಂಥಕರ್ತರಿಗೆ ನಾನು ಚಿರಋಣಿಯಾಗಿದ್ದೇನೆ. ಅವರ ಈ ಸಹಾಯಕ್ಕಾಗಿ ನಾನು ಅವರೆಲ್ಲರಿಗೆ ಕೃತಜ್ಞ.

(೭) ಶಾಪ / ವರಗಳನ್ನು ವಿವರಿಸುವಾಗ > ಈ ಚಿಹ್ನೆಯನ್ನು ಬಳಸಲಾಗಿದೆ. ಇದು ಗಣಿತಶಾಸ್ತ್ರ ಚಿಹ್ನೆಯನ್ನು ಹೋಲುತ್ತಿದ್ದರೂ ಆ ಅರ್ಥವು ಇಲ್ಲಿ ಅನ್ವಯಿಸುವುದಿಲ್ಲ. ಯಾವ ವ್ಯಕ್ತಿಯ ಮುಖದಿಂದ ಶಾಪ / ವರವು ಹೊರಬಂದಿದೆಯೋ ಆ ವ್ಯಕ್ತಿಯ ಹೆಸರಿನ ಮುಂದೆ > ಈ ರೀತಿಯ ಚಿಹ್ನೆಯಿದೆ.

ಶ್ರೀಪಾದ ರಘುನಾಥ ಭಿಡೆ

## ಶ್ರೀಪಾದ ರಘುನಾಥ ಭಿಡೆ ಅವರ ಕೃತಿಗಳು

*ವಾಲ್ಮೀಕಿ ರಾಮಾಯಣ : ಶಾಪ ಆಣಿ ವರ* (ಮರಾಠಿ)

*ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ* (ಕನ್ನಡ)
(ಅನುವಾದ : ಸರಸ್ವತಿ ಗಜಾನನ ರಿಸಬೂಡ)
—ಉತ್ತಮ ಅನುವಾದ-ಕೃತಿಗಾಗಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ. ೧೯೯೨)

*ವಾಲ್ಮೀಕಿ ರಾಮಾಯಣ : ಶಾಪ ಔರ್ ವರದಾನ್* (ಹಿಂದೀ)

*ಮಹಾಭಾರತಾಚೇ ಶಾಪವಾಣೀ* (ಮರಾಠಿ)

*ಮಹಾಭಾರತದ ಶಾಪಗಳು* (ಕನ್ನಡ—ಎರಡು ಸಂಪುಟಗಳಲ್ಲಿ)
(ಅನುವಾದ : ವಿರೂಪಾಕ್ಷ ಕುಲಕರ್ಣಿ)

*ಮಹಾಭಾರತಾತೀಲ ಕುಮಾರಸಂಭವ* (ಮರಾಠಿ)

*ಮಹಾಭಾರತಾತೀಲ ಅಲಕ್ಷಿತ ಕಥಾ* (ಮರಾಠಿ)

*ಮಹಾಭಾರತಾತೀಲ ಕುಮಾರ ಕಥಾ* (ಮರಾಠಿ)

*ವಾಲ್ಮೀಕಿ ರಾಮಾಯಣ : ಶಾಪಾಲು, ವರಾಲು* (ತೆಲುಗು)

*ಮಹಾಭಾರತದಲ್ಲಿ ಕುಮಾರಸಂಭವ* (ಕನ್ನಡ)

*ಮಹಾಭಾರತಾಚೇ ವರದಾನ* (ಮರಾಠಿ)

*Kumārasambhava in Mahābhārata* (ಇಂಗ್ಲಿಷ್)

## ಭಾಗ : ಒಂದು

# ಪ್ರಸ್ತಾವನೆ : ಶಾಪಾದಪಿ ವರಾದಪಿ !

**ವೇ**ದೋಪನಿಷತ್ತುಗಳು, ಪುರಾಣಗಳು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಭಾಗವತ ಮೊದಲಾದ ಗ್ರಂಥಗಳು ಭಾರತೀಯರ ಸಾಂಸ್ಕೃತಿಕ ಜೀವನವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ. ಈ ಗ್ರಂಥಗಳು ಬೇರೆ ಅಲ್ಲ ಭಾರತೀಯ ಸಂಸ್ಕೃತಿ ಬೇರೆ ಅಲ್ಲ. ಹಾಗೆ ನೋಡಿದರೆ ಭಗವದ್ಗೀತೆ ಒಂದು ಸ್ವತಂತ್ರ ಗ್ರಂಥವಲ್ಲ. ಅದು ಮಹಾಭಾರತದ ಭೀಷ್ಮಪರ್ವದಲ್ಲಿಯ ಒಂದು ಭಾಗವಾಗಿದೆ. ಹೀಗಿದ್ದರೂ ಅದು ಸ್ವತಂತ್ರ ಘನಗ್ರಂಥದಷ್ಟು ಘನತೆಯನ್ನು ಪಡೆದಿದೆ. ಅದರಲ್ಲಿರುವ ವಿಚಾರಸಂಪತ್ತೇ ಅದಕ್ಕೆ ಕಾರಣವಾಗಿದೆ. ಶತಾನುಶತಕಗಳು ಕಳೆದರೂ ಅದರ ತಾಜಾತನ ಹಾಗೂ ಜನಪ್ರಿಯತೆಗಳು ಎಳ್ಳಷ್ಟೂ ಇಳಿಮುಖವಾಗಿಲ್ಲ. ಈ ಗ್ರಂಥಗಳು ರಚನೆಯ ಕಾಲದಿಂದ ಇಂದಿನವರೆಗೆ ಶ್ರೇಷ್ಠ ಧಾರ್ಮಿಕ ಗ್ರಂಥಗಳೆಂದು ಪರಿಗಣಿಸಲ್ಪಟ್ಟಿದ್ದರಿಂದ ಅವು ವಂದನೀಯ ಮತ್ತು ಪೂಜ್ಯಸ್ಥಾನವನ್ನು ಪಡೆದಿವೆ. ಅಂದಮಾತ್ರಕ್ಕೆ ಇಷ್ಟು ಕಾರಣದಿಂದಾಗಿಯೇ ಅವುಗಳಿಗೆ ಭಾರತೀಯರ ಹೃದಯದಲ್ಲಿ ಸ್ಥಾನ ದೊರೆಯಿತೆಂದಿಲ್ಲ. ಇವುಗಳಲ್ಲಿ ಮಾನವೀ ಜೀವನದ ದರ್ಶನವು ಬಲು ಸೊಗಸಾಗಿ ಮೂಡಿಬಂದಿದೆ. ಅತ್ಯುತ್ತಮ ಆದರ್ಶಗಳನ್ನು ಇವುಗಳ ಮೂಲಕ ಸಮಾಜಕ್ಕೆ ನೀಡಲಾಗಿದೆ. ಶ್ರೇಷ್ಠ ತತ್ತ್ವಜ್ಞಾನವನ್ನು ಪ್ರತಿಪಾದಿಸಲಾಗಿದೆ ; ಉಚ್ಚತಮ ಜೀವನ ಮೌಲ್ಯಗಳನ್ನು ಕಾಪಾಡಿಕೊಂಡ ಉದಾಹರಣೆಗಳು ಹೇರಳವಾಗಿವೆ. ಮಾನವಸ್ವಭಾವದ ಸೂಕ್ಷ್ಮ-ಅತಿಸೂಕ್ಷ್ಮವಾದ ವಿವಿಧ ಅಂಶಗಳನ್ನು ಬಹು ಸುಂದರವಾಗಿ ಚಿತ್ರಿಸಲಾಗಿದೆ. ಸತ್ಯವನ್ನು ಆಧರಿಸಿ ಬರೆಯಲಾದ ಈ ಗ್ರಂಥಗಳು ಕೇವಲ ಧಾರ್ಮಿಕ ಗ್ರಂಥಗಳೆಂದೇ ಗಣಿಸಲ್ಪಟ್ಟಿದ್ದರಿಂದ ಇವುಗಳಲ್ಲಿ ಬರಿ ದೇವರ ಸ್ತುತಿ, ದೇವರ ಗುಣಗಾನವಿದ್ದು, ಇವು ದೇವರ ಹಿರಿಮೆಯನ್ನು ಎತ್ತಿತೋರಿಸುವ ಗ್ರಂಥಗಳಾಗಿದ್ದು ದೈವಿಕ ಶಕ್ತಿಯಿಂದ ತುಂಬಿತುಳುಕುತ್ತವೆ, ಎಂಬ ನಂಬಿಕೆ ಬರಿ ಅಂಶತಃ ಸತ್ಯವಾಗಿದೆ. ನಿಜದಲ್ಲಿ ಇವು, ಮನುಷ್ಯರು ಮನುಷ್ಯರಿಗಾಗಿ ಬರೆದಿಟ್ಟ ಮಾನವೀಯ ಗ್ರಂಥಗಳು. ದೇವರ ಮಹಿಮೆಗಿಂತ ಇಲ್ಲಿ ಮನುಷ್ಯನ ಕ್ರೌರ್ಯ, ಶೌರ್ಯ, ಸಾಹಸಗಳಿಗೆ ಹೆಚ್ಚು ಗೌರವ ನೀಡಲಾಗಿದೆ. ಈ ಗ್ರಂಥಗಳಲ್ಲಿ ದೇವರಿಗೆ ಆಪಾಹನೆಗಳನ್ನು ಮಾಡಿರುದು ಕಂಡುಬರುವಂತೆಯೇ ಮಾನವನು ಎಸೆದ ಹಾಗೂ ಸ್ವೀಕರಿಸಿದ ಸವಾಲುಗಳೂ ಕೂಡ ಮನಸೂರೆಗೊಳ್ಳುವಂತಿವೆ. ಈ ಗ್ರಂಥಗಳ ಲೌಕಿಕತೆಯಲ್ಲಿಯೇ ಅವುಗಳ ಅಲೌಕಿಕತೆಯು ಕಲೆತಿದೆ. ಈ ಹೊತ್ತಿಗೆಗಳಲ್ಲಿ ಬಣ್ಣಿಸಿದ ಕಥೆಗಳು, ಚರಿತ್ರೆ, ತತ್ತ್ವಜ್ಞಾನ ಇವೆಲ್ಲ ಇಡಿಯಾಗಿ ಮಾನವನಿಗೆ ಸಂಬಂಧಿತವಾದಂಥವು. ಇವುಗಳಲ್ಲಿ ಕಂಡುಬರುವ ಸುಖ ದುಃಖಗಳು, ಯಶಾಪಯಶಗಳು, ಗುಣಾವಗುಣಗಳೆಲ್ಲ ನಮ್ಮ-ನಿಮ್ಮವೇ ಆಗಿವೆ. ಈ ಗ್ರಂಥಗಳಲ್ಲಿಯ ಅತಿಮಾನವೀಯ ಎಂದರೆ ದೈವೀ (superhuman) ಅಂಶವು ಮಹಾಮಾನವನದಾಗಿದೆ. ಸಾಹಿತ್ಯದ ದೃಷ್ಟಿಯಿಂದ ಈ ಗ್ರಂಥಗಳ ಹಿರಿಮೆ ಅಸಾಧಾರಣ. ಗತಿಸಿದ ಕಾಲದೊಡನೆ ಇವು ಚಿರಂಜೀವಿ ; ಅಳಿಗಾಲವಿಲ್ಲದ ಗ್ರಂಥಗಳೆಂಬ ಸಂಗತಿ ಸಿದ್ಧವಾಗಿದೆ. ರತ್ನಾಕರ ಕಡಲಿನಂತೆ ಈ ಗ್ರಂಥಗಳು ಸಂಪತ್ತನ್ನೊಳಗೊಂಡಿವೆ. ಇವುಗಳಲ್ಲಿ ಅಡಗಿದ ವಿವಿಧ ಸೌಂದರ್ಯಸ್ಥಲಗಳ ಹೊಸ ಬೇರೆ ಬೇರೆ ಮಗ್ಗುಲುಗಳ ಪರಿಚಯವನ್ನು ವಿದ್ವಾಂಸರು ಕಾಲಕಾಲಕ್ಕೆ ಮಾಡಿಕೊಟ್ಟಿದ್ದಾರೆ. ಸಂಶೋಧಕರು ಬಹಳಷ್ಟು ಶ್ರಮವಹಿಸಿ ಈ ಗ್ರಂಥಗಳ ಶುದ್ಧ ಪ್ರತಿಗಳನ್ನು ತಯಾರಿಸಿದ್ದಾರೆ. ಇವುಗಳಿಂದ ಕಾವ್ಯನಾಟಕಾದಿ ಸಕಲ ಲಲಿತಸಾಹಿತ್ಯಕ್ಕೆ ವಿವಿಧ ವಿಷಯಗಳು ಲಭ್ಯವಾಗಿವೆ. ರಸಿಕರಿಗೆ ಇವುಗಳ ಬಗ್ಗೆ ಎಂದಿಗೂ ಅಳಿಯದ ಅಪಾರ ಪ್ರೀತಿ. ಅವುಗಳ ಸವಿಯೇ ಅಂಥದು. ಈ ಗ್ರಂಥಗಳ ಹಿರಿಮೆಯನ್ನು ಶಬ್ದಗಳಿಂದ ವರ್ಣಿಸಲಾಗುವಂತಿಲ್ಲ.

ಆದಿಕವಿ ವಾಲ್ಮೀಕಿಯು ರಚಿಸಿದ ಮಹಾಕಾವ್ಯ ರಾಮಾಯಣವು ಮಾನವಜಾತಿಗೆ ದೀಪಸ್ತಂಭದಂತೆ ನೂರಾರು ವರ್ಷಗಳಿಂದ ಸತತವಾಗಿ ಬೆಳಕನ್ನು ತೋರುತ್ತಿದೆ. ಈ ಗ್ರಂಥದ ಹಿರಿಮೆಯು ವರ್ಣನಾತೀತವಾಗಿದೆ. "ಈ ಭೂಲೋಕದ ಮೇಲೆ ಎಲ್ಲಿಯವರೆಗೆ ಪರ್ವತಗಳು ವಿರಾಜಿಸುತ್ತವೆಯೋ ನದಿಗಳು ಹರಿಯುತ್ತವೆಯೋ

ಅಲ್ಲಿಯವರೆಗೆ ರಾಮಾಯಣವು ಜನರ ಬಾಯಿಯಲ್ಲಿ ಇರುವುದು ಖಂಡಿತ" ಎಂದು ಆಡಿದ ಬ್ರಹ್ಮದೇವನ ಭವಿಷ್ಯವಾಣಿಯನ್ನು ಕಾಲವೇ ಸಿದ್ಧಮಾಡಿ ತೋರಿಸಿದೆ. ಉದಾತ್ತತೆ, ಆದರ್ಶಗಳ ಗಣಿಯೇ ಈ ಗ್ರಂಥ. "ವಾಲ್ಮೀಕಿಯು ಜನಿಸಿರದಿದ್ದರೆ ನಮಗೆ ಶ್ರೀರಾಮಕಥೆಯು ಅದೆಂತು ದೊರಕುತ್ತಿತ್ತು ?" ಎಂದು ರಾಮದಾಸರು ವಾಲ್ಮೀಕಿಯನ್ನು ಗೌರವಿಸಿದ್ದಾರೆ. "ಶ್ರೀರಾಮನ ಕಥೆಯನ್ನು ಬ್ರಹ್ಮಾಂಡವನ್ನು ಭೇದಿಸಿ ಅದರಾಚೆಗೆ ಸಾಗಿಸ ಬೇಕು" ಎಂಬುದಾಗಿ ತಮ್ಮ ಬಯಕೆಯನ್ನು ವ್ಯಕ್ತಪಡಿಸಿದ್ದಾರೆ. "ಜನರಿಗೆ ತಮ್ಮ ಸ್ವಂತ ಸೋದರರು ನಿಜವೆನಿಸ ಲಿಕ್ಕಿಲ್ಲ; ಆದರೆ ಭರತ-ಲಕ್ಷ್ಮಣರು ನಿಜವೆನಿಸುತ್ತಾರೆ. ಸ್ವಪತ್ನಿಗಿಂತ ಸೀತೆಯು ನಿಜವೆನಿಸುತ್ತಾಳೆ. ಸ್ವಪತಿಗಿಂತ ಶ್ರೀರಾಮನು ಹೆಚ್ಚೆನಿಸುತ್ತಾನೆ. ವಾಲ್ಮೀಕಿಯು ಈ ರೀತಿ ತ್ರಿಕಾಲಾಬಾಧಿತವಾದ ಸಂಸ್ಕೃತಿಯನ್ನು ರಾಮಾಯಣ ದಲ್ಲಿ ಚಿತ್ರಿಸಿದ್ದಾನೆ. "ಭಾರತೀಯ ಸಂಸ್ಕೃತಿಯ ಆದರ್ಶವೆಂದರೆ ರಾಮಾಯಣ ; ಭಾರತೀಯ ಸಂಸ್ಕೃತಿಗೆ ಒಳ್ಳೆಯ ಸಂಸ್ಕಾರವನ್ನೊದಗಿಸಿ ಭಾರತೀಯ ಸಮಾಜಜೀವನಕ್ಕೆ ಉದಾತ್ತತೆಯನ್ನು ಒದಗಿಸಿಕೊಟ್ಟ ಗ್ರಂಥ ವೆಂದರೆ ರಾಮಾಯಣ" ಎಂದು ರವೀಂದ್ರನಾಥ ಟಾಗೋರರು ಇದನ್ನು ಪ್ರಶಂಸಿಸಿದ್ದಾರೆ. "ರಾಮಾಯಣ ವೆಂದರೆ ಸತ್ಯಘಟನೆಯ ಮೇಲೆ ಮಹಾಕಾವ್ಯದ ಅಲಂಕರಣದಿಂದ ರೂಪಿಸಲಾದ ಐತಿಹಾಸಿಕ ಮಹಾಕಾವ್ಯ; ಅದು ನಮ್ಮ ಪ್ರಾಚೀನ ರಾಷ್ಟ್ರೀಯ ಚರಿತ್ರೆ" ಎಂದು ಶ್ರೀರಾಮಕೋಶದ ಸಂಪಾದಕರಾದ ಶ್ರೀ ಅಮರೇಂದ್ರ ಗಾಡಗೀಳ ಅವರು ಈ ಗ್ರಂಥದ ಮಹಿಮೆಯನ್ನು ಹಾಡಿ ಹೊಗಳಿದ್ದಾರೆ. "ವಾಲ್ಮೀಕಿರಾಮಾಯಣವೆಂದರೆ ಭಾರತೀಯ ಸಂಸ್ಕೃತಿಯ, ಜೀವನಾದರ್ಶಗಳ ಚಿತ್ರಣ. ವಾಲ್ಮೀಕಿಯು ಅದನ್ನು ಕಾವ್ಯರೂಪದಲ್ಲಿ ರಚಿಸಿದ್ದಾನೆ. ಈ ಕಾವ್ಯವು ಆದರ್ಶ ಮಹಾಕಾವ್ಯವೆಂದು ಪರಿಗಣಿಸಲ್ಪಟ್ಟಿದೆ. 'ದಂಡಿ' ಮೊದಲಾದ ಕವಿಶ್ರೇಷ್ಠರು ಈ ಕಾವ್ಯದಿಂದ ಮಹಾಕಾವ್ಯದ ಲಕ್ಷಣಗಳನ್ನು ಗೊತ್ತುಪಡಿಸಿದರು. ವಿಶ್ವದ ಪಂಚಮಹಾಕಾವ್ಯಗಳಲ್ಲಿ ಇದು ಒಂದಾಗಿದೆ. ಕಾವ್ಯಮರ್ಮಜ್ಞರು ಇದನ್ನು ಶಿರೋಧಾರ್ಯವಾದುದು ಎಂದಿದ್ದಾರೆ. ಅಷ್ಟೇ ಅಲ್ಲದೆ, ಪರದೇಶದ ರಸಿಕರೂ ಕೂಡ ಇದನ್ನು ಸವಿದು ಗೌರವಿಸಿದ್ದಾರೆ" ಎಂದು ರಾಮಾಯಣವನ್ನು ಆಳವಾಗಿ ಓದಿಕೊಂಡ ಡಾ. ಗ. ನ. ಸಾಠೆ ಅವರು ಉದ್ಗರಿಸಿದ್ದಾರೆ.

ಶ್ರೀರಾಮಕಥೆಯು ವಾಲ್ಮೀಕಿಯ ಕಾಲಕ್ಕಿಂತಲೂ ಮೊದಲಿನದು. ಈ ಕಥೆಯನ್ನು ನಾರದನು ವಾಲ್ಮೀಕಿಗೆ ಹೇಳಿದನು. "ನಾರದನಿಂದ ಕೇಳಿಕೊಂಡಂತೆ ಶ್ರೀರಾಮಕಥೆಯನ್ನು ಹೇಳು!" ಎಂದು ಬ್ರಹ್ಮನು ವಾಲ್ಮೀಕಿಯನ್ನು ಪ್ರೋತ್ಸಾಹಿಸಿದನು. ರಾಮಾಯಣದ ರಚನೆ-ನಿರ್ಮಿತಿಯಲ್ಲಿ ಶಾಪಗಳಿಗೆ/ವರಗಳಿಗೆ ಮಹತ್ವಪೂರ್ಣ ಸ್ಥಾನವಿದೆ. ನಾರದನು ಹೇಳಿದ ಸಂಕ್ಷಿಪ್ತ ಕಥೆಯಲ್ಲಿ ಶಾಪಗಳ ಉಲ್ಲೇಖವಿರದಿದ್ದರೂ ವರಗಳ ಉಲ್ಲೇಖವಿದೆ. ನಿಷಾದನಿಗೆ ಕೊಟ್ಟ ಶಾಪವೇ ವಾಲ್ಮೀಕಿರಾಮಾಯಣರಚನೆಗೆ ಸ್ಫೂರ್ತಿದಾಯಕವಾಯಿತು. ದುರ್ವಾಸನು ನುಡಿಯದೇ ತಡೆಹಿಡಿದ ಶಾಪದಿಂದ ರಾಮಾಯಣವು ಕೊನೆಗೊಂಡಿದೆ. ದುರ್ವಾಸನ ಶಾಪವು ಕಟ್ಟಳೆಯದಿತ್ತು. ರಘುಕುಲವು ನಾಶವಾಗಬಾರದೆಂದು ಲಕ್ಷ್ಮಣನು ಚಾಚೂ ತಪ್ಪದೆ ಈ ಕಟ್ಟಳೆಯಂತೆ ವರ್ತಿಸಿ, ಆತ್ಮಾರ್ಪಣೆ ಮಾಡಿ ರಘುವಂಶದ ಮೇಲೆ ವ್ಯಾಪಿಸಲಿದ್ದ ಭಯಂಕರ ಕರಾಳ ಛಾಯೆಯನ್ನು ತಪ್ಪಿಸಿದನು. ಬ್ರಹ್ಮನ ವರದಿಂದ ವಾಲ್ಮೀಕಿಯು ರಾಮಾಯಣವನ್ನು ರಚಿಸಿದನಾದರೂ, ನಿಜವಾದ ದಶರಥನು ಕೈಕೇಯಿಗೆ ಕೊಟ್ಟ ವರಗಳಿಂದಾ ಗಿಯೇ ರಾಮಾಯಣ ನಡೆಯಿತು. ರಾವಣನು ಮರ್ಯಾದಿತ ಅಮರತ್ವವನ್ನೇ ಪಡೆದುಕೊಂಡಿದ್ದ ಕಾರಣ ಅವನ ಉಪಟಳ ಹೆಚ್ಚಾಯಿತು, ಮೇಘನಾದನು ದೇವತೆಗಳನ್ನು ಸೋಲಿಸಿದನು, ಕುಂಭಕರ್ಣನು ದೀರ್ಘ ನಿದ್ರೆಗೆ ಒಳಗಾದನು. ಹನುಮಂತನಿಗೆ ಸ್ವಯಂಭೂಸಾಮರ್ಥ್ಯ ಇತ್ತು. ಅಷ್ಟದೇವತೆಗಳು ಆತನಿಗೆ ವರಗಳನ್ನು ಕೊಟ್ಟಿದ್ದರಿಂದ ಅದು ಇಮ್ಮಡಿಸಿ ಆತನು ಅಸಾಧ್ಯವಾದ ಸಂಗತಿಗಳನ್ನು ಸಾಧಿಸಿ ತೋರಿಸಿದನು. ರಾಮಾಯಣ ದಲ್ಲಿ ಶಾಪ/ವರಗಳು ಸಾಕಷ್ಟಿವೆ. ಹೀಗಿರುವುದರಿಂದ ರಾಮಾಯಣವು ಒಂದು ಶಾಪಕಥೆ, ಒಂದು ವರಕಥೆ ಯಾಗಿದೆ ಎಂತಲೂ ಹೇಳಬಹುದು. ಇದರಲ್ಲಿಯ ಬಹಳಷ್ಟು ಘಟನೆಗಳಿಗೆ ಶಾಪ/ವರಗಳ ಭದ್ರವಾದ ಬುನಾದಿ ಲಭಿಸಿದೆ. ಅವುಗಳ ಪ್ರಭಾವವು ವ್ಯಕ್ತಿಚಿತ್ರಣಗಳ ಮೇಲೂ ತನ್ನ ಮುದ್ರೆಯನ್ನೊತ್ತಿದೆ. ಶಾಪ/ವರ ಗಳಿಗೆ ಸ್ವತಂತ್ರಸ್ಥಾನವಿಲ್ಲವೆಂಬುದು ನಿಜ ; ಆದರೆ ಅವು ಕಥೆಯೊಡನೆ ಸಂಪೂರ್ಣ ಸಾಮರಸ್ಯಹೊಂದಿರುವುದ ರಿಂದ ಅವುಗಳನ್ನು ಕಥೆಯಿಂದ ಬೇರ್ಪಡಿಸುವುದು ಸಾಧ್ಯವಿಲ್ಲ. ಶಾಪ/ವರಗಳನ್ನು ತೆಗೆದುಹಾಕಿದರೆ ಕಥೆಯ ಸೂತ್ರ, ಚೌಕಟ್ಟು, ಕೊಂಡಿಗಳು, ಸಂದರ್ಭಗಳು ಅರ್ಥಹೀನವಾಗುತ್ತವೆ. ಶಾಪ/ವರಗಳ ಕಲ್ಪನೆ ಅತಿಪುರಾತನ

ವಾದದ್ದಾದರೂ ವಾಲ್ಮೀಕಿಯು ಅವುಗಳನ್ನು ತನ್ನ ಪ್ರತಿಭೆಯ ಕುಶಲತೆಯಿಂದ ಬಳಸಿ, ಗ್ರಂಥದ ಸೌಂದರ್ಯವನ್ನೂ, ಕಳೆಯನ್ನೂ, ಸಾಮರ್ಥ್ಯವನ್ನೂ ಹೆಚ್ಚಿಸಿದ್ದಾನೆ.

ವೇದೋಪನಿಷತ್ತು, ವಿಶೇಷವಾಗಿ ರಾಮಾಯಣ, ಮಹಾಭಾರತ, ಭಾಗವತ ಇತ್ಯಾದಿ ಪ್ರಾಚೀನ ಪುರಾಣ ಗ್ರಂಥಗಳಲ್ಲಿ ಶಾಪ / ವರಗಳ ಉಲ್ಲೇಖಗಳು ಅಲ್ಲಲ್ಲಿ ಬಂದಿವೆ. ಇವುಗಳನ್ನು ಪರಿಶೀಲಿಸಿ ಒಟ್ಟುಗೂಡಿಸಿ ಒಂದು ಸಂದರ್ಭಗ್ರಂಥವನ್ನು ರಚಿಸುವಂತಿದೆ. ಶಾಪ / ವರಗಳನ್ನು ಕುರಿತು ಯೋಚಿಸುವಾಗ ಅವುಗಳನ್ನು ಬರೆಯಲಾದ ಕಾಲ, ಆ ಕಾಲದ ಸಂದರ್ಭ ಹಾಗೂ ಪರಿಸ್ಥಿತಿಗಳನ್ನು ಗಮನದಲ್ಲಿರಿಸಿಕೊಳ್ಳುವುದು ಅಗತ್ಯದ್ದು. ಇಂದು ಶಾಪ / ವರಗಳನ್ನು ಕೊಡಲಾಗುವುದಿಲ್ಲವೇಕೆ, ಹಾಗೆ ಕೊಟ್ಟರೂ ಅವು ತಮ್ಮ ಪರಿಣಾಮಗಳನ್ನೇಕೆ ಬೀರುತ್ತಿಲ್ಲ, ಎಂದೆನ್ನುವ ಪ್ರಶ್ನೆಗಳು ಈ ಚರ್ಚೆಯಲ್ಲಿ ಅಪ್ರಸ್ತುತವಾದವುಗಳು. ರೂಪಗಳ ಮಾರ್ಪಾಟು, ವಯಸ್ಸು-ಲಿಂಗ, ಯೌವನ-ಮುಪ್ಪುಗಳ ಕೊಡುಕೊಳ್ಳುವಿಕೆ, ಕೈಗಡ, ವಾನರರಲ್ಲಿ ಹಾರಾಟದ ಸಾಮರ್ಥ್ಯ ಮುಂತಾದ ಸಂಗತಿಗಳು ಸಾಧ್ಯವೆಂದು ನಂಬಲಾಗಿತ್ತು. ಈ ಸಂಗತಿಗಳನ್ನು ಒಪ್ಪಿಕೊಂಡೇ ಅಂದಿನ ಊಹೆಗಳನ್ನು ಕುರಿತು ಯೋಚಿಸಬೇಕಾಗಿದೆ. ಇಂದಿನ ಸಾಧ್ಯಾಸಾಧ್ಯತೆಗಳನ್ನಾಧರಿಸಿ ಅಂದಿನವುಗಳ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಸರಿಯಲ್ಲ. ಶಾಪ ಮತ್ತು ವರಗಳ ಅವಗಾಹನೆಯಿಂದ ಗ್ರಂಥದ ಸ್ವರೂಪ, ಅದರಲ್ಲಿ ವ್ಯಕ್ತವಾಗುವ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ನೈತಿಕ ಜೀವನದ ವಿಚಾರ, ಸ್ವಭಾವವೈಶಿಷ್ಟ್ಯಗಳ ಮೇಲೆಲ್ಲ ತುಂಬ ಉಪಯುಕ್ತವಾದ ಬೆಳಕು ಬಿದ್ದೀತು. ವ್ಯಾಸ-ವಾಲ್ಮೀಕಿಯರಂತಹ ಪ್ರಜ್ಞಾವಂತರು ಶಾಪ / ವರಗಳಿಗೆ ತಮ್ಮ ಗ್ರಂಥಗಳಲ್ಲಿ ಯಾವ ಕಾರಣಕ್ಕಾಗಿ ಅವಕಾಶವನ್ನು ಕೊಟ್ಟರು ? ಶಾಪ / ವರ ಇವುಗಳ ಕಲ್ಪನೆ ಹುಟ್ಟಿದ್ದು ಹೇಗೆ ? ಶಾಪ / ವರಗಳು ಈ ಗ್ರಂಥಗಳಿಂದ ಬೇರ್ಪಡಿಸಲಾಗದ ಅಂಶಗಳೇ ? ಹಾಗಿರದಿದ್ದರೆ ಅವುಗಳ ಬಗ್ಗೆ ಇಷ್ಟೊಂದು ಆಕರ್ಷಣೆ ಏಕೆ ? ಸಾಹಿತ್ಯನಿರ್ಮಿತಿಯಲ್ಲಿ ಶಾಪ / ವರಗಳ ಪ್ರಾಮುಖ್ಯತೆ ಯಾವ ಬಗೆಯದು? ಶಾಪ / ವರಗಳನ್ನು ನೀಡುವುದಕ್ಕೆ ಕಾರಣಗಳು ಯಾವುವು ? ಪರಿಣಾಮಗಳು ಯಾವುವು ? ಶಾಪ ಅಥವಾ ವರ ಕೊಡುವ ಸಾಮರ್ಥ್ಯ ಯಾರಿಗೆ ಯಾವ ಕಾರಣದಿಂದ ದೊರಕಿರುತ್ತದೆ ? ಅದನ್ನವರು ಎಷ್ಟರಮಟ್ಟಿಗೆ ಹೊಂದಿರುತ್ತಾರೆ ? ಅದರ ಬಳಕೆಯನ್ನು ಸೂಕ್ತವಾಗಿ ಮಾಡದಿದ್ದರೆ ಈ ಸಾಮರ್ಥ್ಯ ಇಲ್ಲವಾಗುತ್ತದೆಯೇ ?—ಇವೇ ಮೊದಲಾದ ಪ್ರಶ್ನೆಗಳು ತಲೆದೋರುತ್ತವೆ. ಅವುಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಮೊದಲು ಶಾಪ / ವರಗಳ ಸ್ವರೂಪವನ್ನು ತಿಳಿದುಕೊಳ್ಳುವುದು ಆವಶ್ಯಕವೆನಿಸುತ್ತದೆ.

ಮನುಷ್ಯನ ಆಸೆ-ಆಕಾಂಕ್ಷೆ, ಧ್ಯೇಯ-ಉದ್ದಿಷ್ಟಗಳು ಅತಿಯಾಗಿರುತ್ತವೆ. ಅದಕ್ಕೆ ತಕ್ಕ ಬಲ ಆತನಲ್ಲಿ ಇರುವುದೆಂದಲ್ಲ. ಹಲವು ಸಂದರ್ಭಗಳಲ್ಲಿ ಪ್ರಾಥಮಿಕ ಆವಶ್ಯಕತೆಗಳನ್ನು ಪೂರೈಸುವುದೂ ಆತನಿಂದ ಆಗುವುದಿಲ್ಲ. ಆಗ ಮನುಷ್ಯನು ತನಗಿಂತ ಮಿಗಿಲಾದ ಸಾಮರ್ಥ್ಯವುಳ್ಳ, ಪ್ರಭಾವಿಯಾದ ಹಾಗೂ ತಪ್ಪದೆ ಯಶ ನೀಡುವಂಥ ಶಕ್ತಿಯನ್ನು ಕಂಡುಕೊಳ್ಳತೊಡಗುತ್ತಾನೆ. ಪೂರ್ವಕಾಲದಲ್ಲಿ ಮನುಷ್ಯನ ಆವಶ್ಯಕತೆಗಳು ತೀರ ಕಡಿಮೆ. ಹೊಟ್ಟೆಬಟ್ಟೆ, ಆಸರೆ ಮತ್ತು ವಂಶವೃದ್ಧಿ ಇವಿಷ್ಟೇ ಪ್ರಾಥಮಿಕ ಆವಶ್ಯಕತೆಗಳಾಗಿದ್ದವು. ಇವನ್ನು ಪೂರೈಸುವ ಸಾಧನಗಳಾಗಲೀ ಕ್ಷಮತೆಯಾಗಲೀ ಕಡಿಮೆ ಎಂದು ಅನ್ನಿಸಿದಾಗ ಇನ್ನಿತರ ಪೂರಕಸಾಧನೆಗಳನ್ನು ಕಂಡುಕೊಳ್ಳುವ ಯತ್ನಗಳು ಶುರುವಾದವು. ಎಲ್ಲ ವಸ್ತುಗಳಲ್ಲೂ ಹುದುಗಿಕೊಂಡ ಸುಪ್ತಶಕ್ತಿ ಇರುತ್ತದೆ. ಆ ಶಕ್ತಿಗೆ ಚೇತನ ತರಿಸಿದರೆ ಆಸೆ-ಆಕಾಂಕ್ಷೆಗಳು ಈಡೇರಬಹುದೆಂಬ ವಿಶ್ವಾಸ ದೃಢವಾಗತೊಡಗಿತು. ಈ ಸುಪ್ತಶಕ್ತಿಯನ್ನು ಚೇತರಿಸುವ ಸಾಧನೆಗಳನ್ನು, ಮಾರ್ಗಗಳನ್ನು ಅರಿತುಕೊಳ್ಳುವ ಪ್ರಯತ್ನಗಳು ಶುರುವಾದವು. ಮಂತ್ರ-ತಂತ್ರಗಳನ್ನು ಬಳಸಿ ದೈವಿಕಶಕ್ತಿಯನ್ನು ಆವಾಹನೆ ಮಾಡಿಕೊಂಡರೆ ನಮ್ಮ ಬಯಕೆಗಳು ಈಡೇರುತ್ತವೆ ಎಂಬ ಶ್ರದ್ಧೆ ಗಟ್ಟಿಯಾಗತೊಡಗಿತು. ಸಾಧನೆಗಳ ಉಪಯೋಗ ಮತ್ತು ಆಸೆ-ಆಕಾಂಕ್ಷೆಗಳ ಈಡೇರಿಕೆ ಇವುಗಳಲ್ಲಿಯ ಕಾರ್ಯಕಾರಣಸಂಬಂಧ ತಿಳಿಯುವಂತಿರಲಿಲ್ಲ. ಹೀಗಿದ್ದ ಕಾರಣ ಇಂಥ ಪ್ರಯತ್ನಗಳ ಬಗ್ಗೆ ಒಂದು ಬಗೆಯ ಗೂಢತೆ, ಅದ್ಭುತತೆ, ಚಮತ್ಕಾರದ ಮತ್ತು ಅತೀಂದ್ರಿಯಸಾಮರ್ಥ್ಯಗಳ ವಲಯ ನಿರ್ಮಾಣಗೊಂಡಿತು. ಈ ಎಲ್ಲ ಹೆಣಗಾಟ ಐಹಿಕ ಸುಖಸಾಧನೆಗಾಗಿ ಎಂಬುದರಲ್ಲಿ ಸಂದೇಹವಿಲ್ಲ. ವಿಜ್ಞಾನಿಗಳು ಶ್ರಮಿಸುತ್ತಿರುವುದು ಕೂಡ ಇದೇ ಉದ್ದೇಶಕ್ಕಾಗಿ ಅಲ್ಲವೇ ! ಹೀಗಿದ್ದರೂ ಇವರಿಬ್ಬರಲ್ಲೂ ಮಹತ್ವದ ವ್ಯತ್ಯಾಸವಿದೆ. ವೈಜ್ಞಾನಿಕರ ಚಟುವಟಿಕೆಗಳೆಲ್ಲ ಕಾರ್ಯ ಹಾಗೂ ಕಾರಣಗಳ ಸಂಬಂಧವನ್ನು ಅರಿತುಕೊಳ್ಳ

ಲೆಂದು ಸಾಗಿದಂಥದು. ಅಗತ್ಯವಿದ್ದ ಕಾರಣಗಳು ಆವಶ್ಯಕವಿದ್ದ ಪ್ರಮಾಣದಲ್ಲಿದ್ದರೆ ಅವುಗಳ ಸರಿಯಾದ ಸಂಬಂಧಗಳಿಂದಾಗಿ ನಿರೀಕ್ಷಿಸಲಾದ ಫಲ ದೊರಕಿಯೇ ತೀರುವುದೆಂಬ ಶ್ರದ್ಧೆ ವಿಜ್ಞಾನಿಗಳದು. ವಿಜ್ಞಾನಿಯು ಕಂಡುಹಿಡಿದ ಅನೇಕ ಹೊಸ ಹೊಸ ಶೋಧನೆಗಳು ಜನಸಾಮಾನ್ಯರನ್ನು ಚಕಿತಗೊಳಿಸುವ ವಿಲಕ್ಷಣವಾದ ಪವಾಡಗಳಾಗಿ ತೋರುತ್ತವೆ. ಗೋಡೆಯ ಆಚೆಗಿದ್ದ ದೃಶ್ಯವು ಬರಿಗಣ್ಣಿಗೆ ಕಾಣುವುದಿಲ್ಲ ; ಧ್ವನಿ ಕೂಡ ಮಂದವಾಗಿ ಕೇಳಬರುತ್ತದೆ. ಹೀಗಿರುವಾಗ ವಿಜ್ಞಾನಿಯು ಅತಿದೂರದ ದೃಶ್ಯ ಕಾಣುವಂತೆ ಮಾಡುತ್ತಾನೆ, ಧ್ವನಿ ಕೇಳಿಬರುವಂತೆ ಮಾಡುತ್ತಾನೆ. ಇದೆಂಥ ಅದ್ಭುತವಾದ ವಿಷಯವಲ್ಲವೇ ! ವಿಜ್ಞಾನಿಯು ಎಂಥ ಪ್ರಚಂಡವಾದ ಸಾಮರ್ಥ್ಯವನ್ನು ಸಾಧಿಸಿದ್ದಾನೆ ! ತನ್ನ ಪ್ರಯತ್ನ ಸಫಲಗೊಂಡುದರಿಂದ ವೈಜ್ಞಾನಿಕನಿಗೆ ಸಂತೋಷ ಎನಿಸಿದರೂ ಅದೊಂದು ಪವಾಡ ಎನಿಸುವುದಿಲ್ಲ. ಕಾರ್ಯಕಾರಣಸಂಬಂಧವನ್ನು ಅರಿತುಕೊಂಡಿರುವುದರಿಂದಲೇ ಆತನಿಗೆ ಆಶ್ಚರ್ಯವೆನಿಸದು.

ಹಿಂದಿನ ಕಾಲದಲ್ಲಿ ಪೂರ್ತಿಗೊಳ್ಳಬೇಕಿದ್ದ ಇಚ್ಛೆಯ ಗುರಿ ಹಾಗೂ ಅದಕ್ಕಾಗಿ ಬಳಸಲ್ಪಟ್ಟ ಸಾಧನೆಗಳ ನಡುವಣ ಕಾರ್ಯಕಾರಣಗಳ ನಂಟು ಅರ್ಥವಾಗದೇ ಹೋದುದರಿಂದ ಅಂದು ದೊರೆತ ಯಶಸ್ಸುಗಳು 'ಪವಾಡ'ಗಳೆನ್ನಿಸಿದವು. ಮಾನವನ ಶಕ್ತಿಗೆ ಎಟುಕದಂತಹ ಕೆಲವು ವಿಷಯಗಳು ಸಾಧ್ಯವಾದಾಗ ಅದರ ಹಿಂದೆ ಯಾವುದೋ ಒಂದು ಅದ್ಭುತಶಕ್ತಿ ಇರಲೇಬೇಕು ! ಎಂದು ನಂಬುವುದು ರೂಢಿಯಾಯಿತು. ಈ ಅದ್ಭುತಶಕ್ತಿಯನ್ನು ಪಡೆಯಲು ಪ್ರಯತ್ನಗಳು ನಡೆದವು. ಆಗ ಯಾತು, ಯಜ್ಞ, ದಾನ, ತಪ ಮೊದಲಾದ ಕಲ್ಪನೆಗಳು ಉದಯಿಸಿದವು. ಶಾಪ / ವರಗಳ ಕಲ್ಪನೆ 'ಯಾತು' ವಿದ್ಯೆಯಿಂದ ಹುಟ್ಟಿಬಂದಿವೆ.

'ಯಾತು-ವಿದ್ಯೆ' ಎಂದರೇನು? ಯಾತುವಿನ ಸ್ವರೂಪವನ್ನು ಅರಿತುಕೊಳ್ಳುವುದು ಅಗತ್ಯದ್ದು.

## ಯಾತು-ಕ್ರಿಯೆ

ಯಾತು ಎಂದರೆ (ಜಾದು) ಇಂದ್ರಜಾಲ. ಪ್ರತಿಯೊಂದು ವಸ್ತುವಿನಲ್ಲಿ ಅಡಗಿರುವ ಶಕ್ತಿಗೆ ಯಾತು ಶಕ್ತಿ ಎನ್ನುತ್ತಾರೆ. ಅದರ ಜ್ಞಾನವೆಂದರೆ ಯಾತು-ವಿದ್ಯೆ. ಆ ವಿದ್ಯೆಯನ್ನು ಅರಿತವನಿಗೆ 'ಯಾತುಧಾನ' ಎನ್ನುತ್ತಾರೆ. ರಾಕ್ಷಸರು ಯಾತುಧಾನರು ಎಂದೆನ್ನಲು ಕಾರಣ ಅವರು ಈ ಶಕ್ತಿಯನ್ನು ಅರಿತಿದ್ದರೆಂಬುದು. ಈ ಶಕ್ತಿಯ ಬಲದಿಂದ ಅವರು ಬೇರೆ ಬೇರೆ ರೂಪಗಳನ್ನು ಧರಿಸಬಹುದಿತ್ತು. ಮಾರೀಚನು ಈ ವಿದ್ಯೆಯನ್ನು ಅರಿತಿದ್ದರಿಂದ ಕಾಂಚನಮೃಗದ ರೂಪವನ್ನು ತಳೆದು ಸೀತೆಯನ್ನು ಮರುಳುಮಾಡಿದನು. ಅದರಿಂದಾಗಿಯೇ ರಾಮಾಯಣ ನಡೆಯಿತೆನ್ನಬಹುದು. ವಿಶ್ವದಲ್ಲಿಯ ಒಂದೊಂದು ವಸ್ತುವಿನಲ್ಲೂ ಹುದುಗಿದ ಒಂದು ಬಗೆಯ ಶಕ್ತಿ ಇದೆ. ಮಂತ್ರಗಳ ಸರಿಯಾದ ಉಚ್ಚಾರಣೆಯಿಂದ ಆ ಶಕ್ತಿಯನ್ನು ಜಾಗೃತಗೊಳಿಸಬಹುದು. ಅದರಿಂದಾಗಿ ಇಚ್ಛಾಪೂರ್ತಿಯನ್ನು ಮಾಡಿಕೊಳ್ಳಬಹುದು. ಇದು ಯಾತು-ಕ್ರಿಯೆಯ ಸರಳ ಲೆಕ್ಕ. 'ಯಾತು' ಎಂದರೆ ಆದಿಮಾನವನ ಜೀವನದ ಮೂಲಾಧಾರ. ಅವನಿಗೆ ಗೂಢ ಅಗಮ್ಯಶಕ್ತಿಯಲ್ಲಿ ತುಂಬ ವಿಶ್ವಾಸವಿತ್ತು. ಈಶ್ವರನ ಕಲ್ಪನೆ ಅವನಿಗೆ ಇರದ ಕಾರಣ ಭಕ್ತಿಯಿಂದ ದೇವರನ್ನು ವಶಪಡಿಸಿಕೊಳ್ಳುವ ಅವಕಾಶ ಇರಲಿಲ್ಲ. ದೇವರು, ಪೂಜೆ, ಆವಾಹನೆ, ಯಜ್ಞ ಇವೆಲ್ಲ ಸಾಂಸ್ಕೃತಿಕ ವಿಕಾಸದನಂತರ ಅಸ್ತಿತ್ವದಲ್ಲಿ ಬಂದ ಸಂಗತಿಗಳು. ಮಂತ್ರಗಳನ್ನು ವಿಧಿಯುಕ್ತವಾಗಿ ಉಚ್ಚರಿಸಿದರೆ ಇಚ್ಛಾಶಕ್ತಿ ಬೆಳೆಯುವಲ್ಲಿ ಸಂಶಯವಿಲ್ಲ ; ಅದರಲ್ಲಿ ಯಾರ ಕೃಪೆ ಇಲ್ಲವೇ ಅವಕೃಪೆಯ ಪ್ರಶ್ನೆ ಬಾರದು ಎಂದು ಅವನಿಗೆ ಒಳಗೊಳಗೇ ಅನ್ನಿಸುತ್ತಿತ್ತು. ಹೀಗಾಗಿ ತಂತ್ರವಿದ್ಯೆಯಲ್ಲಿ ದೇವರ ಕೃಪೆ ಅಥವಾ ಕೋಪ ಯಾವುದಕ್ಕೂ ಸ್ಥಾನವಿಲ್ಲ, ನೈತಿಕತೆಗೆ ಅವಕಾಶವಿಲ್ಲ. 'What is ritually correct is ethically right.'

ಯಾತು-ಶಕ್ತಿಯು ಧರ್ಮದ ಕಲ್ಪನೆಯ ಪ್ರಾಥಮಿಕ ಅವಸ್ಥೆ. ಫ್ರೇಜರ್ ಎಂಬಾತನ ಅಭಿಪ್ರಾಯದಂತೆ ಅದು ವಿಜ್ಞಾನದ ಪೂರ್ವಸ್ಥಿತಿಯೂ ಅಹುದು. ಇಚ್ಛಾಪೂರ್ತಿ ಇವೆರಡರ ಗುರಿಯಾಗಿರುತ್ತದೆ. ಅಲ್ಲದೆ, ವಸ್ತುವಿನಲ್ಲಿದ್ದ ಹುಟ್ಟುಸಾಮರ್ಥ್ಯದ ಬಗೆಗೆ ಇವರಿಬ್ಬರಲ್ಲೂ ದೃಢವಾದ ಶ್ರದ್ಧೆಯಿರುತ್ತದೆ. ಅವರವರ ಸಾಧನೆಯಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ವೈಜ್ಞಾನಿಕನು ಅನುಭವ ಹಾಗೂ ಪ್ರಯೋಗಗಳಿಗೆ ಒತ್ತುಕೊಡುತ್ತಾನೆ. ಆದರೆ, ಯಾತು-ಕ್ರಿಯೆಯಲ್ಲಿ ಮಂತ್ರತಂತ್ರಗಳನ್ನಷ್ಟೇ ಅವಲಂಬಿಸುವುದು. ವೈಜ್ಞಾನಿಕನು ಬೌದ್ಧಿಕ

ಆಧಾರದಿಂದ ಮುಂದುವರೆಯುತ್ತಾನೆ ; ಆದರೆ ಯಾತುಕ್ರಿಯೆಯಲ್ಲಿ ಗೂಢತೆ, ಅಶಿಕ್ಷಿತತೆ, ಅಂಧಶ್ರದ್ಧೆ—ಇವು ಮುಖ್ಯ. ಫ್ರೇಜರನು ಅವುಗಳಲ್ಲಿಯ ಭೇದವನ್ನು ತುಂಬ ಮಾರ್ಮಿಕವಾಗಿ ಈ ರೀತಿ ಸ್ಪಷ್ಟಪಡಿಸಿದ್ದಾನೆ :[1] ವಿಶಿಷ್ಟ ಮಂತ್ರಗಳು ಹಾಗೂ ಅವುಗಳ ವಿಶಿಷ್ಟ ವಿಧಿ, ಎಂದರೆ 'ತಂತ್ರ'. ಈ ಯಾತು–ಕ್ರಿಯೆಯ ಮೂಲಕ ಪ್ರಾಥಮಿಕ ಅವಸ್ಥೆಯ ಮಾನವನು ತನ್ನ ಇಚ್ಛಾಪೂರ್ತಿಯನ್ನು ಮಾಡಿಕೊಳ್ಳುತ್ತಿದ್ದನು. ತಂತ್ರವಿದ್ಯೆಯಲ್ಲಿ ಶಿವ-ಶಕ್ತಿ, ಪ್ರಕೃತಿ-ಪುರುಷ ಇವರ ಸಂಯೋಗಕ್ಕೆ ಹೆಚ್ಚಿನ ಪ್ರಾಧಾನ್ಯವಿದ್ದುದು ಕಂಡುಬರುತ್ತದೆ. ಇದರ ಮೂಲಕವೇ, ಶಿವಪೂಜೆ, ಲಿಂಗಪೂಜೆ, ಪಶುಬಲಿ, ನರಬಲಿ ಮುಂತಾದ ಕಲ್ಪನೆಗಳು ರೂಢಿಯಲ್ಲಿ ಬಂದಿವೆ. ಶಕ್ತಿಪೂಜೆಯಲ್ಲಿ ನಡೆಯುವ ವಾಮಾಚಾರ, ಸ್ವೈರಾಚಾರಗಳಿಂದ ಅನೇಕ ಅನಿಷ್ಟ ರೂಢಿಗಳು ಹುಟ್ಟಿಕೊಂಡವು.

## ಯಜ್ಞ-ಕರ್ಮ

ಭಾರತದ ಆರ್ಯರನ್ನುಳಿದು ಇತರ ಗುಂಪುಗಳು ಪ್ರಾಥಮಿಕ ಆವಶ್ಯಕತೆಗಳನ್ನು ಪೂರೈಸಲು ಮತ್ತು ಇಚ್ಛಾಪೂರ್ತಿಗಾಗಿ 'ತಂತ್ರ'ವಿದ್ಯೆಯನ್ನು ಬಳಸುತ್ತಿದ್ದರು. ವೈದಿಕ ಕಾಲದ ಆರ್ಯರು ಅದಕ್ಕಾಗಿ ಯಾವ ಸಾಧನೆಯನ್ನು ಅವಲಂಬಿಸುತ್ತಿದ್ದರೋ ಅದಕ್ಕೆ 'ಯಜ್ಞ'ವೆಂದು ಹೆಸರು. ಯಜ್ಞಸಂಸ್ಥೆಯ ಕಲ್ಪನೆ ಕೂಡ ಯಾತು-ಕ್ರಿಯೆಯಿಂದ ಉದ್ಭವಿಸಿದೆ. ಪ್ರಸಿದ್ಧ ಮಾನವವಂಶಶಾಸ್ತ್ರಜ್ಞನಾದ ಆ್ಯಂಡ್ರ್ಯೂ ಲ್ಯಾಂಗ್ ಯಜ್ಞವಿಧಿಯ ಬಗ್ಗೆ ಈ ರೀತಿ ಹೇಳುತ್ತಾನೆ.[2]

ಒಟ್ಟಿನಲ್ಲಿ ನೋಡಿದರೆ ಋಷಿಗಳ ಧರ್ಮದ ಸ್ವರೂಪವು ವ್ಯಾವಹಾರಿಕ, ಯಾತ್ವಾತ್ಮಕವಾಗಿದೆಯೆಂದು ಅನ್ನಬಹುದು. ಕಾಲಾನುರೂಪವಾಗಿ ವರ, ಆಶೀರ್ವಾದ, ಮಳೆ, ಸೂರ್ಯಪ್ರಕಾಶ, ದೀರ್ಘಾಯುಷ್ಯ, ಸಾಮರ್ಥ್ಯ, ದನಕರುಗಳ ಸಂಪತ್ತು ಲಭಿಸಬೇಕೆಂಬುದು ಅವರ ಇಚ್ಛೆಯಾಗಿರುತ್ತಿತ್ತು. ಈ ಯಜ್ಞವಿಧಿಗಳಲ್ಲಿ ಅವರ ಸಾಕಷ್ಟು ಸಮಯ, ಹಣ, ಶಕ್ತಿ ವ್ಯಯವಾಗುತ್ತಿತ್ತು. ಒಳ್ಳೆಯ ಸಂಗತಿಗಳನ್ನು ಪಡೆಯುವ ಅಭಿಲಾಷೆಯನ್ನಿಟ್ಟುಕೊಂಡು ಮಾತ್ರ ಅವರು ಈ ವಿಧಿಯನ್ನು ಆಚರಿಸುತ್ತಿದ್ದರು. ದೇವತೆಗಳ ಹಾಗೂ ಮಾನವರ ಮಧ್ಯಸ್ಥರೆಂದರೆ ಯಜ್ಞ ಹಾಗೂ ಯಜ್ಞವನ್ನು ನಡೆಯಿಸಿಕೊಡುವ ಯಜ್ಞಕರ್ತರು. ಶ್ರದ್ಧೆ, ಔದಾರ್ಯ, ಪ್ರಾರ್ಥನೆ, ಸಾಮರ್ಥ್ಯ, ಉತ್ಕಟ ಇಚ್ಛೆ ಇವೆಲ್ಲವೂ ಮಾನವನ ಧನಾತ್ಮಕ ಗುಣಗಳು. ಯಜ್ಞಕರ್ತನ ಇಚ್ಛೆಯನ್ನು ಖಂಡಿತವಾಗಿ ದೇವರು ಪೂರ್ತಿಗೊಳಿಸುವಂತೆ ಮಾಡುವ ಸಾಧನವೆಂದರೆ ಯಜ್ಞ.

'ಯಜ್ಞ' ಈ ಶಬ್ದವು 'ಯಜ್' ಎಂಬ ಮೂಲಧಾತುವಿನಿಂದ ಹುಟ್ಟಿಬಂದಿದೆ. ಯಜ್ ಎಂದರೆ ದೇವರ ಪೂಜೆ, ಸಹವಾಸ ಮತ್ತು ದಾನಧರ್ಮ. ತಮಗಿಂತ ಶ್ರೇಷ್ಠನಾದವನು ದೇವಸಮಾನನೆಂದು ಪೂಜಿಸುವುದು, ತಮ್ಮ ಜೊತೆಯ ಜನರಲ್ಲಿ ಪ್ರೀತಿವಿಶ್ವಾಸಗಳನ್ನಿಟ್ಟುಕೊಳ್ಳುವುದು, ಅವರನ್ನು ಸಂಘಟಿಸುವುದು, ತಮಗಿಂತ ಕಿರಿಯರಿಗೆ ಸಾಧ್ಯವಿದ್ದ ಸಂಗತಿಗಳನ್ನು ಕೊಡುವುದು, ಎಂಬುದು ಯಜ್ಞ ಪದದಿಂದ ಹೊರಹೊಮ್ಮುವ ಅರ್ಥ. ಯಜ್ಞಕರ್ಮವು ಸನ್ಮಾನ, ಸಂಘಟನೆ ಹಾಗೂ ದಾನ ಎಂಬ ಮೂರು ತತ್ತ್ವಗಳನ್ನು ಒಳಗೊಂಡಿದೆ. ವ್ಯಕ್ತಿಸಾಮಾನ್ಯನು ತನ್ನ ಸ್ವಂತದ ಕರ್ತವ್ಯದ ಜೊತೆಗೆ ಸಾಮಾಜಿಕ ಕರ್ತವ್ಯಗಳನ್ನೂ ಪಾಲಿಸುವುದು ಮುಖ್ಯ ಎಂಬ ಪರಿಕಲ್ಪನೆ ಯಜ್ಞ ಪದದಿಂದ ಧ್ವನಿತಗೊಳ್ಳುತ್ತದೆ.[3] ಯಜ್ಞವು ಮುಖ್ಯವಾಗಿ ತ್ಯಾಗಪ್ರಧಾನವಾದ ಕರ್ಮವಾಗಿದ್ದು ಪ್ರಪ್ರಥಮವಾಗಿ ಅಸುರರು ಅದನ್ನು ಪಾಲಿಸುತ್ತಿದ್ದರು. ನಂತರದ ಕಾಲದಲ್ಲಿ ದೇವತೆಗಳು ಅದನ್ನು ಅಂಗೀಕರಿಸಿದರು. ಮುಂದೆ ಋಷಿಗಳು ಹಾಗೂ ಜನಸಾಮಾನ್ಯರು ಯಜ್ಞಕರ್ಮವನ್ನು ದೇವತೆಗಳಿಂದ ಪಡೆದುಕೊಂಡರು. ಈ ಬಗೆಗೆ ಭಿನ್ನಾಭಿಪ್ರಾಯವಿದೆ. ಯಜ್ಞಕರ್ಮದಲ್ಲಿ 'ಯಾಚನೆ' ಇರುತ್ತದೆ. ಆದುದರಿಂದ 'ಯಜ್ಞ' ಎಂಬ ಶಬ್ದವು 'ಯಾಚ್' ಎಂಬ ಧಾತುವಿನಿಂದ ವ್ಯುತ್ಪತ್ತಿಯಾಗಿ ಬಂದಿದೆ ಎಂದು ಕೆಲವರ ಅಭಿಪ್ರಾಯವಿದೆ. ಅಗ್ನಿಯಲ್ಲಿ ಪ್ರಚಂಡಸಾಮರ್ಥ್ಯವಿದೆ ಎಂದು ಕಂಡುಹಿಡಿದನಂತರ ಮಾನವಜೀವನದಲ್ಲಿ ದೊಡ್ಡ ಕ್ರಾಂತಿ ನಡೆಯಿತು. ಅದರಿಂದಾಗಿ ಅಗ್ನಿಗೆ ದೇವತ್ವ ದೊರೆಯಿತು. ಅಗ್ನಿಯನ್ನು ಸಂತುಷ್ಟಗೊಳಿಸಲು ಹಲವಾರು ಉಪಾಸನೆಗಳು ರೂಢವಾದವು. ಅಗ್ನಿಯು ಪ್ರಸನ್ನನಾದರೆ ಕೋರಿಕೆ ಪೂರ್ಣವಾಗುತ್ತದೆ ಎಂಬ ನಂಬಿಕೆ ದೃಢವಾದಂತೆಯೇ ಅಗ್ನಿಯ ಕೋಪವು ಅರಿಷ್ಟಕ್ಕೆ ಕಾರಣ ಎಂಬ ಭಯವೂ ಹುಟ್ಟಿಕೊಂಡಿತು.

ಹೀಗಾಗಿ ಯಜ್ಞವಿಧಿಯು ಇಷ್ಟದೇವತೆಗಳನ್ನು ಸಂತುಷ್ಟಗೊಳಿಸುವ ಹೊಸ ಮಾಧ್ಯಮವಾಯಿತು. ಯಜ್ಞದಲ್ಲಿ ಕೊಟ್ಟ ಆಹುತಿಯನ್ನು ಅಗ್ನಿಯು ಇಷ್ಟದೇವತೆಗಳಿಗೆ ತಲುಪಿಸುತ್ತಾನೆ; ಆದರಿಂದ ಇಷ್ಟಾರ್ಥ ಪೂರ್ತಿಗೊಳ್ಳುತ್ತದೆ ಎಂಬ ಮನೋಭಾವವು ಬೆಳೆದುಬಂದಿತು. ಈ ಕ್ರಿಯೆಯಲ್ಲಿ ಕೇವಲ ಕೊಡುವ-ತೆಗೆದುಕೊಳ್ಳುವ ಭಾವನೆ ಮಾತ್ರ ಇರದೆ ಯಾವಾತ್ಮಕವಾದ ಈ ಕ್ರಿಯೆಯಿಂದ ದೇವತೆಗಳ ಸಾಮರ್ಥ್ಯವನ್ನು ಹೆಚ್ಚಿಸುವ ಗುರಿಯೂ ಇತ್ತು.

ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ —ಭ.ಗೀತಾ, ೩.೭/೧೧

ಇಲ್ಲಿ 'ಭಾವಯತ್' ಎಂದರೆ 'ಶಕ್ತಿಯುಕ್ತನಾಗಿ ಮಾಡುವುದು' ಎಂದರ್ಥ. ಋಗ್ವೇದದಲ್ಲೂ ಎಲ್ಲೆಡೆ ಕಂಡುಬರುವ ಕೊಡುವ-ತೆಗೆದುಕೊಳ್ಳುವ ಭಾವನೆಯಲ್ಲೂ 'ಭಾವಿತ'ನನ್ನಾಗಿ ಮಾಡುವ ಕಲ್ಪನೆ ಇದ್ದೇ ಇದೆ. ಆಹುತಿಗಳನ್ನರ್ಪಿಸಿ ದೇವತೆಯನ್ನು ಸಂತೋಷಗೊಳಿಸಿದರೆ ಬಯಸಿದ ಕೆಲಸ ಕೈಗೂಡುವುದು ನಿಶ್ಚಿತ ಎಂದು ಭಾವಿಸಿದ ತ್ರಿಶಂಕು, ದೇಹಸಹಿತನಾಗಿ ಸ್ವರ್ಗವನ್ನು ಸೇರುವ ಅತಿ ಅಭಿಲಾಷೆಯನ್ನು ಇಟ್ಟುಕೊಂಡಿದ್ದನು. ಅದರ ಪೂರ್ತಿಗಾಗಿಯೆಂದು ಒಂದು ಮಹಾಯಾಗವನ್ನು ಪ್ರಾರಂಭಿಸಿದನು.

ಕರ್ತವ್ಯಬುದ್ಧಿಯಿಂದ ಪ್ರೇರಿತನಾಗಿ ಆಚರಿಸಿದ, ಫಲದ ಆಸೆಯನ್ನು ಹೊಂದಿರದ ಕರ್ಮಕ್ಕೇನೇ ಭಗವದ್ಗೀತೆಯಲ್ಲಿ ಯಜ್ಞವೆಂದಿದ್ದಾರೆ. ಯಜ್ಞವೆಂದರೆ ಪೂಜ್ಯವ್ಯಕ್ತಿಗಾಗಿ ಮಾಡಬೇಕಾದ ತ್ಯಾಗ. ಧರ್ಮದ ಪರಿಕಲ್ಪನೆ ಕೂಡ ಯಜ್ಞದೊಂದಿಗೆ ಸಂಬಂಧಿತವಾಗಿದೆ. ಯಜ್ಞಕರ್ಮದಲ್ಲಿ ಪರಮೇಶ್ವರನ ಅಧಿಷ್ಠಾನ ಅಗತ್ಯವಿದೆ.[4] ಅಲ್ಲದೆ ಆತನ ಕೃಪೆಯಿಂದಲೇ ಸೃಷ್ಟಿಚಕ್ರವು ಸಾಗಿದೆ.

ಸೃಷ್ಟಿಯ ನಿರ್ಮಿತಿಯಲ್ಲಿ ಮೊದಲನೇ ಕರ್ಮವೆಂದರೆ ಯಜ್ಞ. ಯಜ್ಞದಿಂದ ಸಮಾಜದ ಪಾಲನೆ-ಪೋಷಣೆಯೂ ನಡೆಯುತ್ತದೆ. ಋಗ್ವೇದದಲ್ಲಿ,

"ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್"

ಎಂದು ಹೇಳಲಾಗಿದೆ. ಐಹಿಕ ಸುಖಸಮೃದ್ಧಿಗಾಗಿ ವೈಯಕ್ತಿಕವಾಗಿ ಯಜ್ಞಗಳನ್ನಾಚರಿಸುತ್ತಿದ್ದಂತೆಯೇ ಕೆಲವು ಯಜ್ಞಗಳು ಸಮಾಜಕಲ್ಯಾಣಕ್ಕಾಗಿಯೂ ನಡೆಯುತ್ತಿದ್ದವು. ಯಜ್ಞಫಲದಿಂದ ಬಹಳಷ್ಟು ಜನರಿಗೆ ಲಾಭವಾಗುತ್ತಿತ್ತು. ಕುಟುಂಬ, ಸಮಾಜ, ದೇಶ, ರಾಜ್ಯ ಮತ್ತು ವಿಶ್ವ ಇವುಗಳ ಕಲ್ಯಾಣ-ಕ್ಷೇಮ ಅಭಿವೃದ್ಧಿಗಾಗಿ ಯಜ್ಞಗಳು ನಡೆಯುತ್ತಿದ್ದವು. ಮಳೆ, ರೋಗನಿವಾರಣೆ, ಶತ್ರುಗಳಿಂದ ರಕ್ಷಣೆ, ಸಾಮಾಜಿಕ ನಾಶಗಳಿಂದ ಬಿಡುಗಡೆ, ರಾಜ್ಯದ ಏಳಿಗೆಯಾಗಬೇಕು, ರಾಜ್ಯಕ್ಕೆ ಹಾನಿ ತಟ್ಟಕೂಡದು, ಈ ರೀತಿಯ ಹಲವಾರು ಕಾರಣ-ಉದ್ದೇಶಗಳಿಗಾಗಿ ಯಜ್ಞಗಳನ್ನು ಅವಲಂಬಿಸುತ್ತಿದ್ದರು.

ಯಜ್ಞದ ಬಗ್ಗೆ ಡಾ. ಸ. ರಾ. ಗಾಡಗೀಳ ಅವರ ಹೇಳಿಕೆ : "ವಿಶಿಷ್ಟಮಂತ್ರಗಳ ಮತ್ತು ಸೂಕ್ತಕರ್ಮಗಳ ತಂತ್ರಶುದ್ಧ ಆಚರಣೆಯಿಂದ ನಿಸರ್ಗದ ಶಕ್ತಿಗಳನ್ನು ಅಂಕಿತದಲ್ಲಿಟ್ಟುಕೊಳ್ಳಬಹುದು. ಈ 'ಯಾತು' ತಂತ್ರವಿಧಿಯನ್ನಾಧರಿಸಿ ಯಜ್ಞವಿಧಿಯು ರೂಪುಗೊಂಡಿದೆ. ತಮ್ಮ ಇಚ್ಛೆಯ ಈಡೇರಿಕೆಗಾಗಿ, ಪರಮೇಶ್ವರನಂಥ ದಯಾಘನನ ವ್ಯಕ್ತಿಸ್ವರೂಪದ ಶಕ್ತಿಯ (personal agent) ಆವಶ್ಯಕತೆಯು 'ಯಾತು'ವಿಧಿಯಲ್ಲಿರದಂತೆಯೇ ಯಜ್ಞವಿಧಿಯಲ್ಲಿಯೂ ಅದು ಇರುವುದಿಲ್ಲ. ಯಜ್ಞದ ಮಂತ್ರಗಳಿಂದ ಯುಕ್ತವಾದ ವಿಧಿಗಳಲ್ಲಿ ಸ್ವಯಂಭುವಾದ ಸಾಮರ್ಥ್ಯವಿರುತ್ತದೆ. ಯಾಚಕನ ಇಚ್ಛೆಗಳನ್ನು ಪೂರೈಸುವುದಾಗಲಿ ಇಲ್ಲ ಪೂರೈಸುವದಿರುವುದಾಗಲಿ ದೇವತೆಗಳ ಇಚ್ಛೆಗೆ ಬಿಟ್ಟದ್ದಲ್ಲ. ಕರ್ಮವನ್ನು ಚಾಚೂ ತಪ್ಪದಂತೆ ಸೂಕ್ತವಾಗಿ ಆಚರಿಸಿದರೆ ಫಲಪ್ರಾಪ್ತಿಯಾಗಲೇಬೇಕು. ಇದರಲ್ಲಿ ಮಂತ್ರಗಳ ಶುದ್ಧವಾದ ಉಚ್ಚಾರಣೆಗೆ ಮತ್ತು ವಿಧಿಯುಕ್ತ ಕರ್ಮಾಚರಣೆಗೆ ಬಹಳಷ್ಟು ಮಹತ್ವವಿದೆ. ಅದರಲ್ಲಿ ಎಳ್ಳಿನಷ್ಟೂ ದೋಷವಿರಕೂಡದು. ಯಜ್ಞ ವಿಧಿಯಲ್ಲಿ ನಡೆಯಬಹುದಾದ ತಪ್ಪುಗಳನ್ನು ತಪ್ಪಿಸಲೆಂದು 'ಬ್ರಹ್ಮ' ಎಂಬ ಋತ್ವಿಜನು ಯಜ್ಞವೇದಿಕೆಯ ದಕ್ಷಿಣ ದಿಕ್ಕಿಗೆ ಕುಳಿತಿರುತ್ತಾನೆ. ಯಜ್ಞಕರ್ಮಗಳು ವಿಧಿಯುಕ್ತವಾಗಿ ನಡೆಯುವಂತೆ ನೋಡಿಕೊಳ್ಳುವುದೇ ಈ ಋತ್ವಿಜನ ಕಾರ್ಯ. ಯಜ್ಞಕರ್ಮದಲ್ಲಿ ದೋಷಗಳಾದರೆ ಫಲಪ್ರಾಪ್ತಿಯಾಗುವ ಬದಲು ಯಜ್ಞಕರ್ತನಿಗೆ ಮೃತ್ಯು ಬಂದೆರಗುವ

ಭಯವಿರುತ್ತದೆ. ಮೃತ್ಯುವಿನ ದಕ್ಷಿಣ ದಿಕ್ಕನ್ನು ಕಾಯಲೆಂದು 'ಬ್ರಹ್ಮ'ಋತ್ವಿಜನು ದಕ್ಷಿಣದಿಶೆಯಲ್ಲಿ ಕುಳಿತಿರುತ್ತಾನೆ.

'ಅಂಕುಡೊಂಕಾಗಿ ಹಾಡಿಯೇನು, ಆದರೂ ನಿನ್ನವನೇ ಎನ್ನಿಸಿಯೇನು' ಎಂದೆನ್ನುವ ಭಕ್ತಿವಿಚಾರಕ್ಕೆ ಇಲ್ಲಿ ಎಡೆಯಿಲ್ಲ. ಏಕೆಂದರೆ 'ಫಲ ನೀಡುವ ಕೆಲಸ ದೇವತೆಗಳದಲ್ಲವೇ ಅಲ್ಲ. ಇಲ್ಲಿ ದೇವತೆಗಳು ಹೆಸರಿಗೆ ಮಾತ್ರ.' ಯಜ್ಞದಿಂದಾಗಿಯೇ ದೇವತೆಗಳಿಗೆ ದೇವತ್ವ ಪ್ರಾಪ್ತವಾಗಿದೆಯೆಂಬ ಭಾವನೆ ಎಲ್ಲೆಡೆಗೂ ಕಂಡುಬರುತ್ತದೆ[5] ಎಂದು ಡಾ. ಆರ್. ಎನ್. ದಾಂಡೇಕರವರು ಹೇಳಿದ್ದಾರೆ.

ದಿ. ತರ್ಕತೀರ್ಥ ಲಕ್ಷ್ಮಣಶಾಸ್ತ್ರಿ ಜೋಶಿಯವರು ಡಾ. ಗಾಡಗೀಳರವರ ಮತವನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳರು.[6] ಅವರ ಹೇಳಿಕೆಯಂತೆ, " 'ಭಕ್ತಿ' ಎಂದರೆ ಪ್ರೇಮಭಾವನೆಯ ಒಂದು ವಿಶಿಷ್ಟವಾದ ಪ್ರಕಾರ. ಇದಕ್ಕೆ 'ನಿಷ್ಠೆ' ಎಂದೂ ಅನ್ನುತ್ತಾರೆ. ಋಗ್ವೇದದ ಯಜ್ಞವಿಧಿಯಲ್ಲಿ ಈ 'ನಿಷ್ಠೆ'ಯ ಉಲ್ಲೇಖ ಆಗಾಗ ಬರುತ್ತದೆ. ಮಾನವಶಾಸ್ತ್ರದ ಅಭಿಪ್ರಾಯದಂತೆ 'ವೈದಿಕಯಜ್ಞವಿಧಿ' ಎಂದರೆ ಕೇವಲ ಯಾತುವಿಧಿಯೆನ್ನಿಸದು. ಏಕೆಂದರೆ ಅಲೌಕಿಕಶಕ್ತಿಯನ್ನು ಅಂಕಿತದಲ್ಲಿಟ್ಟುಕೊಳ್ಳುವ ಪ್ರಕ್ರಿಯೆ ಯಾತುಕ್ರಿಯೆಯಲ್ಲಿರುತ್ತದಾದರೆ ಅದು ವೈದಿಕಯಜ್ಞವಿಧಿಯಲ್ಲಿ ಹಾಗಿರುವುದಿಲ್ಲ. ಇದರಲ್ಲಿ ದೇವರಿಗೆ ಶರಣುಹೋಗುವ ಮನೋಭಾವ ಮುಖ್ಯ. ಯಜ್ಞದಿಂದ ದೇವತೆಗಳು ವಶವಾಗುತ್ತಾರೆ. ಇದಕ್ಕೆ ಕಾರಣ, ಯಜ್ಞವೆಂದರೆ ಅರ್ಪಣೆಯ ವಿಧಿಯಾಗಿದೆ. ಇದರಲ್ಲಿ 'ಯಾತು'ಕ್ರಿಯೆ ಸಮಾವಿಷ್ಟವಾಗಿದೆ ಎನ್ನುವಲ್ಲಿ ಸಂಶಯವಿಲ್ಲ. ಆದರೆ ವೈದಿಕಯಜ್ಞವೆಂದರೆ ಕೇವಲ ಯಾತು-ಕ್ರಿಯೆಯಲ್ಲ... ಜಗತ್ತಿನಲ್ಲಿಯ ಎಲ್ಲ ಧರ್ಮಗಳಲ್ಲಿ ಅಲ್ಪಸ್ವಲ್ಪ ಪ್ರಮಾಣದಲ್ಲಿ ಯಾತು-ಕ್ರಿಯೆ ಇದ್ದೇ ಇದೆ. ಯಾತುವಿನಿಂದ ಚಮತ್ಕಾರಗಳು ಜರಗುತ್ತವೆ ; ಎಲ್ಲ ಧರ್ಮಗಳೂ ಪವಾಡಗಳು ನಡೆಯುತ್ತ ವೆಂದು ನಂಬುತ್ತವೆ. ಮಾನವನ ಇಚ್ಛೆಯ ಸರ್ವಶಕ್ತಿಮತ್ತೆ ಎಂದರೆ (omnipotence of will) ಇಂದ್ರಜಾಲದ ತತ್ತ್ವವಾಗಿದೆ. ಇದರ ಉನ್ನತವಾದ ರೂಪವೆಂದರೇನೇ ವ್ಯಕ್ತಿರೂಪನಾದ ಪರಮೇಶ್ವರನ ಪರಿಕಲ್ಪನೆ... ಯಾತು-ಕ್ರಿಯೆಯ ಅರಳಿದ ರೂಪವೆಂದರೆ ಭಕ್ತಿಪ್ರಧಾನ ಧರ್ಮ !"

## ತಪಶ್ಚರ್ಯೆ

ಭಾರತೀಯ ಸಂಸ್ಕೃತಿಯ ಮೂರು ಮುಖ್ಯವಾದ ಅಂಗಗಳಲ್ಲಿ 'ತಪಸ್ಸು' ಒಂದಾಗಿದೆ.[7] 'ಶಬ್ದಕಲ್ಪದ್ರುಮ'ದಲ್ಲಿ ಯಾವುದು ಕಾಯುವುದೋ, ಕಾಯಿಸುವುದೋ ಅದೇ ತಪಸ್ಸು' ಎಂಬುದಾಗಿ ತಪಸ್ಸಿನ ವ್ಯಾಖ್ಯೆಯಿದೆ ಎಂದು ಹೇಳಿದ್ದಾರೆ. 'ಸರ್ವಲಕ್ಷಣಸಂಗ್ರಹ'ದಲ್ಲಿ[8] 'ಹಸಿವು, ಬಾಯಾರಿಕೆ, ಶೀತೋಷ್ಣಗಳನ್ನು ಸಹಿಸುವುದೇ ತಪಸ್ಸು' ಎಂದಿದ್ದಾರೆ.[9] ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬೀ ನಾಲ್ಕು ಪುರುಷಾರ್ಥಗಳು ಹಾಗೂ ಬ್ರಹ್ಮಚರ್ಯ, ಗಾರ್ಹಸ್ತ್ಯ, ವಾನಪ್ರಸ್ಥ, ಹಾಗೂ ಸಂನ್ಯಾಸ ಈ ನಾಲ್ಕು ಆಶ್ರಮಗಳೊಂದಿಗೆ ತಪಸ್ಸಿನ ಸಂಬಂಧ ಇದೆ. ಮಾನವನ ಜೀವನವನ್ನು ಕಲ್ಮಷರಹಿತ ಮಾಡಬೇಕಾದರೆ ತಪೋಗ್ನಿಯಿಂದ ಅದನ್ನು ಕಾಯಿಸಬೇಕು. ಉಪನಿಷತ್ಕಾರರ ಮತದಂತೆ ತಪಸ್ಸು ವಾನಪ್ರಸ್ಥಾಶ್ರಮದ ಒಂದು ಅವಿಭಾಜ್ಯ ಅಂಗವಾಗಿದೆ.[10]

ಶಾಂತರೂ, ವಿದ್ವಾಂಸರೂ ಆದ ಯಾವ ಪುರುಷರು ವನದಲ್ಲಿ ವಾಸಿಸಿ ಭಿಕ್ಷಾವೃತ್ತಿಯನ್ನವಲಂಬಿಸಿ ಶ್ರದ್ಧೆಯಿಂದ ತಪಸ್ಸನ್ನಾಚರಿಸುತ್ತಾರೋ ಅವರು ಪಾಪರಹಿತರಾಗಿ ಸೂರ್ಯನ ದ್ವಾರದ ಮುಖಾಂತರ ಅಮರ್ತ್ಯ ಹಾಗೂ ಅವ್ಯಯಪುರುಷನನ್ನು ತಲುಪುತ್ತಾರೆ. ಮಹಾನಾರಾಯಣೀಯ ಉಪನಿಷತ್ತಿನಲ್ಲಿ ತಪದ ವ್ಯಾಪಕ ಸ್ವರೂಪವನ್ನು ಹೀಗೆ ಬಣ್ಣಿಸಿದ್ದಾರೆ.[11]

ಋತ, ಶ್ರುತ, ಸತ್ಯ, ಶಾಂತ, ದಮ, ಶಮ, ದಾನ, ಯಜ್ಞ ಇವೆಲ್ಲ ತಪಗಳಾಗಿದ್ದು ಸಚ್ಚಿದಾನಂದಸ್ವರೂಪ ಬ್ರಹ್ಮನ ಉಪಾಸನೆಯನ್ನು ಕೈಗೊಳ್ಳುವುದು ಕೂಡ ಒಂದು ತಪಸ್ಸೇ ಆಗಿದೆ.

"ತಪಸಿ ಸರ್ವಂ ಪ್ರತಿಷ್ಠಿತಂ ತಸ್ಮಾತ್ತಪಃ ಪರಮಂ ವದಂತಿ !"

ತಪಸ್ಸಿನಲ್ಲಿ ಎಲ್ಲವೂ ಅಡಕವಾಗಿದೆ ; ಆದ್ದರಿಂದ ತಪಸ್ಸು ಶ್ರೇಷ್ಠವೆಂದು ಉಪನಿಷತ್ಕಾರರು ನುಡಿದಿದ್ದಾರೆ. ಧರ್ಮಸೂತ್ರಕಾರರು ಪಾಪದ ಪರಿಹಾರಕ್ಕಾಗಿಯೂ ತಪಸ್ಸನ್ನಾಚರಿಸಬೇಕೆಂದಿದ್ದಾರೆ.[12]

ದೇವರ, ಬ್ರಾಹ್ಮಣರ, ಗುರುಗಳ, ವಿದ್ವಾಂಸರ ಪೂಜೆ, ಶುದ್ಧಿ, ಋಜುತ್ವ, ಬ್ರಹ್ಮಚರ್ಯ ಮತ್ತು ಅಹಿಂಸೆ ಎಂದರೆ ಶಾರೀರಿಕ ತಪಸ್ಸು. ಉದ್ವೇಗವನ್ನು ತಾರದ ವಾಣಿ, ಸತ್ಯ ಮತ್ತು ಪ್ರಿಯವಾದ ಭಾಷಣ, ಸ್ವಾಧ್ಯಾಯ ಇವು ವಾಚಿಕ ತಪಸ್ಸು. ಮಾನಸಿಕ ಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮನಿಗ್ರಹ ಮತ್ತು ಭಾವ ಸಂಶುದ್ಧಿಯೆಂದರೆ ಮಾನಸಿಕ ತಪಸ್ಸು. ಫಲದ ಆಸೆಯನ್ನು ಇಟ್ಟುಕೊಳ್ಳದೇ ಕಾಯೇನ ವಚಸಾ ಮನಸಾ ಶ್ರದ್ಧೆಯಿಂದ ತವಗೈದರೆ ಅದು ಸಾತ್ತ್ವಿಕ ತಪವೆಂದೆನಿಸುತ್ತದೆ. ಮಾನಸನ್ಮಾನ, ಗೌರವ, ಪೂಜೆ ದೊರೆಯ ಬೇಕೆಂಬ ಐಹಿಕ ಉದ್ದೇಶಗಳಿಂದ ಡಂಭಾಚಾರದ ತಪಸ್ಸನ್ನು ಕೈಕೊಂಡರೆ ಅದು ರಾಜಸಿಕ ತಪವೆನಿಸುತ್ತದೆ. ಮೂರ್ಖತನದಿಂದ ಸ್ವಂತದ ದೇಹವನ್ನು ಶ್ರಮಿಸಿ, ಪರರಿಗೆ ಪೀಡೆಯನ್ನುಂಟುಮಾಡಬೇಕೆಂಬ ಉದ್ದೇಶದಿಂದ ಆಚರಿಸಿದ ತಪಸ್ಸು ತಾಮಸಿಕವೆಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ.[11]

ಯಾವುದು ಕಠಿಣವೂ, ಕೈಗೆ ಸಿಗಲಾರದ್ದೂ, ತಲುಪಲಸಾಧ್ಯವೂ, ಕೈಕೊಳ್ಳಲಾಗದ ಸಂಗತಿ ಎಂದಿದೆಯೋ, ಅದು ತಪಸ್ಸಿನಿಂದ ಸಾಧ್ಯ. ಆದರೆ ತಪಸ್ಸನ್ನು ಯಾರೂ ಅತಿಕ್ರಮಿಸುವಂತಿಲ್ಲವೆಂದು ಮನುವು ತಪಸ್ಸಿನ ಸಾಮರ್ಥ್ಯವನ್ನು ಕುರಿತು ಹೇಳುತ್ತಾನೆ. ತಪಸ್ಸಿನಿಂದ ಚಿಂತನಾಶಕ್ತಿಯು ಬಲಗೊಳ್ಳುತ್ತದೆ, ಜ್ಞಾನವು ವರ್ಧಿಸು ತ್ತದೆ. ವ್ಯಾಸರು ತುಂಬಾ ಪರಿಶ್ರಮ ವಹಿಸಿದ್ದರಿಂದ ಪುರಾತನ ವಾಙ್ಮಯದ ಸಂಗ್ರಹಣೆ ಸಾಧ್ಯವಾಯಿತು. ಪ್ರಾಚೀನ ಗ್ರಂಥಗಳಲ್ಲಿಯ ಹಲವು ವ್ಯಕ್ತಿಗಳ ಜೀವನದಲ್ಲಿ ತಪಸ್ಸಿನ ಪ್ರಭಾವವು ತೋರಿಬರುತ್ತದೆ.

ಮಾನವನ ಶಕ್ತಿಗೆ ನಿಲುಕದ ಸಂಗತಿಗಳು ತಪಸ್ಸಿನಿಂದ ಲಭಿಸುವಂತಾಗುತ್ತವೆ. ಮಾನವರ ಹಾಗೆ ದೇವತೆ ಗಳು-ದಾನವರು ತಪಸ್ಸನ್ನು ಆಚರಿಸಹತ್ತಿದರು. ಬ್ರಹ್ಮದೇವನು ತಪದ ಸಾಮರ್ಥ್ಯದಿಂದಲೇ ಸೃಷ್ಟಿಯನ್ನು ನಿರ್ಮಿಸುವಂತಾದನು. ವಿಶ್ವಾಮಿತ್ರ ತಾನು 'ಬ್ರಹ್ಮರ್ಷಿ' ಎಂದೆನಿಸಿಕೊಳ್ಳಬೇಕೆಂದು ಘೋರತಪಸ್ಸನ್ನಾಚರಿಸಿ ದನು. ರಾವಣನು ತಪೋಬಲದಿಂದಲೇ ಮರ್ಯಾದಿತ ಅಮರತ್ವವನ್ನು ಗಳಿಸಿಕೊಂಡನು. ಪಾರ್ವತಿಯು ಶಿವನನ್ನು ಪ್ರಸನ್ನಗೊಳಿಸಬೇಕೆಂದೇ ತಪಸ್ಸನ್ನು ಗೈದಳು. ಅನಸೂಯೆಯು ತಪಸ್ಸಿನಿಂದ ಶಿವನನ್ನು ಪ್ರಸನ್ನ ಗೊಳಿಸಿದುದಲ್ಲದೆ ಕ್ಷಾಮದ ಪರಿಹಾರಕ್ಕಾಗಿ ಸ್ವರ್ಗದಿಂದ ಗಂಗೆಯನ್ನು ಭೂಮಿಗೆ ಕರೆತಂದಳು. ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದ ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಎಳೆಯ ಬಾಲಕರನ್ನಾಗಿ ಮಾಡಿ ಅನಸೂಯೆ ಅವರ ಸೊಕ್ಕು ಮುರಿದುದು ತಪೋಬಲದಿಂದಲೇ ಎಂದು ಎಲ್ಲರಿಗೂ ಗೊತ್ತಿದೆ. ಮಾಂಡವ್ಯನ ಶಾಪದಿಂದ ಗೆಳತಿಗೆ ಬಂದ ವೈಧವ್ಯವನ್ನು ಸಹ ಅವಳು ತಪೋಬಲದಿಂದಲೇ ಪರಿಹರಿಸಿದಳು. ಶಂಬೂಕನು ದೇಹಸಹಿತನಾಗಿ ಸ್ವರ್ಗಕ್ಕೆ ಹೋಗಲು ಹವಣಿಸಿ ನಡೆಯಿಸಿದ ತಪಶ್ಚರ್ಯೆ ಮಾತ್ರ ವ್ಯರ್ಥವಾಯಿತು ; ಏಕೆಂದರೆ ಆತನು ತನ್ನ ಅಧಿಕಾರವನ್ನು ಅತಿಕ್ರಮಿಸಿದ್ದನು.

ತಪಶ್ಚರ್ಯೆಯಲ್ಲಿ ದೈಹಿಕ ಕ್ಲೇಶಗಳಿಗೆ ವಿಶೇಷ ಮಹತ್ವವಿದೆ. ಕ್ಲೇಶಗಳ ತೀವ್ರತೆಯು ಹೆಚ್ಚಾದಷ್ಟೂ, ದೀರ್ಘಕಾಲ ನಡೆದಷ್ಟೂ ತಪಸ್ಸಿನ ಸಾಮರ್ಥ್ಯ ಹೆಚ್ಚು. ಬೇಸಗೆಯಲ್ಲಿ ಪಂಚಾಗ್ನಿಸಾಧನೆ ; ಕೊರೆಯುವ ಚಳಿಗಾಲದಲ್ಲಿ ಒದ್ದೆಬಟ್ಟೆಗಳನ್ನು ಧರಿಸುವುದು ; ಮಳೆಗಾಲದಲ್ಲಿ ಆಕಾಶದ ಕೆಳಗೆ ಬಯಲಿನಲ್ಲಿ ಕುಳಿತಿರು ವುದು : ಒಂದು ಅಥವಾ ಎರಡೂ ತೋಳುಗಳನ್ನು ಆಕಾಶದತ್ತ ಮೇಲೆ ಎತ್ತಿ ದೀರ್ಘಸಮಯ ಎದ್ದು ನಿಲ್ಲುವುದು ; ಒಂಟಿಗಾಲಿನ ಮೇಲೆ ಎದ್ದು ನಿಲ್ಲುವುದು ; ಬೆಂಕಿಯ ಮೇಲೆ ನಡೆಯುವುದು ; ನೀರಿನಲ್ಲಿ ನಿಂತಿರುವುದು ; ಮೌನವನ್ನಾಚರಿಸುವುದು ; ಸಾಷ್ಟಾಂಗನಮಸ್ಕಾರ ಹಾಕುತ್ತ ಇಲ್ಲವೇ ಉರುಳುಸೇವೆಗೈಯುತ್ತ ತೀರ್ಥಯಾತ್ರೆ ಕೈಗೊಳ್ಳುವುದು ; ವಾಯುಭಕ್ಷಣೆ ಮಾತ್ರ ಮಾಡಿರುವುದು ; (ಪಕ್ಷಿಗಳಂತೆ) ಹೊಲದಲ್ಲಿ ಭೂಮಿಯ ಮೇಲೆ ಬಿದ್ದ ಕಾಳುಗಳನ್ನು ಆಯ್ದುಕೊಂಡು ಜೀವನ ನಡೆಸುವುದು — ಎಂದೆಲ್ಲ ಹಲವು ಬಗೆಗಳಲ್ಲಿ ತಪಸ್ಸನ್ನಾಚರಿಸಲಾಗುತ್ತದೆ. ಕಟ್ಟುನಿಟ್ಟಿನ ಆಹಾರ ಮತ್ತು ತ್ಯಾಗ ಇವು ಕೂಡ ಒಂದು ಬಗೆಯಲ್ಲಿ ತಪಸ್ಸು ಎಂದೆನಿಸುತ್ತವೆ. ಸ್ತ್ರೀಪುರುಷರಿಬ್ಬರಿಗೂ ತಪಸ್ಸನ್ನಾಚರಿಸುವ ಅಧಿಕಾರವಿದ್ದರೂ ಶೂದ್ರರನ್ನು ಈ ಅಧಿಕಾರದಿಂದ ದೂರವಿಡಲಾಗಿತ್ತೆಂಬುದು ಶಂಬೂಕನ ಕಥೆಯಿಂದ ಸ್ಪಷ್ಟವಾಗುತ್ತದೆ. ವೈದಿಕ ಕಾಲದಲ್ಲಿ ಶೂದ್ರರಿಗೂ ಈ ಅಧಿಕಾರವಿತ್ತು. ಅವರು ವೇದಾಧ್ಯಯನಮಾಡುತ್ತಿದ್ದರು. ಕೆಲವು ಜನ ಶೂದ್ರರು ಮಂತ್ರದ್ರಷ್ಟಾರರೆನ್ನಿಸಿದ್ದರು. ಕಾಲಾಂತರದಲ್ಲಿ ಶೂದ್ರರ ಮೇಲೆ ಅನೇಕ ಬಂಧನಗಳನ್ನು ಹೇರಲಾಗಿದೆ ; ಹೀಗಾಗಿ ಅವರಿಗೆ ಅಧಿಕಾರ ಇಲ್ಲವಾಗಿರಬಹುದು.

ತಪಸ್ಸಿನ ಉಪಯುಕ್ತತೆ ಇದ್ದಂತೆ ಅದರಿಂದ ಉಪದ್ರವವೂ ಇರುತ್ತದೆ. ಇದರಲ್ಲಿ ಸಂರಕ್ಷಕ ಹಾಗೂ ಸಂಹಾರಕ ಎಂಬ ಎರಡೂ ಬಗೆಯ ಶಕ್ತಿಗಳಿವೆ. ಕೈಕೊಂಡ ತಪಸ್ಸನ್ನವಲಂಬಿಸಿ ಅದರ ಪ್ರಭಾವ ಹೆಚ್ಚು ಕಡಿಮೆಯಾಗುತ್ತದೆ ಮತ್ತು ಅದರ ಕಾಲಾವಧಿ ಹೆಚ್ಚುಕಡಿಮೆಯಾಗುತ್ತದೆ. ತಪಸ್ವಿಗಳು ತಪದ ಬಲವು ಕುಗ್ಗಬಾರದೆಂದು ಬಹಳ ಜಾಗರೂಕತೆಯನ್ನು ವಹಿಸುತ್ತಾರೆ. ಅನೇಕ ಕಾರಣಗಳಿಂದ ತಪಸ್ಸು ಲೋಪವಾಗ ಬಹುದು. ವಿಶ್ವಾಮಿತ್ರನ ತಪಸ್ಸು ಕ್ಷಯಿಸಲೆಂದು ಇಂದ್ರನು ರಂಭೆಯನ್ನು ಆತನ ಬಳಿ ಕಳುಹಿಸಿ ಆತನ ತಪೋಭಂಗವಾಗುವಂತೆ ಮಾಡಿದನು.

ಐಹಿಕ ಸುಖಸಂವರ್ಧನೆಗಾಗಿ, ಶತ್ರುಗಳ ವಿನಾಶಕ್ಕಾಗಿ, ಸಂಕಟಗಳ ನಿವಾರಣೆಗಾಗಿ, ಮಾನವನ ಶಕ್ತಿಯನ್ನು ಮೀರಿಸುವ ಬಲವನ್ನು ಪಡೆಯಲು ತಪ, ಯಾತು ಮತ್ತು ಯಜ್ಞಗಳನ್ನು ಆಚರಿಸುತ್ತಿದ್ದರು. ಇನ್ನಿತರ ಉದ್ದೇಶಗಳಿಗಾಗಿ ಕಡಿಮೆ ಪ್ರಮಾಣದಲ್ಲಿ ತಪಸ್ಸನ್ನು ಮಾಡುತ್ತಿದ್ದರು. 'ಯಾತು'ಕ್ರಿಯೆಯಲ್ಲಿ ಮಂತ್ರತಂತ್ರ ಗಳಿಂದ, ಯಜ್ಞಕರ್ಮದಲ್ಲಿ ಇಷ್ಟದೇವತೆಗಳ ಕೃಪಾಪ್ರಸಾದದಿಂದ ಮತ್ತು ತಪಶ್ಚರ್ಯೆಯಲ್ಲಿ ಸ್ವದೇಹದಂಡನೆ ಯಿಂದ ತಮ್ಮ ಉದ್ದೇಶವನ್ನು ಸಾಧಿಸುತ್ತಿದ್ದರು. ಲೌಕಿಕ ಅಭಿವೃದ್ಧಿಯೇ ಈ ಮೂರೂ ಬಗೆಯ ಸಾಧನೆಗಳ ಮುಖ್ಯ ಉದ್ದೇಶವಿರುತ್ತಿತ್ತು. ಯಾತುವಿಧಿಯಲ್ಲಿ ಪ್ರತಿಯೊಂದು ವಸ್ತುವಿನಲ್ಲಿಯ ಸುಪ್ತಶಕ್ತಿಯು ಚೇತನ ಗೊಳ್ಳದೆ, ಇಲ್ಲವೆ ಯಜ್ಞಕರ್ಮದಲ್ಲಿ ಇಷ್ಟದೇವತೆಗಳು ಪ್ರಸನ್ನರಾಗದೆ, ಉದ್ದೇಶಗಳು ಸಫಲಗೊಳ್ಳುವುದಿಲ್ಲ, ಯಾತು ಮತ್ತು ಯಜ್ಞ ಈ ಎರಡಕ್ಕಾಗಿ ಹೆಚ್ಚಾಗಿ ಪರರನ್ನು ಅವಲಂಬಿಸಬೇಕಾಗುತ್ತದೆ. ತಪಶ್ಚರ್ಯೆ ಯಲ್ಲಿಯೂ ದೇವತೆಯ ಪ್ರಸನ್ನತೆ ನಿರೀಕ್ಷಿತವೂ, ಅಗತ್ಯದ್ದೂ ಆಗಿದ್ದರೂ ಅವಳನ್ನು ಪ್ರಸನ್ನಗೊಳಿಸುವ ಸಾಧನ ಬಹುಮಟ್ಟಿಗೆ ಬಯಸುವವನ (ತಪಸ್ವಿಯ) ಕೈಯಲ್ಲಿರುತ್ತದೆ. ಇಚ್ಛಾಪೂರ್ತಿ ಸಾಧ್ಯವಾಗುವವರೆಗೆ ತಪಸ್ಸನ್ನು ನಡೆಯಿಸಬಹುದು. ಯಜ್ಞಕರ್ಮದಲ್ಲಿ ದೈಹಿಕತೆಗೆ ಪ್ರಾಮುಖ್ಯತೆಯಿದ್ದು ದ್ರವ್ಯ, ದೇವತೆ ಹಾಗೂ ವಿಧಾನಗಳಿಗೆ ಮಹತ್ವವಿದೆ. ತಪಸ್ಸು ಒಂದು ಮಾನಸಿಕ ಕ್ರಿಯೆ. ಇವೆರಡರಿಂದ ಸಿದ್ಧಿಯನ್ನು ಸಾಧಿಸಬಹುದು. ಭಗೀರಥನು ಉಗ್ರತಪಶ್ಚರ್ಯೆಯನ್ನು ನಡೆಯಿಸಿ ಗಂಗೆಯನ್ನು ಪೃಥ್ವಿಗೆ ಬರಮಾಡಿಕೊಂಡನು. ಸಗರನ ಪುತ್ರರ ಉದಕಕ್ರಿಯೆಯನ್ನು ಮಾಡಿ ಅವರಿಗೆ ಅಕ್ಷಯಸ್ವರ್ಗಸುಖವನ್ನು ಒದಗಿಸಿಕೊಟ್ಟನು.

## ದಾನ

ದಾನವು ಒಂದು ಪುಣ್ಯಕರ್ಮವೆನ್ನಿಸಿದೆ. ಇದು ಒಂದು ಬಗೆಯ ಯಜ್ಞವೇ ಸರಿ. ಯಜ್ಞಕರ್ಮ ಕೂಡ ದಾನವನ್ನು ಒಳಗೊಂಡಿರುವಂಥದೇ ಆಗಿರುತ್ತದೆ. ಕ್ಷತ್ರಿಯರಿಗೆ ದಾನವನ್ನೀವ ಅಧಿಕಾರವಿದೆಯಾದರೂ ಅದನ್ನು ಸ್ವೀಕರಿಸಲಲ್ಲ. ಕೌಶಿಕ ಬ್ರಾಹ್ಮಣನು ತನ್ನ ಜಪದ ಫಲವನ್ನು ಇಕ್ಷ್ವಾಕು ರಾಜನಿಗೆ ಕೊಡಮಾಡಿದಾಗ ಮೊದಲಿಗೆ ಅವನು ಅದನ್ನು ನಿರಾಕರಿಸಿದುದು ಇದೇ ಕಾರಣದಿಂದಾಗಿ. ತರುವಾಯ ಅದನ್ನು ಪಡೆಯಲೊಪ್ಪಿ ದುದು ಆ ಬ್ರಾಹ್ಮಣನ ಶಾಪದ ಹೆದರಿಕೆಯಿಂದಾಗಿ.[14] ಮೊಮ್ಮಕ್ಕಳು ತಮ್ಮ ಪುಣ್ಯವನ್ನು ಕೊಡಮಾಡಿದಾಗ ಯಯಾತಿಯು ಅದನ್ನು ಪಡೆಯಲು ನಿರಾಕರಿಸುತ್ತಲೇ ಮಾಧವಿ ಅವನಿಗೆ ತಿಳಿಹೇಳಿದಳು. ಪೃಥ್ವಿ (ಭೂಮಿ), ಹಸು ಹಾಗೂ ಹೊನ್ನುಗಳ ದಾನಗಳನ್ನು ಬಲು ಪವಿತ್ರವೂ, ಶ್ರೇಷ್ಠವಾದವುಗಳೆಂದೂ ಮನ್ನಿಸಲಾಗುತ್ತದೆ. ಅದರಲ್ಲೂ ಭೂಮಿ-ದಾನದ ಸ್ಥಾನ ಸರ್ವೋಚ್ಚವಾದುದು.[15] ದಾನಗಳಲ್ಲಿ ಯಾಚಿತ ಹಾಗೂ ಅಯಾಚಿತವೆಂಬ ಎರಡು ಬಗೆಗಳು. ಅಯಾಚಿತ ದಾನವು ಯಾಚಿತಕ್ಕಿಂತ ಮೇಲು ಎಂದು ತಿಳಿಯಲಾಗುತ್ತದೆ. ಏಕೆಂದರೆ ಕೇಳದೆಯೆ ನೀಡಲಾದ ದಾನವದು. ಯಾಚಿತ ದಾನವನ್ನು ಮಾತ್ರ ಕೇವಲ ದಯೆಯಿಂದ ಪ್ರೇರಿತರಾಗಿ ನೀಡಲಾಗುತ್ತದೆ. ಗೋವು, ಎತ್ತು, ಬಗೆಬಗೆಯ ಆಹಾರ, ಬಟ್ಟೆ-ಬರೆ, ಛತ್ರಿ, ಮೆಟ್ಟುಗಳನ್ನು ದಾನವಾಗಿ ಕೊಡಬೇಕೆಂದು ಭೀಷ್ಮ ಯುಧಿಷ್ಠಿರನಿಗೆ ಹೇಳಿದ್ದಾನೆ. ಪ್ರತ್ಯುಪಕಾರವನ್ನು ನಿರೀಕ್ಷಿಸದೆ ಸರಿಯಾದ ಎಡೆಯಲ್ಲಿ, ಸರಿಯಾದ ಹೊತ್ತಿಗೆ, ಸತ್ಪಾತ್ರನಾದವನಿಗೆ ಕರ್ತವ್ಯಬುದ್ಧಿಯಿಂದ ಇತ್ತ ದಾನ ಸಾತ್ವಿಕ ಎನ್ನಿಸಿದೆ. ಮರುವುಪ ಕಾರದ ನಿರೀಕ್ಷೆ, ಫಲಪ್ರಾಪ್ತಿಯ ಬಯಕೆ, ಹಾಗೂ ಬಲು ತೊಂದರೆಯಿಂದ ಇತ್ತ ದಾನ ರಾಜಸ ಎನ್ನಿಸಿದೆ. ಅಲ್ಲದೆ ನಿಂದೆ, ಅವಮಾನಗೊಳಿಸಿ, ತಪ್ಪು ಹೊತ್ತಿಗೆ ಹಾಗೂ ಅಯೋಗ್ಯನಿಗಿತ್ತ ದಾನ ತಾಮಸ ಎನ್ನಿಸಿದೆ. ಗೀತೆಯಲ್ಲಿ ಈ ಮೂರು ಬಗೆಯ ದಾನಗಳನ್ನು ಕುರಿತು ಬಣ್ಣಿಸಲಾಗಿದೆ.[16]

ಅನುಶಾಸನಪರ್ವ, ಅಧ್ಯಾಯ ೫೭ ರಿಂದ ೬೦ ಗಳಲ್ಲಿ ದಾನದ ಸ್ವರೂಪ, ಹಿರಿಮೆ, ಫಲ, ಮಹತ್ವ ಮುಂತಾದವುಗಳ ಬಗೆಗೆ ಸವಿಸ್ತಾರವಾಗಿ ಹೇಳಲಾಗಿದೆ.

## ಸಂಕಲ್ಪನೆ ಮತ್ತು ಸ್ವರೂಪ

### ಸಂಕಲ್ಪನೆ

ಶಾಪ/ವರದ ಪರಿಕಲ್ಪನೆಯು ಮೂಲತಃ ಯಾತುಕ್ರಿಯೆಯಲ್ಲಿದ್ದು ಶಾಪ/ವರವನ್ನು ನೀಡುವ ಸಾಮರ್ಥ್ಯ, ಅಧಿಕಾರವು ಮುಖ್ಯವಾಗಿ ತಪಸ್ಸಿನಿಂದ ದೊರಕುತ್ತದೆ. ಈ ಸಾಮರ್ಥ್ಯವು ಯಜ್ಞಕರ್ಮಾದಿ ಬೇರೆ ರೀತಿಗಳಿಂದಲೂ ಸಾಧ್ಯವಾಗುತ್ತಿದ್ದರೂ ಅದರ ಪ್ರಮಾಣ ತೀರ ಕಡಿಮೆ. ಯಾವೊಬ್ಬನಿಗೆ ಒಳಿತು ಇಲ್ಲವೆ ಕೆಡಕನ್ನು ಉಂಟುಮಾಡುವಂಥ, ಶಬ್ದೋಚ್ಚಾರದ ಮೂಲಕ ವ್ಯಕ್ತಗೊಳ್ಳುವ ಇಚ್ಛೆ ಎಂದರೆ ವರ/ಶಾಪ ಎನ್ನಿಸಿದೆ.[17] ಇವೆರಡರಲ್ಲೂ ಕೊಡುವವನ ಉತ್ಕಟ ಇಚ್ಛೆ ಹಾಗೂ ಶಬ್ದಗಳ ಉಚ್ಚಾರಣೆ ಮತ್ತು ಕೊಡುವಾತನ ಅಧಿಕಾರ—ಈ ಮೂರು ಸಂಗತಿಗಳು ಮಹತ್ವಪೂರ್ಣವಿರುತ್ತವೆ. ಇವುಗಳಲ್ಲಿ ಯಾವೊಂದು ಘಟಕದ ಅಭಾವವಿದ್ದರೂ ಈ ಪ್ರಕ್ರಿಯೆ ಪೂರ್ತಿಗೊಳ್ಳಲಾರದು. ಶಾಪ/ವರವನ್ನು ಕೊಡುವ ಇಚ್ಛಾಶಕ್ತಿಯು ಅದೆಷ್ಟೇ ಪ್ರಬಲವಾಗಿದ್ದರೂ, ಅದನ್ನೀವ ವ್ಯಕ್ತಿಯು ಅದೆಷ್ಟೇ ಅಧಿಕಾರಸಂಪನ್ನನಾಗಿದ್ದರೂ ಶಾಪ/ವರದ ಅಭಿವ್ಯಕ್ತಿ ಆತನಿಂದ ಉಚ್ಚಾರಣೆಯ ಮೂಲಕ ನಡೆಯದೋ ಅಲ್ಲಿಯವರೆಗೆ ಅದು ತನ್ನ ಪರಿಣಾಮವನ್ನು ಬೀರಲಾರದು. ಹೀಗಿರುವುದರಿಂದ ಅಭಿವ್ಯಕ್ತಿಗೆ, ಶಬ್ದೋಚ್ಚಾರಣೆಗೆ ಅಧಿಕಾರದಷ್ಟೇ ಮಹತ್ವವಿದೆ. ಈ ರೀತಿ ಒಮ್ಮೆ ಇಚ್ಛೆಯನ್ನು ಪ್ರಕಟಪಡಿಸಿದನಂತರ ಉಚ್ಚಾರದ ಮೂಲಕ ಅದರ ಪರಿಣಾಮವನ್ನು ಮತ್ತೆ ಹಿಂದಿರುಗಿಸುವುದು ಸಾಧ್ಯವಿಲ್ಲ. ಅದರಲ್ಲಿ ಯಾವ ಬದಲಾವಣೆಯೂ ಸಾಧ್ಯವಿಲ್ಲ. ಅದರಿಂದ ಉಂಟಾಗಬಹುದಾದ ಪರಿಣಾಮಗಳನ್ನು ತಪ್ಪಿಸಲಾಗದು. ಒಂದು ಸಲಕ್ಕೆ ಉಚ್ಚರಿಸಲಾದ ಮಾತನ್ನು ಹಿಂತೆಗೆದುಕೊಳ್ಳಲಾಗದಲ್ಲದೆ ಅದರಲ್ಲಿ ಬದಲಾವಣೆಯನ್ನೂ ಮಾಡಲಾಗದು. ಶಾಪ/ವರಗಳು ಅದೆಂದಿಗೂ ಸುಳ್ಳಾಗವು. ಹಾಗೆಯೇ ಸುಳ್ಳಾಗುವಂಥವುಗಳು ಶಾಪ/ವರಗಳೆನ್ನಿಸವು.

ಕಾಮಮೋಹಿತ ಕ್ರೌಂಚಪಕ್ಷಿಗಳ ಜೋಡಿಯಲ್ಲಿಯ ಗಂಡುಪಕ್ಷಿಯನ್ನು ನಿಷಾದನು ಗುರಿ ಇಟ್ಟು ಕೊಂದ ಕಾರಣ ಅವನನ್ನು ಉದ್ದೇಶಿಸಿ ವಾಲ್ಮೀಕಿಯ ಮುಖದಿಂದ ಶಾಪದ ಉಚ್ಚಾರಣೆಯಾಯಿತು. ಹಾಗಾಗಬಾರದಿತ್ತು. ವಾಲ್ಮೀಕಿ ಋಷಿಗೆ ನಂತರ ಶಾಪ ನುಡಿದ ಬಗ್ಗೆ ವ್ಯಥೆಯಾದರೂ ಅದರಲ್ಲಿ ಬದಲಾವಣೆ ಮಾಡಲಾಗಲಿಲ್ಲ; ಅದನ್ನು ಹಿಂತೆಗೆದುಕೊಳ್ಳಲಾಗಲಿಲ್ಲ. ರಾಮಾಯಣದಲ್ಲಿ ವರಗಳು ಸುಳ್ಳಾಗುವ ಎರಡು ಪ್ರಸಂಗಗಳು ಬಂದಿವೆ. ಯಮನು ರಾವಣನೊಡನೆ ಯುದ್ಧಮಾಡುತ್ತಿದ್ದಾಗ ರಾವಣನನ್ನು ಸಾಯಿಸಲು ಯಮನು ಕಾಲದಂಡವನ್ನು ಎತ್ತಿಕೊಂಡನು. ಕಾಲದಂಡವನ್ನು ಬ್ರಹ್ಮನು ಸೃಷ್ಟಿಸಿದ್ದನು. ಅದನ್ನು ಬಳಸಿದ್ದರೆ ರಾವಣನ ಮೃತ್ಯುವು ತಪ್ಪುತ್ತಿರಲಿಲ್ಲ. ಆದರೆ ಮಾನವನ ಹೊರತಾಗಿ ರಾವಣನಿಗೆ ಮರಣ ಬಾರದು—ಎಂಬ ವರವನ್ನು ಬ್ರಹ್ಮನೇ ಕೊಟ್ಟಿದ್ದನು. ಹೀಗಿದ್ದುದರಿಂದ ರಾವಣನು ಕಾಲದಂಡದಿಂದ ಮೃತನಾಗಿದ್ದರೆ ಬ್ರಹ್ಮನು ಕೊಟ್ಟ ವರವು ಸುಳ್ಳಾಗುತ್ತಿತ್ತು ; ಆದ್ದರಿಂದ ಬ್ರಹ್ಮನು, ತನ್ನ ವರವನ್ನು ನಿಜಗೊಳಿಸಲು ಯಮನನ್ನು ಯುದ್ಧದಿಂದ ಪರಾವೃತ್ತಗೊಳಿಸಿದನು. ಎರಡನೇ ಪ್ರಸಂಗದಲ್ಲಿ ನಿವಾತಕವಚ ಹಾಗೂ ರಾವಣ ಇವರಲ್ಲಿ ಕಾಳಗ ನಡೆದಿತ್ತು. ಇಬ್ಬರೂ ವರಗಳನ್ನು ಪಡೆದಿದ್ದುದರಿಂದ ಅನೇಕ ದಿನಗಳ ಕಾಳಗ ನಡೆದರೂ ಯಾರೊಬ್ಬರ ಸೋಲು-ಗೆಲವು ಆಗಲಿಲ್ಲ. ಅವರಲ್ಲಿ ಒಬ್ಬನಾದರೂ ಜಯಹೊಂದಿದ್ದರೆ ಕೊಟ್ಟ ವರವು ಸುಳ್ಳಾಗುತ್ತಿತ್ತು. ಬ್ರಹ್ಮದೇವನು ಇವರಿಬ್ಬರಲ್ಲಿ ಮೈತ್ರಿಯನ್ನುಂಟುಮಾಡಿ, ಕೊಟ್ಟ ವರಗಳ ಸತ್ಯತೆಯನ್ನು ಕಾಯ್ದನು.[18] ಮನಸ್ಸಿನಲ್ಲಿ ಇಚ್ಛೆ ಮೂಡಿ ಅದರ ಉಚ್ಚಾರಣೆಯಾಗದಿದ್ದರೆ ಅದು ಶಾಪ ಅಥವಾ ವರವಾಗುವುದಿಲ್ಲ. ಕೇವಲ ಪ್ರಬಲ ಇಚ್ಛೆ ಎಂದರೆ ವರ/ಶಾಪವಲ್ಲ. ಇಚ್ಛೆಯು ಪದಗಳ ಮೂಲಕ ವ್ಯಕ್ತಗೊಂಡಾಗಲೇ ಅದನ್ನು ಶಾಪ/ವರ ಎಂದೆನ್ನಲಾಗುತ್ತದೆ.

ನಂತರದ ಪರಿಣಾಮವನ್ನು ಲಕ್ಷಿಸಿ ಕೆಲವು ಸಲ ಶಬ್ದೋಚ್ಚಾರವನ್ನು ತಡೆಹಿಡಿದಿದ್ದಾಗಿದೆ. ಶಾಪವೀಯುವದರಿಂದ ತಪ ವ್ಯಯಿಸುತ್ತದೆ, ಪುಣ್ಯ ಕ್ಷಯಿಸುತ್ತದೆ ಎಂಬ ನಂಬಿಕೆಯಿದ್ದ ಕಾರಣ ಅದೆಷ್ಟೋ ಸಲ ಶಾಪ

ವೀಯುವ ಬಯಕೆ ಮನದಲ್ಲಿ ಹುಟ್ಟಿಯೂ ಅದನ್ನು ಉಚ್ಚರಿಸಲಾಗುತ್ತಿರಲಿಲ್ಲ. ರಾಮಾಯಣದಲ್ಲಿ ಬಂದ ಇಂಥ ಹೇರಳ ಉದಾಹರಣೆಗಳನ್ನು ಮುಂದೆ ಚರ್ಚಿಸಲಾಗಿದೆ. ವೇದವತಿ[19] ಮತ್ತು ಕುಶಕನ್ಯೆಯರ ಮನಸ್ಸಿನಲ್ಲಿ ಮೂಡಿದ್ದರೂ ಅವರು ರಾವಣ ಹಾಗೂ ವಾಯುವಿಗೆ ಶಾಪವನ್ನು ಕೊಡಲಿಲ್ಲ. ಈ ರೀತಿಯಾಗಿ ಮನದಲ್ಲಿ ಇಚ್ಛೆ ಮೂಡಿಯೂ ವರಗಳನ್ನು ತಡೆಹಿಡಿದ ದಾಖಲೆ ಬಂದಿಲ್ಲ.

ಕೇವಲ ಪ್ರಬಲ ಇಚ್ಛೆ ಹಾಗೂ ಪದಗಳ ಮೂಲಕ ನಡೆವ ಅದರ ಉಚ್ಚಾರ, ಇವಿಷ್ಟೇ ಶಾಪ/ವರಗಳನ್ನು ಕೊಡಲು ಸಾಕಾಗುವುದಿಲ್ಲ. ಶಾಪ/ವರವನ್ನು ಕೊಡುವ ವ್ಯಕ್ತಿಗೆ ಅಂಥ ಅಧಿಕಾರ ಇರಬೇಕಾಗುತ್ತದೆ. ತಪಸ್ಸಿನಿಂದ ಅಥವಾ ಕೃಚಿತ್ತಾಗಿ ಯಜ್ಞದಿಂದ ಈ ಅಧಿಕಾರವನ್ನು ಪಡೆದುಕೊಳ್ಳಬಹುದು. ಸಾಮಾನ್ಯ ವ್ಯಕ್ತಿಯೊಬ್ಬ ವಿಪರೀತ ಕೋಪದಿಂದಾಡಿದ ಶಬ್ದಗಳು ಶಾಪವಾಗಲಾರವು! ಏಕೆಂದರೆ ಉಚ್ಚಾರದಂತೆ ಪರಿಣಾಮವನ್ನುಂಟು ಮಾಡುವ ಸಾಮರ್ಥ್ಯ ಅವುಗಳಲ್ಲಿರುವುದಿಲ್ಲ. ಈ ಬಗೆಯ ಉದ್ಗಾರಗಳಿಗೆ ಬಿರುನುಡಿ, ಆಕ್ರೋಶಗಳೆಂದೆನ್ನಬಹುದು. "ಕಾಗೆಯ ಶಾಪದಿಂದ ಹಸು ಸಾಯುವುದೇ !" ಎಂಬ ಗಾದೆಯಿದೆ ; ಅದಕ್ಕೆ ಕಾರಣವೆಂದರೆ ಯೋಗ್ಯತೆಯ ಅಭಾವ. ಸಂತುಷ್ಟನಾಗಿ ಯಾರೊಬ್ಬರು "ಒಳ್ಳೆಯದಾಗಲಿ !" ಎಂದರೆ ಅದು ವರವಾಗದು ! ಅದು ಕೇವಲ ಸದಿಚ್ಛೆ — ಆಶೀರ್ವಾದ ಮಾತ್ರ. ದುಃಖದ ಆಕ್ರೋಶ, ಆಶೀರ್ವಾದ, ಸದಿಚ್ಛೆಗಳು ಅವುಗಳ ಶಬ್ದೋಚ್ಚಾರಗಳಂತೆಯೇ ಪರಿಣಾಮಗಳನ್ನು ಬೀರಿಯಾವು ಎಂದೇನೂ ಖಂಡಿತವಾಗಿ ಹೇಳಲಾಗದು ; ಬಹಳಷ್ಟು ಸಲ ಹಾಗಾಗದು ಎಂದೆನ್ನಬಹುದು. ಅಪ್ಪಿತಪ್ಪಿ ನಡೆದರೆ ಅದಕ್ಕೆ ಯೋಗಾಯೋಗ, ಕಾಕತಾಲೀಯ ನ್ಯಾಯವೆಂದೆನ್ನಬಹುದು. ನಿಜವಾದ ಶಾಪ/ವರಗಳ ಪರಿಣಾಮಗಳನ್ನು ತಪ್ಪಿಸಲು ಸಾಧ್ಯವಿಲ್ಲ. ಸಂತಪ್ತನಾದ ಗೌತಮನು ಇಂದ್ರನನ್ನು ಉದ್ದೇಶಿಸಿ ನುಡಿದದ್ದು, ಶಾಪ ; ವಿಶ್ವಾಮಿತ್ರನು ರಂಭೆಯನ್ನು ಕುರಿತು ಆಡಿದ್ದು, ಶಾಪವಾಗಿದೆ. ಅವರ ಉದ್ಗಾರಗಳಿಗೆ ತಪಶ್ಚರ್ಯೆಯ ಬಲವಿತ್ತು. ಹೀಗಾಗಿ ಅವರಾಡಿದ ಮಾತು ನಿಜವಾಗುತ್ತಿತ್ತು.[20] ಕಾಲಿಗೆ ಬೀಳಲೆಂದು ಬಂದ ಮಗಳ ಕಲ್ಯಾಣವಾಗಲೆಂದು ಸಾಮಾನ್ಯ ಜನರು 'ಅಷ್ಟಪುತ್ರ ಸೌಭಾಗ್ಯವತೀ ಭವ', 'ಆಯುಷ್ಮಾನ್ ಭವ' ಎಂದು ಆಡಿದ ನುಡಿಗಳೆಂದರೆ ಸದಿಚ್ಛೆಗಳು ; ವರಗಳಲ್ಲ. ಅವುಗಳು ಪರಿಣಾಮಗಳನ್ನು ಬೀರಿಯಾವೆಂಬುದು ನಿಶ್ಚಿತವಿರುವುದಿಲ್ಲ. ಯೋಗ್ಯತೆ ಇದ್ದ ಭೃಗುವಿನ ವರದಿಂದ ಸಗರ ರಾಜನ ಪತ್ನಿಯಾದ ಸುಮತಿಗೆ ಅರವತ್ತುಸಾವಿರ ಗಂಡುಮಕ್ಕಳಾದವು. ವಿವಾಹವಾಗದೇ ಅಥವಾ ಯಾರೊಬ್ಬರ ಪತ್ನಿಯಾಗದೇ ಪುತ್ರಪ್ರಾಪ್ತಿಹೊಂದುವ ಇಚ್ಛೆ 'ಸೋಮದಾ' ಎಂಬ ಗಂಧರ್ವಿಯದಾಗಿತ್ತು. 'ಚುಲಿ' ಎಂಬ ಋಷಿಯು ಅಧಿಕಾರಬಲದಿಂದ ಅದನ್ನು ಪೂರೈಸಿದನು.

ದೇವರಲ್ಲಿ ಈ ಸಾಮರ್ಥ್ಯವು ಜನ್ಮಜಾತವಾಗಿರುತ್ತದೆ. ಹೀಗಿದ್ದರೂ ಮಾನವರಂತೆಯೇ ಅವರಿಗೂ ತಪಸ್ಸಿನ ಮೂಲಕ ಈ ಸಾಮರ್ಥ್ಯವನ್ನು ಹೆಚ್ಚಿಸುತ್ತ ಇರಬೇಕಾಗುತ್ತದೆ. ತಪಸ್ಸಿನ ಪ್ರಭಾವದಿಂದ ಶಾಪ/ವರಗಳನ್ನು ಕೊಡುವ ಸಾಮರ್ಥ್ಯವುಂಟಾಗುವುದು. ದೇವ, ದಾನವ ಮತ್ತು ಮಾನವ ಈ ಎಲ್ಲರಿಗೂ ತಮ್ಮ ಸಾಮರ್ಥ್ಯವನ್ನು ಹೆಚ್ಚಿಸಲು ತಪಶ್ಚರ್ಯೆ ಆವಶ್ಯಕವಿದೆ. ರಾಕ್ಷಸರು ಕೂಡ ಘೋರ ತಪಶ್ಚರ್ಯೆಗಳನ್ನು ಮಾಡಿ ಶಾಪ/ವರಗಳನ್ನು ಪಡೆದ ಉದಾಹರಣೆಗಳಿವೆಯಾದರೂ ಅವರು ಇತರರಿಗೆ ಶಾಪ/ವರಗಳನ್ನು ಕೊಟ್ಟ ದಾಖಲೆ, ರಾಮಾಯಣದಲ್ಲಿ ಒಂದು ಸಹ ಇಲ್ಲ. 'ಹರಿವಂಶ' ಎಂಬ ಗ್ರಂಥದಲ್ಲಿ ಹಿರಣ್ಯಕಶ್ಯಪನು ಮಾರೀಚ ಋಷಿಯ ಮಕ್ಕಳನ್ನು ಶಪಿಸಿದ ಉಲ್ಲೇಖವಿದೆ. 'ರಾಕ್ಷಸರಲ್ಲಿ ಶಾಪ ಕೊಡುವ ಯೋಗ್ಯತೆ ಇರಬಹುದು' ಎಂಬುದನ್ನು ನಿಖರಗೊಳಿಸಲು ಎರಡು ಉದಾಹರಣೆಗಳು ರಾಮಾಯಣದಲ್ಲಿವೆ. ಆದರೆ ಅಲ್ಲಿ ರಾಕ್ಷಸರು ನಿಜವಾದ ಶಾಪಕೊಟ್ಟ ಉಲ್ಲೇಖವಿಲ್ಲ. ಬ್ರಾಹ್ಮಣವೇಷದಲ್ಲಿ ಅತಿಥಿಯಾಗಿ ಬಂದ ರಾವಣನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದಿದ್ದರೆ ಆತನು ಶಾಪ ಕೊಡಬಹುದೆಂಬ ಭಯ ಸೀತೆಗೆ ಉಂಟಾಗಿತ್ತು. ಅದು ಕೇವಲ ಭಯವಾಗಿತ್ತು, ಅಷ್ಟೇ. ಅವಳು ಸರಿಯಾಗಿ ಉತ್ತರಿಸಿದ ಕಾರಣ ಆ ಪ್ರಸಂಗ ಉದ್ಭವಿಸಲಿಲ್ಲ. ರಾವಣನ ದೂತನಾಗಿ ಬಂದ 'ಶುಕ'ನೆಂಬ ರಾಕ್ಷಸನು ತನ್ನ ಪ್ರಾಣಕ್ಕೆ ಅಪಾಯವಿದೆ ಎಂದು ಕಂಡುಕೊಂಡು, "ನಾನು ಬಾಳಿಡೀ ಮಾಡಿದ ಸಮಸ್ತ ಪಾಪಕರ್ಮಗಳು ನಿನಗೆ ಅಂಟಲಿ !" ಎಂದು ಶ್ರೀರಾಮನಿಗೆ ಬೆದರಿಕೆ ಹಾಕಿದನು. ಆಗ ಶ್ರೀರಾಮನು ಅವನಿಗೆ ಅಭಯವನ್ನು ಕೊಟ್ಟು ಆತನ ಶಾಪವಾಣಿಯನ್ನು ನಿಷ್ಪ್ರಭಗೊಳಿಸಿದನು. ಕುಬೇರನು ತನ್ನ ಪುಷ್ಪಕ ವಿಮಾನವನ್ನು ಅಪಹರಿಸಿದ್ದಕ್ಕಾಗಿ ರಾವಣನನ್ನು ಶಾಪಸಮವಾದ ನುಡಿಗಳಲ್ಲಿ

ನಿಂದಿಸಿದನು. ಅದನ್ನು ಕುರಿತು ಯೋಚಿಸುವ ಕಾರಣವಿಲ್ಲ. ಕುಬೇರ ರಾವಣನ ಮಲತಾಯಿಯ ಮಗ ನಾಗಿದ್ದರೂ ಆತನು ರಾಕ್ಷಸನಿರಲಿಲ್ಲ. ಅಲ್ಲದೆ ಕುಬೇರನು ಲೋಕಪಾಲನಿದ್ದುದರಿಂದ ಅವನಿಗೆ ಈ ಅಧಿಕಾರ ವಿದ್ದಿತು. 'ಕೃಕಲಾಸ' ಎಂಬ ಒಂದು ಜಾತಿಯ ಓತೀಕೇತಕ್ಕೆ ಹಾಗೂ ಹನುಮಾನನಿಗೆ ವರಗಳನ್ನು ದಯಪಾಲಿಸಿದ್ದಾನೆ ; ತುಂಬುರು ಗಂಧರ್ವನಿಗೆ ಶಾಪ ಕೊಟ್ಟಿದ್ದಾನೆ.

ದೇವತೆಗಳು ಮತ್ತು ಮಾನವರು ಶಾಪ/ವರಗಳನ್ನು ಕೊಡುವ ಅರ್ಹತೆಯನ್ನು ಹೊಂದಿದ್ದರೂ, ದೇವರ ಒಲವು ವರಗಳನ್ನು ಕೊಡುವತ್ತ ಹೆಚ್ಚು. ಆದರೆ ಮಾನವರ ಒಲವು ಶಾಪಗಳನ್ನು ಕೊಡುವತ್ತ ಹೆಚ್ಚು. ರಾಕ್ಷಸರು ಶಾಪ ಇಲ್ಲವೆ ವರಗಳನ್ನು ನೀಡಿದ ದಾಖಲೆ ಎಲ್ಲಿಯೂ ಬಂದಿಲ್ಲ. ಹೀಗಿರುವುದರಿಂದ ಸತ್ತ್ವ, ರಜ ಮತ್ತು ತಮ ಈ ಗುಣಗಳಿಗೆ ತಕ್ಕಂತೆ ಶಾಪ ಮತ್ತು ವರಗಳನ್ನು ಕೊಡುತ್ತಿರಬಹುದು. ರಾಮಾಯಣ ದಲ್ಲಿದ್ದ ವರಗಳಲ್ಲಿ ದೇವರು ಅರವತ್ತು ವರಗಳನ್ನು ಕೊಟ್ಟಿದ್ದಾರೆ. ಮಾನವರು ಕೇವಲ ಹತ್ತೊಂಬತ್ತು ವರಗಳನ್ನು ಕೊಟ್ಟಿದ್ದಾರೆ. ಅರವತ್ತೊಂದು ಶಾಪಗಳಲ್ಲಿ ದೇವರಿಂದ ಬಂದ ಶಾಪಗಳು ಕೇವಲ ಏಳು ; ಮಾನವರು ಕೊಟ್ಟ ಶಾಪಗಳ ಸಂಖ್ಯೆ ನಾಲ್ವತ್ತಾಲ್ಕು ಆಗಿದೆ. ಮಾನವರು ಕೊಟ್ಟ ಶಾಪದಿಂದ ದೇವತೆಗಳೂ ಬಿಡುಗಡೆಹೊಂದಿಲ್ಲ. ಬ್ರಹ್ಮನು ಸೃಷ್ಟಿಕರ್ತನು, ಸರ್ವಾಧಿಕಾರಿ. ಹೀಗಾಗಿ ಅವನು ಕೊಟ್ಟ ವರಗಳ ಸಂಖ್ಯೆ ಇಪ್ಪತ್ತು ; ಎಲ್ಲರಿಗಿಂತ ಅಧಿಕವಾಗಿದೆಯೆಂದು ತೋರುವುದು ಸ್ವಾಭಾವಿಕವೂ ಅಹುದು.

ತಪಶ್ಚರ್ಯೆಯಂತೆಯೇ ಒಳ್ಳೆಯ ಚಾರಿತ್ರ್ಯ, ಸತ್ಯವರ್ತನೆ, ಕರ್ತವ್ಯದಕ್ಷತೆ ಮತ್ತು ಪಾತಿವ್ರತ್ಯ ಮುಂತಾದ ಗುಣಗಳಿಂದಾಗಿ ಅವುಗಳನ್ನು ಪಾಲಿಸುವ ವ್ಯಕ್ತಿಗಳ ಶಬ್ದೋಚ್ಚಾರಗಳಿಗೆ ಶಾಪ/ವರಗಳನ್ನು ಕೊಡುವ ಅಧಿಕಾರ ಪ್ರಾಪ್ತವಾಗುತ್ತದೆಂದು ನಂಬಲಾಗುತ್ತದೆ. ದಶರಥನು ಮತ್ತು ಶ್ರೀರಾಮನು ಈ ಅರ್ಹತೆಯನ್ನು ಹೊಂದಿದ್ದರು. ದಶರಥನು ಕೈಕೇಯಿಗೆ ವರಗಳನ್ನು ನೀಡಿದ್ದಾನೆ. ಅವುಗಳ ಬಗ್ಗೆ ಮತ್ತು ಪಾತಿವ್ರತ್ಯದ ಅಧಿಕಾರದ ಬಗ್ಗೆ ಮುಂದೆ ಸವಿಸ್ತಾರವಾಗಿ ಚರ್ಚಿಸಲಾಗಿದೆ. ಶ್ರೀರಾಮನು ತನ್ನ ಈ ಅಧಿಕಾರವನ್ನು ಅಷ್ಟಾಗಿ ಬಳಸಿಕೊಂಡಿಲ್ಲ. ಆತನು ಪ್ರಸ್ರವಣ ಪರ್ವತಕ್ಕೆ ಮತ್ತು ನದಿಗೆ (ಪ್ರತ್ಯಕ್ಷದಲ್ಲಲ್ಲ) ಇತ್ತ ಶಾಪವು ಪರೋಕ್ಷವಾಗಿದ್ದು ಆ ಷರತ್ತನ್ನು ಪಾಲಿಸಿದ ಕಾರಣ ಶ್ರೀರಾಮನ ಶಾಪದ ಪರಿಣಾಮವು ತಪ್ಪಿತು. ಶ್ರೀರಾಮನು 'ಮರುಪ್ರದೇಶ'ಕ್ಕೆ ಮತ್ತು ಅಲ್ಲಿಯ ಪ್ರಜೆಗಳಿಗೆ ವರವನ್ನು ಕೊಟ್ಟಿದ್ದಾನೆ. ಶಂಬೂಕನು ಬೇಡಿಕೊಂಡ ವರವನ್ನು ನೀಡದೆ ಅವನ ಬೇಡಿಕೆಯನ್ನು ತಳ್ಳಿಹಾಕಿದನು. ಸೀತೆಗೆ ವರವನ್ನು ಕೊಟ್ಟಿದ್ದರೂ ಅದು ಅವಳ ಪಾಲಿಗೆ ಶಾಪವೇ ಆಯಿತು.

ಶಾಪ/ವರ ಇವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ : ಒಂದರ ಪರಿಣಾಮದ ಸ್ವರೂಪವು ಸಂಹಾರಕ ; ಇನ್ನೊಂದರದು ಸಂರಕ್ಷಕವಿರುತ್ತದೆ. ಶತ್ರುಗಳ ನಾಶ, ಸಾವು, ವಧೆ, ಧ್ವಂಸ ಹಾಗೂ ಉಪದ್ರವ —ಇವು ಶಾಪಗಳ ಮುಖ್ಯ ಉದ್ದೇಶವಾಗಿರುತ್ತವೆ. ವರಗಳಲ್ಲಿ ಸದ್ಭಾವನೆಯಿರುವುದರಿಂದ ಮಂಗಲಕರ, ಉಪಕಾರದ, ಅಭೀಷ್ಟಚಿಂತನೆಯ ಸ್ವರೂಪ ಅವುಗಳದು. ಹಾಗೆ ನೋಡಿದರೆ ಮೃತ್ಯುವೆಂಬುದು ಶಾಪದ ವಿಷಯ ; ವರದ್ದಲ್ಲ. ಹೀಗಿದ್ದರೂ ರಾಮಾಯಣದಲ್ಲಿಯ ಒಂದು ವರವನ್ನು ಮೃತ್ಯುವಿನ ಬಗ್ಗೆ ಕೊಡಲಾಗಿದೆ. ಬ್ರಹ್ಮದೇವನು ಮೇಘನಾದನಿಗೆ ಮೃತ್ಯುವಿನ ವರವನ್ನು ಕೊಟ್ಟಿದ್ದಾನೆ (ವರಗಳ ಪಟ್ಟಿ ನೋಡಿ). ಈ ವರ ಒಂದು ಅಪವಾದ. ಸಂಪೂರ್ಣ ಅಮರತ್ವ ಸಿಗುವುದು ಸಾಧ್ಯವಿಲ್ಲವೆಂದು ತಿಳಿದುಕೊಂಡನಂತರ ಮೇಘನಾದನು ತನಗೆ ಯಾವ ಪರಿಸ್ಥಿತಿಯಲ್ಲಿ ಮರಣ ಬರಬೇಕೆಂಬುದನ್ನು ಸ್ಪಷ್ಟಪಡಿಸಿದನು ; ಅದಕ್ಕೆ ಬ್ರಹ್ಮನು 'ತಥಾಸ್ತು' ಎಂದನು.

ಶಾಪ/ವರಗಳನ್ನು ಕೊಡುವಾಗಿನ ಉದ್ಗಾರಗಳೊಡನೆ ಬೇರೆ ಕೆಲವು ಮಾಧ್ಯಮಗಳನ್ನು ಬಳಸುತ್ತಾರೆ. ಅವನ್ನು ಕೊಡುವ ವ್ಯಕ್ತಿ ಮತ್ತು ಪಡೆಯುವ ವ್ಯಕ್ತಿ ಇವರಲ್ಲಿಯ ಪರಸ್ಪರರ ದೈಹಿಕ ಸ್ಪರ್ಶವು ಪರಿಣಾಮದ ದೃಷ್ಟಿಯಿಂದ ಅತಿಮಹತ್ವದ್ದಿದೆ ಎಂದು ನಂಬಲಾಗಿದೆ.[21] ಸ್ಪರ್ಶದಲ್ಲಿ ವಾಹಕಶಕ್ತಿ ಅಧಿಕವಾಗಿರುತ್ತದೆ. ಆಶೀರ್ವದಿಸುವಾಗ ತಲೆಯ ಮೇಲೆ ಕೈ ಇಡುವುದು, ಬೆನ್ನ ಮೇಲೆ ಕೈ ಆಡಿಸುವುದು ರೂಢಿಯಲ್ಲಿವೆ. ಇದಕ್ಕೆ ಪ್ರತಿಯಾಗಿ ಶಾಪವನ್ನು ಉಚ್ಚರಿಸುವಾಗ ಸಿಟ್ಟಿನಿಂದ ಕೈಗಳು ಮೇಲೇಳುತ್ತವೆ. ಸ್ಪರ್ಶವು ಒಂದು ಮಾಧ್ಯಮವಿದ್ದಂತೆ 'ನೀರು' ಕೂಡ ಒಂದು ಮಾಧ್ಯಮವೆನ್ನಿಸಿದೆ. ಸಾಯಣಾಚಾರ್ಯರ ಮತದಂತೆ ಋಗ್ವೇದದಲ್ಲಿಯ 'ಜಲ' ಎಂಬ ಶಬ್ದಕ್ಕೆ ಶಾಪವೆಂದೇ ಅರ್ಥವಿದೆ. ದೇವತೆಗಳ ಅಭಿಷೇಕದ ನೀರು ಪವಿತ್ರ

ತೀರ್ಥವಾಗುತ್ತದೆ. ನೀರಿನಿಂದ ಸೂರ್ಯೋಪಾಸನೆಯಲ್ಲಿ ಅರ್ಘ್ಯವನ್ನು ಕೊಡುತ್ತಾರೆ; ನೀರನ್ನು ಶ್ರಾದ್ಧವಿಧಿಯಲ್ಲಿ ತರ್ಪಣಬಿಡುವಾಗ ಬಳಸುತ್ತಾರೆ. ಶಾಪವನ್ನು ಕೊಡುವಾಗ ಕೈಯಲ್ಲಿ ನೀರನ್ನು ಹಿಡಿದುಕೊಂಡಿರುತ್ತಾರೆ. ಸೌದಾಸರಾಜನು ವಸಿಷ್ಠನಿಗೆ ಪ್ರತಿಶಾಪವನ್ನು ಕೊಡುವಾಗ ಕೈಯಲ್ಲಿ ನೀರನ್ನು ಹಿಡಿದುಕೊಂಡಿದ್ದನು.

ಸೌದಾಸರಾಜನೂ ಸಿಟ್ಟಿನಿಂದ ವಸಿಷ್ಠನನ್ನು ಶಪಿಸಲೆಂದು ಕೈಯಲ್ಲಿ ನೀರನ್ನು ತೆಗೆದುಕೊಂಡನು ;[22] ಆತನ ಪತ್ನಿಯು ಅದನ್ನು ನಿಷೇಧಿಸಿದಳು... ತರುವಾಯ ಈ ಕೋಪಪೂರಿತ ತೇಜ ಹಾಗೂ ಬಲಗಳಿಂದ ಯುಕ್ತವಾದ ನೀರನ್ನು ಆ ಧರ್ಮಾತ್ಮನು ತನ್ನ ಪಾದಗಳ ಮೇಲೆ ಬಿಟ್ಟುಕೊಂಡನು. ಹೀಗಾಗಿ ಸೌದಾಸನು 'ಕಲ್ಮಾಷಪಾದ'ನಾದನು. ಅದೆಷ್ಟೋ ಸಲ ಶಾಪ ಪಡೆಯುವ ವ್ಯಕ್ತಿಯು ಹತ್ತಿರವಿರದಿದ್ದರೂ ಶಾಪವನ್ನು ಕೊಡಲಾಗುತ್ತಿತ್ತು. ಶ್ರಮಕಋಷಿಯ ಮಗನಾದ 'ಶೃಂಗಿ'ಋಷಿಯು ಪರೀಕ್ಷಿತನಿಗೆ "ಏಳು ದಿನಗಳಲ್ಲಿ ಸಾವು ಬರುವುದು" ಎಂಬ ಶಾಪವಾಣಿಯನ್ನು ನುಡಿದಾಗ ಪರೀಕ್ಷಿತನು ಅವನೆದುರಿನಲ್ಲಿ ಇರಲಿಲ್ಲ. "ಭರತನು ಯುವರಾಜ್ಯಪದವನ್ನು ಸ್ವೀಕರಿಸಿದರೆ, ಆತನಿಂದ ನಡೆಯಬಹುದಾದ ಶ್ರಾದ್ಧಾದಿಕ್ರಿಯೆಗಳು ನನಗೆ ತಲುಪಕೂಡದು !" ಎಂಬ ಶಾಪವಾಣಿಯನ್ನು ದಶರಥನು ನುಡಿದಾಗ ಭರತ ತನ್ನ ಅಜ್ಜನ ಊರಲ್ಲಿದ್ದನು. ಶಾಪ ಅಥವಾ ವರ ಹೊಂದುವ ವ್ಯಕ್ತಿ ಸನಿಹದಲ್ಲಿರದಿದ್ದರೆ ಪ್ರತೀಕಗಳ ಮಾಧ್ಯಮದಿಂದ ಕೂಡ ಶಾಪ/ವರಗಳನ್ನು ಕೊಡಲಾಗುತ್ತದೆ. ಇವು ಕೂಡ ಆ ವ್ಯಕ್ತಿಗಳಿಗೆ ಸರಿಯಾಗಿ ತಾಗುತ್ತವೆ ಎಂದು ನಂಬುತ್ತಾರೆ. ಆಹಾರ, ಪಾನೀಯ, ಬೊಂಬೆ ಆದಿಗಳನ್ನು ಪ್ರತೀಕವೆಂದು ಬಳಸುತ್ತಾರೆ.

ಶಾಪಹೊಂದಿದ ವ್ಯಕ್ತಿ ಶಾಪವನ್ನು ಸ್ವೀಕರಿಸಲೇಬೇಕು. ಅದನ್ನು ನಿರಾಕರಿಸುವ ಸ್ವಾತಂತ್ರ್ಯ ಅವನಿಗೆ ಇರುವುದಿಲ್ಲ. ಹೀಗಾಗಿ ಶಾಪಗಳೆಲ್ಲವೂ ಸ್ವೀಕೃತವಾದವುಗಳೇ ಆಗಿರುತ್ತವೆ. ವರದ ವಿಷಯದಲ್ಲಿ ಹೇಳುವುದಾದರೆ ವರ ಪಡೆದವನು ಅದನ್ನು ಸ್ವೀಕರಿಸಲೂಬಹುದು; ಬೇಡವೆಂದು ನಿರಾಕರಿಸಲೂಬಹುದು. ಅದು ಅವನ ಇಚ್ಛೆಯನ್ನವಲಂಬಿಸಿದುದು. ಅವನಿಗೆ ಆ ವರ ಸರಿ ಕಾಣದಿದ್ದರೆ ಅವನು ಅದನ್ನು ಸ್ವೀಕರಿಸನು. ಬೇಡಿಕೊಂಡ ವರಗಳಿಂದ ಫಲ ದೊರೆಯುವುದರಿಂದ 'ಯಾಚಿತ' ವರಗಳನ್ನು ಸಾಮಾನ್ಯವಾಗಿ ಯಾರೂ ನಿರಾಕರಿಸುವುದಿಲ್ಲ. ಏಕೆಂದರೆ ಅವುಗಳಿಂದಾಗಿ ಯಾಚಕನ ಬಯಕೆ ಈಡೇರುತ್ತದೆ. ರಾಮಾಯಣದಲ್ಲಿ ಮಾತ್ರ ಈ ಬಗ್ಗೆ ಒಂದು ಅಪವಾದವಿದೆ. 'ಇಲ' ಎಂಬಾತನು ಬೇಡಿಕೊಂಡ ವರವನ್ನು ನಂತರ ಬೇಕಿಲ್ಲವೆಂದಿದ್ದಾನೆ. ಈ ರಾಜನು ಒಂದು ವಿಶೇಷ ಪ್ರದೇಶವನ್ನು ಸೇರಿದಾಗ ಅಲ್ಲಿಯ ಸ್ಥಲಮಾಹಾತ್ಮ್ಯದಿಂದ 'ಸ್ತ್ರೀ' ಆಗಿ ಪರಿವರ್ತನೆಹೊಂದಿದನು. ಆಗ ಆತನು ಹತ್ತಿರದಲ್ಲಿದ್ದ ಶಿವನ ಬಳಿ ಹೋಗಿ ವರವನ್ನು ಯಾಚಿಸಿದನು. ಶಿವನು "ಪುರುಷತ್ವ ಒಂದನ್ನು ಬಿಟ್ಟು ಬೇರೆ ಯಾವುದನ್ನಾದರೂ ಬೇಡಿಕೊ !" ಎಂದನು. ಇಲರಾಜನಿಗೆ ಪುರುಷತ್ವವೇ ಬೇಕಿತ್ತು. ಹೀಗಾಗಿ ಶಿವನು ಕೊಡಬಯಸಿದ ವರವನ್ನು ಇಲನು ನಿರಾಕರಿಸಿದನು. ಶ್ರೀರಾಮನು ಸಹ ಶರಭಂಗ ಋಷಿಯು ಕೊಟ್ಟ ವರವನ್ನು 'ಬೇಡ'ವೆಂದನು. ಅದೇ ರೀತಿ ಸೀತೆಯು ಅನಸೂಯೆಯಿತ್ತ ವರವನ್ನು ಸ್ವೀಕರಿಸಲಿಲ್ಲ. ಈ ಬಗೆಯಾಗಿ ಅಸ್ವೀಕೃತವಾದ ವರಗಳು ರಾಮಾಯಣದಲ್ಲಿ ಸಾಕಷ್ಟಿವೆ. ವರಗಳಲ್ಲಿ ಯಾಚಿತ ವರ ಮತ್ತು ಅಯಾಚಿತ ವರ ಎಂಬ ಎರಡು ಪ್ರಕಾರಗಳಿವೆ ; ಅದರ ಉಲ್ಲೇಖವು ಮುಂದೆ ಬಂದಿದೆ. ಶಾಪಗಳನ್ನು ಯಾರೂ ಬೇಡಿಕೊಳ್ಳುವದಿಲ್ಲ. ಹೀಗಿರುವದರಿಂದ ಶಾಪಗಳೆಲ್ಲ 'ಅಯಾಚಿತ'ವಿರುತ್ತವೆ. ಯಾಚಿತ ಶಾಪ ಎಂಬ ಬಗೆಯಿಲ್ಲ. ಉಶ್ಶಾಪ ಮಾತ್ರ ಯಾಚಿತ, ಅಯಾಚಿತ ಎಂಬ ಎರಡೂ ಬಗೆಯವುಗಳಿವೆ. ನಮಸ್ಕರಿಸಿದನಂತರ ಆಶೀರ್ವದಿಸುತ್ತಾರೆ. ಇದೂ ಸಹ ಅಯಾಚಿತ ಸಂಗತಿ. 'ಆಶೀರ್ವಾದ' ಒಂದು ಔಪಚಾರಿಕ ಭಾಗವಿರುತ್ತದೆ. ಕೆಲವೊಮ್ಮೆ ಆಶೀರ್ವಾದವನ್ನು ಬೇಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಯಾಚಿತ ಆಶೀರ್ವಾದವು ಕೂಡ ಅಯಾಚಿತವಿದ್ದಂತೆಯೇ ಇರುತ್ತದೆ. ಸದಿಚ್ಛೆಯ ಉದ್ಗಾರ ಸ್ವಯಂಸ್ಫೂರ್ತವಾಗಿರುವದರಿಂದ ಅಯಾಚಿತವಾಗಿರುತ್ತದೆ.

ಶಾಪ ಅಥವಾ ವರಗಳನ್ನು ಕೊಡುವ ಕ್ರಿಯೆಯಲ್ಲಿ ತೀವ್ರವಾದ ಭಾವೋದ್ರೇಕವಿರುತ್ತದೆ. ಶಾಪ ಹಾಗೂ ವರ, ಇವೆರಡರಲ್ಲಿಯ ಭಾವನೆಯ ಸ್ವರೂಪವು, ಅದರ ವೇಗ, ಉದ್ಗಾರದ ರೀತಿ ಇವೆಲ್ಲ ತೀರ ಭಿನ್ನವಾಗಿರುತ್ತವೆ. ಶಾಪವು ಕೋಪದಿಂದ ಉದ್ಭವಿಸುತ್ತಿದ್ದು, ಶಾಪ ಕೊಡುವವನು ಪ್ರಕ್ಷುಬ್ಧಗೊಳ್ಳುತ್ತಾನೆ.

ಇದರಿಂದ ಅವನು ತನ್ನ ಮನಸ್ಸಿನ ಮೇಲಿನ ಹಿಡಿತವನ್ನು ಕಳೆದುಕೊಳ್ಳುತ್ತಾನೆ. ಕೋಪವು ಹೆಚ್ಚಾದಷ್ಟೂ ಮನಸ್ಸಿನ ನಿಯಂತ್ರಣ ಸಡಿಲವಾಗುತ್ತದೆ. ಕೋಪಗೊಂಡಾಗ ನಾವು ಆಡುವದೇನು ? ಮಾಡುತ್ತಿರುವದೇನು? ಎಂಬುದರ ಪ್ರಜ್ಞೆ ಇರುವುದಿಲ್ಲ. ಹೀಗಾಗಿ ಮಾತುಗಳು ತಾವಾಗಿಯೇ ಹೊರಬರುತ್ತವೆ. ಅವುಗಳ ವೇಗ ಬಹುಶಃ ಕಿಂಚಿತ್ತೂ ಕಡಿಮೆಯಾಗದು. ಕ್ರೋಧವು ಹೆಚ್ಚಾದಂತೆ ತಾರತಮ್ಯಗಳ ಪರಿವೆ ಉಳಿಯದೆ ಸಂಮೋಹ ಹುಟ್ಟಿಕೊಳ್ಳುತ್ತದೆ. ಈ ನಂತರ ಸಂಮೋಹದಿಂದಾಗಿ ಸ್ಮೃತಿಭ್ರಂಶವಾಗುತ್ತದೆ, ಶಬ್ದಗಳ ಆವೇಗ ತೀವ್ರ ಗೊಳ್ಳುತ್ತದೆ. ಆಡಿದ ನುಡಿಗಳ ಪರಿಣಾಮದತ್ತ ಗಮನವಿರುವುದಿಲ್ಲ. ಕೋಪದಿಂದ ತಾಳ್ಮೆ ತಪ್ಪಿ ಸಾರಾಸಾರ ವಿಚಾರ ಇಲ್ಲದಾಗುತ್ತದೆ. ಶಬ್ದಗಳು ಬಾಯಿಯಿಂದ ಸಿಡಿದುಬರುತ್ತವೆ.[23] ವರವನ್ನು ಕೊಡುವಾಗ ಮನಸ್ಸು ನಿಚ್ಚಳವಾಗಿ, ನಿರ್ಮಲವಾಗಿ ಸಂತೋಷಭರಿತವಾಗಿರುತ್ತದೆ. ಹೀಗಾಗಿ ಭಾವನೆಗಳ ಉದ್ರೇಕ ಶಾಂತವೂ, ಮಂದವೂ ಆಗಿರುತ್ತದೆ. ನುಡಿಯುವ ಮುನ್ನ ಪರಿಣಾಮಗಳ ಮುಂದಾಲೋಚನೆ ಸಾಧ್ಯವಿರುತ್ತದೆ. ಮನೋಭಾವವು ನಿಯಂತ್ರಣದಲ್ಲಿರುತ್ತದೆ. ಶಾಪವನ್ನುದ್ಗರಿಸುವಾಗಿನ ಮನೋಭಾವ ಮತ್ತು ವರ ಕೊಡುವ ಸಮಯದಲ್ಲಿಯ ಮನೋಭಾವ ಇವುಗಳ ಸ್ವರೂಪದಲ್ಲಿ ತುಂಬಾ ಭಿನ್ನತೆಯಿದೆ. ಆದರೆ ಅಯಾಚಿತ ವರಗಳನ್ನು ವಿಚಾರಮಾಡಿ ಕೊಡಲು ಸಾಧ್ಯವಿದೆ. ಹೀಗಾಗಿ ಅವರೆಡರ ಸ್ವರೂಪ ಹಾಗೂ ಪರಿಣಾಮಗಳು ಭಿನ್ನವಾಗಿರುತ್ತವೆ. ರಾಕ್ಷಸರಿಗೆ ವರಗಳನ್ನು ಕೊಡುವಾಗ ಬ್ರಹ್ಮನ ಹಿಡಿತ ತಪ್ಪಿದಂತೆ ತೋರಿಬರುತ್ತದೆ. ಬ್ರಹ್ಮದೇವನು ಕುಂಭಕರ್ಣನಿಗೆ ವರವನ್ನು ಕೊಡುವ ಮೊದಲು, ಬೇರೆ ದೇವತೆಗಳು "ವರವನ್ನು ಕೊಡಬೇಡಿ !" ಎಂದು ಬ್ರಹ್ಮನನ್ನು ಪ್ರಾರ್ಥಿಸಿದ್ದರು. ರಾವಣನಿಗೆ ವರಗಳನ್ನು ಕೊಟ್ಟನಂತರ, ಆತನಿಂದ ಎಲ್ಲರಿಗೂ ಹೆಚ್ಚಿನ ಉಪದ್ರವ ಶುರುವಾಯಿತು. ಈ ಆತಂಕದಿಂದ ಪಾರಾಗುವ ಮಾರ್ಗವನ್ನು ಕಂಡುಹಿಡಿಯಬೇಕಾದ ಪರಿಸ್ಥಿತಿ ಬಂದೊದಗಿತು.

ಶಿಕ್ಷೆಯನ್ನು ವಿಧಿಸುವ ಉದ್ದೇಶ ಶಾಪದಲ್ಲಿದೆ ; ಶುಭದ ಉದ್ದೇಶ ವರದಲ್ಲಿ ಇರುತ್ತದೆ. ವರದಲ್ಲಿಯ ಶಬ್ದಗಳ ಸಾಮರ್ಥ್ಯ ಹೆಚ್ಚಿರುತ್ತದೆ ; ಶಾಪದಲ್ಲಿ ಇಚ್ಛೆಯ ಬಲ ಅಧಿಕವಿರುತ್ತದೆ.[24] ಶಾಪದಲ್ಲಿ ವಿಚಾರಕ್ಕೆ ಮಹತ್ವವಿದ್ದರೂ ಯೋಚಿಸಿಯೇ ಶಾಪವನ್ನೀಯಲಾಗುತ್ತದೆಂದಿಲ್ಲ.

## ಶಾಪಗಳು

ಶಾಪವನ್ನು ಯಾರಿಗೆ, ಯಾವ ಕಾರಣಕ್ಕಾಗಿ ಕೊಡುತ್ತಾರೆ ? ವಿನಾಕಾರಣ ಉಪದ್ರವವನ್ನುಂಟುಮಾಡುವ ವ್ಯಕ್ತಿಗೆ, ಅಪಕೃತ್ಯವನ್ನೆಸಗುವ ವ್ಯಕ್ತಿಗೆ, ಆತನು ನಾಶವಾಗಬೇಕು ! ಆತನಿಗೆ ತಕ್ಕ ಶಾಸ್ತಿಯಾಗಬೇಕು !— ಎಂಬ ಭಾವನೆಯಿಂದ ನುಡಿದ ಕಟುಶಬ್ದಗಳೆಂದರೇನೇ ಶಾಪ. ಶಾಪವು ಕೋಪಜನಿತವಾದುದರಿಂದ ಅದರಲ್ಲಿ ಒಂದು ವಿಧದ ಅತಿರೇಕದ ಆಕ್ರೋಶ ಇರುತ್ತದೆ. ಶಾಪಗಳು ಎರಡು ಬಗೆಯವಾಗಿವೆ. ಮಾಟಮೋಡಿಗಳಿಂದ (ಯಾವಾತ್ಮಕ), ಯಂತ್ರತಂತ್ರಗಳಿಂದ, ಅಂಧಶ್ರದ್ಧೆಯಿಂದ ಕೊಟ್ಟ ಶಾಪಗಳಿಗೆ ಅಭಿಚಾರಾತ್ಮಕ ಶಾಪಗಳೆನ್ನು ತ್ತಾರೆ. ಇನ್ನೊಂದು ವಿಧದ ಶಾಪಗಳೆಂದರೆ ಧಾರ್ಮಿಕ ಶಾಪಗಳು. ಕೆಲವು ಶಾಪಗಳು ಶರತ್ತುಗಳಿಗೆ ಒಳ ಪಟ್ಟಿರುತ್ತವೆ. ಆ ಶರತ್ತುಗಳಂತೆ ವರ್ತಿಸಿದರೆ ಶಾಪದ ಪರಿಣಾಮ ತಾಗುವದಿಲ್ಲ. ಯಾವ ವ್ಯಕ್ತಿಗೆ ಶಾಪವನ್ನು ಕೊಡುವುದಿದೆಯೋ ಆ ವ್ಯಕ್ತಿಯಲ್ಲಿ ಸುಧಾರಣೆಯಾಗಬೇಕು ! ಆತನಿಗೆ ಹಿಂಸೆಯಾಗಬಾರದೆಂಬ ಮನೋ ಭಾವವು ಧಾರ್ಮಿಕ ಮತ್ತು ಶರತ್ತುಗಳಿಗೆ ಒಳಪಟ್ಟ ಶಾಪಗಳಲ್ಲಿರುತ್ತದೆ. ಧಾರ್ಮಿಕ ಶಾಪವನ್ನು ಕೊಡುವಾತ ನಲ್ಲಿ ಶಾಪವನ್ನು ಪಡೆಯುವವನ ಬಗ್ಗೆ ಸಹಾನುಭೂತಿ ಇರುವದರಿಂದ ಮತ್ತು ನೀತಿಯ ಅರಿವು ಇರುವುದರಿಂದ ಧಾರ್ಮಿಕ ಶಾಪಗಳು ಶರತ್ತಿಗೆ ಅಧೀನವಾಗಿರುತ್ತವೆ. ಈ ಬಗೆಯ ಶರತ್ತಿನ ಶಾಪಗಳು ಧಾರ್ಮಿಕ ಶಾಪ ಗಳಾಗಿರುತ್ತವೆ. ಸ್ವಂತದ ಐಹಿಕ ಸುಖಸಮೃದ್ಧಿ, ಉದ್ದಿಷ್ಟಸಾಧನೆಗಳಿಗಾಗಿ ನಾಶ, ಮೃತ್ಯು, ಹತ್ಯೆ, ಸೋಲು ಇತ್ಯಾದಿಗಳನ್ನು ಬಯಸಿ ಅಭಿಚಾರಾತ್ಮಕ ಶಾಪಗಳನ್ನು ಕೊಡುತ್ತಾರೆ. ಕೋಪಗೊಂಡ ಮುನಿಗಳು ಬಹಳಷ್ಟು ಮಟ್ಟಿಗೆ ಅಭಿಚಾರಾತ್ಮಕ ಶಾಪಗಳನ್ನು ಕೊಟ್ಟಿದ್ದಾರೆ. ವಸಿಷ್ಠನು ಸೌದಾಸ ಹಾಗೂ ನಿಮಿರಾಜನಿಗೆ ಕೊಟ್ಟ ಶಾಪಗಳು, ಅದೇ ರೀತಿಯಲ್ಲಿ ವಿಶ್ವಾಮಿತ್ರನು ತನ್ನ ಮಕ್ಕಳಿಗೆ ಹಾಗೂ ವಸಿಷ್ಠನ ಮಕ್ಕಳಿಗೆ ಕೊಟ್ಟ ಶಾಪಗಳು ಅಭಿಚಾರಾತ್ಮಕವಾಗಿದ್ದವು. ತದ್ವಿರುದ್ಧವಾಗಿ ಭೃಗು ಮತ್ತು ಅಂಗೀರಸ ಋಷಿಯ ವಂಶಜರಾದ ಮುನಿಗಳು

ಹನುಮಂತನಿಗೆ ಸಹಾನುಭೂತಿಪೂರ್ಣ ಶಾಪಗಳನ್ನು ಕೊಟ್ಟಿದ್ದರು. ಹನುಮಂತನು ಅವರ ಆಶ್ರಮದಲ್ಲಿಯ ಯಜ್ಞಪಾತ್ರೆಗಳನ್ನು, ನಾರುಬಟ್ಟೆ ಮೊದಲಾದವುಗಳನ್ನು ಧ್ವಂಸಗೊಳಿಸುತ್ತಿದ್ದ ಕಾರಣ ಮುನಿಗಳು ಕೋಪ ಗೊಂಡಿದ್ದರೂ ಶಾಪವು ಸೌಮ್ಯವಾಗಿರಬೇಕೆಂಬುದು ಅವರ ಇಚ್ಛೆಯಿತ್ತು. ವಾಲ್ಮೀಕಿಯು ಋಷಿಗಳ ಮನಃ ಸ್ಥಿತಿಯನ್ನು ಯಥಾಯೋಗ್ಯವಾಗಿ ವರ್ಣಿಸಿದ್ದಾನೆ. 'ಅವನ ವಿನಾಶವನ್ನು ಬಯಸದೆ, ವಿಶೇಷ ಸಂತಪ್ತರಾಗದೆ ಋಷಿಗಳು ಶಾಪವನ್ನು ಕೊಟ್ಟರು.' ಶಾಪದ ಉತ್ತರಾರ್ಧದಲ್ಲಿ ಉಃಶಾಪವೂ ಇದೆ.[25]

ಶಾಪ ಕೊಡುವದರಲ್ಲಿ ಇಚ್ಛೆಯಷ್ಟೇ ಪ್ರಾಧಾನ್ಯ ಮಾಧ್ಯಮಕ್ಕೂ ಇರುತ್ತದೆ. ನೀರು ಬಲು ಪ್ರಭಾವಿಯಾದ ಪ್ರವಾಹೀ ಮಾಧ್ಯಮವೆಂದು ಪರಿಗಣಿಸಲ್ಪಟ್ಟಿದೆ. ನೆತ್ತರ, ಮೈಮುಟ್ಟುವುದು, ಆಹಾರ ಹಾಗೂ ನೀರು ಇವು ಕೂಡ ಪ್ರಭಾವೀ ಮಾಧ್ಯಮಗಳು.[26]

ಶಾಪದ ಪರಿಣಾಮವನ್ನು ತಪ್ಪಿಸುವುದು ಸಾಧ್ಯವಿಲ್ಲ ; ಶಾಪದ ನುಡಿಗೆ ತಕ್ಕ ಪರಿಣಾಮ ಉಂಟಾಗಿಯೇ ತೀರುವುದು. ಪರಿಣಾಮವೇ ಆಗದಿದ್ದರೆ ಅದು ಶಾಪವೆನಿಸದು. ಏಕೆಂದರೆ ಶಾಪವು ಎಂದಿಗೂ ಸುಳ್ಳಾಗುವದಿಲ್ಲ. ಉದ್ಗರಿಸಿದ ನುಡಿಗಳನ್ನು ಹಿಂತೆಗೆದುಕೊಳ್ಳುವಂತಿಲ್ಲ ; ಅದರಲ್ಲಿ ಬದಲಾವಣೆಯೂ ಅಸಾಧ್ಯ. ಬೇರೆ ವರ ಅಥವಾ ಉಃಶಾಪದಿಂದ ಮಾತ್ರ ಅದರ ತೀವ್ರತೆಯನ್ನು, ಕಾಲಾವಧಿಯನ್ನು ಕಡಿಮೆಗೊಳಿಸಬಹುದು. ಕಟ್ಟಳೆಯ ಶಾಪಗಳ ಪರಿಣಾಮಗಳು ಶರತ್ತಿನ ಪಾಲನೆಯನ್ನು ಅವಲಂಬಿಸಿ ಉಂಟಾಗುತ್ತವೆ. ಶಾಪದ ಪರಿಣಾಮಗಳು ಭವಿಷ್ಯಕಾಲದಲ್ಲಿ ಗೋಚರವಾಗುವವು. ಕೆಲವು ಶಾಪದ ಪರಿಣಾಮಗಳು ತಕ್ಷಣ ಆಗಬಹುದು. ಕೆಲವೊಮ್ಮೆ ನಂತರದ ಜನ್ಮದಲ್ಲಿ ಈ ಪರಿಣಾಮಗಳು ಕಂಡುಬರಬಹುದು. ಗೌತಮಋಷಿಯ ಶಾಪದಿಂದ ಇಂದ್ರನ ವೃಷಣಗಳು ಬಿದ್ದುಹೋದವು. ವಸಿಷ್ಠಪುತ್ರರ ಶಾಪದಿಂದ ತ್ರಿಶಂಕುವು ಒಂದೇ ರಾತ್ರಿಯಲ್ಲಿ ಚಾಂಡಾಲಯೋನಿಗೆ ಸೇರಿದನು. ದಂಡರಾಜನಿಗೆ ಹಾಗೂ ದಂಡಕಾರಣ್ಯಕ್ಕೆ ಭಾರ್ಗವನು ಕೊಟ್ಟ ಶಾಪದ ಪರಿಣಾಮವು ಏಳು ದಿನಗಳಲ್ಲಿ ಕಂಡುಬಂದಿತು. ವಸಿಷ್ಠಪುತ್ರರಿಗೆ ವಿಶ್ವಾಮಿತ್ರನು ಕೊಟ್ಟ ಶಾಪದ ಪರಿಣಾಮದ ಕಾಲಾವಧಿಯು ಮಾತ್ರ ಏಳು ಶತ ಜನ್ಮದವರೆಗೆ ಇತ್ತು. ಶಾಪ ಕೊಟ್ಟ ದಿನದಿಂದಲೇ ಅದರ ಕಾಲಾವಧಿಗೆ ಶುರುವಾಯಿತು.[27]

ದುರ್ವಾಸನು ಶಾಪವನ್ನು ನುಡಿದಿದ್ದರೆ ಸಂತತಿಗೆ ಹಾನಿ ತಟ್ಟಬಹುದಿತ್ತು. ಶಾಪದ ಪರಿಣಾಮ-ಶಕ್ತಿಯ ಬಗ್ಗೆ ವೆಸ್ಟರ್‌ಮಾರ್ಕನು ಹೀಗೆ ಹೇಳಿದ್ದಾನೆ :[28]

ಶಾಪ ಕೊಡುವ ಅರ್ಹತೆಯು ತಪಸ್ಸಿನಿಂದ ಲಭಿಸುವಂತೆಯೇ ಶುದ್ಧವರ್ತನೆಯಿಂದಲೂ ಲಭಿಸುತ್ತದೆ. ಪತಿವ್ರತೆಯ ನುಡಿ ಸುಳ್ಳಾಗುವುದಿಲ್ಲ, ಎಂದು ನಂಬಲು ಕಾರಣವೆಂದರೆ ಅದೊಂದು ವ್ರತವಾಗಿದ್ದುದು. ವ್ರತಪಾಲನೆಯಿಂದ ಆತ್ಮಬಲ ವರ್ಧಿಸುತ್ತದೆ. ಪ್ರಾಚೀನ ಕಾಲದ ಭಾರತೀಯ ಸಮಾಜವ್ಯವಸ್ಥೆಯಲ್ಲಿ ಬ್ರಾಹ್ಮಣರಿಗೆ ಶ್ರೇಷ್ಠತೆ ಹಾಗೂ ಪೂಜ್ಯತೆಗಳು ಪ್ರಾಪ್ತವಾಗಿದ್ದವು. ಅವರನ್ನು ಭೂಸುರರೆಂದು ಗೌರವಿಸುತ್ತಿದ್ದರು. ಅವರು ಆಡಿದ ಮಾತು ಸುಳ್ಳಾಗುತ್ತಿರಲಿಲ್ಲ. ಬ್ರಾಹ್ಮಣ್ಯದ ಪಾಲನೆಯಿಂದ ಇಬ್ಬರು ಬ್ರಾಹ್ಮಣರು ನೃಗರಾಜನನ್ನು ಶಪಿಸಲು ಶಕ್ತರಾದರು. ತಂದೆ-ತಾಯಿ, ಗುರುಗಳು, ಜ್ಞಾನವಂತರು, ಶ್ರೇಷ್ಠರು, ಹಿರಿಯರು ಆಡಿದ ನುಡಿಯಲ್ಲಿ ಶಾಪದ ಸಾಮರ್ಥ್ಯವಿರುವ ಸಾಧ್ಯತೆ ಇದೆ. ಕೊನೆಯುಸಿರಿನಲ್ಲಿದ್ದ ವ್ಯಕ್ತಿಯ ಶಬ್ದಗಳು ಶಾಪದಂತೆ ಪರಿಣಾಮಕಾರಿಯಾಗಿರುತ್ತವೆ. ದಶರಥನಿಗೆ ಶ್ರವಣನ ಪಿತನು, ಅದೇ ರೀತಿ ಅನರಣ್ಯರಾಜನು ರಾವಣನಿಗೆ ಉದ್ದೇಶಿಸಿ ಕೊಟ್ಟ ಶಾಪಗಳು ಕೊನೆಯುಸಿರಿನ ನುಡಿಗಳಾಗಿವೆ. ವೇದವತಿಯ ಪ್ರತಿಜ್ಞೆಯು ಅವಳು ಅಗ್ನಿಪ್ರವೇಶ ಮಾಡುವ ಕೊನೆಯ ಗಳಿಗೆಯದಾಗಿದೆ.

ಕೆಲವು ಸಲ ಶಾಪದ ಫಲವು ವರದಂತಾಗುತ್ತದೆ. "ಕಣ್ಣೆದುರು ಬಂದ ಕನ್ಯೆಯು ಗರ್ಭಧರಿಸುವಳು !" ಎಂಬ ಪುಲಸ್ತ್ಯನು ಆಡಿದ ಶಾಪವನ್ನು ಗಮನಿಸದ ಕಾರಣ ತೃಣಬಿಂದುಕನ್ಯೆಯು ಗರ್ಭವತಿಯಾದಳು. ನಂತರ ಕೆಲವೇ ದಿನಗಳಲ್ಲಿ ಅವಳಿಗೆ ಪುಲಸ್ತ್ಯನ ಪತ್ನಿಯಾಗುವ ಯೋಗವು ಬಂದೊದಗಿತು. ವಾಲ್ಮೀಕಿಯ ಶಾಪದಿಂದಾಗಿ ರಾಮಾಯಣದ ನಿರ್ಮಿತಿಯಾಗಿ ಅದು ಸರ್ವಲೋಕಕ್ಕೆ ಶಿರಸಾವಂದ್ಯವಾಯಿತು. 'ಹಂತ ತರ್ಕಮಂಡಿತಃ ಸಂಸಾರಃ'[29] ಎಂಬ ಶಬ್ದಗಳಿಂದ ಭವಭೂತಿಯು ಆ ಶಾಪವನ್ನು ಗೌರವಿಸಿದ್ದಾನೆ. ಬ್ರಹ್ಮನು ಸಹ ಪ್ರಸನ್ನನಾಗಿ ವಾಲ್ಮೀಕಿಗೆ ವರವನ್ನಿತ್ತನು ; ಅಲ್ಲದೆ ರಾಮಾಯಣವನ್ನು ಬರೆಯಲು ಪ್ರೇರೇಪಿಸಿದನು. ಭೃಗುಮುನಿಯು ವಿಷ್ಣುವಿಗೆ ಶಾಪವನ್ನು ಕೊಟ್ಟ ಕಾರಣ ವಿಷ್ಣುವು ಮಾನವಜನ್ಮವನ್ನು ತಾಳಿದನು. ದುಷ್ಯರ

ನಾಶಮಾಡಿ ತನ್ನ ಉಜ್ವಲ, ನಿಷ್ಕಲಂಕ ವರ್ತನೆಯಿಂದ ಆದರ್ಶಮಾನವತೆಯನ್ನು ತೋರಿ ಜಗತ್ತಿಗೆ ಶುಭ ವನ್ನುಂಟುಮಾಡಿದನು.

ಶಾಪವನ್ನು ನುಡಿಯುವುದು ಒಳ್ಳೆಯದೆಂದು ಭಾವಿಸುವದಿಲ್ಲ. ವೈದಿಕ ಆರ್ಯರು ಶಾಪ ಕೊಡುವುದನ್ನು ನಿಷೇಧಿಸಿದ್ದಾರೆ. "ಸಕಾರಣ ಇಲ್ಲವೇ ನಿಷ್ಕಾರಣವಾಗಿ ಶಪಿಸುವವನು ಸಿಡಿಲೆರಗಿದ ಮರದಂತೆ ಸುಟ್ಟು ಹೋಗಲಿ !" ಎಂಬ ಪ್ರಾರ್ಥನೆಯು ಅಥರ್ವವೇದದಲ್ಲಿದೆ.[30] ಶಾಪವು ತಿರುಗುಬಾಣವಾಗುವ ಭೀತಿಯ ಅರಿವು ಶಪಿಸುವವನಿಗೆ ಇರುತ್ತಿತ್ತು ; ಆದ್ದರಿಂದ ಈ ಅರಿವನ್ನಿಟ್ಟುಕೊಂಡು ಶಾಪಗಳನ್ನು ಎಚ್ಚರಿಕೆವಹಿಸಿ ಕೊಡು ತ್ತಿದ್ದರು. ಕತ್ತಲಾಗುತ್ತಲೆ ಹಕ್ಕಿಗಳು ತಮ್ಮ ಗೂಡುಗಳಿಗೆ ಹಿಂದಿರುಗಿ ಬರುವಂತೆ ಶಾಪಗಳೂ ಅವನ್ನು ಉಚ್ಚರಿಸುವವನಲ್ಲಿಗೆ ಹಿಂತಿರುಗಿ ಬರುತ್ತವೆ.[31]

## ಶಾಪದ ಕಾರಣಗಳು

ಶಾಪವನ್ನು ಕೊಡುವ ವಿಷಯದಲ್ಲಿ ಕೆಲವು ಸಂಕೇತಗಳಿವೆ. ಧರ್ಮದ ಪಾಲನೆಗಾಗಿ, ಅಧರ್ಮದ ನಿಯಂತ್ರಣಕ್ಕಾಗಿ, ಸಾಮಾಜಿಕ ಕ್ಷೇಮಕ್ಕಾಗಿ ಧಾರ್ಮಿಕ ಶಾಪಗಳು ಇದ್ದರೆ, ವೈಯಕ್ತಿಕ ಐಹಿಕ ಸುಖಗಳಿಗಾಗಿ ಅಭಿಚಾರಾತ್ಮಕ ಶಾಪಗಳು ಕೊಡಲ್ಪಡುತ್ತಿದ್ದವು. ಕುಂಭಕರ್ಣನಿಗೆ ಘೋರನಿದ್ರೆಯ ಶಾಪವನ್ನು ಕೊಟ್ಟು ಬ್ರಹ್ಮದೇವನು ಆತನ ಘೋರಕೃತ್ಯಗಳನ್ನು ತಡೆದು ಸಮಾಜದ ಶಾಂತಿಯನ್ನು ಕಾಪಾಡಿದ್ದಾನೆ. ಕರ್ಣನ ಹುಟ್ಟಿನ ರಹಸ್ಯವನ್ನು ಕುಂತಿಯು, ಭಾರತಯುದ್ಧಕ್ಕೆ ಮುಂಚಿತವಾಗಿ ಪ್ರಕಟಿಸಿದ್ದರೆ ಎಷ್ಟೊಂದು ಮಾನವ ಸಂಹಾರವನ್ನು ತಡೆಯಬಹುದಿತ್ತು. ಅವಳು ಅದನ್ನು ರಹಸ್ಯವಾಗಿಟ್ಟದ್ದರಿಂದ ವಿಪರೀತ ಪ್ರಾಣಹಾನಿ ಯಾಯಿತು. ಈ ಕಾರಣಕ್ಕಾಗಿ ಯುಧಿಷ್ಠಿರನು ಹೆಣ್ಣುಜಾತಿಗೆ ಶಾಪವನ್ನು ಕೊಟ್ಟನು.[32]

ರಾಮಾಯಣದಲ್ಲಿ ಹಲ ಶಾಪಗಳು ಕಂಡುಬರುತ್ತವೆ. ಹಲವು ಕಾರಣಗಳಿಗಾಗಿ ಈ ಶಾಪಗಳನ್ನು ಕೊಟ್ಟಿ ದ್ದಾರೆ. ವಧೆ, ನಾಶ, ಆಕ್ರಮಣ, ದುರ್ವರ್ತನೆ, ಉದ್ಧಟತನ, ನಿಷ್ಕಾರಣ ಭಯೋತ್ಪಾದನೆ, ಸಲ್ಲದ ಬೇಡಿಕೆ, ಪರಸ್ತ್ರೀಯ ಅಭಿಲಾಷೆ, ಸಂಭೋಗದ ಬೇಡಿಕೆ, ಬಲಾತ್ಕಾರ, ರತಿಕ್ರೀಡೆಯಲ್ಲಿ ಅಡ್ಡಿತರುವುದು, ತಂದೆತಾಯಿ-ಗುರುಹಿರಿಯರ ಅವಹೇಳನೆ, ಕ್ರೋಧ, ಛಲ, ಅನಿಷ್ಟಭೋಜನ, ಅಯೋಗ್ಯ ಸಮಯ ಇತ್ಯಾದಿ ಕಾರಣ ಗಳಿಗಾಗಿ ಶಾಪಗಳು ಕೊಡಲ್ಪಟ್ಟಿವೆ. ಇನ್ನಿತರ ಕಾರಣಗಳಿದ್ದರೂ 'ಕೋಪ'ವು ಶಾಪದ ಮೂಲಕಾರಣವಿರು ತ್ತದೆ. ಕ್ರೌಂಚಪಕ್ಷಿಗಳ ಜೋಡಿಯಲ್ಲಿಯ ಗಂಡುಪಕ್ಷಿಯನ್ನು ನಿಷಾದನು ವಧಿಸಿದ್ದಕ್ಕಾಗಿ ಆತನಿಗೆ ವಾಲ್ಮೀಕಿಯು ಶಾಪವನ್ನು ಕೊಟ್ಟನು. ಅಗಸ್ತ್ಯಋಷಿಯ ಮೈಮೇಲೆ ಏರಿಹೋಗಿ ಅವನನ್ನು ನುಂಗಲು ಬಂದ ತಾಟಕಾ ಇವಳಿಗೆ ಅಗಸ್ತ್ಯನು ಶಾಪವನ್ನು ಕೊಟ್ಟನು. ತನ್ನ ಏಕಮಾತ್ರ ಪುತ್ರನಾದ ಶ್ರವಣನ ವಧೆಯಾಯಿ ತೆಂದು ತಿಳಿದುಕೊಂಡ ಆತನ ತಂದೆಯು ಅತಿದುಃಖಿತನಾಗಿ ದಶರಥನಿಗೆ ಶಾಪವನ್ನು ನೀಡಿದನು. ದುಂದುಭಿ ಎಂಬ ರಾಕ್ಷಸನನ್ನು ಕೊಂದು ಆತನ ದೇಹವನ್ನು ಅಪ್ಪಳಿಸಿ ದೂರಕ್ಕೆ ಎಸೆದಾಗ ರಕ್ತದ ಹನಿಗಳು ಮತಂಗ ಋಷಿಯ ಆಶ್ರಮದಲ್ಲಿ ಬಿದ್ದವು. ಋಷಿಯು ಅತಿಕೋಪಗೊಂಡು ವಾಲಿಯನ್ನು ಶಪಿಸಿದನು. ತಮ್ಮ ಮೇಲೆ ಬಲಾತ್ಕಾರವೆಸಗಿ ತಮ್ಮ ಪತಿಯರನ್ನು ವಧಿಸಿದ ಮತ್ತು ಬಂಧುಬಳಗವನ್ನೆಲ್ಲ ನಾಶಮಾಡಿದ ಕಾರಣಕ್ಕಾಗಿ, ಪತಿವ್ರತೆಯರು ರಾವಣನಿಗೆ ಶಾಪಗಳನ್ನು ಕೊಟ್ಟಿದ್ದಾರೆ. ಭೃಗುಪತ್ನಿಯನ್ನು ವಧಿಸಿದ್ದಕ್ಕಾಗಿ ವಿಷ್ಣುವಿಗೆ ಭೃಗುವಿನಿಂದ ಶಾಪ ದೊರೆತಿದೆ. ಭರತನು ಕೈಕೇಯಿಯನ್ನು ಕುರಿತು ಆಡಿದ ಬಿರುನುಡಿಗಳು ಶಾಪದಷ್ಟೇ ಕಟುವಾಗಿದ್ದವು. ಈ ರೀತಿಯ ಬಿರುನುಡಿಗಳಿಗೆ ದಶರಥನ ಮೃತ್ಯುವು ಒಂದು ಕಾರಣವಾಗಿತ್ತು.

ಪುಂಜಿಕಸ್ಥಲಾ, ರಂಭಾ ಇನ್ನೂ ಕೆಲವು ಪತಿವ್ರತೆಯರು, ರಾವಣನು ಅವರನ್ನು ಬಲಾತ್ಕರಿಸಿದ್ದರಿಂದ, ಆತನಿಗೆ ಶಾಪವನ್ನು ಕೊಟ್ಟರು. ವೇದವತಿಯು ಶಾಪವನ್ನೇನೋ ನುಡಿಯಲಿಲ್ಲ ; ಆದರೆ ರಾವಣನು ಮಾಡಿದ ಮಾನಭಂಗಕ್ಕಾಗಿ ಅವಳು ಕಠೋರ ಪಣವನ್ನು ತೊಟ್ಟಳು. ಅಹಲ್ಯೆಯು ಇಂದ್ರನ ಜೊತೆಗೆ ಹಾಗೂ ಊರ್ವಶಿಯು ವರುಣನೊಂದಿಗೆ ರತರಾದ ಕಾರಣ ಗೌತಮ ಹಾಗೂ ಮಿತ್ರನ ಶಾಪಗಳಿಗೆ ತುತ್ತಾದರು. ಧರ್ಮಸಮ್ಮತವಾದ ರತಿಕ್ರೀಡೆಯಲ್ಲಿ ಅಡ್ಡಿಯನ್ನುಂಟುಮಾಡಿದ ದೇವತೆಗಳಿಗೆ ಹಾಗೂ ಅಪ್ರತ್ಯಕ್ಷವಾಗಿ ಸಹಾಯವನ್ನು ಎಸಗಿದ ಪೃಥ್ವಿಗೆ ಉಮಾ ಶಾಪವನ್ನು ಕೊಟ್ಟಳು. ಓರೆಗಣ್ಣಿನಿಂದ ಪಾರ್ವತಿಯತ್ತ ನೋಡಿದ ಕಾರಣ ಕುಬೇರನು ಪಿಂಗಲಾಕ್ಷನಾದನು.

ಯಜ್ಞಕರ್ಮ, ತಪಶ್ಚರ್ಯೆಯಲ್ಲಿ ಅಡ್ಡಿಮಾಡಿದವರಿಗೆ ಋಷಿಗಳು ಬಿಡದೆ ಶಾಪಹಾಕಿದ್ದಾರೆ. ಇಂದ್ರನ ಅಪ್ಪಣೆಯಂತೆ ವಿಶ್ವಾಮಿತ್ರನ ತಪೋಭಂಗವನ್ನು ಮಾಡಲು ಬಂದ ರಂಭೆಗೆ ವಿಶ್ವಾಮಿತ್ರನು ಶಾಪಕೊಟ್ಟನು. ಆಶ್ರಮದಲ್ಲಿಯ ಯಜ್ಞಪಾತ್ರೆಗಳನ್ನು ಧ್ವಂಸಗೊಳಿಸಿದ್ದಕ್ಕಾಗಿ ಹನುಮಂತನು ಋಷಿಗಳ ಶಾಪಕ್ಕೆ ತುತ್ತಾದನು. ಪುಲಸ್ತ್ಯನ ತಪಶ್ಚರ್ಯೆಯಲ್ಲಿ ಅಡಚಣೆಗಳು ಬರುತ್ತಿದ್ದವು ; ಅದಕ್ಕಾಗಿ ಆತನು 'ಕಣ್ಣಿಗೆದುರಾಗುವ ಕನ್ಯೆಯು ಗರ್ಭವತಿಯಾಗುವಳು !' ಎಂದು ಶಾಪೋದ್ಗಾರಮಾಡಿದನು. ತನ್ನ ತಪೋಬಲವು ಕಡಿಮೆಯಾಗಬಹುದೆಂದು ವಿಶ್ವಾಮಿತ್ರನು ಮಾರೀಚ ಹಾಗೂ ಸುಬಾಹು ಇವರಿಗೆ ಶಾಪವನ್ನು ಕೊಡದೇ ತಡೆಹಿಡಿದನು. ಇದೇ ಕಾರಣಕ್ಕಾಗಿ ವೇದವತಿಯು ರಾವಣನನ್ನು ಶಪಿಸಲಿಲ್ಲ. ಅದೇ ರೀತಿ ದಂಡಕಾರಣ್ಯದಲ್ಲಿದ್ದ ಋಷಿಗಳು ಅಲ್ಲಿಯ ರಾಕ್ಷಸರಿಗೆ ಶಾಪವನ್ನು ನುಡಿಯಲಿಲ್ಲ. ಕುಶಕನ್ಯೆಯರು ಸಹ ತಮ್ಮ ತಪೋಬಲವನ್ನು ಕಾಯ್ದುಕೊಳ್ಳಲೆಂದು ವಾಯುವಿಗೆ ಶಾಪಹಾಕಲಿಲ್ಲ.

ಮಿತಿತಪ್ಪಿದ ವರ್ತನೆಗಾಗಿ ವಿಶ್ವಾವಸು ಎಂಬ ಗಂಧರ್ವನಿಗೆ ಶಾಪ ತಗಲಿತು. ಆತನು ಇಂದ್ರನ ಮೇಲೆ ದಾಳಿಮಾಡಿದ್ದನು. ರಾವಣನು ಶಂಕರನ ಬಗ್ಗೆ ಅವಮರ್ಯಾದೆಯ ಮಾತುಗಳನ್ನಾಡಿದ್ದರಿಂದ ನಂದೀಶ್ವರನು ರಾವಣನಿಗೆ ಸರಿಯಾದ ಪಾಠಕಲಿಸಿದನು. ಅದೇ ರೀತಿಯಲ್ಲಿ ಊರ್ವಶಿ ವರುಣನೊಂದಿಗೆ ಸಂಬಂಧ ಬೆಳೆಸಿದ್ದರಿಂದ ಪುತ್ರನ ಶಾಪಕ್ಕೆ ಗುರಿಯಾಗಬೇಕಾಯಿತು. ಬ್ರಾಹ್ಮಣರನ್ನು ಅವಮಾನಗೊಳಿಸಿದ್ದಕ್ಕಾಗಿ ನೃಗರಾಜನು ಶಾಪವನ್ನು ಅನುಭವಿಸಬೇಕಾಯಿತು. ಪಿತನ ಆಜ್ಞೆಯನ್ನು ಪಾಲಿಸದ ವಿಶ್ವಾಮಿತ್ರನ ಪುತ್ರರಿಗೆ, ಹಾಗೂ ವಿಶ್ವಾಮಿತ್ರನು ಕೊಟ್ಟ ಯಜ್ಞದ ಆಮಂತ್ರಣವನ್ನು ಅಲಕ್ಷ್ಯಿಸಿದ ವಸಿಷ್ಠಪುತ್ರರಿಗೆ ಶಾಪ ದೊರೆಯಿತು, ತಂದೆಯ ಆಜ್ಞೆಯನ್ನು ಉಲ್ಲಂಘಿಸಿದ ಕಾರಣ ಯದುವಿಗೆ ಶಾಪ ತಗಲಿತು. ವಸಿಷ್ಠನು ಗುರುಗಳನ್ನು ಅವಮಾನಿಸಿದ್ದಕ್ಕಾಗಿ ಮತ್ತು ಅವರ ಆಜ್ಞೆಯನ್ನು ಮೀರಿದ್ದಕ್ಕಾಗಿ ಮಾರೀಚನಿಗೆ ಅಗಸ್ತ್ಯಋಷಿಗಳು ಶಾಪವನ್ನು ಕೊಟ್ಟರು. ಅದೇ ರೀತಿ ಸ್ಥೂಲಶಿರಾ ಋಷಿಗಳು 'ವಿಶ್ವಾವಸು' ಎಂಬ ರಾಕ್ಷಸನಿಗೆ ಶಾಪಕೊಟ್ಟರು.

ವಸಿಷ್ಠ, ವಿಶ್ವಾಮಿತ್ರ, ಮತಂಗಾದಿ ಋಷಿಗಳು ಶಾಪವನ್ನು ಕೊಡಲು ಉದ್ಯುಕ್ತರಾಗುವ ಪ್ರಮುಖ ಕಾರಣವೆಂದರೆ ಅವರ ತಲೆಗೇರಿದ ಕೋಪ. ದಶರಥನು ಕೈಕೇಯಿಗೆ ಅವಳ ಛಲಕ್ಕಾಗಿ ಶಾಪಕೊಟ್ಟನು. ದೇಹಸಹಿತ ಸ್ವರ್ಗವನ್ನು ಸೇರಬೇಕೆಂಬ ಆಕಾಂಕ್ಷೆಯಿಟ್ಟುಕೊಂಡಿದ್ದರಿಂದ ತ್ರಿಶಂಕುವಿಗೆ ಶಾಪ ದೊರೆಯಿತು. ತಾಟಕಾ ಇವಳು ವಾಸವಾಗಿದ್ದರಿಂದ ತಾಟಕವನಕ್ಕೆ ಶಾಪ ತಗಲಿತು. ದಂಡರಾಜನ ಸಂಪರ್ಕದಿಂದ ದಂಡಕಾರಣ್ಯವು ಶಾಪಕ್ಕೊಳಗಾಯಿತು. ರಾವಣನಿಂದಾಗಿ ಲಂಕೆಗೆ ಶಾಪ ತಗಲಿತು. ಅನಿಷ್ಟಭೋಜನವನ್ನು ಕೊಟ್ಟದ್ದರಿಂದ ಬ್ರಹ್ಮದತ್ತ ಹಾಗೂ ಸೌದಾಸರಿಗೆ ಶಾಪ ಬಂದಿತು. ಬ್ರಾಹ್ಮಣನಿಗೆ ಶಾಪಕೊಡತಕ್ಕದ್ದಲ್ಲವೆಂಬ ಸಂಕೇತವಿದ್ದರೂ ಕೋಲಿನಿಂದ ನಾಯಿಯನ್ನು ಹೊಡೆದ ಬ್ರಾಹ್ಮಣನಿಗೂ ಶಾಪ ದೊರೆತ ಉದಾಹರಣೆಯು ಕಂಡುಬಂದಿದೆ.

ವಾಲ್ಮೀಕಿರಾಮಾಯಣದಲ್ಲಿ ಉಲ್ಲೇಖಿಸಲ್ಪಟ್ಟ ಶಾಪಗಳ ಕಾರಣಗಳು ಸ್ಪಷ್ಟವಾಗಿಲ್ಲ.

## ಶಾಪದಿಂದಾದ ಪರಿಣಾಮಗಳು

ಶಾಪದಿಂದಾಗುವ ಪರಿಣಾಮಗಳು ಬಹುದೀರ್ಘಕಾಲವದರೆಗೆ ನಡೆಯುವಂತಿದ್ದು ಕ್ಲೇಶಕರವಾಗಿರುತ್ತವೆ. ಮೃತ್ಯು, ಕೊಲೆ, ವಿನಾಶ, ವಿಯೋಗ, ಕುರೂಪತೆ, ಸೌಂದರ್ಯವಿಹೀನತೆ, ಹೀನಯೋನಿಯಲ್ಲಿ ಜನ್ಮ, ಹೀನಜೀವನ, ನಿಕೃಷ್ಟ ಆಹಾರ, ದೈಹಿಕ ದೌರ್ಬಲ್ಯ, ಅಪತ್ಯಹಾನಿ, ನಿರ್ವಂಶತೆ, ಕಾಳಗದಲ್ಲಿ ಅಪಜಯ ಮುಂತಾದ ದುಷ್ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ.

ಶ್ರವಣಕುಮಾರನ ಪಿತನ ಶಾಪದ ಫಲವಾಗಿ ದಶರಥನಿಗೆ ಅಕಾಲಮೃತ್ಯುವಾಯಿತು. ಬ್ರಹ್ಮದೇವ, ನಲಕೂಬರ ಹಾಗೂ ಹಲವಾರು ಪತಿವ್ರತೆಯರ ಶಾಪದಿಂದ ರಾವಣನು ಸಾವಿಗೆ ಈಡಾದನು. ಬ್ರಹ್ಮದೇವ ಹಾಗೂ ನಲಕೂಬರರಿಂದ ರಾವಣನಿಗೆ ಕಟ್ಟಳೆಯ ಶಾಪಗಳು ದೊರೆತಿದ್ದವು. ಕಟ್ಟಳೆಗಳ ಪಾಲನೆಯಾಗುವ ಬದಲು ಅವುಗಳ ಉಲ್ಲಂಘನೆಯ ಸಂಭವ ಅಧಿಕವಿತ್ತು. ಆದರೆ ರಾವಣನಿಗೆ ಭಯವಿದ್ದುದರಿಂದ ಕಟ್ಟಳೆಗಳನ್ನು ಸರಿಯಾಗಿ ಪಾಲಿಸಿದನು. ರಾವಣನ ವಧೆಗಾಗಿಯೇ ವೇದವತಿಯು ಪುನರ್ಜನ್ಮವನ್ನು ತಾಳುವ ಪ್ರತಿಜ್ಞೆ ಮಾಡಿದಳು. ಮರಣಶಯ್ಯೆಯಲ್ಲಿದ್ದ ಅನರಣ್ಯರಾಜನ ನುಡಿಗಳು ರಾವಣನಿಗೆ ಶಾಪರೂಪವಾದವು. ಅನೇಕ

ಶಾಪಗಳು ಸೇರಿ ರಾವಣನಿಗೆ ಮೃತ್ಯು ಬಂದಿತು. ವಸಿಷ್ಠ ಮತ್ತು ನಿಮಿರಾಜ ಇವರು ಪರಸ್ಪರರಿಗೆ ಶಾಪಕೊಟ್ಟು ಇಬ್ಬರೂ ನಿಶ್ಚೇತನಗೊಂಡರು.

ವಸಿಷ್ಠನ ಪುತ್ರರು, ವಿಶ್ವಾಮಿತ್ರನ ಪುತ್ರರು, ಮಾರೀಚ ಮತ್ತು ದನು ಮೊದಲಾದವರು ಶಾಪದ ಪರಿಣಾಮಗಳನ್ನು ಜನ್ಮಾಂತರದಲ್ಲಿ ಅನುಭವಿಸಿದರು. ಹೀನಯೋನಿಯಲ್ಲಿ ಅವರು ಜನಿಸಬೇಕಾಯಿತು. ನಿಕೃಷ್ಟ ಆಹಾರವನ್ನು ಸೇವಿಸಿ ಬಾಳಿದರು. ಸ್ವರ್ಗಸ್ಥ ದೇವರಿಗೂ ಅಪ್ಸರೆಯರಿಗೂ ಶಾಪ ತಪ್ಪಿಲ್ಲ. ವಿಷ್ಣು, ಊರ್ವಶಿ, ಪುಂಜಿಕಸ್ಥಲಾ ಇವರು ಮೃತ್ಯುಲೋಕದಲ್ಲಿ ಬದುಕಬೇಕಾಯಿತು. ಬ್ರಹ್ಮದತ್ತ ಹಾಗೂ ನೃಗ ಎಂಬ ರಾಜಮನೆತನದ ಪುರುಷರು ಹದ್ದಿನ ಮತ್ತು 'ಓತಿಕೇತ'ದ ಜನ್ಮತಾಳಬೇಕಾಯಿತು. ಇಂದ್ರನು ಮೇಷವೃಷಣನಾದನು. ಕುಬೇರನ ಒಂದು ಕಣ್ಣು ಭಸ್ಮವಾಗಿ ಇನ್ನೊಂದು ಪಿಂಗಲವಾಯಿತು. ನಾಯಿಯನ್ನು ದೊಣ್ಣೆಯಿಂದ ಹೊಡೆದ ಕಾರಣ ಒಬ್ಬ ಬ್ರಾಹ್ಮಣನಿಗೆ ಎರಡನೆಯ ಜನ್ಮದಲ್ಲಿ ಕುಲಪತಿಯ ಜನ್ಮ ಬಂದಿತು. ಆತನು ಸಾಕ್ಷಾತ್ ನರಕವಾಸವನ್ನು ಅನುಭವಿಸಬೇಕಾಯಿತು. ಅಹಲ್ಯೆಯು ರೂಪಹೀನಳಾಗಿ ಬೂದಿಯಲ್ಲಿ ಉರುಳಾಡಬೇಕಾಯಿತು. ವಿಶ್ವಾವಸು ಎಂಬ ಗಂಧರ್ವನು ಹಾಗೂ ಕುಂಬರನ ಅಧಃಪಾತ ನಡೆಯಿತು. ಅವರು ಘೃಣಾಸ್ಪದ ಕೌರೂಪ್ಯವನ್ನು ಪಡೆದರು. ಇವೆಲ್ಲ ಶಾಪದ ಪರಿಣಾಮಗಳು. ಕಟ್ಟದ್ದರ ಜೊತೆಗೆ ಒಳ್ಳೆಯದಕ್ಕೂ ಬಾಧೆ ಬರುತ್ತದೆ. ಈ ರೀತಿ ದುಷ್ಟರ ಸಹವಾಸದಿಂದ ತಾಟಕಾವನ, ದಂಡಕಾರಣ್ಯ, ಲಂಕೆ ಮುಂತಾದವು ನಾಶಗೊಂಡವು. ವಾಯುಭಕ್ಷಣೆ ಮಾಡಿ ಜೀವಿಸುವ ಸ್ಥಿತಿಯು ಅಹಲ್ಯೆಗೆ ಉಂಟಾಯಿತು. ಯದುವಂಶದವರು ಉದ್ದಾಮರಾದರು. ಪೃಥ್ವಿಯು ರಾಜರನೇಕರ ಪತ್ನಿಯಾದರೂ ಬಂಜೆಯಾಗಿ ಉಳಿಯಬೇಕಾಯಿತು. ನಂದಿಕೇಶ್ವರನ ಶಾಪದ ಫಲವಾಗಿ ರಾವಣನ ಕುಲಸಂಹಾರವಾಯಿತು. ಪುಲಸ್ತ್ಯನ ದೃಷ್ಟಿಕ್ಷೇಪದಿಂದ ತೃಣಬಿಂದು ಕನ್ಯೆಯು ಗರ್ಭವತಿಯಾದಳು.

ವಾಲ್ಮೀಕಿರಾಮಾಯಣದಲ್ಲಿಯ ಕೆಲವು ಶಾಪಗಳ ಪರಿಣಾಮಗಳು ಏನೆಂಬುದು ನಿಖರವಾಗಿಲ್ಲ.

## ಕಟ್ಟಳೆಯ ಶಾಪಗಳು

ಕಟ್ಟಳೆಯ ಶಾಪಗಳು (conditional curse) ಈ ಶಬ್ದದ ಬಳಕೆಯನ್ನು ವೆಸ್ಟರ್‌ಮಾರ್ಕನು ಪ್ರಥಮವಾಗಿ ರೂಢಿಯಲ್ಲಿ ತಂದನು. ಇತರ ಎಲ್ಲ ಶಾಪಗಳಿಗಿಂತಲೂ ಭಿನ್ನವಾದ ನೈತಿಕತೆಯ ಬುನಾದಿ ಈ ಕಟ್ಟಳೆಯ ಶಾಪಗಳಲ್ಲಿರುತ್ತದೆ. ಶಾಪವನ್ನು ಕೊಡುವ ವ್ಯಕ್ತಿಯಲ್ಲಿ, ಶಾಪಿತನಾಗುವ ವ್ಯಕ್ತಿಯ ಬಗ್ಗೆ ಸಹಾನುಭೂತಿ ಇರುತ್ತದೆ. ವ್ಯಕ್ತಿಯು ಶಾಪಿತನಾಗುತ್ತಿದ್ದರೂ ಆತನಿಗೆ ಶುಭವನ್ನು ಬಯಸಿ, ಶಾಪದ ದುಷ್ಪರಿಣಾಮಗಳ ತಾಪವು ಆತನಿಗೆ ತಾಗಬಾರದೆಂಬ ಕಳಕಳಿ ಶಾಪ ಕೊಡುವಾತನಲ್ಲಿರುತ್ತದೆ. ಹೀಗೆಂದು ಶಾಪದ ಆಗಬಹುದಾದ ಪರಿಣಾಮಗಳ ಮುನ್ಸೂಚನೆ ಕೊಟ್ಟು ಅವುಗಳನ್ನು ಆತನಿಗೆ ತಪ್ಪಿಸುವ ಉಪಾಯಗಳನ್ನು ಸೂಚಿಸಲಾಗಿರುತ್ತದೆ. ಯೋಗ್ಯ ಮುನ್ನೆಚ್ಚರಿಕೆಯಿಂದ ಶರತ್ತುಗಳನ್ನು ಪಾಲಿಸಿದರೆ ಶಾಪದ ದುಷ್ಪರಿಣಾಮಗಳನ್ನು ಅನುಭವಿಸಬೇಕಾಗುವುದಿಲ್ಲ ; ಶಾಪವು ಶಾಪವಾಗಿ ಉಳಿಯುವುದೇ ಇಲ್ಲ. ಕಟ್ಟಳೆಗಳನ್ನು ಪಾಲಿಸದಿದ್ದರೆ ಮಾತ್ರ ಶಾಪದ ಪರಿಣಾಮ ತಟ್ಟುತ್ತದೆ. ವೆಸ್ಟರ್‌ಮಾರ್ಕನ ಹೇಳಿಕೆಗಳು ಮನನೀಯವಾದುವುಗಳು.[33]

ಕಟ್ಟಳೆಯ ಶಾಪಗಳಲ್ಲಿ ಸಾಮಾಜಿಕ ಹಾಗೂ ನೈತಿಕ ಪ್ರಜ್ಞೆ ಇರುತ್ತದೆ. ಶಾಪದ ಪರಿಣಾಮಗಳನ್ನು ತೊಡೆದುಹಾಕಲು ಬರುವುದಿಲ್ಲ ; ಆದರೆ ಕಟ್ಟಳೆಯ ಶಾಪಗಳ ಪರಿಣಾಮಗಳನ್ನು ತಪ್ಪಿಸಿಕೊಳ್ಳುವುದು ಶಾಪಹೊಂದಿರುವವನ ಕೈಯಲ್ಲಿದೆ. ಉಃಶಾಪದಿಂದ ಶಾಪದ ತೀವ್ರತೆ ಕಡಿಮೆಯಾಗಬಹುದು ; ಕಾಲಾವಧಿಯನ್ನು ಮೊಟಕುಗೊಳಿಸಬಹುದು ; ಆದರೆ ಅದೆಲ್ಲ ಕಟ್ಟಳೆಯ ಶಾಪವನ್ನು ಕೊಡುವವನನ್ನು ಅವಲಂಬಿಸಿರುತ್ತದೆ. ಉಃಶಾಪವು ಯಾಚಿತವಿರಲಿ ಅಯಾಚಿತವಿರಲಿ, ಅದಕ್ಕೆ ಶಾಪಕೊಡುವಾತನ ಕೃಪೆ ಬೇಕು. ಕಟ್ಟಳೆಯ ಶಾಪಗಳಿರುವಂತೆ ಕಟ್ಟಳೆಯ ವರಗಳ ಸಾಧ್ಯತೆ ಇದೆ ; ಆದರೆ ಅವುಗಳ ಪ್ರಮಾಣ ತೀರ ಕಡಿಮೆ.

ವಾಲ್ಮೀಕಿರಾಮಾಯಣದಲ್ಲಿ ಹತ್ತು ಕಟ್ಟಳೆಯ ಶಾಪಗಳಿವೆ. ಕೈಕೇಯಿಯನ್ನು ಉದ್ದೇಶಿಸಿ ದಶರಥನು, ಅವಳ ಪತ್ನಿತ್ವವನ್ನು ತೊರೆದುಹಾಕುವದಾಗಿ ಕೊಟ್ಟ ಮುನ್ಸೂಚನೆಯು ಕಟ್ಟಳೆಯ ಶಾಪದಂತಿದೆ. ಕೈಕೇಯಿ ತನ್ನ ಛಲವನ್ನು ಬಿಟ್ಟಿದ್ದರೆ ಪರಿಣಾಮಗಳುಂಟಾಗುತ್ತಿರಲಿಲ್ಲ. ಭರತನು ಯುವರಾಜ್ಯಪದವನ್ನು ಸ್ವೀಕರಿಸಿದರೆ,

ತನ್ನ ಮೃತ್ಯುವಿನ ನಂತರ ನಡೆಯಿಸಲಾಗುವ ಶ್ರಾದ್ಧಾದಿ ಪಿಂಡೋದಕಗಳು ತನಗೆ ತಲುಪದಿರಲಿ ಎಂದು ದಶರಥನು ಶಾಪವಿತ್ತನು. ಭರತನು ಯುವರಾಜ್ಯಪದವನ್ನು ಸ್ವೀಕರಿಸಲಿಲ್ಲ ; ಆದ್ದರಿಂದ ಆತನಿಗೆ ದಶರಥನ ಶಾಪದ ಪರಿಣಾಮವಾಗಲಿಲ್ಲ. ಪ್ರಸ್ರವಣಪರ್ವತ ಮತ್ತು ನದಿ ಇವರಿಂದ ತಾನು ವಿಚಾರಿಸಿದ ಪ್ರಶ್ನೆಗಳಿಗೆ ಉತ್ತರ ದೊರೆಯಬೇಕು ! ಎಂಬ ಕಟ್ಟಳೆಯಿಂದ ಶಾಪವನ್ನು ಶ್ರೀರಾಮನು ನುಡಿದಿದ್ದನು. ಪ್ರಸ್ರವಣಪರ್ವತ ರಾಜನು ಸಂಕೇತಗಳ ಮೂಲಕ ಶ್ರೀರಾಮನಿಗೆ ತಿಳಿಸಿದ್ದರಿಂದ ಶಾಪವು ಅರ್ಥಹೀನಗೊಂಡಿತು. ಮತಂಗನ ಕಟ್ಟಳೆಗಳನ್ನು ವಾಲಿಯು ಕೂಲಂಕಷವಾಗಿ ಪಾಲಿಸಿದ್ದರಿಂದ ಶಾಪಕ್ಕೆ ಒಳಪಡಲಿಲ್ಲ. ಸೀತೆಯ ಮನಸ್ಸಿನ ವಿರುದ್ಧ ಅವಳನ್ನು ಸ್ಪರ್ಶಿಸುವುದನ್ನು ರಾವಣನು ಬುದ್ಧಿಪೂರ್ವಕವಾಗಿ ತ್ಯಜಿಸಿದನು. ಹೀಗೆ ವರ್ತಿಸಿದ್ದರಿಂದ ಬ್ರಹ್ಮದೇವ ಮತ್ತು ನಲಕೂಬರರ ಶಾಪದ ಪರಿಣಾಮ ರಾವಣನ ಮೇಲೆ ಆಗಲಿಲ್ಲ ; ರಾವಣನ ಶಿರವು ಸಿಡಿದು ಹೋಳಾಗಲಿಲ್ಲ. ಲಕ್ಷ್ಮಣನು ಆತ್ಮಸಮರ್ಪಣೆ ಮಾಡಿ ದುರ್ವಾಸನ ಶಾಪವನ್ನು ನಿರರ್ಥಕ ಗೊಳಿಸಿದನು.

ಯಜ್ಞವನ್ನು ಪ್ರಾರಂಭಿಸಲು ಅನುವಾಗದೇ ಆತನ ಆಜ್ಞೆಯನ್ನು ಪಾಲಿಸದೇ ಹೋದರೆ ವಿಶ್ವಾಮಿತ್ರನು ಶಾಪಕೊಡಬಹುದು—ಎಂಬ ಭಯದಿಂದ ಋಷಿಮುನಿಗಳು ಆತನ ಅಪ್ಪಣೆಯ ಬಗ್ಗೆ ಎಚ್ಚರಿಕೆ ವಹಿಸಿದರು. ಮಾತೆಯ ಮನಸ್ಸಿನ ವಿರುದ್ಧವಾಗಿ "ಶ್ರೀರಾಮನು ವನವಾಸಕ್ಕೆ ಹೋದರೆ ಅವನಿಗೆ ನರಕವಾಸ !" ಎಂಬ ಶಾಪದಂತಿದ್ದ ಉದ್ಗಾರವನ್ನು ಕೌಸಲ್ಯೆಯು ನುಡಿದಿದ್ದಳು. ಇದು ಕಟ್ಟಳೆಯ ಶಾಪವೆನಿಸುತ್ತದೆ. ಶ್ರೀರಾಮನು ಕಾಡಿಗೆ ಹೋಗಕೂಡದೆಂಬ ಶರತ್ತು ಇದ್ದು, ಹೋದರೆ ನರಕವಾಸ ಅದರ ಪರಿಣಾಮ. ಶರತ್ತಿನ ಶಾಪಗಳನ್ನು ಮೀರಿದರೆ ಅವುಗಳ ಪರಿಣಾಮ ಖಂಡಿತ. ಶ್ರೀರಾಮನು ಈ ಕಟ್ಟಳೆಯಂತೆ ವರ್ತಿಸಿಲ್ಲ. ಹೀಗೆ ಕಟ್ಟಳೆಯನ್ನು ಉಲ್ಲಂಘಿಸಿದರೂ ಶಾಪದ ಪರಿಣಾಮ ಕಂಡುಬರದು. ಶರತ್ತಿನ ಶಾಪ ರಾಮಾಯಣದಲ್ಲಿ ಇದೊಂದೇ. ಹೀಗಾಗಿ, ಶ್ರೀರಾಮನ ಪಾಲಿಗೆ ನರಕವಾಸ ಆಗಲಿಲ್ಲ. ರಾಮಾಯಣದಲ್ಲಿಯ ಈ ಸಂದರ್ಭವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಶ್ರೀರಾಮನು ವನವಾಸಕ್ಕೆ ಹೋದದ್ದು ನಿಜವಿರುವುದರಿಂದ ಕೌಸಲ್ಯೆಯ ಕಟ್ಟಳೆಯನ್ನು ಮೀರಿದ್ದು ನಿಜವಿದೆ ; ಅಂದಬಳಿಕ ಕೊನೆಯ ಅರ್ಧದಲ್ಲಿ ವ್ಯಕ್ತಗೊಂಡ ನರಕವಾಸವನ್ನು ಶ್ರೀರಾಮನು ಪಡೆದನೋ ಇಲ್ಲವೋ ? ಎಂಬುದನ್ನು ತಿಳಿದುಕೊಳ್ಳಬೇಕು. ಶ್ರೀರಾಮನಿಗೆ ನರಕವಾಸವಾಗದೇ ಆತನಿಗೆ ಸ್ವರ್ಗಲೋಕದಲ್ಲಿ ಭವ್ಯಸ್ವಾಗತ ದೊರಕಿದ ಬಗ್ಗೆ ವಾಲ್ಮೀಕಿರಾಮಾಯಣದಲ್ಲಿ ಖಚಿತ ಆಧಾರವಿದೆ. ಅವತಾರ ಕಾರ್ಯವು ಮುಗಿಯುವ ಸಮಯ ಸಮೀಪಿಸಿದೆ ಎಂದು ಸೂಚಿಸಲು ಪ್ರತ್ಯಕ್ಷ ಕಾಲನು ಶ್ರೀರಾಮನನ್ನು ಕಾಣಲು ಬಂದನು. ಬ್ರಹ್ಮದೇವನ ಸಂದೇಶವನ್ನು ಏಕಾಂತದಲ್ಲಿ ಶ್ರೀರಾಮನಿಗೆ ತಿಳಿಸಿದನು; ಅದನ್ನು ಅನುಸರಿಸಿ ಲಕ್ಷ್ಮಣನ ನಂತರ ಶ್ರೀರಾಮನು ಮಹಾಪ್ರಸ್ಥಾನವನ್ನು ಕೈಕೊಂಡನು. ಶ್ರೀರಾಮನು ಸರಯೂ ನದಿಯ ನೀರಿನಲ್ಲಿ ಇಳಿಯುತ್ತಿದ್ದಾಗ ಅಂತರಿಕ್ಷದಿಂದ ಬ್ರಹ್ಮನು "ಎಲೈ ವಿಷ್ಣುವೇ, ರಾಘವನೇ, ನಿನಗೆ ಶುಭವಾಗಲಿ ! ನೀನು ಸ್ವರ್ಗಕ್ಕೆ ಬರಲಿರುವ ಸಂಗತಿ ತುಂಬ ಸಂತೋಷವನ್ನುಂಟುಮಾಡಿದ"[34] ಎಂದನು. ಇಷ್ಟೇ ಅಲ್ಲದೆ ಬ್ರಹ್ಮನು ಶ್ರೀರಾಮನಿಗೆ ಇಷ್ಟವಾದ ದೇಹವನ್ನು ಧರಿಸಲು ಸಮ್ಮತಿಸಿದನು. ಶ್ರೀರಾಮನು ವೈಷ್ಣವ ತೇಜದಲ್ಲಿ ಪ್ರವೇಶಿಸಿದನಂತರ ದೇವತೆಗಳು ಉದ್ಗರಿಸಿದ್ದು ಈ ರೀತಿ.[35] "ನಿನ್ನ ಬರುವಿಕೆಯಿಂದ ಸಮಸ್ತ ಸ್ವರ್ಗಲೋಕವು ಹರ್ಷಯುಕ್ತವೂ ಕೃತಕೃತ್ಯವೂ ಆಗಿದೆ, ಹೇ ಶ್ರೀರಾಮನೇ, ನೀನು ಧನ್ಯ !" ದೇವತೆಗಳ ಈ ನುಡಿಯನ್ನು ಒಪ್ಪಿಕೊಂಡರೆ ಶ್ರೀರಾಮನಿಗೆ ಸ್ವರ್ಗಲಾಭವಾಯಿತೆಂಬುದರಲ್ಲಿ ಸಂದೇಹವಿಲ್ಲ. ಕೌಸಲ್ಯೆಯಾಡಿದ ಶಾಪವಾಣಿ ಮತ್ತು ಶರತ್ತು ಇವುಗಳೊಡನೆ ನಂತರದ ಪರಿಣಾಮವನ್ನು ವೀಕ್ಷಿಸಿದರೆ ಕೌಸಲ್ಯೆಗೆ ಶಾಪ ನುಡಿಯುವ ಅರ್ಹತೆ ಇರಲಿಕ್ಕಿಲ್ಲ ; ಅಥವಾ ಪುತ್ರನ ಮೇಲೆ ಮಮತೆಯಿಂದ ಆಡಿದ ಮಾತು ಕಠೋರವಾಗಿದ್ದೂ ಶಾಪಸಂಜ್ಞೆಗೆ ಪಾತ್ರವಲ್ಲ ಎಂದು ನಂಬಬೇಕಾಗುತ್ತದೆ. ಅವಳಾಡಿದ ನುಡಿಗಳು ಬರಿ ಶಾಪದಂತಿದ್ದವು ; ಶಾಪದ ಅಮೋಘವಾದ ಪರಿಣಾಮವನ್ನುಂಟುಮಾಡುವಂತೆ ಇರಲಿಲ್ಲ.

## ನೀಡದೆ ಇದ್ದ ಶಾಪ

ಶಾಪವನ್ನು ಕೊಟ್ಟರೆ ಕೊಡುವಾತನ ಪುಣ್ಯವು ಕ್ಷೀಣಿಸುತ್ತದೆ ; ತಪದ ಸಾಮರ್ಥ್ಯವು ಉಡುಗುತ್ತದೆ ಎಂಬ ನಂಬಿಕೆ ಇದೆ. ಹೀಗಾಗಿ, ಶಪಿಸಬೇಕೆಂಬ ವಿಚಾರವು ತಲೆದೋರಿದರೂ ನಂತರದ ಪರಿಣಾಮಗಳನ್ನು

ಲಕ್ಷ್ಯಿಸಿ ಶಾಪ ಕೊಡುವುದನ್ನು ತಡೆಹಿಡಿಯುತ್ತಾರೆ. ಮನಸ್ಸಿನಲ್ಲಿ ಇದ್ದುದನ್ನು ನುಡಿಯದೇ ಇದ್ದರೆ ಅದು ಶಾಪವೆನಿಸದು. ಮನಸ್ಸಿನಲ್ಲಿ ಶಾಪದ ವಿಚಾರಗಳು ಮೂಡಿದರೆ ದೋಷವಿಲ್ಲವೆಂದು ಬಗೆಯುತ್ತಾರೆ. ಶಾಪ ಅಥವಾ ವರ ಅಂದರೆ ಅದೊಂದು ವಾಕ್-ಶಕ್ತಿ ಇರುವುದರಿಂದ ಉಚ್ಚಾರಣೆಯಾದರೆ ಮಾತ್ರ ಅದರ ಪ್ರಭಾವ ತೋರಿಬರುತ್ತದೆ. ಹೀಗಾಗಿಯೇ ಋಷಿಮುನಿಗಳು, ರಾಜರು, ವ್ರತಸ್ಥರು ಶಾಪವಾಣಿಯನ್ನು ಯೋಚನೆ ಮಾಡಿ ಆಡುತ್ತಾರೆ. ನಿಯಂತ್ರಣ ತಪ್ಪುವಷ್ಟು ಕೋಪ ಬಂದೊಡನೆ ಶಬ್ದಗಳು ತಾವಾಗಿ ಯಾವಾಗ ಹೊರಬೀಳು ತ್ತವೆ ಎಂಬುದು ಚಿತ್ತಕ್ಕೆ ಹೊಳೆಯುವುದಿಲ್ಲ ; ಹಾಗಾದಾಗ ಉಪಾಯವು ನಿಮ್ಮ ಬಳಿ ಉಳಿದಿರುವುದಿಲ್ಲ. ಶಾಪವನ್ನು ಕೊಡುವುದು ಸರಿಯಲ್ಲವಾದ್ದರಿಂದ ಮನಸ್ಸಿನಲ್ಲಿ ಶಾಪದ ವಿಚಾರ ಮೂಡಿದರೂ ಶಾಪಗಳನ್ನು ಬಾಯಿಯಿಂದ ನುಡಿಯುವುದಿಲ್ಲ. ರಾಮಾಯಣದಲ್ಲಿ ನುಡಿಯದೇ ಇದ್ದ ಶಾಪಗಳ ಹತ್ತು ಉದಾಹರಣೆಗಳಿವೆ.

ವಿಶ್ವಾಮಿತ್ರನು ಸ್ವಂತ ಸಾಮರ್ಥ್ಯದಿಂದ ಮಾರೀಚ ಹಾಗೂ ಸುಬಾಹು ಇವರನ್ನು ದಂಡಿಸಬಹುದಿತ್ತು; ಶಾಪ ಕೊಡಬಹುದಿತ್ತು. ಆದರೆ ವಿಶ್ವಾಮಿತ್ರನು ವ್ರತಸ್ಥನಾಗಿದ್ದರಿಂದ ತನ್ನ ಶಕ್ತಿಬಲಗಳನ್ನು ಬಳಸದೇ ದಶರಥನಿಂದ ಶ್ರೀರಾಮಲಕ್ಷ್ಮಣರನ್ನು ಸಹಾಯಕ್ಕಾಗಿ ಕರೆತಂದನು. ತಪದ ಬಲವು ಕಡಿಮೆಯಾಗಬಾರದೆಂದು ವೇದವತಿಯು ರಾವಣನಿಗೆ ಶಾಪ ಕೊಡದೆ ಬೇರೆ ಪ್ರತಿಜ್ಞೆಯನ್ನು ಮಾಡಿದಳು. ದಂಡಕಾರಣ್ಯದಲ್ಲಿಯ ಮುನಿಗಳು ಮತ್ತು ಕುಶಕನ್ಯೆಯರು ಉದ್ದೇಶಪೂರ್ವಕವಾಗಿ ಶಾಪವನ್ನು ನುಡಿದಿಲ್ಲ. ಕೆಲವು ನುಡಿಯದೇ ಇದ್ದ ಶಾಪಗಳ ಸಂದರ್ಭದಲ್ಲಿ ಶಾಪದ ವಿಚಾರ ಅದನ್ನು ನೀಡುವವನ ಮನದಲ್ಲಿ ಸಹ ಮೂಡಿತ್ತೆಂದು ಖಚಿತವಾಗಿ ಹೇಳಲು ಬರುವಂತಿಲ್ಲ. ಆದರೆ ಶಾಪಿತನಿಗೆ ಅಂಥ ಹೆದರಿಕೆ ಎನ್ನಿಸಿರಲು ಸಾಕು. ಅತಿಥಿವೇಷದಿಂದ ಬಂದ ರಾವಣನು ಶಾಪ ಕೊಡಬಹುದೆಂಬ ಭಯವು ಸೀತೆಗೆನಿಸಿತ್ತು. ತ್ರಿಶಂಕುವಿನ ಯಜ್ಞಕ್ಕಾಗಿ ಆಗಮಿಸಿದ ವಿಶ್ವಾಮಿತ್ರನು ಶಾಪ ಕೊಡಬಹುದೆಂಬ ಭಯವು ಋಷಿಮುನಿಗಳಿಗೆ ಉಂಟಾಗಿತ್ತು. ಗುರುವಿಗೆ ಶಾಪ ಕೊಡುವುದು ತರವಲ್ಲವೆಂದು ಸೌದಾಸನು ಶಾಪ ಕೊಡಲು ಪ್ರೇರಿತನಾಗಿ ಎತ್ತಿಕೊಂಡ ಜಲವನ್ನು ತನ್ನ ಪಾದಗಳ ಮೇಲೆ ಚೆಲ್ಲಿಕೊಂಡನು ; ಶಾಪವನ್ನು ನುಡಿಯಲಿಲ್ಲ. ದುರ್ವಾಸನ ಬಿನ್ನಹವನ್ನು ಲಕ್ಷ್ಮಣನು ಮನ್ನಿಸಿದ ಕಾರಣ ಶಾಪ ಕೊಡುವ ಪ್ರಸಂಗ ಉಂಟಾಗಲಿಲ್ಲ. ತನ್ನ ತಂದೆಯು ದಶರಥರಾಜನಿಗೆ ಶಾಪ ಕೊಡಬಹುದೆಂಬ ಭೀತಿಯು ಶ್ರವಣನಿಗೆ ಉಂಟಾಯಿತು. ತಮಗಿದ್ದ ಒಬ್ಬನೇ ಮಗನ ಸಾವಿನ ವಾರ್ತೆಯನ್ನು ಕೇಳಿ ಶ್ರವಣನ ತಂದೆಯು ಶಾಪ ಕೊಡಬಹುದಿತ್ತು ; ಈ ಶಾಪವು ದಶರಥನಿಗೆ ಬರಬಾರದೆಂದು ಇಚ್ಛಿಸಿ ಒಂದು ಉಪಾಯವನ್ನು ಸೂಚಿಸಿದನು. "ಹೇ ರಘುವಂಶಜನೇ, ಕೂಡಲೆ ನೀನು ನನ್ನ ತಂದೆಯ ಬಳಿಹೋಗಿ ಈ ಸುದ್ದಿಯನ್ನು ತಿಳಿಸು ! ದುಃಖಕೋಪಗಳಿಂದ ಶಾಪವನ್ನು ನುಡಿಯದಂತೆ ಆತನನ್ನು ಮನ್ನಿಸು."[36]

## ಪ್ರತಿಶಾಪ

ಶಾಪ ಕೊಡಲು ಅನೇಕ ಕಾರಣಗಳಿರಬಹುದು ; ಒಂದು ಶಾಪವು ಇನ್ನೊಂದಕ್ಕೆ ಮೂಲಕಾರಣವಾಗ ಬಹುದು. ಶಾಪಕ್ಕೆ ಪ್ರತ್ಯುತ್ತರವಾಗಿ ಕೊಟ್ಟ ಶಾಪವೆಂದರೆ ಪ್ರತಿಶಾಪ ! ಈ ರೀತಿ ಪ್ರತಿಶಾಪಗಳನ್ನು ಕೊಡುವ ಸಂದರ್ಭಗಳು ಎರಡಾವರ್ತಿ ರಾಮಾಯಣದಲ್ಲಿ ಬಂದಿವೆ. ಒಂದು ಸಂದರ್ಭದಲ್ಲಿ ಪ್ರತಿಶಾಪವನ್ನು ಕೊಡ ಲಾಗಿದೆ ; ಎರಡನೇ ಪ್ರಸಂಗದಲ್ಲಿ ಅದನ್ನು ತ್ಯಜಿಸಲಾಗಿದೆ. ವಸಿಷ್ಠನು ಕೊಟ್ಟ ಶಾಪದಿಂದ ಈ ಎರಡು ಪ್ರಸಂಗಗಳು ಉಂಟಾಗಿವೆ.

ಬ್ರಹ್ಮರ್ಷಿಶ್ರೇಷ್ಠ ವಸಿಷ್ಠ ಋಷಿಗಳಿಗೆ ನಿಮಿರಾಜನು ತನ್ನ ದೀರ್ಘಯಾಗದ ಪೌರೋಹಿತ್ಯವನ್ನು ಮೊದಲು ಕೊಟ್ಟಿದ್ದನು. ವಸಿಷ್ಠರು, ಈ ಮೊದಲೇ ಇಂದ್ರನ ಪೌರೋಹಿತ್ಯವನ್ನು ಸ್ವೀಕರಿಸಿದ್ದುದರಿಂದ ಕೂಡಲೇ ನಿಮಿರಾಜನಿಗೆ ತಮ್ಮ ಒಪ್ಪಿಗೆಯನ್ನು ಕೊಡುವಂತಿರಲಿಲ್ಲ. ಅವರು ತುಸು ಸಮಯ ಕಾಯಬೇಕೆಂದು ನಿಮಿರಾಜನಿಗೆ ತಿಳಿಸಿದರು. ಆಗ ನಿಮಿರಾಜನು ಗೌತಮರಿಂದ ತನ್ನ ಯಾಗವನ್ನು ಪೂರೈಸಿದನು. ಈ ವೃತ್ತಾಂತ ವನ್ನು ಅರಿತ ವಸಿಷ್ಠರು ಕೋಪಗೊಂಡರು. ರಾಜನನ್ನು ಈ ಬಗ್ಗೆ ವಿಚಾರಿಸಬೇಕೆಂದು ವಸಿಷ್ಠರು ಅಲ್ಲಿಗೆ ಬಂದಾಗ ರಾಜನು ನಿದ್ರಿಸುತ್ತಿದ್ದುದರಿಂದ ಭೇಟಿಯಾಗುವಂತಿರಲಿಲ್ಲ. ಆಗ ತಲೆಗೇರಿದ ಸಿಟ್ಟಿನಿಂದ ವಸಿಷ್ಠರು, "ನನ್ನನ್ನು ಕಡೆಗಣಿಸಿ ನೀನು ಬೇರೆ ಋತ್ವಿಜನನ್ನು ಕಂಡುಕೊಂಡಿರುವೆಯಾದ್ದರಿಂದ ನಿನ್ನ ಶರೀರವು ಚೈತನ್ಯ ರಹಿತವಾಗಲಿ !" ಎಂದು ಶಾಪ ಕೊಟ್ಟರು. ನಿದ್ರೆಯಿಂದ ಎಚ್ಚತ್ತನಂತರ ನಿಮಿರಾಜನಿಗೆ ವಸಿಷ್ಠರ ಶಾಪವು

ತಿಳಿಯಿತು. ನಿಮಿರಾಜನಿಗೂ ತುಂಬ ಕೋಪ ಬಂದಿತು ; "ನೀವು ಬಂದ ಸಮಾಚಾರ ನನಗೆ ಗೊತ್ತಿರಲಿಲ್ಲ ; ನಾನು ನಿದ್ರಿಸುತ್ತಿದ್ದೆ ; ಹೀಗಿದ್ದರೂ ನೀವು ಸಿಡಿಮಿಡಿಗೊಂಡು ಯಮದಂಡದಂತಿರುವ ಶಾಪಾಗ್ನಿಯನ್ನು ನನ್ನ ಮೇಲೆ ಬಿಟ್ಟಿರುವಿರಿ ; ಆದ್ದರಿಂದ ಹೇ ಬ್ರಹ್ಮರ್ಷಿ ! ನಿಮ್ಮ ಮನೋಹರ ದೇಹವು ಖಚಿತವಾಗಿ ಅಚೇತನಗೊಳ್ಳುವುದು" ಎಂದು ಶಪಿಸಿದನು.[17]

ಒಮ್ಮೆ ಬೇಟೆಗೆಂದು ಕಾನನದಲ್ಲಿ ಸಂಚರಿಸುತ್ತಿರುವಾಗ ಸೌದಾಸರಾಜನು ಒಬ್ಬ ರಾಕ್ಷಸನನ್ನು ಕೊಂದನು. ಆ ರಾಕ್ಷಸನ ಮಿತ್ರನು ರಾಜನ ಮೇಲೆ ಸೇಡು ತೀರಿಸುವ ಪಣಮಾಡಿದನು. ಅನ್ಯರೂಪಗಳನ್ನು ಧರಿಸಬಲ್ಲ ರಾಕ್ಷಸನಾದ ಆ ಮಿತ್ರನು ವಸಿಷ್ಠರ ವೇಷದಲ್ಲಿ ರಾಜನನ್ನು ಭೇಟಿಯಾಗಿ ಭೋಜನವನ್ನು ಕೇಳಿದನು. ಅದನ್ನನುಸರಿಸಿ ರಾಜನು ಅಡಿಗೆಗೆ ಅಪ್ಪಣೆ ಮಾಡಿದನು. ಆಗ ಈ ರಾಕ್ಷಸಮಿತ್ರನು ಅಡಿಗೆಯವನ ರೂಪ ಧರಿಸಿ ನರಮಾಂಸವನ್ನು ಸಿದ್ಧಗೊಳಿಸಿದನು; ರಾಜನಿಂದ ವಸಿಷ್ಠರಿಗೆ ತಲುಪಿಸಿದನು. ಇದನ್ನು ಅರಿತ ವಸಿಷ್ಠರು ಕೋಪಗೊಂಡು ಆ ರಾಜನಿಗೆ, "ಇದೇ ಬಗೆಯ ಆಹಾರವು ಖಂಡಿತವಾಗಿ ನಿನ್ನದಾಗಲಿ !" ಎಂದು ಶಪಿಸಿದರು. ತನ್ನಿಂದ ನಡೆದುಹೋದ ಅಪರಾಧವಾದರೂ ಯಾವುದು ಎಂಬುದನ್ನರಿಯದ ರಾಜನು ನಿಷ್ಕಾರಣವಾಗಿ ತನಗೆ ಶಾಪ ಬಂದುದನ್ನು ತಿಳಿದು, ವಸಿಷ್ಠರಿಗೆ ಪ್ರತಿಶಾಪವನ್ನು ಕೊಡಲೋಸುಗ ಆತನು ಕೈಯಲ್ಲಿ ನೀರನ್ನು ಎತ್ತಿಕೊಂಡನು. ಗುರುವನ್ನು ಶಪಿಸುವುದು ಸೂಕ್ತವಲ್ಲ ಎಂದು ರಾಣಿಯು ತಿಳಿಸಿ ಹೇಳಿದ್ದರಿಂದ ರಾಜನು ಪ್ರತಿಶಾಪವನ್ನು ನುಡಿಯಲಿಲ್ಲ.[38]

## ಉಃಶಾಪ

ಶಾಪಿತನಿಗೆ ಶುಭವಾಗಲಿ, ತಪ್ಪಿಗಾಗಿ ಶಿಕ್ಷೆಯಾದರೂ ಅದನ್ನು ತಿದ್ದಿಕೊಳ್ಳುವಂತಾಗಬೇಕು ಎಂಬ ಅರಿವಿತ್ತು. ಏಕೆಂದರೆ ಶಾಪದ ಪರಿಣಾಮಗಳು ಖಚಿತವಿರುತ್ತವೆ. ಅವುಗಳಲ್ಲಿ ಪರಿವರ್ತನೆ ಮಾಡುವಂತಿಲ್ಲ; ಹೀಗಿರುವುದರಿಂದ ಶಪಿಸುವ ಸಾಮರ್ಥ್ಯವನ್ನು ಚಿಕ್ಕಪುಟ್ಟ ಕಾರಣಗಳಿಗಾಗಿ ಬಳಸುವುದು ಹೇಯವೆಂದು ಬಗೆಯಲಾಗುತ್ತಿತ್ತು. ತಡೆಯಲಾಗದ ಕೋಪ ಬಂದಾಗ ಪರಿಣಾಮಗಳನ್ನು ಲೆಕ್ಕಿಸದೇ ಕೆಲವೊಮ್ಮೆ ಘೋರ ಶಾಪಗಳು ಕೊಡಲ್ಪಡುತ್ತಿದ್ದವು. ನಂತರ ಪಶ್ಚಾತ್ತಾಪವೆನಿಸುತ್ತಿತ್ತು. ಶಾಪದ ಆಗುಗಳ ತೀವ್ರತೆಯನ್ನು ಕಡಿಮೆ ಮಾಡುವ ಉಪಾಯವೆಂದರೆ 'ಉಃಶಾಪ'ವಾಗಿದೆ. ಹಲವೊಮ್ಮೆ ಇನ್ನೊಂದು ವರವನ್ನು ಕೊಟ್ಟು ಈ ಉದ್ದೇಶ ವನ್ನು ಪೂರೈಸಲಾಗುತ್ತಿತ್ತು. ಉಃಶಾಪದಿಂದ ಶಾಪದ ಪರಿಣಾಮದ ಕಾಲಾವಧಿಯನ್ನು ಕಡಿಮೆ ಮಾಡಿ ಮಿತಿಗೆ ತರಬಹುದು. ಮಾಡಿದ ತಪ್ಪಿಗೆ ಶಿಕ್ಷೆ ಇದ್ದರೂ ಆ ತಪ್ಪನ್ನು ತಿದ್ದಿಕೊಳ್ಳಬೇಕು ! ಶಾಪಹೊಂದಿದವನಿಗೆ ಒಳಿತಾಗಬೇಕು ! ಎಂಬ ಅರಿವು ಉಃಶಾಪದ ಹಿನ್ನೆಲೆಯಲ್ಲಿದೆ. ಶಾಪಕ್ಕೆ ಈಡಾದವನು ತನ್ನ ತಪ್ಪನ್ನು ಅರಿತು ಶಾಪದ ಕಾಲಾವಧಿ, ಪರಿಣಾಮ ಕಡಿಮೆಯಾಗಬೇಕೆಂದು ಪ್ರಾರ್ಥಿಸಿಕೊಳ್ಳಿದರೆ ಉಃಶಾಪಗಳನ್ನು ಯಾಚಿತವೆಂದು ಕೊಡುತ್ತಿದ್ದರು. ಒಮ್ಮೊಮ್ಮೆ ಶಾಪವನ್ನು ನುಡಿದವನಿಗೆ ಪಶ್ಚಾತ್ತಾಪವೆನಿಸಿ ಇಲ್ಲವೇ ಬೇರೆ ಕಾರಣಗಳಿಗಾಗಿ ಉಃಶಾಪವನ್ನು ಕೊಟ್ಟರೆ ಅವು ಅಯಾಚಿತವೆನಿಸಿಕೊಳ್ಳುತ್ತಿದ್ದವು. ಈ ಉಃಶಾಪದಲ್ಲಿ ಶಾಪದ ತೀವ್ರತೆಯನ್ನು ಕಡಿಮೆ ಮಾಡಬೇಕೆಂಬ ಮನೋಭಾವವಿರುತ್ತಿತ್ತು. ಕೆಲವೊಮ್ಮೆ ಶಾಪದ ಉತ್ತರಾರ್ಧದಲ್ಲಿಯೇ ಉಃಶಾಪವು ಬೆರೆತುಕೊಂಡಿರುತ್ತಿತ್ತು. ಉಃಶಾಪದ ಕಾರಣವೇನೇ ಇದ್ದರೂ ಅದನ್ನು ಕೊಡುವ ಇಲ್ಲವೇ ಕೊಡದಿರುವ ಇಲ್ಲವೇ ಅದರಲ್ಲಿ ಪರಿವರ್ತನೆ ಮಾಡುವ ಸಾಧ್ಯತೆಯು ಸಂಪೂರ್ಣವಾಗಿ ಶಾಪದಾತನ ಇಚ್ಛೆಯನ್ನವಲಂಬಿ ಸಿರುತ್ತದೆ. ಪ್ರತಿಯೊಂದು ಶಾಪಕ್ಕೆ ಉಃಶಾಪವಿರುವುದಿಲ್ಲ. ರಾಮಾಯಣದಲ್ಲಿಯ ಒಟ್ಟು ೫೯ ಶಾಪಗಳಲ್ಲಿ ಕೇವಲ ಹನ್ನೊಂದಕ್ಕೆ ಉಃಶಾಪಗಳಿವೆ. ಉಃಶಾಪಗಳಿಗೆ ಸ್ವತಂತ್ರ ಅಸ್ತಿತ್ವವಿರದೇ ಅವು ಶಾಪವನ್ನಾಧರಿಸಿಯೇ ಇರುತ್ತವೆ. ಶಾಪದ ತುಲನೆಯಲ್ಲಿ ಉಃಶಾಪದ ಸ್ಥಾನವು ಕಡಿಮೆ ಮಹತ್ವವುಳ್ಳದ್ದು. ಕಡಿಮೆ ದರ್ಜೆಯದಿದ್ದರೂ ಅದರ ಫಲಿತಾಶಂಗಳು ಉದ್ದೇಶಭರಿತವಿರುತ್ತವೆ.

ಸ್ಥೂಲಶಿರಾ ಋಷಿಯ ಶಾಪದಿಂದ ವಿಶ್ವಾವಸು ಎಂಬ ಗಂಧರ್ವನು ಕಬಂಧರಾಕ್ಷಸನಾದನು. ಆಗ ಕಬಂಧನು ಕೋರಿದಂತೆ "ನಿರ್ಜನ ಕಾಡಿನಲ್ಲಿ ಶ್ರೀರಾಮನು ಬಂದು ನಿನ್ನ ಹಸುಗಳನ್ನು ತುಂಡರಿಸಿ ನಿನ್ನನ್ನು ಎಂದು ದಹಿಸಿಬಿಡುವನೋ ಅಂದು ನಿನಗೆ ನಿನ್ನ ಭವ್ಯ ದಿವ್ಯ ಶುಭರೂಪವು ಮರಳಿ ದೊರೆಯುವುದು"

ಎಂಬ ಯಾಚಿತ ಉಃಶಾಪ ದೊರಕಿತು. ಇದೇ ಗಂಧರ್ವನಿಗೆ ಇಂದ್ರನಿಂದಲೂ ಶಾಪ ದೊರೆತಿತ್ತು. ಈತನು ಇಂದ್ರನಿಂದಲೂ ಉಃಶಾಪವನ್ನು ಬೇಡಿಕೊಂಡಿದ್ದನು. ಬೇಡಿಕೊಂಡ ಉಃಶಾಪವೆಂದರೆ ಯಾಚಿತವಾಗಿದೆ. ಪುಂಜಿಕಸ್ಥಲೆ ಎಂಬ ಅಪ್ಸರೆಗೆ ಶಾಪ ದೊರೆತಿತ್ತು ; ಶಾಪದ ಕಾಲದಲ್ಲಿ ತನ್ನ ಇಚ್ಛೆಯ ಅನುಸಾರ ಮಾನವರೂಪ ಅಥವಾ ಕೋತಿಯ ರೂಪವನ್ನು ತಾಳಬಹುದೆಂಬ ಸ್ವಾತಂತ್ರ್ಯ ದೊರೆತಿತ್ತು. ಆರು ತಿಂಗಳು ಸತತ ನಿದ್ರೆಮಾಡಿ ಎಚ್ಚರಗೊಂಡ ಒಂದು ದಿನ ಪೂರ್ತಿ ಮನಸಾರೆ ಸಂಹಾರವನ್ನು ನಡೆಯಿಸುವ ಸ್ವಾತಂತ್ರ್ಯ ಕುಂಭಕರ್ಣನಿಗೆ ದೊರಕಿತ್ತು. ರಾವಣನು ಕುಂಭಕರ್ಣನ ಪರವಾಗಿ ಇದನ್ನು ಬೇಡಿಕೊಂಡಿದ್ದನು. ಪಿತೃಕುಲಕ್ಕೆ ವಿರಾಜಿಸುವಂಥ ಪುತ್ರನೊಬ್ಬನು (ವಿಭೀಷಣನು) ಹುಟ್ಟಬೇಕೆಂದು ಕೇಕಸಿಯ ಬೇಡಿಕೆಯಂತೆ ಅವಳಿಗೆ ಪುತ್ರಪ್ರಾಪ್ತಿಯಾಯಿತು. ಗೊತ್ತಿರದೇ ಗೌತಮನಿಗೆ ಅನಿಷ್ಟವಾದ ಭೋಜನವನ್ನು ಕೊಟ್ಟದ್ದಕ್ಕಾಗಿ "ರಣಹದ್ದು ಆಗು !" ಎಂಬ ಶಾಪವು ಬ್ರಹ್ಮದತ್ತರಾಜನಿಗೆ ದೊರೆಯಿತು. ಈ ನಂತರ 'ಶ್ರೀರಾಮನ ದರ್ಶನದಿಂದ ಆಗುವ ಬಿಡುಗಡೆ' ಇವೆಲ್ಲವೂ ಯಾಚಿತ ಉಃಶಾಪಗಳಾಗಿವೆ.

ಅಹಲ್ಯೆಯ ಶಾಪದ ಕಥೆ ರಾಮಾಯಣದಲ್ಲಿ ಎರಡು ಬಾರಿ ಬಂದಿದೆ. ಅವೆರಡರಲ್ಲಿ ಭಿನ್ನತೆಯು ಕಂಡುಬರುತ್ತದೆ.[39] ಬಾಲಕಾಂಡದಲ್ಲಿಯ ಉಃಶಾಪವು ಅಯಾಚಿತವಿದ್ದು ಉತ್ತರಕಾಂಡದಲ್ಲಿ ಯಾಚಿತವಿದೆ. ಈ ಉಃಶಾಪಗಳು ಸರಿಸಮಾನವಾಗಿದ್ದರೂ ಅವುಗಳ ಸ್ವರೂಪದಲ್ಲಿ ವ್ಯತ್ಯಾಸವಿದೆ. ಬಾಲಕಾಂಡದಲ್ಲಿದ್ದ ಕಥೆಯಂತೆ 'ಗೌತಮನ ವೇಷದಲ್ಲಿ ಆಶ್ರಮಕ್ಕೆ ಬಂದವನು ಇಂದ್ರನೆಂದು ಅಹಲ್ಯೆಗೆ ಮೊದಲೇ ಗೊತ್ತಿತ್ತು; ಅಷ್ಟೇ ಅಲ್ಲದೆ, ದೇವತೆಗಳ ರಾಜನಾದ ಇಂದ್ರನು ತನ್ನಲ್ಲಿ ಮೋಹಿತನಾಗಿದ್ದಾನೆ ಎಂಬ ಸಂಗತಿಯು ಅವಳಿಗೆ ಹೆಮ್ಮೆಯ ವಿಷಯವಾಗಿತ್ತು' ಎಂದಿದೆ. ನಿಜವಾಗಿ ಅಹಲ್ಯೆಯಿಂದ ಮಹಾ ಅಪರಾಧ ನಡೆದಿತ್ತು. ಅದಕ್ಕೆ ತಕ್ಕ ಶಾಸ್ತಿ ಆಗಲೇಬೇಕಿತ್ತು. "ಸಾವಿರಾರು ವರ್ಷಗಳವರೆಗೆ ಯಾರ ಕಣ್ಣಿಗೂ ಬೀಳದೆ ನೀನು ಕೇವಲ ವಾಯುಭಕ್ಷಣೆ ಮಾಡಿ ಬದುಕಿರು !" ಎಂಬ ಶಾಪವನ್ನು ಗೌತಮನು ಅಹಲ್ಯೆಗೆ ಕೊಟ್ಟನು. "ಶ್ರೀರಾಮನ ದರ್ಶನದಿಂದ ಶುದ್ಧಳಾಗಿ ಪೂರ್ವರೂಪವನ್ನು ತಾಳುವೆ !" ಎಂಬ ಉಃಶಾಪವನ್ನು ಗೌತಮನು ಇಂಥ ಮಹಾಪರಾಧಕ್ಕೆ ಅಯಾಚಿತವಾಗಿ ಕೊಟ್ಟದ್ದು ಸೋಜಿಗದ ಸಂಗತಿಯಾಗಿದೆ. ಉತ್ತರಕಾಂಡದಲ್ಲಿ, ಗೌತಮನ ವೇಷವನ್ನು ಧರಿಸಿ ಆಶ್ರಮಕ್ಕೆ ಬಂದವನು ಇಂದ್ರನೆಂದು ಅಹಲ್ಯೆಗೆ ಗೊತ್ತಿರಲಿಲ್ಲವೆಂದು ಬರೆದಿದ್ದಾರೆ. ನಿಜಸ್ಥಿತಿಯು ತಿಳಿಯದ ವಿಷಯವಾಗಿದೆ. ವಾಲ್ಮೀಕಿಯನ್ನು ಆಧರಿಸಿ ಹೇಳುವುದಾದರೆ ಅಹಲ್ಯೆಯು ಉಃಶಾಪವನ್ನು ಗೌತಮನಿಂದ ಬೇಡಿಕೊಂಡಿದ್ದಾಳೆ. ಸ್ವೇಚ್ಛೆಯಿಂದ ಇಂದ್ರನೊಡನೆ ರತಿಕ್ರೀಡೆಯಲ್ಲಿ ತೊಡಗಿರಲಿಲ್ಲ ; ಆದ್ದರಿಂದ ಶಾಪವು ಸೌಮ್ಯವಾಗಬೇಕೆಂದು ಅಹಲ್ಯೆಯು ಪ್ರಾರ್ಥಿಸಿದಳು. ಗೌತಮನು ಈ ರೀತಿ ಯಾಚಿತ ಉಃಶಾಪವನ್ನು ಕೊಟ್ಟನು : "ಮಾನವದೇಹಧಾರಿಯಾದ ಮಹಾವಿಷ್ಣುವು ಬ್ರಾಹ್ಮಣರ ನೆರವಿಗೆಂದು ವನಕ್ಕೆ ಆಗಮಿಸಿದಾಗ ನೀನು ಪವಿತ್ರಳಾಗುವೆ ! ನೀನು ಎಸಗಿದ ದುಷ್ಕರ್ಮಗಳನ್ನು ಪರಿಹರಿಸುವ ಸಾಮರ್ಥ್ಯ ಅವನಲ್ಲಿ ಮಾತ್ರ ಇದೆ. ಅವನಿಗೆ ಆತಿಥ್ಯವನ್ನು ಸಲ್ಲಿಸಿ ಉಪಚರಿಸಿದರೆ ನೀನು ನನ್ನ ಬಳಿ ಬಂದು ವಾಸಿಸುವೆ!"

ತಪಸ್ಸಿನಲ್ಲಿ ವಿಘ್ನವನ್ನುಂಟುಮಾಡುವ ರಂಭೆಗೆ "ನೀನು ಸಾವಿರಾರು ವರುಷಗಳವರೆಗೆ ಕಲ್ಲಾಗಿ ಬೀಳು!" ಎಂಬ ಶಾಪವನ್ನು ವಿಶ್ವಾಮಿತ್ರನು ಕೊಟ್ಟನು. ತೇಜಸ್ವಿಯಾದ ಬ್ರಾಹ್ಮಣನೊಬ್ಬನಿಂದ ನಿನ್ನ ಉದ್ಧಾರವಾಗುವುದು ! ಎಂಬ ಭರವಸೆಯು ಆ ಶಾಪದ ಜೊತೆಗಿತ್ತು. ಯಜ್ಞದಲ್ಲಿ ವಿಘ್ನಗಳನ್ನುಂಟುಮಾಡುವ ಹನುಮಂತನಿಗೆ ಋಷಿಗಳು ಶಾಪಕೊಟ್ಟಿದ್ದಾರೆ. ಜೊತೆಗೆ "ಯಾರಾದರೂ ಸ್ಮರಣೆ ಮಾಡಿಕೊಟ್ಟರೆ ನಿನ್ನ ಸಾಮರ್ಥ್ಯದ ಅರಿವು ನಿನಗಾಗುವುದು" ಎಂಬ ಉಃಶಾಪವನ್ನೂ ಕೊಟ್ಟಿದ್ದಾರೆ. ಬ್ರಾಹ್ಮಣರು ಕೊಟ್ಟ ಶಾಪದ ಫಲವಾಗಿ ನೃಗರಾಜನು ದೀರ್ಘಕಾಲದವರೆಗೆ 'ಓತಿಕೇತ' ಪ್ರಾಣಿಯಾಗಿ ಜೀವಿಸಬೇಕಾಯಿತು. 'ಪಾಪನಿವಾರಣೆ ಆದಾಗ, ಶಾಪದ ಪರಿಹಾರವಾಗುವುದು !' ಎಂಬ ಆಶ್ವಾಸನೆ ಕೊಡಲಾಗಿತ್ತು. ಈ ಮೊದಲು ಹೇಳಿದ ಉಃಶಾಪಗಳು ಮತ್ತು ಬಾಲಕಾಂಡದಲ್ಲಿ ಅಹಲ್ಯೆಗೆ ದೊರೆತ ಉಃಶಾಪ—ಇವು ಶಾಪಗಳ ಉತ್ತರಾರ್ಧದಲ್ಲಿಯೇ ಸೇರಿಕೊಂಡಿವೆ. ವಸಿಷ್ಠನಿಗೆ ಅಯೋಗ್ಯಭೋಜನವನ್ನು ಕೊಡುವುದರಲ್ಲಿ ಸೌದಾಸರಾಜನ ಯಾವ ತಪ್ಪೂ ಇರಲಿಲ್ಲ. ಈ ಸಂಗತಿಯು ಗೊತ್ತಾಗದೇ ರಾಜನಿಗೆ ಶಾಪ ಕೊಟ್ಟದ್ದು ತಪ್ಪಾಯಿತೆಂದೆನಿಸಿತು. ಶಾಪ ಕೊಟ್ಟಾಗಿದೆ ; ಅದನ್ನು ಹಿಂತೆಗೆಯುವುದು ಅಸಾಧ್ಯವೆಂದು ವಸಿಷ್ಠನು ಉಃಶಾಪವನ್ನು ಕೊಡದೇ ಇನ್ನೊಂದು ವರವನ್ನು ಕೊಟ್ಟನು.

ಈ ವರದಿಂದ ಶಾಪದ ಪರಿಣಾಮದ ಕಾಲವು ಹನ್ನೆರಡು ವರ್ಷಕ್ಕೆ ಸ್ತಿಮಿತಗೊಂಡಿತು. ಪೂರ್ವದ ಸ್ಮರಣೆಯಾಗ ಲಾರದೆಂಬ ಆಶ್ವಾಸನೆಯನ್ನೂ ಕೊಟ್ಟನು.

ಈ ಉಃಶಾಪಗಳಲ್ಲಿ ಶ್ರೀರಾಮನ ದರ್ಶನ, ಸ್ಪರ್ಶ ಇವುಗಳಿಗೆ ಮಹತ್ವವನ್ನು ಕೊಡಲಾಗಿದೆ. ಶ್ರೀರಾಮಚರಿತ್ರೆಯಲ್ಲಿ ಶ್ರೀರಾಮನ ಗುಣಗೌರವ ಅಧಿಕವಿರುವದು ಸಹಜ ಸಂಗತಿ.

## ಆಣೆಗಳು (ಶಪಥ)

ರಾಮಾಯಣ-ಮಹಾಭಾರತ ಮುಂತಾದ ಹೊತ್ತಿಗೆಗಳಲ್ಲಿ ಹಲವಾರು ಆಣೆಗಳಿವೆ. ನುಡಿ ಹಾಗೂ ನಡೆಗಳ ನೈಜತೆಯನ್ನು ಮನಗಾಣಿಸುವುದೇ ಆಣೆಯ ಮುಖ್ಯ ಗುರಿ. ಹಾಗೆಂದೇ ಸತ್ಯವನ್ನು ಸ್ಮರಿಸಿ ಉಚ್ಚರಿಸಲಾದ ಆಣೆಗಳು ಹೆಚ್ಚು. 'ನನ್ನ ನುಡಿ ಸುಳ್ಳಾದರೆ ನನ್ನ ಮೇಲೆ ಇಂಥಿಂಥ ವಿಪತ್ತು ಬಂದೆರಗಲಿ ಎಂದು ತನ್ನನ್ನು ತಾನೇ ಶಪಿಸಿಕೊಳ್ಳುವುದೇ ಶಪಥವೆನ್ನಿಸಿದೆ' ಎಂಬುದಾಗಿ ವೆಸ್ಟರ್‌ಮಾರ್ಕನು ವ್ಯಾಖ್ಯೆಯನ್ನು ತಯಾರಿಸಿದ್ದಾನೆ.[40] 'ತಾನು ನುಡಿದದ್ದು ನಿಜವನ್ನು ಎಂಬುದನ್ನು ಮನಗಾಣಿಸಲೆಂದು ಉಚ್ಚರಿಸಲಾದ ಹಾಗೂ ಅದು ಸುಳ್ಳೆಂದಾದರೆ ತನ್ನ ಮೇಲೆ ಅನಿಷ್ಟ ಬಂದೆರಗೀತು, ಎಂದು ಸಾರುವ ಪದಪ್ರಯೋಗಗಳೆಂದರೆ ಆಣೆ'[41] ಎಂಬ ಲಕ್ಷಣವನ್ನು 'ಭಾರತೀಯ ಸಂಸ್ಕೃತಿಕೋಶ'ಕಾರರು ನೀಡಿದ್ದಾರೆ. ಇವೆರಡೂ ವ್ಯಾಖ್ಯೆಗಳು ಒಂದಕ್ಕೊಂದು ತೀರ ಹತ್ತಿರದವು ಗಳು, ಹೊಂದಿಕೊಳ್ಳುವಂಥವು. 'ಯಾವೊಬ್ಬ ದೇವತೆಯನ್ನು ಇಲ್ಲವೆ ಒಂದು ಪವಿತ್ರ ವಸ್ತುವನ್ನು ಆವಾಹಿಸಿ, ತನ್ನ ಮಾತಿನ ನೈಜತೆಯನ್ನು ಹಾಗೂ ದೃಢತೆಯನ್ನು ಮನಗಾಣಿಸುವುದೆಂದರೇನೆ ಆಣೆ' ಎಂದು ಓಡ್ ಈತನು ವ್ಯಾಖ್ಯೆಯನ್ನು ನೀಡಿದ್ದಾನೆ.[42] ಇವೆಲ್ಲ ವ್ಯಾಖ್ಯೆಗಳು ಆಣೆಗಳ ಕೆಲವು ಮುಖ್ಯವಾದ ಅಂಶಗಳನ್ನು ಹಾಗೂ ವೈಶಿಷ್ಟ್ಯಗಳನ್ನು ಕುರಿತು ಹೇಳುವವಾದರೂ ಅವುಗಳನ್ನಾಧರಿಸಿ ಎಲ್ಲ ಆಣೆಗಳನ್ನೂ ವ್ಯವಸ್ಥೆಗೊಳಿಸಲಾಗದು. ಈ ವ್ಯಾಖ್ಯೆಗಳೆಲ್ಲ ಅವ್ಯಾಪ್ತಿಗೊಳಪಟ್ಟವುಗಳಾಗಿವೆ. ಎಲ್ಲ ಆಣೆಗಳ ಸಂದರ್ಭದಲ್ಲೂ ಶಾಪ, ದೇವತೆ ಇಲ್ಲವೆ ಪವಿತ್ರ ವಸ್ತುವಿನ ಆವಾಹನೆ ಇರುತ್ತದೆಂದೇನೂ ಇಲ್ಲ. ಹಲವು ಆಣೆಗಳಲ್ಲಿ ಅವುಗಳ ಕೊರತೆ ಸ್ಫುಟವಾಗಿ ಕಾಣುತ್ತದೆ. ಹನುಮಂತ ವಿರಹಾರ್ತಳಾದ ಸೀತೆಗೆ, 'ಶೀಘ್ರದಲ್ಲಿಯೇ ನಿನಗೆ ಶ್ರೀರಾಮನ ದರ್ಶನವಾಗಲಿದೆ' ಎಂದು ಆಣೆ ಮಾಡಿ ಹೇಳುತ್ತಾನೆ. ಆದರೆ ಅವನ ಈ ಮಾತಿನಲ್ಲಿ ಅದಾವುದೇ ಆಣೆಯೂ ಇಲ್ಲ, ಇಲ್ಲವೆ ಯಾವುದೇ ದೇವತೆಗೆ ಆವಾಹನೆಯೂ ಇಲ್ಲ. ಗುಹರಾಜನು ಶ್ರೀರಾಮನ ರಕ್ಷಣೆಗಾಗಿ ಆಣೆಯಿಂದ ಕೂಡಿದ ಮಾತನ್ನಾಡಿದನು. ಆ ಮಾತಿನಲ್ಲಿ ಯಾರ ಮೇಲೂ ಅದಾವ ಅರಿಷ್ಟವೂ ಬಂದೆರಗುವ ವಾರ್ತೆಯಿಲ್ಲ. ಎಲ್ಲ ಬಗೆಯ ಆಣೆಗಳಲ್ಲೂ ಶಾಪ ಇದ್ದೇ ಇರುತ್ತದೆಂದಿಲ್ಲ. ಹೀಗಾಗಿ ಶಾಪವು ಆಣೆಯ ಒಂದು ವ್ಯವಚ್ಛೇದಕವಾದ ಲಕ್ಷಣ ಎಂದೆನ್ನಲಾಗದು. ಕೆಲವು ಆಣೆಗಳಲ್ಲಂತೂ ಸಾಕ್ಷಿಗಳಿದ್ದುದೂ ಕಂಡುಬರುತ್ತದೆ. ಶ್ರೀರಾಮ ಸುಗ್ರೀವರಿಬ್ಬರೂ ಸಮದುಃಖಿಗಳಾಗಿದ್ದರು. ಪರಸ್ಪರರ ಗೆಳೆತನವನ್ನು ಸಂಪಾದಿಸಿ ಪರಸ್ಪರರಿಗೆ ನೆರವಾಗಲು ಒಪ್ಪಿಕೊಂಡರು. ಸುಗ್ರೀವನ ಹೇಳಿಕೆಯ ಕಾಲಕ್ಕೆ ಅವನಾಣೆಗೆ ಅಗ್ನಿಸಾಕ್ಷಿಯಾಗಿತ್ತು. ಕೈಕೇಯಿಗಿತ್ತ ವರಗಳನ್ನು ತಾನು ಪೂರ್ತಿಗೊಳಿಸುವೆನೆಂದು ದಶರಥನು ಆಣೆಯೊಂದಿಗೆ ಪ್ರತಿಜ್ಞೆಗೈದನು. ಅದನ್ನು ಆಲಿಸಿರೆಂದು, ಕೈಕೇಯಿ ದೇವತೆಗಳು, ಗಂಧರ್ವರು, ಇಂದ್ರಾದಿಗಳನ್ನು ಆವಾಹಿಸುತ್ತಾಳೆ.

'ಸಂಸ್ಕೃತದ 'ಶಪ್' ಧಾತುವಿನಿಂದಲೇ ಶಾಪ ಹಾಗೂ ಶಪಥಗಳು ಹುಟ್ಟಿಕೊಂಡಿವೆ. ಇವೆರಡರಲ್ಲೂ ಶಿಕ್ಷೆ ಒಳಗೊಂಡಿದೆ. ಶಾಪ ಹಾಗೂ ಶಪಥಗಳು ಅಭಿಚಾರಾತ್ಮಕವಾದವುಗಳು. ಅವುಗಳಲ್ಲಿ ಸತ್ಯಕ್ರಿಯೆಯ ವೈಶಿಷ್ಟ್ಯಗಳೂ ಕಂಡುಬರುತ್ತವೆ. ಹಲವು ಸಲ ಇವೆರಡೂ ಪದಗಳನ್ನೂ ಒಂದೇ ಅರ್ಥದಿಂದ ಬಳಸಲಾಗುತ್ತದೆ. ಆದರೆ ಅವು ಸಮಾನಾರ್ಥದ ಪದಗಳಂತೂ ಅಲ್ಲವೇ ಅಲ್ಲವಲ್ಲದೆ ಅವುಗಳಲ್ಲಿ ಹಲವು ಬಗೆಯ ವ್ಯತ್ಯಾಸ ಗಳುಂಟು. 'ಶಪಥ (ಆಣೆ)' ಒಂದು ಬಗೆಯ ಭರವಸೆ ಎನ್ನಿಸಿದರೆ ಶಾಪವು ಶಿಕ್ಷೆ ಎನ್ನಿಸಿದೆ. ಶಪಥದಲ್ಲಿ ಶಾಪ ವಿರುತ್ತದಾದರೆ ಶಾಪದಲ್ಲಿ ಶಪಥವಿರದು. ಶಪಥದಲ್ಲಿರಬಹುದಾದ ಶಾಪದಿಂದ ಮುಖ್ಯವಾಗಿ ಸ್ವಂತಕ್ಕಾಗಿ ಶಿಕ್ಷೆಯಿರುತ್ತದೆ ; ಶಾಪದ ಶಿಕ್ಷೆ ಬೇರೆಯವರಿಗಾಗಿ. ಶಾಪವನ್ನೀಯುವ ಸಾಮರ್ಥ್ಯವನ್ನು ಪಡೆಯಲು ಬಲುದೊಡ್ಡ ತಪಸ್ಸನ್ನು ಗೈಯಬೇಕಿದೆ. ಆಣೆಗೆ ಮಾತ್ರ ಇದು ಬೇಕಿಲ್ಲ. ಶಪಿಸುವುದರಿಂದ ತಪಸ್ಸಾಮರ್ಥ್ಯ ಕಡಿಮೆಯಾಗುತ್ತದೆ. ಆಣೆಯಿಂದ ಹಾಗೇನೂ ಆಗದು. ಶಾಪಕ್ಕೆ ಉಶ್ಶಾಪವಿರಲು ಸಾಧ್ಯ. ಆದರೆ ಆಣೆಯಿಂದ

ಬಿಡುಗಡೆ ಎಂಬುದಿಲ್ಲ. ಶಾಪ ಹಿಂದಿರುಗಲು ಸಾಧ್ಯ. ಆದರೆ ಆಣೆ ಹಾಗಲ್ಲ. ವರ್ಣಭೇದಗಳಿಗೆ ತಕ್ಕಂತೆ ಆಣೆಗಳು ಭಿನ್ನಭಿನ್ನವಾದವುಗಳು. ಆದರೆ ಆಣೆಗೆ ಅದಾವ ವರ್ಣಭೇದವೂ ಇಲ್ಲ. ಶಪಥವು ಮಾಧ್ಯಮ ದಿಂದಾಗಿ ಪ್ರಭಾವಿಯೆನ್ನಿಸಿದರೆ ಶಾಪವು ತಪಸ್ಸಿನಿಂದಾಗಿ[41] ಎಂಬುದಾಗಿ ಸಂಸ್ಕೃತಿಕೋಶಕಾರರು ಇವೆರಡರ ನಡುವಣ ವ್ಯತ್ಯಾಸವನ್ನು ಖಚಿತಪಡಿಸಿದ್ದಾರೆ.

ಶಾಪ ಹಾಗೂ ಶಪಥಗಳಲ್ಲಿ ಕೆಲವೊಂದು ಸಮಾನಧರ್ಮಗಳೂ ಇವೆ. ಸತ್ಯವನ್ನು ಸಿದ್ಧಪಡಿಸುವುದು ಇವೆರಡರ ಸಮಾನವಾದ ಗುರಿ. ಅದು ವ್ಯಕ್ತಗೊಳ್ಳುವುದು ಕೇವಲ ಗಟ್ಟಿಯಾದ ಆತ್ಮವಿಶ್ವಾಸದಿಂದ ಮಾತ್ರ. ಪ್ರತಿಜ್ಞೆಯ ಉಚ್ಚಾರ ಹಾಗೂ ಆಚಾರಗಳಲ್ಲಂತೂ ಆತ್ಮವಿಶ್ವಾಸಕ್ಕೆ ತುಂಬ ಮಹತ್ವವಿದೆ. ಸತ್ಯಕ್ರಿಯೆಯ ಸತ್ಯವನ್ನು ಮನಗಾಣಿಸಲು ನೇರವಾದ ಕೃತಿಯ ಬೆಂಬಲ ಅಗತ್ಯದ್ದು. ಸೀತೆಯ ಉಜ್ವಲವಾದ ಶೀಲವನ್ನು ಸಂದೇಹಿಸುವ ಶ್ರೀರಾಮನನ್ನು ಮನಗಾಣಿಸಲೆಂದು ಅವಳು ಒಂದು ಬಾರಿ ಅಗ್ನಿದಿವ್ಯವನ್ನು ಕೈಕೊಂಡಳು. ಇನ್ನೊಂದು ಬಾರಿ ಭೂಮಾತೆಯನ್ನು ಆವಾಹಿಸಿ ತನ್ನನ್ನು ಅವಳ ಮಡಿಲಲ್ಲಿ ಕರೆದುಕೊಳ್ಳೆಂದಳು. ಇವೆರಡರಲ್ಲಿ ಆಣೆ, ಪ್ರತಿಜ್ಞೆ, ಸತ್ಯಕ್ರಿಯೆ ಮುಂತಾದುವೆಲ್ಲವೂ ಇವೆ.

ಕೆಲವು ಬೇರೆ ಬಗೆಯ ಆಣೆಗಳೂ ಇವೆ. ಅವುಗಳಲ್ಲಿ ದೇವತೆಗಳಿಗೆ ಆವಾಹನೆಯಿಲ್ಲ, ತನಗೆ ಶಾಪವಿಲ್ಲ. ಅಭಿಚಾರಕ್ಕೂ ಸ್ಥಾನವಿಲ್ಲ. ಕೆಲವು ಶಾಪಗಳಿಂದ ವೈಯಕ್ತಿಕ ಪ್ರತಿಷ್ಠೆ, ನೈತಿಕ ಹೊಣೆಗಾರಿಕೆ, ಭಾವನಾತ್ಮಕ ಸಂಬಂಧಗಳು ವ್ಯಕ್ತಗೊಳ್ಳುತ್ತವೆ. ಭರತನ ಭೆಟ್ಟಿಯ ತರುವಾಯ ಶ್ರೀರಾಮ ಅವನನ್ನು ಬೀಳ್ಕೊಡುವಾಗ ಶತ್ರುಘ್ನನಿಗೆ ಹೀಗೆನ್ನುತ್ತಾನೆ—

'ಕೈಕೇಯಿ ಮಾತೆಯನ್ನು ರಕ್ಷಿಸು. ಅವಳ ಮೇಲೆ ಕೋಪಿಸಿಕೊಳ್ಳಬೇಡ.[44] ನಿನಗೆ ನನ್ನ ಹಾಗೂ ಸೀತೆಯ ಆಣೆಯಿದೆ.' ಇದೇ ರೀತಿಯಾಗಿ ಶ್ರೀರಾಮನ ಬಗೆಗಿನ ತನ್ನ ನಿಸ್ಸೀಮವಾದ ಪ್ರೇಮವನ್ನು ಕೌಸಲ್ಯೆಗೆ ಮನಗಾಣಿಸ ಲೆಂದು ಲಕ್ಷ್ಮಣ ಹೀಗೆನ್ನುತ್ತಾನೆ—

'ಎಲೈ ದೇವಿ, ನಾನು ನನ್ನಣ್ಣನನ್ನು ಮನಸ್ಸಿನಿಂದ ಪ್ರೇಮಿಸುತ್ತೇನೆ. ಸತ್ಯ, ಬಿಲ್ಲು, ದಾನ, ಹಾಗೂ ಯಜ್ಞಯಾಗಗಳ ಮೇಲೆ ಆಣೆಯಿಟ್ಟು ನಿನಗೀ ಮಾತನ್ನು ಹೇಳುತ್ತಿದ್ದೇನೆ.'[45] ಇವೆರಡೂ ಉದಾಹರಣೆಗಳಲ್ಲಿ ಬಲು ಪ್ರಿಯನಾದ ವ್ಯಕ್ತಿಯ ಉಲ್ಲೇಖವಿದೆ. ತಾಯಿ-ತಂದೆ, ಗುರು, ಗಂಡ, ಮಡದಿ, ಮಗ, ಮಗಳು, ಗೆಳೆಯ, ದೇವ-ದೇವತೆಗಳು, ಭಕ್ತ, ಧರ್ಮಗ್ರಂಥ, ಪ್ರಿಯವಸ್ತು, ಹೊಟ್ಟೆಹೊರೆವ ಸಾಧನಗಳು, ಮುಂತಾದವುಗಳ ಉಲ್ಲೇಖವಿದ್ದರೆ ಆಣೆ ಹೆಚ್ಚು ಪ್ರಭಾವಿಯೆಂದು ತಿಳಿಯಲಾಗುತ್ತದೆ. ಶ್ರೀರಾಮನು ವಿಭೀಷಣ ನಿಗೆ ಭರವಸೆಯನ್ನೀಯುವಾಗ ತನ್ನ ಮೂವರೂ ಸೋದರರ ಮೇಲೆ ಆಣೆಯಿಟ್ಟಿದ್ದಾನೆ. ಅದು ಹೀಗೆ—

'ರಾವಣನನ್ನು ಅವನ ಮಕ್ಕಳು, ನಂಟರಿಷ್ಟರೊಂದಿಗೆ ಯುದ್ಧದಲ್ಲಿ ಕೊಲ್ಲದೆ ಅಯೋಧ್ಯೆಗೆ ಹಿಂತಿರುಗ ಲಾರೆ. ನನ್ನ ಮೂವರೂ ಸೋದರರ ಮೇಲೆ ಆಣೆಯಿಟ್ಟು ಈ ಮಾತನ್ನು ಹೇಳುತ್ತಿದ್ದೇನೆ.'[46] ತನ್ನ ಹೇಳಿಕೆಯ ಸತ್ಯತೆ, ತನ್ನ ಶೀಲ, ಸಾಮರ್ಥ್ಯ, ಮುಂತಾದವುಗಳನ್ನು ಸಿದ್ಧಪಡಿಸಿ ತೋರಿಸದೆ ತನ್ನನ್ನೇ ಗುರಿಯಾಗಿಟ್ಟು ಇಂಥ ಆಣೆಗಳನ್ನು ಮಾಡಲಾಗುತ್ತದೆ. ಸೀತೆಯ ಶುದ್ಧಶೀಲದ ಬಗೆಗೆ ಖಾತರಿಯನ್ನು ನೀಡುವಾಗ ವಾಲ್ಮೀಕಿ ಹೀಗೆನ್ನುತ್ತಾನೆ—

'ಈ ಮೈಥಿಲಿ ತಪ್ಪುಗಾರಳಾಗಿದ್ದರೆ ಸಾವಿರಾರು ವರ್ಷಗಳ ಕಾಲ ನಾನು ಕೈಕೊಂಡ ತಪಸ್ಯೆಯ ಫಲ ನನಗೆ ದೊರೆಯದಿರಲಿ ! ಮೈಥಿಲಿ ಪಾಪರಹಿತಳಾಗಿದ್ದರೆ ಮಾತ್ರ ನನ್ನಿಂದ ಈವರೆಗೂ ಕಾಯಿಕ, ವಾಚಿಕ ಅಥವಾ ಮಾನಸಿಕ ಪಾತಕಗಳು ನಡೆದಿಲ್ಲವಾದರೆ ಆ ಫಲ ನನಗೆ ದೊರೆಯಲಿ.[47] ಇಲ್ಲಿ ವಾಲ್ಮೀಕಿಯು ತನ್ನ ನಡತೆಯನ್ನು ಕುರಿತಾದ ದೃಢವಿಶ್ವಾಸವನ್ನು ಆಣೆಯ ಮೂಲಕ ವ್ಯಕ್ತಪಡಿಸಿದ್ದಾನೆ. ಆಣೆಗಳಲ್ಲಿ ದೇಹದ ಅವಯವಗಳನ್ನೂ ಬಳಸಿಕೊಳ್ಳಲಾಗುತ್ತದೆ. 'ಪಾದಗಳ' ಉಲ್ಲೇಖ ತುಂಬ ಮುಖ್ಯವೆನ್ನಿಸಿದೆ. ಪಾದಗಳ ಆಣೆಗಳಲ್ಲಿ ಹಿರಿಕಿರಿಯರೆಂಬ ನಂಟಿಗೆ ತುಂಬ ಪ್ರಾಮುಖ್ಯತೆಯಿರುತ್ತದೆ. ಹಾಗೆ, ಯಾವನಾದರೂ ಆಣೆ ಮಾಡಬಹುದು, ಯಾರಿಗೂ ಆಣೆ ಹಾಕಬಹುದು. ಆದರೆ ಪಾದಗಳ ಆಣೆಯನ್ನು ಹಿರಿಯನೇ ಕಿರಿಯನಿಗೆ ಹಾಕಲು ಸಾಧ್ಯ. ಇಂಥ ಹಿರಿತನ ವಯಸ್ಸು, ಜ್ಞಾನ, ಅಧಿಕಾರ ಮುಂತಾದ ಯಾವುದೇ ಬಗೆಯದಾಗಿದ್ದರೂ ಸಾಕು. ಕಿರಿಯನು ಹಿರಿಯನಿಗೆ ಪಾದಗಳ ಆಣೆಯನ್ನು ಹಾಕಲಾರ. ಸೀತೆಯನ್ನು ವಾಲ್ಮೀಕಿಮುನಿಯ ಆಶ್ರಮದ ಬಳಿಗೆ ಬಿಟ್ಟು ಬರಹೇಳಿದರೆ ಲಕ್ಷ್ಮಣ ತನ್ನ ಅಪ್ಪಣೆಯನ್ನು ವಿರೋಧಿಸುವನೆಂಬ ಹೆದರಿಕೆ ಶ್ರೀರಾಮನಲ್ಲಿತ್ತು.

ಹೀಗಾಗಿ ಅವನಿಗೆ ಮಾತಿಗವಕಾಶವನ್ನು ಕೊಡದೇನೆ ಶ್ರೀರಾಮ, 'ನಿನಗೆ ನನ್ನ ಪಾದಗಳ ಹಾಗೂ ಜೀವದ ಆಣೆಯಿದೆ'[48] ಎನ್ನುತ್ತಾನೆ.

ಖರದೂಷಣರು ದಾಳಿಯಿಕ್ಕಿದಾಗ ಅವರನ್ನೆದುರಿಸಲು ಲಕ್ಷ್ಮಣ ಸಿದ್ಧನಿದ್ದನು. ಆದರೆ ಶ್ರೀರಾಮ ತಾನೇ ಖುದ್ದಾಗಿ ಅವರನ್ನು ಸದೆಬಡಿಯಬಯಸಿದ್ದನು. ಈ ಸನ್ನಿವೇಶದಲ್ಲೂ ಶ್ರೀರಾಮ ಲಕ್ಷ್ಮಣನಿಗೆ ಮಾತಿಗೆ ಅವಕಾಶವನ್ನೀಯದೆ ಹೀಗೆಂದನು : 'ನನ್ನ ಹೇಳಿಕೆಗೆ ಎದುರಾಗಿ ನೀನು ನಡೆದುಕೊಳ್ಳಕೂಡದೆಂದು ನಿರೀಕ್ಷಿಸುತ್ತೇನೆ. ನಿನಗೆ ನನ್ನ ಪಾದಗಳಾಣೆ.'[49]

ಮೂರು ಬಗೆಯ ಆಣೆಗಳಿವೆ. ತಾನು ಆಣೆಮಾಡುವುದು, ಇನ್ನೊಬ್ಬರಿಗೆ ಆಣೆ ಹಾಕುವುದು, ಹಾಗೂ ಆಣೆಯನ್ನು ಸ್ವೀಕರಿಸುವುದು. ಅಧಿಕಾರಗ್ರಹಣ ಹಾಗೂ ನ್ಯಾಯಾಲಯಗಳಲ್ಲಿ ಇಂದಿಗೂ ಆಣೆಗಳಿಗೆ ಸ್ಥಾನವಿದೆ. ಒಬ್ಬ ವ್ಯಕ್ತಿ ಒಂದು ಅಧಿಕಾರದ ಹುದ್ದೆಯನ್ನು ಸ್ವೀಕರಿಸುವ ಮುನ್ನ ಇನ್ನೊಬ್ಬ ಶ್ರೇಷ್ಠ, ಆದರಣೀಯ, ಅಧಿಕಾರಿಯಾದ ವ್ಯಕ್ತಿಯೆದುರು ಪ್ರಮಾಣವಚನವನ್ನು ಸ್ವೀಕರಿಸುವುದು ಅಗತ್ಯವೆಂದು ಭಾವಿಸಲಾಗಿದೆ. ನ್ಯಾಯಾಲಯದಲ್ಲಿ ಸತ್ಯವನ್ನು ಕೊಡುಹಿಡಿದು ಶಿಕ್ಷೆಯನ್ನು ಘೋಷಿಸುವುದು ಅಗತ್ಯದ್ದು. ಹೀಗಾಗಿ ಸತ್ಯದ ಮೇಲೆ ಆಣೆಯಿಟ್ಟೇ ಅಲ್ಲಿ ಮಾತಿಗಾರಂಭ ಸಾಧ್ಯ. 'I speak the truth, the only truth and nothing but the truth' ಎಂದು ಆಣೆಯಿಟ್ಟು ಹೇಳುವ ಸಂಪ್ರದಾಯವಿದೆ. ಅದನ್ನು ಉಚ್ಚರಿಸುವಾಗ ಧರ್ಮಗ್ರಂಥವೊಂದನ್ನು (ಭಗವದ್ಗೀತೆ, ಬೈಬಲ್, ಕುರಾಣ, ಮುಂ.) ಸ್ಪರ್ಶಿಸಿಯೇ ಆಣೆಯನ್ನು ಉಚ್ಚರಿಸಲಾಗುತ್ತದೆ. ಸುಳ್ಳು ಆಣೆ ಮಾಡುವುದು ಯಾವಾಗಲೂ ತಪ್ಪೇ. ಆದರೆ ಕೆಲವು ಅಪವಾದದ ಸನ್ನಿವೇಶಗಳಲ್ಲಿ ಸುಳ್ಳು ಆಣೆಮಾಡುವುದನ್ನು ನಿಷಿದ್ಧವೆಂದು ತಿಳಿಯಲಾಗದು. ಆಣೆಯಲ್ಲಿ ಕೊಲೆ ಹಾಗೂ ಸುಳ್ಳುಗಳಿಗೆ ಸ್ಥಾನವಿಲ್ಲ. ಆದರೆ ಯುದ್ಧದಲ್ಲಿ ಶತ್ರುಗಳ ಕೊಲೆ ಹಾಗೂ ಹೆಚ್ಚಿನ ಹಿತವನ್ನು ಗಮನದಲ್ಲಿರಿಸಿಕೊಂಡು ವಿಶಿಷ್ಟವಾದ ಸನ್ನಿವೇಶದಲ್ಲಿ ಸುಳ್ಳು ಆಣೆಮಾಡಲು ಅಭ್ಯಂತರವಿರದು. ರಾಮಾಯಣ–ಮಹಾಭಾರತಗಳಲ್ಲಿ ಶತ್ರುವಧೆಗಳ ಸಂದರ್ಭದಲ್ಲಿ ಹಲವಾರು ಆಣೆಗಳಿವೆ. ಇದೇ ರೀತಿ, ಒಬ್ಬನ ಜೀವವುಳಿಸುವುದು, ಸಂಕಟದಿಂದ ಪಾರುಮಾಡುವುದು, ಮುಂತಾದ ಸನ್ನಿವೇಶಗಳಲ್ಲಿ ಸುಳ್ಳು ಆಣೆ ಮಾಡುವುದು ಶ್ರೇಯಸ್ಕರವೆಂದು ಭೀಷ್ಮನು ಯುಧಿಷ್ಠಿರನಿಗೆ ಹೇಳಿದ್ದಾನೆ.[50] ಹಸುವಿನ ಮೇವು, ಮದುವೆ, ಬ್ರಾಹ್ಮಣನ ಸಂರಕ್ಷಣೆ, ನಲ್ಲೆಯೊಂದಿಗಿನ ಸರಸಸಲ್ಲಾಪ, ಮುಂತಾದವುಗಳ ಸಂದರ್ಭದಲ್ಲಿ ಸುಳ್ಳು ಆಣೆ ಮಾಡಿದರೆ ಅದರಲ್ಲಿ ತಪ್ಪೇನೂ ಇಲ್ಲವೆಂದು ನಂಬಲಾಗಿದೆ. ಸುಳ್ಳು ಆಣೆಯಂತೆಯೇ ಕೀಳು ಕಾರಣಗಳಿಗಾಗಿ ಆಣೆ ಮಾಡುವುದು ಕೂಡ ನಿಷಿದ್ಧವೇ ಸರಿ. ಆಣೆಯ ಬಗೆಗೆ ಕೆಲವು ಸಂಕೇತಗಳಿವೆ. ಆಣೆಗಳನ್ನು ಯಾವಾಗ ಮಾಡಬೇಕು, ಯಾವಾಗ ಕೂಡದು ಎಂಬ ಬಗೆಗೆ ಖಚಿತವಾದ ನಿರೀಕ್ಷೆಗಳು ರೂಢಿಯಲ್ಲಿವೆ. ಶೀಲ ಹಾಗೂ ಪಾತಿವ್ರತ್ಯಗಳನ್ನು ಮನಗಾಣಿಸುವುದು, ಆಪತ್ಕಾಲ, ಸ್ನೇಹ-ಸಂಪಾದನೆ, ಗುಟ್ಟನ್ನು ಕಾಪಾಡಿಕೊಳ್ಳುವುದು, ಮಾನರಕ್ಷಣೆ, ರಾಜ್ಯಾಭಿಷೇಕ, ಮುಂತಾದ ಸನ್ನಿವೇಶಗಳಲ್ಲಿ ಆಣೆ, ಪ್ರಮಾಣ-ವಚನಗಳನ್ನು ಸ್ವೀಕರಿಸಲಾಗುತ್ತದೆ. ರಾಮಾಯಣದ ಬಹಳಷ್ಟು ಪ್ರಮುಖ ವ್ಯಕ್ತಿಗಳು ಒಂದಿಲ್ಲೊಂದು ಕಾರಣಕ್ಕಾಗಿ ಆಣೆಮಾಡಿದ್ದಾರೆ.

ಆಣೆಯು ಪ್ರತಿಜ್ಞೆಯಂತೆ ತೋರಿದರೂ ಆಣೆ ಹಾಗೂ ಪ್ರತಿಜ್ಞೆ ಪದಗಳು ಒಂದೇ ಅರ್ಥದವುಗಳಲ್ಲ. ದಿನಬಳಕೆಯಲ್ಲಿ ಅವುಗಳನ್ನು ಹಾಗೆ ಬಳಸಲಾಗುತ್ತದೆ ಎಂದಮಾತ್ರಕ್ಕೆ ಅದು ಸರಿಯೆಂದಲ್ಲ. ಅವೆರಡೂ ಪದಗಳಲ್ಲಿ ಸಮಾನತೆಗಿಂತಲೂ ವ್ಯತ್ಯಾಸಗಳೇ ಹೆಚ್ಚು. ಆಣೆಯಲ್ಲಿ ಪ್ರಕಟ ಹಾಗೂ ಸುಪ್ತ ಸ್ವರೂಪದಲ್ಲಿ ಪ್ರತಿಜ್ಞೆ ಇದ್ದೇ ಇರುತ್ತದೆ. ಆದರೆ ಪ್ರತಿಜ್ಞೆಯಲ್ಲಿ ಆಣೆ ಇರಬಹುದೆಂದೇನೂ ಇಲ್ಲ. ವಾಲ್ಮೀಕಿ ಈ ಪದಗಳ ಅರ್ಥ-ಛಾಯೆ ಹಾಗೂ ಅರ್ಥ-ವ್ಯಾಪ್ತಿಗಳನ್ನು ಖಂಡಿತ ಅರಿತಿದ್ದನು. ಹೀಗಾಗಿ ಅವನು ಅವುಗಳನ್ನು ಚಾಚೂ ತಪ್ಪದಂತೆ ಬಳಸಿದ್ದಾನೆ.

ವಾಲ್ಮೀಕಿರಾಮಾಯಣದ ೨೧ ಆಣೆಗಳಲ್ಲಿ ೫ ಆಣೆಗಳು ಸತ್ಯಕ್ಕೆ ಸಂಬಂಧಪಟ್ಟವುಗಳು. ೧೦ರಲ್ಲಿ ತನ್ನ ಇಲ್ಲವೆ ಪ್ರಿಯ, ಆದರಣೀಯ ವ್ಯಕ್ತಿಗಳ ಉಲ್ಲೇಖ ಕಂಡುಬರುತ್ತದೆ. ಪ್ರಿಯ ಹಾಗೂ ಪೂಜ್ಯ ವಸ್ತುಗಳು, ಸತ್ಯ ಹಾಗೂ ಪುಣ್ಯಗಳ ಬಗೆಗಿನ ಆಣೆಗಳು ಕಡಿಮೆ. ಒಬ್ಬನೇ ವ್ಯಕ್ತಿ ಉಚ್ಚರಿಸಿದ ಎಲ್ಲಕ್ಕೂ ಹೆಚ್ಚಿನ ಆಣೆಗಳು ಶ್ರೀರಾಮನವಾದರೆ ಅವನ ತರುವಾಯದ ಕ್ರಮಾಂಕ ಹನುಮಂತನದು.

## ಪ್ರತಿಜ್ಞೆಗಳು

ಪ್ರತಿಜ್ಞೆ ಭಾರತೀಯ ಸಂಸ್ಕೃತಿಗೆ ಲಭಿಸಿದ ಒಂದು ಬೆಲೆಯುಳ್ಳ ಕಾಣಿಕೆಯಾಗಿದೆ. ಅದನ್ನು ಯಾವಾಗಲೂ ಆತ್ಮವಿಶ್ವಾಸದಿಂದ ಉಚ್ಚರಿಸಲಾಗುವುದರಿಂದ ಅದು ಉತ್ತಮಪುರುಷದ ಏಕವಚನದಲ್ಲಿಯೇ ಇರುತ್ತದೆ. ಒಂದೇ ಕಾಲಕ್ಕೆ ಹಲವಾರು ಪ್ರತಿಜ್ಞೆಯನ್ನು ಉಚ್ಚರಿಸುವಾಗ ಅದು ಬಹುವಚನದ್ದಾಗಿ ಕಂಡರೂ ಅದಿರುವುದು ಏಕವಚನದಲ್ಲೇ. ಏಕೆಂದರೆ ಅದರ ಪಾಲನೆಯ ಹೊಣೆ ಪ್ರತಿಯೊಬ್ಬ ವ್ಯಕ್ತಿಯದಾಗಿರುತ್ತದೆ. ಪ್ರತಿಜ್ಞೆಯೆಂದರೆ ಸ್ವೇಚ್ಛೆಯಿಂದ ಹೊತ್ತ ನೈತಿಕ ಹೊಣೆ. ಪ್ರತಿಜ್ಞೆಯ ಉಚ್ಚಾರ ಹಗುರಾಗಿದ್ದರೂ ಅದನ್ನು ಪಾಲಿಸುವುದೆಂದರೆ ಅಸಿಧಾರಾವ್ರತದಷ್ಟೇ ಕಷ್ಟದ್ದು. ಅವ್ಯಭಿಚಾರಿ ನಿಷ್ಠೆ, ಸಾಹಸ, ಧೈರ್ಯ ಹಾಗೂ ತ್ಯಾಗಗಳು ಪ್ರತಿಜ್ಞಾಪಾಲನಕ್ಕಾಗಿ ಅವಶ್ಯಕ. ತಂದೆಯ ಅತೃಪ್ತಕಾಮವಾಸನೆಯನ್ನು ಪೂರ್ತಿಗೊಳಿಸಲೆಂದು ದೇವವ್ರತನು ತನ್ನ ಕಾಮ ಸುಖವನ್ನು ಸ್ವೇಚ್ಛೆಯಿಂದ ಬಲಿಕೊಟ್ಟನು. ಬ್ರಹ್ಮಚಾರಿಯಾಗಿ ಉಳಿಯಲು ನಿರ್ಧರಿಸಿದನು. ಹಾಗೆಂದು ಪ್ರತಿಜ್ಞೆಗೈದನು. ಅದನ್ನು ನಿಷ್ಠೆಯಿಂದ ಪಾಲಿಸಿದನೆಂದೇ ಅವನು ಭೀಷ್ಮನಾದನು. ಅಲ್ಲದೆ ಅವನ ಪ್ರತಿಜ್ಞೆ ಭೀಷ್ಮಪ್ರತಿಜ್ಞೆ ಎನ್ನಿಸಿತು. ಬಲತಾಯಿಯಿಂದ ತಂದೆಯ ಇಚ್ಛೆ ತಿಳಿಯುತ್ತಲೇ ದಾಶರಥಿ ಶ್ರೀರಾಮನು ಮನೆಬಾಗಿಲಿಗೆ ಬಂದ ಯುವರಾಜಪದವನ್ನು ಪಕ್ಕಕ್ಕೆ ತಳ್ಳಿ ಪ್ರದೀರ್ಘಕಾಲದ ವನವಾಸವನ್ನು ಸ್ವೀಕರಿಸಿದನು. ಅವನು ಯಾವ ಆಸೆಗೂ ಮರುಳಾಗಲಿಲ್ಲ. ಅದಾವ ಸಂಕಟಕ್ಕೂ ಹೆದರಲಿಲ್ಲ. ತಾನಾಡಿದ ಮಾತುಗಳಿಗೆ ಆತ ತಪ್ಪಲಿಲ್ಲ. ಪ್ರತಿಜ್ಞಾಪಾಲನಕ್ಕಾಗಿ ಅಲರ್ಕರಾಜನು ನೇತ್ರದಾನವನ್ನಾದರೆ ಶೈಬ್ಯರಾಜನು ತನ್ನ ದೇಹದ ಮಾಂಸವನ್ನು ದಾನಮಾಡಿದನು. ತನ್ನ ತೀರವನ್ನು ಮೀರೆನೆಂದು ಕಡಲು ಮಾಡಿದ ಪ್ರತಿಜ್ಞೆಯನ್ನು ಅದು ಇಂದಿಗೂ ಪಾಲಿಸುತ್ತಲೇ ಇದೆ. ರಾಮಾಯಣದ ವೇದವತಿಯ ಸುಡುಸುಡುವ ಪ್ರತಿಜ್ಞೆ ತನ್ನ ವೈಶಿಷ್ಟ್ಯದಿಂದಾಗಿ ಎಲ್ಲರಿಗೂ ತಿಳಿದಿರುವಂಥದೇ ಆಗಿದೆ.

'ಎಲೈ ದುರಾತ್ಮನೇ ! ಈ ಕಾಡಿನಲ್ಲಿ ನೀನು ನನ್ನ ಮೈಮೇಲೆ ಕೈಹಾಕಿರುವ ಎಂದಬಳಿಕ ನಿನ್ನ ಕೊಲೆಗಾಗಿ ನಾನು ಇನ್ನೊಮ್ಮೆ ಹುಟ್ಟಿಬರುವೆ.'[51] ಭರತನ ಭೆಟ್ಟಿಯ ಕಾಲಕ್ಕೆ ಅವನು ಶ್ರೀರಾಮನಿಗೆ ಅಯೋಧ್ಯೆಗೆ ಹಿಂತಿರುಗುವಂತೆ ಪರಿಪರಿಯಾಗಿ ಒತ್ತಾಯಮಾಡಿದನು. ಶ್ರೀರಾಮ ಅಷ್ಟೇ ನಿಗ್ರಹದಿಂದ ಅದನ್ನು ನಿರಾಕರಿಸುತ್ತಾನೆ. ಅವನು ಭರತನಿಗೆಂದುದು—

'ಹಿಂದಕ್ಕೆ ನಮ್ಮ ಪಿತನು ನಿನ್ನ ತಾಯಿಯನ್ನು ಮದುವೆಯಾದ ಕಾಲಕ್ಕೆ ಅವಳಿಂದ ತನಗಾಗುವ ಮಗನನ್ನೇ ಪಟ್ಟಗಟ್ಟುವೆನೆಂದು ನಿನ್ನ ತಾತನೆದುರು ಪ್ರತಿಜ್ಞೆಯನ್ನು ಮಾಡಿದ್ದಾನೆ.[52] ದಂಡಕಾರಣ್ಯದಲ್ಲಿ ವಾಸವಾಗಿದ್ದಾಗ ಶ್ರೀರಾಮಲಕ್ಷ್ಮಣರು ಮುನಿವ್ರತವನ್ನು ಸ್ವೀಕರಿಸಿದ್ದರು. ಅಲ್ಲಿಯ ಮುನಿಗಳು ರಾಕ್ಷಸರಿಂದ ತಮಗಾಗುವ ತೊಂದರೆಯನ್ನು ಪರಿಹರಿಸೆಂದು ಶ್ರೀರಾಮನನ್ನು ಕೇಳಿಕೊಂಡರು. ಆದರೆ ರಾಕ್ಷಸರು ಅದಾವ ಅಪರಾಧವನ್ನೂ ಮಾಡಿಲ್ಲವಾದ್ದರಿಂದ ಅವರನ್ನು ಹಿಂಸಿಸುವುದು, ಕೊಲ್ಲಲೆಳಸುವುದು ತಪ್ಪೆಂದೂ, ಅವರನ್ನು ಶಿಕ್ಷಿಸಕೂಡದೆಂದೂ ಸೀತೆ ಶ್ರೀರಾಮನನ್ನು ಕೋರಿದಳು. ಅದಕ್ಕೆ ಅವನು ಹೀಗೆಂದನು—

'ಎಲೈ ಸೀತೆ ! (ಋಷಿಗಳ) ಈ ಮಾತನ್ನು ಕೇಳಿ ದಂಡಕಾರಣ್ಯದಲ್ಲಿ ಅವರನ್ನು ಪೂರ್ತಿ ಕಾಪಾಡುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದೇನೆ. ಮುನಿಗಳಿಗಾಗಿ ಒಮ್ಮೆ ಪ್ರತಿಜ್ಞೆಗೈದೆನೆಂದಬಳಿಕ ನನ್ನಲ್ಲಿ ಜೀವವಿರುವವರೆಗೂ ಅದನ್ನು ಮುರಿಯಲಾರೆ. ಏಕೆಂದರೆ ಸತ್ಯವೆಂದರೆ ನನಗೆ ಯಾವಾಗಲೂ ಬಲು ಇಷ್ಟ. ಸೀತೆಯೇ, ನಾನು ನನ್ನ ಜೀವನವನ್ನು ಇಲ್ಲವೆ ಲಕ್ಷ್ಮಣನನ್ನೊಡಗೂಡಿ ನಿನ್ನನ್ನು ತ್ಯಜಿಸಬಹುದೇ ಹೊರತು ಪ್ರತಿಜ್ಞೆಯನ್ನು— ಅದರಲ್ಲೂ ಬ್ರಾಹ್ಮಣರಿಗಾಗಿ ಕೈಕೊಂಡ ಪ್ರತಿಜ್ಞೆಯನ್ನು ಮುರಿಯಲಾರೆ.'[51]

ಪ್ರತಿಜ್ಞಾಭಂಗವನ್ನು ದೊಡ್ಡ ಪಾಪವೆಂದು ಪರಿಗಣಿಸಲಾಗುತ್ತದೆ. ಅದರ ಪರಿಣಾಮಗಳು ದಾರುಣವಾದವ್ವಗಳು. ದಶರಥನು ವಿಶ್ವಾಮಿತ್ರನ ಇಚ್ಛೆಯನ್ನು ಆಲಿಸುವ ಮುನ್ನವೇ ಅದನ್ನು ಪೂರ್ತಿಗೊಳಿಸುವೆನೆಂದು ಪಣ ತೊಟ್ಟನು. ಆದರೆ ವಿಶ್ವಾಮಿತ್ರನು ಬಲಾಢ್ಯರಾದ ರಾಕ್ಷಸರನ್ನು ಸದೆಬಡಿಯಲೆಂದು ಶ್ರೀರಾಮನನ್ನು ತನ್ನೊಂದಿಗೆ ಕಳುಹಿಸೆನ್ನುತ್ತಲೇ ದಶರಥನು ಹಿಂದೆಗೆಯಹತ್ತಿದನು. ಆಗ ವಸಿಷ್ಠನು ದಶರಥನಿಗೆ, 'ಒಂದು ವಿಶಿಷ್ಟವಾದ ಕೆಲಸವನ್ನು ಪೂರೈಸುವೆನೆಂದು ಪ್ರತಿಜ್ಞೆಮಾಡಿಯೂ ಒಬ್ಬನು ಅದನ್ನು ಪಾಲಿಸದಿದ್ದರೆ ಯಜ್ಞ

ಯಾಗಾದಿ ಧಾರ್ಮಿಕ ಹಾಗೂ ಜನೋಪಯೋಗಿಯಾದ ಸಾಮಾಜಿಕ ಕೆಲಸಗಳಿಂದ ಪಡೆಯಲಾದ ಪುಣ್ಯ ನಾಶಹೊಂದುತ್ತದೆ' ಎಂದನು.[54]

ಕೈಕೇಯಿಯ ಕೃತ್ಯವನ್ನು ಕುರಿತು ಹೀಯಾಳಿಸುವಾಗ ಭರತ ಅವಳಿಗೆ, 'ಯಜ್ಞಕರ್ಮಗಳನ್ನು ಎಸಗುವ ಋತ್ವಿಜರೆದುರು ಒಪ್ಪಿಕೊಂಡ ದಕ್ಷಿಣೆಯನ್ನು ನೀಡದಿದ್ದರೆ (ಅದನ್ನು ಕೊಡುವ) ಯಜಮಾನನಿಗೆ ತಗಲು ವಂತಹ ಪಾಪ ನಿನಗೆ ತಟ್ಟೀತು' ಎಂದನು.[55]

ಸುಗ್ರೀವನು ಅಗ್ನಿಸಾಕ್ಷಿಯಾಗಿ ಶ್ರೀರಾಮನೊಡನೆ ಸ್ನೇಹವನ್ನು ಬೆಳೆಸಿದನು. ಸೀತೆಯ ಅನ್ವೇಷಣೆಗೆ ತಾನು ನೆರವಾಗುವುದಾಗಿ ಪ್ರತಿಜ್ಞೆಯನ್ನು ಕೈಕೊಂಡನು. ಆದರೆ ಮುಂದೆ ಈ ಬಗೆಗೆ ಅಲಕ್ಷ್ಯತಳೆದನು. ಅದನ್ನು ಕಂಡು ಲಕ್ಷ್ಮಣನು, 'ಪ್ರತಿಜ್ಞೆ ಸುಳ್ಳಾದರೆ ವಾಲಿಯ ದಾರಿಯನ್ನು ಹಿಡಿದೀಯ. ಈಗಲೂ ಆ ಬಾಗಿಲು ಮುಚ್ಚಿಕೊಂಡಿಲ್ಲ' ಎಂದು ಅವನಿಗೆ ಖಡಾಖಂಡಿತವಾಗಿ ಹೇಳಿದನು.[56]

ಸೀತೆ ಕೂಡ ಲಕ್ಷ್ಮಣನಿಗೆ ಪ್ರತಿಜ್ಞೆಯ ಮಹತ್ವ ಹಾಗೂ ಸದಾಚಾರವನ್ನು ಕಾಪಾಡುವ ಬಗೆಗೆ ಹೇಳಿದ್ದಾಳೆ.[57]

ಪ್ರತಿಜ್ಞೆ ಯಾವಾಗಲೂ ಸಫಲವಾಗುವುದೆಂದೇನೂ ಇಲ್ಲ. ಏಕೆಂದರೆ ಅದರ ಸೋಲು-ಗೆಲವು ಅದನ್ನು ಉಚ್ಚರಿಸುವ ವ್ಯಕ್ತಿಯ ನಿಷ್ಠೆ ಹಾಗೂ ಶೀಲಗಳಿಗೆ ಸಂಬಂಧಪಟ್ಟಿರುತ್ತದೆ. ರಾಮಾಯಣ, ಮಹಾಭಾರತಗಳಲ್ಲಿ ಸೋಲನ್ನನುಭವಿಸಿದ ಪ್ರತಿಜ್ಞೆಗಳಿವೆ. ರಾವಣನು ಮಂತ್ರಿಗಳೆದುರು ಶ್ರೀರಾಮನನ್ನು ಕೊಲ್ಲುವೆನೆಂದು ಮಾಡಿದ ಪ್ರತಿಜ್ಞೆ ಸಫಲವಾಗಿಲ್ಲ. '(ವಾನರರೊಂದಿಗೆ ಇಲ್ಲಿಗೆ) ಬಂದಿರುವ ರಾಮ ಜೀವದೊಂದಿಗೆ ಹಿಂತಿರುಗಿ ಹೋಗ ಲಾರನೆಂದು ನಾನು ನಿಮಗೆ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ.'[58] ಮಹಾಭಾರತದ ದುರ್ಯೋಧನ, ಕರ್ಣಾದಿಗಳ ಪ್ರತಿಜ್ಞೆಗಳು ಸೋಲನ್ನನುಭವಿಸಿವೆ.

ಪ್ರತಿಜ್ಞೆ, ಹಾಗೂ ಆಣೆ, ಸತ್ಯಕ್ರಿಯೆ, ದಿವ್ಯ, ಹೊತ್ತ ಹರಕೆ, ಪಣಕ್ಕೊಡ್ಡುವಿಕೆ, ಮುಂತಾದವುಗಳಲ್ಲಿ ಕೆಲವೊಂದು ಸಮಾನಧರ್ಮ ಇದ್ದರೂ ಈ ಪ್ರತಿಯೊಂದರ ಸ್ವರೂಪ, ಕಾರ್ಯ, ಮಿತಿ ಹಾಗೂ ಗುರಿಗಳಲ್ಲಿ ತುಂಬ ವ್ಯತ್ಯಾಸ ಉಂಟು. ಆಣೆಯನ್ನು ತಾನೇ ಹಾಕಿಕೊಳ್ಳಬಹುದು, ಇನ್ನೊಬ್ಬರಿಗೆ ಹಾಕಬಹುದು, ಅಧಿಕಾರಗ್ರಹಣದ ಕಾಲಕ್ಕೆ ಇನ್ನೊಬ್ಬರಿಂದ ಮಾಡಿಸಬಹುದು. ಪ್ರತಿಜ್ಞೆಯಲ್ಲಿ ಸ್ವಂತದ ಇಚ್ಛೆಯೇ ಪ್ರಬಲವಾಗಿ ರುತ್ತದೆ. ಅದರಲ್ಲಿ ಇನ್ನೊಬ್ಬರ ಇಚ್ಛೆಗೆ ಸ್ಥಾನವಿಲ್ಲ. ಹೀಗಾಗಿ ಇದರಲ್ಲಿ ಕೊಡುಕೊಳ್ಳುವ ಪ್ರಶ್ನೆಯೇ ಇಲ್ಲ. ಒಂದೊಂದು ಸಲ ಬೇರೊಬ್ಬರ ಇಚ್ಛೆಗಾಗಿ ಪ್ರತಿಜ್ಞೆಯನ್ನು ಕೈಕೊಳ್ಳಬೇಕಾಗಿಬಂದರೂ ಸ್ವಂತದ ಇಚ್ಛೆಯೇ ಅಲ್ಲೂ ನಿರ್ಣಾಯಕ. ಬೇರೆಯವರ ಇಚ್ಛೆಯನ್ನು ಮನ್ನಿಸಿ ಹೆಚ್ಚೆಂದರೆ ಪ್ರತಿಜ್ಞೆಯ ಉಚ್ಚಾರ ಸಾಧ್ಯವಿದ್ದರೂ ತನ್ನಿಚ್ಛೆ ಇದ್ದರೆ ಮಾತ್ರ ಅದರ ಪಾಲನೆ ಸಾಧ್ಯ. ಅದಿಲ್ಲದಿದ್ದರೆ ಸೋಲು ಖಂಡಿತ. ಪ್ರತಿಜ್ಞೆಯಲ್ಲಿ ಆಣೆ ಇರುತ್ತದೆಂದೇನೂ ಅಲ್ಲ. ಆದರೆ ಸತ್ಯಕ್ರಿಯೆ, ಹರಕೆ, ಪಣಗಳಿರುತ್ತವೆ. ಅವುಗಳ ಸ್ವರೂಪ ಬಯಸಿದ ಪರಿಣಾಮದ ಈಡೇರುವಿಕೆ ಅಥವಾ ಈಡೇರದಿರುವಿಕೆಯನ್ನವಲಂಬಿಸಿದೆ.

ವಾಲ್ಮೀಕಿರಾಮಾಯಣದಲ್ಲಿ ಸುಮಾರು ಐವತ್ತು ಪ್ರತಿಜ್ಞೆಗಳಿವೆ. ಅವುಗಳಲ್ಲಿ ಬಹಳಷ್ಟು ಪ್ರತಿಜ್ಞೆಗಳು ವಧೆಗೆ ಸಂಬಂಧಿಸಿದವುಗಳು. ಶ್ರೀರಾಮ-ರಾವಣರು ಪರಸ್ಪರರನ್ನು ಕೊಲ್ಲಲು ಪ್ರತಿಜ್ಞೆಗೈದಿದ್ದಾರೆ. ಅಲ್ಲದೆ ತ್ರಿಶಿರ ಹಾಗೂ ಮೇಘನಾದ(ಇಂದ್ರಜಿತ)ರು ಕೂಡ ಶ್ರೀರಾಮವಧೆಗಾಗಿ ಪ್ರತಿಜ್ಞೆಗಳನ್ನು ಮಾಡಿದ್ದಾರೆ. ಅಂಗದನು ರಾವಣನನ್ನು ಕೊಲ್ಲುವ ಬಯಕೆಯನ್ನು ಆಡಿ ತೋರಿಸಿದ್ದಾನೆ. ಅದು ಪ್ರತಿಜ್ಞೆಯಲ್ಲ. ಶ್ರೀರಾಮ ಕೂಡ ಲವಣಾಸುರ, ವಾಲಿ ಹಾಗೂ ದಂಡಕಾರಣ್ಯದಲ್ಲಿ ಋಷಿ-ಮುನಿಗಳನ್ನು ಕಾಡುವ ರಾಕ್ಷಸರನ್ನು ಕೊಲ್ಲಲು ಪ್ರತಿಜ್ಞೆಗೈದಿದ್ದಾನೆ. ಸೀತೆಯನ್ನು ಸಂಹರಿಸಲೆಳಸುವವರನ್ನು ಸಂಹರಿಸುವುದಾಗಿ ಶ್ರೀರಾಮ ತನ್ನ ಪ್ರತಿಜ್ಞೆಯನ್ನು ಉಚ್ಚರಿಸಿದ್ದಾನೆ. ಒಟ್ಟು ಪ್ರತಿಜ್ಞೆಗಳಲ್ಲಿ ಬಹಳಷ್ಟು ಪ್ರತಿಜ್ಞೆಗಳು ವಧೆಗೆ ಸಂಬಂಧಪಟ್ಟಿರಲು ಕಾರಣವೆಂದರೆ ರಾಮಾಯಣ, ಮಹಾಭಾರತಾದಿ ಗ್ರಂಥಗಳು ಕ್ಷಾತ್ರಮನೋಧರ್ಮದ ಯಶೋಗಾನವನ್ನು ಹಾಡುವವಾಗಿದ್ದು ಅವುಗಳಲ್ಲಿ ಯುದ್ಧ, ವಧೆ, ಸೋಲು-ಗೆಲವು, ಮುಂತಾದ ಸಂಗತಿಗಳಿಗೆ ಪ್ರಾಮುಖ್ಯವಾದ ಸ್ಥಾನ ದೊರೆತಿರು ವುದು ಸ್ವಾಭಾವಿಕ. ಇಚ್ಛಾಪೂರ್ತಿಯ ಪ್ರತಿಜ್ಞೆಗಳೂ ಹಲವಿವೆ.

## ಸತ್ಯಕ್ರಿಯೆ

ಸತ್ಯಕ್ರಿಯೆ, ದಿವ್ಯ — ಇವು ಸಹ ಶಪಥದ ಪ್ರಕಾರಗಳು. ಇವುಗಳ ಉದಾಹರಣೆಗಳು ಪ್ರಾಚೀನ ಭಾರತದ ವಾಙ್ಮಯದಲ್ಲಿ ಸಾಕಷ್ಟು ಕಂಡುಬರುತ್ತವೆ. ಡಾ. ರಾ. ಚಿ. ಢೇರೆ ಇವರು 'ಸಂತಸಾಹಿತ್ಯ ಮತ್ತು ಸತ್ಯಕ್ರಿಯೆ' ಎಂಬ ಲೇಖನದಲ್ಲಿ ಸತ್ಯಕ್ರಿಯೆ ಮತ್ತು ದಿವ್ಯ ಇವುಗಳನ್ನು ಕುರಿತು ಕೂಲಂಕಷವಾಗಿ, ಉದಾಹರಣೆಗಳನ್ನು ಕೊಟ್ಟು ವಿಮರ್ಶಿಸಿ ಬರೆದಿದ್ದಾರೆ. ಸತ್ಯಕ್ರಿಯೆ ಮತ್ತು ದಿವ್ಯ ಇವುಗಳನ್ನು ಅವರ ಹೇಳಿಕೆಯನ್ನೇ ಪರಾಮರ್ಶಿಸಿ ಅರಿತುಕೊಳ್ಳುವುದು ಲೇಸು.[59] 'ಸತ್ಯದ ಉಚ್ಚಾರವು ಇಷ್ಟವಿದ್ದ ಚಮತ್ಕೃತಿಯನ್ನು ರೂಪಿಸಬಲ್ಲದು !' ಎಂಬ ಮನೋಭಾವವು ಪ್ರಾಚೀನ ಜನಮನಗಳಲ್ಲಿ, ಪರಂಪರೆಯಲ್ಲಿತ್ತು. ತನ್ನ ಅಥವಾ ಪರರ ಸಂಕಷ್ಟಗಳನ್ನು ನಿವಾರಿಸಲು ಇಲ್ಲವೇ ಸ್ವಂತದ ನಿರಪರಾಧಿತ್ವವನ್ನು ರುಜುವಾತುಗೊಳಿಸಲು ಜನರು ಸತ್ಯೋಕ್ತಿಯನ್ನು ಅವಲಂಬಿಸುತ್ತಿದ್ದರು. ಸತ್ಯವನ್ನು ನುಡಿದು ಸ್ವಪರೀಕ್ಷೆಗೆ ಅಣಿಯಾಗುವುದೆಂದರೆ 'ಸತ್ಯಕ್ರಿಯೆ' ಎಂದೆನ್ನುವ ರೂಢಿ ಇತ್ತು... ಈ ಕ್ರಿಯೆಯಲ್ಲಿ ಜಲಸ್ಪರ್ಶ ಇಲ್ಲವೇ ನೀರನ್ನು ಸಾಕ್ಷಿಯಾಗಿಡುವ ಪದ್ಧತಿ ಇತ್ತೆಂದೆನಿಸುತ್ತದೆ. ಜಲದಿವ್ಯದ ರೂಢಿಯು ಇದರಿಂದಲೇ ಬಂದಿರಬಹುದು. ಏಕೆಂದರೆ ಜಲದಿವ್ಯದಲ್ಲಿ, ಜಲದ ಸ್ವಾಮಿಯಾದ ವರುಣನನ್ನು ಪ್ರಾರ್ಥಿಸಬೇಕು... ವರುಣನು ನೀರಲ್ಲಿ ಇದ್ದುಕೊಂಡೇ ಋತವನ್ನು ಕಾಪಾಡುತ್ತಾನೆ. ಸತ್ಯರಕ್ಷಕ, ಜಲನಿವಾಸಿಯಾದ ವರುಣನು ಶಪಥದೇವತೆಯಾಗಿದ್ದಾನೆ. ಏಕೆಂದರೆ ನೀರನ್ನು ಸಾಕ್ಷಿ ಇಟ್ಟು ಶಪಥಮಾಡುವ ರೂಢಿ ಬಹು ಪ್ರಾಚೀನವಾಗಿದೆ... ಯಜ್ಞವಿಧಿಯಲ್ಲಿ ಜಲಾಶಯದ ಸಾನ್ನಿಧ್ಯದಲ್ಲಿ ಶಪಥಮಾಡುತ್ತಾರೆ. ವರುಣನ ವಾಸವು ನೀರಿನಲ್ಲಿದ್ದು ಅಸತ್ಯ ನುಡಿಯುವವನನ್ನು ಅಥವಾ ಸುಳ್ಳುಶಪಥ ಮಾಡುವವನನ್ನು ನೀರಿನಿಂದ ಅಂದರೆ ಸ್ವಸ್ಥಾನದಿಂದ ಹೊರಗಟ್ಟುತ್ತಾನೆ. ದಿವ್ಯವನ್ನು ಆಚರಿಸುವ ವ್ಯಕ್ತಿಯನ್ನು ನೀರಿನಲ್ಲಿ ಅಂದರೆ ಸ್ವಸ್ಥಾನದಲ್ಲಿ ವರುಣನು ಇರಗೊಟ್ಟರೆ ಆ ವ್ಯಕ್ತಿಯು ನಿರ್ದೋಷಿಯೆಂದು ಸಾರಿದ ಹಾಗೆಂದು ಬಗೆಯುತ್ತಿದ್ದರು... ಸತ್ಯಕ್ರಿಯೆಯು ಅಗ್ನಿದಿವ್ಯಕ್ಕೆ ನಿಕಟವಾಗಿರುವಂತೆಯೇ ಜಲದಿವ್ಯಕ್ಕೂ ನಿಕಟವಿದೆ... 'ದಿವ್ಯ' ಮಾಡುವುದು ಸತ್ಯಕ್ರಿಯೆ ವಿಧಿಯಾಗಿರುವುದರಿಂದಲೇ ಈ ರೀತಿಯ ಸಂಬಂಧವಿರುವುದು ಸಹಜವಾಗಿದೆ. ಸತ್ಯಕ್ರಿಯೆಯ ಸಂಬಂಧವು 'ದಿವ್ಯ'ದೊಡನೆ ಹೆಚ್ಚಿನ ಪ್ರಮಾಣದಲ್ಲಿರಬೇಕು... 'ದಿವ್ಯ'ವೆಂದರೆ ಒಂದು ಬಗೆಯ ದೈವೀಪರೀಕ್ಷೆ. ಈ ಪರೀಕ್ಷೆಯಲ್ಲಿ ಉತ್ತೀರ್ಣನಾಗುವವನು ಅಪರಾಧವಿಲ್ಲದ, ದೋಷವಿಲ್ಲದ, ಪಾಪರಹಿತ ವ್ಯಕ್ತಿಯೆಂದೆನಿಸುತ್ತಾನೆ... ಸತ್ಯಕ್ರಿಯೆಯ ಸಂಬಂಧವು ಸತ್ಯದಲ್ಲಿಯ ಅಸಾಧಾರಣ ಸಾಮರ್ಥ್ಯದ ಬಗ್ಗೆ ಇದ್ದ ಶ್ರದ್ಧೆ, ಎಂದರೆ ಸತ್ಯನಿಷ್ಠೆ ಎಂದಿದ್ದು, ವಾಙ್ಮಯದಲ್ಲಿ ಸತ್ಯಕ್ರಿಯೆಯೆಂದರೆ ಒಂದು ಕಲ್ಪನಾಬಂಧ (motif) ಎಂದು ಅದನ್ನು ಬಳಸಿದ್ದಾರೆ. ಶಪಥವೆಂದರೆ ಕೇವಲ ಉದ್ಗಾರ ; ಆದರೆ ಸತ್ಯಕ್ರಿಯೆಯೆಂದರೆ ಉಚ್ಚಾರದೊಡನೆ ಕೃತಿಯೂ ಇರುತ್ತದೆ !

ಸತ್ಯಕ್ರಿಯೆಯನ್ನಾಚರಿಸುವ ಪ್ರಸಂಗಗಳು ಸೀತೆಯ ಜೀವನದಲ್ಲಿ ಎರಡು-ಮೂರು ಬಾರಿ ಬಂದಿವೆ. ಲವ-ಕುಶರು ಹಾಡಿದ 'ಶ್ರೀರಾಮಕಥೆ'ಯನ್ನು ಕೇಳಿ ಆನಂದದಿಂದ ಮೈಮರೆತ ಶ್ರೀರಾಮನು ದೂತರ ಕೈಯಲ್ಲಿ ವಾಲ್ಮೀಕಿಗೆ ಹೇಳಿಕಳಿಸಿದನು : "ಸೀತೆಯ ಆಚರಣೆಯು ಸ್ವಾಭಾವಿಕವಾಗಿ ಶುದ್ಧವಾಗಿದ್ದರೆ ಇಲ್ಲವೇ ಆಶ್ರಮವಾಸದಿಂದ ಅವಳು ಪರಿಶುದ್ಧಳಾಗಿದ್ದರೆ ಅವಳು ಇಲ್ಲಿಗೆ ಬಂದು ಶಪಥ ಮಾಡಲಿ !"

"ನಾಳೆಯ ಉದಯಕಾಲದಲ್ಲಿ ಜನಕಕನ್ಯೆಯಾದ ಮೈಥಿಲಿಯು ಸಭೆಗೆ ಬಂದು ತನ್ನ ಮತ್ತು ನನ್ನ ಮೇಲಿನ ಅಪವಾದಗಳನ್ನು ಹೋಗಲಾಡಿಸಲು ಶಪಥವನ್ನು ಮಾಡಬೇಕು !"[60] ಹೇಳಿಕಳುಹಿಸಿದಂತೆ ವಾಲ್ಮೀಕಿಯು ಸೀತೆಯನ್ನು ಕರೆದುಕೊಂಡು ಬಂದನು. ಆತನು ತನ್ನ ತಪಶ್ಚರ್ಯೆಯ ಮೇಲೆ ಆಣೆಯಿಟ್ಟು 'ಸೀತೆಯು ಚರಿತ್ರಶುದ್ಧಳು' ಎಂದು ಶ್ರೀರಾಮನಿಗೆ ಮನವರಿಕೆ ಮಾಡಿಕೊಡಲು ಯತ್ನಿಸಿದನು. ಸೀತೆಯು ತನ್ನ ಶುದ್ಧತೆಯನ್ನು ದೃಢಗೊಳಿಸಲು 'ಸತ್ಯಕ್ರಿಯೆ'ಯನ್ನು ಅವಲಂಬಿಸಿದಳು. ಭೂಮಾತೆಯನ್ನುದ್ದೇಶಿಸಿ ನುಡಿದ ಅವಳ ಉದ್ಗಾರಗಳು ಈ ರೀತಿ :

"ರಘೂತ್ತಮ ಶ್ರೀರಾಮನ ಹೊರತು ಯಾವ ಅನ್ಯಪುರುಷನನ್ನೂ ನಾನು ಮನಸ್ಸಿನಲ್ಲಿ ತಂದಿರದಿದ್ದರೆ ವಿಷ್ಣುಪತ್ನಿಯಾದ ಭೂದೇವಿ ನನ್ನನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಲಿ ! ಕಾಯೇನ ವಚಸಾ ಮನಸಾ ನಾನು ಶ್ರೀರಾಮನನ್ನೇ ಆರಾಧಿಸಿದ್ದರೆ ಈ ಭೂತಾಯಿಯು ನನ್ನನ್ನು ಉಡಿಯಲ್ಲಿ ಹಾಕಿಕೊಳ್ಳಲಿ ! ಶ್ರೀರಾಮನನ್ನು

ಬಿಟ್ಟು ಅನ್ಯಪುರುಷನ ಪರಿಚಯ ಕೂಡ ನನಗಿಲ್ಲ ; ಈ ನನ್ನ ಮಾತು ನಿಜವಿದ್ದರೆ ವಿಷ್ಣುಪತ್ನಿಯಾದ ಭೂದೇವಿಯು ನನಗೆ ತನ್ನ ಒಡಲಿನಲ್ಲಿ ಸ್ಥಾನವೀಯಲಿ !"[61]

ಇದೇ ತರಹದ ಇನ್ನೊಂದು ಸತ್ಯಕ್ರಿಯೆಯು ಸೀತೆಯಿಂದ ನಡೆದಿದೆ. ಹನುಮಂತನ ಬಾಲಕ್ಕೆ ಲಂಕೆಯಲ್ಲಿ ಬೆಂಕಿಹತ್ತಿದಾಗ, ಅಗ್ನಿಯಿಂದ ಅವನ ಬಾಲವು ಸುಡಬಾರದೆಂದು : ಸಂರಕ್ಷಿಸಲ್ಪಡಬೇಕು !—ಎಂದು ಸೀತೆಯು ಅಗ್ನಿಯನ್ನು ಪ್ರಾರ್ಥಿಸಿದ್ದಾಳೆ—

"ನಾನು ಪತಿಯ ಶುಶ್ರೂಷೆಯನ್ನು ಮಾಡಿದ್ದರೆ, ತಪಸ್ಸನ್ನು ಆಚರಿಸಿದ್ದರೆ, ನನ್ನಲ್ಲಿ ಪಾತಿವ್ರತ್ಯವಿದ್ದರೆ, ಹೇ ಅಗ್ನಿಯೇ ! ನೀನು ಹನುಮಂತನ ಪಾಲಿಗೆ ಶೀತಲನಾಗು !"[62]

ಸೀತೆಯು ಕೈಕೊಂಡ 'ಅಗ್ನಿಪರೀಕ್ಷೆ' ಇದು ವಾಲ್ಮೀಕಿರಾಮಾಯಣದಲ್ಲಿಯ ತುಲನೆಗೆ ಅಸಾಧ್ಯವಾದ ಒಂದು ಪ್ರಸಂಗವಾಗಿದೆ. ಇದರಲ್ಲಿಯ ಚಮತ್ಕಾರದ ಅಂಶವನ್ನು ಬದಿಗಿಟ್ಟರೂ ತನ್ನ ಚಾರಿತ್ರ್ಯದ ಬಗ್ಗೆ ಸೀತೆಗೆ ಅದೆಷ್ಟು ವಿಶ್ವಾಸವಿತ್ತು ! ಅದರ ಬಲದಿಂದ ಯಾವುದೇ ಬಗೆಯ ಸಂಕಟದಿಂದ ತಾನು ಪಾರಾಗುವೆ! ಎಂಬ ಮನೋಬಲವು ಅವಳದಾಗಿತ್ತು. ಹೀಗೆ ಅವಳು ಅಗ್ನಿಯನ್ನು ಆವಾಹಿಸುತ್ತಿರುವಾಗಲೇ ಅಗ್ನಿಗೆ ಒಂದು ಸವಾಲನ್ನೂ ಒಡ್ಡಿದ್ದಾಳೆ. ಅವಳು ತನ್ನ ಶುದ್ಧತೆಯನ್ನು ಸಿದ್ಧಪಡಿಸುವ ಭಾರವನ್ನು ಅಗ್ನಿದೇವತೆಯ ಮೇಲೆಯೇ ಹಾಕಿದ್ದಾಳೆ. ಅವಳೆನ್ನುವುದು—

"ನನ್ನ ಮನಸ್ಸು ಶ್ರೀರಾಮನಿಂದ ಅತ್ತಿತ್ತ ಕದಲದೇ ಇದ್ದಲ್ಲಿ, ಲೋಕಸಾಕ್ಷಿಯಾದ ಅಗ್ನಿಯು ನನ್ನನ್ನು ಕಾಪಾಡಲಿ ! ನನ್ನ ನಡತೆ ಶುದ್ಧವಾಗಿದ್ದು ಶ್ರೀರಾಮ ನನ್ನನ್ನು ದುಷ್ಟಳೆಂದು ತಿಳಿಯುತ್ತಾನೆ. ನಾನು ಶುದ್ಧಚಾರಿತ್ರ್ಯವುಳ್ಳವಳಾಗಿದ್ದರೆ ಸರ್ವಸಾಕ್ಷಿಯಾದ ಅಗ್ನಿಯು ನನ್ನನ್ನು ರಕ್ಷಿಸಲಿ ! ಕಾಯೇನ ವಾಚಾ ಮನಸಾ ನಾನು ಧರ್ಮಜ್ಞನಾದ ರಾಘವನನ್ನು ಅತಿಕ್ರಮಿಸಿರದಿದ್ದಲ್ಲಿ, ಲೋಕಸಾಕ್ಷಿಯಾದ ಹೇ ಅಗ್ನಿಯೇ ! ನೀನು ನನ್ನನ್ನು ಕಾಪಾಡು!"[63]

## ವರಗಳು

ಯಾವ ಮಾತುಗಳಿಂದ ಮನಸ್ಸಿನ ಪ್ರಸನ್ನತೆ, ಸಂತೋಷಗಳು ವ್ಯಕ್ತವಾಗುತ್ತವೆಯೋ ಆ ಉಚ್ಚಾರಣೆಗೆ ವರ, ಆಶೀರ್ವಾದ, ಸದಿಚ್ಛೆ ಎಂದೆನ್ನುತ್ತಾರೆ. ಆದರೆ ಈ ಮೂರೂ ಪದಗಳು ಒಂದೇ ಅರ್ಥದವಲ್ಲ. ಪ್ರತಿಯೊಂದರ ಅರ್ಥವ್ಯಾಪ್ತಿ, ಸ್ವರೂಪ ಹಾಗೂ ಪರಿಣಾಮಗಳು ಭಿನ್ನಭಿನ್ನವಾಗಿವೆ. ಶಾಪ ಕೊಡುವ ವ್ಯಕ್ತಿಗೆ ಅವಶ್ಯವಿದ್ದಹಾಗೆ ವರ ಕೊಡುವ ವ್ಯಕ್ತಿಯೂ ತಕ್ಕ ಯೋಗ್ಯತೆಯನ್ನು ಹೊಂದಿರಬೇಕು. ದೇವತೆಗಳಲ್ಲಿ ಈ ಅರ್ಹತೆಯು ಜನ್ಮಜಾತವಾಗಿದ್ದರೂ ತಪಸ್ಸಿನಿಂದ ಅದರ ಮಟ್ಟವನ್ನು ಹೆಚ್ಚಿಸಬಹುದು ; ಅಧಿಕಾರಕ್ಷೇತ್ರವನ್ನು ವಿಸ್ತಾರಗೊಳಿಸಬಹುದು. ಈ ಸೃಷ್ಟಿಯನ್ನು ನಿರ್ಮಿಸಿದ ಬ್ರಹ್ಮದೇವನು ಹಾಗೂ ಸೃಷ್ಟಿಸಂಹಾರಕನಾದ ಶಂಕರನೂ ತಪಶ್ಚರ್ಯೆಯನ್ನು ಮಾಡಿದ್ದಾರೆ.

'ವರ' ಈ ಶಬ್ದವು 'ವೃ' ಈ ಧಾತುವಿನಿಂದ ಬಂದಿದೆ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ : ಕೃಪೆ, ಪ್ರಸಾದ, ಇಷ್ಟಾರ್ಥ, ಆಯ್ಕೆ, ಅನುಗ್ರಹ, ಸದಿಚ್ಛೆ ಮೊದಲಾದವು.[64]

ಇಷ್ಟಾರ್ಥಪೂರ್ತಿಗಾಗಿ ಯಾರೊಬ್ಬರನ್ನು ಒಲಿಸಿಕೊಳ್ಳುವುದು ಮತ್ತು ಸಂತೋಷಗೊಂಡು ಇನ್ನೊಬ್ಬರಿಗೆ ಶುಭಕೋರುವುದೆಂದರೆ 'ವರದಾನ'. ಈ ರೀತಿ ಪ್ರಸನ್ನತೆಯು ತಪಸ್ಸಿನಿಂದ, ಪ್ರಾರ್ಥನೆಯಿಂದ, ಸ್ತುತಿಯಿಂದ, ಪೂಜೆಯಿಂದ, ಯಜ್ಞಕರ್ಮದಿಂದ, ಸದ್ಗುಣಗಳಿಂದ, ಸತ್ಕಾರ್ಯ ಆದಿ ಅನೇಕ ವಿಧಗಳಿಂದ ಲಭಿಸಬಹುದು. ಈ ಪ್ರಸನ್ನತೆಯ ವ್ಯಕ್ತಸ್ವರೂಪವೆಂದರೆ ವರವಿರುತ್ತದೆ. ಉತ್ಸ್ಫೂರ್ತ, ಸ್ವಯಂಸ್ಫೂರ್ತ ಪ್ರಸನ್ನತೆಯಿಂದ ದೊರಕುವ ವರಗಳು 'ಅಯಾಚಿತ'ವಿರುತ್ತವೆ. ಆದರೆ ತಪಸ್ಸು, ಯಜ್ಞಾದಿಗಳಿಂದ ಪ್ರಸನ್ನರಾದವರಿಂದ ಸಿಗುವ ವರಗಳು ಯಾಚಿತವೆನಿಸುತ್ತವೆ. 'ಅಯಾಚಿತ' ವರಗಳು ಯಾಚಿತ ವರಗಳಿಗಿಂತ ಶ್ರೇಷ್ಠವಿರುತ್ತವೆ. ವರವು ಯಾವುದೇ ಬಗೆಯದಿದ್ದರೂ ವರಕೊಡುವವನ ಇಚ್ಛೆಯೇ ಪ್ರಧಾನವಾಗಿದ್ದು, ಮಹತ್ವವುಳ್ಳದ್ದೂ ನಿರ್ಣಾಯಕವೂ ಇರುತ್ತದೆ. ಕೇವಲ ಬೇಡಿಕೊಳ್ಳುವ ಸ್ವಾತಂತ್ರ್ಯ ಯಾಚಕನಿಗಿರುತ್ತದೆ ; ಆದರೆ ಅದೇ ರೀತಿ ವರದಾನ ಮಾಡಬೇಕೆಂಬ ಬಂಧನವು ವರದಾತನ ಮೇಲಿರುವುದಿಲ್ಲ. ಆತನು ಯಾಚಕನ ಬೇಡಿಕೆಯನ್ನು ಸಂಪೂರ್ಣವಾಗಿ

ಅಥವಾ ಅಲ್ಪಾಂಶವಾಗಿ ಈಡೇರಿಸಬಹುದು ; ಇಲ್ಲವೇ ಈಡೇರಿಸಲಿಕ್ಕಿಲ್ಲ. ರಾವಣ ಮತ್ತು ಮೇಘನಾದ ಇವರಿಬ್ಬರೂ ಸಂಪೂರ್ಣ ಅಮರತ್ವಕ್ಕಾಗಿ ಪ್ರಾರ್ಥಿಸಿದ್ದರು ; ಬ್ರಹ್ಮನು ಅವರ ಇಷ್ಟಾರ್ಥವನ್ನು ಸಂಪೂರ್ಣವಾಗಿ ಪೂರೈಸಲಿಲ್ಲ. ಸದೇಹವಾಗಿ ಸ್ವರ್ಗವನ್ನು ಸೇರಬೇಕೆಂಬ ಇಚ್ಛೆಯಿಂದ ತಪಶ್ಚರ್ಯೆಯನ್ನು ಶಂಬೂಕನು ಮಾಡಿದರೂ ಆತನ ಇಷ್ಟಾರ್ಥವು ಪೂರ್ಣವಂತೂ ಆಗಲಿಲ್ಲ ; ಬದಲಾಗಿ ಆತನ ವಧೆಯಾಯಿತು. ವರವಾಗಿ ದೊರೆತ ತ್ರಿಶೂಲವು, ಸದಾಕಾಲವೂ ತನ್ನ ವಂಶದಲ್ಲಿಯೇ ಇರಬೇಕೆಂದು 'ಮಧು' ದೈತ್ಯನು ರುದ್ರನಿಗೆ ಪ್ರಾರ್ಥಿಸಿದ್ದನು. ರುದ್ರನು 'ಹೀಗೆ ಸಾಧ್ಯವಿಲ್ಲ !'ವೆಂದು ನುಡಿದರೂ ತುಸುಮಟ್ಟಿಗೆ ಆತನ ಬೇಡಿಕೆಯನ್ನು ಮನ್ನಿಸಿದ್ದನು. 'ಅಯಾಚಿತ' ವರಗಳಲ್ಲಿ ಯಾಚಕನಿಗೆ ಇಚ್ಛೆಯನ್ನು ವ್ಯಕ್ತಗೊಳಿಸುವ ಅವಕಾಶವೇ ಇರುವುದಿಲ್ಲ ; ವರದಾತನ ಇಚ್ಛೆಯೇ ಪ್ರಮಾಣವಾಗಿರುತ್ತದೆ. ಕೊಟ್ಟ ವರವನ್ನು ಸ್ವೀಕರಿಸುವುದು ಇಲ್ಲವೇ ನಿರಾಕರಿಸುವುದು, ವರ ಪಡೆಯುವವನಿಗೆ ಸೇರಿದ್ದು ವರವನ್ನು ಸ್ವೀಕರಿಸಲೇಬೇಕೆಂಬ ಬಂಧನ ಅವನ ಮೇಲಿರದು. ವರವನ್ನು ಒಮ್ಮೊಮ್ಮೆ ಬೇಡವೆನ್ನಲಾಗಿದೆ. ವರಗಳನ್ನು ಸ್ವೀಕೃತ ವರಗಳು, ಅಸ್ವೀಕೃತ ವರಗಳೆಂದು ವಿಂಗಡಿಸಬಹುದು. ಅಸ್ವೀಕೃತ ವರಗಳು ಕೇವಲ ಅಯಾಚಿತ ವರಗಳಲ್ಲಿರುವುದು ಸಾಧ್ಯ ; ಯಾಚಿತ ವರವೆಂದಬಳಿಕ ಅದರ ಸ್ವೀಕಾರ ನಿಶ್ಚಿತವಿರುತ್ತದೆ. ಅನಸೂಯೆಯು ಕೊಡಬಯಸಿದ ವರಗಳನ್ನು ಸೀತೆಯು ಸ್ವೀಕರಿಸಲಿಲ್ಲ. ಶರಭಂಗ ಋಷಿಯು ತನ್ನ ತಪೋಬಲದಿಂದ ಸಂಪಾದಿಸಿದ ಬ್ರಹ್ಮಲೋಕ, ಸ್ವರ್ಗಲೋಕಗಳನ್ನು ಶ್ರೀರಾಮನಿಗೆ ಕೊಡಬಯಸಿದಾಗ ಶ್ರೀರಾಮನು 'ನಾನೇ ತಪಶ್ಚರ್ಯೆಮಾಡಿ ಅವನ್ನೆಲ್ಲ ಗಳಿಸುವೆ' ಎಂದು ಹೇಳಿ ವಿನಯದಿಂದ ವರವನ್ನು ಬೇಡವೆಂದನು. ಶಾಪವನ್ನು ಎಂದೂ ನಿರಾಕರಿಸುವಂತಿಲ್ಲ. ಹೀಗಿರುವುದರಿಂದ ಎಲ್ಲ ಶಾಪಗಳೂ ಸ್ವೀಕೃತವಾಗಲೇಬೇಕು. ಶಾಪವನ್ನು ಕೊಡಬೇಕೆಂಬ ವಿಚಾರವು ಮನಸ್ಸಿನಲ್ಲಿ ಬಂದರೂ ಅದನ್ನು ತಡೆಹಿಡಿದ ಉದಾಹರಣೆಗಳಿವೆ. ಈ ರೀತಿ ಕೊಡದೇ ತಡೆಹಿಡಿದ ವರಗಳ ಉದಾಹರಣೆಗಳಿಲ್ಲ. ಏಕೆಂದರೆ ವರಗಳನ್ನು ಕೊಡುವುದರಿಂದ ತಪೋಬಲವು ಕಡಿಮೆಯಾಗದು ; ಪುಣ್ಯಕ್ಷಯವೂ ಆಗದು. ಮನಸ್ಸಿನಲ್ಲಿ ಮೂಡಿಬಂದ ವರದ ವಿಚಾರವನ್ನು ಪ್ರಕಟಿಸಿದಲ್ಲಿ ಯಾವ ಅನಿಷ್ಟ ಪರಿಣಾಮಗಳೂ ಆಗುವುದಿಲ್ಲ. ಹೀಗಿದ್ದರೂ ಒಮ್ಮೊಮ್ಮೆ ವರವನ್ನು ಕೊಟ್ಟ ಬಗ್ಗೆ ಇಲ್ಲವೇ ಬೇಡಿದ ಬಗ್ಗೆ ಪಶ್ಚಾತ್ತಾಪವಾಗುವುದುಂಟು. ಮರ್ಯಾದಿತ ಸ್ವರೂಪದ ಅಮರತ್ವದ ವರವನ್ನು ರಾವಣನಿಗೆ ಕೊಟ್ಟು ಬ್ರಹ್ಮದೇವನು ಸಮಸ್ಯೆಯನ್ನು ಎದುರಿಸಬೇಕಾಯಿತು ; ದೀರ್ಘನಿದ್ರೆಯ ವರವನ್ನು ಬೇಡಿಕೊಂಡ ಬಗ್ಗೆ ಕುಂಭಕರ್ಣನಿಗೆ ನಂತರ ಪಶ್ಚಾತ್ತಾಪವಾಯಿತು.

ವರವನ್ನು ಕೊಡಬೇಕೆಂಬ ಉತ್ಕಟ ಇಚ್ಛೆಗಿಂತ ಅದರ ಉಚ್ಚಾರಣೆಯಲ್ಲಿಯ ಅಭಿವ್ಯಕ್ತಿಯು ತುಂಬಾ ಮಹತ್ವದ್ದಿರುತ್ತದೆ.[65] ಮರಣೋನ್ಮುಖನಾದವನ ನುಡಿಗಳು ತುಂಬಾ ಪರಿಣಾಮಕಾರಿಯಾಗಿರುತ್ತವೆಂಬ ನಂಬಿಕೆ ಇದೆ. ಕೊನೆಯ ಗಳಿಗೆಯಲ್ಲಿ ದಶರಥನು ಶ್ರೀರಾಮನನ್ನುದ್ದೇಶಿಸಿ ಆಡಿದ ಮಾತುಗಳು ವರವಾಗಿರದಿದ್ದರೂ ವರದಂತಿವೆ.[66] ಪತಿವ್ರತೆಯ ಮಾತಿನ ಘನತೆ ಹೆಚ್ಚಾಗಿರುವುದು ಅವಳ ಪಾತಿವ್ರತ್ಯದ ಕಾರಣದಿಂದ, ಎಂದು ಬಗೆಯುತ್ತಾರೆ. ವಾಲ್ಮೀಕಿರಾಮಾಯಣದಲ್ಲಿ ಪತಿವ್ರತೆಯರು ಕೊಟ್ಟ ಐದು ವರಗಳಿವೆ. ಹೇಮಾ ಎಂಬ ಅಪ್ಸರೆಗೆ ಅದರಂತೆ ಕೈಕೇಯಿಗೆ ವರ ಕೊಡುವ ಅಧಿಕಾರ ಎಲ್ಲಿಂದ ಬಂದಿತು ಎಂಬುದು ಸ್ಪಷ್ಟವಾಗುವುದಿಲ್ಲ. ಆದರೆ ಹೇಮಾ ಎಂಬವಳು ಸ್ವಯಂಪ್ರಭೆಗೆ ಹಾಗೂ ಕೈಕೇಯಿಯು ಮಂಥರೆಗೆ ವರಗಳನ್ನು ನೀಡಿದ ಉಲ್ಲೇಖ ವಿದೆ. ಮಿಕ್ಕ ಮೂರು ವರಗಳಲ್ಲಿ ಪಾರ್ವತಿಯು ಒಂದೂವರೆ ವರವನ್ನು, ಅನಸೂಯೆಯು ಒಂದು ವರವನ್ನು ಕೊಟ್ಟಿದ್ದಾರೆ. ಅವರು ಕೊಟ್ಟ ಈ ವರಗಳು ಕೇವಲ ಅವರ ಪಾತಿವ್ರತ್ಯದ ಪ್ರಭಾವದಿಂದ ಎನ್ನುವಂತಿಲ್ಲ. ಅನಸೂಯೆಯಂತೂ ಪಾತಿವ್ರತ್ಯವಲ್ಲದೆ ಹಲವು ಬಗೆಗಳ ನಿಯಮಗಳನ್ನು ಪಾಲಿಸಿ ತಾನು ದೊಡ್ಡ ತಪಸ್ಸನ್ನು ಸಾಧಿಸಿರುವೆ ಎಂಬುದಾಗಿ ಖಚಿತವಾಗಿ ಒಪ್ಪಿಕೊಂಡಿದ್ದಾಳೆ.[67] ಪಾರ್ವತಿಯು ತನ್ನ ತಪೋಬಲದಿಂದ ಮತ್ತು ದೇವತೆಯಾಗಿ ಹುಟ್ಟಿದ್ದರಿಂದ ವರಗಳನ್ನು ದಯಪಾಲಿಸಿದ್ದಾಳೆ. ಪಾರ್ವತಿಯು ಒಂದು ವರವನ್ನು ರಾಕ್ಷಸಿಯೊಬ್ಬಳಿಗೆ, ಇನ್ನು ಅರ್ಧ ವರವನ್ನು 'ಇಲ' ಎಂಬ ರಾಜನಿಗೆ ಕೊಟ್ಟಿದ್ದಾಳೆ.[68]

ವರದಾತನ ಸ್ಥಾನವು ವರವನ್ನು ಪಡೆಯುವವನಿಗಿಂತ ಹಿರಿದು ಹಾಗು ಹಿರಿಮೆಯದು ; ಈ ಹಿರಿಮೆಯು ಶ್ರೇಷ್ಠತೆ, ವಯಸ್ಸು, ಜ್ಞಾನ, ಸ್ಥಾನ, ಅಧಿಕಾರ, ಮುಂತಾದ ಕಾರಣಗಳಿಂದಾಗಿ ಪ್ರಾಪ್ತವಾಗಿರುತ್ತದೆ.

## ವರಗಳ ಕಾರಣಗಳು

ತಪಶ್ಚರ್ಯೆಯು ವರಗಳನ್ನು ಪಡೆಯುವ ಮುಖ್ಯಸಾಧನವಾಗಿದೆ. ಇಷ್ಟದೇವತೆಯನ್ನು ಒಲಿಸಿಕೊಂಡರೆ ತಮ್ಮ ಇಷ್ಟಾರ್ಥವು ಸಫಲವಾಗುತ್ತದೆ ಎಂಬ ನಂಬಿಕೆಯು ಭಾರತೀಯರದಾಗಿದೆ. ಫಲಪ್ರಾಪ್ತಿಗಾಗಿ ಸಾಕಷ್ಟು ಸಂಕಷ್ಟಗಳನ್ನು, ಶಾರೀರಿಕ ಕ್ಲೇಶಗಳನ್ನು, ಬಹುದೀರ್ಘಕಾಲದವರೆಗೆ ಸಹಿಸುವ ಶಕ್ತಿಯನ್ನು ತಪಸ್ವಿಗಳು ಹೊಂದಿರುತ್ತಿದ್ದರು. ತಪದ ಸಾಧನೆಯು ಘೋರವಾದದ್ದು, ಕಷ್ಟಕರವಾದದ್ದು ಇರುತ್ತಿತ್ತು. ತಪಸ್ಸಿನಂತೆಯೇ ಯಜ್ಞಯಾಗ, ಪೂಜೆಪುನಸ್ಕಾರ ಇವೆಲ್ಲವುಗಳಿಂದಲೂ ಇಷ್ಟಾರ್ಥದ ಪ್ರಯತ್ನಗಳು ನಡೆಯುತ್ತಿದ್ದವು. ಈ ಬಗೆಯಿಂದ ಪಡೆದ ವರಗಳು ಬಹಳಷ್ಟು ಯಾಚಿತ ವರಗಳಾಗಿರುತ್ತಿದ್ದವು. ರಾಮಾಯಣದಲ್ಲಿಯ ಒಟ್ಟು ೮೯ ವರಗಳಲ್ಲಿ ಹದಿನೈದು ವರಗಳು, ತಪಸ್ಸು-ಯಜ್ಞಯಾಗಾದಿಗಳಿಂದ ದೊರೆತಿವೆ. ಇವುಗಳನ್ನು ಹೆಚ್ಚಾಗಿ ಪಡೆದವರು ರಾಕ್ಷಸರು. ರಾವಣ, ಇಂದ್ರಜಿತು, ಕುಂಭಕರ್ಣ, ವಿಭೀಷಣ, ಮಾರೀಚ, ಸುಮಾಲಿ, ಮಾಲ್ಯವಾನ್ ಮೊದಲಾದ ರಾಕ್ಷಸರು ಕಠೋರ ತಪಸ್ಸನ್ನು ಆಚರಿಸಿ ವರಗಳನ್ನು ಪಡೆದಿದ್ದಾರೆ. ವಿರಾಧ, ದುಂದುಭಿ ಇವರು ಸಹ ತಪಶ್ಚರ್ಯೆ ಮಾಡಿದ್ದರು. ರಾಕ್ಷಸರು ತಪಮಾಡಿದಂತೆ, ವಸಿಷ್ಠ ವಿಶ್ವಾಮಿತ್ರ, ಶರಭಂಗ ಕಶ್ಯಪಾದಿ ಮುನಿವರ್ಯರು ತಪವನ್ನಾಚರಿಸಿ ತಮಗೆ ಬೇಕಾದುದನ್ನು ಪಡೆದಿದ್ದಾರೆ. ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗಲೆಂದು ಭಗೀರಥನು ಉಗ್ರತಪವನ್ನಾಚರಿಸಿದನು. ವರ ಪಡೆಯಲೋಸುಗ ಮಾಂಧಾತನು ತಪವನ್ನು ಕೈಕೊಂಡಿರ ಬೇಕು. ತಪ ಮಾಡಿದನಂತರವೂ ವರಪ್ರಾಪ್ತಿಯಾಗದ ಒಂದೇ ಒಂದು ಉದಾಹರಣೆ ಎಂದರೆ ಶಂಬೂಕನದು. ಯಜ್ಞದಿಂದ ದೇಹಸಹಿತವಾಗಿ ಸ್ವರ್ಗವನ್ನು ಸೇರುವ ತ್ರಿಶಂಕುವಿನ ಆಕಾಂಕ್ಷೆ ವಿಫಲಗೊಂಡಿತು. ಪುತ್ರಕಾಮೇಷ್ಟಿ ಯಜ್ಞದ ಫಲವಾಗಿ ಪಾಯಸವು ದೊರೆಯಿತು ; ಅದರಿಂದ ಮಕ್ಕಳು ಜನಿಸಿದರು. ಹೀಗಿದ್ದರೂ 'ಪಾಯಸಪ್ರಾಪ್ತಿ' ಎಂದರೆ ವರವಲ್ಲ ; ಅದು ಅನುಗ್ರಹವಾಗಿದೆ. ಇದರ ಚರ್ಚೆಯನ್ನು ಸವಿಸ್ತಾರವಾಗಿ ಬೇರೆಡೆಯಲ್ಲಿ ಕೊಡ ಲಾಗಿದೆ.[69] ಏಳು ಯಜ್ಞಗಳನ್ನು ನೆರವೇರಿಸಿ ಇಂದ್ರಜಿತು ಮರ್ಯಾದಿತವಾದ ಅಮರತ್ವವನ್ನು ಪಡೆದು ಕೊಂಡನು. ಇದು ಆತನ ಯಾಚಿತ ವರವಾಗಿತ್ತು. ದೇಹವು ಅಚೇತನಗೊಂಡಿದ್ದರೂ ನಿಮಿರಾಜನ ಅಂತರಾತ್ಮಕ್ಕೆ ವರ ದೊರಕಿದೆ ; ಏಕೆಂದರೆ ಆತನು ಪ್ರಾರಂಭಿಸಿದ್ದ ಯಾಗವನ್ನು ಬೇರೆ ಋಷಿಗಳು ನಿಮಿರಾಜನ ಮರಣಾ ನಂತರವೂ ಮುಂದುವರಿಸಿದ್ದರು. ಈ ರೀತಿ ದೊರೆತ ಈ ವರವು 'ಅಯಾಚಿತ'ವಿದೆ.

ಸುಕೇತು, ಸಗರ, ದಿತಿ, ಕಾಲಿಂದಿ ಇವರೆಲ್ಲರೂ ಅಪತ್ಯಪ್ರಾಪ್ತಿಗಾಗಿ ತಪವನ್ನಾಚರಿಸಿದರು. ದಿತಿಗೆ ಯಶ ಲಭಿಸಲಿಲ್ಲ ; ಮಿಕ್ಕವರಿಗೆಲ್ಲ ಫಲಪ್ರಾಪ್ತಿಯಾಯಿತು. ದಿತಿಗೆ ದೊರೆತ ವರವು ಕಟ್ಟಳೆಯ ವರವಾಗಿತ್ತು. ಆ ಬಂಧನದ ಪಾಲನೆ ಅವಳಿಂದಾಗಲಿಲ್ಲ. ಈ ಎಲ್ಲ ವರಗಳು ಕಟ್ಟಳೆಯ ವರವಾಗಿದ್ದವು. ಆ ಬಂಧನದ ಪಾಲನೆ ಅವಳಿಂದಾಗಲಿಲ್ಲ. ಈ ಎಲ್ಲ ವರಗಳು ಯಾಚಿತ ವರಗಳಾಗಿವೆ. ಬಯಕೆಯನ್ನು ಪೂರೈಸಲು ಶ್ರೀರಾಮನು ಸೀತೆಗೆ 'ವರವನ್ನು ಬೇಡಿಕೊ !' ಎಂದನು. ಸೀತೆಗಿತ್ತ ಈ ವರವು ಅಯಾಚಿತವಿದೆ. ಸೀತೆಯ ಪಾಲಿಗೆ ಈ ವರವು ಶಾಪದ್ರೂಪವಾಯಿತು. ಈ ರೀತಿಯಲ್ಲಿ ಸಂಪಾತಿಗೆ ದೊರೆತ ವರವೊಂದನ್ನುಳಿದು ಮಿಕ್ಕ ಬಹುಶಃ ಎಲ್ಲ ವರಗಳು ಹನುಮಂತನಿಗೆ ದೊರಕಿವೆ. ಮೇಲಿನ ಎಲ್ಲ ವರಗಳ ಉದ್ದೇಶವು ಮುಂದೆ ಶ್ರೀರಾಮನು ಅಂಗೀಕರಿಸಿದ ಕಾರ್ಯದಲ್ಲಿ ಉಪಯುಕ್ತವಾಗಬೇಕೆಂದಿತ್ತು.[70] ಲಂಕೆಯ ಪ್ರಯಾಣದಲ್ಲಿ ಹನುಮಂತನಿಗೆ ಸಹಾಯವಾಗಲೆಂದು ಮೈನಾಕ ಪರ್ವತಕ್ಕೆ ವರ ದೊರೆತಿತ್ತು ; ಆದರೆ ಹನುಮಂತನು ಅದರ ಉಪಯೋಗವನ್ನು ಮಾಡಿಕೊಳ್ಳಲಿಲ್ಲವೆಂಬುದು ಬೇರೆ ಸಂಗತಿಯಾಗಿದೆ. ನಿಷಾದನಿಗೆ ಶಾಪವನ್ನು ಕೊಟ್ಟ ಕಾರಣದಿಂದ ವಾಲ್ಮೀಕಿಗೆ ನಂತರ ಪಶ್ಚಾತ್ತಾಪವಾಯಿತು. ಆಗ ಬ್ರಹ್ಮದೇವನು ವಾಲ್ಮೀಕಿಯನ್ನು ಸಂತೈಸ ಲೆಂದು, ವಾಲ್ಮೀಕಿಯಿಂದ ರಾಮಾಯಣವು ಬರೆಯಲ್ಪಡಬೇಕೆಂಬ, ಇಬ್ಬಗೆಯ ವಿಚಾರದಿಂದ ಆತನಿಗೆ ವರ ವನ್ನಿತ್ತನು. ಶಾಪದಿಂದ ಸೌದಾಸರಾಜನ ಬಿಡುಗಡೆಯಾಗಬೇಕೆಂದು ವಸಿಷ್ಠನು ಆತನಿಗೆ ವರವನ್ನು ಕೊಟ್ಟನು.

ಸದ್ವರ್ತನೆ, ಸುವಾರ್ತಾಕಥನ, ಉತ್ಕೃಷ್ಟವೆನಿಸುವ ಸೇವೆ, ಸತ್ಪುರುಷದರ್ಶನ, ವಿಘ್ನನಿವಾರಣೆ, ಅನುಗ್ರಹ, ಪ್ರಾರ್ಥನೆ, ಉತ್ಕಟಪ್ರೀತಿ, ದುಷ್ಟರ ಸಂಹಾರ, ಸಜ್ಜನರ ರಕ್ಷಣೆ ಇವುಗಳಿಂದ ಸಂತೋಷಗೊಂಡ ದೇವರು ಋಷಿಗಳಿಗೆ ಅನೇಕ ವರಗಳನ್ನು ಕೊಟ್ಟಿದ್ದಾರೆ. ಶ್ರೀರಾಮನಿಗೆ, ಆತನ ಸದ್ವರ್ತನೆಯ ಕಾರಣದಿಂದಲೇ ವರಗಳು ಪ್ರಾಪ್ತವಾಗಿವೆ. ದುಷ್ಟರನ್ನು ದಂಡಿಸಿ ಮಾನವಕುಲವನ್ನು ಕಾಪಾಡಿದ್ದಕ್ಕಾಗಿ, ರಾವಣನ ವಧೆಯನಂತರ

ಶ್ರೀರಾಮನನ್ನು ದೇವತೆಗಳು ತುಂಬಾ ಹೊಗಳಿದ್ದಾರೆ. ಲವ-ಕುಶರು ಹಾಡಿದ ರಾಮಾಯಣವನ್ನು ಕೇಳಿ ಸಂತೋಷಗೊಂಡ ಮುನಿಗಳು ಅವರಿಗೆ ವರಗಳನ್ನು ನೀಡಿದ್ದಾರೆ. ಶ್ರೀರಾಮನಂಥ ಸತ್ಪುರುಷನ ದರ್ಶನವಾಗಬೇಕೆಂದು, ಶರಭಂಗನು, ತನ್ನನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ಬಂದ ಇಂದ್ರನನ್ನು, ತನಗೆ ತುಸು ಸಮಯ ಕೊಡಬೇಕೆಂದು ಪ್ರಾರ್ಥಿಸಿದನು. ಸೀತೆಯ ಸದಾಚರಣೆಯಿಂದ ಅನಸೂಯೆಯು ಸಂತುಷ್ಟಳಾದಳು. ಶ್ರೀರಾಮನ ಅಲೌಕಿಕತೆಯಿಂದ ಭರದ್ವಾಜನು ಸಂತುಷ್ಟನಾದನು. ಶ್ರೀರಾಮ-ಸೀತೆಯರಿಗೆ ವರಗಳು ದೊರೆತವು. ಶ್ರೀರಾಮನಿಗೆ ಯುವರಾಜ್ಯಾಭಿಷೇಕವಾಗಲಿದೆ ಎಂಬ ಸುವಾರ್ತೆಯನ್ನು ಮೊಟ್ಟಮೊದಲಿಗೆ ತಂದ ಮಂಥರೆಗೆ ಕೈಕೇಯಿಯು ವರವನ್ನು ಕೊಡಬಯಸಿದ್ದಳು. ಮಂಥರೆಯು ಅದನ್ನು ಸ್ವೀಕರಿಸಲಿಲ್ಲವೆಂಬ ಸಂಗತಿ ಬೇರೆಯೇ ಇದೆ. 'ಸೋಮದಾ' ಮತ್ತು 'ಶಬರಿ' ಇವರು ಸಲ್ಲಿಸಿದ್ದ ಉತ್ಕೃಷ್ಟಸೇವೆಯ ಫಲವು ಅವರಿಗೆ ಪ್ರಾಪ್ತವಾಯಿತು. ಸೋಮದೆಯು ಯಾರೊಬ್ಬರ ಪತ್ನಿಯಾಗದೇ ವರದಿಂದ ಪುತ್ರನನ್ನು ಪಡೆದಳು. ತೃಣಬಿಂದು ಕನ್ಯೆಗೆ ಪುಲಸ್ತ್ಯನಿಂದ ಶಾಪ ದೊರೆತರೂ ಪರಿಣಾಮದಲ್ಲಿ ಅದು ಅವಳ ಪಾಲಿಗೆ ವರವಾಗಿ ಪರಿಣಮಿಸಿತು. ಅವಳು ಪುಲಸ್ತ್ಯನ ಹೆಂಡತಿಯಾದಳು. ನಿಃಸ್ವಾರ್ಥಸೇವೆಯು ಸ್ತ್ರೀಧರ್ಮವಾಗಿರುವುದರಿಂದ, ಉತ್ಕೃಷ್ಟಸೇವೆಯ ಫಲವು ಅವರಿಗೆ ಹೆಚ್ಚಾಗಿ ಲಭಿಸುವುದು ಸಹಜವಾಗಿದೆ. ಹನುಮಂತನೊಬ್ಬನನ್ನುಳಿದು ಲಕ್ಷ್ಮಣನಷ್ಟು ಉತ್ಕೃಷ್ಟಸೇವೆಯನ್ನು ಬೇರೆ ಯಾರೂ ಮಾಡಿದ ಉಲ್ಲೇಖ ರಾಮಾಯಣದಲ್ಲಿಲ್ಲ. ಹೀಗಿದ್ದರೂ ಲಕ್ಷ್ಮಣನಿಗೆ ಒಂದು ವರ ಕೂಡ ಲಭಿಸಿಲ್ಲವೆಂಬುದು ವಿಸ್ಮಯಕಾರಕವಾಗಿದೆ.

ವಾಲ್ಮೀಕಿರಾಮಾಯಣದಲ್ಲಿ ಅದಷ್ಟೋ ವರಗಳ ಹಿನ್ನೆಲೆಯು ಸ್ಪಷ್ಟವಾಗಿಲ್ಲ.

## ವರಗಳ ಪರಿಣಾಮಗಳು

ಮೃತ್ಯುಲೋಕದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೆ ಅಸಾಧ್ಯವಿರುವ ಸಂಗತಿ ಎಂದರೆ ಅಮರತ್ವ. ಇದನ್ನು ಪಡೆಯಲು ಎಷ್ಟು ಬೇಕಾದರೂ ಶಾರೀರಿಕ, ಮಾನಸಿಕ ಕ್ಲೇಶಗಳನ್ನು ಸಹಿಸುವ ಇಚ್ಛೆ ಆತನದಾಗಿರುತ್ತದೆ. ಈ ಮಣ್ಣಿನ ಬಾಳು ಕ್ಷಣಿಕವಿದೆ, ನೀರಿನ ಮೇಲಿನ ಗುಳ್ಳೆಯಂತಿದೆ ಎಂಬ ಅರಿವಿದ್ದರೂ ಆದಷ್ಟು ಹೆಚ್ಚುಕಾಲ ಜೀವಿಸಬೇಕೆಂಬ ಹಂಬಲ, ಪ್ರಯತ್ನ ಎಡೆಬಿಡದೇ ನಡೆದಿರುತ್ತದೆ. ಈ ಮೃತ್ಯುಲೋಕದಲ್ಲಿ ಸುಖವಾಗಿ ಬಾಳಬೇಕೆಂದು ಸತತ ಯತ್ನ ನಡೆದೇ ಇರುತ್ತದೆ. ಮುಪ್ಪು ಮೃತ್ಯುವಿನ ಪೂರ್ವಸೂಚನೆ ಎಂಬುದನ್ನು ಶುಕ್ರಾಚಾರ್ಯರ ಶಾಪದಿಂದ ಅರಿತ 'ಯಯಾತಿ'ಯು ತನ್ನ ಮಗನಿಂದ ತಾರುಣ್ಯವನ್ನು ಬೇಡಿಕೊಂಡು ತನ್ನ ಕಾಮಲಾಲಸೆಯನ್ನು ಪೂರೈಸಿಕೊಂಡನು. ಬದುಕಿರಬೇಕೆಂಬ ಆಸೆಯು ಅತಿ ತೀವ್ರವಾಗಿರುವುದರಿಂದ ಅಮರತ್ವವನ್ನು ಪಡೆಯಲು ತಪಸ್ಸನ್ನು ಆಶ್ರಯಿಸುತ್ತಾರೆ. ಈ ರೀತಿ ತಪಸ್ಸನ್ನು ಆಚರಿಸಿ ರಾವಣ, ಮೇಘನಾದ ಇವರು ಅಮರರಾಗಲು ಯತ್ನಿಸಿದರು. ಯಜ್ಞಯಾಗಾದಿಗಳನ್ನು ಆಚರಿಸಿದರು ; ತಪಸ್ಸನ್ನು ಕೈಕೊಂಡರು. ವರಗಳನ್ನು ಪಡೆದು ಎಣೆಯಿಲ್ಲದ ತಮ್ಮ ಸಾಮರ್ಥ್ಯದಿಂದ ತಮ್ಮ ಜೀವನವನ್ನು ಇಷ್ಟಬಂದಂತೆ ಬಾಳಬೇಕೆಂದು ಈ ಎಲ್ಲ ಪ್ರಯತ್ನಗಳಿದ್ದವು. ಬೇರೆ ರಾಕ್ಷಸರು ಇದೇ ಉದ್ದೇಶವನ್ನಿಟ್ಟುಕೊಂಡು, ಯತ್ನಿಸಿ ಯಶಪಡೆದಿದ್ದರು. ರಾಮಾಯಣದಲ್ಲಿಯ ಒಟ್ಟು ವರಗಳ ಸಂಖ್ಯೆಯಲ್ಲಿ ಒಂದುನಾಲ್ಕಾಂಶ ವರಗಳನ್ನು ರಾಕ್ಷಸರು ಪಡೆದಿದ್ದಾರೆ. ಅಮರರಾಗುವ ಇಚ್ಛೆಯಂತೆ ಅತಿದೀರ್ಘ ಆಯುಸ್ಸನ್ನು ಹೊಂದಬೇಕೆಂಬ ಆಸೆಯು ಇರುತ್ತಿತ್ತು ; ಅದಕ್ಕಾಗಿ ಸಾಕಷ್ಟು ಪ್ರಯತ್ನಗಳು ನಡೆಯುತ್ತಿದ್ದವು. ಇವುಗಳ ಲಾಭವು ಸ್ವಂತಕ್ಕಾಗಬೇಕೆಂಬ ಸ್ವಾರ್ಥಭಾವನೆಯು ಗೋಚರವಾಗುತ್ತದೆ. ಶ್ರೀರಾಮನು ಮಾತ್ರ ಇವುಗಳಿಗೆ ಅಪವಾದವಾಗಿದ್ದಾನೆ. ಆತನು ಯಾರಿಂದಲೂ ವರಗಳನ್ನು ಬೇಡಲಿಲ್ಲ. ಕೊಡಮಾಡಿದ ವರಗಳನ್ನು ಸ್ವೀಕರಿಸಲಿಲ್ಲ ; ಅಯಾಚಿತವಾಗಿ ಬಂದ ವರಗಳನ್ನು ಬೇರೆಯವರ ಒಳಿತಿಗಾಗಿ ಸ್ವೀಕರಿಸಿದನು. ಬ್ರಾಹ್ಮಣನ ಮೃತಹೊಂದಿದ ಪುತ್ರನು ಜೀವಿತವಾಗಬೇಕೆಂದು, ಯುದ್ಧದಲ್ಲಿ ಮಡಿದ ವಾನರವೀರರು ಪುನಃ ಸಜೀವರಾಗಬೇಕೆಂದು, ಅಯೋಧ್ಯಾ ಮಾರ್ಗದ ಮರಗಿಡಗಳು ಸದಾಕಾಲವೂ ಫಲ-ಪುಷ್ಪಗಳಿಂದ ರಾರಾಜಿಸುತ್ತಿರಬೇಕೆಂದು, ಅವುಗಳ ಲಾಭವು ಜನರಿಗಾಗಬೇಕೆಂದು ; ನದಿಗಳು ತುಂಬಿ ಹರಿಯುತ್ತಿರಬೇಕು ! — ಎಂಬ ವರಗಳನ್ನು ಶ್ರೀರಾಮನು ಸ್ವೀಕರಿಸಿದನು. "ಸದಾಕಾಲವು ನನ್ನ ಬುದ್ಧಿಯು ಧರ್ಮಪರವಶವಾಗಿರಲಿ" ಎಂದು ವಿಭೀಷಣನು ಇಚ್ಛಿಸಿದ ವರವು ಎದ್ದುಕಾಣುತ್ತದೆ. ಬ್ರಹ್ಮದೇವ, ಅನ್ಯದೇವತೆಗಳು ಹಾಗೂ ಲೋಕಪಾಲ ಇವರ ವರಗಳಿಂದ

ಹನುಮಂತನ ಸಾಮರ್ಥ್ಯವು ತುಂಬಾ ವರ್ಧಿಸಿತು. ಮೈಂದ ಮತ್ತು ದ್ವಿವಿದರೆಂಬ ವಾನರರಿಗೆ ಮಿತಿಯುಳ್ಳ ವರಗಳು ಬ್ರಹ್ಮದೇವನಿಂದ ದೊರೆತಿದ್ದರೂ ಅವುಗಳಿಂದಾಗಿ ಅವರ ತೊಂದರೆಗಳ ನಿವಾರಣೆಯಾಯಿತು. ಇಂದ್ರನ ವರದಿಂದ ನವಿಲಿಗೆ ಗರಿಗಳ ತುಂಬ ಕಣ್ಣುಗಳು ಮೂಡಿದವು; ಸರ್ಪಗಳಿಂದ ನವಿಲಿಗೆ ಅಭಯವುಂಟಾಯಿತು.

ರಾಮಾಯಣದಲ್ಲಿ ಹತ್ತು ವರಗಳಿಂದ ಸಂತಾನಪ್ರಾಪ್ತಿಯಾಗಿದೆ. ಜಯಾ, ಸುಪ್ರಭಾ, ಕೇಶಿನಿ, ಸುಮತಿ ಮತ್ತು ಕಾಲಿಂದಿ ಇವರಿಗೆ ವರಗಳಿಂದ ಮಕ್ಕಳು ಹುಟ್ಟಿದ್ದಾರೆ. ಕೆಲವರಿಗೆ ಒಬ್ಬಳು ಮಡದಿಯಿಂದ ಅರವತ್ತು ಸಹಸ್ರ ಮಕ್ಕಳು ಆದ ಉಲ್ಲೇಖವೂ ಇದೆ. ವಿವಾಹವಾಗದೇ ಸೋಮದೆಗೆ ಮಗುವಾಯಿತು. ಗಂಡುಮಗು ಬಯಸಿದ ಸುಕೇತುವಿಗೆ ಸಾವಿರ ಆನೆಗಳ ಬಲವುಳ್ಳ ತಾಟಕಾ ಕನ್ಯೆಯಾಗಿ ಜನಿಸಿದಳು. ಕೇಕಸೀ ರಾಕ್ಷಸಿಯು ವಿಶ್ರವಸುವಿನಂಥ ಮಕ್ಕಳಾಗಬೇಕೆಂದು ಆತನ ಬಳಿ ಬಂದಳು. ಆಕೆಯು ಬಂದ ಗಳಿಗೆ ಕ್ರೂರಗಳಿಗೆಯಾದ್ದರಿಂದ ಅವಳಿಗೆ ಜನಿಸಿದ ಮಕ್ಕಳು ಕ್ರೂರಕರ್ಮಿಗಳಾದರು. ಅವಳು ಪ್ರಾರ್ಥಿಸಿದ್ದರಿಂದ, ಕೇವಲ ಒಬ್ಬ ಪುತ್ರನು—ವಿಭೀಷಣ ಮಾತ್ರ ವಿಶ್ರವಸುವಿನಂತಾದನು. ದಿತಿಗೆ ದೊರೆತ ವರವು ಕಟ್ಟಳೆಯದಿತ್ತು. ಕಟ್ಟಳೆಯನ್ನು ಪಾಲಿಸದ ಕಾರಣ ಇಂದ್ರನು ದಿತಿಯ ಗರ್ಭವನ್ನು—ಗರ್ಭದಲ್ಲಿಯ ಪುತ್ರನನ್ನು ಏಳು ತುಂಡುಗಳಾಗಿ ತುಂಡರಿಸಿದನು.

ಬ್ರಹ್ಮದೇವನ ವರದಿಂದ ವಿಶ್ವಾಮಿತ್ರನಿಗೆ ಬ್ರಹ್ಮರ್ಷಿಪದವು ಲಭಿಸಿತು ; ವೈಶ್ರವಣನು ಲೋಕಪಾಲ ಪದವನ್ನು ಹೊಂದಿದನು. ವಿಶ್ವಾಮಿತ್ರನ ಇಚ್ಛೆಯನ್ನು ವಸಿಷ್ಠನೂ ಒಪ್ಪಿದನು. ತ್ರಿಶಂಕು ಮತ್ತು ಶಂಬೂಕರ ದೇಹಸಹಿತವಾಗಿ ಸ್ವರ್ಗ ಸೇರುವ ಪ್ರಯತ್ನಗಳು ವಿಫಲಗೊಂಡವು. ಇಂದ್ರನ ವರದಿಂದ ಮಲದ-ಕರುಷ ಪ್ರದೇಶವು ಸಮೃದ್ಧವಾಯಿತು. ಶಬರಿಯು ಅಕ್ಷಯಲೋಕವನ್ನು ಸೇರಿ ಕೃತಾರ್ಥಳಾದಳು. ಕುರುಡನೊಬ್ಬನಿಗೆ ವರವಾಗಿ ರಾಜನ ನೇತ್ರಗಳು ದೊರೆತವು. ಸೂರ್ಯನ ಪ್ರಸಾದದಿಂದ ಮೇರುಪರ್ವತವು ಸುವರ್ಣಮಯ ವಾಯಿತು. ವೈಶ್ರವಣನ ವರದಿಂದ 'ಕೃಕಲಾಸ'(ಓತಿಕೇತ)ಕ್ಕೆ ಚಿನ್ನದ ಕಾಂತಿ ದೊರೆಯಿತು. ಇಂದ್ರನು ಪ್ರಸನ್ನ ನಾದ್ದರಿಂದ ಹಂಸಕ್ಕೆ ನೊರೆಯಂಥ ಶುಭ್ರವರ್ಣವುಂಟಾಗಿ ಚಂದ್ರನ ಮೆರುಗು ಪ್ರಾಪ್ತವಾಯಿತು. ಯಮನ ವರದಿಂದ ಕಾಗೆಗೆ ಮರ್ಯಾದಿತ ರೂಪದಲ್ಲಿ, ಹತ್ಯೆ ಆಗದಂಥ ಸ್ಥಿತಿಯೊದಗಿತು. ವಸಿಷ್ಠನ ವರದಿಂದ ಕಲ್ಮಾಷಪಾದನು ಶಾಪಮುಕ್ತನಾದನು ಮತ್ತು ರಾಕ್ಷಸರ ಅಸ್ತ್ರಬಂಧನದಿಂದ ಕಟ್ಟಿಹಾಕಲ್ಪಟ್ಟ ಹನುಮಂತನು ಬ್ರಹ್ಮನ ವರವಿದ್ದುದರಿಂದ ಆ ಬಂಧನದಿಂದ ಬಿಡಿಸಿಕೊಂಡನು.

ಸಾಮಾನ್ಯವಾಗಿ ಅಸಾಧ್ಯವೆಂದೆನಿಸುವ ಸಂಗತಿಗಳು ಮಾನವರ ಪ್ರಯತ್ನದಿಂದ ಸಾಧಿಸುವಂತಿರುವುದಿಲ್ಲ. ಇಂಥ ಸಂಗತಿಗಳು ವರಗಳಿಂದ ಸಾಧಿಸಲಾಗಿವೆ ಎಂಬುದರ ಉದಾಹರಣೆಗಳು ರಾಮಾಯಣದಲ್ಲಿವೆ. ಒಬ್ಬ ಋಷಿಯ ವರದಿಂದ ಕೈಕೇಯ ರಾಜನಿಗೆ ಪಶು-ಪಕ್ಷಿಗಳ ಭಾಷೆಯ ಜ್ಞಾನವುಂಟಾಯಿತು. ಮಯಾಸುರನು ಶಿಲ್ಪಶಾಸ್ತ್ರಪ್ರವೀಣನಾದನು. ಎದುರಿನಲ್ಲಿ ಬಂದ ಎಲ್ಲರನ್ನೂ ನುಂಗುವ ವಿಚಿತ್ರ ಸಾಮರ್ಥ್ಯವು ಸುರಸೆ ಎಂಬವಳಿಗೆ ದೊರಕಿತ್ತು. ಮರುಪ್ರದೇಶವು ಹೂವುಹಣ್ಣುಗಳಿಂದ ಸುಗಂಧಿತವಾಯಿತು. ವರದಾನದಿಂದಲೇ ಇವೆಲ್ಲ ನಡೆದಿವೆ. ಇಂದ್ರನಿಂದ ಹವಿಷ್ಯಾನ್ನವು ಸೀತೆಗೆ ದೊರೆಯಿತು. ಸಕಲ ಪ್ರಾಣಿಗಳ ಕಣ್ಣುಗಳಲ್ಲಿ ವಾಸಿಸ ಬೇಕೆಂಬ ನಿಮಿರಾಜನ ಆಸೆ, ಬ್ರಹ್ಮಹತ್ಯೆಗೆ ಪ್ರಾಪ್ತವಾದ ನಾಲ್ಕು ಆಶ್ರಯಸ್ಥಾನಗಳು, ಶ್ರೀರಾಮನು ಹೋದ ಲ್ಲೆಲ್ಲ ಆತನನ್ನು ಹಿಂಬಾಲಿಸುವ ಅವಕಾಶ ಪ್ರಜೆಗಳಿಗೆ ದೊರೆತದ್ದು—ಇವೆಲ್ಲವು ವರಗಳ ಮುಖಾಂತರ ನಡೆದಿವೆ. ದೇವತೆಗಳ ವರಕ್ಕನುಸಾರವಾಗಿ ಶ್ರೀರಾಮನು ಮಾನವಾವತಾರದಲ್ಲಿ ಪೃಥ್ವಿಯನ್ನು ಆಳುವಂತಾದನು. ಪಾರ್ವತಿಯು ಕೊಟ್ಟ ಎರಡೂ ವರಗಳ ಸ್ವರೂಪವು ಇನ್ನಿತರ ವರಗಳಿಗಿಂತ ತೀರ ಭಿನ್ನವಾಗಿದೆ. ಒಂದು ವರದ ಮೇರೆಗೆ ರಾಕ್ಷಸಿಯರಿಗೆ "ಸಮಾಗಮ ನಡೆದ ತಕ್ಷಣ ಗರ್ಭಧಾರಣೆ, ಗರ್ಭಧಾರಣೆಯಾದ ಮರು ಕ್ಷಣವೇ ಹೆರಿಗೆ, ಹೆರಿಗೆಯಾದ ಕ್ಷಣವೇ ಮಗುವು ತಾಯಿಯಷ್ಟೇ ವಯಸ್ಸಿನದಾಗುವದು" ಎಂದಿತ್ತು. ಉಮೆಯು ಕೊಟ್ಟ ಇನ್ನೊಂದು ಅರ್ಧವರದಂತೆ "ಇಲ ಎಂಬ ರಾಜನಿಗೆ ಒಂದು ತಿಂಗಳಮಟ್ಟಿಗೆ ಸ್ತ್ರೀತ್ವ ಪ್ರಾಪ್ತವಾಗಿರಬೇಕು; ಮರುತಿಂಗಳು ಆತನು ಪುರುಷತ್ವವನ್ನು ಹೊಂದಿರಬೇಕು; ಪುರುಷನಿರುವಾಗ ಸ್ತ್ರೀತ್ವದ ಸ್ಮರಣೆ ಇರಲಾರದು ; ಸ್ತ್ರೀಯಾಗಿರುವಾಗ ಪುರುಷತ್ವದ ನೆನಪು ಇರಲಾರದು !" ಎಂಬ ನಗೆಪಾಟಲಿನ ವರದ ಆಶಯವಿತ್ತು.[71]

ಭರತನಿಗೆ ಯುವರಾಜಪದವನ್ನು ದೊರಕಿಸಿಕೊಡುವ ಮಹತ್ವಾಕಾಂಕ್ಷೆಯು ಕೈಕೇಯಿಯದಾಗಿತ್ತು, ಇದು ದಶರಥನು ಆಕೆಗೆ ವರಗಳನ್ನು ಕೊಡುವ ವಚನ ಕೊಟ್ಟ ಕಾರಣದಿಂದಾಗಿ ವರ್ಧಿಸಿತ್ತು. ರಾಕ್ಷಸರ ಆಳಿಗಾಲವು ಸಮೀಪಿಸಿದ ಮುನ್ಸೂಚನೆಯು ಲಂಕಾದೇವಿಗೆ ಅವಳು ಪಡೆದ ವರದಿಂದ ದೊರಕಿತ್ತು. ಒಂದೇ ವ್ಯಕ್ತಿಯಿಂದ ಶಾಪ ಮತ್ತು ವರವನ್ನು ಪಡೆಯುವ ಭಾಗ್ಯ ಕುಂಭಕರ್ಣನದಾಗಿತ್ತು. ಶಾಪದ ಪರಿಣಾಮ ಮತ್ತು ವರದ ಪರಿಣಾಮ ಒಂದೇ ಆಗಿತ್ತು. ಬ್ರಹ್ಮನು ಕುಂಭಕರ್ಣನಿಗೆ ದೀರ್ಘನಿದ್ರೆಯ ಶಾಪವನ್ನು ಕೊಟ್ಟನು ; ಜೊತೆಗೆ ವರವನ್ನೂ ಕೊಟ್ಟನು. ಇದೊಂದು ಅಪವಾದವೆನಿಸುವ ಉದಾಹರಣೆ ರಾಮಾಯಣ ದಲ್ಲಿದೆ.[72] ನಲನೆಂಬ ವಾನರನಿಗೆ, ಬೇಕೆನಿಸಿದ ವಸ್ತುವನ್ನು ಸೃಷ್ಟಿಸುವ ಸಾಮರ್ಥ್ಯ ಲಭಿಸಿತ್ತು ; ಸ್ವಸಂರಕ್ಷಣೆಯ ಕ್ಷಮತೆ ಸ್ವಯಂಪ್ರಭೆಯಲ್ಲಿತ್ತು : ಸೂರ್ಯನಿಂದ ಹನುಮಂತನಿಗೆ, ಸೂರ್ಯತೇಜದ ನೂರನೆಯ ಒಂದು ಭಾಗವು ಪ್ರಾಪ್ತವಾಗಿತ್ತು ; ಜೊತೆಗೆ ವಾಕ್ಪಟುತ್ವ, ಅಪ್ರತಿಮ ಶಾಸ್ತ್ರಜ್ಞಾನ ಇವೆಲ್ಲ ವರಗಳು ಫಲರೂಪಕವಾಗಿ ದೊರೆತಿದ್ದವು.

ವಾಲ್ಮೀಕಿಯ ರಾಮಾಯಣದಲ್ಲಿ ಹಲವು ವರಗಳ ಪರಿಣಾಮಗಳು ಸ್ಪಷ್ಟವಾಗಿಲ್ಲ.

## ಕಟ್ಟಳೆಯ ವರಗಳು

ಕಟ್ಟಳೆಯ ಶಾಪಗಳಿರುವಂತೆ ಕಟ್ಟಳೆಯ ವರಗಳಿದ್ದರೂ ಅವುಗಳ ಪ್ರಮಾಣವು ಅಲ್ಪವಾಗಿದೆ. ಈ ಬಗೆಯ ಉದಾಹರಣೆಗಳು ವಾಲ್ಮೀಕಿರಾಮಾಯಣದಲ್ಲಿ ಮೂರೇ ಮೂರು ಇವೆ. ಅಮೃತವನ್ನು ಪಡೆಯಲು ದೇವಾಸುರರ ಯುದ್ಧದಲ್ಲಿ ಅದಿತಿಯ ಮಕ್ಕಳಾದ ದೇವತೆಗಳು ದಿತಿಯ ಮಕ್ಕಳಾದ ಅಸುರರನ್ನು ಕೊಂದಾಗ ದಿತಿಯು ಶೋಕತಪ್ತಳಾದಳು. ಅವಳು ಗಂಡನಾದ ಕಶ್ಯಪನಲ್ಲಿ, ಅವನ ತಪದ ಬಲದಿಂದ ಇಂದ್ರನನ್ನು ಕೊಲ್ಲಬಲ್ಲ ಮಗನು ತನಗೆ ಹುಟ್ಟಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದಳು. ಅವಳ ಕೋರಿಕೆಯಂತೆ ಮಗನು ಹುಟ್ಟುವನೆಂಬ ವರವನ್ನು ಕಶ್ಯಪನು ಕೊಟ್ಟನು. ಒಂದು ಸಾವಿರ ವರ್ಷಗಳವರೆಗೆ ಅವಳು ಪರಿಶುದ್ಧಳಾಗಿರಬೇಕು ! ಎಂಬ ಕಟ್ಟಳೆಯನ್ನು ಅವಳು ಒಪ್ಪಿಕೊಂಡಳು. ತಪೋವನಕ್ಕೆ ತೆರಳಿ ದಿತಿಯು ತಪವನ್ನು ಕೈಕೊಂಡಳು. ಒಂಬೈನೂರಾ ತೊಂಬತ್ತು ವರ್ಷಕಾಲ ಅವಳು ಶುಚಿರ್ಭೂತಳಾಗಿದ್ದು ವ್ರತವು ಪೂರ್ಣವಾಗುವ ಹಂತದಲ್ಲಿತ್ತು. ಈ ಸಮಯದಲ್ಲಿ ಇಂದ್ರನು ಆಕೆಗೆ ತಕ್ಕ ಸೇವೆಯನ್ನು ಸಲ್ಲಿಸುತ್ತಿದ್ದನು. ಹೀಗಿರುವಾಗ ಒಂದು ಮಧ್ಯಾಹ್ನದಲ್ಲಿ ತಲೆದಿಂಬಿನತ್ತ ಕಾಲುಚಾಚಿ ಮಲಗಿದಳು ; ಆಗ ಅಪವಿತ್ರತೆಯುಂಟಾ ಯಿತು. ಇಂದ್ರನಿಗೆ ಎಲ್ಲಿಲ್ಲದ ಸಂತೋಷವಾಯಿತು ; ಆತನು ದಿತಿಯ ಶರೀರವನ್ನು ಪ್ರವೇಶಿಸಿ ಗರ್ಭವನ್ನು ಏಳು ಭಾಗಗಳಲ್ಲಿ ತುಂಡರಿಸಿದನು. ನಿಯಮಗಳ ಪಾಲನೆ ಸೂಕ್ತವಾಗಿ ಆಗಲಿಲ್ಲ ;[73] ಆದ್ದರಿಂದ ದಿತಿಗೆ ವರವು ಪ್ರಾಪ್ತವಾಗಲಿಲ್ಲ. ಮೇಘನಾದನು ತಪಸ್ಸಿನಿಂದ ಬ್ರಹ್ಮನನ್ನು ಸಂತೋಷಗೊಳಿಸಿದನು ; ಬ್ರಹ್ಮನು ಆತನಿಗೆ "ನಿಕುಂಭಿಲೆಯನ್ನು ತಲುಪಿ ನೀನು ಯಾಗವನ್ನು ಪೂರ್ಣೈಸುವ ಮೊದಲು ಶಸ್ತ್ರಧಾರಿಯಾದ ನಿನ್ನೊಡನೆ ಯಾರು ಯುದ್ಧವನ್ನು ಮಾಡುವರೋ ಅವರಿಂದ ನೀನು ಹತನಾಗುವೆ"[74] ಎಂಬ ಕಟ್ಟಳೆಯ ವರವನ್ನಿತ್ತನು. ಈ ವರದ ಬಗ್ಗೆ ಇನ್ನೊಂದು ಉಲ್ಲೇಖವಿದೆ. ಇಂದ್ರನನ್ನು ಮುಕ್ತಗೊಳಿಸಲು ವರವನ್ನು ಬೇಡಲು ಬ್ರಹ್ಮನು ಮೇಘನಾದ ನಿಗೆ ಸೂಚಿಸಿದಾಗ ಆತನು 'ಅಮರ'ನಾಗಬೇಕೆಂದು ಬೇಡಿದನು. "ಮೃತ್ಯುಲೋಕದಲ್ಲಿ ಸಂಪೂರ್ಣವಾಗಿ 'ಅಮರ' ವಾಗುವುದು ಸಾಧ್ಯವಿಲ್ಲ" ಎಂದು ಬ್ರಹ್ಮನು ಹೇಳಿದಾಗ ಮೇಘನಾದನು ತನಗೆ ಯಾವ ಸಂದರ್ಭದಲ್ಲಿ ಮರಣ ಬರಬೇಕು, ಮತ್ತು ಆ ಸ್ಥಿತಿ ಇರದಿದ್ದರೆ ವಧೆಯಾಗಕೂಡದು, ಎಂಬ ಕಟ್ಟಳೆಯ ವರವನ್ನು ಬ್ರಹ್ಮನಿಂದ ಪಡೆದುಕೊಂಡನು. ಮೇಘನಾದನ ಬೇಡಿಕೆಯಂತೆ "ಕಾಳಗಕ್ಕೆ ಹೊರಡುವಾಗ ಅಗ್ನಿಯ ಅಶ್ವಗಳನ್ನು ಹೊಂದಿದ ರಥವು ನನಗಾಗಿ ಸಿದ್ಧವಿರಬೇಕು ; ನಾನು ಆ ರಥವನ್ನೇರಿದಾಗ ನನಗೆ ಮರಣ ಬರಕೂಡದು !"[75] ಎಂಬುದೇ ಆ ವರವಾಗಿತ್ತು. ಮಧುದೈತ್ಯನ ತಪದಿಂದ ಸಂತುಷ್ಟನಾದ ರುದ್ರನು ಆತನಿಗೆ ತ್ರಿಶೂಲವನ್ನು ಕೊಟ್ಟನು. ಅದು ಕೈಯಲ್ಲಿದ್ದರೆ ಶತ್ರುವನ್ನು ಸುಟ್ಟು ಬೂದಿಮಾಡಬಲ್ಲ ಬಲವು ಉಂಟಾಗುತ್ತಿತ್ತು. ಈ ವರದ ಹಿಂದೆ ಒಂದು ಕಟ್ಟಳೆಯು ಸಹ ಇತ್ತು. ಅದೇನೆಂದರೆ, ರುದ್ರನು ರಾಕ್ಷಸನಿಗೆ, "ಎಲೈ ಮಹಾ ಅಸುರನೇ ! ನೀನು ಎಲ್ಲಿಯವರೆಗೆ ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ವಿರೋಧಿಸುವುದಿಲ್ಲವೋ ಅಲ್ಲಿಯವರೆಗೆ ಈ ತ್ರಿಶೂಲವು ನಿನ್ನ ಸಾನ್ನಿಧ್ಯದಲ್ಲಿ ಉಳಿಯುವುದು ; ಅವರನ್ನು ವಿರೋಧಿಸಿದೊಡನೆ ಅದು ಇಲ್ಲವಾಗುವುದು"

ಎಂದು ಹೇಳಿದನು. ಆಗ ಮಧುದೈತ್ಯನು ಬಿನ್ನವಿಸಿದ ಕಾರಣ ರುದ್ರನು "ಈ ತ್ರಿಶೂಲವು ನಿನ್ನ ತರುವಾಯ ನಿನ್ನ ಒಬ್ಬ ಮಗನ ಬಳಿ ಉಳಿಯುವುದು" ಎಂದು ಆಶ್ವಾಸನೆಯನ್ನಿತ್ತನು. ಈ ರೀತಿ ಲವಣನಿಗೆ ತ್ರಿಶೂಲವು ದೊರಕಿತು. ಅದನ್ನು ಆತನು ಋಷಿಗಳ ವಿರುದ್ಧ ಬಳಸಲಾರಂಭಿಸಿದನು. ನಂತರ ಋಷಿಗಳು ಪ್ರಾರ್ಥಿಸಿದ್ದರಿಂದ ಶ್ರೀರಾಮನು ಶತ್ರುಘ್ನನಿಂದ ಲವಣನನ್ನು ಕೊಲ್ಲಿಸಿದನು.[76]

## ಸಾನುಗ್ರಹ ವರಗಳು

ಅನುಗ್ರಹವು ವರಗಳಲ್ಲಿಯ ಒಂದು ಪ್ರಕಾರವಾಗಿದೆ. ಅನುಗ್ರಹಿಸಿಕೊಟ್ಟ ವರಕ್ಕೆ ಸಾನುಗ್ರಹ ವರವೆನ್ನುತ್ತಾರೆ. ಅನುಗ್ರಹ ಹೊಂದಲು ಇಲ್ಲವೇ ವರ ಪಡೆಯಲು ಯಾವುದಾದರೊಂದು ಸಾಧನೆಯನ್ನು ಮಾಡಬೇಕಾಗುತ್ತದೆ. ಇನ್ನೊಬ್ಬರ ಒಳಿತನ್ನು ಮಾಡುವ ಇಚ್ಛೆಯು ಇದರಲ್ಲಿ ಅಡಕವಾಗಿರಬೇಕು. ಇವೆರಡರಲ್ಲಿ ಒಂದು ಸೂಕ್ಷ್ಮ ಭೇದವಿದೆ. ವರವೆಂಬುದು ಕೇವಲ ವಾಕ್-ಶಕ್ತಿ, ಸದಿಚ್ಛೆಯನ್ನು ವ್ಯಕ್ತಮಾಡಲು ಇದ್ದ ಒಂದೇ ಮಾರ್ಗವೆಂದರೆ ಶಬ್ದೋಚ್ಚಾರ. ಆದಕಾರಣ ಅದು ಅಮೂರ್ತವಾಗಿದೆ. ಅನುಗ್ರಹದಲ್ಲಿ ಕೊಡಲ್ಪಡುವ ವಸ್ತುಗಳಿರುವುದರಿಂದ ಅದಕ್ಕೆ ಮೂರ್ತಸ್ವರೂಪವು ಬರುತ್ತದೆ ; ಶಬ್ದೋಚ್ಚಾರವಷ್ಟೇ ಅನುಗ್ರಹದಲ್ಲಿ ಇರುವುದಿಲ್ಲ. ಸದಿಚ್ಛೆಯನ್ನು ಕೊಡು-ತಗೊಳ್ಳುವ ವಸ್ತುಗಳಿಂದ ವ್ಯಕ್ತಮಾಡಬಹುದು. ವರಗಳ ಪರಿಣಾಮವು ತದನಂತರ ಕಂಡುಬರುವುದು ; ಆದರೆ ಅನುಗ್ರಹದಲ್ಲಿ ಶಬ್ದೋಚ್ಚಾರದೊಡನೆಯೇ ವಸ್ತುವನ್ನೂ ಕೊಡಲಾಗುತ್ತದೆ. ಅನುಗ್ರಹ ಮತ್ತು ವರ ಇವೆರಡರಲ್ಲಿಯ ಭೇದವನ್ನು ಸ್ವಲ್ಪದರಲ್ಲಿ ಹೇಳುವದೆಂದರೆ **ದೃಷ್ಟದಾನಂ ಅನುಗ್ರಹಃ । ಅದೃಷ್ಟದಾನಂ ವರಃ ।** ಅನುಗ್ರಹವೆಂದರೆ ಕೃಪಾಪ್ರಸಾದ. **ಅಭೀಷ್ಟಸಂಪಾದನೇಚ್ಛಾರೂಪಃ ಪ್ರಸಾದಃ ।**[77] ಭಗವಂತನ ಕೃಪೆಯಿಂದ ಅಥವಾ ಪ್ರಸಾದದಿಂದ ತಮಗೆ ಬೇಕಿದ್ದ ವಸ್ತುವು ಲಭಿಸುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಅನುಗ್ರಹದ ಮಹಿಮೆಯನ್ನು ವಿವರಿಸಿದ್ದಾನೆ : **ಮತ್ ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ॥**[78] ಭಗವತ್ಪರಾಯಣನಾದ ಕರ್ಮಯೋಗಿಯು ನನ್ನ ಕೃಪಾಪ್ರಸಾದದಿಂದ ಶಾಶ್ವತಪದವನ್ನು ಪಡೆದುಕೊಳ್ಳುತ್ತಾನೆ."

ವಾಲ್ಮೀಕಿರಾಮಾಯಣದಲ್ಲಿ ಸಾನುಗ್ರಹ ವರದ ಉದಾಹರಣೆಗಳು ಸಾಕಷ್ಟಿವೆ. ಅನಸೂಯೆಯು ಸೀತೆಗೆ ವರವನ್ನು ಬೇಡಿಕೊಳ್ಳಲು ಹೇಳಿದಾಗ ಅವಳು ವಿನಯದಿಂದ ಅದನ್ನು ನಿರಾಕರಿಸಿದಳು. ಆಗ ಅನಸೂಯೆಯು ಸೀತೆಗೆ ದಿವ್ಯಮಾಲೆ, ವಸ್ತ್ರ, ಆಭೂಷಣ, ಉರುಟಣೆ ಮತ್ತು ಅಮೂಲ್ಯವಾದ ಲೇಪನದ್ರವ್ಯಗಳನ್ನು ಕೊಟ್ಟಳು. ಈ ರೀತಿ ವರ ಮತ್ತು ಅನುಗ್ರಹಗಳಲ್ಲಿಯ ಭೇದವು ಸ್ಪಷ್ಟವಾಗಿದೆ. ಬ್ರಹ್ಮದೇವನ ಹೇಳಿಕೆಯಂತೆ ಅಶೋಕವನದಲ್ಲಿದ್ದ ಸೀತೆಗೆ ಇಂದ್ರನು ಕೊಟ್ಟ ಹವಿಷ್ಯಾನ್ನವು, ಸಂಪಾತಿಗೆ ನಿಶಾಕರಮುನಿಯಿಂದ ಪುನಃ ಪ್ರಾಪ್ತಿಯಾದ ರೆಕ್ಕೆಗಳು, ಮೇಘನಾದನಿಗೆ ಲಭಿಸಿದ ದಿವ್ಯರಥವು, ಧನುರ್ಬಾಣಗಳು, ಶಸ್ತ್ರಗಳು, ಇದಲ್ಲದೆ ತಾಮಸ ಮಾಯಾಬಲವು, ರಾವಣನ ಜೊತೆಯ ಕಾಳಗದಲ್ಲಿ ಶ್ರೀರಾಮನಿಗೆ ಇಂದ್ರನಿಂದ ದೊರಕಿದ ಸಾರಥಿಯಿದ್ದ ರಥವು, ಪ್ರಚಂಡಧನುಸ್ಸು, ಕಣ್ಣುಕುಕ್ಕುವ ಕವಚ, ಹೊಳಪುಳ್ಳ ಬಾಣಗಳು, ನಿರ್ಮಲಶಕ್ತಿ, ಬ್ರಹ್ಮದೇವನು ಕುಬೇರನಿಗೆ ದಯಪಾಲಿಸಿದ ಲೋಕಪಾಲಪದವು, ಕೋಶಾಧ್ಯಕ್ಷತೆಯು, ಶಂಕರನು ರಾವಣನಿಗೆ ಕೊಟ್ಟ ಚಂದ್ರಹಾಸ ಖಡ್ಗ, ಮೇಘನಾದನಿಗೆ ದೊರೆತ ಅಂತರಿಕ್ಷದಲ್ಲಿ ಸಂಚರಿಸುವ ಇಚ್ಛಾಗಮನಿ ರಥ, ಎಂದಿಗೂ ಬರಿದಾಗದ ಬಾಣ ತುಂಬಿದ ಬತ್ತಳಿಕೆ, ಒಂದು ಪ್ರಚಂಡ ಅಸ್ತ್ರ, ಹಾಗೂ ರುದ್ರನಿಂದ ಮಧುದೈತ್ಯನಿಗೆ ಕ್ರಮೇಣ ಲವಣನಿಗೆ ಪ್ರಾಪ್ತವಾದ ಶೂಲ, ಇವೆಲ್ಲವೂ ಸಾನುಗ್ರಹ ವರಗಳ ಉದಾಹರಣೆಗಳಾಗಿವೆ. ಅನುಗ್ರಹದಲ್ಲಿ ವರವಿದ್ದೇ ಇರುತ್ತದೆ. ಅದು ಮೂರ್ತಸ್ವರೂಪವಾಗಿರುತ್ತದೆ. ವರದಲ್ಲಿ ಅನುಗ್ರಹವಿದ್ದೇ ಇರುತ್ತದೆಂದು ಹೇಳಲಾಗುವದಿಲ್ಲ. ಹಾಗೆ ಇದ್ದರೆ ಅದು ಸಾನುಗ್ರಹ ವರವೆನ್ನಿಸುತ್ತದೆ.

## ಆಶೀರ್ವಾದ – ಸದಿಚ್ಛೆ

ವರ, ಆಶೀರ್ವಾದ, ಸದಿಚ್ಛೆ ಇವುಗಳು ಸದ್ಭಾವನೆ, ಸಂತುಷ್ಟತೆಗಳಿಂದ ಮೂಡಿಬರುತ್ತವೆ. ಯಾರೊಬ್ಬರಿಗೆ ವರ ಕೊಡುವುದಿರಲಿ, ಆಶೀರ್ವದಿಸುವುದಿರಲಿ ಇಲ್ಲವೇ ಸದಿಚ್ಛೆ ಪ್ರಕಟಿಸುವುದಿರಲಿ, ಅವರ ಬಗ್ಗೆ ಪ್ರೀತಿ,

ಅನುಕಂಪ, ಆದರ, ಸಹಾನುಭೂತಿ ಇರುವುದು ಆವಶ್ಯಕವಿರುತ್ತದೆ. ಈ ಮೂಲಕ ಸದಿಚ್ಛೆಯ ಅಭಿವ್ಯಕ್ತಿಯು ಉಚ್ಚಾರದಿಂದ ಆಗುತ್ತದೆ. ಸದ್ಭಾವನೆಯು ಸಮಾನಧರ್ಮವಾಗಿದ್ದರೂ, ವರ, ಆಶೀರ್ವಾದ ಮತ್ತು ಸದಿಚ್ಛೆಗಳ ವ್ಯಾಪಕತೆ, ಸ್ವರೂಪ ಹಾಗೂ ಪರಿಣಾಮಗಳು ಭಿನ್ನವಾಗಿವೆ.

ಆಶೀರ್ವಾದ ಈ ಶಬ್ದವು ಆಶೀಃ + ವಾದ ಈ ಎರಡು ಸಂಸ್ಕೃತ ಶಬ್ದಗಳಿಂದ ಬಂದಿದೆ. ಇಷ್ಟವಾದ ಅರ್ಥದ ಆವಿಷ್ಕರಣ ಎಂಬ ವ್ಯಾಖ್ಯೆಯನ್ನು ಮಾಡಲಾಗಿದೆ.[79] ಆಶೀರ್ವಾದವನ್ನು ಕುರಿತು, ಹಿರಿಯರು ಕಿರಿಯರ ಬಗ್ಗೆ ವಾತ್ಸಲ್ಯವನ್ನು ತಾಳಿ, ಅವರಿಗೆ ಇಷ್ಟವಿದ್ದ ಸಂಗತಿಗಳು ಸಫಲಗೊಳ್ಳಬೇಕೆಂದು ನುಡಿಯುವ ಶಬ್ದಗಳು ಆಶೀರ್ವಾದವೆಂದಾಗುತ್ತವೆ ಎಂಬ ವ್ಯಾಖ್ಯೆಯನ್ನು 'ಶಬ್ದಕಲ್ಪದ್ರುಮ'ದಲ್ಲಿ ಹೇಳಿದ್ದಾರೆ.'[80] ಆಶೀರ್ವಾದದ ವೈದಿಕೇತರ ಮಂತ್ರವು ಈ ರೀತಿ ಇದೆ :

ಆಶೀರ್ವಾದಾಃ ಸಫಲಾಃ ಸಂತು ಪೂರ್ಣಾಃ ಸಂತು ಮನೋರಥಾಃ ।
ಶತ್ರೂಣಾಂ ನಾಶನಂ ಚಾಸ್ತು ಮೈತ್ರಾಣಾಮುದಯಸ್ತವ ॥

ಋಗ್ವೇದದಲ್ಲಿಯ ಈ ಕೆಳಗಿನ ಮಂತ್ರವು ಎಲ್ಲರಿಗೂ ಪರಿಚಿತವಿದೆ.

"ನೀನು ನೂರು ಶರದ್ ಋತುಗಳ ಕಾಲ, ನೂರು ಹೇಮಂತ ಋತುಗಳವರೆಗೆ ಮತ್ತು ನೂರು ವಸಂತ ಋತುಗಳ ಕಾಲ ಜೀವಿಸಿರು ! ಉತ್ತರೋತ್ತರ ಅಭಿವೃದ್ಧಿಯನ್ನು ಪಡೆ. ಇಂದ್ರ, ಅಗ್ನಿ ಮತ್ತು ಬೃಹಸ್ಪತಿ ಇವರುಗಳಿಗೆ ಶತಾಯುಸ್ಸನ್ನುಂಟುಮಾಡುವ ಹವಿರ್ಭಾಗವು ತಲುಪುವುದರಿಂದ ಅವರು ಪ್ರಸನ್ನರಾಗಿ ನಿನಗೆ ನೂರು ವರ್ಷದ ಪೂರ್ಣ ಆಯುಸ್ಸನ್ನು ಕೊಟ್ಟಿದ್ದಾರೆ. ನಾನು ನಿನ್ನ ಆರೋಗ್ಯವನ್ನು ಕಾಯ್ದು ಇಟ್ಟಿದ್ದೇನೆ. ನಿನ್ನ ಎಲ್ಲ ಪರಿಸ್ಥಿತಿಯ ಅರಿವು ನನಗಿದೆ. ಹೊಸ ದೇಹವನ್ನು ಪುನಃ ಪಡೆಯುವ ಪುರುಷನೇ, ನೀನು ಕೂಡ ಈಗ (ಉತ್ತಮ ಸ್ಥಿತಿಯಲ್ಲಿ) ಬಂದಿರುವೆ. ಹೇ ಪೂರ್ಣಾರೋಗ್ಯಯುಕ್ತನೇ, ನಿನ್ನ ನೇತ್ರಾದಿ ಎಲ್ಲ ಇಂದ್ರಿಯಗಳು ಅಲ್ಲದೇ ನಿನ್ನ ಭವಿಷ್ಯದ ಬದುಕು ಎಲ್ಲವೂ ಪೂರ್ಣವಾಗಿ ನನಗೆ ಗೊತ್ತಿದೆ."[81]

ವರ ಅಥವಾ ಆಶೀರ್ವಾದವನ್ನು ಕೊಡಲು, ಸ್ಥಾನ, ಅಧಿಕಾರ, ಜ್ಞಾನಗಳಿಂದ ಉಂಟಾದ ಜ್ಯೇಷ್ಠತೆ, ಶ್ರೇಷ್ಠತೆ ಆವಶ್ಯಕ. ಸದಿಚ್ಛೆಯನ್ನು ಪ್ರಕಟಿಸಲು ಇಂಥ ಯಾವುದರ ಆವಶ್ಯಕತೆಯಿಲ್ಲ. ಕಿರಿಯನು ಹಿರಿಯನಿಗೆ ವರ ಅಥವಾ ಆಶೀರ್ವಾದವನ್ನು ಕೊಡುವಂತಿಲ್ಲ. ವರವೆಂದು ಆಡಿದ ನುಡಿಗಳ ಪರಿಣಾಮಗಳು ನಿಶ್ಚಿತವಿದ್ದು ಅವುಗಳಲ್ಲಿ ತಪ್ಪಾಗುವದಿಲ್ಲ. ಆಶೀರ್ವಾದವು ನಿಜವಾಗಬಹುದು ಇಲ್ಲವೇ ಸುಳ್ಳಾಗಬಹುದು ; ಒಂದು ಸಮಯ ಪರಿಣಾಮಕಾರಕವಾದರೆ ಅದು ಕೇವಲ ಯೋಗಾಯೋಗ ಅಥವಾ ಕಾಕತಾಲೀಯ ನ್ಯಾಯವೆನ್ನಬಹುದು. ಆಶೀರ್ವಾದವು ಫಲಪ್ರದವಾಗುವ ಬಗ್ಗೆ ಖಾತರಿ ಅದನ್ನು ಕೊಡುವವನಿಗೂ ಇರುವದಿಲ್ಲ, ಆಶೀರ್ವಾದವನ್ನು ಪಡೆದವನಿಗೂ ಇರುವದಿಲ್ಲ. ವರ ಮತ್ತು ಆಶೀರ್ವಾದಗಳಲ್ಲಿಯ ಭೇದ ಕಾಲಿದಾಸನಿಗೆ ಅಭಿಪ್ರೇತವಿತ್ತು. ಕಾಶ್ಯಪನನ್ನು ನಮಸ್ಕರಿಸಲು ಬಂದ ಶಕುಂತಲೆಗೆ ಅವನು ಹೀಗೆನ್ನುತ್ತಾನೆ—

"ಯಯಾತಿಗೆ ಶರ್ಮಿಷ್ಠೆ ಹೇಗೋ ಅದರಂತೆ ನೀನು ನಿನ್ನ ಪತಿಗೆ ಪ್ರಿಯಳಾಗು ! ಪುರುವಿನಂತಹ ಸಮ್ರಾಟಪುತ್ರನು ನಿನಗೆ ಜನಿಸಲಿ !"[82] ಎಂದಿದ್ದಾನೆ. ಈ ಶಬ್ದಗಳು ಆಶೀರ್ವಾದದ ನುಡಿಗಳಾಗಿದ್ದರೂ ಕಾಶ್ಯಪ ಋಷಿಗಳ ಆಶೀರ್ವಾದವಾದ್ದರಿಂದ ವರದಷ್ಟೇ ಗುಣಮಟ್ಟದವೆಂದು ಗೌತಮಿಗೆ ಭರವಸೆ ಇತ್ತು. "ಪೂಜ್ಯರೇ, ಇದು ವರವೇ ಸರಿ ; ಆಶೀರ್ವಾದವಲ್ಲ"[83] ಎಂದು ಗೌತಮಿಯು ನುಡಿದಳು. 'ಆಶೀರ್ವಾದ ಮತ್ತು ವರದಲ್ಲಿ ಸೂಕ್ಷ್ಮ ಭೇದವಿದೆ. ಬ್ರಾಹ್ಮಣರು ಅಥವಾ ಪುರೋಹಿತರು ತಮ್ಮ ಯಜಮಾನರಿಗೆ, ಹಿರಿಯರು ತಮ್ಮ ಪುತ್ರಪೌತ್ರಾದಿ ಕಿರಿಯರಿಗೆ, ಗುರುಗಳು ಅಥವಾ ಸತ್ಪುರುಷರು ಅವರವರ ಶಿಷ್ಯಂದಿರಿಗೆ, ಅವರ ಮನೋರಥಗಳು ಸಫಲಗೊಳ್ಳಬೇಕೆಂದು ನುಡಿದ ಮಾತೇ ಆಶೀರ್ವಾದ. ದೇವತೆಗಳು ಇಲ್ಲವೇ ದೇವರ ಅವತಾರಿಗಳು ತಮ್ಮ ಭಕ್ತರಿಗಾಗಿ ನುಡಿದ ವಚನಗಳು ವರದಾನವೆನಿಸುತ್ತವೆ.'[84] ಈ ಹೇಳಿಕೆಯಲ್ಲಿಯ ಉತ್ತರಾರ್ಧವು ಅಂಶತಃ ನಿಜವಿದೆ. ವರದಾನದ ಅರ್ಹತೆಯನ್ನು ಹೊಂದಿದ ಯಾವ ಋಷಿಮುನಿಗಳ ಉಲ್ಲೇಖವು ಇದರಲ್ಲಿರದ ಕಾರಣ ಇದು ಅವ್ಯಾಪ್ತವಾಗಿದೆ. ರಾಮಾಯಣದಲ್ಲಿ ತುಂಬ ಮಹತ್ತ್ವದ್ದೆನ್ನಿಸುವ, ಯಾವುದರಿಂದ ಸಮಗ್ರ ರಾಮಾಯಣವು ನಡೆಯಿತೋ ಅಂಥ, ದಶರಥನಿಂದ ಕೈಕೇಯಿಗೆ ದೊರೆತ ವರವು, ಈ ವಿವೇಚನೆಗೆ ಒಳಪಡುವುದಿಲ್ಲ. ಈ ವರದ ಚರ್ಚೆಯನ್ನು ಸವಿಸ್ತಾರವಾಗಿ ಬೇರೆಡೆಯಲ್ಲಿ ಮಾಡಲಾಗಿದೆ.

ವರವನ್ನೀಯಲು ದೈವಿಕ ಗುಣ, ಪುಣ್ಯಸಂಗ್ರಹ, ತಪಸ್ಸು ಬೇಕಿರುತ್ತವೆ ; ಆದರೆ ಆಶೀರ್ವದಿಸಲು ವಯಸ್ಸಿನಿಂದ ಹಿರಿಯರಾಗಿದ್ದರೆ ಸಾಕು ; ಇತರ ಸಾಧನೆಗಳ ಆವಶ್ಯಕತೆ ಇರುವುದಿಲ್ಲ. ನಿತ್ಯವೂ ವ್ಯವಹಾರದಲ್ಲಿ ನುಡಿಯಲಾಗುವ ಆಶೀರ್ವಾದಗಳಲ್ಲಿ ಸದಿಚ್ಛೆಯು ಇದ್ದರೂ ಇವು ಕೇವಲ ಔಪಚಾರಿಕವಾಗಿರುತ್ತವೆ. ಉಚ್ಚರಿಸಿದ ಆಶೀರ್ವಾದಗಳೆಲ್ಲ ಕಾಲಾಂತರದಲ್ಲಿ ಅರ್ಥಶೂನ್ಯವೆಂದಾಗುತ್ತವೆ. ಚಿಕ್ಕವರು ಸಹ ಹಿರಿಯರ ಬಗ್ಗೆ ಸದಿಚ್ಛೆಗಳನ್ನು ವ್ಯಕ್ತಪಡಿಸಬಹುದು. ಶಿಷ್ಯನು ಗುರುವಿಗೆ ಶುಭವನ್ನು ಹಾರೈಸಬಹುದು. ಮಂಗಲಪ್ರಸಂಗದಲ್ಲಿ, ಷಷ್ಟ್ಯಬ್ದಿಪೂರ್ತಿಯಂತಹ ಸಮಾರಂಭಕಾಲದಲ್ಲಿ ಚಿಕ್ಕವರು ಹಿರಿಯರಿಗೆ ಸದಿಚ್ಛೆಯನ್ನು ವ್ಯಕ್ತಗೊಳಿಸುತ್ತಾರೆ.

ವಾಲ್ಮೀಕಿರಾಮಾಯಣದಲ್ಲಿ ಬಂದ ಆಯ್ದ ಕೆಲವು ಆಶೀರ್ವಾದಗಳನ್ನು ಬೇರೊಂದು ವಿಭಾಗದಲ್ಲಿ ಕೊಡಲಾಗಿದೆ.

## ಹರಕೆಗಳು

ಹರಕೆಯು ಬೇಡಿಕೊಂಡ ಅಥವಾ ಯಾಚಿತ ವರಕ್ಕೆ ನಿಕಟವಾಗಿದೆ. ತಮ್ಮ ಮನೋರಥಗಳನ್ನು ಸಾಧಿಸಲು ದೇವತೆಗಳನ್ನು ಆಹ್ವಾನಿಸುವುದು, ಯೋಚಿಸುವುದು ಇವೆರಡರಲ್ಲಿಯೂ ಇರುತ್ತದೆ. ಕೃಪಾಪ್ರಸಾದವು ಲಭಿಸಬೇಕೆಂದು ಇಷ್ಟದೇವತೆಗೆ ಯಾವುದೊಂದು ವಸ್ತುವನ್ನು, ಕಾಣಿಕೆ-ಹರಕೆ ಎಂದು ಅರ್ಪಿಸುವುದು, ಈ ರೀತಿ ನಡೆದುಕೊಳ್ಳುವೆ ಎಂದು ವ್ರತವನ್ನು ಮಾಡುವದು, ವಿಶಿಷ್ಟಪ್ರಕಾರದ ಪೂಜೆಯನ್ನು ಸಲ್ಲಿಸುವದು ; ಇವೇ ಬಗೆಯ ಪ್ರತಿಜ್ಞೆ ಹರಕೆಯಲ್ಲಿರುತ್ತವೆ. ಇದು ಕಟ್ಟಳೆಯದಾಗಿರುತ್ತದೆ. ಇಷ್ಟಾರ್ಥವು ಮನಸ್ಸಿನಂತೆ ಸಾಧ್ಯವಾದಾಗ ಮಾತ್ರ ಈ ಹರಕೆಯಂತೆ ನಡೆದುಕೊಳ್ಳಲೇಬೇಕೆಂಬ ಬಂಧನವಿರುತ್ತದೆ. ಒಂದು ವೇಳೆ ಮನೋರಥವು ಈಡೇರದಿದ್ದರೆ ಹರಕೆ ಹೊತ್ತ ವ್ಯಕ್ತಿಯು ಹರಕೆಯನ್ನು ಪೂರೈಸಬೇಕೆಂದಿಲ್ಲ. ಇಚ್ಛೆಯಂತೆ ಹರಕೆಯ ಫಲವು ದೊರೆತು ಹರಕೆಯನ್ನು ದೇವತೆಗೆ ಒಪ್ಪಿಸದಿದ್ದರೆ ಆ ದೇವತೆಯು ಕೋಪಗೊಂಡು ತಮಗೆ ಕೇಡನ್ನುಂಟುಮಾಡಬಹುದೆಂಬ ತಿಳುವಳಿಕೆ ಇದೆ. ವರ ದೊರೆಯಲು ತಪಸ್ಸು, ಯಜ್ಞ ಇತ್ಯಾದಿಗಳ ಸಾಧನೆ ಬೇಕು ; ಆ ದೃಷ್ಟಿಯಲ್ಲಿ ಹರಕೆಯ ರೂಪವು ಸೌಮ್ಯವಾಗಿದೆ. ಹರಕೆ ಶುದ್ಧ ಲೇವಾ-ದೇವಿ ಕೊಡು-ಕೊಳ್ಳುವ ವ್ಯವಹಾರ. ಇಚ್ಛಾಪೂರ್ತಿಯಾದಾಗ ಹರಕೆ ಈಡೇರಿತು ಎಂದು ಹೇಳುತ್ತಾರೆ. ಹರಕೆ ಎಂದರೆ ಕಟ್ಟಳೆಗಳಿಂದ ಕೂಡಿದ ಒಂದು ಬಗೆ. ಯಾಚಿತ ಕಟ್ಟಳೆಯ ವರ ಮತ್ತು ಹರಕೆಯಲ್ಲಿ ಒಂದು ಭೇದವಿದೆ. ವರ ದೊರೆಯಲು ಯಾಚಕನು ಮೊದಲು ಪ್ರಯತ್ನಮಾಡಬೇಕು ; ಹರಕೆಯಲ್ಲಿ ಫಲ ಮೊದಲು ; ನಂತರ ಹರಕೆ-ಕಾಣಿಕೆಯನ್ನು ಒಪ್ಪಿಸಬೇಕು. ಇಷ್ಟಾರ್ಥ ಫಲಿಸದಿದ್ದರೆ ಹರಕೆಯನ್ನು ಪೂರೈಸುವ ಪ್ರಶ್ನೆಯೇ ಏಳುವದಿಲ್ಲ. ಸತ್ಯನಾರಾಯಣನ ಪೂಜೆಯನ್ನು ಮಾಡುವುದು ; ಅಮ್ಮನವರಿಗೆ ಉಡಿ ತುಂಬಿಸುವುದು ; ಪೂಜೆಯನ್ನು ಸಲ್ಲಿಸುವುದು ; ತುಲಾಭಾರ ಮಾಡುವುದು ; ಉಪವಾಸವಿರುವುದು ; ವ್ರತಗಳನ್ನು ಆಚರಿಸುವುದು ; ಕಾಣಿಕೆಗಳನ್ನು ಅರ್ಪಿಸುವುದು ; ಇವು ವಿವಿಧ ರೀತಿಯ ಹರಕೆಗಳಾಗಿವೆ. ಹರಕೆಗಳನ್ನು ಗಂಡಸರಿಗಿಂತ ಹೆಂಗಸರೇ ಹೆಚ್ಚಾಗಿ ಹೊರುತ್ತಾರೆ.

ವಾಲ್ಮೀಕಿರಾಮಾಯಣದಲ್ಲಿ ಹರಕೆಯ ಎರಡು ಉದಾಹರಣೆಗಳಿವೆ. ಈ ಎರಡು ಹರಕೆಗಳು ಸೀತೆ ಹೊತ್ತವುಗಳೇ. ದಂಡಕಾರಣ್ಯದತ್ತ ಹೋಗುವಾಗ ಗಂಗಾ ಮತ್ತು ಯಮುನಾ ನದಿಗಳನ್ನು ದಾಟಿಹೋಗ ಬೇಕಿತ್ತು. ಆಗ ಸೀತೆಯು ಈ ನದಿಗಳಿಗೆ ಹರಕೆ ಹೊತ್ತಳು. ಈ ಎರಡು ಹರಕೆಗಳ ಆಶಯವು ಒಂದೇ ಆಗಿತ್ತು. "ಪ್ರಯಾಣ ಸುಖಕರವಾಗಬೇಕು ; ಅರಣ್ಯವಾಸವು ನೆಮ್ಮದಿಯಾಗಿರಬೇಕು ; ಮತ್ತು ಶ್ರೀರಾಮನು ಅಯೋಧ್ಯೆಗೆ ಸುಖವಾಗಿ ಮರಳಬೇಕು" ಎಂದಿತ್ತು. ಗಂಗೆಯು ಯಮುನೆಗಿಂತ ದೊಡ್ಡವಳು, ಹೆಚ್ಚು ಪವಿತ್ರಳೆಂದು ಹರಕೆಯ ಕಾಣಿಕೆಗಳಲ್ಲಿ ಸಮಾನತೆ ಇಲ್ಲ ; ತಾರತಮ್ಯವಿದೆ. ಗಂಗೆಯನ್ನು ಸಂತೋಷಪಡಿಸಲು ಒಂದು ಲಕ್ಷ ಹಸುಗಳು, ವಸ್ತ್ರಗಳು, ಬ್ರಾಹ್ಮಣರಿಗೆ ಅನ್ನಸಂತರ್ಪಣೆ, ಅಯೋಧ್ಯೆಗೆ ಮರಳಿದನಂತರ ಒಂದು ಸಾವಿರ ಕುಂಭ ಮದ್ಯ ಮತ್ತು ಮಾಂಸಯುಕ್ತ ಅನ್ನ ಇವುಗಳನ್ನು ಬಲಿಯಾಗಿಡುವ ಪ್ರತಿಜ್ಞೆಯನ್ನು ಮಾಡಿದ್ದಳು. ಯಮುನೆಯ ಬಗ್ಗೆ ಕೇವಲ ಒಂದು ಸಾವಿರ ಹಸುಗಳು ಮತ್ತು ಒಂದು ನೂರು ಕುಂಭಗಳ ಮದ್ಯವನ್ನು ಅರ್ಪಿಸುವ ಉಲ್ಲೇಖವಿದೆ. ಹಾಗೆ ಯೋಚಿಸಿದಲ್ಲಿ ಗಂಗೆಯನ್ನು ದಾಟುವಾಗ ಗುಹನ ಸಹಾಯ

ದಿಂದ ಪ್ರಯಾಣಕ್ಕೆ ಅಡಚಣೆ ಇರಲಿಲ್ಲ ; ಆದರೆ ನಾವೆಯಿಲ್ಲದ ಕಾರಣ ಯಮುನಾ ನದಿಯನ್ನು ದಾಟುವುದರಲ್ಲಿ ನಿಜವಾದ ತೊಂದರೆಯಿತ್ತು. ಶ್ರೀರಾಮಲಕ್ಷ್ಮಣರು ಒಣಗಿದ ಮರದ ತುಂಡುಗಳನ್ನು ಕಟ್ಟಿ ಒಂದು ತೆಪ್ಪವನ್ನು ರಚಿಸಿದರು. ಅಂತಹದರ ಸಹಾಯದಿಂದ ನದಿಯನ್ನು ದಾಟುವುದು ದುಸ್ತರವಿತ್ತು. ಹೀಗಾಗಿ ಯಮುನೆಯನ್ನು ಅಧಿಕಸಂತೋಷಗೊಳಿಸುವುದು ಅಗತ್ಯವಿತ್ತು. ಗಂಗೆಗೆ ಹರಸಿಕೊಂಡ ಕಾಣಿಕೆಗಿಂತ ಹೆಚ್ಚಿನದನ್ನು ಯಮುನೆಗೆ ಅರ್ಪಿಸುವ ಸಂಕಲ್ಪ ಮಾಡಬೇಕಿತ್ತಲ್ಲವೇ ? ಎಂದೆನ್ನಿಸುತ್ತದೆ.

### ಆಕಾಶವಾಣಿ, ಪುಷ್ಪವೃಷ್ಟಿ

ಆಕಾಶವಾಣಿ, ಪುಷ್ಪವೃಷ್ಟಿ ಈ ಪ್ರಕಾರಗಳು ಅಯಾಚಿತ ವರಕ್ಕೆ ತೀರ ನಿಕಟವಾದಂಥದವು. ಈ ಎರಡೂ ಸಂಗತಿಗಳಲ್ಲಿ ಸದ್ಭಾವನೆ, ಸದಿಚ್ಛೆ ಇರುತ್ತವೆ. ಆಕಾಶವಾಣಿಯಲ್ಲಿ ವಾಣಿಗೆ ಮಹತ್ವವಿದೆ ; ಶಬ್ದೋಚ್ಚಾರದಿಂದ ಅಭಿವ್ಯಕ್ತಿ ಸಾಧ್ಯ. ಪುಷ್ಪವೃಷ್ಟಿಯಲ್ಲಿ ಇದೇ ಮನೋಭಾವವು ಹೂಗಳಿಂದ ವ್ಯಕ್ತಮಾಡಲ್ಪಡುತ್ತದೆ. ಸ್ವರ್ಗದಲ್ಲಿದ್ದ ದೇವತಾದಿಗಳಿಂದ ಆಕಾಶವಾಣಿ ಮತ್ತು ಪುಷ್ಪವೃಷ್ಟಿಯಾಗುವುದುಂಟು. ವರ ಮತ್ತು ಆಕಾಶವಾಣಿ ಇವೆರಡರಲ್ಲಿ ಒಂದು ಸೂಕ್ಷ್ಮವಾದ ಭೇದವಿದೆ. ವರ ಕೊಡುವುದರಲ್ಲಿ ವರದಾತನು ಕಣ್ಣುಮುಂದೆ ಇರುತ್ತಾನೆ. ಆಕಾಶವಾಣಿಯ ವ್ಯಕ್ತಿಯು ಅದೃಶ್ಯನಾಗಿರುತ್ತಾನೆ. ಯಾರೊಬ್ಬನ ಸದ್ವರ್ತನೆಯಿಂದ, ಸಮಾಜ ಕಲ್ಯಾಣಕಾರ್ಯವನ್ನು ಮಾಡಿದ್ದರಿಂದ ಪ್ರಸನ್ನನಾದ ವ್ಯಕ್ತಿಯಿಂದ ಆಕಾಶವಾಣಿಯಾಗುತ್ತದೆ. ಪ್ರತ್ಯಕ್ಷ ಭೇಟಿ ಮಾಡಿ ಹೇಳಲು ಅಸಾಧ್ಯವಾದುದನ್ನು ಆಕಾಶವಾಣಿಯ ಮೂಲಕ ಹೇಳಲಾಗುತ್ತದೆ. ಆಕಾಶವಾಣಿಯಿಂದ ಕೇವಲ ವರ ಅಥವಾ ಶಾಪಗಳು ಕೊಡಲ್ಪಡುತ್ತವೆ ಅಂತಲ್ಲ ; ಮುಂಬರುವ ಸಂಕಟಗಳ ಪೂರ್ವಸೂಚನೆಯನ್ನು ಕೂಡ ಕೊಡಲಾಗುತ್ತದೆ. ಕಥಾಸೂತ್ರಗಳನ್ನು ಸೊಗಸಾಗಿ ಜೋಡಿಸಲು ಅನುವಾಗುವ (literary device) ಒಂದು ಉತ್ತಮ ಪ್ರಕಾರವೆಂದರೆ ಆಕಾಶವಾಣಿ ಎಂದೆನ್ನಬಹುದು. ವಾಲ್ಮೀಕಿರಾಮಾಯಣದಲ್ಲಿ ಆಕಾಶವಾಣಿಯ ಉದಾಹರಣೆಗಳು ಬಹಳ ಕಡಿಮೆ ಇವೆ. ಒಂದು ರಣಹದ್ದು ಒಂದು ಗೂಬೆಯ ಮನೆಯನ್ನು ಅಪಹರಿಸಿದೆ ಎಂದು ದೃಢವಾದಾಗ ಶ್ರೀರಾಮನು ರಣಹದ್ದಿಗೆ ಶಿಕ್ಷೆ ವಿಧಿಸಲು ನಿರ್ಧರಿಸಿದನು. ಆಗ ಆಕಾಶವಾಣಿಯಾಯಿತು (ಶಾಪ ಕ್ರ. ೫೬). ಸೀತೆ ಭೂದೇವಿಯನ್ನು ಪ್ರಾರ್ಥಿಸಿ ತನ್ನನ್ನು ಒಡಲಿನಲ್ಲಿ ಇಟ್ಟುಕೊಳ್ಳಬೇಕೆಂದು ಬೇಡಿಕೊಂಡಾಗ ಭೂಮಿ ಇಬ್ಭಾಗವಾಗಿ ಒಂದು ಸಿಂಹಾಸನವು ಮೇಲೆ ಬಂದಿತು. ಭೂದೇವಿಯು ಸಿಂಹಾಸನದ ಮೇಲೆ ಕುಳಿತಿದ್ದಳು. ಭೂದೇವಿಯು ಸೀತೆಯನ್ನು ಎತ್ತಿಕೊಂಡು ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಆಗ ಸ್ವರ್ಗನಿವಾಸಿಗಳಾದ ದೇವತೆಗಳು ಆಕಾಶದಿಂದ ಪುಷ್ಪವೃಷ್ಟಿಯನ್ನು ಮಾಡಿ ಆಶೀರ್ವದಿಸಿದರು.

"ದೇವದೇವತೆಗಳು ಭಲೇ ಭಲೇ ಎಂದು ಸಂತೋಷದ ಧ್ವನಿ ಮಾಡಿದರು. 'ಸದಾಚರಣೆಯುಳ್ಳ ಹೇ ಸೀತೆ ! ನೀನೇ ಧನ್ಯೆ' ಎಂದು ಸೀತೆಯನ್ನು ಶ್ಲಾಘಿಸಿದರು."[೬] ಲಂಕಾದಹನದ ಕಾಲಕ್ಕೆ ಸೀತೆಯೂ ಬೆಂಕಿಗೆ ತುತ್ತಾದಳೆಂದು ಭಾವಿಸಿ ಹನುಮಂತ ಚಿಂತೆಗೀಡಾದನು. ಆಗ ಚಾರಣನಿಂದ ಆತನಿಗೆ ಸೀತೆ ಸುರಕ್ಷಿತಳಾಗಿರುವ ವಾರ್ತೆ ತಿಳಿದುಬಂದಿತು. ಇದನ್ನು ಆಕಾಶವಾಣಿ ಎಂದೆನ್ನಲಾಗದು (ಸುಂದರಕಾಂಡ, ೫೫/೨೯-೩೨). ದ್ರೌಪದಿಯ ಸಂದರ್ಭದಲ್ಲಿ ವ್ಯಾಸರು ಉಚ್ಚರಿಸಿದ ದಿವ್ಯವಾಣಿಯೊಂದಿಗೂ (ಮಹಾಭಾರತ, ಆದಿಪರ್ವ, ೧೯೭/೧೪) ಇದರ ತುಲನೆಯಾಗದು. ಈ ವಾಣಿ ಆಕಾಶದಿಂದ ಉಚ್ಚರಿಸಲಾದುದಲ್ಲ.

ಆಕಾಶವಾಣಿಯಾದೊಡನೆ ಪುಷ್ಪವೃಷ್ಟಿ ಆಗಲೇಬೇಕು ಎಂದೇನೂ ಇಲ್ಲ. ಪುಷ್ಪವೃಷ್ಟಿ ಎಂದರೆ ಸದ್ಭಾವನೆಯನ್ನು ವ್ಯಕ್ತಪಡಿಸುವ ಒಂದು ಪ್ರಕಾರವಿದ್ದು ಇದರಲ್ಲಿ ಶಬ್ದಗಳ ಬದಲು ಹೂಗಳಿಂದ ಭಾವನೆಯನ್ನು ಪ್ರಕಟಿಸಲಾಗುತ್ತದೆ. ಕೆಲವೊಮ್ಮೆ ಮಂಗಲವಾದ್ಯಗಳ ಮೊಳಗುವಿಕೆ, ನೃತ್ಯಗಾಯನಾದಿಗಳಿಂದ ಈ ಭಾವನೆಯನ್ನು ಪ್ರಕಟಿಸಲಾಗುತ್ತದೆ. ಈ ಕೆಳಗಿನ ಪ್ರಸಂಗಗಳಲ್ಲಿ ಪುಷ್ಪವೃಷ್ಟಿಯಾದ ಉಲ್ಲೇಖವಿದೆ. ಶ್ರೀರಾಮಜನ್ಮ (ಬಾಲಕಾಂಡ, ೧೮), ಶ್ರೀರಾಮಲಕ್ಷ್ಮಣರ ವಿವಾಹಗಳು (ಬಾಲಕಾಂಡ, ೭೫), ವೇದವತಿಯ ಅಗ್ನಿಪ್ರವೇಶ (ಉತ್ತರಕಾಂಡ, ೧೭), ಶ್ರೀರಾಮನಿಂದ ನಡೆದ ಶಂಬೂಕನ ವಧೆ(ಉತ್ತರಕಾಂಡ, ೭೬) ಮತ್ತು ಶ್ರೀರಾಮನ ಮಹಾಪ್ರಸ್ಥಾನದ ಸಮಯ. ರಾವಣನ ವಧೆಯನಂತರವೂ (ಯುದ್ಧಕಾಂಡ, ೧೦೮) ಪುಷ್ಪವೃಷ್ಟಿಯಾಗಿದೆ.

## ರಾಮಾಯಣ : ಶಾಪಕಥೆ / ವರಕಥೆ

ರಾಮಾಯಣದ ಪ್ರಾರಂಭ, ಕೊನೆ, ಅದರಲ್ಲಿ ಕಥೆಗೆ ಓಘವನ್ನೀಡುವ ಘಟನೆಗಳು, ಕಥೆಯ ಆಯಾಮ — ಇವೆಲ್ಲವೂ ಶಾಪ-ವರಗಳನ್ನಾಧರಿಸಿವೆ. ಅವುಗಳ ಪ್ರಭಾವವು ವ್ಯಕ್ತಿಗಳ ಸ್ವಭಾವದಲ್ಲಿಯೂ ಮೂಡಿದೆ. ವಾಲ್ಮೀಕಿಯು ನಿಷಾದನಿಗೆ ಕೊಟ್ಟ ಶಾಪದ ಕಾರಣ ರಾಮಾಯಣ ಜನಿಸಿತು. ಬ್ರಹ್ಮದೇವನ ವರದಿಂದ ಗ್ರಂಥದ ರಚನೆಯಾಯಿತು ; ಬರೆಯುವುದಕ್ಕೆ ಪ್ರೋತ್ಸಾಹ ದೊರೆಯಿತು. ಭೂಮಂಡಲದಲ್ಲಿ ನದಿ-ಪರ್ವತಗಳು ವಿರಾಜಿಸುವವರೆಗೆ ರಾಮಾಯಣವು ಲೋಕಪ್ರಚಾರದಲ್ಲಿರುವುದು ಖಂಡಿತ ! ಎಂಬ ಬ್ರಹ್ಮನ ಭವಿಷ್ಯವು ಯಥಾರ್ಥವಾಗಿದೆ. ರಾಮಾಯಣದ ಪ್ರಾರಂಭವು ಶಾಪದಿಂದ ಹೇಗೋ ಹಾಗೆಯೇ ಅದರ ಸಮಾಪ್ತಿಯೂ ಶಾಪದ ಸಂದರ್ಭದಿಂದಲೇ ಆಗಿದೆ. ರಾಮಾವತಾರದ ಕಾರ್ಯವು ಮುಗಿಯಲಿದೆ ಎಂಬ ಸಂದೇಶವನ್ನು ತಲುಪಿಸಲೆಂದು ಕಾಲಪುರುಷನು ಬ್ರಹ್ಮನ ಹೇಳಿಕೆಯಂತೆ ಶ್ರೀರಾಮನ ಬಳಿ ಬಂದಿದ್ದನು. ಏಕಾಂತದಲ್ಲಿ ಒಬ್ಬರೊಬ್ಬರು ಮಾತನಾಡುತ್ತಿದ್ದರು. ಅಲ್ಲಿ ಇನ್ನಾರಿಗೂ ಪ್ರವೇಶಕ್ಕೆ ಅವಕಾಶವೀಯಬಾರದೆಂದು ಲಕ್ಷ್ಮಣನಿಗೆ ವಿಧಿಸಲಾಗಿತ್ತು. ಈ ಆಜ್ಞೆಯನ್ನು ಉಲ್ಲಂಘಿಸಿದವನಿಗೆ ದೇಹಾಂತಶಿಕ್ಷೆ ಎಂದೂ ನಿಶ್ಚಿತವಾಗಿತ್ತು. ಇದೇ ಸಮಯದಲ್ಲಿ ದುರ್ವಾಸ ಋಷಿಯು ಅಲ್ಲಿಗೆ ಬಂದನು. ತಕ್ಷಣ ಶ್ರೀರಾಮನ ಭೇಟಿಮಾಡಿಸಬೇಕೆಂದು ಲಕ್ಷ್ಮಣನಿಗೆ ತಿಳಿಸಿದನು. ಲಕ್ಷ್ಮಣನು ಆಗ ಇದ್ದ ಪರಿಸ್ಥಿತಿಯನ್ನು ದುರ್ವಾಸನಿಗೆ ತಿಳಿಸಿ ಹೇಳಲು ಯತ್ನಿಸಿದನು. ಆಗ ದುರ್ವಾಸನು ಲಕ್ಷ್ಮಣನಿಗೆ — "ದುರ್ವಾಸನು ಆಗಮಿಸಿದ್ದಾನೆ ಎಂಬುದನ್ನು ನೀನು ಈ ಕ್ಷಣಕ್ಕೆ ಶ್ರೀರಾಮನಿಗೆ ತಿಳಿಸು ! ನೀನು ತಿಳಿಸದೇ ಇದ್ದರೆ ನಾನು ಈ ದೇಶವನ್ನು, ಈ ಅಯೋಧ್ಯೆಯನ್ನು, ನಿನ್ನನ್ನು ಮತ್ತು ಶ್ರೀರಾಮನನ್ನು ಶಪಿಸುವೆ ! ಇಷ್ಟೇ ಅಲ್ಲದೆ ಭರತನಿಗೂ ನಂತರದ ನಿಮ್ಮ ಪೀಳಿಗೆಗೂ ಶಾಪವನ್ನು ಕೊಡುವೆ" ಎಂದನು. ಲಕ್ಷ್ಮಣನಿಗೆ ಇದೊಂದು ಸಮಸ್ಯೆಯುಂಟಾಯಿತು. ದುರ್ವಾಸನ ಭೇಟಿಯನ್ನು ಆ ಕ್ಷಣಕ್ಕೆ ಶ್ರೀರಾಮನೊಡನೆ ಮಾಡಿಸಿಕೊಡುವುದೆಂದರೆ ಶ್ರೀರಾಮನ ಆಜ್ಞೆಯ ಉಲ್ಲಂಘನೆ ; ಅದರ ಶಿಕ್ಷೆ ಎಂದರೆ ಸಾವು ; ಇನ್ನು ಭೇಟಿಯಾಗದಂತೆ ಮಾಡಿದರೆ ಇಡೀ ರಘುಕುಲಕ್ಕೆ ಘೋರ ಶಾಪ ! ಈ ರೀತಿ ಇಕ್ಕಟ್ಟಿನಲ್ಲಿ ಸಿಕ್ಕ ಲಕ್ಷ್ಮಣನು, ಆತ್ಮಾರ್ಪಣೆ ಮಾಡಿಯಾದರೂ ರಘುಕುಲವನ್ನು ಕಾಪಾಡುವುದೇ ಲೇಸೆಂದು ಭಾವಿಸಿ, ದುರ್ವಾಸ ಋಷಿಯ ಆಗಮನವನ್ನು ಶ್ರೀರಾಮನಿಗೆ ತಿಳಿಸಿದನು. ಅವರ ಭೇಟಿಯಾಯಿತು. ಆಜ್ಞೆಯನ್ನು ಮೀರಿದುದಕ್ಕಾಗಿ ಲಕ್ಷ್ಮಣನು ತಾನಾಗಿ ಸರಯೂ ನದಿಯಲ್ಲಿ ಆತ್ಮಾರ್ಪಣೆಯ ಶಿಕ್ಷೆಯನ್ನು ವಿಧಿಸಿಕೊಂಡನು. ಲಕ್ಷ್ಮಣನ ವಿಯೋಗದಿಂದ ಶ್ರೀರಾಮನಿಗೆ ಹೇಳಲಾರದ ದುಃಖವಾಗಿ ಆತನು ಕೂಡ ಲಕ್ಷ್ಮಣನನ್ನು ಹಿಂಬಾಲಿಸಿದನು. ದುರ್ವಾಸನು ಈ ಸಂದರ್ಭದಲ್ಲಿ ನಿಜವಾಗಿ ಶಾಪವನ್ನು ಕೊಟ್ಟಿರಲಿಲ್ಲ ; ಆದರೆ ನಡೆದ ಘಟನೆಗಳು ಯಾವುದೇ ಶಾಪದ ಪರಿಣಾಮಕ್ಕಿಂತ ದಾರುಣ, ಕರುಣಾಜನಕವಾಗಿದೆ.

## ದಶರಥನಿಂದ ಕೈಕೇಯಿಗೆ ವರದಾನ

ದಶರಥನು ಕೈಕೇಯಿಗೆ ಕೊಟ್ಟ ಎರಡು ವರಗಳಿಗೆ ರಾಮಾಯಣದಲ್ಲಿ ಅಪೂರ್ವವಾದ ಮಹತ್ತ್ವವಿದೆ. ಈ ಎರಡು ವರಗಳಿಂದ ಇಡೀ ರಾಮಾಯಣವು ನಡೆದಿದೆ. ಈ ವರಗಳಿರದಿದ್ದರೆ ರಾಮಾಯಣದ ಸ್ವರೂಪವೇ ಬೇರೆಯಾಗುತ್ತಿತ್ತು. ಸಮಗ್ರಕಥೆಗೆ ವಿಲಕ್ಷಣವಾದ ತಿರುವನ್ನು ಕೊಡುವ ಸಾಮರ್ಥ್ಯ ಈ ವರಗಳಿಗೆ ಇದೆ. ಕೈಕೇಯಿಯ ದೃಷ್ಟಿಯಿಂದ ಅವು ವರಗಳಾಗಿದ್ದರೂ ರಾಮಾಯಣದಲ್ಲಿಯ ಇತರ ವ್ಯಕ್ತಿಗಳಿಗೆ ಭಯಂಕರ ಶಾಪದಂತಾಗಿವೆ. ಬ್ರಹ್ಮನು ರಾವಣನಿಗೆ ಮರ್ಯಾದಿತ ಅಮರತ್ವವನ್ನು ವರವಾಗಿ ಕೊಟ್ಟನು. ಈ ವರವು ಕೈಕೇಯಿಗಿತ್ತ ವರವನ್ನು ಪೋಷಿಸುವಂತೆ, ಉಪಕಾರಕವಾಗುವಂತಿತ್ತು.

ರಾವಣನ ವಧೆಯೇ ಮಾನವಾವತಾರಿಯಾದ ಶ್ರೀರಾಮನ ಉದ್ದೇಶವಾಗಿತ್ತು. ಅದನ್ನು ಸಾಧಿಸಲು ಶ್ರೀರಾಮ-ರಾವಣರು ಪರಸ್ಪರರನ್ನು ಎದುರಿಸುವುದು ಅಗತ್ಯವಾಗಿತ್ತು. ಶ್ರೀರಾಮನು ಅಯೋಧ್ಯೆಯಲ್ಲಿದ್ದು ವಧೆಯನ್ನು ಸಾಧಿಸುವುದೆಂತು ? ಶ್ರೀರಾಮನನ್ನು ಅಯೋಧ್ಯೆಯ ಆಚೆ ಕಳುಹಿಸಲು ಯಾವ ಯೋಗ್ಯ ಕಾರಣಗಳೂ ಇರಲಿಲ್ಲ. ಅವನು ದಶರಥನ ಜ್ಯೇಷ್ಠಪುತ್ರನು. ಯುವರಾಜ್ಯವದವಿಗೆ, ಸಾಮ್ರಾಜ್ಯಪದಕ್ಕೆ

ಅವನು ಹಕ್ಕುದಾರನಿದ್ದನು. ಇಷ್ಟೇ ಅಲ್ಲದೇ ಆತನು ತನ್ನ ಸದ್ಗುಣ-ಸದಾಚರಣೆಗಳಿಂದ ಕೈಕೇಯಿಯನ್ನೊಳಗೊಂಡು ಎಲ್ಲರ ಪ್ರೀತಿವಿಶ್ವಾಸವನ್ನು ಗಳಿಸಿಕೊಂಡಿದ್ದನು. ಹೀಗಿದ್ದುದರಿಂದ ಶ್ರೀರಾಮನನ್ನು ಅಲಕ್ಷಿಸಿ ಬದಿಗಿಡುವುದು ಸಾಧ್ಯವಿರಲಿಲ್ಲ. ರಾಮಾಯಣದ ಕಥೆಯ ದೃಷ್ಟಿಯಿಂದ ಶ್ರೀರಾಮನು ಅಯೋಧ್ಯೆಯ ಆಚೆಗೆ ದೀರ್ಘಸಮಯದವರೆಗೆ ಇರುವುದು ಆವಶ್ಯಕವಿತ್ತೆಂಬುದನ್ನು ಬಹುಕುಶಲತೆಯಿಂದ, ಕೈಕೇಯಿಯ ವರಗಳ ಮುಖಾಂತರ ಸಾಧಿಸಲಾಗಿದೆ. ಈ ಯೋಜಕತೆಯು ವಾಲ್ಮೀಕಿಯ ಸೂಕ್ತ ಕಥಾತಂತ್ರವಾಗಿದೆ. ಈ ವರದ ಉಪಾಯವು ನಂತರ ಹೊಳೆದಿದೆ ಎಂದಲ್ಲ ; ಕೈಕೇಯಿಯ ವಿವಾಹದ ಸಮಯದಲ್ಲಿಯೇ ಆಕೆಗೆ ಹುಟ್ಟಿದ ಮಗನಿಗೆ ರಾಜ್ಯ ದೊರೆಯಬೇಕು ! ಎಂಬ ವಚನವನ್ನು ದಶರಥನಿಂದ ತೆಗೆದುಕೊಳ್ಳಲಾಗಿದೆ. ದಶರಥನು ಸಂಗ್ರಾಮಕ್ಕೆ ಹೋದಾಗ ಕೈಕೇಯಿಯು ಆತನ ಜೊತೆ ಇದ್ದಳು. ದಶರಥನನ್ನು ಪ್ರಾಣಸಂಕಟದಿಂದ ಉಳಿಸಿದಳು. ಆಗ ದಶರಥನು ಕೈಕೇಯಿಗೆ ಎರಡು ವರಗಳನ್ನು ಕೊಟ್ಟನು. ಪ್ರಾಣವನ್ನುಳಿಸಿದ ಕೈಕೇಯಿಗೆ ಈ ರೀತಿ ವರಗಳನ್ನು ಕೊಡುವುದು ಅಸ್ವಾಭಾವಿಕವಾಗಿರಲಿಲ್ಲ. ಅವಳು ಅವುಗಳನ್ನು ತಕ್ಷಣ ಬೇಡಿಕೊಳ್ಳದೆಯೇ ಸಮಯ ಒದಗಿದಾಗ ಬೇಡುವೆನೆಂದಳು. ಅವುಗಳನ್ನು ಈ ರೀತಿ ಬಳಸಬಹುದೆಂಬ ಕಲ್ಪನೆ ಕೈಕೇಯಿಗೂ ಆಗ ಇರಲಿಕ್ಕಿಲ್ಲ. ಶ್ರೀರಾಮನಿಗೆ ಯುವರಾಜ್ಯಾಭಿಷೇಕವಾಗುವದೆಂದು ಕೈಕೇಯಿಗೆ ಎಂದಿಲ್ಲದ ಆನಂದ, ಸಡಗರವಾಗಿತ್ತು. ಶ್ರೀರಾಮನಿಗೆ ಯುವರಾಜ್ಯಾಭಿಷೇಕ ನಡೆಯುವುದರಲ್ಲಿ ಯಾವ ಅಡಚಣೆಯೂ ಇರಲಿಲ್ಲ. ಇಂಥ ಸಮಯದಲ್ಲಿ ಕೈಕೇಯಿಯ ಮತ್ಸರಭಾವವನ್ನು ಜಾಗೃತಗೊಳಿಸಿ, ದಶರಥನ ವರಗಳ ಸ್ಮರಣೆ ಮಾಡಿಕೊಟ್ಟು, ಕಥಾವಸ್ತುವಿಗೆ ಅನಪೇಕ್ಷಿತವಾದ, ಸ್ವಾಭಾವಿಕವೆನ್ನಿಸುವ ತಿರುವನ್ನು ಕೊಡುವ ಉದ್ದೇಶ, ಈ ವರಗಳ ಯೋಜನೆಯಲ್ಲಿದೆ. ಮಂಥರೆಯು ಒಂದು ಸಾಧನವಾದಳು. ಕೈಕೇಯಿಯ ಮನಸ್ಸಿನಲ್ಲಿ ಪರಿವರ್ತನೆಯನ್ನುಂಟು ಮಾಡುವುದು ಅಷ್ಟೊಂದು ಸುಲಭವಾಗಿರಲಿಲ್ಲ ; ಏಕೆಂದರೆ ಶ್ರೀರಾಮನ ಬಗ್ಗೆ ಅವಳ ಪ್ರೀತಿಯು ಭರತನ ಮೇಲಿದ್ದಷ್ಟೇ ಇತ್ತು. ಹೀಗಿದ್ದರೂ ಮಂಥರೆಯು ಈ ಮಹತ್ತ್ವದ ಕೆಲಸವನ್ನು ಸಾಧಿಸಿದಳು. ಎಲ್ಲಿಯೂ ಅಡ್ಡಿ ಬರದಂತೆ ವರಗಳ ಯೋಜನೆಯಿತ್ತು. ಮನುಷ್ಯರ ಸ್ವಭಾವದ ಸರಿಯಾದ ಜ್ಞಾನ ಕೈಕೇಯಿಗೆ ಇತ್ತು. ವರಗಳ ಉಪಯೋಗ ಸರಿಯಾಗಿ ಆಗುವುದೆಂದು ಅವಳು ಅರಿತಿದ್ದಳು. ದಶರಥನಿಂದ ವರಗಳನ್ನು ಬೇಡಿಕೊಳ್ಳುವಾಗ ಅವಳು ಬುದ್ಧಿವಂತಿಕೆಯಿಂದ ಆತನನ್ನು ವಚನಬದ್ಧನನ್ನಾಗಿ ಮಾಡುತ್ತಾಳೆ ; ದೇವರನ್ನು ಸಾಕ್ಷಿಯಾಗಿ ಇಡುತ್ತಾಳೆ ; ಶ್ರೀರಾಮನ ಮಾತಿನಲ್ಲಿ ಅವಳಿಗೆ ಭರವಸೆ ಇತ್ತು. ದಶರಥನು ಒಂದು ವೇಳೆ ಕೊಟ್ಟ ಮಾತನ್ನು ಹಿಂತೆಗೆದುಕೊಳ್ಳಬಹುದು ; ಆದರೆ ಶ್ರೀರಾಮನು ಕೊಟ್ಟ ವಚನವನ್ನು ಮೀರುವವನಲ್ಲವೆಂಬುದು ಆಕೆಗೆ ಗೊತ್ತಿತ್ತು. ಕೈಕೇಯಿಯ ಮುಖ್ಯ ಆಧಾರವೆಂದರೆ ಶ್ರೀರಾಮ ಮತ್ತು ಆತನ ವ್ಯಕ್ತಿವಿಶೇಷ. ಕೈಕೇಯಿಯು ಈ ಧೈರ್ಯದಿಂದಲೇ ವರಗಳನ್ನು ಬೇಡಿಕೊಂಡಳು. ಪಿತನ ಆಜ್ಞೆಯನ್ನು ಪಾಲಿಸಲೋಸುಗ ಶ್ರೀರಾಮನು ಬೆಂಕಿಯಲ್ಲಿ ಸಹ ಧುಮುಕಬಹುದು ; ಹಾಲಾಹಲವನ್ನು ಸಹ ಕುಡಿಯಬಹುದು ; ಸಾಗರದಲ್ಲಿಯೂ ಮುಳುಗಬಹುದು ; ಆದರೆ ಆಜ್ಞೆಯನ್ನು ಉಲ್ಲಂಘಿಸಲಾರನೆಂದು ಕೈಕೇಯಿಗೆ ಪೂರ್ಣ ವಿಶ್ವಾಸವಿತ್ತು. ಈ ವಿಶ್ವಾಸದಿಂದಲೇ ಕೈಕೇಯಿಯ ವರಗಳು ಯಶಸ್ವಿಯಾದವು. ಶ್ರೀರಾಮನಿಗಿದ್ದ ರಾಜ್ಯದ ಸ್ವಯಂ ಸಿದ್ಧ ಮತ್ತು ಸ್ವಯಂಭೂ ಬಾಧ್ಯತೆಯನ್ನು ನಿರಾಕರಿಸುವುದು ಅಸ್ವಾಭಾವಿಕ, ಕೃತ್ರಿಮವೆಂದೆನಿಸಬಹುದಿತ್ತು. ಹೀಗಿದ್ದುದರಿಂದ ವರಗಳ ಸಂದರ್ಭವು ಶ್ಲಾಘನೀಯವೆನಿಸುತ್ತದೆ. ಕೈಕೇಯಿಯು ತನ್ನ ಹಟವನ್ನು ಬಿಡಬೇಕೆಂದು ದಶರಥನು ಪರಿಪರಿಯಾಗಿ ಪ್ರಾರ್ಥಿಸಿದನು ; ಅಂಗಲಾಚಿ ಬೇಡಿಕೊಂಡನು ; ಬೆದರಿಕೆ ಹಾಕಿದನು ; ವಿವಾಹಸಂಬಂಧವನ್ನು ಕಡಿದುಹಾಕುವೆನೆಂದನು ; ಕಟುವಾಗಿ ಮಾತನಾಡಿದನು. ಕೌಸಲ್ಯೆ, ಲಕ್ಷ್ಮಣ, ಸುಮಂತ, ವಸಿಷ್ಠರ ಪ್ರಯತ್ನಗಳೂ ವಿಫಲವಾದವು. ಕೈಕೇಯಿಯು ತನ್ನ ಹಟವನ್ನು ಬಿಡಲಿಲ್ಲ. ಅಷ್ಟೇ ಅಲ್ಲದೆ ವರಗಳಂತೆ ನಡೆದುಕೊಳ್ಳದಿದ್ದರೆ ಪ್ರಾಣತ್ಯಾಗವನ್ನು ಮಾಡುವ ಬೆದರಿಕೆಯನ್ನು ಸಹ ಹಾಕಿದಳು. ಉರಿಯುವಂಥ ತೀಕ್ಷ್ಣ ಶಬ್ದಗಳ ಯಾವ ಪರಿಣಾಮವೂ ಕೈಕೇಯಿಯ ಮೇಲೆ ಆಗಲಿಲ್ಲ. ಅವಳ ಅಭಿಲಾಷೆ-ಹಟಗಳನ್ನು ವಿರೋಧಿಸಬಲ್ಲವನೆಂದರೆ ಭರತ ; ಭರತನೇ ತನಗೆ ಯಾವ ರಾಜ್ಯವದವೂ ಬೇಡವೆಂದಿದ್ದರೆ ಕೈಕೇಯಿಯ ಎಲ್ಲ ಮನೋರಥಗಳು ಅದೇ ಕ್ಷಣಕ್ಕೆ ಮಣ್ಣುಪಾಲಾಗುತ್ತಿದ್ದವು. ಆ ಭರತನಿಂದ ಅಡಚಣೆ ಉಂಟಾಗಬಾರದೆಂದು ಬಹು ಚಾತುರ್ಯದಿಂದ ಈ ಮೊದಲೇ ಅವನನ್ನು ತಾತನ ಮನೆಗೆ ಕಳುಹಿಸಲಾಗಿತ್ತು.

ಕೈಕೇಯಿಯ ಕಾರ್ಯವು ನಿರ್ವಿಘ್ನವಾಯಿತು. ರಾಮಾಯಣದ ಈ ಮುಂದಿನ ಘಟನೆಗಳಿಗೆ ಕೈಕೇಯಿಯ ಈ ಎರಡು ವರಗಳು ಮೂಲಭೂತವಾಗಿವೆ. 'ಭರತನಿಗೆ ಯುವರಾಜ್ಯ ಪದ ; ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸ' — ಈ ಎರಡು ವರಗಳು ಕೈಕೇಯಿಗೆ ದೊರೆತನಂತರವೇ ನಿಜವಾಗಿ ರಾಮಾಯಣವು ಶುರುವಾಯಿತೆನ್ನಬಹುದು.

ದಶರಥನು ಸಂತೋಷಗೊಂಡು ಕೊಡಬಯಸಿದ ಎರಡು ವರಗಳು 'ವರ'ವೆಂದಿರದೇ ಅವು ಕೊಟ್ಟ ವಚನಗಳಂತೆ ಇದ್ದವು ; ಎಂದು ಕೆಲವರು ಮಂಡಿಸಬಹುದು. ಈ ಸಂಗತಿಗೆ ಆಧಾರವಿರದ ಕಾರಣ ಈ ಯುಕ್ತಿವಾದವು ಸರಿಯಲ್ಲ. ಈ ವರಗಳ ಉಲ್ಲೇಖವು ಮತ್ತೆ ಮತ್ತೆ ೧೫-೨೦ ಸಲವಾದರೂ ರಾಮಾಯಣ ದಲ್ಲಿ ಬಂದಿದೆ. ವಾಲ್ಮೀಕಿಯು ಎಲ್ಲೆಡೆಯಲ್ಲಿಯೂ 'ವರ' ಎಂಬ ಪದವನ್ನೇ ಬಳಸಿದ್ದಾನೆಯೇ ಹೊರತು 'ವಚನ' ಎಂಬ ಶಬ್ದವನ್ನಲ್ಲ. ಕೆಲವೆಡೆ 'ವರ' ಎಂಬ ಪದವು ಸ್ಪಷ್ಟವಾಗಿರದಿದ್ದರೂ ಅಭಿಪ್ರೇತವಾಗಿದೆ. ಈ 'ವರ'ದ ಪ್ರಪ್ರಥಮ ಉಲ್ಲೇಖವು, ನಾರದನು ಹೇಳಿದ ಸಂಕ್ಷಿಪ್ತ ಶ್ರೀರಾಮಕಥೆಯ ಬಾಲಕಾಂಡದ ಮೊದಲನೇ ಸರ್ಗದಲ್ಲಿ 'ಪೂರ್ವಂ ದತ್ತ ವರಾ ದೇವೀ' ಎಂದಿದೆ. 'ದತ್ತೌ ತೇ ದ್ವೌ ವರೌ' ಎಂದು ಮಂಥರೆ ಆ ವರಗಳ ಜ್ಞಾಪಕವನ್ನು ಕೈಕೇಯಿಗೆ ಮಾಡಿಕೊಡುತ್ತಾಳೆ. ವರ ಮತ್ತು ವಚನ ಇವು ಸಮಾನಾರ್ಥವುಳ್ಳ ಶಬ್ದಗಳಲ್ಲ. ವರದ ಪರಿಣಾಮಗಳು ನಿಶ್ಚಿತವಿದ್ದು ಅದರಲ್ಲಿ ಪರಿವರ್ತನೆಗೆ ಆಸ್ಪದವಿಲ್ಲ. ವಚನಭಂಗವನ್ನು ನಿಷೇಧಿಸಲಾಗಿದೆ ; ಆದರೆ ಬದಲಾವಣೆಗೆ ಅವಕಾಶವಿದೆ. ಸಮಜಾಯಿಸಿ, ವಿನಂತಿಸಿ, ಮತಪರಿವರ್ತನೆ ಮಾಡಿ, ವಚನದಲ್ಲಿ ಬದಲಾವಣೆ ಮಾಡಬಹುದು. ದಶರಥನು ಸತ್ಯನಿಷ್ಠನಾಗಿದ್ದನು. ವರಗಳ ಬದಲು ಕೈಕೇಯಿಗೆ ಆತನು ವಚನವನ್ನು ಕೊಟ್ಟಿದ್ದರೂ ಆ ವಚನವನ್ನು ಪಾಲಿಸುವ ನೈತಿಕತೆ ಆತನಿಗಿತ್ತು. ವರಗಳನ್ನು ಕೊಟ್ಟನಂತರ ಸಹ ಕೈಕೇಯಿಯನ್ನು ಬಹುವಾಗಿ ವಿನಂತಿಸಿದ್ದಾನೆ. ಕೈಕೇಯಿಯ ನಿರ್ಧಾರ ಹಾಗೂ ವರಗಳ ಆಗುಗಳನ್ನು ತಪ್ಪಿಸುವ ಅಸಾಧ್ಯತೆಯ ಕಾರಣದಿಂದ ದಶರಥನ ಪ್ರಯತ್ನಗಳು ನಿಷ್ಫಲವಾದವು.

ದಶರಥನ ವಿಷಯಲಂಪಟತೆಯ ಬಗ್ಗೆ ಅನೇಕ ಉಲ್ಲೇಖಗಳು ರಾಮಾಯಣದಲ್ಲಿವೆ. ಕೈಕೇಯಿಯ ಸೌಂದರ್ಯಕ್ಕೆ ಮಾರುಹೋಗಿ ದಶರಥನು ಆಕೆಗೆ ವರಗಳನ್ನು ಕೊಟ್ಟನೆಂದು ಅನ್ನುವುದು ಸರಿಯಲ್ಲ. ಆತನು ಕೈಕೇಯಿಯ ರೂಪಕ್ಕೆ ಸೋತುಹೋಗಿರಬಹುದು ; ಆದರೆ ಈ ವರಗಳಿಗೆ ಅದರ ಆಧಾರವಿಲ್ಲ. ದಶರಥನು ತನ್ನ ಕೊನೆಯ ಗಳಿಗೆಯಲ್ಲಿ ಆಕೆಯ ಸ್ಪರ್ಶವು ತನಗಾಗಬಾರದೆಂದು, ಅವಳ ಮತ್ತು ತನ್ನ ಯಾವ ಧರ್ಮ ಸಂಬಂಧವೂ ಇನ್ನುಮುಂದೆ ಉಳಿದಿಲ್ಲವೆಂದು, ಸ್ಪಷ್ಟವಾಗಿ ಹೇಳಿದ್ದಾನೆ. ಶ್ರೀರಾಮನೊಡನೆ ಅಸತ್ಯವನ್ನು ನುಡಿದ ಕಾರಣ ಕೈಕೇಯಿಯನ್ನು ಬಹುವಾಗಿ ನಿಂದಿಸಿದ್ದಾನೆ. ಇದನ್ನೆಲ್ಲ ಗಮನಿಸಿದರೆ ಕೈಕೇಯಿಯ ಸೌಂದರ್ಯಕ್ಕೆ ಮೋಹಿತನಾಗಿ ಆಕೆಗೆ ವರಗಳನ್ನು ಕೊಟ್ಟನೆಂಬುದು ನಿಜವೆನ್ನಿಸುವುದಿಲ್ಲ. ದಶರಥನು ಮಾತು ಕೊಟ್ಟು ಸಿಲುಕಿದ್ದನು. ಈ ತರಹದ ಸಲ್ಲದ ವರಗಳನ್ನು ಕೈಕೇಯಿಯು ಬೇಡಿಯಾಳು ! ಎಂದು ಅವನು ಎಣಿಸಿರಲಿಲ್ಲವೆಂದು ದಶರಥನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ. "ಧರ್ಮಬಂಧನದಲ್ಲಿ ನಾನು ಸಿಲುಕಿದ್ದೇನೆ. ನನಗೆ ಯಾವುದೂ ಹೊಳೆಯುತ್ತಿಲ್ಲ."[೩೦] ಶ್ರೀರಾಮನನ್ನು ವನವಾಸಕ್ಕೆ ಕಳುಹಿಸುವ ನಿಜಕಾರಣವನ್ನು ಹೇಳಿದರೆ ಜನರು ತನ್ನನ್ನು ಅಪರಾಧಿ ಎಂದು ಕಾಣುವರೆಂಬ ವ್ಯಥೆಯು ದಶರಥನಿಗಾಯಿತು.

ರಾವಣನಿಗೆ ಕೇವಲ ಎರಡು ವರಗಳು ದೊರೆತಿವೆ. ಬ್ರಹ್ಮನು ಕೊಟ್ಟ ಮರ್ಯಾದಿತ ಅಮರತ್ವ ವರವು, ಒಂದು ವಿಧದಲ್ಲಿ, ಕೈಕೇಯಿಯು ಬೇಡಿಕೊಂಡ ವರಕ್ಕೆ ಮತ್ತು ರಾಮಾಯಣದ ರಚನೆಗೆ ಪೋಷಕವಾಗಿದೆ. ಆಕ್ರಮಣ, ಕೊಬ್ಬು, ಅಧಿಕಾರಲಾಲಸೆ, ಕಾಮಾಂಧತೆ, ಅಮರ್ಯಾದಿತ ವರ್ತನೆ ಇವು ರಾವಣನಲ್ಲಿ ಹೆಚ್ಚಾಗಲು ಅವನಿಗೆ ದೊರೆತ ಈ ವರವು ಕಾರಣೀಭೂತವಾಗಿದೆ. ಆತನ ಪಾಪಸಂಚಯವು ಅಳತೆಮೀರಲು ಇಂಥ ವರಗಳು ನೆರವಾದವು. ಕೇವಲ ಪತ್ನಿಯ ಇಚ್ಛೆಗನುಸಾರ ಸೀತೆಯನ್ನು ತನ್ನ ಜೊತೆಗೆ ಕಾಡಿಗೆ ಕೊಂಡೊಯ್ಯಲು ಶ್ರೀರಾಮನು ಸಮ್ಮತಿಸಿಲ್ಲ. ಕಥೆಯ ದೃಷ್ಟಿಯಿಂದ ಅವಳು ಕಾಡಿಗೆ ಶ್ರೀರಾಮನ ಜೊತೆ ಬರುವುದು ಅನಿವಾರ್ಯವಾಗಿತ್ತು. ಸ್ತ್ರೀಯ ಅಪಹರಣವು ಕಾಳಗಕ್ಕೆ ಒಂದು ಮಹತ್ತ್ವದ ಕಾರಣವಾಗುವುದ ರಿಂದ, ಸೀತೆಯ ವನವಾಸವು ಅದಕ್ಕೆ ಅನುಕೂಲದ್ದಾಯಿತು. ರಾಮಾಯಣದ ಕೃತಿಯಲ್ಲಿಯ ವಾಲ್ಮೀಕಿಯ ಕಥಾರಚನಾಚಾತುರ್ಯವೂ ಇದರಿಂದ ತಿಳಿದುಬರುತ್ತದೆ. ಈಶ್ವರನಿಂದಲೂ ದೊರೆತ ಒಂದು ವರದಿಂದ

ರಾವಣನ ಬಲವು ವರ್ಧಿಸಿತು. ಮೇಘನಾದನನ್ನು ವಧಿಸುವುದು ಲಕ್ಷ್ಮಣನಿಗೆ ಸುಲಭವಾಗಬೇಕೆಂದು, ಅದೇ ರೀತಿಯ ವರವನ್ನು ಮೇಘನಾದನಿಗೆ ಕೊಡಲಾಗಿದೆ. ಒಂದೇ ವಿಧದ ಪರಿಣಾಮವನ್ನು ರೂಪಿಸುವ ವರ ಹಾಗೂ ಶಾಪಗಳನ್ನು ಅದೇ ಬ್ರಹ್ಮನಿಂದ ಪಡೆದ ವ್ಯಕ್ತಿ ಎಂದರೆ ಕುಂಭಕರ್ಣ ; ಕುಂಭಕರ್ಣನನ್ನು ಸಂಪೂರ್ಣವಾಗಿ ನಿರ್ಬಲಗೊಳಿಸುವ ಉದ್ದೇಶದಿಂದಲೇ ಈ ವರ ಮತ್ತು ಶಾಪವನ್ನು ಯೋಜಿಸಲಾಗಿದೆ. ವರಗಳನ್ನು ಪಡೆದ ರಾಕ್ಷಸಕುಲದವರ ವಿನಾಶದ ಮೂಲವೂ ಈ ವರಗಳಲ್ಲಿಯೇ ಹುದುಗಿದೆ.

## ಹನುಮಂತನಿಗೆ ದೊರೆತ ವರಗಳು

ಹನುಮಂತನು ಹುಟ್ಟಿನಿಂದಲೂ ಅತಿಬಲಶಾಲಿ; ಹುಟ್ಟಿದ ಕ್ಷಣವೇ ಸೂರ್ಯನನ್ನು ನುಂಗಲು ಧಾವಿಸಿದವನು ; ಇವನಿಂದ ಮುಂದೆ ನಡೆಯಬೇಕಾದ ಕಾರ್ಯಗಳಿಗೆ ಇದಿಷ್ಟೇ ಬಲವು ಸಾಲದೆಂದು ಬ್ರಹ್ಮನಿಗೆ ಅನ್ನಿಸಿತು ; ಬ್ರಹ್ಮದೇವನು ಅಷ್ಟದೇವತೆಗಳ ವರಗಳಿಂದ ಆತನನ್ನು ಇನ್ನಷ್ಟು ಬಲಿಷ್ಠನನ್ನಾಗಿ ಮಾಡಲು ಯತ್ನಿಸಿದಂತಿದೆ. ಒಂದೇ ಸಮಯದಲ್ಲಿ ಎಂಟು ಬೇರೆ ಬೇರೆ ವರಗಳನ್ನು ಪಡೆದ ವ್ಯಕ್ತಿ ಎಂದರೆ ಹನುಮಂತನಾಗಿದ್ದಾನೆ. ಶ್ರೀರಾಮನು ಕೈಕೊಂಡ ದಿಗ್ವಿಜಯದಲ್ಲಿ ಹನುಮಂತನ ಪಾಲು ದೊಡ್ಡದು. ಸೀತೆಯನ್ನು ಶೋಧಿಸುವ ನಿಮಿತ್ತವಾಗಿ, ಲಂಕೆಯನ್ನು ನಿರೀಕ್ಷಿಸಿ ಇಟ್ಟಿರಬೇಕೆಂಬ ಉದ್ದೇಶವು, ಸಮುದ್ರವನ್ನು ಉಲ್ಲಂಘಿಸುವುದರ ಹಿಂದೆ ಇತ್ತು. ಅದಕ್ಕೆ ತಕ್ಕ ಅನುಕೂಲತೆಗಳು ಉಂಟಾಗಬೇಕೆಂದು ಈ ವರಗಳನ್ನು ಕೊಡಲಾಗಿದೆ. ಇಷ್ಟೊಂದು ವರಗಳನ್ನು ಏಕಕಾಲಕ್ಕೆ ದಯಪಾಲಿಸಲು ಯೋಗ್ಯ ಕಾರಣವಿರಬೇಕೆಂದು ಇಂದ್ರನೊಡನೆ ಹನುಮಂತನ ಸಂಗ್ರಾಮ, ವಾಯುವನ್ನು ನಿರೋಧಿಸಿದ್ದು, ದೇವತೆಗಳಿಂದ ವಾಯುವಿನ ಪ್ರಾರ್ಥನೆ — ಈ ಬಗೆಯ ಹಿನ್ನೆಲೆಯನ್ನು ನಿರ್ಮಿಸುವ ವಾಲ್ಮೀಕಿಯ ಕಲಾಚಾತುರ್ಯವು ಅಪ್ರತಿಮವಾಗಿದೆ. ಹನುಮಂತನಿಗೆ ವರಗಳನ್ನು ಕೊಡುವಾಗ ಬ್ರಹ್ಮದೇವನು ಕೊಟ್ಟ ಸ್ಪಷ್ಟೀಕರಣವು ತುಂಬಾ ಮಹತ್ತ್ವದ್ದಾಗಿದೆ. ಆತನು ದೇವತೆಗಳಿಗೆ ನುಡಿದದ್ದು :

"ನೀವು ಎಲ್ಲವನ್ನು ಅರಿತಿದ್ದೀರಿ ; ತಥಾಪಿ ನಿಮಗೆ ಹಿತವಾದುದನ್ನು ಹೇಳುತ್ತೇನೆ ಕೇಳಿರಿ ! ಈ ಬಾಲಕನಿಂದ ಬಹುಕಾರ್ಯಗಳನ್ನು ಮಾಡಿಸಿಕೊಳ್ಳುವುದಿದೆ ; ಆದಕಾರಣ ವಾಯುವು ಸಂತುಷ್ಟನಾಗಬೇಕೆಂದು ನೀವು ಎಲ್ಲ ವರಗಳನ್ನು ಕೊಡಿರಿ !"[87] ಹನುಮಂತನಿಗೆ ವರವನ್ನೀಯುವದರಲ್ಲಿ ಎಷ್ಟೊಂದು ಶಿಸ್ತಿನ ಕ್ರಮವಿದೆ ; ಎಷ್ಟೊಂದು ಪೂರ್ವನಿಯೋಜನೆ ಇದೆ ಎಂಬುದು ಬ್ರಹ್ಮದೇವನ ಉದ್ಗಾರದಿಂದ ತಿಳಿದುಬರುತ್ತದೆ. ಹನುಮಂತನ ಲಂಕೆಯ ಪ್ರಯಾಣ ಸುಗಮವಾಗಬೇಕು ; ಆತನ ಪ್ರಾಣಕ್ಕೆ ಎಳ್ಳಷ್ಟೂ ಅಪಾಯವುಂಟಾಗ ಕೂಡದು ಎಂಬ ಮುನ್ನೆಚ್ಚರಿಕೆಯನ್ನು ಈ ವರಗಳನ್ನು ಕೊಡುವಾಗ ವಹಿಸಲಾಗಿದೆ. ವಜ್ರಾಸ್ತ್ರ, ವರುಣಪಾಶ, ಯಮದಂಡ, ಕುಬೇರನ ಗದೆ, ಶಂಕರನ ಆಯುಧಗಳು ಮತ್ತು ಬ್ರಹ್ಮದಂಡ ಇವುಗಳಿಂದ ಹನುಮಂತನಿಗೆ ಸಂಪೂರ್ಣ ಅವಧ್ಯತ್ವ ದೊರಕಿತು. ದೂತನೆಂದು ಕಾರ್ಯವಹಿಸಲೋಸುಗ ಅವಶ್ಯಕವಿದ್ದ ವಾಕ್ಪಟುತ್ವವನ್ನು, ನಿರಾತಂಕವಾಗಿ ಪ್ರಯಾಣಮಾಡುವ ಶಕ್ತಿಯನ್ನು, ಅಜಿಂಕ್ಯತ್ವವನ್ನು ಆತನಿಗೆ ಕೊಡಲಾಗಿದೆ. ಹನುಮಂತನಿಗೆ ದೊರೆತ ಹನ್ನೊಂದು ವರಗಳಲ್ಲಿ, ಬ್ರಹ್ಮದೇವನು ಮೂರು ವರಗಳನ್ನು ಕೊಟ್ಟಿದ್ದಾನೆ. ಹನುಮಂತನನ್ನು ಲಂಕೆಯಲ್ಲಿ ಅಸ್ತ್ರದಿಂದ ಬಂಧಿಸಿಡುವ ಪ್ರಯತ್ನ ನಡೆಯಿತು. ಬ್ರಹ್ಮನು ಕೊಟ್ಟ ವರವಿದ್ದುದರಿಂದ ಆತನು ಇದರಿಂದ ಪಾರಾದನು."[88] ಇಂದ್ರನಿಂದ ದೊರೆತ ಎರಡು ವರಗಳಲ್ಲಿಯ ಒಂದರಿಂದ ಹನುಮಂತನು 'ಇಚ್ಛಾ ಮರಣಿ'ಯಾದನು. ವಿಶ್ವಕರ್ಮನ ವರದಿಂದ ಆತನು 'ಚಿರಂಜೀವಿ'ಯಾದನು. ಯಮ, ಕುಬೇರ, ವಿಶ್ವಕರ್ಮ, ಶಂಕರ, ವರುಣ, ಅಗ್ನಿ, ಸೂರ್ಯ, ಬ್ರಹ್ಮದೇವ ಮತ್ತು ಇಂದ್ರ ಇವರ ವರಗಳಿಂದ ಲಂಕೆಯ ಪ್ರಯಾಣವು ಮತ್ತು ಅಲ್ಲಿಯ ವಾಸವು ಭಯರಹಿತ, ಆತಂಕರಹಿತವಾಯಿತು. ಯುದ್ಧ ಸನ್ನಿಹಿತವಾದಾಗ, ಲಂಕೆಯ ಬಗ್ಗೆ ಯಾವ ರೀತಿಯ ವಿಭಾಟನ್ನು ಮಾಡಬೇಕು ? ಯಾವ ಬಗೆಯ ಧೋರಣೆಯನ್ನಿಟ್ಟುಕೊಳ್ಳಬೇಕೆಂಬ ಬಗ್ಗೆ, ಹನುಮಂತನ ಲಂಕೆಯ ಪ್ರಯಾಣ, ಲಂಕೆಯ ಸಂಪೂರ್ಣ ಮಾಹಿತಿಯನ್ನರಿತುಕೊಂಡು ಸುಖರೂಪವಾಗಿ ಮರಳುವಿಕೆ ಶ್ರೀರಾಮನಿಗೆ ಸಹಾಯಕಾರಿಯಾಗುವುದಿತ್ತು. ಈ ಕಾರಣದಿಂದಲೇ ಮೇಲಿನ ವರಗಳನ್ನು ಕೊಡಲಾಗಿತ್ತು. ಹನುಮಂತನಿಗೆ ಒಂದು ಶಾಪ ಸಿಕ್ಕಿತ್ತು ; ರಾಮಾಯಣದ ಕಥೆಯ ದೃಷ್ಟಿಯಿಂದ ಅದಕ್ಕೆ ಮಹತ್ತ್ವವಿಲ್ಲ.

## ಬ್ರಹ್ಮದೇವನು ಕೊಟ್ಟ ಶಾಪ / ವರಗಳು

ಶ್ರೀರಾಮಲಕ್ಷ್ಮಣರ ಹುಟ್ಟು ಕೂಡ ಶಾಪ-ವರಗಳಿಂದ ಸುತ್ತಿಕೊಂಡಿದೆ. ಭೃಗುಮುನಿಯ ಶಾಪದಿಂದ ಶ್ರೀವಿಷ್ಣುವು ಮಾನವಾವತಾರವನ್ನು ತಳೆಯಬೇಕಾಯಿತು. ದೇವತೆಗಳಿಂದ ಸಾವಿನ ಭಯವಿರದ ರಾವಣನು ಸಂತತವಾಗಿ ದೇವತೆಗಳನ್ನು ಪೀಡಿಸುತ್ತಿದ್ದನು. ಈತನನ್ನು ವಧಿಸಲೋಸುಗ ದೇವತೆಗಳು ಶ್ರೀವಿಷ್ಣುವನ್ನು ಪ್ರಾರ್ಥಿಸಿದರು. ಮಕ್ಕಳು, ಮೊಮ್ಮಕ್ಕಳು, ಅಮಾತ್ಯರು ಇವರನ್ನೊಳಗೊಂಡು ರಾವಣನನ್ನು ವಧಿಸಿ, ಹನ್ನೊಂದು ಸಾವಿರ ಸಂವತ್ಸರಗಳವರೆಗೆ ಭೂಲೋಕದಲ್ಲಿ ನೆಲಸಿ, ಪೃಥ್ವಿಯನ್ನು ಪರಿಪಾಲಿಸುವ ಹೊಣೆಯನ್ನು ಹೊತ್ತು, ಶ್ರೀವಿಷ್ಣುವು ದೇವತೆಗಳನ್ನು ಸಂತೈಸಿದನು. ಇದು ಕೇವಲ ಆಶ್ವಾಸನೆಯಾಗಿರಲಿಲ್ಲ. ಇದೊಂದು ವರವಾಗಿತ್ತು.[49] ದಶರಥನು ಕೈಕೊಂಡ ಪುತ್ರಕಾಮೇಷ್ಟಿಯಜ್ಞ ; ಆ ಯಜ್ಞದಿಂದ ಪ್ರಾಪ್ತವಾದ ಪಾಯಸ—ಇವು ಶ್ರೀರಾಮಲಕ್ಷ್ಮಣರ ಹುಟ್ಟಿಗೆ ಸಂಬಂಧವುಳ್ಳ ಸಂಗತಿಗಳಾಗಿವೆ. ಪಾಯಸಪ್ರಾಪ್ತಿಯು ವರವೆಂದಿರದೇ ಅದು ಯಜ್ಞದ ಫಲವಾಗಿತ್ತು.

ಬ್ರಹ್ಮದೇವನು ಅಖಿಲ ಬ್ರಹ್ಮಾಂಡದ ಕರ್ತನು, ವಿಧಾತನು, ಸರ್ವಾಧಿಕಾರಿ, ಸರ್ವಶ್ರೇಷ್ಠನೂ ಆಗಿರುವದರಿಂದ ಆತನಿಗೆ ಯಾರಿಂದಲೂ ಶಾಪದ ಭಯವಿರಲಿಲ್ಲ. ವರಗಳೂ ಆತನಿಗೆ ಬೇಕಿರಲಿಲ್ಲ. ಈತನು ಇತರರಿಗೆ ಕೊಟ್ಟ ಶಾಪ/ವರಗಳು ಪರಿಶೀಲಿಸುವಂತಿವೆ. ದೇವತೆಗಳು ಶಾಪಗಳನ್ನು ನುಡಿದ ಸಂದರ್ಭಗಳು ತೀರ ಕಡಿಮೆ ; ವಿಧಿ ಇಲ್ಲದೇ ಬ್ರಹ್ಮನು ಶಾಪಗಳನ್ನು ಕೊಡಬೇಕಾಯಿತು. ಒಂದು ಶಾಪವು ರಾವಣನಿಗೆ ಆಗಿದ್ದು, ಇನ್ನೊಂದು ಕುಂಭಕರ್ಣನಿಗೆ ಆಗಿದೆ. ಮಿತಿ ಇಲ್ಲದ ರಾವಣನ ಕಾಮವಾಸನೆಯನ್ನು ಹತ್ತಿಕ್ಕಲೆಂದು ಕೊಟ್ಟ ಶಾಪವು ಕಥೆಯ ದೃಷ್ಟಿಯಿಂದ ಮಹತ್ವದ್ದಿದೆ. ಇದನ್ನು ಮುಂದೆ ವಿವರಿಸಲಾಗಿದೆ. ಈ ಶಾಪವನ್ನು ಕಥೆಯಿಂದ ತೆಗೆದುಹಾಕುವಂತಿಲ್ಲ. ಕುಂಭಕರ್ಣನು ಪ್ರಚಂಡಶೂರನು ; ಅಸಾಧ್ಯಕೃತ್ಯಗಳನ್ನು ಎಸಗುವವನು ; ಆತನಿಗೆ ದೀರ್ಘನಿದ್ರೆಯ ಶಾಪವನ್ನು ಕೊಟ್ಟು ಆತನ ಬಲವನ್ನು ನಿರೋಧಿಸಲಾಗಿದೆ. ಇದು ಅವಶ್ಯಕವಾಗಿತ್ತು. ಕುಂಭಕರ್ಣನ ಬಲವನ್ನು ನಿರೋಧಿಸಿದ್ದರಿಂದ ರಾವಣನ ಸಾಮರ್ಥ್ಯವನ್ನು ಉಡುಗಿಸಿದಂತಾಗಿದೆ. ರಾವಣನಿಗೆ ಕಟ್ಟಳೆಯ ಶಾಪ ದೊರಕಿತ್ತು. ತನ್ನ ನಡತೆಯನ್ನು ತಿದ್ದಿಕೊಳ್ಳುವ ಅವಕಾಶ ರಾವಣನಿಗೆ ಇತ್ತು. ರಾವಣ-ಕುಂಭಕರ್ಣರಿಗೆ ಕಠೋರಶಿಕ್ಷೆಯನ್ನು ವಿಧಿಸಬೇಕಿತ್ತು ; ಆ ದೃಷ್ಟಿಯಿಂದ ಅವರಿಗೆ ದೊರೆತ ಶಾಪಗಳು ತೀರ ಮೃದುವಾಗಿವೆ.

ಶಾಪಗಳನ್ನು ನುಡಿಯುವಾಗ ವಹಿಸಿದ ಎಚ್ಚರಿಕೆಯನ್ನು ಬ್ರಹ್ಮನು ವರಗಳನ್ನು ಕೊಡುವಾಗ ವಹಿಸಿದಂತಿಲ್ಲ. ವರಗಳಿಂದ ಆಗಬಹುದಾದ ಪರಿಣಾಮಗಳ ಬಗ್ಗೆ ಮುಂದಾಲೋಚನೆ ಮಾಡದೆ ಬ್ರಹ್ಮನು ವರಗಳನ್ನು ಕೊಟ್ಟಂತಿದೆ ; ಅನಂತರ ಯೋಚನೆಗೆ ಈಡಾಗಿದ್ದಾನೆ. ಇನ್ನಿತರ ದೇವತೆಗಳು ಕೂಡ ವರಗಳನ್ನೀಯುವುದರಲ್ಲಿ ಮುಂದಾಗಿರುವರಲ್ಲದೆ ಮುಕ್ತಹಸ್ತರಾದಂತಿದೆ. ಬ್ರಹ್ಮನಿತ್ತ ವರಗಳನ್ನು ನಿರೀಕ್ಷಿಸಿದರೆ ಆತನ ಅಜಾಗರೂಕತೆಯೂ ಕಂಡುಬರುತ್ತದೆ. ಈತನು ಕುಂಭಕರ್ಣನಿಗೆ ವರವನ್ನು ಕೊಡಲು ಸಿದ್ಧನಾದಾಗ ದೇವತೆಗಳು ಆತನನ್ನು ಪರಾವೃತ್ತಗೊಳಿಸಲು ಯತ್ನಿಸಿದರು. ರಾವಣನಿಗೆ ಲಭಿಸಿದಂತೆ ಕುಂಭಕರ್ಣನಿಗೆ ವರವು ದೊರೆತಿದ್ದರೆ ಖಂಡಿತವಾಗಿ ಸರ್ವನಾಶವಾಗಬಹುದಿತ್ತು. ರಾಮಾಯಣದಲ್ಲಿದ್ದ ವರಗಳಲ್ಲಿ ದೇವತೆಗಳಿತ್ತ ವರಗಳು ಅರವತ್ತು ; ಅದರಲ್ಲಿ ಬ್ರಹ್ಮನ ವರಗಳು ಇಪ್ಪತ್ತಾಗಿವೆ. ಬ್ರಹ್ಮನ ವರಗಳ ಲಾಭವನ್ನು ರಾಕ್ಷಸರು ಹೆಚ್ಚಾಗಿ ಪಡೆದಿದ್ದಾರೆ. ಅದಲ್ಲದೇ ದೇವತೆಗಳಿಗೂ ಮಾನವರಿಗೂ ತಿರ್ಯಕರಿಗೂ ಬ್ರಹ್ಮನ ವರಗಳ ಲಾಭವಾಗಿದೆ.

ಬ್ರಹ್ಮನು ಮೇಘನಾದನಿಗೆ ಕೊಟ್ಟ[50] ವರದ ಉಲ್ಲೇಖವು ಬೇರೆ ಕಡೆಗೆ ಬಂದಿದೆ. ಅದರ ಬಗ್ಗೆ ಹೆಚ್ಚಿಗೆ ವಿಚಾರ ಮಾಡುವಂತಿದೆ. ಈ ವರದ ಸ್ವರೂಪವು ತುಂಬ ಭಿನ್ನವಾಗಿದೆ. 'ವಧೆ' 'ಸಾವು' ಎಂಬುದು ವರದ ಒಳ್ಳೆಯ ಭಾಗವೆನಿಸದು ; ಬೇಡಿಕೊಂಡ ವರದಲ್ಲಿಯಂತೂ ಇದು ಅಸಹಜ, ಅಸಾಧ್ಯವೆನ್ನಿಸುತ್ತದೆ. ಮೇಘನಾದನು ಬೇಡಿಕೊಂಡ ವರವು ಕಟ್ಟಳೆಯದಿತ್ತು. ಅದು ಯಾಚಿತ ವರ ; ತನ್ನ ಸಾವನ್ನು ಯಾರೂ ವರವಾಗಿ ಬೇಡುವದಿಲ್ಲ ; ಈ ರೀತಿಯ ವರವನ್ನು ಯಾರೂ ಕೊಟ್ಟಿಲ್ಲ. ಈ ರೀತಿಯ ಯಾಚಿತ ವರದ ಹಿನ್ನೆಲೆಯನ್ನು ಪರಿಶೀಲಿಸಬೇಕು. ಇಂದ್ರನನ್ನು ಸೋಲಿಸಿ, ಸೆರೆಹಿಡಿದು ಮೇಘನಾದನು ಆತನನ್ನು ಲಂಕೆಗೆ

ಒಯ್ದಿದ್ದನು. ದೇವತೆಗಳ ರಾಜನಾದ ಇಂದ್ರನು ರಾಕ್ಷಸರ ಸೆರೆಯಾಳಾದ್ದರಿಂದ ದೇವತೆಗಳ ಮತ್ತು ಬ್ರಹ್ಮದೇವನ ಪ್ರತಿಷ್ಠೆಗೆ ಕುಂದು ಬಂದಿತು. ಯಾವುದೇ ಉಪಾಯದಿಂದ ಆತನನ್ನು ಬಿಡಿಸುವದು ಆವಶ್ಯಕ ವಾಗಿತ್ತು. ಕಪ್ಪಕಾಣಿಕೆಗಳನ್ನು ತೆತ್ತು ಇಂದ್ರನನ್ನು ಬಿಡಿಸುವ ಹಂಚಿಕೆ ಒಂದಿತ್ತು. ಆಗ ಬ್ರಹ್ಮನು ನೇರವಾಗಿ ಮೇಘನಾದನನ್ನು ಈ ರೀತಿ ಪ್ರಶ್ನಿಸಿದನು :

"ಈ ಮಹೇಂದ್ರನನ್ನು ನೀನು ಬಿಟ್ಟುಬಿಡು ! ಪ್ರತಿಯಾಗಿ ದೇವತೆಗಳಿಂದ ನಿನಗೇನು ಬೇಕು ?"[91] ಈ ರೀತಿ ಪ್ರಶ್ನಿಸಿದ್ದು ಸರಳ ಲೇವಾದೇವಿಯ ವ್ಯವಹಾರದಂತಿದೆ. ಇಂದ್ರನನ್ನು ಬಿಟ್ಟುಕೊಡಲು ತಾನು 'ಅಮರ' ಚಿರಂಜೀವಿಯಾಗಬೇಕೆಂದು ಮೇಘನಾದನು ಕೇಳಿದನು. ಮೃತ್ಯುಲೋಕದಲ್ಲಿ ಅಮರ ಪದವು ಸಾಧ್ಯವಿಲ್ಲ ; ಎಂದು ಹೇಳಿ ಈ ಅಮರತ್ವಕ್ಕೆ ಮೇರೆ ಹಾಕಲಾಯಿತು. ಆಗ ಇಂದ್ರಜಿತನು ಯಾವ ಸನ್ನಿವೇಶದಲ್ಲಿ ತನ್ನ ವಧೆಯಾಗಬೇಕು-ಆಗಕೂಡದು ! ಎಂಬುದನ್ನು ವಿವರಿಸಿದನು. ಬ್ರಹ್ಮನು ಅಂಥ ವರವನ್ನು ಕೊಟ್ಟನು (ಯುದ್ಧಕಾಂಡ, ೮೫).

"ಹೇ ಇಂದ್ರಜಿತನೇ ! ನಿಕುಂಭಿಲೆಗೆ ಹೋಗಿ ನೀನು ಹವನವನ್ನಾಚರಿಸುವ ಮೊದಲು ಶಸ್ತ್ರಧಾರಿಯಾದ ನಿನ್ನ ಜೊತೆ ಯಾವ ಶತ್ರುವು ಯುದ್ಧಮಾಡುವನೋ ಆತನಿಂದ ನಿನ್ನ ವಧೆಯಾಗುವದು !"[92] ಈ ಸಂದರ್ಭ ವೊಂದನ್ನು ಬಿಟ್ಟು ನೀನು ಚಿರಂಜೀವಿಯಾಗುವೆ ಎಂಬ ಕಟ್ಟಳೆಯ ವರವಾಗಿತ್ತು. ಆ ಕಟ್ಟಳೆಯ ಪಾಲನೆ ಆಗುವ ಮುನ್ನವೇ ಆತನನ್ನು ಸಾಯಿಸುವದು ಉಚಿತವೆಂದು ವಿಭೀಷಣನು ಶ್ರೀರಾಮನಿಗೆ ತಿಳಿಸಿದನು.

ವರಗಳನ್ನು ಕೊಡುವಾಗ ಬ್ರಹ್ಮನು ಜಾಗರೂಕನಿರದಿದ್ದರೂ ಒಮ್ಮೆ ಉಚ್ಚರಿಸಿದ ಶಬ್ದಗಳು ಎಂದಿಗೂ ಸುಳ್ಳಾಗಬಾರದೆಂದು ಎಚ್ಚರಿಕೆಯನ್ನು ಆತನು ವಹಿಸಿದ್ದಾನೆ. ತಾನು ಕೊಟ್ಟ ವರವು ನಿಷ್ಫಲವಾಗಲಿದೆ ಎಂದು ಕಂಡುಬಂದಾಗ ಕೂಡಲೇ ಮಧ್ಯಸ್ಥಿಕೆ ಮಾಡಿ, ಹೊಂದಾಣಿಕೆ ಮಾಡುತ್ತಾನೆ. ಆವಶ್ಯಕವೆನಿಸಿದಲ್ಲಿ ತನ್ನ ವಿಶೇಷ ಅಧಿಕಾರವನ್ನು ಬಳಸುತ್ತಾನೆ. ಬ್ರಹ್ಮನು, ನಿವಾತಕವಚ ಮತ್ತು ರಾವಣ, ಇವರಲ್ಲಿ ನಡೆದ ಕಾಳಗದಲ್ಲಿ ಒಪ್ಪಂದವನ್ನು ಮಾಡಿಕೊಟ್ಟನು. ರಾವಣ ಮತ್ತು ಯಮ ಇವರ ಯುದ್ಧದಲ್ಲಿ ಯಮನು ಸೋಲನ್ನು ಒಪ್ಪುವಂತೆ ಮಾಡಿದನು.[93]

ಶ್ರವಣನ ಶಾಪದ ಭಯವು ದಶರಥನಿಗಿತ್ತು, ಬ್ರಹ್ಮದೇವನ ಹಾಗೂ ನಲಕೂಬರರ ಶಾಪಗಳ ಭಯವು ರಾವಣನನ್ನು ಸತತವಾಗಿ ಕಾಡುತ್ತಿತ್ತು. ಅಹಲ್ಯ, ಕಬಂಧ, ವಿರಾಧ ಇವರುಗಳಿಗೆ ದೊರೆತ ಶಾಪಗಳನ್ನು, ಶ್ರೀರಾಮನ ಹಿರಿಮೆಯನ್ನು ಎತ್ತಿತೋರಿಸಲೆಂದು ನಿಯೋಜಿಸಲಾಗಿದೆ. ಲಂಕಾನಗರಕ್ಕೆ ದೊರೆತ ಶಾಪದ ಮೂಲಕ, ರಾವಣನ ವಧೆಯ ಸಮಯವು ಸಮೀಪಿಸಿದ ಸೂಚನೆಯನ್ನು ಕೊಡಲಾಗಿದೆ.

## ಸೀತೆಯ ಪಾತಿವ್ರತ್ಯ

ಸೀತೆಯ ಪಾತಿವ್ರತ್ಯವು ರಾಮಾಯಣದ ಮಾನನಿಧಿಯಾಗಿದೆ. ಕಥೆಯ ದೃಷ್ಟಿಯಿಂದಲೂ ಪಾತಿವ್ರತ್ಯದ ಮಹತ್ವವು ಅಸಾಧಾರಣವಾಗಿದೆ. ಪಾತಿವ್ರತ್ಯವೆಂದರೆ ಒಂದು ದೊಡ್ಡ ತಪಸ್ಸು; ಆ ತಪಸ್ಸಿನಿಂದಲೇ ಪತಿವ್ರತೆಯ ನುಡಿಗಳಿಗೆ ಬಲ ; ಅವಳು ಶಾಪ ಅಥವಾ ವರಗಳನ್ನು ಕೊಡಬಲ್ಲಳು ! ಎಂಬ ದೃಢನಂಬಿಕೆ ಇದೆ. ಸೀತೆಗಿದ್ದ ಪತಿವ್ರತಾಸಾಮರ್ಥ್ಯದ ಬಗ್ಗೆ ಆಲೋಚಿಸುವ ಮೊದಲು ಪ್ರಾಚೀನಕಾಲದ ಸಾಮಾಜಿಕ ನಿಲುವು, ನಿಯಮ, ಪಾತಿವ್ರತ್ಯ, ಶೀಲ, ನೀತಿವಂತಿಕೆಗಳನ್ನು ಪರಾಮರ್ಶಿಸುವದು ಸೂಕ್ತವೆಂದೆನ್ನಿಸುತ್ತದೆ. 'ಮನಸ್ಸು, ಮಾತು, ದೇಹ—ಈ ಮೂರು ಬಗೆಯಿಂದ ಪತಿಯ ಬಗ್ಗೆ ಅಚಲನಿಷ್ಠೆಯನ್ನಿಟ್ಟುಕೊಂಡವಳೆಂದರೆ ಪತಿವ್ರತೆ' ಎಂದು ಮನುವು ಸಾರಿದ್ದಾನೆ.[94]

"ಭೂಮಂಡಲದಲ್ಲಿಯ ಎಲ್ಲ ತೀರ್ಥೋದಕಗಳು ಸತಿಯ ಪಾದದಡಿಯಲ್ಲಿವೆ ; ಎಲ್ಲ ದೇವತೆಗಳ ಹಾಗೂ ಋಷಿಮುನಿಗಳ ತೇಜಸ್ಸು ಸತಿಯಲ್ಲಿದೆ" ಎಂದು ಬ್ರಹ್ಮವೈವರ್ತಪುರಾಣದಲ್ಲಿ ಪತಿವ್ರತೆಯನ್ನು ಗೌರವಿಸಲಾಗಿದೆ.[95] ಅನಸೂಯೆಯ ಪಾತಿವ್ರತ್ಯವನ್ನು ಪರೀಕ್ಷಿಸಲೋಸುಗ ಬ್ರಹ್ಮ, ವಿಷ್ಣು, ಮಹೇಶ ಈ ಮೂವರು "ನಗ್ನಳಾಗಿ ನಮಗೆ ಭಿಕ್ಷೆ ಹಾಕು !" ಎಂದು ಅವಳಿಗೆ ನುಡಿದರು. ಅವಳು ಈ ಮೂವರನ್ನು ಕೂಸುಗಳನ್ನಾಗಿ ಮಾಡಿ ಅವರ ಇಚ್ಛೆಯನ್ನು ಪೂರೈಸಿದಳು. ಪೌಷ್ಯನ ರಾಣಿಯನ್ನು ಕಾಣಲೆಂದು ಉತ್ತಂಕನು ಅವಳ ಬಳಿ ಬಂದಾಗ ಅವಳು ಅದೃಶ್ಯಳಾದಳು. ಗೊತ್ತುಮಾಡಿದ ಮದುವೆಯಾಗಲಿರುವ ವರನು ಅಂಧನಾಗಿ

ದ್ದಾನೆ ಎಂದು ತಿಳಿದುಬಂದನಂತರ ಗಾಂಧಾರಿಯ್ಯು, ತನ್ನ ಪತಿಯ ಬಗ್ಗೆ ವಿಕಲ್ಪವು ಮನಸ್ಸಿನಲ್ಲಿ ಮೂಡಬಾರದೆಂದು, ತನ್ನ ಕಣ್ಣುಗಳನ್ನು ಸದಾಕಾಲಕ್ಕಾಗಿ ಕಟ್ಟಿಕೊಂಡಳು.

ಪತಿವ್ರತೆಯು ಪರಪುರುಷನ ಕಣ್ಣಿಗೆ ಬೀಳಬಾರದೆಂಬ ಕಲ್ಪನೆಯು ನಂತರದ ಕಾಲದ್ದಿರಬೇಕು. ಋಗ್ವೇದದಲ್ಲಿ **'ಸುಮಂಗಲರಿಯಂ ವಧುರಿಮಾಂ ಸಮೇತ ಪಶ್ಯತ ।'** ಎಂಬ ಉಲ್ಲೇಖವಿದೆ. ಶ್ರೀರಾಮನೊಡನೆ ವನವಾಸಕ್ಕೆ ತೆರಳಿದ ಸೀತೆಯ ಬಗ್ಗೆ ಈ ರೀತಿ ವರ್ಣಿಸಿದ್ದಾನೆ :

**ಈ ಮೊದಲು ಯಾವ ಸೀತೆಯನ್ನು ಆಕಾಶದಲ್ಲಿ ಸಂಚರಿಸುತ್ತಿರುವವರು ನೋಡಲು ಅಸಾಧ್ಯವಿತ್ತೋ ಆ ಸೀತೆಯನ್ನು ಬೀದಿಯ ಜನರು ನೋಡುತ್ತಿದ್ದಾರೆ.**[96] ಮಹಾಭಾರತದಲ್ಲಿಯ ಸ್ತ್ರೀಯರ ಬಗ್ಗೆಯೂ ಇದೇ ರೀತಿ ಹೇಳಲಾಗಿದೆ :

**ಪೂರ್ವದಲ್ಲಿ ಯಾವ ಸ್ತ್ರೀಯರನ್ನು ಚಂದ್ರನಾಗಲೀ ಸೂರ್ಯನಾಗಲೀ ಕಂಡಿಲ್ಲವೋ ಅಂಥವರು ಶೋಕಾರ್ತರಾಗಿ ವನಕ್ಕೆ ಹೊರಟ ಕೌರವಶ್ರೇಷ್ಠರನ್ನು ಅನುಸರಿಸಿ ರಾಜಬೀದಿಯಲ್ಲಿ ನಡೆದಿದ್ದಾರೆ.**[97] ಈ ರೀತಿ ಆಶ್ರಮಪರ್ವದಲ್ಲಿ ಕೊಡಲಾಗಿದೆ. ಮೇಲಿನ ವರ್ಣನೆಯು ಕೇವಲ ಅರಸರ ಸ್ತ್ರೀಯರ ಬಗ್ಗೆ ಇದೆ. ಈ ಉದಾಹರಣೆಯಿಂದ ರಾಮಾಯಣ-ಮಹಾಭಾರತ ಕಾಲದ ಸ್ತ್ರೀಯರು ಪರಪುರುಷರ ಕಣ್ಣಿಗೆ ಬೀಳುತ್ತಿರಲಿಲ್ಲ ಎಂದು ತೀರ್ಮಾನಿಸುವದು ಸರಿಯಲ್ಲ. ಅಸರುಮನೆತನದ ನಾರಿಯರು ಸರ್ವಸಾಮಾನ್ಯರ ಕಣ್ಣಿಗೆ ಬೀಳುವದು ದುರ್ಲಭವಿತ್ತೆಂದು ಅನ್ನಬಹುದು. ಪ್ರಾಚೀನ ಸಾಹಿತ್ಯದಲ್ಲಿ ಪತಿವ್ರತೆಯರಿಗೆ 'ಅಸೂರ್ಯಂಪಶ್ಯಾ' ಎಂಬ ವಿಶೇಷಣವಿರುತ್ತಿತ್ತು.

ಪತಿಯ ಆಜ್ಞೆಯಿಲ್ಲದೇ ಮನೆಯಾಚೆ ಹೋಗುವದು ; ಅವಗುಂಠನ ವಸ್ತ್ರವಿರದೇ ಹೊರಗೆ ಹೋಗುವುದು ; ತ್ವರೆಯ ನಡಿಗೆ ; ವ್ಯಾಪಾರಸ್ಥ, ಸನ್ಯಾಸಿ, ವೃದ್ಧ ಹಾಗೂ ವೈದ್ಯ ಇವರ ಹೊರತಾಗಿ ಪುರುಷರೊಡನೆ ಸಲ್ಲಾಪ; ತೊಡೆ, ಕೆಳಹೊಟ್ಟೆ, ಸ್ತನಗಳ ಪ್ರದರ್ಶನ ; ಗಟ್ಟಿಯಾಗಿ ನಗುವದು ; ಧೂರ್ತ, ಮಾಟಗಾರ್ತಿಯರು ಹಾಗೂ ದುಃಶೀಲಸ್ತ್ರೀಯರ ಸಂಪರ್ಕ ಮೊದಲಾದವು ಗೃಹಿಣಿಗೆ ನಿಷೇಧಿಸಲ್ಪಟ್ಟಿದ್ದವೆಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿದೆ. ಪರಪುರುಷನನ್ನು ಕುರಿತು ಯೋಚಿಸುವದು ; ಆತನ ಭೇಟಿಗಾಗಿ, ಸ್ಪರ್ಶಕ್ಕಾಗಿ ಕಾತರಗೊಂಡಿರುವದು ; ಇವೆಲ್ಲ ಸಂಗತಿಗಳು ತತ್ಕಾಲೀನ ಪಾತಿವ್ರತ್ಯದ ಕಲ್ಪನೆಗೆ ಹೊಂದಿಕೊಂಡಿರಲಿಲ್ಲ. ಹನುಮಂತನು ಲಂಕೆಯಲ್ಲಿ ಸೀತೆಯನ್ನು ಭೇಟಿಯಾದನು. ಸ್ವಬಲದಿಂದ ಸಮುದ್ರವನ್ನು ದಾಟಿ ಸೀತೆಯನ್ನು ಸುಖರೂಪವಾಗಿ ಶ್ರೀರಾಮನ ಬಳಿ ತಲುಪಿಸುವ ಆಶ್ವಾಸನೆಯನ್ನು ಸೀತೆಗೆ ಕೊಟ್ಟನು ; ಆದರೆ ಸೀತೆ ಅವನೊಡನೆ ಹೋಗಲು ಕೆಲವು ಕಾರಣಗಳಿಂದ ಸಮ್ಮತಿಸಲಿಲ್ಲ. ಅವುಗಳಲ್ಲಿಯ ಒಂದು ಕಾರಣವು ಈ ರೀತಿ :

"ಪತಿಯಲ್ಲಿ ಪರಮಭಕ್ತಿ ಇರುವದರಿಂದ ಶ್ರೀರಾಮನ ಹೊರತು ಯಾರನ್ನೂ ಸ್ಪರ್ಶಿಸುವ ಇಚ್ಛೆಯು ನನಗಿಲ್ಲ. ರಾವಣನ ಸ್ಪರ್ಶವು ನನಗಾಗಿದ್ದರೂ ಅದು ನನ್ನ ಮನಸ್ಸಿನ ವಿರುದ್ಧ ನಡೆದಿದೆ. ನಾನು ಅನಾಥೆ, ಅಬಲೆ, ಪರಾಧೀನಳು ; ಹೀಗಿರುವಾಗ ನಾನು ಏನು ಮಾಡಬಲ್ಲೆ ?"[98] ಆಕೆಯ ಮನಸ್ಸಿನ ವಿರುದ್ಧವಾಗಿ ರಾವಣನ ಸ್ಪರ್ಶವಾಗಿದೆ ; ವಿರಾಧನ ಸ್ಪರ್ಶ ನಡೆದಿದೆ ; ಕಾಗೆಯ ರೂಪವನ್ನು ತಾಳಿದ ಇಂದ್ರಪುತ್ರನ ಸ್ಪರ್ಶವಾದ ಸ್ಪಷ್ಟ ಉಲ್ಲೇಖವು ರಾಮಾಯಣದಲ್ಲಿದೆ. ಪತಿವ್ರತೆಗೆ ಪರಪುರುಷನ ಸ್ಪರ್ಶವು ನಿಷಿದ್ಧವಿತ್ತೆಂಬುದು ಸ್ಪಷ್ಟವಾಗುತ್ತದೆ.

## ಸ್ತ್ರೀಯರ ಶಾಪ / ವರಗಳು

ಸೀತೆಯ ಪಾತಿವ್ರತ್ಯದ ಬಗ್ಗೆ ವಿಚಾರ ಮಾಡುವುದೆಂದರೆ ರಾಮಾಯಣದಲ್ಲಿಯ ಸ್ತ್ರೀಯರು ಕೊಟ್ಟ ಶಾಪ / ವರಗಳನ್ನು ಪರಿಶೀಲಿಸುವುದು ಅತ್ಯಗತ್ಯ. ಸ್ತ್ರೀಯರು ಕೊಟ್ಟ ಶಾಪಗಳ ಸಂಖ್ಯೆ ಏಳು ; ವರಗಳ ಸಂಖ್ಯೆ ಐದು. ಪಂಚಪತಿವ್ರತೆಯರಲ್ಲಿಯ ಮೂವರಾದ ಅಹಲ್ಯೆ, ಮಂಡೋದರಿ ಮತ್ತು ಸೀತೆ ಇವರು ಯಾರಿಗೂ ಶಾಪ/ವರಗಳನ್ನು ಕೊಟ್ಟಿಲ್ಲ. ಪಾತಿವ್ರತ್ಯದಿಂದ ಶಾಪ/ವರಗಳನ್ನೀಯುವ ಅರ್ಹತೆಯುಂಟಾಗುತ್ತಿತ್ತೆಂದು ಹೇಳಲಾಗುವುದಿಲ್ಲ. ಕುಶಕನ್ಯೆ ಮತ್ತು ವೇದವತಿ ಇವರು ಅವಿವಾಹಿತರಿದ್ದರು. ಅಂದಬಳಿಕ

ಅವರಲ್ಲಿದ್ದ ಈ ಸಾಮರ್ಥ್ಯವು ಪಾತಿವ್ರತ್ಯದಿಂದಲ್ಲ ಎಂಬುದು ಖಂಡಿತ. (ವೇದವತಿಯು ಶಾಪ ಕೊಡದೇ ರಾವಣನ ವಧೆಯ ಸಲುವಾಗಿ ಶಾಪದಷ್ಟೇ ಪ್ರಖರ ಪ್ರತಿಜ್ಞೆಯನ್ನು ಮಾಡಿದ್ದಾಳೆ.) ಅಷ್ಟೇ ಅಲ್ಲದೆ, ಅವರು ಪ್ರತ್ಯಕ್ಷವಾಗಿ ಶಾಪಗಳನ್ನು ಕೊಟ್ಟಿಲ್ಲ ; ಆದರೆ ಅವರ ಬಳಿ ಅಷ್ಟೊಂದು ಸಾಮರ್ಥ್ಯವಿತ್ತೆಂಬ ಉಲ್ಲೇಖ ಮಾತ್ರ ಕಂಡುಬರುತ್ತದೆ. ಶ್ರೀರಾಮನಿಗೆ ಯುವರಾಜ್ಯಾಭಿಷೇಕವು ನಡೆಯಲಿದೆ ಎಂಬ ಸುವಾರ್ತೆಯನ್ನು ಮಂಥರೆಯು ಪ್ರಥಮವಾಗಿ ಕೈಕೇಯಿಗೆ ತಿಳಿಸಿದಳು. ಸಂತುಷ್ಟಳಾದ ಕೈಕೇಯಿಯು ಮಂಥರೆಗೆ ವರವನ್ನು ಕೊಡಬಯಸಿದಳು. ಮಂಥರೆಯು ಆ ವರವನ್ನು ಸ್ವೀಕರಿಸಲಿಲ್ಲ ; ಅದು ಬೇರೆ ಸಂಗತಿಯಾಗಿದೆ. ಕೈಕೇಯಿಯ ಆಚರಣೆಯನ್ನು ವೀಕ್ಷಿಸಿದರೆ ಅವಳನ್ನು ಪತಿವ್ರತೆಯೆಂದು ಗ್ರಹಿಸುವಂತಿಲ್ಲ. ಪಾರ್ವತಿಯು ದೇವತೆಗಳಿಗೆ, ಪೃಥ್ವಿಗೆ ಹಾಗೂ ಕುಬೇರನಿಗೆ ಶಾಪಗಳನ್ನು ಕೊಟ್ಟಿದ್ದಾಳೆ. ರಾಕ್ಷಸಿ ಮತ್ತು ಇಲರಾಜನಿಗೆ ಅರ್ಧ ವರ — ಕೊಟ್ಟಿದ್ದಾಳೆ. ಉಮೆಯು ನಿಷ್ಠಾವಂತ ಪತಿವ್ರತೆ, ಕಠೋರ ತಪಶ್ಚರ್ಯೆಯನ್ನು ಕೈಕೊಂಡವಳು. ಹುಟ್ಟಿನಿಂದಲೂ ಅವಳು ದೇವತೆಯಾಗಿದ್ದಳು. ಅವಳು ಕೊಟ್ಟ ಶಾಪ / ವರಗಳು ಪಾತಿವ್ರತ್ಯದ ಫಲದಿಂದ ಎಂದು ಖಂಡಿತ ಹೇಳಲಾಗುವುದಿಲ್ಲ. ಪಾತಿವ್ರತ್ಯದ ಬಲದಿಂದ ಅವಳು ಶಾಪ / ವರಗಳನ್ನು ಕೊಟ್ಟಳೆಂಬ ಉಲ್ಲೇಖವು ವಾಲ್ಮೀಕಿರಾಮಾಯಣದಲ್ಲಿ ಇಲ್ಲ. ಹೇಮಾ ಎಂಬುವಳು ತನ್ನ ಸಖಿಯಾದ ಸ್ವಯಂಪ್ರಭೆಗೆ ಒಂದು ವರವನ್ನು ಕೊಟ್ಟ ದಾಖಲೆ ಇದೆ.[99] ಅವಳು ತಪಸ್ಸನ್ನು ಮಾಡಿದ್ದಳೋ ಇಲ್ಲವೋ ಎಂಬುದು ಸ್ಪಷ್ಟವಿಲ್ಲ. ಅವಳು ಉಚ್ಚಯೋನಿಯಲ್ಲಿ ಜನಿಸಿದ ಅಪ್ಸರೆಯಾದ್ದರಿಂದ ಈ ಅರ್ಹತೆಯು ಅವಳಿಗೆ ದೊರೆತಿರಬೇಕು.

ಅನಸೂಯೆಯು ಓರ್ವ ಶ್ರೇಷ್ಠ ಪತಿವ್ರತೆ. ಸೀತೆಯ ಭೇಟಿಯಾದಾಗ ಅವಳಿಗೆ ಪಾತಿವ್ರತ್ಯದ ಮಹಿಮೆಯನ್ನು ಈ ರೀತಿ ವಿವರಿಸಿದ್ದಾಳೆ : "ಅನುಕೂಲವೇ ಇರಲಿ, ಪ್ರತಿಕೂಲವೇ ಇರಲಿ, ಯಾವ ಸ್ತ್ರೀಯರಿಗೆ ಪತಿಯು ಪ್ರಿಯವಾಗಿರುವನೋ ಆ ಸ್ತ್ರೀಯರು ಫಲದಾಯಕ ಲೋಕಗಳನ್ನು ಹೊಂದುತ್ತಾರೆ. ಪತಿ ದುಃಶೀಲನಾಗಿರಲಿ, ಸ್ವೇಚ್ಛಾಚಾರಿಯಾಗಿರಲಿ, ನಿರ್ಧನನಾಗಿರಲಿ, ಸುಸ್ವಭಾವದ ನಾರಿಯರಿಗೆ ಪತಿಯೇ ಪರಮ ದೈವತ... ಪತಿಗಿಂತ ಮಿಗಿಲಾದ ಇಷ್ಟಬಾಂಧವರು ನನಗಿಲ್ಲ. ಅಕ್ಷಯತಪಾಚರಣೆಯು ಇಹ-ಪರಲೋಕಗಳಲ್ಲಿ ಇಷ್ಟಾರ್ಥವನ್ನು ಕೊಡುತ್ತದೆ. ಅದೇ ರೀತಿ ಸೇವೆಯನ್ನು ಸಲ್ಲಿಸಲು ಪತಿಯೇ ಯೋಗ್ಯ... ಪ್ರಪಂಚದಲ್ಲಿಯ ಒಳಿತು-ಕೆಡಕುಗಳನ್ನು ಪರಾಮರ್ಶಿಸುವ ಗುಣಸಂಪನ್ನೆಯರು ಪುಣ್ಯವಂತರಂತೆ ಸ್ವರ್ಗದಲ್ಲಿ ಸಂಚರಿಸುತ್ತಾರೆ." ಇದಲ್ಲದೆ ಅನಸೂಯೆಯು ಸೀತೆಗೆ ನುಡಿದದ್ದು :

"ವಿವಿಧ ನಿಯಮಗಳ ಪಾಲನೆಯಿಂದ ನಾನು ಮಹಾತಪಸ್ಸನ್ನು ಸಾಧಿಸಿದ್ದೇನೆ. ಆ ತಪೋಬಲವನ್ನಾಧರಿಸಿ ನೀನು ನನ್ನ ಬಳಿ ವರವನ್ನು ಕೇಳಬೇಕೆಂಬ ಇಚ್ಛೆ ನನಗೆ ಇದೆ."[100] ಅನಸೂಯೆಯು ಸೀತೆಗೆ ಕೊಡಬಯಸಿದ ವರವು ತಪಸ್ಸಿದ್ಧಿಯ ಫಲವಾಗಿತ್ತು ;ಅದು ಪಾತಿವ್ರತ್ಯದ ಫಲವಾಗಿರಲಿಲ್ಲ ; ಹೀಗಿರದಿದ್ದರೆ ತಪಸ್ಸಿನ ಸ್ವತಂತ್ರ ಉಲ್ಲೇಖದ ಆವಶ್ಯಕತೆ ಇರಲಿಲ್ಲ. ಸೀತೆಯು ಈ ವರವನ್ನು ಬೇಡಿಕೊಳ್ಳಲಿಲ್ಲ. ಈ ಮೇಲಿನ ಉದಾಹರಣೆಗಳಿಂದ ಕೇವಲ ಪಾತಿವ್ರತ್ಯದ ಬಲದಿಂದ ಯಾವ ಪತಿವ್ರತೆಯೂ ಶಾಪ/ವರಗಳನ್ನು ಕೊಡುವ ಅರ್ಹತೆಯನ್ನು ಪಡೆದಿಲ್ಲ. ಕೆಲವು ಶಾಪ/ವರಗಳನ್ನು ಕೊಟ್ಟ ಸ್ತ್ರೀಯರು, ಜನ್ಮದಿಂದಲೇ ಶ್ರೇಷ್ಠರಾಗಿರುವವರು ಅಥವಾ ಪಾತಿವ್ರತ್ಯದ ಜೊತೆಗೆ ಇನ್ನೂ ಬೇರೆ ತಪಸ್ಸಿನ ಶಕ್ತಿಯನ್ನು ಹೊಂದಿದವರೂ ಆಗಿದ್ದಾರೆ.

## ಬೇರೆ ಪತಿವ್ರತೆಯರು

ಪಂಚಪತಿವ್ರತೆಯರಲ್ಲಿ ಅಹಲ್ಯೆ, ಮಂಡೋದರಿ ಮತ್ತು ಸೀತೆ ಈ ಮೂವರು ರಾಮಾಯಣದಲ್ಲಿದ್ದಾರೆ. ಅವರ ಪಾತಿವ್ರತ್ಯದ ಸಾಮರ್ಥ್ಯವನ್ನು ಆಲೋಚಿಸುವಾಗ ಅಹಲ್ಯೆಯ ವಿಚಾರವನ್ನು ಬದಿಗಿಡಬೇಕಾಗುತ್ತದೆ. ಅಹಲ್ಯೆಯ ಕಥೆಯು ವಾಲ್ಮೀಕಿರಾಮಾಯಣದಲ್ಲಿ ಎರಡಾವರ್ತಿ ಬಂದಿದೆ ; ಈ ಎರಡೂ ವೃತ್ತಾಂತಗಳಲ್ಲಿ ವ್ಯತ್ಯಾಸವಿದೆ. ಉತ್ತರಕಾಂಡದ ವೃತ್ತಾಂತವು ಪ್ರಕ್ಷಿಪ್ತವಾಗಿದೆ ಎಂದು ಕೆಲವರ ಮತ ; ಬಾಲಕಾಂಡವು ವಾಲ್ಮೀಕಿಯಿಂದ ರಚಿಸಲ್ಪಟ್ಟಿದೆ ; ಆದಕಾರಣ ಈ ಉತ್ತರಕಾಂಡದಲ್ಲಿಯ ಕಥೆಯು ಅಧಿಕೃತವಲ್ಲವೆಂದು ಭಾವಿಸಬೇಕು. ಇದರಲ್ಲಿಯ ಕಥೆಯಂತೆ ಇಂದ್ರನು ಅಹಲ್ಯೆಯನ್ನು ಬಲಾತ್ಕರಿಸಲಿಲ್ಲ. ಗೌತಮನ ವೇಷದಲ್ಲಿ ಆಶ್ರಮಕ್ಕೆ ಬಂದವನು ಗೌತಮನಿರದೇ ಇಂದ್ರನೆಂದು ಅಹಲ್ಯೆಗೆ ಗೊತ್ತಿತ್ತು ; ಅಷ್ಟೇ ಅಲ್ಲದೆ ಆತನ ಬಗ್ಗೆ

ಅಹಲ್ಯೆಗೆ ಒಂದು ಬಗೆಯ ಅಭಿಮಾನ, ಉತ್ಸುಕತೆ ಇದ್ದವು. 'ಸ್ವೇಚ್ಛೆಯಿಂದ ಇಂದ್ರನೊಡನೆ ಸಮಾಗಮಕ್ಕೆ ಉದ್ಯುಕ್ತಳಾದಳು' ಎಂಬ ಬಗ್ಗೆ ಸಾಕಷ್ಟು ದಾಖಲೆಗಳಿವೆ. ಸಮಾಗಮದನಂತರ ಅವಳು ಇಂದ್ರನಿಗೆ **"ಕೃತಾರ್ಥಾಸ್ಮಿ ಸುರಶ್ರೇಷ್ಠ"** "ಸುರಶ್ರೇಷ್ಠನೇ, ನಾನು ಕೃತಾರ್ಥಳಾದೆ" ಎಂದಿದ್ದಾಳೆ. ಆಗ ಇಂದ್ರನು **"ಸುಶ್ರೋಣಿ ಪರಿತುಷ್ಟೋಽಸ್ಮಿ"** "ಸುಂದರಿಯೇ, ನಾನು ಸಂತುಷ್ಟನಾಗಿದ್ದೇನೆ" ಎಂದು ಒಪ್ಪಿದ್ದಾನೆ. ಅಹಲ್ಯೆ ಸಮಾಗಮಕ್ಕೆ ಸಮ್ಮತಿಸಿದ ಕಾರಣ ಅವಳ ವರ್ತನೆಯು ವ್ಯಭಿಚಾರಾತ್ಮಕವೆನಿಸುತ್ತದೆ. ಅವಳ ಅಪರಾಧವು ಘೋರವಾದದ್ದು ; ಕ್ಷಮೆಗೆ ಯೋಗ್ಯವೆನಿಸದು ; ಹೀಗಿದ್ದರೂ ಗೌತಮನು ಶಾಪದ ಜೊತೆಗೆ ಅಯಾಚಿತ ಉಃಶಾಪವನ್ನು ಕೊಟ್ಟದ್ದು ಸೋಜಿಗದ ಸಂಗತಿಯಾಗಿದೆ.[10] ಮಂಡೋದರಿಯು ಓರ್ವ ತುಂಬಾ ದುರ್ದೈವಿಯಾದ ಪತಿವ್ರತೆ. ರಾಮಾಯಣದಲ್ಲಿಯ ಅವಳ ಸ್ಥಾನ ಅತ್ಯಂತ ಗೌಣ ; ಅವಳ ವ್ಯಕ್ತಿಚಿತ್ರಣವು ಸ್ಪಷ್ಟಗೊಂಡಿಲ್ಲ ; ಪೂರ್ತಿಯಾಗಿಲ್ಲ. ರಾವಣನ ವಧೆಯನಂತರ ಅವಳ ವಿಲಾಪದಿಂದ ಅವಳ ಸ್ವಭಾವ-ವೈಶಿಷ್ಟ್ಯಗಳು ಎದ್ದುಕಾಣುತ್ತವೆ. ತನ್ನ ಪಾತಿವ್ರತ್ಯದ ಬಲದಿಂದ ರಾವಣನ ಅಧಃಪತನವನ್ನು ಅವಳು ತಡೆಯಬಹುದಿತ್ತು. ಅವಳು ಆ ರೀತಿ ಪ್ರಯತ್ನಿಸಿದ್ದರೂ ಅವಳಿಗೆ ಸಾಧ್ಯವಾಗಲಿಲ್ಲ. ಸಾವಿತ್ರಿಯು ತನ್ನ ಪಾತಿವ್ರತ್ಯದಿಂದ ಪತಿಯ ಪ್ರಾಣವನ್ನು ಉಳಿಸಿಕೊಂಡಳೆಂಬ ಪ್ರತೀತಿಯಿದೆ. ಮಂಡೋದರಿಗೆ ಅದು ಸಾಧ್ಯವಾಗಲಿಲ್ಲ. ಸಾವಿತ್ರಿಯು ತನ್ನ ಗಂಡನನ್ನು ಬದುಕಿಸಿದ್ದು ಪಾತಿವ್ರತ್ಯದಿಂದಲೋ ಅಥವಾ ಬುದ್ಧಿಚಾತುರ್ಯದಿಂದಲೋ ಎಂಬ ಬಗ್ಗೆ ಮತಭೇದಗಳು ಉಂಟಾಗಬಹುದು.

ಶ್ರೀರಾಮನು ಆದರ್ಶ ಪುತ್ರ, ಪತಿ, ಬಂಧು, ಶಾಸಕ, ಆಜ್ಞಾಧಾರಕ, ಸತ್ಯನಿಷ್ಠ, ಏಕಬಾಣ, ಏಕವಚನಿ, ಏಕಪತ್ನೀವ್ರತಸ್ಥ ಮತ್ತು ಶುದ್ಧಚಾರಿತ್ರ್ಯವುಳ್ಳವನೆಂಬ ತುಲನಾತೀತ ಗುಣಮೂರ್ತಿಯಾಗಿದ್ದನು. ಸೀತೆಯು ಕೂಡ ಸತ್ಯವಂತೆ, ಧೈರ್ಯದಿಂದ ಸಂಕಷ್ಟಗಳನ್ನು ಎದುರಿಸುವವಳು, ಹಸರಾಂತ ತ್ಯಾಗಿಯು, ನಿಃಸ್ಪೃಹಳು ಮತ್ತು ನಿಷ್ಠಾವಂತ ಪತಿವ್ರತೆಯಾಗಿದ್ದಳು. ಅವಳ ಕಲಂಕರಹಿತ ಚಾರಿತ್ರ್ಯ ಮತ್ತು ಶ್ರೀರಾಮನಲ್ಲಿದ್ದ ಪ್ರೀತಿಯು ಶ್ರೀರಾಮಕಥೆಗೆ ಮೂಲಾಧಾರವಾಗಿದೆ. ಸೀತೆಯ ಶುದ್ಧತೆಯ ಬಗ್ಗೆ ಸಾರಿಹೇಳುವಾಗ ವಾಲ್ಮೀಕಿಯು ತನ್ನ ತಪೋಬಲವನ್ನೇ ಪಣವಾಗಿ ಇಟ್ಟಿದ್ದಾನೆ. ರಾವಣನು ಅವಳನ್ನು ಕೊಂಡೊಯ್ದನಂತರ ಆತನ ವಧೆಯಾಗುವವರೆಗಿನ ಯಾವ ಗಳಿಗೆಯಲ್ಲಿಯೂ ಅವಳು ಅವನಿಂದ ಭ್ರಷ್ಟಳಾಗಬಹುದಿತ್ತು. ಅಷ್ಟೊಂದು ಪ್ರತಿಕೂಲ ಪರಿಸ್ಥಿತಿಯಲ್ಲಿ ಅವಳಿದ್ದಳು ; ಆದರೆ ರಾವಣನಿಗೆ ಎಲ್ಲವೂ ಅನುಕೂಲವಾಗಿತ್ತು ; ಅಂಥ ಸ್ಥಿತಿಯಲ್ಲಿ ಶೀಲಸಂರಕ್ಷಣೆಯನ್ನು ಮಾಡಿಕೊಳ್ಳುವದು ಸೀತೆಗೆ ಬಹಳೇ ಕಠಿಣವಿತ್ತು. ಅವಳ ಶೀಲರಕ್ಷಣೆಯು ಕಥೆಯ ದೃಷ್ಟಿಯಿಂದ ಮಹತ್ವದ್ದಾಗಿತ್ತು. ಅವಳ ಶೀಲಕ್ಕೆ ಕುಂದುಬಂದಿದ್ದರೆ ಈ ಕಥೆಯ ನೈತಿಕ ಅಧಿಷ್ಠಾನವೇ ಕುಸಿಯುವದೆಂಬ ಭೀತಿ, ವಾಲ್ಮೀಕಿಯ ಕೊರಗಾಗಿತ್ತು. ಕಾವ್ಯಾತ್ಮನ್ಯಾಯದ (Poetic justice) ದೃಷ್ಟಿಯಿಂದ, ಸೀತೆಯು ಶೀಲಭ್ರಷ್ಟೆಯಾಗುವದು ಯೋಗ್ಯವಾಗುತ್ತಿರಲಿಲ್ಲ. ಭ್ರಷ್ಟಳಾದ ಸೀತೆಯನ್ನು ಬಿಡಿಸಿ ತರುವದರಲ್ಲಿ ಸ್ವಾರಸ್ಯವೂ ಉಳಿಯುತ್ತಿರಲಿಲ್ಲ. ಅಪರಾಧಿಯಾದವನನ್ನು ಶಿಕ್ಷಿಸಿ, ಸೀತೆಯನ್ನು ಮುಕ್ತಗೊಳಿಸಿದಾಗಲೂ ಕಥೆಯು ರಸಹೀನವಾಗುತ್ತಿತ್ತು. ಸೀತೆಯು ಶುದ್ಧಚಾರಿತ್ರ್ಯವನ್ನುಳಿಸಿಕೊಂಡಿದ್ದಾಳೆ ಎಂದು ಶ್ರೀರಾಮನಿಗೆ ದೃಢನಂಬಿಕೆಯಿದ್ದರೂ, ಲೋಕಾಪವಾದವನ್ನು ತಡೆಯಲು ಶ್ರೀರಾಮನು ಅವಳಿಗೆ ಅಗ್ನಿದಿವ್ಯವನ್ನು ಮಾಡಲು ಬಲವಂತ ಮಾಡಿದನು. ಲಂಕೆಯಲ್ಲಿದ್ದಾಗ ಸೀತೆಯು ನಿರಾಶ್ರಿತೆಯಾಗಿದ್ದಳು ; ಒಂಟಿಯಾಗಿದ್ದಳು; ಬಂಧನದಲ್ಲಿದ್ದಳು. ರಾವಣನ ಬಳಿ ಅಧಿಕಾರ, ಪರಾಕ್ರಮ, ಕಾಮಾಂಧತೆ, ಕಾಮಾಭಿಲಾಷೆಗಾಗಿ ಎಂತಹ ಹೇಯಕೃತ್ಯವನ್ನೂ ಮಾಡುವ ಶಕ್ತಿ, ಇವೆಲ್ಲ ಇದ್ದವು. ಈ ಬಗೆಯ ಸನ್ನಿವೇಶದಲ್ಲಿ ಸೀತೆಯ ಶೀಲವನ್ನು ಕಾಯ್ದಿಡುವ ಹೊಣೆ, ರಾಮಾಯಣಕರ್ತನಾದ ವಾಲ್ಮೀಕಿಯ ಮೇಲಿತ್ತು.

## ರಾವಣನಿಗೆ ದೊರೆತ ಶಾಪಗಳು

ಸೀತೆಯನ್ನು ಬಲ್ಕಾತರಿಸಲು, ಆಕೆಯನ್ನು ಲಂಕೆಗೆ ಒಯ್ಯುವ ಆವಶ್ಯಕತೆ ಇರಲಿಲ್ಲ. ಬೀದಿಯಲ್ಲಿ, ಬಯಲಿನಲ್ಲಿ ಸಹ ಸ್ತ್ರೀಯರನ್ನು ಬಲಾತ್ಕರಿಸುವ ಅಧಮತೆ ರಾವಣನಲ್ಲಿತ್ತು. ರಾವಣನು ತಾನಾಗಿಯೇ ಮಹಾಪಾರ್ಶ್ವನೆಂಬ ಮಂತ್ರಿಯ ಬಳಿ ಒಪ್ಪಿಕೊಂಡ ಹೇಳಿಕೆ :

"ಗಗನದಲ್ಲಿಯ ಅಗ್ನಿಜ್ವಾಲೆಯಂತಿದ್ದ ಪುಂಜಿಕಸ್ಥಲೆ ಎಂಬ ಅಪ್ಸರೆಯು ನನ್ನ ಭೀತಿಯಿಂದ ಮರೆಯಾಗಿ, ಬ್ರಹ್ಮನ ಬಳಿ ಹೋಗುತ್ತಿರುವುದನ್ನು ನಾನು ಕಂಡೆನು. ನಾನು ಆಕೆಯನ್ನು ಬಲಾತ್ಕರಿಸಿ ಭೋಗಿಸಿದೆ ; ಆಕೆಯನ್ನು ವಸ್ತ್ರಹೀನಳನ್ನಾಗಿ ಮಾಡಿ ಬಿಟ್ಟುಕೊಟ್ಟೆನು."[102] ರಂಭೆಯನ್ನು ಸಹ ರಾವಣನು ಈ ರೀತಿ ಬೀದಿಯಲ್ಲಿ ಬಲಾತ್ಕರಿಸಿದ್ದಾನೆ.

ಆಗ ಆಕೆಯನ್ನು ಶಿಲೆಯೊಂದರ ಮೇಲೆ ಕುಳ್ಳಿರಿಸಿ, ಕಾಮಾಸಕ್ತನಾದ ರಾವಣನು ಅವಳನ್ನು ಬಲಾತ್ಕರಿಸಿದನು.[103] ರಾವಣನು ಸೀತೆಯನ್ನು ಎಲ್ಲಿ ಬೇಕಾದರೂ ಬಲಾತ್ಕರಿಸಬಹುದಿತ್ತು. ಅವನಿಗೆ ಯಾವ ನಿಯಮ ನಿರ್ಬಂಧಗಳಿರಲಿಲ್ಲ. ಹೀಗಿರುವಾಗ ಆತನು ಸೀತೆಯನ್ನು ಲಂಕೆಗೆ ಕೊಂಡೊಯ್ದ ಕಾರಣವೇನೆಂದರೆ ಅವಳು ಆತನಿಗೆ ಪತ್ನಿಯೆಂದು ಬೇಕಾಗಿದ್ದಳು. ಸದಾಕಾಲವೂ ಅವಳನ್ನು ಉಪಭೋಗಿಸಬೇಕೆಂಬ ಲಾಲಸೆ ಅವನದಾಗಿತ್ತು. **"ಭಾರ್ಯಾ ಮೇ ಭವ ಸುಶ್ರೋಣಿ ಯಥಾ ಮಂಡೋದರೀ ತಥಾ !"** "ಹೇ ಸುಂದರಿ ! ಮಂಡೋದರಿಯು ಹೇಗೋ ಹಾಗೆ ನೀನು ನನ್ನ ಪತ್ನಿಯಾಗು !" ಎಂಬ ಸ್ಪಷ್ಟ ಉಲ್ಲೇಖವು ಮಹಾಭಾರತದ ವನಪರ್ವದಲ್ಲಿ (೨೮೧-೧೭) ಬಂದಿದೆ. ತನ್ನ ಐಶ್ವರ್ಯ-ವೈಭವಗಳಿಂದ ಅವಳ ಮನಸ್ಸನ್ನು ಸೆಳೆಯಬೇಕೆಂದು ಆತನು ಬಯಸಿದ್ದನು ; ಆ ಕಾರಣ ಅನ್ಯಸ್ತ್ರೀಯರನ್ನು ಬಲಾತ್ಕರಿಸಿದಂತೆ ಸೀತೆಯೊಡನೆ ನಡೆದುಕೊಂಡಿಲ್ಲ. ರಾವಣನ ವಧೆಗೆ ತಕ್ಕ ಪರಿಸ್ಥಿತಿ ಒದಗಲೆಂದು, ಸೀತೆಯು ಲಂಕೆಯಲ್ಲಿರುವದು ಆವಶ್ಯಕವಿತ್ತು. ರಾವಣನು ಸೀತೆಯನ್ನು ಲಂಕೆಗೆ ಸಾಗಿಸಿದ ಘಟನೆಯು ಶ್ರೀರಾಮ-ರಾವಣರ ಯುದ್ಧಕ್ಕೆ ಪ್ರಮುಖ ಕಾರಣವಾಯಿತು.

ತನ್ನನ್ನು ಪತಿಯಾಗಿ ಸ್ವೀಕರಿಸಬೇಕೆಂದು ರಾವಣನು ಸೀತೆಯ ಬಳಿ ಮಾಡಿದ ಎಲ್ಲ ಪ್ರಯತ್ನಗಳು ವಿಫಲವಾದವು ; ಅಷ್ಟೇ ಅಲ್ಲದೆ, ಸೀತೆಯು ಆತನನ್ನು ಬಿರುಸಾದ ವಚನಗಳಿಂದ ತಿರಸ್ಕರಿಸಿದಳು. ಆತನು ಅವಳನ್ನು ಕ್ರೂರ ರಾಕ್ಷಸಿಯರ ಸರ್ಪಕಾವಲಿನಲ್ಲಿಟ್ಟನು. ಯಾರ ಕಣ್ಣಿಗೂ ಅವಳ ನಖದರ್ಶನ ಕೂಡ ಆಗಬಾರದಂತೆ ಭದ್ರವ್ಯವಸ್ಥೆ ಮಾಡಿದನು. ಹೀಗಿದ್ದರೂ ಹನುಮಂತ ಮತ್ತು ಇಂದ್ರ, ಇವರು ರಾವಣನಿಗೆ ಸುಳಿವು ಕೊಡದೆ ಸೀತೆಯನ್ನು ಭೇಟಿಯಾಗಿ ಅವಳ ನೈತಿಕ ಧೈರ್ಯವನ್ನು ಹೆಚ್ಚಿಸಿದರು. ಇಷ್ಟೊಂದು ಕಾವಲಿನಲ್ಲಿದ್ದ ಸೀತೆಯು ಶೀಲಗೆಡದೆ ಉಳಿದದ್ದು ಸೋಜಿಗವಾಗಿದೆ. ಈ ಅಬಲೆಯ ಪ್ರತೀಕಾರವನ್ನು ರಾವಣನು ದುರ್ಲಕ್ಷಿಸಬಹುದಿತ್ತು. ಇಂಥ ಪರಿಸ್ಥಿತಿಯಲ್ಲಿ ಸೀತೆಯ ಮುಂದೆ ಎರಡು ಮಾರ್ಗಗಳಿದ್ದವು —ಆತ್ಮಹತ್ಯೆ ಇಲ್ಲವೇ ರಾವಣನಿಗೆ ಶರಣಾಗುವದು.

## ಸೀತೆಯ ಆತ್ಮಹತ್ಯೆಯ ಪ್ರಯತ್ನಗಳು

ರಾವಣನು ತನ್ನನ್ನು ಕೊಲ್ಲಬಹುದೆಂಬ ಅಂಜಿಕೆಯು ಸೀತೆಗೆ ಇತ್ತು. ಹೀಗೆ ಸಾಯುವ ಬದಲು ಆತ್ಮಹತ್ಯೆ ಮಾಡಿಕೊಳ್ಳುವದು ಲೇಸೆಂದು ಭಾವಿಸಿದಳು. ಬದುಕಿಗೆ ಬೇಸತ್ತು ಅವಳು ಎರಡು ಬಾರಿ ಆತ್ಮಹತ್ಯೆಯ ಪ್ರಯತ್ನವನ್ನು ಮಾಡಿದಳು.

- ಈ ರೀತಿ ಶೋಕಸಂತಪ್ತಳಾದ ಸೀತೆಯು ಬಗೆಬಗೆಯಿಂದ ಆಲೋಚಿಸಿ ತನ್ನ ವೇಣೀಗ್ರಥನದಿಂದ (ಮುಡಿಯನ್ನು ಕಟ್ಟುವ ನಾರು) "ನಾನು ಕೂಡಲೇ ಯಮಸದನವನ್ನು ತಲುಪುವೆ" ಎಂದು ಹೇಳಿ ಮರದ ರೆಂಬೆಯನ್ನು ಕೈಯಲ್ಲಿ ಹಿಡಿದು ಪ್ರಾಣತ್ಯಾಗ ಮಾಡುವವಳಿದ್ದಳು.[104] ಅಷ್ಟರಲ್ಲಿ ಸೀತೆಯ ಹಾಗೂ ರಾಮಾಯಣದ ಸುದೈವದಿಂದ ಆಕೆಗೆ ಕೆಲವು ಶುಭಶಕುನಗಳಾದವು. ಅವಳ ಮನೋಧೈರ್ಯವು ಬೆಳೆಯಿತು. ಆತ್ಮಹತ್ಯೆಯ ವಿಚಾರವನ್ನು ಮುಂದೂಡಿದಳು. ರಾವಣನ ವಧೆ ಶ್ರೀರಾಮನಿಂದಾಗುವವರೆಗೆ ಸೀತೆ ಹಾಗೂ ರಾವಣ ಇಬ್ಬರೂ ಜೀವಿಸಿರುವುದು ಮತ್ತು ಸೀತೆಯು ಭ್ರಷ್ಟಳಾಗದೇ ಉಳಿದಿರುವುದು ಕಥೆಗೆ ಆವಶ್ಯಕವಿತ್ತು. ಅವಳ ಸಾವು ಕಥೆಗೆ ಪೋಷಕವಾಗುತ್ತಿರಲಿಲ್ಲ. ಸಮಯಕ್ಕೆ ಸರಿಯಾಗಿ ಶುಭಶಕುನಗಳನ್ನು ಯೋಜಿಸಿ, ಸೀತೆಯ ಆತ್ಮಾರ್ಪಣೆಯ ಪ್ರಯತ್ನವನ್ನು ವಿಫಲಗೊಳಿಸಲಾಗಿದೆ. ಇನ್ನೊಂದು ಸಂದರ್ಭದಲ್ಲಿ ಸೀತೆ ಆಮರಣ ಉಪವಾಸವನ್ನು ಪ್ರಾರಂಭಿಸಿದಾಗ ಬ್ರಹ್ಮದೇವನಿಗೆ ಚಿಂತೆಯಾಯಿತು. ಆತನು ಹವಿಷ್ಯಾನ್ನವನ್ನು ಸೀತೆಗೆ ತಲುಪಿಸಲೆಂದು ಇಂದ್ರನನ್ನು ಲಂಕೆಗೆ ಕಳಿಸಿದನು. ಅನಂತಕಾಲದವರೆಗೆ ನೀರು, ಆಹಾರವಿರದೇ ಮನುಷ್ಯನನ್ನು ಜೀವಂತವಾಗಿರಿಸುವ ಅದ್ಭುತಶಕ್ತಿಯು ಹವಿಷ್ಯಾನ್ನದಲ್ಲಿರುತ್ತದೆ. ಸೀತೆಯು ಈ ಹವಿಷ್ಯಾನ್ನವನ್ನು

ಸ್ವೀಕರಿಸಿದ್ದರಿಂದ ಆಕೆಯ ಆಮರಣ ಉಪವಾಸವು ವಿಫಲಗೊಂಡಿತು. ಹೀಗಾಗಿ ಅವಳ ಆತ್ಮಹತ್ಯೆಯ ಎರಡನೆಯ ಪ್ರಯತ್ನವೂ ಸಫಲವಾಗಲಿಲ್ಲ.

## ಪಾತಿವ್ರತ್ಯದ ಸಾಮರ್ಥ್ಯವೆಂಬ ಸಂಗತಿ

ರಾವಣನ ಇಚ್ಛೆಗೆ ಶರಣಾಗುವ ಹೊರತು ಸೀತೆಗೆ ವಿಧಿಯಿರಲಿಲ್ಲ ; ಆತನ ವಧೆಯಾಗುವವರೆಗೆ ಶೀಲವನ್ನು ಕಾಯ್ದುಕೊಂಡು ಸೀತೆಯು ಜೀವಿಸಿರುವಂತೆ ಮಾಡುವ ಜಟಿಲ ಸಮಸ್ಯೆ ವಾಲ್ಮೀಕಿಯದಾಗಿತ್ತು. ಭಾರತೀಯ ಜೀವನಕ್ರಮದಲ್ಲಿ ಪಾತಿವ್ರತ್ಯಕ್ಕೆ ಅತಿ ಘನತೆ-ಗೌರವಗಳುಂಟು. ಪತಿವ್ರತೆಯು ಅಸಾಧ್ಯವಿದ್ದುದನ್ನು ಸಾಧಿಸುವ ಶಕ್ತಿಯನ್ನು ಹೊಂದಿರುತ್ತಾಳೆ ಎಂಬ ಶ್ರದ್ಧೆ ಎಲ್ಲರಲ್ಲಿತ್ತು. ಪ್ರತಿಕೂಲಪರಿಸ್ಥಿತಿಯಲ್ಲಿ ಕೂಡ ತನ್ನ ಪಾತಿವ್ರತ್ಯದ ಫಲದಿಂದ ಭ್ರಷ್ಟಳಾಗದೆಯೆ ಲಂಕೆಯಲ್ಲಿ ಸಹಜವಾಗಿ ಇರಬಹುದಿತ್ತೆಂಬ ನಂಬಿಕೆಯು, ಕುರುಡುನಂಬಿಕೆ ಎಂದೆನ್ನಬಹುದು. ಇದಕ್ಕೆ ಯಾವ ಆಧಾರವೂ ಇಲ್ಲ. ಸೀತೆ (ಉತ್ತರಕಾಂಡದಲ್ಲಿಯ), ಅಹಲ್ಯೆ ಮತ್ತು ದ್ರೌಪದಿ ಈ ಮೂವರೂ ಪತಿವ್ರತೆಯರು ತಮ್ಮ ಶೀಲವನ್ನು ಕಳೆದುಕೊಳ್ಳುವ ಸಂಕಟವನ್ನು ಎದುರಿಸಿದ್ದಾರೆ. ಅಹಲ್ಯೆಯು ಈ ಸಂಕಟಕ್ಕೆ ಬಲಿಯಾದಳು. ಸೀತೆ ಮತ್ತು ದ್ರೌಪದಿ ಈರ್ವರು ಸಂಕಟದಿಂದ ಪಾರಾದರು. ಅವರಿಗೆ ದೊರೆತ ಯಶಸ್ಸು ಪಾತಿವ್ರತ್ಯದ ಫಲವಾಗಿಯೋ ಅಥವಾ ಇನ್ನಾವ ಬೇರೆ ಕಾರಣದಿಂದಲೋ ಎಂಬುದನ್ನು ಸರಿಯಾಗಿ ಪರಿಶೀಲಿಸಬೇಕು. ಗೌತಮನ ವೇಷಧಾರಿಯಾದವನು ಆಶ್ರಮಕ್ಕೆ ಬಂದಾಗ ಇಂದ್ರನು ಪರಪುರುಷನೆಂದು ಅಹಲ್ಯೆಗೆ ಗೊತ್ತಿರಲಿಲ್ಲ.[105]

ಅಹಲ್ಯೆಯ ಈ ಹೇಳಿಕೆಯನ್ನು ನಂಬಿದರೂ ಇಂದ್ರನ ಸ್ಪರ್ಶದನಂತರವೂ ಅದು ಪರಪುರುಷನ ಸ್ಪರ್ಶ ಎಂಬ ಸಂಗತಿಯು ಅವಳಿಗೆ ತಿಳಿಯಲಿಲ್ಲವೆನ್ನಬೇಕೆ ? ಅವಳಲ್ಲಿಯ ಪಾತಿವ್ರತ್ಯದ ಬಲವು, ಇಂದ್ರನನ್ನು ದೂರವಿರಿಸಲು ಏಕೆ ಅಸಮರ್ಥವಿತ್ತು ? ಅದು ನಿಜವಾಗಿ ಶಕ್ತಿಯುಕ್ತವಾಗಿದ್ದರೆ ಅಹಲ್ಯೆಯನ್ನು ಮುಟ್ಟಿದೊಡನೆ ಇಂದ್ರನು ಸುಟ್ಟು ಬೂದಿಯಾಗಬೇಕಿತ್ತು. ಪಾತಿವ್ರತ್ಯದ ಫಲರೂಪವಾಗಿ ಇಂದ್ರನಿಗೆ ಯಾವ ಶಿಕ್ಷೆಯೂ ಆಗಲಿಲ್ಲ. ಇಂದ್ರನಿಗೆ ನಂತರ ದೊರೆತ ಶಿಕ್ಷೆಯು ಗೌತಮನ ತಪಸ್ಸಾಮರ್ಥ್ಯದಿಂದ ಹೊರತು ಅಹಲ್ಯೆಯ ಪಾತಿವ್ರತ್ಯದಿಂದಲ್ಲ. ಇದು ನಿಜವಲ್ಲವೆಂದು ಗ್ರಹಿಸಿದರೆ ಉತ್ತರಕಾಂಡದಲ್ಲಿಯ ಅಹಲ್ಯೆಯ ಕಥಾಭಾಗವು 'ಸುಳ್ಳು' ಎಂದಾಗುತ್ತದೆ. ಬಾಲಕಾಂಡದ ಕಥೆಯು ನಿಜವಿದ್ದರೆ ಇಂದ್ರನು ಬಂದದ್ದು ಅವಳಿಗೆ ಗೊತ್ತಿದ್ದ ಸಂಗತಿ ; ಆದ್ದರಿಂದ ವ್ಯಭಿಚಾರಿಣಿ ಎನಿಸುತ್ತಾಳೆ. ಭೀಮನು ಮೊದಲೇ ಯೋಜಿಸಿದಂತೆ ನೃತ್ಯಶಾಲೆಯಲ್ಲಿ ಕುಳಿತಿರದಿದ್ದರೆ ದ್ರೌಪದಿಯು ಕೀಚಕನ ಅತ್ಯಾಚಾರಕ್ಕೆ ಬಲಿಯಾಗುತ್ತಿದ್ದಳು ; ಇಲ್ಲವೇ ಮರಣವನ್ನಪ್ಪಿಕೊಳ್ಳುತ್ತಿದ್ದಳು. ದ್ರೌಪದಿಯ ಶೀಲರಕ್ಷಣೆಯಾದದ್ದು ಕೇವಲ ಭೀಮನ ಬುದ್ಧಿಚಾತುರ್ಯದ ಮೂಲಕ, ಆತನ ಪರಾಕ್ರಮದ ಮೂಲಕವೇ ಹೊರತು ದ್ರೌಪದಿಯ ಪಾತಿವ್ರತ್ಯದಿಂದಲ್ಲ. ಅಹಲ್ಯೆ ಮತ್ತು ದ್ರೌಪದಿ ಇವರಲ್ಲಿ ಪಾತಿವ್ರತ್ಯದ ತೇಜಸ್ಸು ಸ್ವಲ್ಪಮಟ್ಟಿಗೆ ಇತ್ತೆಂದು ಊಹಿಸಿದರೂ ಅದರ ಬಲದಿಂದ ಸ್ವಂತದ ಶೀಲರಕ್ಷಣೆಯು ಸಾಧ್ಯವಿರಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಶೀಲವನ್ನು ಕಾಯ್ದುಕೊಳ್ಳಲು ಕೇವಲ ಪಾತಿವ್ರತ್ಯವು ಸಾಲದೆಂದು ಸೀತೆಯು ಅರಿತಿದ್ದಳು. ಶೀಲವನ್ನು ಕಳೆದುಕೊಳ್ಳುವ ಬದಲು ಆತ್ಮಹತ್ಯೆ ಮಾಡಿಕೊಳ್ಳುವದು ಒಳಿತೆಂದು ಅವಳು ಭಾವಿಸಿರಬಹುದು. ಅವಳ ಆತ್ಮಹತ್ಯೆಯ ಎರಡು ಪ್ರಯತ್ನಗಳು ವಿಫಲಗೊಂಡವು. ಸೀತೆಯಲ್ಲಿ ಪಾತಿವ್ರತ್ಯದ ಅದ್ಭುತ ತೇಜಸ್ಸಿತ್ತೆಂಬ ಅಭಿಪ್ರಾಯವನ್ನು ಮಂಡೋದರಿಯು ಹೊಂದಿದ್ದಳು. ರಾವಣನ ವಧೆಯಾದನಂತರ ಶೋಕಸಂತಪ್ತಳಾದ ಅವಳು ಈ ರೀತಿ ನುಡಿದಿದ್ದಾಳೆ :

"ಹೇ ಪ್ರಭೋ ! ಮಿಥಿಲೆಯ ರಾಜಕುಮಾರಿಯಲ್ಲಿ ಆಸಕ್ತನಾಗಿ ಸಮಾಗಮವನ್ನು ಬಯಸಿದ ನಿನ್ನ ಮನೋರಥವು ಸಿದ್ಧಿಸಲಿಲ್ಲ. ಆ ಪತಿವ್ರತೆಯ ತಪಸ್ಸಿನ ತೇಜಸ್ಸಿನಿಂದ ನೀನು ಸುಟ್ಟುಹೋದೆ ; ಯಾವ ಗಳಿಗೆಯಲ್ಲಿ ನೀನು ಅವಳನ್ನು ಸ್ಪರ್ಶಿಸಿದೆಯೋ ಅದೇ ಕ್ಷಣದಲ್ಲಿ ನಿನ್ನ ದೇಹವು ಸುಟ್ಟು ಭಸ್ಮವಾಗಬೇಕಿತ್ತು; ಆದರೆ ಇಂದ್ರ, ಅಗ್ನಿ, ದೇವತೆಗಳು ನಿನಗೆ ಭಯಪಡುತ್ತಿದ್ದುದರಿಂದ ನೀನು ಆಗ ಸಾಯಲಿಲ್ಲ."[106] ಈ ರೀತಿ ಓರ್ವ ಪತಿವ್ರತೆಯು ಇನ್ನೋರ್ವ ಸಾಮಾನ್ಯ ಪತಿವ್ರತೆಯನ್ನು ಹೊಗಳಿ ನುಡಿದದ್ದು ಬಹಳ ಮನಸ್ಸೆಳೆಯು

ವಂತಿದ್ದರೂ ಅದರ ಸತ್ಯಾಸತ್ಯತೆಯನ್ನು ಪರಿಶೀಲಿಸುವದು ಉಚಿತವೆನಿಸುತ್ತದೆ. ಪತಿವ್ರತೆಯ ಬಳಿ ತೇಜಸ್ಸಿನ ಪ್ರಭಾವವಿರುತ್ತದೆ ಎಂದು ಮನ್ನಿಸಿದರೆ, ರಾವಣನ ಅಧಃಪತನವನ್ನು ಮಂಡೋದರಿಯು ಸ್ವಲ್ಪವಾದರೂ ಏಕೆ ತಡೆಯಲಿಲ್ಲ? ಮಂಡೋದರಿಯು ಪತಿವ್ರತೆ; ಅವಳ ಪಾತಿವ್ರತ್ಯವನ್ನು ಶಂಕಿಸುವ ಒಂದು ಉಲ್ಲೇಖವೂ ರಾಮಾಯಣದಲ್ಲಿಲ್ಲ. ಸೀತೆಯ ಸ್ಪರ್ಶವಾಗುತ್ತಲೇ ರಾವಣನು ಸುಟ್ಟುಹೋಗಲಿಲ್ಲ; ರಾವಣನ ಘನತೆಯೇ ಇದಕ್ಕೆ ಕಾರಣವೆಂದು ನಂಬಿದರೆ, ವಿರಾಧನು ಶ್ರೀರಾಮಲಕ್ಷ್ಮಣರ ಸಮ್ಮುಖದಲ್ಲಿಯೇ ಸೀತೆಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಾಗ ಆ ವಿರಾಧನೇಕೆ ಭಸ್ಮವಾಗಲಿಲ್ಲ? ವಿರಾಧನ ಬಳಿ ಅದಾವ ಶಕ್ತಿ ಇತ್ತು? ವಿರಾಧನು ಅಷ್ಟಕ್ಕೇ ನಿಲ್ಲದೆ—

"ತರುಣಳಾದ ಈ ಸ್ತ್ರೀಯನ್ನು ಕಟ್ಟಿಕೊಂಡು ತಪಸ್ವಿಗಳೆನಿಸುವ ನೀವು ಯಾವ ರೀತಿ ಕಾಡಿನಲ್ಲಿ ವಾಸಿಸುತ್ತೀರಿ? ಈ ಮುನಿವೇಷಕ್ಕೆ ಸಲ್ಲದ ಆಯುಧಗಳನ್ನು ಧರಿಸಿ ಒಂದೇ ಸ್ತ್ರೀಯನ್ನು ಉಪಭೋಗಿಸುವ ಅಧಮರು ನೀವು; ಪಾಪಿಗಳು, ಮುನಿವೇಷಕ್ಕೆ ಕಲಂಕವನ್ನು ತರುವಂಥವರು, ನೀವು ಯಾರು? ವಿವಾಹವಾಗಲು ಯೋಗ್ಯವಿರುವ ಇವಳು ನನ್ನ ಪತ್ನಿಯಾಗುವಳು!" ಈ ಬಗೆಯಾಗಿ ಪತಿವ್ರತೆಯನ್ನು ನಿಂದಿಸುವ ಉದ್ಗಾರಗಳು ಪತಿವ್ರತೆಯಾದ ಸೀತೆಯ ಕಿವಿಗಳಿಗೆ ಬಿದ್ದಾಗ ಅವಳ ಪಾತಿವ್ರತ್ಯದ ತೇಜವು ಏಕೆ ಪ್ರಕಟವಾಗಲಿಲ್ಲ? ಕಾಗೆಯ ರೂಪವನ್ನು ತಾಳಿ ಬಂದ ಇಂದ್ರಪುತ್ರನು ಸೀತೆಯ ಸ್ತನಗಳೊಡನೆ ಚೇಷ್ಟೆ ನಡೆಸಿದಾಗ ಪಾತಿವ್ರತ್ಯದ ತೇಜಸ್ಸು ಏಕೆ ಹೊರಬರಲಿಲ್ಲವೆಂಬುದು ಆಶ್ಚರ್ಯದ ಸಂಗತಿಯಾಗಿದೆ. ಇಂದ್ರಪುತ್ರನಿಂದ ನಡೆದ ಶೃಂಗಾರಚೇಷ್ಟೆಗಳ ವಿವರಣೆಯನ್ನು ಸೀತೆಯು ತಾನಾಗಿ ಹನುಮಂತನಿಗೆ ಹೇಳಿದ್ದಾಳೆ. ಅದು ವಿಶ್ವಸನೀಯವಲ್ಲವೆಂದು ಹೇಗೆ ಹೇಳಲು ಸಾಧ್ಯ? ವಿರಾಧನಂತಹ ರಾಕ್ಷಸನಿಗೆ ಸರಿಯಾದ ಶಿಕ್ಷೆಯನ್ನು ವಿಧಿಸುವುದಂತೂ ದೂರವಿರಲಿ, ಸಾಮಾನ್ಯ ಕಾಗೆಯನ್ನು ಶಿಕ್ಷಿಸುವದು ಸಹ ಅವಳಿಂದಾಗಲಿಲ್ಲ. ಹೀಗಿರುವದರಿಂದ ಪಾತಿವ್ರತ್ಯದ ಸಾಮರ್ಥ್ಯದ ಅನುಭವವು ಒಮ್ಮೆಯೂ ಕಂಡುಬಂದಿಲ್ಲ; ಅಂದಬಳಿಕ ಮಂಡೋದರಿಯ ಉದ್ಗಾರಗಳನ್ನು ವಿಶೇಷ ಗಂಭೀರವಾಗಿ ವಿಶ್ಲೇಷಿಸುವ ಅವಶ್ಯಕತೆ ಇಲ್ಲ.[107]

ಪಾತಿವ್ರತ್ಯದ ಶಕ್ತಿಯ ಬಗ್ಗೆ ಸೀತೆಯ ಉದ್ಗಾರಗಳನ್ನು ಲಕ್ಷ್ಯಿಸಿ ಅವುಗಳಲ್ಲಿಯ ನಿಜಾಂಶವನ್ನು ಪರಿಶೋಧಿಸಬೇಕು.[108]

"ಶ್ರೀರಾಮನ ಆಜ್ಞೆಯಿರದ ಕಾರಣ ಮತ್ತು ತಪಸ್ಸಿನ ಪರಿಪಾಲನೆಯೇ ಒಂದು ಕರ್ತವ್ಯವಾಗಿದ್ದುದರಿಂದ ಪಾತಿವ್ರತ್ಯದ ತೇಜಸ್ಸಿನಿಂದ ನಿನ್ನನ್ನು ಸುಟ್ಟು ಭಸ್ಮಮಾಡುವದು ಸಾಧ್ಯವಿದ್ದರೂ ನಾನು ಆ ರೀತಿ ಮಾಡುವದಿಲ್ಲ." ದಿ| ಕಾಶೀನಾಥಶಾಸ್ತ್ರಿ ಲೇಲೇ ಅವರ ಈ ಮರಾಠೀ ಅನುವಾದದಲ್ಲಿ ಪಾತಿವ್ರತ್ಯ ಶಬ್ದವು ಸರಿಯಿಲ್ಲ. ವಾಲ್ಮೀಕಿಯು ಪಾತಿವ್ರತ್ಯವನ್ನು ಉಲ್ಲೇಖಿಸಿಲ್ಲ; ಬದಲು ತಪಸ್ಸು ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಗೀತಾ ಪ್ರೆಸ್ ಗೋರಖಪುರ (ಹಿಂದಿ) ಮತ್ತು ಡಾ. ಶ್ರೀನಿವಾಸ ಅಯ್ಯಂಗಾರ್ ಇವರ ಕನ್ನಡ ಅನುವಾದದಲ್ಲಿ 'ಪಾತಿವ್ರತ್ಯ'ವನ್ನು ಉಲ್ಲೇಖಿಸಿಲ್ಲ. ರಾವಣನನ್ನು ಸುಟ್ಟುಹಾಕುವ ಸೀತೆಯ ನುಡಿಯು ಓಜಸ್ವಿನದೆಂದೆನಿಸಿದರೂ ಕೃತಿಯಲ್ಲಿ ಯಾವ ಪ್ರಭಾವವನ್ನೂ ಬೀರಲಿಲ್ಲ. ಸೀತೆಯ ಸ್ವಂತ ಹೇಳಿಕೆಯಂತೆ, ಅವಳಲ್ಲಿ ಬೇರೆ ಯಾವುದೇ ಬಗೆಯ ಸಾಮರ್ಥ್ಯವಿದ್ದರೂ, ಅದು ತಪಸ್ಸಿನಿಂದ ದೊರೆತ ಫಲವಾಗಿದೆ.

## ರಾವಣನು ಎಸಗಿದ ಬಲಾತ್ಕಾರಗಳು

ಸ್ತ್ರೀಯರ ಮೇಲೆ ಬಲಾತ್ಕಾರವನ್ನು ಮಾಡುವದರಲ್ಲಿ ರಾವಣನದು ಎತ್ತಿದ ಕೈ. ಅಷ್ಟೇ ಅಲ್ಲದೆ ಅದು ಅವನ ಚಟವಾಗಿತ್ತು. ಲಂಕೆಯಲ್ಲಿಯ ಹಾಗೂ ಇನ್ನಿತರ ನಾರಿಯರನ್ನು ಆತನು ಮನಬಂದಂತೆ ಉಪಭೋಗಿಸಿದ್ದಾನೆ. ಸ್ತ್ರೀಯರನ್ನು ಕೆಡಿಸುವದು, ತನ್ನ ಮನಸೇಚ್ಛೆಯಂತೆ ಬಲಾತ್ಕರಿಸುವದು ಪಾಪಕರ್ಮವೆಂದು ಆತನು ಈ ರೀತಿ ಹೇಳಿದ್ದಾನೆ:

"ಬಲಾತ್ಕಾರದಿಂದ ಪರಸ್ತ್ರೀಯರನ್ನು ಅಪಹರಿಸುವದು ಮತ್ತು ಅವರನ್ನು ಉಪಭೋಗಿಸುವದು ಸದಾಕಾಲ ರಾಕ್ಷಸರ ಕುಲಧರ್ಮ."[109] ರಾವಣನ ಈ ಅಧರ್ಮಕೃತ್ಯವು ಆತನ ಕ್ರೌರ್ಯಕ್ಕಿಂತ ಮಿಗಿಲಾಗಿ ಸ್ತ್ರೀಯರನ್ನು ಹಿಂಸಿಸುತ್ತಿತ್ತು. ಸ್ತ್ರೀಯರನ್ನು ಬಲಾತ್ಕರಿಸುವಾಗ ಅವರ ಪತಿಯರ, ಆಪ್ತೇಷ್ಟರ ಪರಿವೆ ಅವನಿಗಿರುತ್ತಿರಲಿಲ್ಲ. ಅವರ ಪತಿಯರನ್ನು ಕೊಂದು ಅವರನ್ನು ವಿಧವೆಯರನ್ನಾಗಿ ಮಾಡುವದಲ್ಲದೇ ಅವರ ಆಪ್ತೇಷ್ಟರನ್ನು

ಕೊಂದು ಅವರನ್ನು ಪೂರ್ಣ 'ನಿರಾಶ್ರಿತೆ'ಯರನ್ನಾಗಿ ಮಾಡುತ್ತಿದ್ದನು. ಈತನಿಂದ ಭ್ರಷ್ಟರಾದ ಅನೇಕ ಸಾಧ್ವಿಯರು ಶ್ರೇಷ್ಠರಾಗಿದ್ದರು. ಅವರ ಬಗ್ಗೆ ಮಂಡೋದರಿಯ ಉದ್ಗಾರಗಳು ಸೂಚಕವಾಗಿವೆ :

"ಹೇ ರಾಜಶ್ರೇಷ್ಠನೇ ! ಯಾವ ಕುಲಸ್ತ್ರೀಯರನ್ನು ನೀನು ವಿಧವೆಯರನ್ನಾಗಿ ಮಾಡಿದೆಯೋ, ಅವರೆಲ್ಲರೂ ಪತಿವ್ರತೆಯರು, ಧರ್ಮಿಷ್ಠರು, ಗುರುಸೇವೆಯಲ್ಲಿ ಆಸಕ್ತಿಯುಳ್ಳವರಿದ್ದರು. ಶೋಕಾನ್ವಿತರಾದ ಆ ಸ್ತ್ರೀಯರು ನಿನ್ನನ್ನು ಶಪಿಸಿದ ಕಾರಣ ನೀನು ಶತ್ರುವಿನ ವಶವಾದೆ."[110] ಈ ಸಾಧ್ವಿಯರು ಶಾಪಗಳನ್ನು ನುಡಿದಾಗ ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದುವು, ಪುಷ್ಪವೃಷ್ಟಿಯಾಯಿತು ಎಂಬ ವರ್ಣನೆ ಇದೆ.[111] ಇಂಥ ಸ್ತ್ರೀಯರು ಶ್ರೇಷ್ಠ ಪತಿವ್ರತೆಯರಿದ್ದರೆಂಬುದರಲ್ಲಿ ಸಂದೇಹವಿಲ್ಲವಾದರೂ ತಮ್ಮ ಶೀಲವನ್ನು ಕಾಯ್ದುಕೊಳ್ಳುವದರಲ್ಲಿ ವಿಫಲರಾದರೆಂದು ಹೇಳಬಹುದು. ಪಾತಿವ್ರತ್ಯ-ಸದ್ವರ್ತನೆ ಇವುಗಳಿಂದ ಲಭಿಸುವ ಬಲ, ತೇಜಸ್ಸು ಇವು ಬಹಳ ಸೀಮಿತವಾಗಿರುತ್ತವೆ. ಅವುಗಳಿಂದ ಶೀಲರಕ್ಷಣೆಯು ಸಾಧ್ಯವಿಲ್ಲವೆಂಬ ಸಂಗತಿಯು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಪಾತಿವ್ರತ್ಯವೆಂಬುದು ಎಷ್ಟೇ ಉಚ್ಚಮಟ್ಟದ ಗುಣವೆನಿಸಿದರೂ ಅದರಿಂದ 'ಶೀಲರಕ್ಷಣೆ' ಸಾಧ್ಯವಿಲ್ಲ.

## ಶಾಪ / ವರಗಳ ಯೋಜನಾಚಾತುರ್ಯ

ಸೀತೆಯು ನಿರಾಧಾರೆ, ಅಸಹಾಯಕಳಾಗಿದ್ದಳು. ಅವಳ ಈ ಸ್ಥಿತಿಯನ್ನು ಗಮನಿಸಿ ವಾಲ್ಮೀಕಿ ಬಹುಕೌಶಲ್ಯಪೂರ್ಣವಾಗಿ ರಾವಣನಿಗೆ ಶಾಪಗಳನ್ನು ಯೋಜಿಸಿ ಸೀತೆಯ ಶೀಲರಕ್ಷಣೆಯನ್ನು ಸಾಧಿಸಿದ್ದಾನೆ. ರಾವಣನಿಗೆ ದೊರೆತ ಶಾಪವೆಂದರೆ, ಸೀತೆಯು ಭ್ರಷ್ಟಳಾಗದೇ ಉಳಿಯುವ ಪ್ರಭಾವಶಾಲೀ, ಸಹಜ ಸರಳ ಉಪಾಯವೆಂದು ವಾಲ್ಮೀಕಿಯು ಅರಿತುಕೊಂಡಿದ್ದನು. ವಾಲ್ಮೀಕಿಯ ಪೂರ್ವನಿಯೋಜನೆಯಿಂದ ರಾವಣನಿಗೆ ಶಾಪಗಳು ದೊರೆತಿವೆ. ಒಟ್ಟು ಏಳು ಶಾಪಗಳು ರಾವಣನಿಗೆ ದೊರೆತ ಉಲ್ಲೇಖವು ರಾಮಾಯಣದಲ್ಲಿ ಕಂಡುಬರುತ್ತದೆ. ಇವುಗಳಲ್ಲಿಯ ನಾಲ್ಕು ಶಾಪಗಳು ಪರಸ್ತ್ರೀ ಅಭಿಲಾಷೆ, ಬಲಾತ್ಕಾರ ಇವುಗಳಿಗೆ ಸಂಬಂಧಿತವಾಗಿವೆ.[112] ಮೇಲೆ ವಿವರಿಸಿದ ಹಲವು ಪತಿವ್ರತೆಯರ ಶಾಪಗಳ ಹೊರತಾಗಿ, ಬ್ರಹ್ಮ ಹಾಗೂ ನಲಕೂಬರನು ಕೊಟ್ಟ ಘೋರಶಾಪಗಳು, ವೇದವತಿಯು ಮಾಡಿದ ಘೋರಪ್ರತಿಜ್ಞೆ, ಇವೆಲ್ಲವುಗಳಿಂದ ರಾವಣನು ಮಿಸುಕಾಡದಂತಾಯಿತು. ಈ ಕಾರಣದಿಂದ ಹತ್ತಿರದ ಸೀತೆಯನ್ನು ದೂರವಿರಿಸಬೇಕಾಯಿತು ; ಅವಳು ಅವನಿಗೆ ಲಭಿಸುವಂತಿರಲಿಲ್ಲ ; ಸೀತೆಯು ದುರ್ಲಭಳಾದಳು. ತನ್ನ ತಪೋಬಲವು ಉಡುಗಬಾರದೆಂದು ವೇದವತಿಯು ರಾವಣನಿಗೆ ಶಾಪವನ್ನು ಕೊಡಲಿಲ್ಲ ; ಆದರೆ ಅವಳು ಉಚ್ಚರಿಸಿದ ಪ್ರತಿಜ್ಞೆಯು ಶಾಪಕ್ಕಿಂತ ತೀಕ್ಷ್ಣವಾಗಿದೆ. ವೇದವತಿಯು ಓರ್ವ ತಪಸ್ವಿನಿಯಾಗಿದ್ದಳು. ಅವಳು ಅಗ್ನಿಯನ್ನು ಪ್ರವೇಶಿಸಿ ಮೃತ್ಯುವನ್ನಪ್ಪುವಾಗ ಪ್ರತಿಜ್ಞೆಯನ್ನು ನುಡಿದ ಕಾರಣ ಅದರ ಪ್ರಭಾವ, ಪ್ರಖರತೆ ತುಂಬಾ ಅಧಿಕಗೊಂಡಿದೆ. ಪುಂಜಿಕಸ್ಥಲೆಯನ್ನು ಬಲಾತ್ಕರಿಸಿದ ಕಾರಣ ಬ್ರಹ್ಮದೇವನು ರಾವಣನಿಗೆ ಶಾಪವನ್ನು ಕೊಟ್ಟಿದ್ದಾನೆ. ರಂಭೆಯ ಮೇಲೆ ಬಲಾತ್ಕಾರವನ್ನು ಎಸಗಿದ ಕಾರಣ ನಲಕೂಬರನೂ ರಾವಣನನ್ನು ಶಪಿಸಿದ್ದಾನೆ. ಈ ಎರಡೂ ಶಾಪಗಳ ಸ್ವರೂಪ, ಪರಿಣಾಮ ಒಂದೇ ರೀತಿಯದಾಗಿದೆ : ವ್ಯತ್ಯಾಸವಿರುವುದು ಅವುಗಳ ವಿವರಗಳಲ್ಲಿ ಮಾತ್ರ. ಈ ಎರಡೂ ಶಾಪಗಳು ಕಟ್ಟಳೆಯವಾಗಿವೆ. ಬ್ರಹ್ಮದೇವನ ಶಾಪದ ಭಯವು ರಾವಣನಿಗೆ ಹಗಲಿರುಳೂ ಕಾಡುತ್ತಿತ್ತು. ರಾವಣನು ತನಗಿದ್ದ ಭೀತಿಯನ್ನು ಮಂತ್ರಿಯಾದ ಮಹಾಪಾರ್ಶ್ವನ ಬಳಿ ತೋಡಿಕೊಂಡಿದ್ದಾನೆ.

ಮಹಾಪಾರ್ಶ್ವನು ರಾವಣನಿಗೆ ಕುಕ್ಕುಟ ರೀತಿಯಿಂದ ಸೀತೆಯನ್ನು ಬಲಾತ್ಕರಿಸಿ ಭೋಗಿಸಬೇಕೆಂಬ ಸಲಹೆಯನ್ನಿತ್ತನು ; ಅದರಿಂದಾಗುವ ಪರಿಣಾಮಗಳನ್ನು ಎದುರಿಸುವ ಬಲವು ರಾವಣನ ಬಳಿಯಿದೆ ಎಂದು ಮುಂತಾಗಿ ಹೊಗಳಿದನು. ಆಗ ರಾವಣನು ತಾನು ಪುಂಜಿಕಸ್ಥಲೆಯನ್ನು ಬಲಾತ್ಕರಿಸಿದಾಗ ಬ್ರಹ್ಮದೇವನಿಂದ ಹೊಂದಿದ, ಈವರೆಗೆ ರಹಸ್ಯವಾಗಿಟ್ಟ ಶಾಪದ ವಿಷಯವನ್ನು ಮಹಾಪಾರ್ಶ್ವನಿಗೆ ಏಕಾಂತದಲ್ಲಿ ಹೇಳಿದನು.[113]

"ಈ ರೀತಿ ಬ್ರಹ್ಮನ ಶಾಪಕ್ಕೆ ತುಂಬಾ ಹೆದರಿಕೊಂಡ ನಾನು ವಿದೇಹಕನ್ಯೆಯಾದ ಸೀತೆಯನ್ನು ಶುಭ ಶಯ್ಯೆಯ ಮೇಲೆ ಭೋಗಿಸಲು ಅಸಮರ್ಥನಾಗಿದ್ದೇನೆ" ಎಂದು ಸ್ವತಃ ರಾವಣನು ಹೇಳಿದ್ದಾನೆ.

ಮಹಾಭಾರತದಲ್ಲಿ ಶ್ರೀರಾಮಕಥೆಯು ವನಪರ್ವದ ಅಧ್ಯಾಯದಲ್ಲಿ (೨೭೩ ರಿಂದ ೨೯೧) ಬಂದಿದೆ.

ಕಾಮಮಂಗಾನಿ ಮೇ ಸೀತೇ ದುನೋತು ಮಕರಧ್ವಜಃ ॥ ೨೭ ॥
ನ ತ್ವಾಮಕಾಮಾಂ ಸುಶ್ರೋಣೆ ಸಮೇಷ್ಯೇ ಚಾರುಹಾಸಿನೀಮ್ ॥ ೨೮ ॥

"ಹೇ ಸುಂದರಿ ! ಎಲೈ ಸುಹಾಸಿನಿಯೆ ! ಕಾಮನು ನನ್ನ ಶರೀರವನ್ನು ಎಷ್ಟೇ ಪೀಡಿಸಿದರೂ ನಾನು ನಿನ್ನ ಒಪ್ಪಿಗೆಯಿಲ್ಲದೆ ಸಮಾಗಮಿಸುವದಿಲ್ಲ." ಈ ರೀತಿ ರಾವಣನು ನಿಖರವಾಗಿ ಹೇಳಿದ್ದಾನೆ ; ಆದ್ದರಿಂದ ಇನ್ನಿತರ ಪುರಾವೆಗಳ ಆವಶ್ಯಕತೆಯಿಲ್ಲ.

ತ್ರಿಜಟೆ ಎಂಬ ರಾಕ್ಷಸಿಯು ಸೀತೆಯಲ್ಲಿ ನೆಚ್ಚಿಕೆಯನ್ನುಂಟುಮಾಡಿ ಈ ರೀತಿ ಹೇಳಿದ್ದಾಳೆ :

ಮಾ ಚ ತೇಽಸ್ತು ಭಯಂ ಭೀರು ರಾವಣಾಲ್ಲೋಕಗರ್ಹಿತಾತ್ ।
ನಲಕೂಬರಶಾಪೇನ ರಕ್ಷಿತಾ ಹ್ಯಸಿ ನಂದಿನೀ ॥ ೫೯ ॥
ಶಪ್ತೋಹ್ಯೇಷ ಪುರಾ ಪಾಪೋ ವಧುಂ ರಂಭಾಂ ಪರಾಮೃಶನ್ ।
ನ ಶಕ್ನೋತ್ಯವಶಾಂ ನಾರೀಮುಪೈತುವ ಜಿತೇಂದ್ರಿಯಃ ॥ ೬೦ ॥

"ಹೇ ನಂದಿನಿ ! ಆತನಿಗೆ ಕುಬೇರಪುತ್ರನಾದ ನಲಕೂಬರನ ಶಾಪವು ದೊರಕಿದೆ. ಆದರಿಂದಲೇ ನಿನ್ನ ರಕ್ಷಣೆಯಾಗುತ್ತಿದೆ. ಪೂರ್ವದಲ್ಲಿ ಈ ದುಷ್ಟನು ಸೊಸೆಯಂತಿದ್ದ ರಂಭೆ ಎಂಬ ನಾರಿಯೊಡನೆ ಅತಿಪ್ರಸಂಗ ವನ್ನು ಮಾಡಿದನು. ಆ ಕಾರಣ ಆತನಿಗೆ ತಾನಾಗಿ ಶಾಪ ದೊರಕಿದೆ. ಈ ಅಜಿತೇಂದ್ರಿಯನಾದ ರಾವಣನು ಆತನಿಗೆ ತಾನಾಗಿ ವಶವಾಗದ ಸ್ತ್ರೀಯೊಡನೆ ಸಮಾಗಮವನ್ನು ನಡೆಸಲು ಅಸಮರ್ಥನಾಗಿದ್ದಾನೆ."

ಶ್ರೀರಾಮನು ಸೀತೆಯ ಚಾರಿತ್ರ್ಯದ ಶುದ್ಧತೆಯ ಬಗ್ಗೆ ಸಂದೇಹವನ್ನು ತಳೆದು ಅವಳನ್ನು ತ್ಯಜಿಸಲು ಸಿದ್ಧನಾದಾಗ ಬ್ರಹ್ಮದೇವನು ಪ್ರಕಟನಾಗಿ ಇಂತೆಂದನು :

ನಲಕೂಬರಶಾಪೇನ ರಕ್ಷಾ ಚಾಸ್ಯಾಃ ಕೃತಾ ಮಯಾ ॥ ೩೩ ॥ (ವನಪರ್ವ, ೨೯೧)

"ನಲಕೂಬರನ ಶಾಪದಿಂದ ನಾನು ಅವಳ ರಕ್ಷಣೆಯನ್ನೇರ್ಪಡಿಸಿದ್ದೆನು. ಅದೇ ರೀತಿ—

ಯದಿ ಹ್ಯಕಾಮಾ ಮಾ ಸೇವೇತ ಸ್ತ್ರಿಯಮಾನ್ಯಾಮಪಿ ಧ್ರುವಮ್ ।
ಶತಧಾಽಸ್ಯ ಫಲೇನ್ಮೂರ್ಧಾ ಇತ್ಯುಕ್ತಃ ಸೋಽಭವತ್ ಪುರಾ ॥ ೩೪ ॥ (ವನಪರ್ವ, ೨೯೧)

"ಅವನಲ್ಲಿ ಆಸಕ್ತಿಯಿರದ ಯಾವಯಾವಳೇ ಪರಸ್ತ್ರೀಯನ್ನು ಆತನು ಬಲಾತ್ಕಾರದಿಂದ ಭೋಗಿಸಿದರೆ ಆತನ ಶಿರಸ್ಸು ಸಹಸ್ರ ಹೋಳಾಗುವದು" ಎಂಬ ಶಾಪವನ್ನು ಮೊದಲೇ ಕೊಡಲಾಗಿತ್ತು. ಬ್ರಹ್ಮದೇವನು ಸೀತೆಗೆ ಈ ವಿಧದ ಆಶ್ವಾಸನೆಯನ್ನು ಕೊಟ್ಟ ಕಾರಣ ಸೀತೆಯು ಲಂಕೆಯಲ್ಲಿದ್ದರೂ ಭ್ರಷ್ಟಳಾಗದೇ ಉಳಿದಿರು ವದರ ಶ್ರೇಯವು ಅವಳ ಪಾತಿವ್ರತ್ಯಕ್ಕಿರದೆ, ರಾವಣನಿಗೆ ದೊರೆತ ಶಾಪಗಳ ಮೂಲಕವೆಂದು ಹೇಳಬಹುದು.

## ರಾಮಾಯಣ : ಒಂದು ಮಾನವಕಥೆ

ವಾಲ್ಮೀಕಿ ರಚಿಸಿದ ರಾಮಾಯಣ ಒಬ್ಬ ಮಾನವನ ಕಥೆಯೇ ಹೊರತು ದೇವರ ಕಥೆಯಲ್ಲ. ವಿಷ್ಣುವು ದೇವನಾಗಿದ್ದರೂ ಭೃಗುಮುನಿಯ ಶಾಪದಿಂದಾಗಿ ಇಲ್ಲವೆ ತನ್ನ 'ಪರಿತ್ರಾಣಾಯ ಸಾಧೂನಾಂ ವಿನಾಶಾಯ **ಚ ದುಷ್ಕೃತಾಮ್'** ಎಂಬ ಹೇಳಿಕೆಯನ್ನು ಕಾಯ್ದುಕೊಳ್ಳಲು ಮಾನವಾವತಾರವನ್ನು ಧರಿಸಿದನು. ಪೃಥ್ವಿಗೆ ಬಂದು ಇಳಿಯುವಾಗ ಸ್ವಂತದ ದೈವೀಗುಣಗಳ ಸಂಚಯವನ್ನು ಸ್ವರ್ಗದಲ್ಲಿಯೇ ಇಟ್ಟುಬಂದನು ; ಮಾನ ವಾವತಾರಪೂರ್ವದ ತನ್ನ ದೇವತ್ವವನ್ನು ಸಂಪೂರ್ಣವಾಗಿ ಮರೆತನು. ನಂತರ ಪೂರ್ಣವಾಗಿ ಮಾನವನಂತೆ ವರ್ತಿಸಿದನು ; ಮಾನವನಾಗಿಯೇ ಬಾಳಿದನು. ಒಮ್ಮೆ ಈ ಮೃತ್ಯುಲೋಕದಲ್ಲಿ ಮಾನವನ ಭೂಮಿಕೆಯನ್ನು ಅಂಗೀಕರಿಸಿದನಂತರ ಶ್ರೀರಾಮನು ಅದನ್ನು ನಿಜಮಾನವನಂತೆ ನೆರವೇರಿಸಿದ್ದಾನೆ. ಮಾನವನಾಗಿದ್ದರೂ ಸರ್ವಸಾಮಾನ್ಯ ಮಾನವನಿಗಿಂತ ಎದ್ದುಕಾಣುತ್ತಾನೆ. ಜೀವನದತ್ತ ನೋಡುವ ಆತನ ದೃಷ್ಟಿಯೇ ಇದಕ್ಕೆ ಕಾರಣವಾಗಿತ್ತು. ಮಾನವಜನ್ಮದ ಶ್ರೇಷ್ಠ ಮೌಲ್ಯಗಳನ್ನು ಕಾಪಾಡಲು ಆತನು ಜೀವನವನ್ನೇ ಸಮರ್ಪಿಸಿದನು.

ತನ್ನ ನಡೆನುಡಿಗಳಿಂದ ಆದರ್ಶ ಮಾನವನ ಸೊಗಸಾದ ಚಿತ್ರವನ್ನು ರೂಪಿಸಿದನು. ಮಾನವರಲ್ಲಿ 'ಶ್ರೇಷ್ಠ'ನೆನಿಸಿಕೊಂಡನು; ಮಹಾಮಾನವನೆನಿಸಿದನು. ಹೀಗಿದ್ದರೂ ಸ್ವತಃ ಆತನು 'ಅತಿಮಾನವ'ನಾಗಲಿಲ್ಲ. ರಾಮಾಯಣದಲ್ಲಿ ಚಮತ್ಕಾರಗಳಿಗೆ ಸ್ಥಾನವಿಲ್ಲ. ರಾಕ್ಷಸರು ಬೇರೆ ಬೇರೆ ರೂಪಗಳನ್ನು ಧರಿಸುವುದು ; ಹನುಮಂತನು ಪರ್ವತವನ್ನು ಎತ್ತಿಕೊಂಡು ಬರುವುದು ; ಯಜ್ಞಕುಂಡದಿಂದ ಯಜ್ಞಪುರುಷನು ಕಾಣಿಸಿಕೊಳ್ಳುವುದು ; ಅಗ್ನಿಪ್ರವೇಶಮಾಡಿ ಸೀತೆಯು ಸುಖರೂಪವಾಗಿ ಹೊರಗೆ ಬರುವುದು — ಇವು ಚಮತ್ಕಾರಗಳಲ್ಲ ; ದೈವಿಕ ಗುಣಗಳೂ ಇವುಗಳಲ್ಲಿಲ್ಲ. ಮಾನವನ ಶಕ್ತಿಗೆ ಅಸಾಧ್ಯವೆನಿಸುವುದನ್ನು ರಾಕ್ಷಸರು ಮಾಯೆಯ ಶಕ್ತಿಯಿಂದ ಸಾಧಿಸುತ್ತಾರೆ. ಈ ಶಕ್ತಿಯು ರಾಕ್ಷಸರಲ್ಲಿ ಹುಟ್ಟನಿಂದ ಇರುತ್ತದೆ ; ಅಲ್ಲದೇ ಅದನ್ನು ಸಾಧನೆಯಿಂದ ಪಡೆದಿರುತ್ತಾರೆಂದು ಗ್ರಹಿಸಿದರೆ ರೂಪಧಾರಣೆಯು ಚಮತ್ಕಾರವೆಂದೆನಿಸದು. ಹನುಮಂತನು ಪರ್ವತವನ್ನು ಎತ್ತಿ ತಂದನು ; ಎಂದರೆ ಆ ಕಾಲದಲ್ಲಿ ಗೊತ್ತಿದ್ದ ಎಲ್ಲ ವನಸ್ಪತಿಗಳನ್ನು ಬೆಟ್ಟದ ಗಾತ್ರದಷ್ಟು ಪ್ರಮಾಣದಲ್ಲಿ ತಂದನು. ಸೀತೆಯು ಅಗ್ನಿದಿವ್ಯವನ್ನು ಕೈಗೊಂಡಳು ಎಂದರೆ ತೀರ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿಯೂ ಆಕೆಯು ತನ್ನ ಚಾರಿತ್ರ್ಯವನ್ನು ಶುದ್ಧವಾಗಿ ಕಾಯ್ದುಕೊಂಡಳು. ಅಗ್ನಿಪ್ರವೇಶಕ್ಕೆ ಸಮಾನವಾದ ಪ್ರಖರ–ಘೋರ ಪರೀಕ್ಷೆಗಳಿಂದ ಪಾರಾದಳು ಎಂದು ತಿಳಿಯಬೇಕು.

ರಾಮಾಯಣವು ಒಂದು ಆದಿಮಹಾಕಾವ್ಯ ; ಮಹಾಕಾವ್ಯವು ಮಾನವನದಾಗಿರುತ್ತದೆ. ರಾಯ್ಟ್ ಆನರೆಬಲ್ ಶ್ರೀ ವ್ಹಿ. ಎಸ್. ಶ್ರೀನಿವಾಸ ಶಾಸ್ತ್ರಿಯವರ ಹೇಳಿಕೆಯಂದರೆ — "ಮಹಾಕಾವ್ಯವೊಂದರ ನಿರ್ಮಾಣವೆಂದರೆ ಒಂದು ಬಲುದೊಡ್ಡ ಕಲೆಯಾಗಿದೆ. ಅದರ ಮುಖ್ಯ ಗುರಿಯೆಂದರೆ ಮಾನವನ ಮನಸ್ಸು ಹಾಗೂ ನೈತಿಕತೆಯ ಮಟ್ಟವನ್ನು ಎತ್ತರಕ್ಕೊಯ್ಯುವುದೇ ಆಗಿದೆ. ಮಹಾಕಾವ್ಯದ (ಆದರ್ಶ) ಕಲಿಸುವಿಕೆಯ ಲಾಭ ದೊರೆತು ಅದರ ಉಚ್ಚಮಟ್ಟದ ಮೌಲ್ಯಗಳು ನಮ್ಮ ನಡತೆಗಳ ಮೇಲೆ ಅಚ್ಚೊತ್ತಿ ಸರಿಯಾದ ಶಿಸ್ತು ರೂಪುಗೊಳ್ಳುವಂತಾಗಲೆಂದೇ ಅದನ್ನು ಪಠಿಸಲಾಗುತ್ತದೆ"[14] ಎಂದು ಆಗಿದೆ. ಇದು ಸ್ಪಷ್ಟವಾಗಿರುವುದರಿಂದ ಇದರ ವಿವರಣೆ ಅನಗತ್ಯವೆನಿಸುತ್ತದೆ. ರಾಮಾಯಣದಲ್ಲಿಯ ವ್ಯಕ್ತಿಗಳ ಸ್ವಭಾವ, ಗುಣಾವಗುಣಗಳು, ವರ್ತನ, ಕೃತಿ, ನಡೆನುಡಿ, ಎಲ್ಲವೂ ಮಾನವರದಾಗಿದೆ. ವಾಲ್ಮೀಕಿಯು ಮನುಷ್ಯ-ಸ್ವಭಾವದ ವಿಶ್ಲೇಷಣೆಯನ್ನು, ಪದರುಪದರುಗಳಾಗಿ, ಅತಿಸೂಕ್ಷ್ಮವಾಗಿ, ಮನೋಹರವಾಗಿ ಬಿಡಿಸಿ ನಮ್ಮ ಮುಂದಿಟ್ಟಿದ್ದಾನೆ. ಸೀತೆಯು ಶ್ರೀರಾಮನೊಡನೆ ವನವಾಸಕ್ಕೆ ತೆರಳುವುದೆಂದು ಇನ್ನೂ ನಿಶ್ಚಿವಾಗಿರದಾಗ, ಶ್ರೀರಾಮನು ಸೀತೆಯನ್ನುದ್ದೇಶಿಸಿ, ತಾನು ಅಯೋಧ್ಯೆಯಲ್ಲಿ ಇರದ ಸಮಯದಲ್ಲಿ ಸೀತೆಯು ಯಾವ ರೀತಿ ವ್ಯವಹರಿಸಬೇಕೆಂದು ತಿಳಿಸಿ ಹೇಳಿದನು : "ವೈಭವಸಂಪನ್ನರು ಬೇರೆಯವರ ಸ್ತುತಿಯನ್ನು ಸಹಿಸಲಾರರು ! ಆದಕಾರಣ ಭರತನ ಎದುರಿನಲ್ಲಿ ನೀನು ನನ್ನನ್ನು ಹೊಗಳಬೇಡ !" ಇದೊಂದು ವ್ಯಾವಹಾರಿಕ ಸೂಚನೆಯಂತಿದ್ದರೂ ವಾಲ್ಮೀಕಿಯು ಎಷ್ಟೊಂದು ಸೂಕ್ಷ್ಮವಾಗಿ ಮನುಷ್ಯಸ್ವಭಾವವನ್ನು ನಿರೀಕ್ಷಿಸಿದ್ದಾನೆ ಎಂಬುದು ವಿದಿತವಾಗುತ್ತದೆ. ದಶರಥನ ಆಜ್ಞೆಯನ್ನು ಕೌಸಲ್ಯೆಗೆ ತಿಳಿಸುವಾಗ ಶ್ರೀರಾಮನು ತನ್ನ ವ್ಯಥೆಯನ್ನು ಅದುಮಿಟ್ಟಿದ್ದಾನೆ; ಆದರೆ ಆ ಸಂಗತಿಯನ್ನೇ ಸೀತೆ ಮತ್ತು ಲಕ್ಷ್ಮಣರಿಗೆ ಹೇಳುವಾಗ ತನ್ನ ದುಃಖವನ್ನೆಲ್ಲ ತೋಡಿಕೊಂಡಿದ್ದಾನೆ. ತಾನು ವನವಾಸಕ್ಕೆ ತೆರಳಿದಾಗ ಲಕ್ಷ್ಮಣ ಮತ್ತು ಸುಮಂತ ಇವರು ಅಯೋಧ್ಯೆಯಲ್ಲಿ ಉಳಿಯುವುದು ಉಚಿತವೆಂಬುದನ್ನು ಪರಿಪರಿಯಾಗಿ ತಿಳಿಸುವಾಗಿನ ಶ್ರೀರಾಮನ ಮನಸ್ಸಿನ ತುಮುಲವನ್ನು ವಾಲ್ಮೀಕಿಯು ಬಹಳ ಸುಂದರವಾಗಿ ಬಣ್ಣಿಸಿದ್ದಾನೆ. ಶ್ರೀರಾಮನ ಎದುರಿನಲ್ಲಿಯೇ ವಿರಾಧನು ತನ್ನ ತೊಡೆಯ ಮೇಲೆ ಸೀತೆಯನ್ನು ಕುಳ್ಳಿರಿಸಿಕೊಂಡು ಆಡಿದ ಮಾತುಗಳಿಂದ ಶ್ರೀರಾಮನ ಹೃದಯವು ತತ್ತರಿಸಿತು. ಆ ಸಂದರ್ಭದಲ್ಲಿ ಆತನಿಗಾದ ಅತೀವ ದುಃಖ, ಸೀತೆಗಾಗಿ ಅವನು ಮಾಡಿದ ವಿಲಾಪ, ಅವಳ ಶೋಧಕ್ಕಾಗಿ ಶ್ರೀರಾಮನು ಪಟ್ಟ ಕಷ್ಟ, ಸೀತೆಯ ಪುನಃಪ್ರಾಪ್ತಿಯಾದನಂತರ ಆಕೆಯನ್ನು ಶುದ್ಧೀಕರಿಸಿ ಸ್ವೀಕರಿಸುವ ನಿರ್ಧಾರ, ಅವಳನ್ನು ತ್ಯಜಿಸಿದ್ದು, ಸುಗ್ರೀವನು ಕರ್ತವ್ಯಚ್ಯುತನಾದಾಗ ಆತನಿಗೆ ಕೊಟ್ಟ ಎಚ್ಚರಿಕೆಯ ಮುನ್ಸೂಚನೆ, ಶೂರ್ಪನಖಿಗೆ ಮಾಡಿದ ಅಪಹಾಸ್ಯ, ಪ್ರಸಂಗಾನುಸಾರ ಅಸತ್ಯವನ್ನು ಆಶ್ರಯಿಸಬಹುದೆಂದು ಸುಮಂತನಿಗೆ ಮಾಡಿದ ಉಪದೇಶ, ಲಕ್ಷ್ಮಣನ ಬಗ್ಗೆ ಇದ್ದ ಮಿತಿಮೀರಿದ ಪ್ರೀತಿ, ಲಕ್ಷ್ಮಣನ ಅಚಲನಿಷ್ಠೆ, ಸೀತೆಯು ಲಕ್ಷ್ಮಣನನ್ನು ಸಿಕ್ಕಾಪಟ್ಟೆ ದೂಷಿಸಿದ್ದು, ಹನುಮಂತನ ಅಪಾರ ಭಕ್ತಿ, ರಾವಣನ ಅಂತ್ಯಕ್ರಿಯೆಯನ್ನು ಯಥಾಸಾಂಗವಾಗಿ

ನೆರವೇರಿಸುವಂತೆ ವಿಭೀಷಣನಿಗೆ ಹೇಳುವುದು ; ಇವೆಲ್ಲ ಮನುಷ್ಯಸ್ವಭಾವದ ವಿವಿಧ ಸಂಗತಿಗಳಾಗಿವೆ. ಇವು ರಾಮಾಯಣದ ಪುಟಪುಟಗಳಲ್ಲಿ ಹರಡಿಕೊಂಡಿವೆ. ಸ್ತ್ರೀಸ್ವಭಾವವಾಗಿರುವ ಉಜ್ವಲ ಪತಿನಿಷ್ಠೆ, ಅಸಾಮಾನ್ಯ ತ್ಯಾಗ, ವಾತ್ಸಲ್ಯಭಾವನೆ, ಪ್ರೀತಿ, ಭಕ್ತಿ, ಕೋಪ–ತಾಪ, ಲೋಭ, ಕಪಟ, ಅಸೂಯೆ, ಈರ್ಷೆ ಈ ಬಗೆಯ ಮಾನವಸ್ವಭಾವಧರ್ಮಗಳು ಅಲ್ಲಲ್ಲಿ ಪ್ರತಿಬಿಂಬಿತವಾಗಿವೆ. ಉಚ್ಚಧ್ಯೇಯವನ್ನಿಟ್ಟುಕೊಂಡಂಥ ಶ್ರೀರಾಮ, ಲಕ್ಷ್ಮಣ, ಸೀತೆ, ಹನುಮಂತ ಮುಂತಾದ ಕರ್ತವ್ಯನಿಷ್ಠರು ಇದ್ದಾರೆ. ಇವರ ಜೀವನೋದ್ದೇಶವು ಮಹಾಶ್ರೇಷ್ಠವಾದದ್ದು. ಸಾಮಾನ್ಯ ಜನರಿಗಿಂತ ಅವರು ಬೇರೆಯಾಗಿ ಎದ್ದು ಕಾಣುತ್ತಾರೆ; ಅವರ ಆದರ್ಶಗಳೇ ಇದಕ್ಕೆ ಕಾರಣವಾಗಿದೆ. ನಮ್ಮ ಅಳತೆಗೋಲಿನಿಂದ ಅವರನ್ನು ಅಳೆಯುವುದು ಸರಿಯಲ್ಲ; ಅವರು ಮಾನವರೇ ಅಹುದು ; ಆದರೆ ಶ್ರೇಷ್ಠಮಟ್ಟದ ಮಾನವರು, ಮಹಾಮಾನವರು ; ಆದರೆ ಅತಿಮಾನವರಲ್ಲ, ದೈವಿಕ ಗುಣಗಳಿಂದ ಕೂಡಿದವರಲ್ಲ.

ರಾಮಾಯಣವು ಮಾನವನು ಮಾನವರಿಗಾಗಿ ಬರೆದ ಗ್ರಂಥ ; ಮಾನವನ ಬದುಕು ಹೇಗಿದೆ ? ಎಂದು ಹೇಳುವ ಬದಲು ಹೇಗಿರಬೇಕು ? ಎಂದು ವಿವರಿಸುವ ಹೆಸರಾಂತ, ಶ್ರೇಷ್ಠ ಗ್ರಂಥವಾಗಿದೆ. ರಾಮಾಯಣದ ನಿರ್ಮಿತಿಯಲ್ಲಿ ಶಪಥ, ಶಾಪ, ವರ, ಆಶೀರ್ವಾದ, ಶಕುನಗಳು ಹೇರಳವಾಗಿವೆ. ವಾಲ್ಮೀಕಿಯು ತನ್ನ ಅಸಾಧಾರಣ ಪ್ರತಿಭೆಯಿಂದ, ಮನೋಹರವಾದ ಕಲ್ಪನಾವಿಲಾಸದಿಂದ, ಶಬ್ದಮಾಧುರ್ಯದಿಂದ, ಚೇತೋಹಾರಿ ಪಾಂಡಿತ್ಯದಿಂದ. ನಾರದನು ಹೇಳಿದ ಕಥೆಯನ್ನು ರಾಮಾಯಣವಾಗಿ ಬರೆದಿಟ್ಟು, ಅದನ್ನು ಅಜರಾಮರ ಗೊಳಿಸಿದ್ದಾನೆ. ರಾಮಾಯಣದ ಆಕರ್ಷಣೆಯು ಯುಗಯುಗಾಂತರಗಳು ಗತಿಸಿದರೂ ಕಡಿಮೆಯಾಗಲಾರದು. ರಾಮಾಯಣದಲ್ಲಿ ಶಾಪ / ವರಗಳನ್ನು ಬಹುಕುಶಲತೆಯಿಂದ ಯೋಜಿಸಿರುವುದರಿಂದ ಅವು ಕಥೆಯಿಂದ ಬೇರ್ಪಡಿಸಲಾಗದ ಘಟಕಗಳಾಗಿವೆ. ಶಾಪ / ವರಗಳನ್ನು ಗಮನಿಸಿದಾಗ, ರಾಮಾಯಣವು ಒಂದು ಶಾಪಕಥೆ-ವರಕಥೆ ಎಂದರೂ ಅತಿಶಯೋಕ್ತಿ ಎನಿಸಲಾರದು.

### ಉಪಸಂಹಾರ

ಐಹಿಕ ಸುಖಸಮೃದ್ಧಿಗಾಗಿ ಮತ್ತು ದುಃಖನಿವಾರಣೆಗಾಗಿ ಮಾನವನು ಸತತ ಪ್ರಯತ್ನಗಳನ್ನು ನಡೆಸಿರುತ್ತಾನೆ. ಇದು ಆತನ ಬಲವತ್ತರವಾದ ಸ್ವಾಭಾವಿಕ ಪ್ರವೃತ್ತಿಯಾಗಿದೆ. ತನ್ನ ಉದ್ದಿಷ್ಟಗಳನ್ನು ಸಾಧ್ಯಮಾಡಿಕೊಳ್ಳಲು ಆತನು ಎಲ್ಲ ಶಕ್ತಿಗಳನ್ನು ಬಳಸುತ್ತಾನೆ. ಹೀಗೆ ಮಾಡಿಯೂ ಧ್ಯೇಯಗಳು ಕೈಗೂಡದಿದ್ದರೆ, ಪ್ರಯತ್ನಗಳು ವಿಫಲ ಎಂದೆನಿಸಿದಾಗ ಆತನು ಮಾನವೇತರ ಅಥವಾ ಅತಿಮಾನವೀ, ಮಹಾಮಾನವೀಶಕ್ತಿಗಳಿಗೆ ಶರಣುಹೋಗುತ್ತಾನೆ. ವಿಜ್ಞಾನದಲ್ಲಿ ಪ್ರಗತಿಯಾದಂತೆ ಅಸಾಧ್ಯವೆನಿಸಿದ ಸಂಗತಿಗಳು ಸಾಧ್ಯವಾಗಿವೆ ; ಸಹಜವಾಗಿ, ಸುಲಭವಾಗಿ ದೊರೆಯುವಂತಾಗಿವೆ. ಇಂದಿನ ಐಹಿಕ ಜೀವನವು ವಿವಿಧ ರೀತಿಯಿಂದ ಸಮೃದ್ಧವಾಗಿದೆ. ಇಷ್ಟೆಲ್ಲ ಸಾಧಿಸಿದ್ದರೂ ಮಾನವೇತರ ಶಕ್ತಿಸಾಮರ್ಥ್ಯದ ಬಗ್ಗೆ ಅವನಿಗಿದ್ದ ಶ್ರದ್ಧೆ, ಕುತೂಹಲ ಕಡಿಮೆಯಾಗಿಲ್ಲ. ಕೆಲವು ಸುಶಿಕ್ಷಿತ ಸುಸಂಸ್ಕೃತ ಬುದ್ಧಿನಿಷ್ಠರನ್ನು ಬಿಟ್ಟರೆ ಬಹುಸಂಖ್ಯ ಜನರು ಈ ಸಾಮರ್ಥ್ಯವನ್ನು ಹೆಚ್ಚಾಗಿ ನಂಬುತ್ತಾರೆ. ಐಹಿಕ ಉದ್ದಿಷ್ಟ–ಅಭಿಲಾಷೆಗಳ ಪೂರ್ತಿಗಾಗಿ ಜನರು ಇಂದು ಕೂಡ ಸತ್ಯನಾರಾಯಣ ವ್ರತವನ್ನಾಚರಿಸುತ್ತಾರೆ ; ಹರಕೆಗಳನ್ನು ಹೊರುತ್ತಾರೆ ; ವ್ರತನಿಯಮಗಳನ್ನು ಕೈಕೊಳ್ಳುತ್ತಾರೆ ; ದೇವರಿಗೆ ಬೇಡಿಕೊಳ್ಳುತ್ತಾರೆ. ಮಠ-ಮಂದಿರಗಳಲ್ಲಿ ಭಕ್ತಾದಿಗಳ ದಟ್ಟಣೆಯಾಗುತ್ತಿರುವದು ಐಹಿಕ ಲಾಭಕ್ಕಾಗಿಯೇ ಎಂದೆನ್ನಬಹುದು. ಆತ್ಮೋದ್ಧಾರಕ್ಕಾಗಿ ಹೋಗುವವರು ಅತಿವಿರಳವಿರುತ್ತಾರೆ.

ವ್ಯಾಸ-ವಾಲ್ಮೀಕಿಯರಂಥ ಮಹಾಪುರುಷರು ತಮ್ಮ ಗ್ರಂಥರಚನೆಯಲ್ಲಿ ಶಾಪ/ವರಗಳನ್ನು ಮುಕ್ತಹಸ್ತದಿಂದ ಬಳಸಿದ್ದಾರೆ. ಶಾಪ / ವರಗಳ ಸಂಕಲ್ಪನೆಯು ಮಾನವನ ಪ್ರವೃತ್ತಿಗೆ ಸಂಬಂಧಿತವಾಗಿದೆ. ಇವುಗಳನ್ನು ಕಥೆಯಿಂದ ತೆಗೆದುಹಾಕುವಂತಿಲ್ಲ. ಋಷಿಗಳ ಬುದ್ಧಿಯ ಕೌಶಲ್ಯದಿಂದಾಗಿ ಅವು ಕೃತ್ರಿಮವೆಂದೆನಿಸುವುದಿಲ್ಲ. ಕೆಲವು ಶಾಪ / ವರಗಳನ್ನಂತೂ ಕಥೆಯಿಂದ ಬಿಟ್ಟುಕೊಡುವದು ಸುತರಾಂ ಸಾಧ್ಯವಿಲ್ಲ. ಅವುಗಳ ಯೋಜಕತೆಯು ಮಹತ್ತ್ವದ್ದಾಗಿದೆ. ಶ್ರೀ ಮ. ರಂ. ಶಿರವಾಡಕರ ಎಂಬವರು ಮಹಾಭಾರತದ ಸಂದರ್ಭದಲ್ಲಿ ಈ ರೀತಿ ಬರೆದಿದ್ದಾರೆ :

"ವರ ಹಾಗೂ ಶಾಪ ಇವು ಲೇಖಕರ ಕಲ್ಪನಾವಿಲಾಸದ ಆವಿಷ್ಕೃತಿಯಾಗಿವೆ. ಇದೊಂದು ಪ್ರಕಾರದ ಭಾಷೆಯಲ್ಲಿಯ ಅಲಂಕಾರವೆಂದೆನ್ನಬಹುದು. ಅವುಗಳ ಉಗಮವು ಕರ್ಮವಾದದಲ್ಲಿಯ ಸಿದ್ಧಾಂತದಿಂದ ಆಗಿದೆ."[115] ಈ ವಿಧಾನವನ್ನು ಸ್ವಲ್ಪಮಟ್ಟಿಗೆ ವಿವರವಾಗಿ ಅಭ್ಯಸಿಸಬೇಕು. ಕಲ್ಪನಾವಿಲಾಸ ಅಥವಾ ಅಲಂಕಾರ ಇವುಗಳಿಂದ ಲೇಖನಸೌಂದರ್ಯವು ವರ್ಧಿಸುತ್ತದೆ ; ಅವುಗಳ ಅಭಾವವಿದ್ದರೆ ಸೌಂದರ್ಯಹಾನಿಯಾಗುತ್ತದೆ; ಆದರೆ ಅವು ಬೇರ್ಪಡಿಸದಂಥ ಭಾಗವಾಗುವುದಿಲ್ಲ. ಶಾಪ / ವರಗಳು ಯಾವಾಗಲೂ ಹೊರಗಿನವು ; ಅವುಗಳನ್ನು ಸೇರಿಸಿಕೊಳ್ಳಬಹುದು ಇಲ್ಲವೆ ತೆಗೆದುಹಾಕಬಹುದು ; ಏಕೆಂದರೆ ಅವು ಕೃತ್ರಿಮವಾಗಿರುತ್ತವೆ. ಅಂತರಂಗದೊಡನೆ ಬೆರೆತಿರುವದಿಲ್ಲ ; ಸಾಮರಸ್ಯವನ್ನು ಹೊಂದುವದಿಲ್ಲ. ನಿಜವಾಗಿ ಶಾಪ / ವರಗಳು ಈ ರೀತಿಯಾಗಿವೆಯೇ ? ರಾಮಾಯಣದಲ್ಲಿಯ ದಶರಥನು ಕೈಕೇಯಿಗೆ ಕೊಟ್ಟ ವರಗಳನ್ನು ತೆಗೆದುಹಾಕಬಹುದೇ ? ಹಾಗೆ ಮಾಡಿದರೆ ಕಥೆಯಲ್ಲಿ ಉಳಿಯುವದಾದರೂ ಏನು ? ಬ್ರಹ್ಮದೇವನು ರಾವಣನಿಗೆ ಕೊಟ್ಟ ವರ ಮತ್ತು ಶಾಪಗಳು ಆಲಂಕಾರಿಕವಾಗಿವೆಯೇ ? ಅವುಗಳನ್ನು ಬಿಟ್ಟುಕೊಟ್ಟರೆ ಕಥೆಯ ಪಾಡೇನಾಗಬಹುದು ? ಬ್ರಹ್ಮನ ಶಾಪದ ಭಯವು ರಾವಣನಿಗೆ ಎಷ್ಟೊಂದಿತ್ತು ಎಂಬುದನ್ನು ಗಮನಿಸಿದ್ದೇವೆ. ಈ ಶಾಪದ ಜೊತೆ ನಲಕೂಬರನು ಕೊಟ್ಟ ಶಾಪ ಮತ್ತು ವೇದವತಿಯ ಪ್ರತಿಜ್ಞೆ ಇವು ಇರದಿದ್ದರೆ ಸೀತೆಯ ಶೀಲರಕ್ಷಣೆ ಸಾಧ್ಯವಿತ್ತೇ ? ಶಾಪ / ವರಗಳು ಶ್ರೀರಾಮಕಥೆಯಲ್ಲಿ ಇರದಿದ್ದರೆ ಈಗ ನಾವು ಕಾಣುತ್ತಿರುವ ರಾಮಾಯಣವು ಇರುತ್ತಿರಲಿಲ್ಲ. ಶಾಪ / ವರಗಳು ಕರ್ಮವಾದದ ಸಿದ್ಧಾಂತದಿಂದ ನಿರ್ಮಿತವಾಗಿರದೆ ಅವು ಜನಮಾನಸದ ಪ್ರವೃತ್ತಿಯಿಂದ, ಮಾನವನ ಸ್ವಭಾವಧರ್ಮವಿಶೇಷದಿಂದ ನಿರ್ಮಿತವಾಗಿವೆ. ಮಾನವೇತರ ಶಕ್ತಿಯಲ್ಲಿ ಆತನಿಗೆ ಶ್ರದ್ಧೆ ಇರದಿದ್ದರೆ ಶಾಪ / ವರಗಳನ್ನು ನಂಬುತ್ತಿರಲಿಲ್ಲ. ಕರ್ಮವಾದದ ಸಿದ್ಧಾಂತವನ್ನು ಪೂರ್ಣವಾಗಿ ಅಲ್ಲಗಳೆಯಲಾಗದಿದ್ದರೂ ಅದರ ಪೋಷಣೆಯು ಸಹ ಮಾನವನ ವಿಶಿಷ್ಟ ಪ್ರವೃತ್ತಿಯ ಮೂಲಕವೇ ಆಗಿದೆ.

ಶಾಪ / ವರಗಳನ್ನು ಯಥೋಚಿತವಾಗಿ, ಸಮರ್ಪಕವಾಗಿ, ಯೋಗ್ಯವಾಗಿ ಸಹಜ ರೀತಿಯಲ್ಲಿ ಬಳಸಿ ವಾಲ್ಮೀಕಿಯು ಶ್ರೀರಾಮಕಥೆಗೆ ದಿವ್ಯಮೆರುಗನ್ನು ಕೊಟ್ಟಿದ್ದಾನೆ.

ಶ್ರೀರಾಮಕಥೆಯು ನಾರದನಿಗೆ ಪೂರ್ವದಲ್ಲಿಯೇ ಗೊತ್ತಿತ್ತು. ಅದನ್ನು ವಾಲ್ಮೀಕಿಗೆ ಹೇಳಿದನು. ಆ ಕಥೆಯು ಆಗ ಅಷ್ಟೊಂದು ಪ್ರಚಾರದಲ್ಲಿರಲಿಲ್ಲ. ನಾರದನು ಹೇಳಿದ ಕಥೆಯಲ್ಲಿ ಮೂರು ವರಗಳ ಉಲ್ಲೇಖವಿದೆ.[116] ಹೀಗಾಗಿ ವರ / ಶಾಪಗಳ ಕಲ್ಪನೆಯು ರಾಮಾಯಣದ ಪೂರ್ವದಿಂದಲೂ ಇದೆ ಎಂಬುದು ಖಚಿತಗೊಳ್ಳುತ್ತದೆ. ವಾಲ್ಮೀಕಿಯು ತನ್ನ ಪ್ರತಿಭೆಯನ್ನು ಚೆನ್ನಾಗಿ ಬಳಸಿಕೊಂಡು ಶ್ರೀರಾಮಕಥೆಗೊಂದು ಅಂದವನ್ನು, ಪರಿಪುಷ್ಟಿಯನ್ನು ತಂದೊದಗಿಸಿದ್ದಾನೆ. ವಾಲ್ಮೀಕಿಯ ರಾಮಾಯಣವು ಕಳೆದ ಹಲವಾರು ಶತಮಾನಗಳಿಂದ ಭಕ್ತರು, ರಸಿಕರನ್ನು ತನ್ನತ್ತ ಸೆಳೆದುಕೊಳ್ಳುತ್ತಲಿದೆ: ಅದು ಜನರ ಮನಸ್ಸುಗಳಲ್ಲಿ ಆಳವಾಗಿ ಮನೆಮಾಡಿಕೊಂಡಿದೆ. ವಾಲ್ಮೀಕಿಯು ನಾರದನ ಈ ಕಥೆಯಲ್ಲಿ ತನ್ನ ಪ್ರಜ್ಞೆಯಿಂದಾಗಿ ಹೊಸ ಚೈತನ್ಯವನ್ನೇ ನಿರ್ಮಿಸಿದನು ; ಶ್ರೀರಾಮಕಥೆಯನ್ನು ಚಿರಂಜೀವಗೊಳಿಸಿದನು.

ರಾಮಾಯಣದ ಸೌಂದರ್ಯದ ಹಲವಾರು ಬದಿಗಳಲ್ಲಿ ಶಾಪ/ವರ ಕೂಡ ಒಂದು ಚೇತೋಹಾರಿಯಾದ ಬದಿಯಾಗಿದೆ. ಈ ಬದಿಯನ್ನು ಎತ್ತಿತೋರಿಸುವುದೇ ಈ 'ಶಾಪಾದಪಿ ವರಾದಪಿ'ಯ ಗುರಿ.

## ಟಿಪ್ಪಣಿಗಳು

1. "Legitimately applied they yield science; illegitimately applied they yield magic, the bastard sister of science." — *Encyclopaedia of Religion and Ethics*

2. "On the whole the religion of the Rishis is practical ; it might also be said, is magical. They desire temporal blessings, rain, sunshine, long life, power, wealth in flocks and herds. The whole purpose of the sacrifices which occupy so much of their time and thought is to obtain good things. The sacrifice and the sacrificer came between gods and men. On the man's side is faith, munificence, a compelling force of prayer and intenseness of will ; the sacrifice invigorates the gods to do the will of the sacrificer."

— ವೈದಿಕಯಜ್ಞ - ತಂತ್ರಸಾಧನಾ, ಭಕ್ತಿಯೋಗ, ಪು. ೫೨

3. ಭಾರತೀಯ ಸಂಸ್ಕೃತಿ ಕೋಶ, ಖಂಡ ೭, ಪು. ೫೯೯.

4. ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥ —ಭ.ಗೀ. ೩

5. "Sacrifice is regarded as possessing a mystical potence superior even to gods who, it is sometimes stated, attained to their divine rank by means of sacrifice."

— ವೈದಿಕಯಜ್ಞ . ತಂತ್ರಸಾಧನಾ, ಆಣಿ ಭಕ್ತಿಯೋಗ, ಪು. ೪೭.

6. ವೈದಿಕಯಜ್ಞ - ತಂತ್ರಸಾಧನಾ, ಭಕ್ತಿಯೋಗ, ಪ್ರಸ್ತಾವನೆ, ಪು. ೧೫.

7. ಭಾರತೀಯ ಸಂಸ್ಕೃತಿ ಕೋಶ, ಖಂಡ ೪, ಪು. ೩೫-೩೭.

8. ತಪತಿ ತಾಪಯತಿ ವಾ ।

9. ಕ್ಷುತ್ಪಿಪಾಸಾ ಶೀತೋಷ್ಣಾದಿ ದ್ವಂದ್ವಸಹನಮ್ ।

10. ತಪಃ ಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷ್ಯಚರ್ಯಾಂ ಚರಂತಃ ।
ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋಽಹ್ಯವ್ಯಯಾತ್ಮಾ ॥

— ಮುಂಡಕೋಪನಿಷತ್, ೧/೧೧

11. ಋತಂ ತಪಃ ಸತ್ಯಂ ತಪಃ ಶ್ರುತಂ ತಪಃ ಶಾಂತಂ ತಪೋ ದಮಸ್ತಪಃ ।
ಶಮಸ್ತಪೋ ದಾನಂ ತಪೋ ಯಜ್ಞಂ ತಪೋ ಭೂರ್ಭುವಸ್ಸುವರ್ಬ್ರಹ್ಮೈತದುಪಾಸ್ಯೈತತ್ತಪಃ ॥

12. ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥
ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯತಪ ಉಚ್ಯತೇ ॥ ೧೫ ॥
ಮನಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥ — ಭ.ಗೀ., ೧೭

13. ಯದ್‌ದುಸ್ತರಂ ಯದ್‌ದುರಾಪಂ ಯದ್‌ದುರ್ಗಂ ಯಚ್ಚ ದುಷ್ಕರಮ್ ।
ಸರ್ವಂ ತತ್ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಮ್ ॥ — ಮನುಸ್ಮೃತಿ

14. ನೋಡಿ : ಮಹಾಭಾರತದ ಶಾಪವಾಣಿ, ಶಾಪ ೧೦೬.

15. ನ ಭೂಮಿದಾನಾದಸ್ತೀಹ ಪರಂ ಕಿಂಚಿದ್ । — ಮಹಾಭಾರತ, ಅನುಶಾಸನ – ೬೨/೪

16. ದಾತವ್ಯಮಿತಿ ಯದ್‌ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್‌ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦ ॥

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧ ॥
ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥ — ಅಧ್ಯಾಯ ೧೭

17. 'A curse or a blessing is a wish, expressed in words, that evil or good may befall a certain person.' — *Encyclopaedia of Religion and Ethics*, Vol. IV, p. 367

18. ವಾಲ್ಮೀಕಿರಾಮಾಯಣ, ಉತ್ತರಕಾಂಡ/೨೨, ೨೩.

19. ಶಾಪೇ ತ್ವಯಿ ಮಯೋತ್ಸೃಷ್ಟೇ ತಪಸಶ್ಚ ವ್ಯಯೋ ಭವೇತ್ ।
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೧೭/೩೩

20. ಸ್ಥಾನಾಚ್ಚ್ಯಾವಯಿತುಂ ದೇವಾ ರಕ್ಷಾಮಸ್ತು ತಪೋ ವಯಮ್ ॥
— ವಾಲ್ಮೀಕಿರಾಮಾಯಣ, ಬಾಲಕಾಂಡ, ೩೨/೨೦

21. *Encyclopaedia of Religion and Ethics*, Vol. IV, p. 369.

22. ತತಃ ಕ್ರುದ್ಧಸ್ತು ಸೌದಾಸಸ್ತೋಯಂ ಜಗ್ರಾಹ ಪಾಣಿನಾ ।
ವಸಿಷ್ಠಂ ಶಪ್ತುಮಾರೇಭೇ ಭಾರ್ಯಾ ಚೈನಮವಾರಯತ್ ॥ ೨೯ ॥
ತತಃ ಕ್ರೋಧಮಯಂ ತೋಯಂ ತೇಜೋಬಲಸಮನ್ವಿತಮ್ ।
ವ್ಯಸರ್ಜಯತ ಧರ್ಮಾತ್ಮಾ ತತಃ ಪಾದೌ ಸಿಷೇಚ ಚ ॥ ೩೧ ॥
— ವಾಲ್ಮೀಕಿರಾಮಾಯಣ, ಉತ್ತರ, ೬೫/೨೯–೩೧

23. ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ । — ಭ.ಗೀ., ೨/೬೩

24. "Blessing by words is more powerful ; but the curse by thought is more powerful than that by words." — *Encyclopaedia of Religion and Ethics*, Vol. IV, p. 367

25. ಶೇಪುರೇನಂ ರಘುಶ್ರೇಷ್ಠ ನಾತಿಕ್ರುದ್ಧಾ ತಿಮನ್ಯವಃ ।

26. "The efficacy of a wish or a curse depends not only upon the potency which it possesses from the beginning owing to certain qualities in the person from whom it originates but also on the vehicle by which it is conducted, just as the strength of an electric shock depends both on the original intensity of the current and the condition of the conductor. As particularly efficient conductors are regarded blood, bodily contact, food and drink." — *Encyclopaedia of Religion and Ethics*, Vol. IV, p. 369

27. ಅದ್ಯ ತೇ ಕಾಲಪಾಶೇನ ನೀತಾ ವೈವಸ್ವತಕ್ಷಯಮ್ ॥ ೧೮ ॥
ಸಪ್ತಜಾತಿಶತಾನ್ಯೇವ ಸಂಭವಂತು ತೇ ॥ ೧೯ ॥ — ವಾಲ್ಮೀಕಿರಾಮಾಯಣ, ಬಾಲ. ೫೯

28. "Purely magical power, independent of any superhuman will... is rooted in the close association between the wish, more particularly the spoken wish and the idea of its fulfilment. The wish is looked upon in the light of energy which may be transferred by material contact or by the eye or by means of speech to the person concerned then becomes a fact." — *Encyclopaedia of Religion and Ethcis*, Vol. IV, p. 366

29. ಉತ್ತರರಾಮಚರಿತಮ್—ಸಂಚಿಕೆ ೨.

30. ಭಾರತೀಯ ಸಂಸ್ಕೃತಿ ಕೋಶ, ಖಂಡ ೯, ಪು. ೨೪೭.

31. ಗ್ರೀಮ್ ಎಂಬಾತನು "Curses like chickens come home to roast. They turn home as birds to the nest" ಎಂದಿದ್ದಾನೆ— *Encyclopaedia of Religion and Ethics, Vol. IV,* p. 369

32. ಮಹಾಭಾರತ, ಶಾಪವಾಣಿ, ಶಾಪ - ೯೯.

33. "Conditional curse is an improtant development of the principle of cursing and blessing and has had considerable influence in the making of morality, especially in the sphere of good faith, honesty and truthfulness... The energy of a conditional curse is the supernatural energy of an ordinary curse or of its embodiment, in a latent state. This is discharged by the act, if or when it takes place, against which the curse is directed."

— *Encyclopaedia of Religion and Ethcis*, Vol. IV, p. 372

34. ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೧೧೦/೮

35. ಸರ್ವಂ ಪುಷ್ಟಂ ಪ್ರಮುದಿತಂ ಸುಸಂಪೂರ್ಣಮನೋರಥಮ್ ।
ಸಾಧುಸಾಧ್ವಿತಿ ತೈರ್ದೇವೈಸ್ತ್ರಿದಿವಂ ಗತಕಲ್ಮಷಮ್ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೧೧೦/೧೫

36. ಪಿತುಸ್ತ್ವಮೇವ ಮೇ ಗತ್ವಾ ಶೀಘ್ರಮಾಚಕ್ಷ್ವ ರಾಘವ ॥ ೪೩ ॥
ತಂ ಪ್ರಸಾದಯ ಗತ್ವಾ ತ್ವಂ ನ ತ್ವಾಂ ಸಂಕುಪಿತಃ ಶಪೇತ್ ॥ ೪೫ ॥

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೬೩

37. ವಾಲ್ಮೀಕಿರಾಮಾಯಣ, ಉತ್ತರಕಾಂಡ / ೫೫, ಶಾಪ-೪೯ ಹಾಗೂ ೫೦.

38. ವಾಲ್ಮೀಕಿರಾಮಾಯಣ, ಉತ್ತರಕಾಂಡ / ೬೫, ಶಾಪ-೫೫ ಹಾಗೂ ೫೬.

39. ವಾಲ್ಮೀಕಿರಾಮಾಯಣ, ಬಾಲಕಾಂಡ, ೪೮ ಹಾಗೂ ೪೯ ; ಉತ್ತರಕಾಂಡ / ೩೦.

40. "An oath may be regarded as essentially a conditional self-imprecation, a curse by which a person calls down upon himself some evil in the event of what he says not being true." — *Encyclopaedia of Religion and Ethics*, Vol. IV, p. 373.

41. ಭಾರತೀಯ ಸಂಸ್ಕೃತಿ ಕೋಶ, ಸಂಪುಟ ೯, ಪು. ೨೧೫.

42. "A solemn and formal appeal to God (or to a diety or something held in reverence or regard) in witness of the truth of a statement or the binding character of a promise or undertaking." - OED. — *Encyclopaedia of Religion and Ethics*, Vol. IX, p. 430

43. ಭಾರತೀಯ ಸಂಸ್ಕೃತಿ ಕೋಶ, ಸಂಪುಟ ೯, ಪು. ೨೧೮.

44. ಮಾತರಂ ರಕ್ಷ ಕೈಕೇಯೀಂ ಮಾ ರೋಷಂ ಕುರು ತಾಂ ಪ್ರತಿ ॥
ಮಯಾ ಚ ಸೀತಯಾ ಚೈವ ಶಪ್ತೋಽಸಿ ರಘುನಂದನ ।

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೧೨/೨೬-೨೮

45. ಅನುರಕ್ತೋಽಸ್ಮಿ ಭಾವೇನ ಭ್ರಾತರಂ ದೇವಿ ತತ್ತ್ವತಃ ।
ಸತ್ಯೇನ ಧನುಷಾ ಚೈವ ದತ್ತೇನೇಷ್ಟೇನ ತೇ ಶಪೇ ॥

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೨೧/೧೬

46. ಅಹತ್ವಾ ರಾವಣಂ ಸಂಖ್ಯೇ ಸಪುತ್ರಜನಬಾಂಧವಮ್ ।
ಅಯೋಧ್ಯಾಂ ನ ಪ್ರವೇಕ್ಷ್ಯಾಮಿ ತ್ರಿಭಿಸ್ತೈರ್ಭ್ರಾತೃಭಿಃ ಶಪೇ ॥

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೯/೨೧

47. ಬಹುವರ್ಷಸಹಸ್ರಾಣಿ ತಪಶ್ಚರ್ಯಾ ಮಯಾ ಕೃತಾ ।
ನೋಪಾಶ್ನೀಯಾಂ ಫಲಂ ತಸ್ಯಾ ದುಷ್ಟೇಯಂ ಯದಿ ಮೈಥಿಲೀ ॥
ಮನಸಾ ಕರ್ಮಣಾ ವಾಚಾ ಭೂತಪೂರ್ವಂ ನ ಕಿಲ್ಬಿಷಮ್ ।
ತಸ್ಯಾಹಂ ಫಲಮಶ್ನಾಮಿ ಅಪಾಪಾ ಮೈಥಿಲೀ ಯದಿ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೯೭/೨೦-೨೧

48. ಶಾಪಿತಾ ಹಿ ಮಯಾ ಯೂಯಂ ಪಾದಾಭ್ಯಾಂ ಜೀವಿತೇನ ಚ ।
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೪೫/೨೧

49. ಪ್ರತಿಕೂಲಿತುಮಿಚ್ಛಾಮಿ ನ ಹಿ ವಾಕ್ಯಮಿದಂ ತ್ವಯಾ ।
ಶಾಪಿತೋ ಮಮ ಪಾದಾಭ್ಯಾಂ ಗಮ್ಯತಾಂ ವತ್ಸ ಮಾ ಚಿರಮ್ ॥
— ವಾಲ್ಮೀಕಿರಾಮಾಯಣ, ಅರಣ್ಯಕಾಂಡ, ೨೪/೧೩

50. ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ವಿಚಾರಿತಮ್ ।
ಯಃ ಪಾಪೈಃ ಸಹ ಸಂಬದ್ಧಾನ್ಮುಚ್ಯತೇ ಶಪಥಾದಪಿ ॥ — ಶಾಂತಿಪರ್ವ, ೧೦೯/೧೭

51. ಯಸ್ಮಾತ್ತು ಧರ್ಷಿತಾ ಚಾಹಂ ತ್ವಯಾ ಪಾಪಾತ್ಮನಾ ವನೇ ॥
ತಸ್ಮಾತ್ತವ ವಧಾರ್ಥಂ ಹಿ ಸಮುತ್ಪತ್ಸ್ಯೇ ಹ್ಯಹಂ ಪುನಃ ।
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೧೭/೩೧-೩೨

52. ಪುರಾ ಭ್ರಾತಃ ಪಿತಾ ನಃ ಸ ಮಾತರಂ ತೇ ಸಮುದ್ವಹನ್ ।
ಮಾತಾಮಹೇ ಸಮಾಶ್ರೌಷೀದ್ರಾಜ್ಯಶುಲ್ಕಮನುತ್ತಮಮ್ ॥
— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೦೭/೩

53. ಋಷೀಣಾಂ ದಂಡಕಾರಣ್ಯೇ ಸಂಶ್ರುತಂ ಜನಕಾತ್ಮಜೇ ।
ಸಂಶ್ರುತ್ಯ ಚ ನ ಶಕ್ಷ್ಯಾಮಿ ಜೀವಮಾನಃ ಪ್ರತಿಶ್ರವಮ್ ॥
ಮುನೀನಾಮನ್ಯಥಾ ಕರ್ತುಂ ಸತ್ಯಮಿಷ್ಟಂ ಹಿ ಮೇ ಸದಾ ।
ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಮ್ ॥
ನ ತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ।
— ವಾಲ್ಮೀಕಿರಾಮಾಯಣ, ಅರಣ್ಯಕಾಂಡ, ೧೦/೧೭-೧೯

54. ಪ್ರತಿಶ್ರುತ್ಯ ಕರಿಷ್ಯೇತಿ ಉಕ್ತಂ ವಾಕ್ಯಮಕುರ್ವತಃ ।
ಇಷ್ಟಾಪೂರ್ತವಧೋ ಭೂಯಾತ್... ॥ — ವಾಲ್ಮೀಕಿರಾಮಾಯಣ, ಬಾಲಕಾಂಡ, ೨೧/೮

55. ಸಂಶ್ರುತ್ಯ ಚ ತಪಸ್ವಿಭ್ಯಃ ಸತ್ರೇ ವೈ ಯಜ್ಞದಕ್ಷಿಣಾಮ್ ।
ತಾಂ ಚಪಲತಾಂ ಪಾಪಂ... ॥ — ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೭೫/೨೭

56. ನ ಸ ಸಂಕುಚಿತಃ ಪಂಥಾ ಯೇನ ವಾಲೀ ಹತೋ ಗತಃ ।
ಸಮಯೇ ತಿಷ್ಠ ಸುಗ್ರೀವ ಮಾ ವಾಲೀಪಥಮನ್ವಗಾಃ ॥
— ವಾಲ್ಮೀಕಿರಾಮಾಯಣ, ಕಿಷ್ಕಿಂಧಾಕಾಂಡ, ೩೪/೧೮

57. ಸಮಯೋ ರಕ್ಷಿತವ್ಯಸ್ತು-ಸಂತಶ್ಚಾರಿತ್ರಭೂಷಣಾಃ ॥
— ವಾಲ್ಮೀಕಿರಾಮಾಯಣ, ಕಿಷ್ಕಿಂಧಾಕಾಂಡ, ೧೧೩/೪೪

58. ಪ್ರತಿಜಾನಾಮಿ ತೇ ಸತ್ಯಂ ನ ಜೀವನ್ ಪ್ರತಿಯಾಸ್ಯತಿ ॥
— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೩೭/೧೩

59. ಸಂತಸಾಹಿತ್ಯ ಮತ್ತು ಲೋಕಸಾಹಿತ್ಯ, ಪು. ೧೭೭, ೧೮೨-೮೩, ೧೮೫.

60. ಶ್ವಃ ಪ್ರಭಾತೇ ತು ಶಪಥಂ ಮೈಥಿಲೀ ಜನಕಾತ್ಮಜಾ ।
ಕರೋತು ಪರಿಷನ್ಮಧ್ಯೇ ಶೋಧನಾರ್ಥಂ ಮಮೈವ ಚ ॥
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೯೫/೭

61. ಯಥಾಽಹಂ ರಾಘವಾದನ್ಯಂ ಮನಸಾಪಿ ನ ಚಿಂತಯೇ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥
ಮನಸಾ ಕರ್ಮಣಾ ವಾಚಾ ಯಥಾ ರಾಮಂ ಸಮರ್ಚಯೇ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥

ಯಥೈತತ್ಸತ್ಯಮುಕ್ತಂ ಮೇ ವೇದ್ಮಿ ರಾಮಾತ್ಪರಂ ನ ಚ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೯೭/೧೪-೧೬

62. ಯದ್ಯಸ್ತಿ ಪತಿಶುಶ್ರೂಷಾ.ಯದ್ಯಸ್ತಿ ಚರಿತಂ ತಪಃ ।
ಯದಿ ವಾ ತ್ವೇಕಪತ್ನೀತ್ವಂ ಶೀತೋ ಭವ ಹನೂಮತಃ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ, ೫೩/೨೭

63. ಯಥಾ ಮೇ ಹೃದಯಂ ನಿತ್ಯಂ ನಾಪಸರ್ಪತಿ ರಾಘವಾತ್ ।
ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥
ಯಥಾ ಮಾಂ ಶುದ್ಧಚಾರಿತ್ರಾಂ ದುಷ್ಟಾಂ ಜಾನಾತಿ ರಾಘವಃ ।
ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥
ಕರ್ಮಣಾ ಮನಸಾ ವಾಚಾ ಯಥಾ ನಾತಿಚರಾಮ್ಯಹಮ್ ।
ರಾಘವಂ ಸರ್ವಧರ್ಮಜ್ಞಂ ತಥಾ ಮಾಂ ಪಾತು ಪಾವಕಃ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ

64. ವ್ರಿಯತೇ ಇತಿ ವರಃ । ಮನಾಕ್ ಅಭಿಷ್ಟೇ ವರಃ ।
ತಪೋಭಿಃ ಇಷ್ಯತೇ ಯಸ್ತು ದೇವೇಭ್ಯಃ ಸಃ ವರೋ ಮತಃ । — ಯುದ್ಧಕಾಂಡ, ೧೧೬
65. "Blessing by words is more powerful than blessing by thought."
66. ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ/೬೪.
67. ನಿಯಮೈರ್ವಿವಿಧೈರಾಪ್ತಂ ತಪೋ ಹಿ ಮಹದಸ್ತಿ ಮೇ ॥

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೧೮/೧೪

68. ವಾಲ್ಮೀಕಿರಾಮಾಯಣ, ಉತ್ತರಕಾಂಡ/೪ ಹಾಗೂ ೮೭.
69. ಪರಿಶಿಷ್ಟ ೧, ಪಾಯಸಪ್ರಾಪ್ತಿ.
70. ಹನುಮಂತನಿಗೆ ದೊರೆತ ವರ-ಶಾಪ - ೪೬ ನೋಡಿ.
71. ವಾಲ್ಮೀಕಿರಾಮಾಯಣ, ಉತ್ತರಕಾಂಡ ೪ ಮತ್ತು ೮೭.
72. ಶಾಪ ಕ್ರ. ೩೭ ಮತ್ತು ವರ ಕ್ರ. ೫೬.
73. ನೋಡಿ : ವರ - ೧೬ — ವಾಲ್ಮೀಕಿರಾಮಾಯಣ, ಬಾಲಕಾಂಡ, ೪೬
74. ಯುದ್ಧಕಾಂಡ/೮೫.
75. ಉತ್ತರಕಾಂಡ/೩೦.
76. ಉತ್ತರಕಾಂಡ/೭೭
77. ಭಾರತೀಯ ಸಂಸ್ಕೃತಿ ಕೋಶ, ಖಂಡ ೧, ಪು. ೧೬೦ (ದ್ವಿ.ಆ.)
78. ಭಗವದ್ಗೀತೆಯ ಅಧ್ಯಾಯ – ೧೮ / ೫೬.
79. 'ಇಷ್ಟಾರ್ಥಾವಿಷ್ಕರಣಮ್'
80. ವಾತ್ಸಲ್ಯಾದ್ಯತ್ರ ಮಾನ್ಯೇನ ಕನಿಷ್ಠಸ್ಯಾಭಿಧೀಯತೇ ।
ಇಷ್ಟಾವಧಾರಕಂ ವಾಕ್ಯಮಾಶೀಃ ಸಾ ಪರಿಕೀರ್ತಿತಾ ॥

— ಭಾರತೀಯ ಸಂಸ್ಕೃತಿ ಕೋಶ, ಸಂ. ೧, ಪು. ೪೯೫, ೪೯೬

81. ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾಂ ಶತಮ್ ವಸಂತಾನ್ ।
ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ ॥
ಆಹಾರ್ಷಂ ತ್ವಾವಿದಂ ತ್ವಾ ಪುನರಾಗಾಃ ಪುನರ್ನವ ।
ಸರ್ವಾಂಗ ಸರ್ವ ತೇ ಚಕ್ಷು ಸರ್ವಮಾಯುಶ್ಚ ತೇಽವಿದಮ್ ॥

82. ಯಯಾತಿರಿವ ಶರ್ಮಿಷ್ಠಾ ಭರ್ತುರ್ಬಹುಮತಾ ಭವ ।
ಸುತಂ ತ್ವಮಪಿ ಸಮ್ರಾಜಂ ಸೇವ ಪೂರುಮವಾಪ್ನುಹಿ ॥ — ಅಭಿಜ್ಞಾನಶಾಕುಂತಲ, ಅಂಕ ೪/೭
83. ಭಗವನ್ ವರ: ಖಲ್ವೇಷ: । ನಾಶೀ: ॥
84. ಭಾರತೀಯ ಸಂಸ್ಕೃತಿ ಕೋಶ, ಖಂಡ ೧, ಪು. ೪೯೬ (ದ್ವಿ.ಆ.)
85. ಸಾಧುಕಾರಶ್ಚ ಸುಮಹಾನ್ದೇವಾನಾಂ ಸಹಸೋತ್ಥಿತ: ।
ಸಾಧುಸಾಧ್ವಿತಿ ವೈ ಸೀತೇ ಯಸ್ಯಾಸ್ತೇ ಶೀಲಮೀದೃಶಮ್ ॥ ೨೦ ॥
ಏವಂ ಬಹುವಿಧಾ ವಾಚೋ ಹ್ಯಂತರಿಕ್ಷಗತಾ: ಸುರಾ: ।
ವ್ಯಾಜಹನುಹೃಷ್ಟಮನಸೋ ದೃಷ್ಟ್ವಾ ಸೀತಾಪ್ರವೇಶನಮ್ ॥ ೨೨ ॥
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೯೭
86. ಧರ್ಮಬಂಧೇನ ಬದ್ಧೋಽಸ್ಮಿ ನಷ್ಟಾ ಚ ಮಮ ಚೇತನಾ ॥
— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೪/೨೪
87. ಜಾನತಾಮಪಿ ವ: ಸರ್ವಂ ವಕ್ಷ್ಯಾಮಿ ಶ್ರೂಯತಾಂ ಹಿತಮ್ ॥
ಅನೇನ ಶಿಶುನಾ ಕಾರ್ಯಂ ಕರ್ತವ್ಯಂ ಭವಿಷ್ಯತಿ ।
ತದ್ದದಧ್ವಂ ವರಾನ್ಸರ್ವೇ ಮಾರುತಸ್ಯಾಸ್ಯ ತುಷ್ಟಯೇ ॥
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೩೬/೮-೯
88. ಸ ಬದ್ಧಸ್ತೇನ ವಲ್ಕೇನ ವಿಮುಕ್ತೋಽಸ್ತ್ರೇಣ ವೀರ್ಯವಾನ್ ।
ಅಸ್ತ್ರಬಂಧ: ಸಚಾನ್ಯಂ ಹಿ ಬಂಧಮನುವರ್ತತೇ ॥
— ವಾಲ್ಮೀಕಿರಾಮಾಯಣ, ಸುಂದರಕಾಂಡ, ೪೮/೪೮
89. ಏವಂ ದತ್ವಾ ವರಂ ದೇವೋ ದೇವಾನಾಂ ವಿಷ್ಣುರಾತ್ಮವಾನ್ ॥
— ವಾಲ್ಮೀಕಿರಾಮಾಯಣ, ಬಾಲಕಾಂಡ, ೧೫/೩೦
90. ನೋಡಿ : ವರ, ಕ್ರ. ೫೨. — ವಾಲ್ಮೀಕಿರಾಮಾಯಣ
91. ತನ್ಮುಚ್ಯತಾಂ ಮಹಾಬಾಹೋ ಮಹೇಂದ್ರ: ಪಾಕಶಾಸನ: ।
ಕಿಂ ಚಾಸ್ಯ ಮೋಕ್ಷಣಾರ್ಥಾಯ ಪ್ರಯಚ್ಛಂತು ದಿವೌಕಸ: ॥
— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೩೦/೭
92. ನಿಕುಂಭಿಲಾಮಸಂಪ್ರಾಪ್ತಮಕೃತಾಗ್ನಿಂ ಚ ಯೋ ರಿಪು: ।
ತ್ವಾಮಾತತಾಯಿನಂ ಹನ್ಯದಿಂದ್ರಶತ್ರೋ ಸ ತೇ ವಧ: ॥
ವರೋ ದತ್ತೋ ಮಹಾಬಾಹೋ ಸರ್ವಲೋಕೇಶ್ವರೇಣ ವೈ ।
— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೮೫/೧೪-೧೫
93. ವರ ಕ್ರ. ೭೨ ಮತ್ತು ಉತ್ತರಕಾಂಡ, ೨೨.
94. ಪೃಥಿವ್ಯಾಂ ಯಾನಿ ತೀರ್ಥಾನಿ ಸತೀಪಾದೇಷು ತಾನ್ಯಪಿ ।
ತೇಜಶ್ಚ ಸರ್ವದೇವಾನಾಂ ಮುನೀನಾಂ ಚ ಸತೀಷು ವೈ ॥ — ಮನುಸ್ಮೃತಿ
95. ಭಾರತೀಯ ಸಂಸ್ಕೃತಿ ಕೋಶ, ಖಂಡ ೫, ಪು. ೩೫೯-೬೦ ಮತ್ತು ೩೬೮-೭೫.
96. ಯಾ ನ ಶಕ್ಯಾ ಪುರಾ ದ್ರಷ್ಟುಂ ಭೂತೈರಾಕಾಶಗೈರಪಿ ।
ತಾಮದ್ಯ ಸೀತಾಂ ಪಶ್ಯಂತಿ ರಾಜಮಾರ್ಗಗತಾ ಜನಾ: ॥
— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೩೩/೮
97. ಯಾ ನಾಪಶ್ಯಶ್ಚಂದ್ರಮಾ ನೈವ ಸೂರ್ಯೋ ರಾಮಾ: ಕಶ್ಚಿತ್ತಾ: ತಸ್ಮಿನ್ನರೇಂದ್ರೇ ।
ಮಹಾವನಂ ಗಚ್ಛತಿ ಕೌರವೇಂದ್ರೇ ಶೋಕೇನಾರ್ತಾ ರಾಜಮಾರ್ಗಂ ಪ್ರಪೇದು: ॥
— ಮಹಾಭಾರತ, ಆಶ್ರಮಪರ್ವ.

98. ಭರ್ತುರ್ಭಕ್ತಿಂ ಪುರಸ್ಕೃತ್ಯ ರಾಮಾದನ್ಯಸ್ಯ ವಾನರ ।
ನಾಹಂ ಸ್ಪೃಷ್ಟುಂ ಸ್ವತೋ ಗಾತ್ರಮಿಚ್ಛೇಯಂ ವಾನರೋತ್ತಮ ॥
ಯದಹಂ ಗಾತ್ರಸಂಸ್ಪರ್ಶಂ ರಾವಣಸ್ಯ ಗತಾ ಬಲಾತ್ ।
ಅನೀಶಾ ಕಿಂ ಕರಿಷ್ಯಾಮಿ ವಿನಾಥಾ ವಿವಶಾ ಸತೀ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ, ೩೭/೬೨-೬೩

99. ತಯಾ ದತ್ತ ವರಾ ಚಾಸ್ಮಿ ರಕ್ಷಾಮಿ ಭವನಂ ಮಹತ್ ।

— ವಾಲ್ಮೀಕಿರಾಮಾಯಣ, ಕಿಷ್ಕಿಂಧಾಕಾಂಡ, ೫೧/೧೮

100. ನಿಯಮೈರ್ವಿವಿಧೈರಾಪ್ತಂ ತಪೋ ಹಿ ಮಹದಸ್ತಿ ಮೇ ।
ತತ್ಸಂಶ್ರಿತ್ಯ ಬಲಂ ಸೀತೇ ಛಂದಯೇ ತ್ವಾಂ ಶುಚಿವ್ರತೇ ॥

— ವಾಲ್ಮೀಕಿರಾಮಾಯಣ, ಅಯೋಧ್ಯಾಕಾಂಡ, ೧೧೮/೧೪

101. ನೋಡಿ, ಶಾಪ ಕ್ರ. ೧೧ ಹಾಗೂ ೧೨.

102. ಪಿತಾಮಹಸ್ಯ ಭವನಂ ಗಚ್ಛಂತೀಂ ಪುಂಜಿಕಸ್ಥಲಾಮ್ ।
ಸಾ ಪ್ರಸಹ್ಯ ಮಯಾ ಭುಕ್ತಾ ಕೃತಾ ವಿವಸನಾ ತತಃ ॥

— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೧೩/೧೧

103. ಏವಮುಕ್ತ್ವಾ ಸ ತಾಂ ರಕ್ಷೋ ನಿವೇಶ್ಯ ಚ ಶಿಲಾತಲೇ ।
ಕಾಮಭೋಗಾಭಿಸಂರಕ್ತೋ ಮೈಥುನಾಯೋಪಚಕ್ರಮೇ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೨೬/೪೦, ೪೧

104. ಶೋಕಾಭಿತಪ್ತಾ ಬಹುಧಾ ವಿಚಿಂತ್ಯ ಸೀತಾಥ ವೇಣೀಗ್ರಥನಂ ಗೃಹೀತ್ವಾ ।
ಉದ್ಬದ್ಧ್ಯ ವೇಣ್ಯುದ್ಗ್ರಥನೇನ ಶೀಘ್ರಮಹಂ ಗಮಿಷ್ಯಾಮಿ ಯಮಸ್ಯ ಮೂಲಮ್ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ, ೨೮/೧೭

105. ಅಜ್ಞಾನಾದ್ಧರ್ಷಿತಾ ವಿಪ್ರ ತ್ವದ್ರೂಪೇಣ ದಿವೌಕಸಾ । — ವಾಲ್ಮೀಕಿರಾಮಾಯಣ, ಉತ್ತರಕಾಂಡ

106. ಅಪ್ರಾಪ್ಯಂ ತಂ ಚೈವ ಕಾಮಂ ಮೈಥಿಲೀಸಂಗಮೇ ಕೃತಮ್ ।
ಪತಿವ್ರತಾಯಾಸ್ತಪಸಾ ನೂನಂ ದಗ್ಧೋಽಸಿ ಮೇ ಪ್ರಭೋ ॥
ತದೈವ ಯನ್ನ ದಗ್ಧಸ್ತ್ವಂ ಧರ್ಷಯಂಸ್ತನುಮಧ್ಯಮಾಮ್ ।
ದೇವಾ ಬಿಭ್ಯತಿ ತೇ ಸರ್ವೇ ಸೇಂದ್ರಾಃ ಸಾಗ್ನಿಪುರೋಗಮಾಃ ॥

— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೧೧೧/೨೩-೨೪

107. ಕಥಂ ತಾಪಸಯೋರ್ವಾಂ ಚ ವಾಸಃ ಪ್ರಮದಯಾ ಸಹ ॥
ಅಧರ್ಮಚಾರಿಣೌ ಪಾಪೌ ಕೌ ಯುವಾಂ ಮುನಿದೂಷಕೌ ।
ಇಯಂ ನಾರೀ ವರಾರೋಹಾ ಮಮ ಭಾರ್ಯಾ ಭವಿಷ್ಯತಿ ॥

— ವಾಲ್ಮೀಕಿರಾಮಾಯಣ, ಅರಣ್ಯಕಾಂಡ, ೨/೧೧, ೧೨

108. ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ ।
ನ ತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹತೇಜಸಾ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ, ೨೨/೨೦

109. ಸ್ವಧರ್ಮೋ ರಕ್ಷಸಾಂ ಭೀರು ಸರ್ವದೈವ ನ ಸಂಶಯಃ ।
ಗಮನಂ ವಾ ಪರಸ್ತ್ರೀಣಾಂ ಹರಣಂ ಸಂಪ್ರಮಥ್ಯ ವಾ ॥

— ವಾಲ್ಮೀಕಿರಾಮಾಯಣ, ಸುಂದರಕಾಂಡ, ೨೦/೫

110. ಯಾಸ್ತ್ವಯಾ ವಿಧವಾ ರಾಜನ್ಕೃತಾ ನೈಕಾಃ ಕುಲಸ್ತ್ರಿಯಃ ॥
ಪತಿವ್ರತಾಧರ್ಮರತಾ ಗುರುಶುಶ್ರೂಷಣೇ ರತಾಃ ।
ತಾಭಿಃ ಶೋಕಾಭಿತಪ್ತಾಭಿಃ ಶಪ್ತಃ ಪರವಶಂ ಗತಃ ॥

— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೧೧೧/೬೪, ೬೫

111. ಸತೀಭಿರ್ವರನಾರೀಭಿರೇವಂ ವಾಕ್ಯೇऽಭ್ಯುದೀರಿತೇ ।
ನೇದುರ್ದುನ್ದುಭಯಃ ರವಸ್ಥಾಃ ಪುಷ್ಪವೃಷ್ಟಿಃ ಪಪಾತ ಚ ॥

— ವಾಲ್ಮೀಕಿರಾಮಾಯಣ, ಉತ್ತರಕಾಂಡ, ೨೪/೨೧-೨೨

112. ಶಾಪ ಕ್ರ. ೩೫, ೩೯, ೪೬.

113. ಇತ್ಯಹಂ ತಸ್ಯ ಶಾಪಸ್ಯ ಭೀತಃ ಪ್ರಸಭಮೇವ ತಾಮ್ ।
ನಾರೋಹಯೇ ಬಲಾತ್ಸೀತಾಂ ವೈದೇಹಿಂ ಶಯನೇ ಶುಭೇ ॥

— ವಾಲ್ಮೀಕಿರಾಮಾಯಣ, ಯುದ್ಧಕಾಂಡ, ೧೩/೧೫

114. "ಮಹಾಕಾವ್ಯವೊಂದರ ನಿರ್ಮಾಣವೆಂದರೆ ಒಂದು ಬಲು ದೊಡ್ಡ ಕಲೆಯಾಗಿದೆ. ಅದರ ಮುಖ್ಯ ಗುರಿಯೆಂದರೆ ಮಾನವನ ಮನಸ್ಸು ಹಾಗೂ ನೈತಿಕತೆಯ ಮಟ್ಟವನ್ನು ಎತ್ತರಕ್ಕೊಯ್ಯುವುದೇ ಆಗಿದೆ. ಮಹಾಕಾವ್ಯದ (ಆದರ್ಶ) ಕಲಿಸುವಿಕೆಯ ಲಾಭ ದೊರೆತು ಅದರ ಉಚ್ಚಮಟ್ಟದ ಮೌಲ್ಯಗಳು ನಮ್ಮ ನಡತೆಗಳ ಮೇಲೆ ಅಚ್ಚೊತ್ತಿ ಸರಿಯಾದ ಶಿಸ್ತು ರೂಪುಗೊಳ್ಳುವಂತಾಗಲೆಂದೇ ಅದನ್ನು ಪಠಿಸಲಾಗುತ್ತದೆ."

"The fundamental postulate is that an epic is a great work of art which is intended expressly, for the edification of man.... The epic is to be read with a view to benefit by its teaching, to draw at every turn lessons of supreme value for the conduct and regulation of ourselves." — *Lectures on Ramayana*

115. ಹಸ್ತಿನಾಪುರ.

116. ಬಾಲಕಾಂಡ, ೧-೨೨, ೭೬, ೮೬.

## ಭಾಗ : ಎರಡು

# ಶಾಪವಾಣಿ

### ೧. ವಾಲ್ಮೀಕಿ > ನಿಷಾದ ಬಾಲಕಾಂಡ / ೨

ಒಮ್ಮೆ ವಾಲ್ಮೀಕಿ ಋಷಿಯು ಭರದ್ವಾಜನೆಂಬ ತನ್ನ ಶಿಷ್ಯನೊಡನೆ ತಮಸಾ ನದಿಯ ತೀರದ ವನದಲ್ಲಿ ಸ್ನಾನಸಂಧ್ಯಾವಂದನೆಗೆ ತಕ್ಕ ಸ್ಥಳವನ್ನು ಹುಡುಕುತ್ತಿದ್ದನು. ಆಗ ಯಾವ ಆಧಿವ್ಯಾಧಿಗಳ ಚಿಂತೆಯೂ ಇರದ, ಕಾಮಕೇಳಿಯಲ್ಲಿ ತೊಡಗಿದ ಕ್ರೌಂಚಪಕ್ಷಿಗಳ ಒಂದು ಜೊತೆಯು ಕಾಣಿಸಿಕೊಂಡಿತು. ವಾಲ್ಮೀಕಿಯು ಇದನ್ನು ನೋಡುತ್ತಿದ್ದರೂ ಪಾಪಬುದ್ಧಿಯ ನಿಷಾದನೊಬ್ಬನು ಋಷಿಯನ್ನು ಲೆಕ್ಕಿಸದೇ ನಿಷ್ಕಾರಣ ವೈರವನ್ನು ತಳೆದು ಆ ಜೊತೆಯಲ್ಲಿದ್ದ ಗಂಡಿಗೆ ಗುರಿಯಿಟ್ಟನು. ಬಿಟ್ಟ ಬಾಣವು ಮರ್ಮಸ್ಥಳಕ್ಕೆ ತಗುಲಿ ಅದು ತಕ್ಷಣ ನೆಲಕ್ಕುರುಳಿತು ; ದೇಹವೆಲ್ಲ ರಕ್ತರಂಜಿತವಾಗಿತ್ತು. ಪ್ರಾಣಾಂತಿಕ ವೇದನೆಯಿಂದ ಕಸಿವಿಸಿಗೊಳ್ಳುತ್ತಿದ್ದ ತನ್ನ ಪ್ರಿಯಕರನನ್ನು ಕಂಡು ಹೆಣ್ಣು ಕ್ರೌಂಚವು ಕರುಣಾಸ್ವರದಿಂದ ರೋದಿಸತೊಡಗಿತು. ಆ ಪಕ್ಷಿಯ ರೆಕ್ಕೆಗಳು ಅತಿ ಸುಂದರವಾಗಿದ್ದವು. ತಲೆಯ ಮೇಲೆ ಆರಕ್ತವರ್ಣದ ತುರಾಯಿಯುಳ್ಳ, ಕಾಮಪರವಶನಾದ, ಹಗಲಿರುಳು ಜೊತೆಜೊತೆಯಾಗಿರುತ್ತಿದ್ದ ತನ್ನ ಪ್ರಿಯಕರನ ಆ ಅವಸ್ಥೆಯನ್ನು ಕಂಡು ಹೆಣ್ಣುಹಕ್ಕಿಯು ಬಲು ವ್ಯಾಕುಲಗೊಂಡಿತು. ಪ್ರಿಯಕರನ ಅಗಲುವಿಕೆಯು ಅಸಹನೀಯವಾಯಿತು. ಈ ದೃಶ್ಯವನ್ನು ಕಂಡು ವಾಲ್ಮೀಕಿಗೆ ಹೇಳಲಾಗದ ವ್ಯಥೆಯಾಯಿತು. ಹೃದಯವನ್ನು ಕರಗಿಸುವಂತಹ ಸ್ವರದಲ್ಲಿ ರೋದಿಸುತ್ತಿದ್ದ ಆ ಪಕ್ಷಿಣಿಯನ್ನು ಕಂಡು, ಈ ಪರಿ ಕಾಮಪರವಶವಾದ ಪಕ್ಷಿಯನ್ನು ವಧಿಸುವುದು 'ಅಧರ್ಮ'ವೆಂದೆನಿಸಿ ವಾಲ್ಮೀಕಿಯ ಮುಖದಿಂದ ಈ ಉದ್ಗಾರವು ಹೊರಬಂದಿತು :

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್ ॥ ೧೫ ॥*

---

* ಈ ಶ್ಲೋಕದ ವಿವಿಧ ಅನುವಾದಗಳಲ್ಲಿ ಸಾಕಷ್ಟು ಭಿನ್ನತೆಯು ಕಂಡುಬರುತ್ತದೆ :

(೧) ಪಂ. ಶ್ರೀ. ದಾ. ಸಾತವಳೇಕರ ಇವರ ಅನುವಾದವು ಕೈ. ಕಾಶೀನಾಥಶಾಸ್ತ್ರಿ ಲೇಲೆ ಇವರು ಮಾಡಿದ ಅನುವಾದದಂತೆ ಇದೆ. ಅದರಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲ.

(೨) ಡಾ. ಶ್ರೀನಿವಾಸ ಅಯ್ಯಂಗಾರ್ ಮತ್ತು ವಿದ್ವಾನ್ ಎಸ್. ರಂಗನಾಥಶರ್ಮ ಇವರು ಮಾಡಿದ ವಾಲ್ಮೀಕಿ ರಾಮಾಯಣದ ಕನ್ನಡದ ಈ ಶ್ಲೋಕಾರ್ಥವು ಕೈ. ಕಾಶೀನಾಥಶಾಸ್ತ್ರಿ ಲೇಲೆ ಇವರು ಮಾಡಿದ ಅನುವಾದದ ಅರ್ಥವನ್ನು ಹೋಲುತ್ತದೆ.

(೩) "ಹೇ ನಿಷಾದನೇ ! ನೀನು ಕ್ರೌಂಚ-ಜೊತೆಯಲ್ಲಿಯ ಕಾಮಮೋಹಿತವಾದ ಒಂದನ್ನು ಕೊಂದೆ ; ಅದಕ್ಕಾಗಿ ಇನ್ನುಮುಂದೆ ಎಂದೆಂದಿಗೂ ನಿನಗೆ ಪ್ರತಿಷ್ಠೆಯು ದೊರೆಯಲಾರದು."

—ವಾಲ್ಮೀಕಿರಾಮಾಯಣ, ಸಮಗ್ರ ಮರಾಠೀ ಅನುವಾದ, ಖಂಡ ೧, ಪೃ. ೫, ಶ್ರೀರಾಮಕೋಶ ಮಂಡಳ, ಪುಣೆ.

(೪) "ನಿಷಾದನೇ ! ನಿನಗೆ ಎಂದೆಂದಿಗೂ ಶಾಂತಿ ದೊರೆಯಲಾರದು ! ಏಕೆಂದರೆ ನೀನು ಕ್ರೌಂಚಪಕ್ಷಿಯ ಜೋಡಿಯ ಕಾಮಮೋಹಿತವಾದ ಗಂಡುಹಕ್ಕಿಯನ್ನು, ಅದರ ಯಾವ ಅಪರಾಧವೂ ಇರದಾಗ, ಕೊಂದೆ."

(೫) "ನಿಷಾದ ! ತುಝೇ ನಿತ್ಯ-ನಿರಂತರ - ಕಭೀಭೀ ಶಾಂತಿ ನ ಮಿಲೇ ; ಕ್ಯೋಂಕಿ ತೂನೇ ಇಸ್ ಕ್ರೌಂಚಕೇ ಜೋಡೇಮೇಸೇ ಏಕಕೀ, ಜೋ ಕಾಮಸೇ ಮೋಹಿತ ಹೋ ರಹಾ ಥಾ, ಬಿನಾ ಕಿಸೀ ಅಪರಾಧಕೇ ಹೀ ಹತ್ಯಾ ಕರ ಡಾಲೀ."

—ಗೀತಾ ಪ್ರೆಸ್, ಗೋರಖಪುರದ ಪ್ರತಿ, ಪುಟ ೩೧

(೬) No fame be thine for endless time,
Beacuse, base outcast, of thy crime,
Whose cruel hand was fain to slay,
One of this gentle pair at play !

— Ralphg T. H. Griffith : *Ramayan of Valmiki*, p. 7

"ಎಲೈ ನಿಷಾದನೇ ! ನೀನು ಕಾಮಪರವಶವಾಗಿದ್ದ ಕ್ರೌಂಚ-ಜೊತೆಯಲ್ಲಿಯ ಒಂದನ್ನು ಕೊಂದಿರುವ ಕಾರಣ ಬಹಳ ವರ್ಷಗಳವರೆಗೆ ಬದುಕಲಾರೆ !"

ಈ ಶ್ಲೋಕವನ್ನು ಉಚ್ಚರಿಸಿದೊಡನೆಯೇ ವಾಲ್ಮೀಕಿಯು ಚಿಂತಾಗ್ರಸ್ತನಾದನು. ತಪಸ್ಸನ್ನು ನಾಶಗೊಳಿಸುವ ಶಾಪವಾಣಿಯು ತನ್ನ ಮುಖದಿಂದ ಹೊರಬಂದುದಕ್ಕೆ ನೊಂದುಕೊಂಡನು. "ಚರಣಬದ್ಧವಾದ, ಸಮ ಅಕ್ಷರಗಳುಳ್ಳ, ಅಂದರ ಛಂದೋಬದ್ಧವಾದ, ಅಕ್ಷರರಚನಾದೋಷರಹಿತವಾದ ಹಾಗೂ ವೀಣೆಯ ಶ್ರುತಿಯೊಡನೆ ಹಾಡಲು ಯೋಗ್ಯವಾದ ಈ ಶ್ಲೋಕವು ನಾನು ಶೋಕಾಕುಲನಿದ್ದಾಗ ನನ್ನ ಮುಖದಿಂದ ತಾನಾಗಿಯೇ ಬಂದಿದೆ. ಅದು ಅಕೀರ್ತಿಕಾರಕವಾಗದೆ ಕೀರ್ತಿರೂಪವಾಗಲಿ" ಎಂದು ತನ್ನ ಶಿಷ್ಯನಿಗೆ ಹೇಳಿದನು. ಶಿಷ್ಯನು ಸಮ್ಮತಿಸಿ ಅಹುದೆಂದು ತಲೆಯಲ್ಲಾಡಿಸುತ್ತಲೇ ಋಷಿಯು ಸಂತೋಷಗೊಂಡನು. ಆ ನಂತರವೂ ಈ ಶ್ಲೋಕವು ಆತನ ಮನಸ್ಸಿನಲ್ಲಿ ತಾಳಹಾಕುತ್ತಲೇ ಇತ್ತು. ಈ ರೀತಿ ವಾಲ್ಮೀಕಿ ಅಸ್ವಸ್ಥಮನಃಸ್ಥಿತಿಯಲ್ಲಿದ್ದಾಗ ಬ್ರಹ್ಮದೇವನು ಪ್ರತ್ಯಕ್ಷನಾದನು. ವಾಲ್ಮೀಕಿಯು ಮತ್ತೆ ಈ ಶ್ಲೋಕವನ್ನು ಉಚ್ಚರಿಸಿದನು. ಅದನ್ನು ಕೇಳಿ ಬ್ರಹ್ಮದೇವನು ಹೀಗೆಂದನು : "ನೀನು ರಚಿಸಿದ ಈ ಶ್ಲೋಕವು ಯಶೋರೂಪವಾಗುವದು ಎಂಬಲ್ಲಿ ಸಂದೇಹವಿಲ್ಲ. ಎಲೈ ಬ್ರಹ್ಮಜ್ಞನೇ, ನನ್ನ ಇಚ್ಛಾನುಸಾರವಾಗಿಯೇ ನಿನ್ನ ಮುಖದಿಂದ ಈ ಶಬ್ದಗಳು ಹೊರಹೊಮ್ಮಿವೆ. ಆದ್ದರಿಂದ ಋಷಿವರ್ಯನೇ, ನೀನು ಶ್ರೀರಾಮನ ಸಂಪೂರ್ಣ ಚರಿತ್ರೆಯನ್ನು ಬಣ್ಣಿಸು ! ಜಗತ್ತಿನಲ್ಲೆಲ್ಲ ಮನೋಹರನು, ವಿಚಾರವಂತನು, ಧರ್ಮಾತ್ಮನು ಮತ್ತು ಭಗವಂತನೆನಿಸುವವನು ಆತನೊಬ್ಬನೇ ಇದ್ದಾನೆ. ಆದಕಾರಣ ನೀನು ನಾರದನಿಂದ ಕೇಳಿಕೊಂಡ ಬುದ್ಧಿಪ್ರೇರಕವಾದ ಶ್ರೀರಾಮವೃತ್ತಾಂತವನ್ನು ಹೇಳು! ಲಕ್ಷ್ಮಣನನ್ನೊಳಗೊಂಡ ಪ್ರಜ್ಞಾವಂತ ಶ್ರೀರಾಮನ, ಎಲ್ಲ ರಾಕ್ಷಸರ ಹಾಗೂ ವಿದೇಹ ದೇಶದ ಅಧಿಪತಿಯ ಕನ್ಯೆಯಾದ ಸೀತೆಯ, ಪ್ರಸಿದ್ಧ ಇಲ್ಲವೇ ಅಪ್ರಸಿದ್ಧವಾದ ಏನೆಲ್ಲ ಚರಿತ್ರೆಯಿರಬಹುದೋ ಅದು ಅನ್ಯರಿಗೆ ಗೊತ್ತಿರದಿದ್ದರೂ ನಿನಗೆ ಮಾತ್ರ ಗೊತ್ತಾಗುತ್ತಹೋಗುವದು. ಈ ಬಗೆಗಿನ ನಿನ್ನ ವಾಣಿಯು ಎಳ್ಳಷ್ಟೂ ಅಸತ್ಯವಾಗಲಾರದು. ಆದ್ದರಿಂದ ಮನೋಹರವಾದಂಥ ಪುಣ್ಯದಾಯಕವಾದಂಥ ಶ್ಲೋಕಬದ್ಧವಾದ ಶ್ರೀರಾಮಕಥೆಯನ್ನು ಬಣ್ಣಿಸು. ಪೃಥ್ವಿಯಲ್ಲಿ ಎಲ್ಲಿಯವರೆಗೆ ಗಿರಿ-ನದಿಗಳು ಇರುತ್ತವೆಯೋ ಅಲ್ಲಿಯವರೆಗೆ ಲೋಕದಲ್ಲಿ ರಾಮಾಯಣದ ಕಥೆಯು ಪ್ರಚಾರದಲ್ಲಿ ಉಳಿಯುವುದು. ಇದಲ್ಲದೇ ಶಾಪವನ್ನು ಕೊಡುವಾಗ ಕ್ರೋಧವನ್ನು ತಳೆದುದರಿಂದ ನಿನ್ನ ಸ್ಥಾನವು ಕೆಳಮಟ್ಟಕ್ಕೆ ತಲುಪಿದ್ದರೂ ನೀನು ರಚಿಸಿದ ಶ್ರೀರಾಮಕಥೆಯು ಜನಮಾನಸದಲ್ಲಿರುವವರೆಗೆ, ನೀನು ಸರ್ವೋಚ್ಚಸ್ಥಾನವಾದ ನನ್ನ ಲೋಕದಲ್ಲಿ ವಾಸಿಸುವೆ."

ವಾಲ್ಮೀಕಿಯ ಮುಖದಿಂದ ಹೊರಬಿದ್ದ ಈ ಶಾಪೋದ್ಗಾರವು ರಾಮಾಯಣದಂಥ ಮಹಾಕಾವ್ಯದ ನಿರ್ಮಿತಿಗೆ ಮೂಲಕಾರಣವಾದ್ದರಿಂದ ಈ ಶಾಪದ ಮಹತ್ವವು ಅನನ್ಯಸಾಧಾರಣವಾಗಿದೆ.

## ೨. ವಿಶ್ವಾಮಿತ್ರ > ಮಾರೀಚ, ಸುಬಾಹು — ಬಾಲಕಾಂಡ / ೧೯

ಒಮ್ಮೆ ದಶರಥರಾಜನು ಮಂತ್ರಿಮಂಡಲದವರೊಡನೆ ತನ್ನ ಪುತ್ರರ ಮದುವೆಗಳ ಬಗ್ಗೆ ವಿಚಾರವಿನಿಮಯ ಮಾಡುತ್ತಿದ್ದಾಗ, ವಿಶ್ವಾಮಿತ್ರನು ರಾಜನ ಭೇಟಿಗೆ ಬಂದನು. ರಾಜನು ಆತನನ್ನು ವಿಧಿಯುಕ್ತವಾಗಿ ಸತ್ಕರಿಸಿ ಯಥೋಚಿತವಾಗಿ ಸ್ವಾಗತಿಸಿದನು. ಋಷಿಯು ರಾಜನ ಕ್ಷೇಮಕುಶಲಾಭ್ಯುದಯಗಳನ್ನು ಕುರಿತು ವಿಚಾರಿಸಿದನು. ಅವನು ವಸಿಷ್ಠ ಮೊದಲಾದ ಅನ್ಯಋಷಿಗಳನ್ನು ಭೇಟಿಯಾದನು. ವಿಶ್ವಾಮಿತ್ರನ ಆಗಮನದಿಂದ ದಶರಥನಿಗೆ ಅತಿಶಯ ಆನಂದವಾಯಿತು. ದಶರಥನು ಕೈಮುಗಿದು ಅತಿವಿನಯದಿಂದ ಋಷಿಯ ಆಗಮನದ ಉದ್ದೇಶವನ್ನು ಕೇಳಿದನು. ಋಷಿಯು ಹೇಳುವ ಕಾರ್ಯವು ಎಷ್ಟೇ ಕಠಿಣವಿದ್ದರೂ ರಾಜನು ಅದನ್ನು ಪೂರೈಸುವ ಆಶ್ವಾಸನೆಯನ್ನು ಅವನಿಗಿತ್ತನು. ಸಂತೋಷಗೊಂಡ ವಿಶ್ವಾಮಿತ್ರನು "ರಾಜೇಂದ್ರನೇ ! ನಾನು ಹೇಳಬಯಸುವುದನ್ನು ಪೂರೈಸಲು ನೀನು ದೃಢಸಂಕಲ್ಪನಾಗು ! ನಾನು ಯಜ್ಞದೀಕ್ಷೆಯನ್ನು ಅಂಗೀಕರಿಸಿದಾಗ ಬೇಕುಬೇಕಾದ ರೂಪಗಳನ್ನು ಧರಿಸಬಲ್ಲ ಮಾರೀಚ ಮತ್ತು ಸುಬಾಹು ಎಂಬ ಇಬ್ಬರೂ ರಾಕ್ಷಸರು ನನ್ನ ಯಜ್ಞಕ್ಕೆ ವಿಘ್ನಗಳನ್ನು ತಂದು ಅದನ್ನು ಪೂರ್ತಿಮಾಡಗೊಡುತ್ತಿಲ್ಲ. ನಾನು ಅನೇಕ ಸಲ

ದೀಕ್ಷಾವ್ರತವನ್ನು ಮುಗಿಸುವ ಹಂತದಲ್ಲಿದ್ದಾಗ, ಈ ಇಬ್ಬರು ರಾಕ್ಷಸರು ರಕ್ತ-ಮಾಂಸಗಳನ್ನು ತಂದು ಯಜ್ಞವೇದಿಕೆಯ ಮೇಲೆ ಚೆಲ್ಲುತ್ತಿದ್ದಾರೆ. ಈ ರೀತಿ ನನ್ನ ಯಜ್ಞದೀಕ್ಷೆಯು ಮತ್ತು ಯಜ್ಞವು ಹಾಳಾಗುತ್ತಿವೆ. ಆದಕಾರಣ ನಾನು ಶಾಂತಚಿತ್ತನಾಗಿ ಆ ಪ್ರದೇಶವನ್ನು ಬಿಟ್ಟುಹೋಗುತ್ತೇನೆ."

ನ ಚ ಮೇ ಕ್ರೋಧಮುತ್ಸ್ರಷ್ಟುಂ ಬುದ್ಧಿರ್ಭವತಿ ಪಾರ್ಥಿವ ॥ ೭ ॥
ತಥಾ ಭೂತಾ ಹಿ ಸಾ ಚರ್ಯಾ ನ ಶಾಪಸ್ತತ್ರ ಮುಚ್ಯತೇ ॥ ೮ ॥

"ಹೇ ರಾಜನೇ ! ಯಜ್ಞದೀಕ್ಷೆಯನ್ನು ವಹಿಸಿದ ಪುರುಷನು ಶಪಿಸಲು ಉದ್ಯುಕ್ತನಾಗುವದು ತರವಲ್ಲ ವಾದ್ದರಿಂದ ರಾಕ್ಷಸರನ್ನು ಶಾಪವನ್ನು ಕೊಟ್ಟು ನಾಶಮಾಡುವದು ನನ್ನಿಂದ ಆಗುತ್ತಿಲ್ಲ. ಹೀಗಾಗಿ ನೀನು ನಿನ್ನ ಹಿರಿಯ ಮಗನಾದ ಶ್ರೀರಾಮನನ್ನು ರಾಕ್ಷಸರನ್ನು ಸಂಹರಿಸಲೆಂದು ನನಗೆ ಒಪ್ಪಿಸು. ರಾಕ್ಷಸರನ್ನು ನಾಶಮಾಡಲು ಅವನೊಬ್ಬನೇ ಸಮರ್ಥನು. ನಾನು ಶ್ರೀರಾಮನನ್ನು ರಕ್ಷಿಸಿ ಆತನಿಗೆ ಶ್ರೇಯಸ್ಸನ್ನು ಬಯಸು ವೆನು" ಎಂದು ಹೇಳಿದನು. ವಿಶ್ವಾಮಿತ್ರನು ದಶರಥನ ಬಳಿ ಆಗಮಿಸಿದ ಕಾರಣವು ಬೇರೆಯೇ ಇದೆ ಎಂದು ವಸಿಷ್ಠನು ಹೇಳುತ್ತಾನೆ.

ತವ ಪುತ್ರಹಿತಾರ್ಥಾಯ ತ್ವಾಮುಪೇತ್ಯಾಭಿಯಾಚತೇ ॥ ಬಾಲಕಾಂಡ, ೨೧/೨೨

"ವಿಶ್ವಾಮಿತ್ರನು ನಿನ್ನ ಮಕ್ಕಳ ಕ್ಷೇಮಕ್ಕಾಗಿ ಇಲ್ಲಿಗೆ ಆಗಮಿಸಿದ್ದಾನೆ." ದಶರಥನು ಋಷಿಗೆ ಮಾತುಕೊಟ್ಟಿ ದ್ದರೂ, ವಿಶ್ವಾಮಿತ್ರನ ಕೇಳಿಕೆಯನ್ನು ಮನ್ನಿಸುವದು ಆತನಿಗೆ ಕಷ್ಟಕರವೆನಿಸಿತು. ರಾಜನು ಬಗೆಬಗೆಯ ನೆವ ಗಳನ್ನು ಮುಂದೊಡ್ಡಿದನು. ಹೀಗಾಗಿ ವಿಶ್ವಾಮಿತ್ರನ ಕೋಪವು ಕೆರಳಿತು. ಆಗ ವಸಿಷ್ಠನು ರಾಜನಿಗೆ ಸಮಾಧಾನ ಹೇಳಿ ಶ್ರೀರಾಮನನ್ನು ವಿಶ್ವಾಮಿತ್ರನೊಡನೆ ಕಳುಹಿಸಬೇಕೆಂದು ಸಲಹೆಯನ್ನಿತ್ತನು.

ಶಾಪವನ್ನು ಕೊಟ್ಟು, ರಾಕ್ಷಸರನ್ನು ನಾಶಗೊಳಿಸುವ ಸಾಮರ್ಥ್ಯವು ವಿಶ್ವಾಮಿತ್ರನಲ್ಲಿದ್ದರೂ, ಆತನು ವ್ರತಸ್ಥನಾಗಿದ್ದರಿಂದ ಅವರನ್ನು ಶಪಿಸಲಿಲ್ಲ.

ಶಾಪವನ್ನು ಕೊಡದ ಕಾರಣ ಅದರ ಸ್ವರೂಪವು ಸ್ಪಷ್ಟವಾಗಿಲ್ಲ.

## ೩. ಅಗಸ್ತ್ಯ > ಮಾರೀಚ ಬಾಲಕಾಂಡ / ೨೫

ವಿಶ್ವಾಮಿತ್ರನು ತಾಟಕಿಯ ವೃತ್ತಾಂತವನ್ನು ಶ್ರೀರಾಮನಿಗೆ ಹೇಳುತ್ತಿದ್ದಾನೆ.

ನೋಡಿ : ಅಗಸ್ತ್ಯ > ತಾಟಕಾ, ಶಾಪ ಕ್ರ. ೫.

ಅಗಸ್ತ್ಯನು ಸುಂದನನ್ನು ವಧಿಸಿದನಂತರ ಮಾರೀಚನು ಆತನ ಮೇಲೆ ಎರಗಿಹೋದನು.

...... ಯಕ್ಷೀಪುತ್ರಂ ವ್ಯಜಾಯತ ।
ಮಾರೀಚಂ ನಾಮ-ದುರ್ಧರ್ಷಂ ಯಃ ಶಾಪಾದ್ರಾಕ್ಷಸೋಽಭವತ್ ॥ ೯ ॥

ಯಕ್ಷಿಣಿಗೆ ಮಾರೀಚನೆಂಬ ಅಜಿಂಕ್ಯನಾದ ಮಗನು ಹುಟ್ಟಿದನು. ನಂತರ ಶಾಪದಿಂದ ಆತನು ರಾಕ್ಷಸನಾದನು. ಸುಂದನ ವಧೆಯಾದನಂತರ ತಾಟಕಿ ತನ್ನ ಪುತ್ರರೊಡನೆ ಅಗಸ್ತ್ಯಋಷಿಯನ್ನು ಕೊಲ್ಲಲು ಸಿದ್ಧಳಾದಾಗ ಆತನು ಮಾರೀಚನಿಗೆ ಶಾಪವನ್ನಿತ್ತನು.

ರಾಕ್ಷಸತ್ವಂ ಭಜಸ್ವೇತಿ ಮಾರೀಚಂ ವ್ಯಾಜಹಾರ ಸಃ ॥ ೧೨ ॥

## ೪. ಅಗಸ್ತ್ಯ > ಸುಂದ ಬಾಲಕಾಂಡ / ೨೫

ವಿಶ್ವಾಮಿತ್ರನು ಶ್ರೀರಾಮನಿಗೆ ತಾಟಕಿಯ ವೃತ್ತಾಂತವನ್ನು ಹೇಳುವಾಗ ಈ ಶಾಪದ ಉಲ್ಲೇಖ ಬಂದಿದೆ.

ನೋಡಿ : ಅಗಸ್ತ್ಯ > ತಾಟಕಾ, ಶಾಪ ಕ್ರ. ೫.

ಅಗಸ್ತ್ಯನು ಸುಂದನ ಯಾವುದೋ ಒಂದು ಅಪರಾಧಕ್ಕಾಗಿ ಆತನಿಗೆ ಶಾಪವನ್ನಿತ್ತನು.

ಸುಂದೇ ತು ನಿಹತೇ ರಾಮ ಅಗಸ್ತ್ಯಮೃಷಿಸತ್ತಮಮ್ ॥ ೧೦ ॥

ಅಗಸ್ತ್ಯನ ಶಾಪದಿಂದ ಸುಂದನ ವಧೆಯಾಯಿತು.

ಸುಂದನಿಂದ ನಡೆದ ಅಪರಾಧವಾಗಲೀ, ಅಗಸ್ತ್ಯನು ಆತನಿಗೆ ಕೊಟ್ಟ ಶಾಪವಾಗಲೀ ಸ್ಪಷ್ಟವಾಗಿಲ್ಲ.

**೫. ಅಗಸ್ತ್ಯ > ತಾಟಿಕಾ** **ಬಾಲಕಾಂಡ / ೨೫**

ವಿಶ್ವಾಮಿತ್ರಋಷಿಯು ತಾಟಿಕಾವನದಲ್ಲಿ ಪ್ರವೇಶಿಸುವಾಗ ಶ್ರೀರಾಮನಿಗೆ ಅವಳ ವೃತ್ತಾಂತವನ್ನು ವಿವರಿಸಿದನು.

ಹಿಂದೆ ಸುಕೇತು ಎಂಬ ದೊಡ್ಡ ಯಕ್ಷನಿದ್ದನು. ಆತನಿಗೆ ಮಕ್ಕಳಿರಲಿಲ್ಲ. ಸದಾಚಾರಿಯಾದ ಆ ಯಕ್ಷನು ಮಕ್ಕಳನ್ನು ಪಡೆಯಲು ಮಹಾತಪಸ್ಸನ್ನಾಚರಿಸಿದನು. ಆಗ ಬ್ರಹ್ಮನು ಅತಿಶಯ ಸಂತೋಷಗೊಂಡನು. ಆದರೆ ಅವನು ಪುತ್ರನನ್ನು ದಯಪಾಲಿಸದೆಯೇ ತಾಟಿಕಾ ಎಂಬ ಕನ್ಯಾರತ್ನವನ್ನು ಆ ಯಕ್ಷನಿಗೆ ಕೊಟ್ಟನು. ತಾಟಿಕಾ ಇವಳು ಸುಸ್ವರೂಪಿಯಾಗಿದ್ದಳು. ಅವಳು ಯೌವನಕ್ಕೆ ಬಂದನಂತರ ಅವಳ ವಿವಾಹವು ಜಂಭ-ಪುತ್ರನಾದ ಸುಂದನೊಡನೆ ಆಯಿತು. ಅಗಸ್ತ್ಯನ ಶಾಪದಿಂದ ಸುಂದನ ವಧೆಯಾಯಿತು. ತಾಟಿಕೆಯು ಕೋಪಗೊಂಡಳು. ಅವಳು ಮಾರೀಚನೆಂಬ ತನ್ನ ಪುತ್ರನೊಡಗೂಡಿ ಋಷಿಯನ್ನು ನುಂಗಬೇಕೆಂದು ಆತನ ಮೇಲೆ ಏರಿಹೋದಳು. ಅಗಸ್ತ್ಯನು "ಮಾರೀಚನು ರಾಕ್ಷಸನಾಗಲಿ !" ಎಂದು ಶಾಪವನ್ನು ಕೊಟ್ಟನು. ಅಲ್ಲದೆ ತಾಟಿಕೆಯನ್ನು ಹೀಗೆ ಶಪಿಸಿದನು :

> ಅಗಸ್ತ್ಯಃ ಪರಮಾಮರ್ಷ ತಾಟಕಾಮಪಿ ಶಪ್ತವಾನ್ ॥ ೧೨ ॥
> ಪುರುಷಾದೀ ಮಹಾಯಕ್ಷೀ ವಿಕೃತಾ ವಿಕೃತಾನನಾ ।
> ಇದಂ ರೂಪಂ ವಿಹಾಯಾಶು ದಾರುಣಂ ರೂಪಮಸ್ತು ತೇ ॥ ೧೩ ॥

ಅವನು ಕ್ರೋಧದಿಂದ ಕಿಡಿಕಿಡಿಗೊಂಡ ತಾಟಿಕೆಯನ್ನೂ ಈ ರೀತಿ ಶಪಿಸಿದನು "ನೀನು ಮಹಾಯಕ್ಷಿಣಿ ಇರುವೆಯಾದರೂ ಈ ನಿನ್ನ ರೂಪವು ಇಲ್ಲದಾಗಿ ನೀನು ಕೂಡಲೇ ಘೋರರೂಪವನ್ನು ತಾಳುವೆ. ಮಹಾಯಕ್ಷಿಣಿಯಾದ ನೀನು ಮಹಾಭಯಂಕರ ದೇಹ-ರೂಪವನ್ನು ಹೊಂದಿ, ಜನರನ್ನು ನುಂಗುವ ರಕ್ಕಸಿಯಾಗುವೆ" ಎಂದು ಶಪಿಸಿದನು.

ಈ ಶಾಪದಿಂದ ತಾಟಿಕೆಯ ಕೋಪ ಕೆರಳಿತು. ಕ್ರೋಧಾವಿಷ್ಟಳಾದ ಅವಳು ಅಗಸ್ತ್ಯಋಷಿಯ ಸಂಚಾರದ ಪವಿತ್ರಪ್ರದೇಶವನ್ನು ಧ್ವಂಸಗೋಳಿಸಲಾರಂಭಿಸಿದಳು.

ಆಗ ವಿಶ್ವಾಮಿತ್ರನು ಶ್ರೀರಾಮನಿಗೆ ಈ ರೀತಿ ಎಂದನು —

> ನ ಹ್ಯೇನಾಂ ಶಾಪಸಂಸೃಷ್ಟಾಂ ಕಶ್ಚಿದುತ್ಸಹತೇ ಪುಮಾನ್ ॥ ೧೬ ॥

"ಶಾಪಗ್ರಸ್ತಳಾದ ಈ ತಾಟಿಕೆಯನ್ನು ಸಂಹರಿಸುವ ಸಾಮರ್ಥ್ಯ ನಿನ್ನನ್ನು ಬಿಟ್ಟರೆ ಈ ತ್ರೈಲೋಕ್ಯದಲ್ಲಿ ಯಾರಿಗೂ ಇಲ್ಲ."

**೬. ? > ತಾಟಿಕಾವನ** **ಬಾಲಕಾಂಡ / ೨೬**

ವಿಶ್ವಾಮಿತ್ರನು ತಾಟಿಕೆಯ ವೃತ್ತಾಂತವನ್ನು ರಾಮನಿಗೆ ಹೇಳುತ್ತಿದ್ದಾನೆ :

ಅಗಸ್ತ್ಯನು ಶಪಿಸಿದನಂತರ ತಾಟಿಕೆ ಆತನ ಸಂಚಾರದ ಪವಿತ್ರಪ್ರದೇಶವನ್ನು ಧ್ವಂಸಗೊಳಿಸಹತ್ತಿದಳು. ವಿಶ್ವಾಮಿತ್ರನು ಶ್ರೀರಾಮನಿಗೆ "ಇಂಥ ದುರಾಚಾರಿಣಿಯಾದ, ಅತಿಬಲಿಷ್ಠಳಾದ, ಬೇಕುಬೇಕಾದ ರೂಪವನ್ನು ತಾಳಬಲ್ಲ ಈ ಯಕ್ಷಿಣಿಯನ್ನು ವಧಿಸು" ಎಂದು ಆಜ್ಞಾಪಿಸಿದನು. "ಶಾಪಗ್ರಸ್ತಳಾದ ಈ ತಾಟಿಕೆಯನ್ನು ವಧಿಸುವ ಸಾಮರ್ಥ್ಯ ನಿನ್ನ ಹೊರತು ಈ ಮೂರು ಲೋಕದಲ್ಲಿ ಮತ್ತಾರಲ್ಲೂ ಇಲ್ಲ ; ಸ್ತ್ರೀವಧೆಯನ್ನು ಹೇಗೆ ಮಾಡುವದೆಂದು ನಿನ್ನ ಮನಸ್ಸು ಕರಗುವದು ಬೇಡ ! ರಾಜಪುತ್ರನಾದವನು ನಾಲ್ಕು ವರ್ಣದವರ ಹಿತರಕ್ಷಣೆಯನ್ನು—ಕಟ್ಟದಾಗಿರಲಿ, ಒಳ್ಳೆಯದಾಗಿರಲಿ, ಪಾಪದ ಕೆಲಸವಿರಲಿ, ಸಂತೋಷವಿರಲಿ—ನೆರವೇರಿಸಲೇಬೇಕು ! ರಾಜ್ಯಕಾರಭಾರವನ್ನು ಅಂಗೀಕರಿಸಿದವರಿಗೆ ಅದುವೇ ಸನಾತನಧರ್ಮ ; ಆದಕಾರಣ

ಅಧರ್ಮನಿಷ್ಠೆಯಾದ ತಾಟಕೆಯನ್ನು ಸಂಹರಿಸು !" ಈ ರೀತಿ ಅವನು ಅಧರ್ಮವನ್ನಾಚರಿಸುವ ಸ್ತ್ರೀಯನ್ನು ವಧಿಸುವದು ಸೂಕ್ತವೆಂಬುದನ್ನು ಶ್ರೀರಾಮನಿಗೆ ಉದಾಹರಣೆಗಳನ್ನು ಕೊಟ್ಟು ವಿವರಿಸಿದನು. ಹಿಂದೆ ಇಂದ್ರನು, ವಿರೋಚನನೆಂಬ ರಾಕ್ಷಸನ ಕನ್ಯೆಯಾದ ಮಂಥರೆಯನ್ನು, ವಿಷ್ಣುವು ಭೃಗುಪತ್ನಿ ಹಾಗೂ ಶುಕ್ರಮಾತೆಯರನ್ನು ವಧಿಸಿದ ಉದಾಹರಣೆಗಳನ್ನು ಶ್ರೀರಾಮನ ಮುಂದಿಟ್ಟನು. ಶ್ರೀರಾಮನು ವಿಶ್ವಾಮಿತ್ರನ ಆಜ್ಞೆಯನ್ನು ಪಿತ್ರಾಜ್ಞೆ ಎಂದು ಭಾವಿಸಿ, ತಾಟಕೆಯ ಸಂಹಾರಕ್ಕೆ ಸಜ್ಜಾದನು. ಮಾಯಾವೀ ತಾಟಕೆಯು ಅಜೇಂಕ್ಯಳಾಗಿದ್ದಳು. ಅವಳು ಶ್ರೀರಾಮನ ಮೇಲೆ ಏರಿಹೋದ ಸಮಯಕ್ಕೆ, ಸ್ತ್ರೀವಧೆ ಸೂಕ್ತವಲ್ಲವೆಂದು ಬಗೆದು ಶ್ರೀರಾಮನು ಆಕೆಯನ್ನು ಬಲಹೀನಳನ್ನಾಗಿ ಮಾಡಬಯಸಿದನು. ಆ ರಕ್ಕಸಿಯು ಕಲ್ಲುಬಂಡೆಗಳ ಮಳೆ ಸುರಿಸಲಾರಂಭಿಸಿದಳು. ಹೀಗಾಗಿ ಶ್ರೀರಾಮನು ಬಾಣಗಳಿಂದ ಅವಳ ಕೈಗಳನ್ನು ತುಂಡರಿಸಿದನು. ಲಕ್ಷ್ಮಣನು ಬಾಣಗಳನ್ನು ಬಿಟ್ಟು ಆ ರಕ್ಕಸಿಯ ಕಿವಿಮೂಗುಗಳನ್ನು ಕತ್ತರಿಸಿದನು. ತಾಟಕೆಗೆ ಬೇರೆ ರೂಪವನ್ನು ಧರಿಸುವದು ಅಸಾಧ್ಯವಾಯಿತು. ಕೊನೆಗೆ ಶ್ರೀರಾಮನು ಮತ್ತೊಂದು ಬಾಣವನ್ನು ಅವಳ ಎದೆಗೆ ಗುರಿಯಿಟ್ಟು ಹೊಡೆದನು. ಆ ರಕ್ಕಸಿಯು ಸತ್ತು ಹೋದಳು.

ತಾಟಕೆಯ ಸಂಹಾರದಿಂದ ಇಂದ್ರಾದಿ ದೇವತೆಗಳು ಹಾಗೂ ವಿಶ್ವಾಮಿತ್ರನು ಸಂತುಷ್ಟರಾದರು.

ಉವಾಸ ರಜನೀಂ ತತ್ರ ತಾಟಕಾಯಾ ವನೇ ಸುಖಮ್ ।
ಮುಕ್ತಶಾಪಂ ವನಂ ತಚ್ಚ ತಸ್ಮಿನ್ನೇವ ತದಾಹನಿ ।
ರಮಣೀಯಂ ವಿಬಭ್ರಾಜ ಯಥಾ ಚೈತ್ರರಥಂ ವನಮ್ ॥ ೩೫ ॥

ಆ ರಾತ್ರಿಯನ್ನು ಅವರು ತಾಟಕಾವನದಲ್ಲಿ ಸುಖವಾಗಿ ಕಳೆದರು. ಶಾಪಮುಕ್ತವಾದ ಆ ಅರಣ್ಯವು ಇಂದ್ರನ ಚೈತ್ರವನದಂತೆ ರಮಣೀಯವಾಗಿ ಕಂಗೊಳಿಸಿತು.

ತಾಟಕಾವನವೂ ಶಾಪಗ್ರಸ್ತಳಾದ ತಾಟಕೆಯ ವಾಸ್ತವ್ಯದಿಂದ ಶಾಪಯುಕ್ತವಾಗಿರಬೇಕು. ಆದ್ದರಿಂದ ತಾಟಕೆಯ ವಧೆಯಿಂದಾಗಿ ಅದು ಶಾಪಮುಕ್ತವಾಯಿತೆಂದು ಹೇಳಲಾಗಿದೆ. ತಾಟಕಾವನಕ್ಕೆ ಯಾರಿಂದ ಶಾಪ ಬಂದಿತ್ತು ? ಯಾವ ಬಗೆಯ ಶಾಪವಿತ್ತು ? — ಎಂಬುದು ಸ್ಪಷ್ಟವಾಗಿಲ್ಲ.

## ೭. ಕುಶಕನ್ಯೆಯರು > ವಾಯು

ಬಾಲಕಾಂಡ / ೩೨

ಶ್ರೀರಾಮನು ಮಿಥಿಲಾಪಟ್ಟಣಕ್ಕೆ ಸಾಗುತ್ತಿದ್ದಾಗ ದಾರಿಯಲ್ಲಿ ಸಿಗುವ ಪ್ರದೇಶಗಳನ್ನು ಕುರಿತು ತಿಳಿದುಕೊಳ್ಳಬೇಕೆಂಬ ಇಚ್ಛೆಯನ್ನು ಪ್ರಕಟಿಸಿದನು. ಆಗ ವಿಶ್ವಾಮಿತ್ರನು ಕುಶಕನ್ಯೆಯರ ವೃತ್ತಾಂತವನ್ನು ಹೇಳುತ್ತಾನೆ.

ಕುಶನಾಭನಿಗೆ ಲಾವಣ್ಯವತಿಯರಾದ ನೂರು ಜನ ಕನ್ಯೆಯರಿದ್ದರು. ಒಮ್ಮೆ ಒಳ್ಳೆಯ ಅಲಂಕಾರಗಳನ್ನು ಧರಿಸಿ ಒಂದು ಉಪವನದಲ್ಲಿ ಅವರೆಲ್ಲರೂ ನೃತ್ಯಗಾಯನದಲ್ಲಿ ತೊಡಗಿದಾಗ ವಾಯುವು ಅವರನ್ನು ಕಂಡನು. ಕುಶಕನ್ಯೆಯರ ಯೌವನಭರಿತ ಅನುಪಮ ಲಾವಣ್ಯವನ್ನು ಕಂಡು ವಾಯುವು ಕಾಮಪರವಶನಾದನು. "ನಾನು ನಿಮ್ಮಲ್ಲಿ ಮೋಹಿತನಾಗಿದ್ದೇನೆ ; ನೀವೆಲ್ಲರೂ ನನ್ನ ಮಡದಿಯರಾಗಿರಿ ; ಮನುಷ್ಯರ ತಾರುಣ್ಯಾವಸ್ಥೆಯು ಅತಿಚಂಚಲ, ಕ್ಷಣಭಂಗುರ, ಕ್ಷಣಕ್ಷಣಕ್ಕೂ ಕ್ಷೀಣಿಸುವಂಥಾದ್ದಾಗಿದೆ. ನನ್ನೊಡನೆ ವಿವಾಹವಾಗಿ ಚಿರ ತಾರುಣ್ಯವನ್ನೂ, ಅಮರತ್ವವನ್ನೂ ಪಡೆದುಕೊಳ್ಳಿರಿ" ಎಂದು ನುಡಿದನು. ವಾಯುವಿನ ಈ ಉದ್ಧಟ ನುಡಿಗಳನ್ನು ಕೇಳಿ ಕುಶಕನ್ಯೆಯರು ರೇಗಿ ತಿರಸ್ಕಾರದಿಂದ ಆತನಿಗೆ ಈ ರೀತಿ ಹೇಳಿದರು—

ಅಂತಶ್ಚರಸಿ ಭೂತಾನಾಂ ಸರ್ವೇಷಾಂ ಸುರಸತ್ತಮ ।
ಪ್ರಭಾವಜ್ಞಾಶ್ಚ ತೇ ಸರ್ವಾಃ ಕಿಮರ್ಥಮವಮನ್ಯಸೇ ॥ ೧೯ ॥
ಕುಶನಾಭಸುತಾ ದೇವ ಸಮಸ್ತಾಃ ಸುರಸತ್ತಮ ।
ಸ್ಥಾನಾಚ್ಚ್ಯಾವಯಿತುಂ ದೇವಂ ರಕ್ಷಾಮಸ್ತು ತಪೋ ವಯಮ್ ॥ ೨೦ ॥
ಮಾ ಭೂತ್ಸಕಾಲೋ ದುರ್ಮೇಧಃ ಪಿತರಂ ಸತ್ಯವಾದಿನಮ್ ।
ಅವಮನ್ಯ ಸ್ವಧರ್ಮೇಣ ಸ್ವಯಂ ವರಮುಪಾಸ್ಮಹೇ ॥ ೨೧ ॥
ಪಿತಾ ಹಿ ಪ್ರಭುರಸ್ಮಾಕಂ ದೈವತಂ ಪರಮಂ ಚ ಸಃ ।
ಯಸ್ಯ ನೋ ದಾಸ್ಯತಿ ಪಿತಾ ಸ ನೋ ಭರ್ತಾ ಭವಿಷ್ಯತಿ ॥ ೨೨ ॥

"ಹೇ ಸುರಶ್ರೇಷ್ಠನೇ ! ನೀನು ಪ್ರಾಣಮಾತ್ರರಲ್ಲಿ ಸಂಚರಿಸುವವನಾಗಿದ್ದೀಯೇ ! ನಿನ್ನ ಪ್ರಭಾವವನ್ನು ಬಲ್ಲೆವು. ಆದ್ದರಿಂದ, ವಾಯುದೇವತೆಯೇ, ನೀನು ನಮ್ಮನ್ನು ಏತಕ್ಕೆ ಕಡೆಗಣಿಸುತ್ತೀಯಾ? ನಾವು ಕುಶನಾಭನ ಕನ್ಯೆಯರು. ಸುರಶ್ರೇಷ್ಠನೆ, ನಮ್ಮನ್ನು ಅವಮಾನಿಸಲು ಸಿದ್ಧನಾದ ನಿನ್ನಂತಹ ದೇವತೆಯ ದೇವತ್ವವನ್ನು ಹರಣ ಮಾಡುವ ಸಾಮರ್ಥ್ಯವು ನಮ್ಮಲ್ಲಿದೆ ; ಆದರೆ ನಾವು ನಮ್ಮ ತಪದ ರಕ್ಷಣೆಯನ್ನು ಮಾಡುತ್ತಿದ್ದೇವೆ. ಶಾಪವನ್ನು ಕೊಟ್ಟರೆ ತಪಕ್ಷಯವಾಗುವ ಸಾಧ್ಯತೆ ಇರುವದರಿಂದ ನಾವು ಶಾಪವನ್ನು ಕೊಡುತ್ತಿಲ್ಲ. ಎಲೈ ದುರ್ಬುದ್ಧಿಯೇ ! ನಾವು ಉತ್ಕಟ ವಿಷಯವಾಸನೆಗೆ ಬಲಿಯಾಗಿ, ಸತ್ಯನಿಷ್ಠನಾದ ನಮ್ಮ ತಂದೆಯನ್ನು ಅವಮಾನಿಸಿ, ಸ್ವೇಚ್ಛೆಯಿಂದ ವರನನ್ನು ವಿವಾಹವಾಗುವ ಪ್ರಸಂಗವು ನಮ್ಮ ಮೇಲೆ ಎಂದೆಂದಿಗೂ ಬರದಿರಲಿ ! ತಂದೆಯೇ ನಮಗೆ ಪ್ರಭುವು ಮತ್ತು ಪರಮದೈವತ. ನಮ್ಮ ತಂದೆಯು ಯಾವ ಪುರುಷನಿಗೆ ನಮ್ಮನ್ನು ಅರ್ಪಿಸುವನೋ ಆತನೇ ನಮ್ಮ ಪತಿಯಾಗುವನು." —ಬಾಲಕಾಂಡ / ೩೩

> ವಾಯುಃ ಸರ್ವಾತ್ಮಕೋ ರಾಜನ್ ಪ್ರಧರ್ಷಯಿತುಮಿಚ್ಛತಿ ।
> ಅಶುಭಂ ಮಾರ್ಗಮಾಸ್ಥಾಯ ನ ಧರ್ಮಂ ಪ್ರತ್ಯವೇಕ್ಷತೇ ॥ ೨ ॥
> ಪಿತೃಮತ್ಯಃ ಸ ಭದ್ರಂ ತೇ ಸ್ವಚ್ಛಂದೇ ನ ವಯಂ ಸ್ಥಿತಾಃ ।
> ಪಿತರಂ ನೋ ವೃಣೀಷ್ವ ತ್ವಂ ಯದಿ ನೋ ದಾಸ್ಯತೇ ತವ ॥ ೩ ॥

ಕುಶಕನ್ಯೆಯರು ಪಿತನನ್ನು ವಂದಿಸಿ ಈ ರೀತಿ ಹೇಳಿದರು : "ಹೇ ರಾಜನೆ, ಸರ್ವಸಂಚಾರಿಯಾದ ವಾಯುದೇವರು ಅಶುಭನುಡಿಗಳನ್ನಾಡಿ ಧರ್ಮವನ್ನು ಮೀರಿ ನಮ್ಮೊಡನೆ ಅತಿಪ್ರಸಂಗ ಮಾಡಬಯಸಿದಾಗ ನಾವು ಈ ರೀತಿ ಹೇಳಿದೆವು : 'ದೇವರೇ, ನಿಮಗೆ ಶುಭವಾಗಲಿ'! ನಾವು ಸ್ವಚ್ಛಂದಿಗಳಾಗಿರದೇ ಪಿತನ ಆಜ್ಞೆಯಲ್ಲಿದ್ದವರು. ನಿಮ್ಮ ಬೇಡಿಕೆಯಂತೆ ಪಿತನು ನಮ್ಮನ್ನು ನಿಮಗೆ ಒಪ್ಪಿಸಿದರೆ ಮಾತ್ರ ನಾವು ನಿಮ್ಮ ವಶವಾಗುವೆವು.' "

ಕುಶಕನ್ಯೆಯರ ಈ ವಚನಗಳನ್ನು ಕೇಳಿ ವಾಯುವು ಕೋಪಗೊಂಡನು. ಆ ಕನ್ಯೆಯರ ಗಾತ್ರಗಳಲ್ಲಿ ಪ್ರವೇಶಿಸಿ ಆತನು ಅವರ ಅಂಗಾಂಗಗಳನ್ನು ಭಂಗಗೊಳಿಸಿದನು. ಅವರು ಸೌಂದರ್ಯಹೀನರಾಗಿ ಕುಬ್ಜೆಯರಾದರು.*

ಕುಶಕನ್ಯೆಯರು ತಮ್ಮ ತಂದೆಗೆ ಹೇಳಿದುದನ್ನೇ(ಬಾಲ ೩೩/೨, ೩) ವಾಯುವಿಗೂ ಹೇಳಿದಂತೆ ಉಲ್ಲೇಖವಿಲ್ಲ.

ಪ್ರತ್ಯಕ್ಷದಲ್ಲಿ ಶಾಪವನ್ನು ಕೊಟ್ಟಿಲ್ಲವಾದ್ದರಿಂದ ಶಾಪದ ಸ್ವರೂಪವು ಸ್ಪಷ್ಟವಾಗಿಲ್ಲ.

### ೮. ಉಮಾ > ದೇವತೆಗಳು ಬಾಲಕಾಂಡ / ೩೬

ಶ್ರೀರಾಮನು ದೇವಲೋಕ ಹಾಗೂ ಮನುಷ್ಯಲೋಕಸಂಬಂಧಿತ ಹಿಮಾಲಯಕನ್ಯೆಯಾದ ಉಮಾ ಇವಳ ಸವಿಸ್ತರ ಚರಿತ್ರೆಯನ್ನು ಅರಿಯಲು ಬಯಸಿದನು. ಆಗ ವಿಶ್ವಾಮಿತ್ರನು ಅದನ್ನು ನಿರೂಪಿಸಿದನು.

ಗೌರಿ ಮತ್ತು ಶಂಕರ ಇವರು ಸುದೀರ್ಘ ರತಿಕ್ರೀಡೆಯಲ್ಲಿ ತೊಡಗಿ ನೂರು ದಿವ್ಯ ಸಂವತ್ಸರಗಳು ಕಳೆದವು. ಉಮೆಗೆ ಪುತ್ರಪ್ರಾಪ್ತಿಯಾಗಲಿಲ್ಲ. ಇವರಿಬ್ಬರ ಸಂಯೋಗದಿಂದ ಹುಟ್ಟಲಿರುವ ಸಂತಾನವನ್ನು ಹೇಗೆ ಸಹಿಸಿಕೊಳ್ಳಬಹುದೆಂಬ ಚಿಂತೆ ಬ್ರಹ್ಮಾದಿ ದೇವತೆಗಳಿಗಾಯಿತು. ಅವರು ಶಿವನ ಬಳಿಗೆ ಹೋಗಿ ಪ್ರಾರ್ಥಿಸಿದರು : "ಭೋ ಮಹಾದೇವನೇ ! ಈ ಜಗತ್ತಿನ ಹಿತರಕ್ಷಣೆಯಲ್ಲಿ ನೀನು ಆಸಕ್ತನಾದವನು ; ನಮ್ಮನ್ನು ಪಾಲಿಸು, ನಿನ್ನ ತೇಜಸ್ಸು ಬ್ರಹ್ಮತೇಜಸ್ಸನ್ನೊಳಗೊಂಡಿದೆ. ಅದನ್ನು ಸಹಿಸುವ ಕ್ಷಮತೆ ಜನರ

* 'ಸುರಶ್ರೇಷ್ಠ ! ಆಪ್ ಪ್ರಾಣವಾಯೂಕೇ ರೂಪಮೇ ಸಮಸ್ತ ಪ್ರಾಣಿಯೋಂಕೇ ಭೀತರ್ ವಿಚರತೇ ಹೈಂ. (ಅತಃ ಸಬಕೇ ಮನಕೀ ಬಾತೇ ಜಾನತೇ ಹೈಂ ; ಆಪ್‌ಕೋ ಯಹ ಮಾಲೂಮ್ ಹೋಗಾ ಕಿ ಹಮಾರೇ ಮನಮೇ ಆಪ್‌ಕೇ ಪ್ರತಿ ಕೋಈ ಆಕರ್ಷಣ ನಹೀ ಹೈ) ; ಫಿರ್ ದಶಾಮೇ ಯಹ ಅನುಚಿತ ಪ್ರಸ್ತಾವ ಕರಕೇ ಆಪ್ ಹಮಾರಾ ಅಪಮಾನ್ ಕಿಸ್‌ಲಿಯೇ ಕರ್ ರಹೇ ಹೈಂ ?'

—ಹಿಂದೀ ಅನುವಾದ, ಗೀತಾ ಪ್ರೆಸ್, ಗೋರಖಪುರದ ಪ್ರತಿ, ಪುಟ ೯೬

ಲ್ಲಿಲ್ಲದಕಾರಣ ನಿನ್ನ ತೇಜಸ್ಸನ್ನು ತೇಜೋಮಯವಾದ ದೇಹದಲ್ಲಿ ಧರಿಸಿ ಸಮಸ್ತ ಲೋಕವನ್ನು ಕಾಪಾಡು! ಈ ಜಗತ್ತನ್ನು ಶೂನ್ಯಗೊಳಿಸಬೇಡ." ಶಂಕರನು ದೇವವತೆಗಳ ಕೋರಿಕೆಯನ್ನು ಮನ್ನಿಸಿ ಇಂತೆಂದನು : "ನಾನು ತೇಜೋಬಲದಿಂದ ಉಮೆಯನ್ನೊಡಗೂಡಿ ತೇಜಸ್ಸನ್ನು ಧರಿಸುವೆ; ಆದರೆ ಯಾರಾದರೂ ಸ್ವಸ್ಥಾನದಿಂದ ಕದಲಿದ ಈ ತೇಜಸ್ಸನ್ನು (ವೀರ್ಯ) ಧರಿಸುವುದು ಅವಶ್ಯಕವಿದೆ." ಪೃಥ್ವಿಯು ಆ ತೇಜಸ್ಸನ್ನು ಧರಿಸಲು ಒಪ್ಪಿಕೊಂಡಳು. ಶಂಕರನು ತನ್ನ ತೇಜಸ್ಸನ್ನು ಬಿಟ್ಟನು. ಈ ಕಾರಣದಿಂದ ಪೃಥ್ವಿಯು ವನ-ಪರ್ವತಗಳಿಂದ ತುಂಬಿಕೊಂಡಿತು. ಆಗ ದೇವತೆಗಳು ಅಗ್ನಿಗೆ ಈ ತೇಜಸ್ಸಿನಲ್ಲಿ ಪ್ರವೇಶಿಸಲು ಬಿನ್ನೈಸಿದರು. ಅಗ್ನಿಯಿಂದ ಕೂಡಿದ ಆ ತೇಜಸ್ಸು ಶ್ವೇತಪರ್ವತದ ರೂಪವನ್ನು ತಾಳಿ ಯಾವ ಭೂಭಾಗದಲ್ಲಿ ಪ್ರವೇಶಿಸಿತೋ ಅಲ್ಲೆಲ್ಲ ತೇಜಸ್ವಿಯಾದ ಶರಗಳ ದಿವ್ಯವನ ರೂಪತಾಳಿತು. ಮಹಾತೇಜಸ್ವಿಯಾದ, ಅಗ್ನಿಸಂಭೂತನಾದ ಕಾರ್ತಿಕೇಯನು ಆ ವನದಲ್ಲಿ ಜನ್ಮತಾಳಿದನು. ಸಕಲ ದೇವತೆಗಳು ಉಮೆ ಮತ್ತು ಶಂಕರನನ್ನು ಸ್ತುತಿಸಿದರು ; ಆದರೆ ತಾನು ಪುತ್ರಪ್ರಾಪ್ತಿಗಾಗಿ ಪತಿಯೊಡನೆ ರತಿಕ್ರೀಡೆಯಲ್ಲಿದ್ದಾಗ ದೇವತೆಗಳು ವ್ಯತ್ಯಯವನ್ನುಂಟು ಮಾಡಿದ ಕಾರಣ ಉಮೆಗೆ ಕೋಪ ಬಂದಿತು.

ಸಮನ್ಯುರಶಪತ್ಸರ್ವಾನ್ಕ್ರೋಧಸಂರಕ್ತಲೋಚನಾ ।
ಯಸ್ಮಾನ್ನಿವಾರಿತಾ ಚಾಹಂ ಸಂಗತಾಪುತ್ರಕಾಮ್ಯಯಾ ॥ ೨೧ ॥
ಅಪತ್ಯಂ ಸ್ವೇಷು ದಾರೇಷು ನೋತ್ಪಾದಯಿತುಮರ್ಹಥ ।
ಅದ್ಯಪ್ರಭೃತಿ ಯುಷ್ಮಾಕಮಪ್ರಜಾಃ ಸಂತು ಪತ್ನಯಃ ॥ ೨೨ ॥

"ಪುತ್ರಪ್ರಾಪ್ತಿಯ ಅಪೇಕ್ಷೆಯಿಂದ ಪತಿಯನ್ನು ಒಡಗೂಡಿದ ನನ್ನನ್ನು ಸಮಾಗಮದಿಂದ ನಿವೃತ್ತಗೊಳಿಸಿದ್ದೀರಿ ; ಆದಕಾರಣ ನಿಮ್ಮ ಸ್ತ್ರೀಯರಿಂದ ನಿಮಗೆ ಸಂತಾನಪ್ರಾಪ್ತಿಯಾಗಲಾರದು ; ನಿಮ್ಮ ಸ್ತ್ರೀಯರು ಬಂಜೆಯರಾಗುವರು."

ಉಮೆಯ ಈ ಶಾಪದಿಂದ ದೇವತೆಗಳೆಲ್ಲರೂ ದುಃಖಿತರಾದರು.

**೯. ಉಮಾ > ಪೃಥ್ವಿ** **ಬಾಲಕಾಂಡ / ೩೬**

ವಿಶ್ವಾಮಿತ್ರನು ಉಮೆಯ ಕಥೆಯನ್ನು ಶ್ರೀರಾಮನಿಗೆ ಹೇಳುತ್ತಾನೆ.

ಶಾಪ—ಉಮಾ > ದೇವತೆಗಳು, ಶಾಪ ಕ್ರಮಾಂಕ ೮ ನೋಡಿರಿ.

ಪೃಥ್ವಿಯು ದೇವತೆಗಳ ಕೋರಿಕೆಯ ಮೇರೆಗೆ ಶಂಕರನ ತೇಜಸ್ಸನ್ನು ಧರಿಸಿದಳು. ಆಗ ಉಮೆ ಮತ್ತು ಶಂಕರ ಇವರ ರತಿಕ್ರೀಡೆಯಲ್ಲಿ ಅಡ್ಡಿ ಉಂಟಾದ ಕಾರಣ, ಅವಳು ಈ ರೀತಿ ಸಮಸ್ತ ದೇವತೆಗಳನ್ನು ಶಪಿಸಿ ಪೃಥ್ವಿಯನ್ನೂ ಈ ರೀತಿ ಶಪಿಸಿದಳು :

ಏವಮುಕ್ತ್ವಾ ಸುರಾನ್ಸರ್ವಾನ್ಶಶಾಪ ಪೃಥಿವೀಮಪಿ ।
ಅವನೇ ನೈಕರೂಪಾ ತ್ವಂ ಬಹುಭಾರ್ಯಾ ಭವಿಷ್ಯಸಿ ॥ ೨೩ ॥
ನ ಚ ಪುತ್ರಕೃತಾಂ ಪ್ರೀತಿಂ ಮತ್ಕ್ರೋಧಕಲುಷೀಕೃತಾ ॥
ಪ್ರಾಪ್ಸ್ಯಸಿ ತ್ವಂ ಸುದುರ್ಮೇಧೇ ಮಮ ಪುತ್ರಮನಿಚ್ಛತೀ ॥ ೨೪ ॥

"ಹೇ ಪೃಥ್ವಿಯೇ ! ನಿನ್ನ ಸ್ವರೂಪವು ಯಾವಾಗಲೂ ಒಂದೇ ಇರಲಾರದು. ನೀನು ಬಹುಜನರ ಪತ್ನಿಯಾಗುವೆ ; ಎಲೈ ದುರ್ಮತಿಯೇ, ನನಗೆ ಪುತ್ರಪ್ರಾಪ್ತಿಯಾಗಬಾರದೆಂದು ನೀನು ಯಾವ ರೀತಿ ಬಯಸಿದೆಯೋ ಅದೇ ರೀತಿ ನನ್ನ ಕ್ರೋಧದಿಂದ ಕಲುಷಿತಳಾದ ನಿನಗೆ ಪುತ್ರಸುಖವು ದೊರೆಯಲಾರದು."

**೧೦. ? > ?** **ಬಾಲಕಾಂಡ / ೪೩**

ವಿಶ್ವಾಮಿತ್ರನು ಶ್ರೀರಾಮನಿಗೆ ಗಂಗಾವತರಣದ ಕಥೆಯನ್ನು ಹೇಳುತ್ತಿದ್ದಾನೆ :

ಶಿವನ ಶಿರದಲ್ಲಿ ಬಿದ್ದ ಗಂಗೆಗೆ ಅವನ ಜಟಾಜೂಟದಿಂದ ಹೊರಗೆ ಬರಲು ಮಾರ್ಗವು ದೊರಕದಂತಾಯಿತು. ಅವಳು ಅನೇಕ ಸಂವತ್ಸರಗಳವರೆಗೆ ಅಲ್ಲಿಯೇ ಸಿಲುಕಿಬಿದ್ದಳು. ಗಂಗೆಯ ಆ ಸ್ಥಿತಿಯನ್ನು ಕಂಡು ಭಗೀರಥನು ಪುನಃ ತಪಸ್ಸನ್ನು ಆಚರಿಸಿ ಶಂಕರನನ್ನು ಸಂತುಷ್ಟಗೊಳಿಸಿದಾಗ ಶಂಕರನು ಗಂಗೆಯನ್ನು ಬಿಂದು

ಸರೋವರದಲ್ಲಿ ಬಿಟ್ಟನು. ಶಿವನ ಶಿರಸ್ಸಿನಿಂದ ಬಿದ್ದ ಗಂಗಾಜಲವು ನಿರ್ಮಲವೂ ನಿಷ್ಕಾಮವೂ ಆದ್ದರಿಂದ ಭೂಲೋಕದಲ್ಲಿ ಶೋಭಾಯಮಾನವಾಯಿತು. ಅಲ್ಲಿ ವಾಸವಾಗಿದ್ದ ಋಷಿವೃಂದ ಹಾಗೂ ಗಂಧರ್ವವರು ಶಿವಮಸ್ತಕದಿಂದ ಬಿದ್ದ ಆ ಉದಕವನ್ನು ಪವಿತ್ರವೆಂದು ಭಾವಿಸಿ ಅದರಲ್ಲಿ ಮಿಂದರು.

ಶಾಪಾತ್ಪತಿತಾ ಯೇ ಚ ಗಗನಾದ್ವಸುಧಾತಲಮ್ ॥ ೨೭ ॥
ಕೃತ್ವಾ ತತ್ರಾಭಿಷೇಕಂ ತೇ ಬಭೂವುರ್ಗತಕಲ್ಮಷಾಃ । ೨೮

"ಶಾಪವನ್ನು ಪಡೆದು ಸ್ವರ್ಗದಿಂದ ಚ್ಯುತರಾದವರು ಭೂಮಿಗೆ ಬಂದಿದ್ದರು ; ಅವರು ಗಂಗಾಜಲದಲ್ಲಿ ಸ್ನಾನಮಾಡಿ ಪಾಪರಹಿತರಾದರು."

ಜನರು ಈ ಜಲದಿಂದ ಪಾಪವನ್ನು ಕಳೆದುಕೊಂಡು ಪುಣ್ಯವಂತರೆಂದೆನಿಸಿ ಪುನಃ ಸ್ವರ್ಗವನ್ನೇರಿ ಸ್ವಸ್ಥಾನಗಳನ್ನು ತಲುಪಿದರು.

ಈ ಶಾಪದ ಉಲ್ಲೇಖ ಮಾತ್ರ ಬಂದಿದೆ. ಸ್ವರ್ಗದಿಂದ ಭ್ರಷ್ಟರಾದವರು ಯಾರು ? ಏಕೆ ಭ್ರಷ್ಟರಾದರು? ಅವರಿಗೆ ಶಾಪವು ದೊರೆತ ಕಾರಣವೇನು ? ಈ ಎಲ್ಲ ಸಂಗತಿಗಳು ಸ್ಪಷ್ಟವಾಗಿಲ್ಲ. ಶಾಪದ ಕಾರಣ ಮತ್ತು ಪರಿಣಾಮಗಳು ಸ್ಪಷ್ಟವಾಗಿಲ್ಲ.

## ೧೧. ಗೌತಮ > ಇಂದ್ರ

ಬಾಲಕಾಂಡ / ೪೮

ವಿಶ್ವಾಮಿತ್ರನ ಯಜ್ಞರಕ್ಷಣೆಗೆಂದು ಅವನೊಡನೆ ಹೋಗುತ್ತಿರುವ ಶ್ರೀರಾಮಲಕ್ಷ್ಮಣರು ಮಿಥಿಲಾ ನಗರವನ್ನು ಸಮೀಪಿಸಿದರು. ಅಲ್ಲಿ ಹಳೆಯ ಕಾಲದ, ನಿರ್ಜನವಿದ್ದರೂ ರಮ್ಯವಾದ ಒಂದು ಆಶ್ರಮವು ಕಾಣಿಸಿತು. ಆ ಆಶ್ರಮದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಅರಿತುಕೊಳ್ಳುವ ಉದ್ದೇಶದಿಂದ ಶ್ರೀರಾಮನು ವಿಶ್ವಾಮಿತ್ರನಿಗೆ ಈ ಆಶ್ರಮವು ಪೂರ್ವದಲ್ಲಿ ಯಾರದಾಗಿತ್ತು ? ಸಾಂಪ್ರತ ಅದು ಮುನಿರಹಿತವಾಗಿ, ನಿರ್ಜನವಾಗಿ ಇರುವ ಕಾರಣವೇನು ಎಂದು ಪ್ರಶ್ನಿಸಿದನು. ವಿಶ್ವಾಮಿತ್ರನು ನುಡಿದದ್ದು :

ಹಂತ ತೇ ಕಥಯಿಷ್ಯಾಮಿ ಶೃಣು ತತ್ತ್ವೇನ ರಾಘವ ।
ಯಸ್ಯೈತದಾಶ್ರಮಪದಂ ಶಪ್ತಂ ಕೋಪಾನ್ಮಹಾತ್ಮನಃ ॥ ೧೫ ॥

"ಶ್ರೀರಾಮನೇ ! ಯಾವ ಮಹಾತ್ಮನ ಕೋಪದ ಫಲವಾಗಿ ಈ ಆಶ್ರಮವು ಶಾಪಕ್ಕೆ ಒಳಗಾಗಿದೆಯೋ ಅದನ್ನು ನಿನಗೆ ಹೇಳುವೆ ! ಕೇಳು !" ಎಂದು ಪ್ರಸ್ತಾಪಿಸಿ ವಿಶ್ವಾಮಿತ್ರನು ಮುಂದುವರಿದನು.

ಸ್ವರ್ಗಲೋಕದ ಆಶ್ರಮದಂತಿರುವ ಈ ಆಶ್ರಮವು ಗೌತಮ ಋಷಿಯದು. ಆತನು ತನ್ನ ಪತ್ನಿಯಾದ ಅಹಲ್ಯೆಯೊಡನೆ ಬಹುವರುಷಗಳ ಕಾಲ ತಪಸ್ಸನ್ನು ಮಾಡುತ್ತಿದ್ದನು. ಋಷಿಯು ಆಶ್ರಮದಲ್ಲಿ ಇಲ್ಲದಿರುವ ಸಮಯವನ್ನು ಸಾಧಿಸಿ ಇಂದ್ರನು ಗೌತಮನ ವೇಷದಿಂದ ಬಂದು ಅಹಲ್ಯೆಗೆ ಈ ರೀತಿ ಎಂದನು :

ಋತುಕಾಲಂ ಪ್ರತೀಕ್ಷಂತೇ ನಾರ್ಥಿನಃ ಸುಸಮಾಹಿತೇ ।
ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹ ಸುಮಧ್ಯಮೇ ॥ ೧೮ ॥
ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ರಘುನಂದನ ।
ಮತಿಂ ಚಕಾರ ದುರ್ಮೇಧಾ ದೇವರಾಜ-ಕುತೂಹಲಾತ್ ॥ ೧೯ ॥
ಅಥಾಬ್ರವೀತ್ಸುರಶ್ರೇಷ್ಠಂ ಕೃತಾರ್ಥೇನಾಂತರಾತ್ಮನಾ ।
ಕೃತಾರ್ಥಾಸ್ಮಿ ಸುರಶ್ರೇಷ್ಠ ಗಚ್ಛ ಶೀಘ್ರಮಿತಃ ಪ್ರಭೋ ॥ ೨೦ ॥
ಆತ್ಮಾನಂ ಮಾಂ ಚ ದೇವೇಶ ಸರ್ವಥಾ ರಕ್ಷ ಗೌತಮಾತ್ ।
ಇಂದ್ರಸ್ತು ಪ್ರಹಸನ್ವಾಕ್ಯಮಹಲ್ಯಾಮಿದಮಬ್ರವೀತ್ ॥ ೨೧ ॥
ಸುಶ್ರೋಣಿ ಪರಿತುಷ್ಟೋಽಸ್ಮಿ ಗಮಿಷ್ಯಾಮಿ ಯಥಾಗತಮ್ ॥ ೨೨ ॥

"ಎಲೈ ಪರಮಸುಂದರಿ, ಕೃಶೋದರಿ, ರತಿಸುಖಲಾಲಸೆಯಿದ್ದವರಿಗೆ ಋತುಕಾಲಗಳ ಪರಿವೆ ಇರುವುದಿಲ್ಲ. ನಾನು ನಿನ್ನೊಡನೆ ಸಮಾಗಮವನ್ನು ಬಯಸುತ್ತೇನೆ." ಗೌತಮವೇಷವನ್ನು ಧರಿಸಿದ ಈತನು ಇಂದ್ರನೆಂದು ತಿಳಿದುಬಂದರೂ ದೇವರಾಜ ಇಂದ್ರನು ತನ್ನಲ್ಲಿ ಅಭಿಲಾಷೆಯಿಟ್ಟುಕೊಂಡಿದ್ದಾನೆಂಬ ಹೆಮ್ಮೆಯಿಂದ ದುರ್ಮತಿ

ಯಾದ ಅವಳು ಇಂದ್ರನೊಡನೆ ರತಿಕ್ರೀಡೆಯಲ್ಲಿ ನಿರತಳಾಗಲು ಅಣಿಯಾದಳು. ಸಮಾಗಮವಾದೊಡನೆ ತೃಪ್ತಿಗೊಂಡ ಅವಳು ಇಂದ್ರನನ್ನು ಕುರಿತು "ಎಲೈ ಸುರಶ್ರೇಷ್ಠನೇ, ನಾನು ಕೃತಾರ್ಥಳಾದೆ ; ಈಗ ನೀನು ಇಲ್ಲಿಂದ ಬೇಗ ಹೊರಡು ! ಗೌತಮನಿಂದ ನಮ್ಮಿಬ್ಬರ ರಕ್ಷಣೆಯಾಗುವಂತೆ ಮಾಡು !" ಎಂದು ಹೇಳಿದಳು. ಇಂದ್ರನು ನಗುನಗುತ್ತ "ಎಲೈ ಸುಂದರಿಯೇ, ನಾನು ಸಂತುಷ್ಟನಾದೆ, ಯಾವ ರೀತಿ ಬಂದೆನೋ ಅದೇ ರೀತಿ ಹೋಗುತ್ತೇನೆ" ಎಂದನು.

ಗೌತಮ ಋಷಿಯ ಭೀತಿಯು ಮನದಲ್ಲಿದ್ದ ಇಂದ್ರನು ಲಗುಬಗೆಯಿಂದ ಆಶ್ರಮದ ಹೊರಗೆ ಬರುತ್ತಿರುವಾಗ ಮಹಾಮುನಿಯಾದ ಗೌತಮನು ಅಲ್ಲಿಗೆ ಬಂದನು. ದುರ್ಧರ್ಷನಾದ, ತಪೋಬಲದಿಂದ ಅಗ್ನಿಯಂತೆ ತೇಜಸ್ಸುಳ್ಳ ಗೌತಮನನ್ನು ಕಂಡು ಇಂದ್ರನು ಭಯದಿಂದ ನಡುಗಿದನು. ಅವನ ಮುಖವು ಬಾಡಿತು ; ನಡೆದ ಸಂಗತಿಯು ಗೌತಮನ ಗಮನಕ್ಕೆ ಬಂದು ಆತನು ಕ್ರೋಧಗೊಂಡು ಇಂದ್ರನನ್ನು ಈ ರೀತಿ ಶಪಿಸಿದನು :

ಮಮ ರೂಪಂ ಸಮಾಸ್ಥಾಯ ಕೃತವಾನಸಿ ದುರ್ಮತೇ ।
ಅಕರ್ತವ್ಯಮಿದಂ ಯಸ್ಮಾದ್ವಿಫಲಸ್ತ್ವಂ ಭವಿಷ್ಯಸಿ ॥ ೨೭ ॥

"ಎಲೈ ದುರ್ಬುದ್ಧಿಯೇ, ನನ್ನ ವೇಷವನ್ನು ಧರಿಸಿ ನೀನು ಈ ನೀಚಕೃತ್ಯವನ್ನು ಮಾಡಿರುವಿ ; ಆದಕಾರಣ ನೀನು ವೃಷಣರಹಿತನಾಗು !"

ಕೋಪದಿಂದ ಉರಿಯುತ್ತಿದ್ದ ಗೌತಮನ ಶಾಪದಿಂದ ಇಂದ್ರನ ವೃಷಣಗಳೆರಡರೂ ಕಳಚಿ ಭೂಮಿಗೆ ಬಿದ್ದವು.

ತಥಾ ಶಪ್ತ್ವಾ ಚ ವೈ ಶಕ್ರಂ ಭಾರ್ಯಾಮಪಿ ಚ ಶಪ್ತವಾನ್ ॥ ೨೯ ॥

ಗೌತಮನು ಇಂದ್ರನನ್ನು ಈ ಶಪಿಸಿದನಂತರ ಭಾರ್ಯೆಯಾದ ಅಹಲ್ಯೆಯನ್ನೂ ಶಪಿಸಿದನು.

ಬಾಲಕಾಂಡ / ೪೯

ಕುರ್ವತಾ ತಪಸೋ ವಿಘ್ನಂ ಗೌತಮಸ್ಯ ಮಹಾತ್ಮನಃ ॥ ೧ ॥
ಕ್ರೋಧಮುತ್ಪಾದ್ಯ ಹಿ ಮಯಾ ಸುರಕಾರ್ಯಮಿದಂ ಕೃತಮ್ ॥ ೨ ॥
ಅಫಲೋಽಸ್ಮಿ ಕೃತಸ್ತೇನ ಕ್ರೋಧಾತ್ ಸಾ ಚ ನಿರಾಕೃತಾ ।
ಶಾಪಮೋಕ್ಷೇಣ ಮಹತಾ ತಪೋಽಸ್ಯಾಪಹೃತಂ ಮಯಾ ॥ ೩ ॥

ಈ ರೀತಿ ವೃಷಣರಹಿತನಾದ ಇಂದ್ರನು ಭಯಗೊಂಡು, ಸಿದ್ಧ, ಗಂಧರ್ವ, ಚಾರಣ ಮತ್ತು ಅಗ್ನಿದೇವತೆಗಳನ್ನು ಕುರಿತು ಇಂತೆಂದನು—

"ಮಹಾತ್ಮನಾದ ಗೌತಮನ ತಪಸ್ಸಿನಲ್ಲಿ ವಿಘ್ನವನ್ನುಂಟುಮಾಡಬೇಕೆಂದು, ಆತನನ್ನು ಕೆರಳಿಸಬೇಕೆಂದು, ನಾನು ಈ ದೇವತಾಕಾರ್ಯವನ್ನು ಮಾಡಿದ್ದೇನೆ. ಗೌತಮನು ಉಗ್ರತಪಶ್ಚರ್ಯೆಯಿಂದ ದೇವತೆಗಳನ್ನು ಸ್ಥಾನಭ್ರಷ್ಟಮಾಡಬಹುದಿತ್ತು ; ಕ್ರೋಧದಿಂದ ಆತನು ನನ್ನನ್ನು ನಿಷ್ಫಲನನ್ನಾಗಿ ಮಾಡಿದ್ದಾನೆ ; ಈ ರೀತಿ ಘೋರಶಾಪವನ್ನು ಕೊಡುವಂತೆ ಮಾಡಿ ಆತನ ತಪೋಹರಣವನ್ನು ಮಾಡಿದ್ದೇನೆ ; ಆದ್ದರಿಂದ ಋಷಿವೃಂದ ಹಾಗೂ ಚಾರಣಸಮೂಹದವರಾದ ನೀವು ದೇವತಾಕಾರ್ಯದಲ್ಲಿ ತೊಡಗಿದ ನನ್ನನ್ನು ಪುನಃ ವೃಷಣಯುಕ್ತನನ್ನಾಗಿ ಮಾಡಿರಿ !"

ಇಂದ್ರನ ಹೇಳಿಕೆಯನ್ನು ಆಲಿಸಿ, ಅಗ್ನಿ, ಮರುತ್ ಇವರನ್ನೊಳಗೊಂಡು ದೇವತೆಗಳು ಪಿತೃದೇವನ ಬಳಿಗೆ ಹೋಗಿ ಈ ರೀತಿ ಬಿನ್ನೈಸಿದರು : "ಈ ಹೋತಕ್ಕೆ ವೃಷಣಗಳಿವೆ. ಗೌತಮನು ಇಂದ್ರನ ವೃಷಣಗಳನ್ನು ಇಲ್ಲದಂತೆ ಮಾಡಿದ್ದಾನೆ. ಆದಕಾರಣ ಈ ಹೋತದ ವೃಷಣಗಳನ್ನು ಕೂಡಲೇ ಇಂದ್ರನಿಗೆ ಜೋಡಿಸಿರಿ ; ಹವಿರ್ದ್ರವ್ಯವೆಂದು ಕಲ್ಪಿಸಿದ ಈ ಹೋತವು, ವೃಷಣವಿಲ್ಲದಂತಾದರೆ ನಿಮಗೆ ಪರಮಾನಂದವಾಗುವುದು. ನಿಮ್ಮನ್ನು ಸಂತೋಷಗೊಳಿಸಲು ಯಾವ ಮಾನವರು ವೃಷಣವಿಲ್ಲದ ಹೋತವನ್ನು ನಿಮಗೆ ಅರ್ಪಿಸುವರೋ ಅವರಿಗೂ ನಿಮ್ಮಿಂದ ಅಕ್ಷಯಫಲಪ್ರಾಪ್ತಿಯಾಗಲಿ."

ಅಗ್ನಿಯ ನುಡಿಯನ್ನು ಕೇಳಿ ಪಿತೃದೇವತೆಗಳು ಒಂದಾಗಿ ಹೋತರ ವೃಷಣಗಳನ್ನು ಕಿತ್ತು ಇಂದ್ರನಿಗೆ ಜೋಡಿಸಿದರು. ಇಂದ್ರನು ಅಂದಿನಿಂದ ಮೇಷವೃಷಣನಾದನು. ಇದಕ್ಕೆ ಗೌತಮನ ಪ್ರಭಾವ, ತಪೋಬಲ ಕಾರಣವೆಂದೆನ್ನಬಹುದು. (ಬಾಲಕಾಂಡ / ೪೯)

ಉತ್ತರಕಾಂಡ / ೩೦

ಬ್ರಹ್ಮದೇವನು ಇಂದ್ರನಿಗೆ ವೈಷ್ಣವಯಾಗವನ್ನು ಮಾಡಲು ಪ್ರೇರಿಸಿದನು. ಅಗಸ್ತ್ಯಋಷಿಯು ಈ ಸಂಗತಿಯನ್ನು ಶ್ರೀರಾಮನಿಗೆ ವಿವರಿಸುವಾಗ, ಗೌತಮನಿಂದ ಇಂದ್ರನಿಗೆ ದೊರೆತ ಶಾಪದ ಉಲ್ಲೇಖವು ಬಂದಿದೆ. ರೂಪಗುಣಸಂಪನ್ನೆಯಾದ ಅಹಲ್ಯೆಯು ಬ್ರಹ್ಮನಿಂದ ನಿರ್ಮಿತಳಾಗಿದ್ದಳು. ಗೌತಮನು ಜಿತೇಂದ್ರಿಯನಾಗಿದ್ದನು. ಆತನ ಉಗ್ರತಪಶ್ಚರ್ಯೆಯನ್ನು ಕಂಡು ಬ್ರಹ್ಮನು ಅಹಲ್ಯೆಯನ್ನು ಮೊದಲು ಗೌತಮನ ಬಳಿ ಠೇವಣಿಯೆಂದೂ, ನಂತರ ಪತ್ನಿಯೆಂದೂ ಆತನಿಗೆ ಅರ್ಪಿಸಿದನು. ಇದನ್ನರಿತ ಇಂದ್ರಾದಿ ದೇವತೆಗಳು ನಿರಾಶೆಗೊಂಡರು. ಇಂದ್ರನಂತೂ ಮನಸ್ಸಿನಲ್ಲಿ ಅಹಲ್ಯೆಯನ್ನು ತನ್ನ ಪತ್ನಿ ಎಂದೇ ಬಗೆದಿದ್ದನು. ಕಾಮಾಸಕ್ತನಾದ ಆತನ ಮನಸ್ಸು ಉಲ್ಬಣಗೊಂಡಿತು. ಗೌತಮನು ಆಶ್ರಮದಲ್ಲಿರದ ಸಮಯವನ್ನು ಸಾಧಿಸಿ, ಕಾಮಾಂಧನಾದ, ಕುಪಿತನಾದ ಇಂದ್ರನು ಅಹಲ್ಯೆಯನ್ನು ಸಂಗಮಿಸಿದನು. ಇದನ್ನು ಅರಿತ ಗೌತಮನು ಇಂದ್ರನನ್ನು ಶಪಿಸಿದನು.

> ಯಸ್ಮಾನ್ಮೇ ಧರ್ಷಿತಾ ಪತ್ನೀ ತ್ವಯಾ ವಾಸವನಿರ್ಭಯಾತ್ ।
> ತಸ್ಮಾತ್ತ್ವಂ ಸಮರೇ ಶಕ್ರ ಶತ್ರುಹಸ್ತಂ ಗಮಿಷ್ಯಸಿ ॥ ೩೨ ॥
> ಅಯಂ ತು ಭಾವೋ ದುರ್ಬುದ್ಧೇ ಯಸ್ತ್ವಯೇಹ ಪ್ರವರ್ತಿತಃ ।
> ಮಾನುಷೇಷ್ವಪಿ ಲೋಕೇಷು ಭವಿಷ್ಯತಿ ನ ಸಂಶಯಃ ॥ ೩೩ ॥
> ತತ್ರಾರ್ಧಂ ತಸ್ಯ ಯಃ ಕರ್ತಾ ತ್ವಯ್ಯರ್ಧಂ ನಿಪತಿಷ್ಯತಿ ।
> ನ ಚ ತೇ ಸ್ಥಾವರಂ ಸ್ಥಾನಂ ಭವಿಷ್ಯತಿ ನ ಸಂಶಯಃ ॥ ೩೪ ॥
> ಯಶ್ಚ ಯಶ್ಚ ಸುರೇಂದ್ರಃ ಸ್ಯಾದ್ ಧ್ರುವಃ ಸ ನ ಭವಿಷ್ಯತಿ ।
> ಏಷ ಶಾಪೋ ಮಯಾ ಮುಕ್ತ ಇತ್ಯಸೌ ತ್ವಾಂ ತದಾಬ್ರವೀತ್ ॥ ೩೫ ॥

"ಎಲೈ ಇಂದ್ರನೇ, ನೀನು ನನ್ನ ಪತ್ನಿಯನ್ನು ನಿಃಸಂಕೋಚವಾಗಿ ಉಪಭೋಗಿಸಿರುವೆಯಾದ್ದರಿಂದ ನೀನು ಸಂಗ್ರಾಮದಲ್ಲಿ ಶತ್ರುವಿನ ಸೆರೆಯಾಳಾಗುವೆ. ಹೇ ದುರ್ಬುದ್ಧಿಯೇ, ನೀನು ಮಾಡಿದ ಪಾಪಕರ್ಮವು ಈ ಪ್ರಪಂಚದಲ್ಲಿ ಹರಡುವದು ; ಈ ಮನುಷ್ಯಲೋಕದಲ್ಲಿ ಜಾರಕರ್ಮದಲ್ಲಿ ತೊಡಗುವವರಿಗೆ ಅರ್ಧ ಪಾಪವು ತಗಲುವದು, ಮಿಕ್ಕ ಅರ್ಧ ಪಾಪವು ಜಾರಕರ್ಮಪ್ರವರ್ತಕನಾದ ನಿನಗೆ ತಗಲುತ್ತಾ ಹೋಗುವದು. ಅಕ್ಷಯಸ್ಥಾನವು ಎಂದೆಂದಿಗೂ ನಿನಗೆ ದೊರೆಯಲಾರದು. ಯಾವನು ದೇವರಾಜನಾಗುವನೋ ಅವನ ಸ್ಥಾನವೂ ಕೂಡ ಸ್ಥಿರವಾಗಿ ಉಳಿಯಲಾರದು. ಈ ರೀತಿ ನಾನು ನಿನ್ನನ್ನು ಶಪಿಸಿದ್ದೇನೆ" ಎಂದನು.

> ಶಾಪೋತ್ಸರ್ಗಾದ್ಧಿ ತಸ್ಯೇಯ ಮುನೇಃ ಸರ್ವಮುಪಸ್ಥಿತಂ ।
> ತತ್ ಸ್ಮರ ತ್ವಂ ಮಹಾಬಾಹೋ ದುಷ್ಕೃತಂ ಯತ್ತ್ವಯಾ ಕೃತಮ್ ॥ ೪೬ ॥

"ಹೇ ಮಹಾಬಾಹೋ ! ಮಹರ್ಷಿಯಾದ ಗೌತಮನ ಶಾಪದಿಂದ ಈ ಎಲ್ಲ ಅನಾಹುತವು ಒದಗಿದೆ. ಆದ್ದರಿಂದ ನಿನ್ನಿಂದ ನಡೆದ ಪಾಪಕರ್ಮದ ನೆನಪು ನಿನಗಿರಲಿ !"

## ೧೨. ಗೌತಮ > ಅಹಲ್ಯಾ

ಬಾಲಕಾಂಡ / ೪೮

ಗೌತಮ > ಇಂದ್ರ, ಶಾಪ ಕ್ರ. ೧೧.

> ತಥಾ ಶಪ್ತ್ವಾ ಚ ವೈ ಶಕ್ರಂ ಭಾರ್ಯಾಮಪಿ ಚ ಶಪ್ತವಾನ್ ॥ ೨೯ ॥

ಗೌತಮನು ಇಂದ್ರನನ್ನು ಶಪಿಸಿದನಂತರ ತನ್ನ ಭಾರ್ಯೆಯಾದ ಅಹಲ್ಯೆಯನ್ನೂ ಶಪಿಸಿದನು.

> ಇಹ ವರ್ಷಸಹಸ್ರಾಣಿ ಬಹೂನಿ ನಿವಸಿಷ್ಯಸಿ ॥ ೨೯ ॥
> ವಾತಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ ।

ಅದೃಶ್ಯಾ ಸರ್ವಭೂತಾನಾಮಾಶ್ರಮೇಽಸ್ಮಿನ್ವಸಿಷ್ಯಸಿ ॥ ೩೦ ॥
ಯದಾ ತ್ವೇತದ್ವನಂ ಘೋರಂ ರಾಮೋ ದಶರಥಾತ್ಮಜಃ ।
ಆಗಮಿಷ್ಯತಿ ದುರ್ಧರ್ಷಸ್ತದಾ ಪೂತಾ ಭವಿಷ್ಯಸಿ ॥ ೩೧ ॥
ತಸ್ಯಾತಿಥ್ಯೇನ ದುರ್ವೃತ್ತೇ ಲೋಭಮೋಹವಿವರ್ಜಿತಾ ।
ಮತ್ಸಕಾಶಂ ಮುದಾ ಯುಕ್ತಾ ಸ್ವಂ ವಪುರ್ಧಾರಯಿಷ್ಯಸಿ ॥ ೩೨ ॥

"ಯಾವುದೇ ಆಹಾರವಿರದೇ ಕೇವಲ ವಾಯುಭಕ್ಷಣೆ ಮಾಡಿ ನೀನು ಸಾವಿರಾರು ವರ್ಷಗಳವರೆಗೆ (ಬೂದಿಯಲ್ಲಿ ಬಿದ್ದು) ನರಳುವೆ. ನಿನ್ನ ರೂಪದ ಕಾರಣದಿಂದ ಏನೆಲ್ಲ ಅನರ್ಥ ನಡೆಯಿತೋ ಆ ನಿನ್ನ ರೂಪವು ಯಾವ ಪ್ರಾಣಿಗಳ ಕಣ್ಣಿಗೂ ಬೀಳದೇ ನೀನು ಈ ಆಶ್ರಮದಲ್ಲಿ ಬಿದ್ದಿರುವೆ.

"ಜಯಿಸಲಸಾಧ್ಯನಾದ ದಶರಥಪುತ್ರ ಶ್ರೀರಾಮನು ಈ ಘೋರಕಾನನವನ್ನು ಪ್ರವೇಶಿಸಿದಾಗ, ಹೇ ದುರಾಚಾರಿಣಿ, ಲೋಭಮೋಹಗಳನ್ನು ಕಳೆದುಕೊಂಡ ನೀನು ಆತನಿಗೆ ಆದರಾತಿಥ್ಯವನ್ನು ಸಲ್ಲಿಸಿ ಶುದ್ಧಳಾಗುವೆ. ಅನಂತರ ಸ್ವ-ಸ್ವರೂಪವನ್ನು ತಾಳಿ ನನ್ನೊಡನೆ ಆನಂದದಿಂದ ಬಾಳುವೆ" ಎಂಬ ಶಾಪವನ್ನು ಗೌತಮನು ಕೊಟ್ಟನು.

ಬಾಲಕಾಂಡ / ೪೯

ವಿಶ್ವಾಮಿತ್ರನ ಅಪ್ಪಣೆಯಂತೆ ಶ್ರೀರಾಮನು ಭಾಗ್ಯವತಿಯಾದ ಆ ಅಹಲ್ಯೆಯನ್ನು ಅವಲೋಕಿಸಿದಾಗ ಆ ಅಹಲ್ಯೆಯ ತಪದ ಪ್ರಭಾವವು ಎಲ್ಲೆಡೆಯಲ್ಲಿಗೂ ಹರಡಿತ್ತು.

ಸಾ ಹಿ ಗೌತಮವಾಕ್ಯೇನ ದುರ್ನಿರೀಕ್ಷ್ಯಾ ಬಭೂವ ಹ ।
ತ್ರಯಾಣಾಮಪಿ ಲೋಕಾನಾಂ ಯಾವದ್ ರಾಮಸ್ಯ ದರ್ಶನಮ್ ।
ಶಾಪಸ್ಯಾಂತಮುಪಾಗಮ್ಯ ತೇಷಾಂ ದರ್ಶನಮಾಗತಾ ॥ ೧೬ ॥

ಗೌತಮನ ಶಾಪದಿಂದ ಅಹಲ್ಯೆಯು ಶ್ರೀರಾಮನ ದರ್ಶನ ಆಗುವವರೆಗೆ ಜಗತ್ತಿನ ಯಾವ ಪ್ರಾಣಿಮಾತ್ರರ ಕಣ್ಣಿಗೂ ಬೀಳುವಂತಿರಲಿಲ್ಲ. ಶ್ರೀರಾಮದರ್ಶನದನಂತರ ಅವಳು ಶಾಪಮುಕ್ತಳಾಗಿ ಜನರ ಕಣ್ಣಿಗೆ ಬಿದ್ದಳು. ಅವಳು ಈಗ ತೇಜಸ್ವಿಯಾಗಿದ್ದಳು. ಶ್ರೀರಾಮ-ಲಕ್ಷ್ಮಣರು ಆನಂದದಿಂದ ಅವಳನ್ನು ಪಾದ ಮುಟ್ಟಿ ನಮಸ್ಕರಿಸಿದರು. ಆಕೆಯೂ ಅಭಿವಂದಿಸಿದಳು. ಅರ್ಘ್ಯಪಾದ್ಯಾದಿಗಳಿಂದ ಅವರನ್ನು ಸತ್ಕರಿಸಿದಳು. ಶ್ರೀರಾಮ-ಲಕ್ಷ್ಮಣರು ಅವನ್ನು ಸ್ವೀಕರಿಸಿದರು. ಮಹಾತೇಜಸ್ವಿಯಾದ ಗೌತಮನು ಅಹಲ್ಯೆಯೊಡನೆ ಸುಖವಾಗಿ ಬಾಳಿದನು. ಶ್ರೀರಾಮನು ಗೌತಮನ ಪೂಜಾಸತ್ಕಾರವನ್ನು ಪಡೆದು ಮಿಥಿಲಾನಗರದತ್ತ ಪ್ರಯಾಣ ಬೆಳೆಸಿದನು.

ಉತ್ತರಕಾಂಡ / ೩೦

ಇಂದ್ರನನ್ನು ಶಪಿಸಿದನಂತರ ಗೌತಮನು ತನ್ನ ಪತ್ನಿಯಾದ ಅಹಲ್ಯೆಯನ್ನು ಈ ರೀತಿ ಧಿಕ್ಕರಿಸಿದನು :

ದುರ್ವಿನೀತೇ ವಿನಿಧ್ವಂಸ ಮಮಾಶ್ರಮಸಮೀಪತಃ ॥ ೩೬ ॥
ರೂಪಯೌವನಸಂಪನ್ನಾ ಯಸ್ಮಾತ್ತ್ವಮನವಸ್ಥಿತಾ ।
ತಸ್ಮಾದ್ರೂಪವತೀ ಲೋಕೇ ನ ತ್ವಮೇಕಾ ಭವಿಷ್ಯತಿ ॥ ೩೭ ॥
ರೂಪಂ ಚ ತೇ ಪ್ರಜಾಃ ಸರ್ವಾ ಗಮಿಷ್ಯಂತಿ ನ ಸಂಶಯಃ ॥ ೩೮ ॥

"ಎಲೈ ದುರಾಚಾರಿಣಿಯೇ, ನೀನು ನನ್ನ ಆಶ್ರಮದ ಬಳಿಯಲ್ಲಿಯೇ ಧ್ವಂಸಳಾಗು ; ರೂಪಯೌವನ ಸಂಪನ್ನೆಯಾದ ನೀನು ಸ್ಥಿರಚಿತ್ತಳಾಗಿ ಉಳಿಯಲಿಲ್ಲ. ಹೀಗಾದ್ದರಿಂದ ಈ ಜಗತ್ತಿನಲ್ಲಿ ನೀನೊಬ್ಬಳೇ ರೂಪವತಿಯಾಗಿ ಇರಲಾರೆ. ಸೌಂದರ್ಯವೆಲ್ಲವೂ ಒಂದೆಡೆಯಾದರೆ ಅನರ್ಥಕ್ಕೆ ಕಾರಣ. ಆದ್ದರಿಂದ ಪ್ರಜಾಜನರೆಲ್ಲರೂ ನಿನ್ನ ರೂಪವನ್ನು ಹಂಚಿಕೊಳ್ಳುವರರಲ್ಲಿ ಸಂದೇಹವಿಲ್ಲ."

ಗೌತಮ ಋಷಿಯ ಕೃಪೆಯನ್ನಪೇಕ್ಷಿಸಿ ಅಹಲ್ಯೆಯು ಈ ರೀತಿ ನುಡಿದಳು :

ಅಜ್ಞಾನಾದ್ಧರ್ಷಿತಾ ವಿಪ್ರ ತ್ವದ್ರೂಪೇಣ ದಿವೌಕಸಾ ।
ನ ಕಾಮಕಾರಾದ್ವಿಪ್ರರ್ಷೇ ಪ್ರಸಾದಂ ಕರ್ತುಮರ್ಹಸಿ ॥ ೪೦ ॥

"ಹೇ ವಿಪ್ರನೇ ! ಇಂದ್ರನು ನಿನ್ನ ರೂಪವನ್ನು ಧರಿಸಿಬಂದುದನ್ನು ನಾನು ಅರಿಯಲಿಲ್ಲ. ಆತನು ನನ್ನನ್ನು ಭೋಗಿಸಿದ್ದಾನೆ. ಅದು ನನ್ನ ಇಚ್ಛೆಯಿಂದ ನಡೆಯಲಿಲ್ಲ, ಆದಕಾರಣ, ಹೇ ಬ್ರಹ್ಮರ್ಷಿಯೇ, ನನ್ನ ಮೇಲೆ ದಯೆತೋರಬೇಕು !"

ಗೌತಮನು ಅಹಲ್ಯೆಯ ಪ್ರಾರ್ಥನೆಯನ್ನು ಕೇಳಿ ಅವಳಿಗೆ ಈ ರೀತಿ ಅಂದನು :

ಉತ್ಪತ್ಸ್ಯತಿ ಮಹಾತೇಜಾ ಇಕ್ಷ್ವಾಕೂಣಾಂ ಮಹಾರಥಃ ॥ ೪೧ ॥
ರಾಮೋ ನಾಮ ಶ್ರುತೋ ಲೋಕೇ ವನಂ ಚಾಪ್ಯುಪಯಾಸ್ಯತಿ ।
ಬ್ರಾಹ್ಮಣಾರ್ಥೇ ಮಹಾಬಾಹುರ್ವಿಷ್ಣುರ್ಮಾನುಷವಿಗ್ರಹಃ ॥ ೪೨ ॥
ತಂ ದ್ರಕ್ಷ್ಯಸಿ ಯದಾ ಭದ್ರೇ ತತಃ ಪೂತಾ ಭವಿಷ್ಯಸಿ ।
ಸ ಹಿ ಪಾವಯಿತುಂ ಶಕ್ತಸ್ತ್ವಯಾ ಯದ್ ದುಷ್ಕೃತಂ ಕೃತಮ್ ॥ ೪೩ ॥
ತಸ್ಯಾತಿಥ್ಯಂ ಚ ಕೃತ್ವಾ ವೈ ಮತ್ಸಮೀಪಂ ಗಮಿಷ್ಯಸಿ ।
ವತ್ಸ್ಯಸಿ ತ್ವಂ ಮಯಾ ಸಾರ್ಧಂ ತದಾ ಹಿ ವರವರ್ಣಿನಿ ॥ ೪೪ ॥

"ಇಕ್ಷ್ವಾಕುವಂಶದಲ್ಲಿ ಮಹಾರಥಿಯೂ ಮಹಾತೇಜಸ್ವಿಯೂ ಆದ ಒಬ್ಬ ಪುರುಷನು ಜನಿಸುವನು. ಶ್ರೀರಾಮನೆಂಬ ಹೆಸರಿನಿಂದ ಅವನು ಜಗತ್ತಿನಲ್ಲೆಲ್ಲ ಖ್ಯಾತಿಹೊಂದುವನು. ಮನುಷ್ಯರೂಪವನ್ನು ಧರಿಸಿದ ಆ ಮಹಾಪರಾಕ್ರಮಿಯಾದ ವಿಷ್ಣುವು ಬ್ರಾಹ್ಮಣರ ದೆಸೆಯಿಂದ ಈ ವನಕ್ಕೆ ಆಗಮಿಸುವನು. ಹೇ ಕಲ್ಯಾಣಿ ! ನೀನು ಅವನ ದರ್ಶನದಿಂದ ಪವಿತ್ರಳಾಗುವೆ. ನಿನ್ನ ದುಷ್ಕರ್ಮಗಳನ್ನು ಪರಿಶುದ್ಧಗೊಳಿಸುವ ಸಾಮರ್ಥ್ಯವು ಆತನಲ್ಲಿದೆ. ಅವನನ್ನು ಸತ್ಕರಿಸಿದನಂತರ ನೀನು ನನ್ನ ಬಳಿ ಬರುವೆ ; ಎಲೈ ವರವರ್ಣಿನಿಯೇ, ಆಗ ನೀನು ನನ್ನೊಡನೆ ವಾಸಿಸುವೆ."

ಎರಡು ಸ್ಥಳಗಳಲ್ಲಿದ್ದ ಈ ಶಾಪಗಳಲ್ಲಿ ಸಾಕಷ್ಟು ವ್ಯತ್ಯಾಸವಿದೆ. ಬಾಲಕಾಂಡದಲ್ಲಿಯ ಶಾಪದ ಉತ್ತರಾರ್ಧದಲ್ಲಿ ಉಃಶಾಪವು ಸೇರಿಕೊಂಡಿದೆ. ಈ ಉಃಶಾಪವನ್ನು ಅಹಲ್ಯೆಯು ಬೇಡಿರಲಿಲ್ಲವಾದರೂ ಗೌತಮನು ತಾನಾಗಿಯೇ ಅನುಗ್ರಹಿಸಿದ ಕಾರಣ ಅದು ಉಃಶಾಪವಾಗಿ ಪರಿಣಮಿಸಿತು. ಅದು ಅಯಾಚಿತವಾಗಿದೆ. ಉತ್ತರಕಾಂಡದ ಶಾಪದಲ್ಲಿ, ಅಹಲ್ಯೆಯು ಗೌತಮನನ್ನು ಪ್ರಾರ್ಥಿಸಿ ತನ್ನ ಮೇಲೆ ಕೃಪೆಮಾಡಬೇಕೆಂದು ಬೇಡಿಕೊಂಡಿದ್ದಾಳೆ. ಹೀಗಿರುವುದರಿಂದ ಅಲ್ಲಿ ಈ ಉಃಶಾಪವು ಯಾಚಿತವಾಗಿದೆ.

## ೧೩. ವಸಿಷ್ಠಪುತ್ರರು > ತ್ರಿಶಂಕು ಬಾಲಕಾಂಡ / ೫೮

ಶತಾನಂದನು ಶ್ರೀರಾಮನಿಗೆ ವಿಶ್ವಾಮಿತ್ರನ ಪೂರ್ವವೃತ್ತಾಂತವನ್ನು ಹೇಳುತ್ತಾನೆ :

ವಿಶ್ವಾಮಿತ್ರನು ಬ್ರಹ್ಮರ್ಷಿಪದವನ್ನು ಪಡೆಯಲು ಉಗ್ರತಪಸ್ಸನ್ನು ಆಚರಿಸಿದನು. ಬ್ರಹ್ಮದೇವನು ಪ್ರಸನ್ನನಾಗಿ ವಿಶ್ವಾಮಿತ್ರನನ್ನು 'ರಾಜರ್ಷಿ' ಎಂದು ಗೌರವಿಸಿದನು. ಬ್ರಹ್ಮರ್ಷಿಪದವು ಪ್ರಾಪ್ತವಾಗದಕಾರಣ ವಿಶ್ವಾಮಿತ್ರನು ಖಿನ್ನನಾಗಿ ಪುನಃ ತಪಶ್ಚರ್ಯೆಗೆ ಪ್ರಾರಂಭಿಸಿದನು. ಆಗ ಇಕ್ಷ್ವಾಕುಕುಲವರ್ಧಕನಾದ ತ್ರಿಶಂಕು ಎಂಬ ರಾಜನು ಆಳುತ್ತಿದ್ದನು. ಅವನು ಸತ್ಯನಿಷ್ಠನೂ ಜಿತೇಂದ್ರಿಯನೂ ಆಗಿದ್ದನು. ದೇಹಸಹಿತವಾಗಿ ಸ್ವರ್ಗವನ್ನು ತಲುಪಬೇಕೆಂಬ ಆಸೆ ಅವನಿಗಿತ್ತು. ಆತನು ತನ್ನ ಮನೋರಥವನ್ನು ಕುಲಪುರೋಹಿತನಾದ ವಸಿಷ್ಠನಿಗೆ ತಿಳಿಸಿದಾಗ ಆತನು 'ಇದು ಅಸಾಧ್ಯ'ವೆಂದು ಸ್ಪಷ್ಟವಾಗಿ ತಿಳಿಸಿದನು. ಆಗ ರಾಜನು ದಕ್ಷಿಣದಿಶೆಯಲ್ಲಿ ತಪಃಸಾಧನೆಯಲ್ಲಿ ತೊಡಗಿದ ವಸಿಷ್ಠಪುತ್ರರನ್ನು ಕಂಡನು ; ತಾನು ಬಂದ ಉದ್ದೇಶವನ್ನೂ ವಸಿಷ್ಠನ ಅಭಿಪ್ರಾಯವನ್ನೂ ಅವರಿಗೆ ತಿಳಿಸಿ, ತಾನು ಆಚರಿಸಲಿರುವ ಯಜ್ಞದ ಪೌರೋಹಿತ್ಯವನ್ನು ಸ್ವೀಕರಿಸಬೇಕೆಂದು ಅವರನ್ನು ವಿನಂತಿಸಿದನು. ಗುರುವು ನಿರಾಕರಿಸಿದ್ದರಿಂದ ತಾನು ಗುರುಪುತ್ರರಿಗೆ ಶರಣುಬಂದಿದ್ದೇನೆಂದು ಹೇಳಿದನು. ಗುರುಪುತ್ರರು ರಾಜನ ಮಾತನ್ನು ಕಡೆಗಣಿಸಿದರು. ವಸಿಷ್ಠನು ಅಲ್ಲಗಳೆದ ಸಂಗತಿಯನ್ನು ಅಂಗೀಕರಿಸುವದೆಂದರೆ ಆತನನ್ನು ಅಪಮಾನಗೊಳಿಸಿದಂತೆ ಎಂಬ ಭಾವನೆ ಅವರದಾಗಿತ್ತು. ತ್ರಿಶಂಕುವಿನ ನುಡಿಗಳು ಅವಮರ್ಯಾದೆಯವೆನಿಸಿದವು. ಗುರುಪುತ್ರರು ತ್ರಿಶಂಕುವಿನ ಮೇಲೆ ಬಹಳೇ ಕೋಪಗೊಂಡರು. ಆಗ ತ್ರಿಶಂಕುವು ನುಡಿದದ್ದೇನೆಂದರೆ : "ಗುರು ಮತ್ತು ಗುರುವಿನ ಪುತ್ರರು ನನ್ನನ್ನು ಬಿಟ್ಟುಕೊಡುತ್ತಿದ್ದಾರೆ ; ಆದ್ದರಿಂದ ನಾನು ಇನ್ನಿತರರ ಆಶ್ರಯವನ್ನು ಕಂಡುಕೊಳ್ಳುತ್ತೇನೆ."

ಋಷಿಪುತ್ರಾಸ್ತು ತಚ್ಛ್ರುತ್ವಾ ವಾಕ್ಯಂ ಘೋರಾಭಿಸಂಹಿತಮ್ ॥ ೮ ॥
ಶೇಪುಃ ಪರಮಸಂಕ್ರುದ್ಧಾಶ್ಚಂಡಾಲತ್ವಂ ಗಮಿಷ್ಯಸಿ ॥ ೯ ॥

ರಾಜನ ಮಾತನ್ನು ಕೇಳಿ ಗುರುಪುತ್ರರು ಕೋಪಾವಿಷ್ಟರಾಗಿ ತ್ರಿಶಂಕುವಿಗೆ 'ನೀನು ಚಾಂಡಾಲನಾಗುವೆ' ಎಂದು ಶಪಿಸಿದರು.

ಆ ರಾತ್ರಿ ಕಳೆಯುತ್ತಲೇ ತ್ರಿಶಂಕುವು ಚಾಂಡಾಲನಾದನು. ಅವನ ಶರೀರವು ಹಾಗೂ ಅವನು ಧರಿಸಿದ ವಸ್ತ್ರವು ನೀಲವರ್ಣದ್ದಾಯಿತು. ಆತನ ದೇಹಕಾಂತಿಯು ಒರಟಾಗಿ ತಲೆಯ ಮೇಲಿನ ಕೂದಲು ಮೋಟಕಾದವು. ಆತನ ದೇಹದ ಮೇಲೆ ಭಸ್ಮದ ಲೇಪನವು ಕಾಣಿಸಿಕೊಂಡಿತು. ಮೈಮೇಲೆ ಧರಿಸಿದ ಅಲಂಕಾರಗಳು ಲೋಹಮಯವಾದುವು. ಆತನು ವಿಶ್ವಾಮಿತ್ರನ ಬಳಿ ಹೋಗಿ ಎಲ್ಲ ವೃತ್ತಾಂತವನ್ನು ಅರುಹಿದನು. ಆತನ ಸ್ಥಿತಿಯನ್ನು ಕಂಡು ವಿಶ್ವಾಮಿತ್ರನು ಇಂತೆಂದನು :

ಅಯೋಧ್ಯಾಧಿಪತೇ ವೀರ ಶಾಪಾಚ್ಚಂಡಾಲತಾಂ ಗತಃ ॥ ೧೬ ॥

"ಎಲೈ ! ಅಯೋಧ್ಯಾಧಿಪತಿಯೇ, ಶಾಪದ ಪರಿಣಾಮದಿಂದಾಗಿ ನೀನು ಚಾಂಡಾಲನಾಗಿರುವೆ ಎಂದು ಕಾಣುತ್ತದೆ." ವಿಶ್ವಾಮಿತ್ರನು ತ್ರಿಶಂಕುವಿನ ರಕ್ಷಣೆಯ ಹಾಗೂ ಆತನ ಇಚ್ಛೆಯನ್ನು ಈಡೇರಿಸುವ ಆಶ್ವಾಸನೆಯನ್ನು ಕೊಟ್ಟನು.

## ೧೪. ವಿಶ್ವಾಮಿತ್ರ > ವಸಿಷ್ಠಪುತ್ರರು, ಮಹೋದಯ ಬಾಲಕಾಂಡ / ೫೯

ವಿಶ್ವಾಮಿತ್ರನು ವಸಿಷ್ಠಪುತ್ರರಿಗೆ ಕೊಟ್ಟ ಶಾಪದ ಬಗ್ಗೆ ಶತಾನಂದನು ಶ್ರೀರಾಮನಿಗೆ ಹೇಳುತ್ತಾನೆ :

ಕುಲೋಪಾಧ್ಯಾಯನಾದ ವಸಿಷ್ಠನು ಹಾಗೂ ಆತನ ನೂರು ಜನ ಪುತ್ರರು ತ್ರಿಶಂಕುರಾಜನ ಯಜ್ಞವನ್ನು ನಿರಾಕರಿಸಿದನಂತರ ತ್ರಿಶಂಕುವು ವಿಶ್ವಾಮಿತ್ರನ ಬಳಿಗೆ ಹೋದನು. ಗುರುಪುತ್ರರಿಂದ ನಿರಾಕರಣೆ, ದೇಹಸಹಿತ ಸ್ವರ್ಗವನ್ನು ಸೇರುವ ತನ್ನ ಆಕಾಂಕ್ಷೆ — ಇವುಗಳನ್ನು ವಿಶ್ವಾಮಿತ್ರನಿಗೆ ಸವಿಸ್ತಾರವಾಗಿ ತಿಳಿಸಿ, ತನ್ನ ಯಜ್ಞದ ಅಧ್ವರ್ಯುಪದವನ್ನು ಸ್ವೀಕರಿಸಬೇಕೆಂದು ಅವನನ್ನು ನಮ್ರತೆಯಿಂದ ಪ್ರಾರ್ಥಿಸಿದನು. ವಿಶ್ವಾಮಿತ್ರನು ಕನಿಕರಪಟ್ಟು ಈ ರೀತಿ ನುಡಿದನು :

"ಹೇ ವತ್ಸನೇ, ನೀನು ಪರಮನಿಷ್ಠನೆಂದು ನಾನು ಬಲ್ಲೆ ; ನಾನು ನಿನ್ನನ್ನು ರಕ್ಷಿಸುವೆ ; ಪುಣ್ಯಕರ್ಮದಲ್ಲಿ ತೊಡಗಿದ ಎಲ್ಲ ಮಹರ್ಷಿಗಳನ್ನು ನೀನು ಕೈಗೊಳ್ಳಲಿರುವ ಯಜ್ಞಕ್ಕಾಗಿ ಆಮಂತ್ರಿಸಿ, ನಾನು ನಿನ್ನ ಇಷ್ಟಾರ್ಥವನ್ನು ಪೂರೈಸುವೆ. ಗುರುವಿನ ಶಾಪದಿಂದ ನಿನಗೀಗ ಯಾವ ಬಗೆಯ ರೂಪವು ಪ್ರಾಪ್ತವಾಗಿದೆಯೋ ಅದೇ ಸ್ವರೂಪದೊಂದಿಗೆ ಸದೇಹನಾಗಿ ನೀನು ಸ್ವರ್ಗಕ್ಕೆ ಹೋಗುವಿ."

ಗುರುಶಾಪಕೃತಂ ರೂಪಂ ಯದಿದಂ ತ್ವಯಿ ವರ್ತತೇ ।
ಅನೇನ ಸಹರೂಪೇಣ ಸಶರೀರೋ ಗಮಿಷ್ಯಸಿ ॥ ೪ ॥

ಇತ್ತ ವಿಶ್ವಾಮಿತ್ರನು ಶಿಷ್ಯಂದಿರಿಗೆ ಯಜ್ಞಕ್ಕಾಗಿ ಸಾಧನಸಾಮಗ್ರಿಗಳನ್ನು ಸಂಗ್ರಹಿಸಲು ಅಪ್ಪಣೆ ಮಾಡಿ, ವಸಿಷ್ಠಪುತ್ರರನ್ನೊಳಗೊಂಡು ಋತ್ವಿಜವೃಂದದವರಿಗೆ ಯಜ್ಞದ ಆಹ್ವಾನವನ್ನು ಕಳುಹಿಸಿದನು. ತನ್ನ ಆಹ್ವಾನದ ಬಗ್ಗೆ ಯಾರು ಯಾವ ರೀತಿ ಮಾತನಾಡುವರೋ, ಅದು ನಿಂದೆಯೇ ಇರಲಿ ಸ್ತುತಿಯೇ ಇರಲಿ, ಅದನ್ನು ಇದ್ದಹಾಗೆ ತನಗೆ ವಿವರಿಸಬೇಕೆಂದು ಆಜ್ಞಾಪಿಸಿದನು. ವಿಶ್ವಾಮಿತ್ರನ ಆಹ್ವಾನದನುಸಾರ ಅನೇಕ ಬ್ರಹ್ಮಜ್ಞರು ಯಜ್ಞಕ್ಕೆ ಆಗಮಿಸಿದರು. ಮಹೋದಯಾದಿ ವಸಿಷ್ಠಪುತ್ರರು ಮಾತ್ರ ಬರಲಿಲ್ಲ. ವಸಿಷ್ಠಪುತ್ರರು ಆಡಿದ ಮಾತುಗಳನ್ನು ವಿಶ್ವಾಮಿತ್ರನ ಶಿಷ್ಯಂದಿರು ಅದೇ ರೀತಿಯಲ್ಲಿ ತಿಳಿಸಿದರು : "ಚಾಂಡಾಲನ ಯಜ್ಞದ ಯಾಜಕನು ಕ್ಷತ್ರಿಯನಿದ್ದಕಾರಣ, ದೇವತೆಗಳು ಮತ್ತು ಋಷಿಗಳು ಹವಿರ್ಭಾಗವನ್ನು ಹೇಗೆ ತಾನೆ ಗ್ರಹಿಸಬಲ್ಲರು ? ವಿಶ್ವಾಮಿತ್ರನು ರಕ್ಷಕನಾಗಿದ್ದರೂ ಚಾಂಡಾಲನ ಅನ್ನವನ್ನು ಭಕ್ಷಿಸಿ ಮಹಾತ್ಮರಾದ ಬ್ರಾಹ್ಮಣರು ಹೇಗೆ ಸ್ವರ್ಗಕ್ಕೆ ಹೋಗಬಹುದು ?" ಎಂಬ ನುಡಿಗಳನ್ನು ಕೇಳಿ ವಿಶ್ವಾಮಿತ್ರನು ಕೋಪದ ಕೆಂತವಾದನು. ಈ ರೀತಿ ಉದ್ಗರಿಸಿದನು :

ಯದ್ ದೂಷಯಂತ್ಯದುಷ್ಟಂ ಮಾಂ ತಪ ಉಗ್ರಂ ಸಮಾಸ್ಥಿತಮ್ ॥ ೧೭ ॥
ಭಸ್ಮೀಭೂತಾ ದುರಾತ್ಮಾನೋ ಭವಿಷ್ಯಂತಿ ನ ಸಂಶಯಃ ।
ಅದ್ಯ ತೇ ಕಾಲಪಾಶೇನ ನೀತಾ ವೈವಸ್ವತಕ್ಷಯಮ್ ॥ ೧೮ ॥
ಸಪ್ತಜಾತಿಶತಾನ್ಯೇವ ಮೃತಪಾಃ ಸಂಭವಂತು ತೇ ।
ಶ್ವಮಾಂಸನಿಯತಾಹಾರಾ ಮುಷ್ಟಿಕಾ ನಾಮ ನಿರ್ಘೃಣಾಃ ॥ ೧೯ ॥
ವಿಕೃತಾಶ್ಚ ವಿರೂಪಾಶ್ಚ ಲೋಕಾನನುಚರಂತ್ವಿಮಾನ್ ।
ಮಹೋದಯಶ್ಚ ದುರ್ಬುದ್ಧಿರ್ಮಾಮದೂಷ್ಯಂ ಹ್ಯದೂಷಯತ್ ॥ ೨೦ ॥
ದೂಷಿತಃ ಸರ್ವಲೋಕೇಷು ನಿಷಾದತ್ವಂ ಗಮಿಷ್ಯತಿ ।
ಪ್ರಾಣಾತಿಪಾತನಿರತೋ ನಿರನುಕ್ರೋಶತಾಂ ಗತಃ ॥ ೨೧ ॥
ದೀರ್ಘಕಾಲಂ ಮಮ ಕ್ರೋಧಾದ್ ದುರ್ಗತಿಂ ವರ್ತಯಿಷ್ಯತಿ ॥ ೨೨ ॥

"ಇವರು ಉಗ್ರತಪಸ್ಸನ್ನು ಆಚರಿಸುವ ನನ್ನಂಥ ದೋಷರಹಿತ ಮುನಿಯನ್ನು ದೂಷಿಸುತ್ತಿದ್ದಾರೆ ; ಆದ್ದರಿಂದ ಈ ದುರಾತ್ಮರು ಸುಟ್ಟು ಬೂದಿಯಾಗಲಿ ! ಕಾಲಪಾಶದಿಂದ ಅವರು ಯಮಲೋಕಕ್ಕೆ ಹೋಗಲಿ ! ಮೃತರಾದವರನ್ನು ಭಕ್ಷಿಸಿ ಬಾಳಲಿ ! ಏಳುನೂರು ಜನ್ಮಗಳನ್ನು ಈ ಪರಿಯಾಗಿ ಕಳೆಯಲಿ ! ನಾಯಿಯ ಮಾಂಸವೇ ಅವರ ಮುಖ್ಯ ಆಹಾರವಾಗಲಿ. ನಾಯಿಗಳ ಮಾಂಸಭಕ್ಷಣ ಮಾಡಿ ಬದುಕುವ 'ಮುಷ್ಟಿಕ'ರೆಂಬ ಚಾಂಡಾಲರ ಜಾತಿಯಲ್ಲಿ ಜನಿಸಲಿ.

"ನಾನು ದೂಷಣಪಾತ್ರನಿರದ್ದರೂ ದುರ್ಬುದ್ಧಿಗಳಾದ ಮಹೋದಯನು ನನ್ನನ್ನು ದೂಷಿಸಿದ್ದಾನೆ. ಹೀಗಿರುವುದರಿಂದ ಅವನು ಲೋಕದಲ್ಲೆಲ್ಲ ದೂಷಿತನೆನಿಸಿ ಬೇಡರ ಜನ್ಮವನ್ನು ಹೊಂದಲಿ. ಕ್ರೂರಿಯಾದ ಅವನು ಪ್ರಾಣಿಗಳ ಪ್ರಾಣಗಳನ್ನು ಅಪಹರಿಸಲು ಪ್ರವೃತ್ತನಾಗಲಿ. ನನ್ನ ಕ್ರೋಧದಿಂದ ಬಹುಕಾಲಪರ್ಯಂತ ಆತನು ದುಃಸ್ಥಿತಿಯಲ್ಲಿಯೇ ಉಳಿಯಲಿ."

ಬಾಲಕಾಂಡ /೬೦.

ವಿಶ್ವಾಮಿತ್ರನು ತಪಃಸಾಮರ್ಥ್ಯದಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದ ಕಾರಣ ಇಂದ್ರನಿಗೆ ಕೋಪ ಬಂದು ಆತನು ಈ ರೀತಿ ಎಂದನು :

ತ್ರಿಶಂಕೇ ಗಚ್ಛ ಭೂಯಸ್ತ್ವಂ ನಾಸಿ ಸ್ವರ್ಗಕೃತಾಲಯಃ ॥ ೧೭ ॥
ಗುರುಶಾಪಹತೋ ಮೂಢ ಪತ ಭೂಮಿಮವಾಕ್ಶಿರಾಃ । ೧೮ ।

"ಎಲೈ ಮೂರ್ಖನೇ !! ತೊಲಗು ! ನಿನಗೆ ಸ್ವರ್ಗದಲ್ಲಿ ಸ್ಥಾನ ಸಿಗಲಾರದು ! ಗುರುವಿನ ಶಾಪದಿಂದ ನಿನ್ನ ನಾಶವಾಗಿದೆ ! ನೀನು ಅಧೋಮುಖನಾಗಿ ಧರೆಯ ಮೇಲೆ ಬೀಳು." ಹಾಗೆ ಬೀಳುತ್ತಿದ್ದಾಗ ಆತನು, "ತ್ರಾಹಿ ! ತ್ರಾಹಿ" ಎಂದು ವಿಶ್ವಾಮಿತ್ರನನ್ನು ಮೊರೆಹೊಕ್ಕನು. ಆಗ ವಿಶ್ವಾಮಿತ್ರನು "ಅಲ್ಲಿಯೇ ತಡೆದಿರು !" ಎಂದು ಹೇಳಿದ್ದರಿಂದ ತ್ರಿಶಂಕುವು ಆಕಾಶದಲ್ಲೇ ನೇತಾಡುತ್ತ ಉಳಿದನು.

ವಿಶ್ವಾಮಿತ್ರನು ಪ್ರತಿಸೃಷ್ಟಿಯನ್ನು ನಿರ್ಮಿಸಲು ಪ್ರಾರಂಭಿಸಿದಾಗ ಭಯಗೊಂಡ ಋಷಿಗಳು ಈ ರೀತಿ ನುಡಿದರು :

ಅಯಂ ರಾಜಾ ಮಹಾಭಾಗ ಗುರುಶಾಪಪರಿಕ್ಷತಃ ।
ಸಶರೀರೋ ದಿವಂ ಯಾತುಂ ನಾರ್ಹತ್ಯೇವ ತಪೋಧನ ॥ ೨೫ ॥

ಗುರುವಿನ ಶಾಪದಿಂದ ತ್ರಿಶಂಕುವಿನ ಪುಣ್ಯವು ನಶಿಸಿದ್ದರಿಂದ ಆತನು ಚಾಂಡಾಲನಾದನು ; ಆಗ ದೇಹಸಹಿತ ಸ್ವರ್ಗಕ್ಕೆ ಹೋಗುವ ಅಧಿಕಾರವನ್ನು ಕಳೆದುಕೊಂಡನು.

## ೧೫. ವಿಶ್ವಾಮಿತ್ರ > (ಆಮಂತ್ರಿತ) ಋಷಿಗಳು ಬಾಲಕಾಂಡ / ೬೦

ವಿಶ್ವಾಮಿತ್ರನು ತ್ರಿಶಂಕುವಿಗಾಗಿ ಕೈಕೊಂಡ ಯಜ್ಞದ ವೃತ್ತಾಂತವನ್ನು ಶತಾನಂದನು ಶ್ರೀರಾಮನಿಗೆ ವಿವರಿಸುತ್ತಿದ್ದಾನೆ :

ವಸಿಷ್ಠಪುತ್ರರನ್ನು ಶಪಿಸಿದನಂತರ ಅವರು ನಾಶಗೊಂಡರೆಂದು ಬಗೆದು, ವಿಶ್ವಾಮಿತ್ರನು ತ್ರಿಶಂಕುವಿಗೆ

ದೇಹಸಹಿತ ಸ್ವರ್ಗಪ್ರಾಪ್ತಿಯಾಗಬೇಕೆಂದು ಯಜ್ಞವನ್ನು ಆರಂಭಿಸಲು ಅಲ್ಲಿಗೆ ಆಗಮಿಸಿದ ಋಷಿಗಳಿಗೆ ಹೇಳಿದನು. ಅವನ ಹೇಳಿಕೆಯನ್ನು ಕೇಳಿ ಧರ್ಮಜ್ಞರಾದ ಋಷಿಗಳೆಲ್ಲರೂ ಒಟ್ಟಾಗಿ ತಮ್ಮತಮ್ಮಲ್ಲಿ ಮಾತನಾಡಹತ್ತಿದರು : "ಕೌಶಿಕವಂಶದ ಈ ಮುನಿಯು ಬಲು ಕೋಪದಲ್ಲಿದ್ದಾನೆ. ಆದಕಾರಣ ನಾವು ಈತನ ಮಾತನ್ನು ಯಥಾಯೋಗ್ಯವಾಗಿ ನೆರವೇರಿಸಬೇಕು. ನಾವು ಹಾಗೆ ಮಾಡದಿದ್ದರೆ,

ಅಗ್ನಿಕಲ್ಪೋ ಹಿ ಭಗವಾನ್ ಶಾಪಂ ದಾಸ್ಯತಿ ರೋಷತಃ ॥ ೬ ॥

"ಅಗ್ನಿಸಮನಾದ ಭಗವಾನ್ ವಿಶ್ವಾಮಿತ್ರನು ಕೋಪಗೊಂಡು ಶಪಿಸುವನು." ವಿಶ್ವಾಮಿತ್ರನ ತೇಜಸ್ಸಿನಿಂದ ತ್ರಿಶಂಕುವು ದೇಹಸಹಿತವಾಗಿ ಸ್ವರ್ಗವನ್ನು ಸೇರುವನು ; ಆದ್ದರಿಂದ ಯಜ್ಞವನ್ನು ಪ್ರಾರಂಭಿಸುವದು ಉಚಿತವೆಂದು ಭಾವಿಸಿ ಅವರು ಯಜ್ಞವನ್ನಾರಂಭಿಸಿದರು.

ಇಲ್ಲಿ ಶಾಪವನ್ನು ಪ್ರತ್ಯಕ್ಷವಾಗಿ ಕೊಟ್ಟಿಲ್ಲ. ವಿಶ್ವಾಮಿತ್ರನ ಆಜ್ಞೆಯಂತೆ ನಡೆದುಕೊಳ್ಳದಿದ್ದರೆ ಆತನು ಶಪಿಸಬಹುದೆಂಬ ಭೀತಿಯನ್ನು ವ್ಯಕ್ತಮಾಡಲಾಗಿದೆ ; ಹೀಗಾಗಿ ಶಾಪದ ಸ್ವರೂಪ, ಹಾಗೆಯೇ ಅದರ ಪರಿಣಾಮವೂ ಸ್ಪಷ್ಟವಾಗಿಲ್ಲ. ಕೊಡದೇ ಇರದ ಈ ಶಾಪವು ಕಟ್ಟಳೆಯದಾಗಿದೆ.

## ೧೬. ವಿಶ್ವಾಮಿತ್ರ > (ಅವನ) ಪುತ್ರರು ಬಾಲಕಾಂಡ / ೬೨

ಶತಾನಂದನು ಶ್ರೀರಾಮನಿಗೆ ಶುನಃಶೇಪನ ವೃತ್ತಾಂತವನ್ನು ಹೇಳುತ್ತಿದ್ದಾನೆ :

ಅಯೋಧ್ಯಾಪತಿ ಅಂಬರೀಷ ಮಹಾತ್ಮನು ಯಜ್ಞವನ್ನು ಪ್ರಾರಂಭಿಸಿದಾಗ ಇಂದ್ರನು ಅಲ್ಲಿಯ ಯಜ್ಞಪಶುವನ್ನು ಅಪಹರಿಸಿದನು. ರಾಜನ ಪಾತಕದಿಂದ ಹೀಗಾಗಿರಬೇಕೆಂದು ಭಾವಿಸಿದ ಪುರೋಹಿತನು ರಾಜನಿಗೆ, ನರಪಶುವನ್ನು ತರಲು ಹೇಳಿದನು. ರಾಜನು ನರಪಶುವನ್ನು ತರಲು ತುಂಬ ಪ್ರಯತ್ನಪಟ್ಟರೂ, ಹಣಕ್ಕಾಗಿ ಮಗನನ್ನು ನರಪಶುವಾಗಿ ಕೊಡಲು ಯಾರೊಬ್ಬರೂ ಒಪ್ಪಲಿಲ್ಲ. ರಾಜನು ಸಹಸ್ರಾರು ಹಸುಗಳನ್ನು ಕಟ್ಟಿಕೊಂಡು ಹಲವಾರು ಪ್ರದೇಶಗಳನ್ನು ದಾಟಿ ಭೃಗುತುಂಗ ಪರ್ವತದ ಬಳಿ ಹೋದನು. 'ಋಚೀಕ'ನೆಂಬ ಋಷಿಯು ತನ್ನ ಪತ್ನಿಯ ಸಮೇತನಾಗಿ ಅಲ್ಲಿ ವಾಸಿಸುತ್ತಿದ್ದನು. ಒಂದು ಲಕ್ಷ ಹಸುಗಳ ಕ್ರಮದಲ್ಲಿ ಯಜ್ಞಕ್ಕಾಗಿ ಒಬ್ಬ ಪುತ್ರನನ್ನು ಅರ್ಪಿಸಬೇಕೆಂದು ಈ ರಾಜನು ಋಷಿಗೆ ಹೇಳಿದನು. ಜ್ಯೇಷ್ಠಪುತ್ರನನ್ನು ವಿಕ್ರಯಿಸಬಾರದೆಂಬ ಮನಸ್ಸು ಋಷಿಯದಾಗಿತ್ತು ; ಅಚ್ಚುಮೆಚ್ಚಿನವನಾದ ಕನಿಷ್ಠಪುತ್ರನನ್ನು ಕೊಡಕೂಡದೆಂಬ ಮನಸ್ಸು ಋಷಿಪತ್ನಿಯದಾಗಿತ್ತು. ಆಗ ನಡುವಿನ ಪುತ್ರನಾದ ಶುನಃಶೇಪನು ತಾನಾಗಿ ಸಿದ್ಧನಾದನು. ಋಷಿಗೆ ರತ್ನಗಳ ರಾಶಿ, ಸುವರ್ಣ ಮತ್ತು ಒಂದು ಲಕ್ಷ ಹಸುಗಳು ದೊರೆತವು. ಅಂಬರೀಷನಿಗೆ ಯಜ್ಞಕ್ಕಾಗಿ ನರಪಶು ದೊರೆಯಿತು. ಅಂಬರೀಷನು ಆತನನ್ನು ಜೊತೆಗೂಡಿ ನಡೆದಾಗ ಜ್ಯೇಷ್ಠಪುಷ್ಕರತೀರ್ಥಕ್ಷೇತ್ರ ಎಂಬಲ್ಲಿ ಶುನಃಶೇಪನ ಸೋದರಮಾವನಾದ, ತಪಾಚರಣೆಯಲ್ಲಿ ನಿರತನಾದ ವಿಶ್ವಾಮಿತ್ರನು ದಾರಿಯಲ್ಲಿ ಕಾಣಿಸಿ ಕೊಂಡನು. ಶುನಃಶೇಪನ ಧೈರ್ಯ ಉಡುಗಿತ್ತು. ಆತನು ವಿಶ್ವಾಮಿತ್ರನಿಗೆ ಶರಣುಹೋಗಿ ಇಂತೆಂದನು :

"ನನಗೆ ತಂದೆ-ತಾಯಿ, ಬಾಂಧವರು ಯಾರೂ ಇಲ್ಲ ; ನೀವು ಧರ್ಮದ ಬಲದಿಂದ ನನ್ನನ್ನು ರಕ್ಷಿಸಿರಿ ! ಅಂಬರೀಷ ರಾಜನು ಕೃತಕೃತ್ಯನಾಗಬೇಕು ; ನಾನು ಕೂಡ ದೀರ್ಘಾಯುಷಿಯಾಗಿ ಸ್ವರ್ಗವನ್ನು ಸೇರಬೇಕೆಂಬ ಇಚ್ಛೆ ನನಗಿದೆ. ನೀವು ತಂದೆಯಂತೆ ನನ್ನನ್ನು ರಕ್ಷಿಸಿರಿ !"

ಆಗ ಅಂಬರೀಷನ ಯಜ್ಞವೂ ಪೂರ್ಣವಾಗಬೇಕು ; ಶುನಃಶೇಪನ ರಕ್ಷಣೆಯೂ ಆಗಬೇಕೆಂಬ ಉದ್ದೇಶದಿಂದ ಪ್ರೇರಿತನಾಗಿ, ವಿಶ್ವಾಮಿತ್ರನು ತನ್ನ ಮಕ್ಕಳಿಗೆ ಈ ರೀತಿ ಅಂದನು : "ಪಾರಲೌಕಿಕ ಹಿತಕ್ಕಾಗಿ ಶುಭವನ್ನು ಕೋರುವ ಪಿತರು ಪುತ್ರರನ್ನು ಪಡೆಯುತ್ತಾರೆ. ಈ ಋಷಿಪುತ್ರನಾದ ಬಾಲಕನು ನನ್ನಿಂದ ರಕ್ಷಣೆಯನ್ನು ಬಯಸುತ್ತಿದ್ದಾನೆ ; ಆದಕಾರಣ ನೀವು ಆತನಿಗೆ ಜೀವದಾನವನ್ನು ಕೊಟ್ಟು ಆತನ ಮನೋವಾಂಛಿತವನ್ನು ನೆರವೇರಿಸಿರಿ ! ಸತ್ಕರ್ಮನಿರತರಾದ ನೀವು ಧರ್ಮನಿಷ್ಠರಾಗಿದ್ದೀರಿ ; ನೀವು ಯಜ್ಞಬಲಿಪಶುವಾಗಿ ಅಂಬರೀಷನ ಯಜ್ಞಾಗ್ನಿಯನ್ನು ತೃಪ್ತಿಗೊಳಿಸಿರಿ ; ಆಗ ದೇವತೆಗಳು ಪ್ರಸನ್ನರಾಗುವರು ; ಯಜ್ಞವು ನಿರ್ವಿಘ್ನವಾಗಿ ನೆರವೇರಿ ಶುನಃಶೇಪನು ಸನಾಥನಾಗುವನು." ವಿಶ್ವಾಮಿತ್ರನ ಈ ಬಗೆಯ ಮಾತುಗಳನ್ನು ಕೇಳಿ ಮಧುಚ್ಛಂದಾದಿ ಆತನ ಪುತ್ರರು ನಗುನಗುತ್ತ ಈ ರೀತಿ ನುಡಿದರು : "ಹೇ ಪ್ರಭೋ ! ನೀನು ನಿನ್ನ ಪುತ್ರರನ್ನು

ಬಲಿಕೊಟ್ಟು ಇನ್ನೊಬ್ಬರ ಪುತ್ರನನ್ನು ರಕ್ಷಿಸುವುದೇಕೆ ? ನಿನ್ನ ಈ ಕೃತ್ಯವು ಊಟದಲ್ಲಿ ನಾಯಿಯ ಮಾಂಸವನ್ನು ಬೆರೆಸಿದಷ್ಟು ಅಯೋಗ್ಯವಾಗಿದೆ !"

ಈ ರೀತಿ, ತನ್ನ ಆಜ್ಞೆಯನ್ನು ಉಲ್ಲಂಘಿಸುವ, ತನ್ನ ಪುತ್ರರ ನುಡಿಗಳನ್ನು ಕೇಳಿ ವಿಶ್ವಾಮಿತ್ರನು ಕ್ರೋಧಾವಿಷ್ಟನಾಗಿ ಈ ರೀತಿ ನುಡಿದನು :

ನಿಷಾಧ್ವಸಮಿದಂ ಪ್ರೋಕ್ತಂ ಧರ್ಮಾದಪಿ ವಿಗರ್ಹಿತಮ್ ।
ಅತಿಕ್ರಮ್ಯ ತು ಮದ್ವಾಕ್ಯಂ ದಾರುಣಂ ರೋಮಹರ್ಷಣಮ್ ॥ ೧೫ ॥
ಶ್ವಮಾಂಸಭೋಜಿನಃ ಸರ್ವೇ ವಾಸಿಷ್ಠಾ ಇವ ಜಾತಿಷು ।
ಪೂರ್ಣಂ ವರ್ಷಸಹಸ್ರಂ ತು ಪೃಥಿವ್ಯಾಮನುವತ್ಸ್ಯಥ ॥ ೧೬ ॥
ಕೃತ್ವಾ ಶಾಪಸಮಾಯುಕ್ತಾನ್ ಪುತ್ರಾನ್ ಮುನಿವರಸ್ತದಾ । ೧೭

"ನೀವು ನನ್ನ ಆಜ್ಞೆಯನ್ನು ಮೀರಿ ಮೈನಡುಗಿಸುವಂತಹ ನುಡಿಗಳನ್ನು ನನ್ನ ಭಯವಿಲ್ಲದೇ ಆಡಿದ್ದೀರಿ. ಆದ್ದರಿಂದ ನೀವೆಲ್ಲರು ವಸಿಷ್ಠಪುತ್ರರಂತೆ ನಾಯಿಯ ಮಾಂಸವನ್ನು ಭಕ್ಷಿಸುವ ಮುಷ್ಟಿಕಾದಿ ಜಾತಿಯಲ್ಲಿ ಒಂದು ಸಹಸ್ರ ವರುಷಗಳವರೆಗೆ ಪೃಥ್ವಿಯ ಮೇಲೆ ಬಾಳುವಿರಿ."—ಮುನಿಶ್ರೇಷ್ಠನಾದ ವಿಶ್ವಾಮಿತ್ರನು ತನ್ನ ಮಕ್ಕಳನ್ನು ಈ ರೀತಿ ಶಪಿಸಿ, ತಾನು ಶುನಃಶೇಪನ ರಕ್ಷಣೆಯ ಹೊಣೆಯನ್ನು ಹೊತ್ತನು. ಅನಂತರ ಅವನು ಶುನಃಶೇಪನಿಗೆ ಅಗ್ನಿದೇವತೆಯ ಸ್ತುತಿಯನ್ನು ಮತ್ತು ದಿವ್ಯಗ್ರಂಥಗಳನ್ನು ಪಠಣಮಾಡಲು ಹೇಳಿದನು.

## ೧೬. ವಿಶ್ವಾಮಿತ್ರ > ರಂಭೆ — ಬಾಲಕಾಂಡ / ೬೪

ಶತಾನಂದನು ವಿಶ್ವಾಮಿತ್ರನ ಸಾಮರ್ಥ್ಯ, ತಪೋನಿಷ್ಠೆ ಎಷ್ಟೊಂದು ಪ್ರಖರವಿತ್ತೆಂಬುದನ್ನು ಶ್ರೀರಾಮನಿಗೆ ತಿಳಿಸುತ್ತಾನೆ :

ವಿಶ್ವಾಮಿತ್ರನು 'ಬ್ರಹ್ಮರ್ಷಿ' ಎಂದೆನಿಸಿಕೊಳ್ಳುವ ಉತ್ಕಟೇಚ್ಛೆಯಿಂದ ಉಗ್ರತಪಸ್ಸನ್ನು ಕೈಕೊಂಡನು. ಆಗ ಇಂದ್ರಾದಿದೇವತೆಗಳು ತೊಂದರೆ-ತಾಪಗಳಿಗೆ ಈಡಾದರು. ಇಂದ್ರನು ವಿಶ್ವಾಮಿತ್ರನ ತಪೋಭಂಗವನ್ನು ಮಾಡಲೋಸುಗ ರಂಭೆ ಎಂಬ ಅಪ್ಸರೆಯನ್ನು ಯೋಜಿಸಿದನು. "ನೀನು ನಿನ್ನ ಸೌಂದರ್ಯದಿಂದ ವಿಶ್ವಾಮಿತ್ರನನ್ನು ಮೋಹಗೊಳಿಸಿ, ಅವನನ್ನು ವಿಷಯಾಸಕ್ತನನ್ನಾಗಿ ಮಾಡು ! ಆತನ ತಪೋಭಂಗವೆಂದರೆ ಒಂದು ದೇವತಾಕಾರ್ಯ ; ಈ ದುಸ್ತರವಾದ ಕಾರ್ಯವು ನಿನ್ನಿಂದಾಗಲಿದೆ" ಎಂದು ಇಂದ್ರನು ಆಕೆಗೆ ಹೇಳಿದನು. ಇಂದ್ರನ ಮಾತನ್ನು ಕೇಳಿ ರಂಭೆಯು ಲಜ್ಜಿತಳಾದಳು ; ಭಯಗೊಂಡಳು. ವಿಶ್ವಾಮಿತ್ರನ ಕಠೋರವೃತ್ತಿಯ ಕಲ್ಪನೆ ಅವಳಿಗಿತ್ತು. ಈ ದುಸ್ತರಕಾರ್ಯವನ್ನು ನೆರವೇರಿಸಲು ತನ್ನನ್ನು ನೇಮಿಸಬಾರದೆಂದು ಬೇಡಿಕೊಂಡಳು ; ಆದರೆ ಇಂದ್ರನು ಆಕೆಗೆ ಅಭಯವನ್ನು ನೀಡಿದನು. ಕೋಗಿಲೆಯ ರೂಪದಲ್ಲಿ ತಾನು ಮನ್ಮಥನೊಡನೆ ಆಕೆಯ ನಿಕಟದಲ್ಲಿ ಇರುವ ಆಶ್ವಾಸನೆಯನ್ನಿತ್ತನು. ವಿಶ್ವಾಮಿತ್ರನ ತಪೋಭಂಗವನ್ನು ಮಾಡಲು ರಂಭೆಯನ್ನು ಆಜ್ಞಾಪಿಸಿದನು.

ರಂಭೆಯು ಅನುಪಮರೂಪವನ್ನು ಧರಿಸಿ ವಿಶ್ವಾಮಿತ್ರನನ್ನು ಮೋಹಿಸಲು ಹೊಂಚನ್ನು ಹಾಕಿದಳು. ಕೋಗಿಲೆಯ ಇಂಪಾದ ಧ್ವನಿಯನ್ನು ಕೇಳಿ ವಿಶ್ವಾಮಿತ್ರನು ಉಲ್ಲಸಿತನಾದನು. ತುಸು ಸಮಯದನಂತರ ಲಾವಣ್ಯವತಿಯಾದ ರಂಭೆಯು ಆತನಿಗೆ ಕಾಣಿಸಿಕೊಂಡಳು ; ಆಗ ಅವನಿಗೆ ಸಂದೇಹವುಂಟಾಯಿತು. ತನ್ನ ತಪೋಭಂಗಕ್ಕಾಗಿ ಇಂದ್ರನು ಈ ಕಾರಸ್ಥಾನವನ್ನು ರಚಿಸಿದ್ದಾನೆಂದು ಮನದಟ್ಟಾಗುತ್ತಲೇ ಆತನು ರಂಭೆಗೆ ಶಾಪವನ್ನು ಕೊಟ್ಟನು—

ಯನ್ಮಾಂ ಲೋಭಯಸೇ ರಂಭೇ ಕಾಮಕ್ರೋಧಜಯೈಷಿಣಮ್ ।
ದಶವರ್ಷಸಹಸ್ರಾಣಿ ಶೈಲೀ ಸ್ಥಾಸ್ಯಸಿ ದುರ್ಭಗೇ ॥ ೧೩ ॥
ಬ್ರಾಹ್ಮಣಃ ಸುಮಹಾತೇಜಾಸ್ತಪೋಬಲಸಮನ್ವಿತಃ ।
ಉದ್ಧರಿಷ್ಯತಿ ರಂಭೇ ತ್ವಾಂ ಮತ್ಕ್ರೋಧಕಲುಷೀಕೃತಾಮ್ ॥ ೧೪ ॥

"ಎಲೈ ರಂಭೆಯೇ ! ಕಾಮಕ್ರೋಧಗಳನ್ನು ನಿಗ್ರಹಿಸುವ ಆಕಾಂಕ್ಷೆಯನ್ನಿಟ್ಟುಕೊಂಡ ನನ್ನನ್ನು ಮೋಹಕ್ಕೆ ಎಳೆಯುತ್ತಿರುವಿ ; ಆದಕಾರಣ, ಎಲೌ ದುರ್ಭಗೆ, ನೀನು ಹತ್ತುಸಾವಿರ ವರ್ಷಗಳವರೆಗೆ ಕಲ್ಲಾಗಿ ಬೀಳುವೆ.

ನನ್ನ ಕ್ರೋಧದಿಂದ ಪೀಡಿತಳಾದನಂತರ ಮಹಾತೇಜಸ್ವಿಯಾದ, ತಪೋಬಲವುಳ್ಳ ಒಬ್ಬ ಬ್ರಾಹ್ಮಣನಿಂದ ನಿನ್ನ ಉದ್ಧಾರವು ಆಗಲಿದೆ."

ತಸ್ಯ ಶಾಪೇನ ಮಹತಾ ರಂಭಾ ಶೈಲೀ ತದಾಭವತ್ ॥ ೧೫ ॥

ರಂಭೆಯು ಕೂಡಲೇ ಕಲ್ಲಾಗಿ ಬಿದ್ದಳು. ಕೋಪವನ್ನು ತಡೆಹಿಡಿಯಲಾಗಲಿಲ್ಲವೆಂದು ವಿಶ್ವಾಮಿತ್ರನಿಗೆ ಪಶ್ಚಾತ್ತಾಪವಾಯಿತು.

ಶಾಪದ ಉತ್ತರಾರ್ಧವು ಪಶ್ಚಾತ್ತಾಪದ ಪರಿಣಾಮರೂಪವಾಗಿದೆ. ಉಃಶಾಪವು ಸಾಮಾನ್ಯವಾಗಿ ಯಾಚಿತ ವಿರುತ್ತದೆ ; ಆದರೆ ರಂಭೆಯು ಅದನ್ನು ಬೇಡಿಕೊಳ್ಳುವ ಮೊದಲೇ ಈ ಉಃಶಾಪವನ್ನು ಕೊಟ್ಟ ಕಾರಣ ಅದು ಅಯಾಚಿತ ಉಃಶಾಪವೆನ್ನಬಹುದು.

## ೧೮. ಕೌಸಲ್ಯಾ > ಶ್ರೀರಾಮ ಅಯೋಧ್ಯಾಕಾಂಡ / ೨೧

ಕೈಕೇಯಿಯು ದಶರಥರಾಜನಿಂದ ಪಡೆದ ವರಗಳನುಸಾರ ಶ್ರೀರಾಮನು ವನವಾಸಕ್ಕೆ ಹೋಗುವದೆಂದು ನಿಶ್ಚಯಿಸಿದನು. ತನ್ನ ಮಾತೆಯ ಅನುಮತಿಯನ್ನು ಪಡೆಯಲು ಆತನು ಲಕ್ಷ್ಮಣನೊಡನೆ ಕೌಸಲ್ಯೆಯತ್ತ ಬಂದನು. ಲಕ್ಷ್ಮಣ ಮತ್ತು ಕೌಸಲ್ಯೆ ಇಬ್ಬರೂ ಶ್ರೀರಾಮನನ್ನು ಆತನ ನಿಶ್ಚಯದಿಂದ ಪರಾವೃತ್ತಗೊಳಿಸ ಬೇಕೆಂದು ಮಾಡಿದ ಎಲ್ಲ ಪ್ರಯತ್ನಗಳೂ ವಿಫಲಗೊಂಡವು. ಶ್ರೀರಾಮನ ದೃಢನಿಶ್ಚಯವು ಖಚಿತ ಎಂದು ತಿಳಿದುಕೊಂಡ ಕೌಸಲ್ಯೆಯು ಕೊನೆಯ ಮಾತೆಂದು (ಅಂತ್ಯದಲ್ಲಿ) ಈ ರೀತಿ ಎಂದಳು :

"ಎಲೈ ಧರ್ಮನಿಷ್ಠನೇ ! ನೀನು ಧರ್ಮಜ್ಞನು ; ಆದಕಾರಣ ನನ್ನ ಆಜ್ಞೆಯನ್ನು ಪರಿಪಾಲಿಸುವ ಧರ್ಮವನ್ನಾಚರಿಸಬೇಕಿದ್ದರೆ ರಾಜ್ಯವನ್ನು ತ್ಯಜಿಸಿ ನೀನು ಇಲ್ಲಿಯೇ ಇರು ! ನನ್ನ ಶುಶ್ರೂಷೆಯಲ್ಲಿ ತೊಡಗಿ 'ಮಾತೃಸೇವೆ'ಯಂಥ ಶ್ರೇಷ್ಠಧರ್ಮವನ್ನಾಚರಿಸು. ಎಲೈ ಕಂದನೇ ! ಮಾತೃಸೇವೆಯಲ್ಲಿ ನಿರತನಾಗಿ ಸ್ವಗೃಹ ದಲ್ಲಿಯೇ ಶುದ್ಧನಾಗಿದ್ದ ಕಾಶ್ಯಪನು ಮಹಾತಪಸ್ವಿನಿಂದ ಯುಕ್ತನಾಗಿ ಮಾತೃಸೇವೆಯ ಫಲದಿಂದ ಸ್ವರ್ಗಕ್ಕೆ ಹೋದನು. ದಶರಥರಾಜನು ಯಾವ ರೀತಿ ನಿನಗೆ ಪೂಜ್ಯನೋ ಅದೇ ರೀತಿ ಘನತೆಗೌರವಗಳಲ್ಲಿ ನಾನು ಸಹ ನಿನಗೆ ಪೂಜ್ಯಳು ; ಆದ್ದರಿಂದ ನಾನು ಅನುಮತಿಯನ್ನು ಕೊಡಲಾರೆ ; ನೀನು ವನಕ್ಕೆ ಹೋಗಬೇಡ ! ನಿನ್ನನ್ನು ಅಗಲಿದನಂತರ ನನ್ನ ಸುಖದ ಹಾಗೂ ನನ್ನ ಬಾಳಿನ ಪ್ರಯೋಜನವಾದರೂ ಏನು ? ತೃಣಭಕ್ಷಣೆ ಮಾಡಿಯಾದರೂ ನಿನ್ನೊಡನೆ ಇರುವದು ಕ್ಷೇಮಕರವಿರುತ್ತದೆ. ಇಷ್ಟು ಹೇಳಿಯೂ ನೀನು, ಶೋಕಾಕುಲಳಾದ ನನ್ನನ್ನು ತೊರೆದು ಕಾಡಿಗೆ ಹೋದರೆ ನಾನು ಆಹಾರ-ಪಾನೀಯಗಳನ್ನು ತ್ಯಜಿಸಿ ಮರಣಕ್ಕಾಗಿ ಕಾಯುವೆ ; ನಿನ್ನ ವಿಯೋಗವಾದನಂತರ ಜೀವಿಸಿರಲು ಶಕ್ತಳಾಗಲಾರೆ ! '

ತತಸ್ತ್ವಂ ಪ್ರಾಪ್ಸ್ಯಸೇ ಪುತ್ರ ನಿರಯಂ ಲೋಕವಿಶ್ರುತಮ್ ।
ಬ್ರಹ್ಮಹತ್ಯಾಮಿವಾಧರ್ಮಾತ್ಸಮುದ್ರಃ ಸರಿತಾಂ ಪತಿಃ ॥ ೨೮ ॥

"ಈ ರೀತಿ ನಡೆದುಕೊಂಡು, ಮಾತೆಗೆ ದುಃಖವನ್ನು ಕೊಟ್ಟ ಕಾರಣಕ್ಕಾಗಿ, ಅದು ಅಧರ್ಮವೆಂದೆನಿಸಿ ಸಿಂಧುಪತಿಯಾದ ಸಮುದ್ರನಿಗೆ ಬ್ರಹ್ಮಹತ್ಯೆಯ ಪಾಪವು ತಗುಲಿತು. ಅದೇ ರೀತಿ ಶ್ರೀರಾಮನೇ, ಲೋಕ ಪ್ರಖ್ಯಾತ ನರಕವು ನಿನಗೆ ಪ್ರಾಪ್ತವಾಗುವುದು."

ಇದಕ್ಕೆ ಶಾಪವೆಂದೆನ್ನಬೇಕೆ ? ಪ್ರತ್ಯಕ್ಷದಲ್ಲಿ ಶಾಪವನ್ನು ಕೊಟ್ಟಿಲ್ಲ. ಹೀಗಿದ್ದರೂ ಶಾಪದ ಸ್ವರೂಪವು ಸ್ಪಷ್ಟವಾಗಿದೆ.

ಇದು ಕಟ್ಟಿಳೆಯ ಶಾಪ. ಕಟ್ಟಳೆಯನ್ನು ಅಲಕ್ಷಿಸಿದ್ದರೂ ಶಾಪದ ಪರಿಣಾಮವು ಆಗಲಿಲ್ಲ. ಇದರಿಂದ ಒಂದು ಸಂಗತಿಯು ಮನಸ್ಸಿನಲ್ಲಿ ಬರುತ್ತದೆ. ಶಾಪ ಕೊಡುವ ಅರ್ಹತೆಯು ಕೌಸಲ್ಯೆಗೆ ಇರಲಿಲ್ಲ ; ಅಥವಾ ಪುತ್ರನ ವಿಯೋಗವನ್ನು ಸಹಿಸುವದು ಯಾವ ಪರಿಸ್ಥಿತಿಯಲ್ಲಿಯೂ ಕೌಸಲ್ಯೆಗೆ ಸಾಧ್ಯವಿರಲಿಲ್ಲ. ಆದಕಾರಣ ಆಕೆಯು ಅತ್ಯಂತ ತೀಕ್ಷ್ಣವಾದ ಶಬ್ದಗಳಲ್ಲಿ ತನ್ನ ಮನೋಗತವನ್ನು ವ್ಯಕ್ತಪಡಿಸಿದ್ದಾಳೆಂದು ತಿಳಿಯ ಬೇಕಾಗುತ್ತದೆ.

## ೧೯. ದಶರಥ > ಕೈಕೇಯಿ, ಭರತ

ಅಯೋಧ್ಯಾಕಾಂಡ / ೪೨

ವನವಾಸಕ್ಕೆ ತೆರಳಿದ ಶ್ರೀರಾಮನ ರಥದ ಧೂಳಿಯು ದೃಷ್ಟಿಪಥದಲ್ಲಿರುವವರೆಗೂ ದಶರಥರಾಜನು ಅದರತ್ತ ನೆಟ್ಟದಿಟ್ಟಿಯುಳ್ಳವನಾಗಿ ನಿಂತಿದ್ದನು. ನಂತರ ಖಿನ್ನನಾಗಿ ನೆಲಕ್ಕೆ ಉರುಳಿದನು. ಕೌಸಲ್ಯೆಯು ಆತನನ್ನು ಎಬ್ಬಿಸಿ ಬಲತೋಳನ್ನು ಹಿಡಿದುಕೊಂಡು ನಗರದತ್ತ ಮರಳಿದಳು. ಆಗ ಕೈಕೇಯಿಯು ದಶರಥನ ಎಡದಲ್ಲಿದ್ದಳು.

ಕ್ಷುಬ್ಧಮನಸ್ಸಿನಿಂದ ದಶರಥನು ಕೈಕೇಯಿಗೆ ಈ ರೀತಿ ಎಂದನು :

ಕೈಕೇಯಿ ಮಾಮಕಾಂಗಾನಿ ಮಾ ಸ್ಪ್ರಾಕ್ಷೀಃ ಪಾಪನಿಶ್ಚಯೇ ।
ನ ಹಿ ತ್ವಾಂ ದ್ರಷ್ಟುಮಿಚ್ಛಾಮಿ ನ ಭಾರ್ಯಾ ನ ಚ ಬಾಂಧವೀ ॥ ೬ ॥
ಯೇ ಚ ತ್ವಾಮನುಜೀವಂತಿ ನಾಹಂ ತೇಷಾಂ ನ ತೇ ಮಮ ।
ಕೇವಲಾರ್ಥಪರಾಂ ಹಿ ತ್ವಾಂ ತ್ಯಕ್ತಧರ್ಮಾಂ ತ್ಯಜಾಮ್ಯಹಮ್ ॥ ೭ ॥
ಅಗೃಹ್ಣಾಂ ಯಚ್ಚ ತೇ ಪಾಣಿಮಗ್ನಿಂ ಪರ್ಯಣಯಂ ಚ ಯತ್ ।
ಅನುಜಾನಾಮಿ ತತ್ಸರ್ವಮಸ್ಮಿಂಲ್ಲೋಕೇ ಪರತ್ರ ಚ ॥ ೮ ॥
ಭರತಶ್ಚೇತ್ಪ್ರತೀತಃ ಸ್ಯಾದ್ರಾಜ್ಯಂ ಪ್ರಾಪ್ಯೇತದವ್ಯಯಮ್ ।
ಯನ್ಮೇ ಸ ದದ್ಯಾತ್ಪಿತ್ರರ್ಥಂ ಮಾ ಮಾಂ ತದ್ದತ್ತಮಾಗಮತ್ ॥ ೯ ॥

"ಎಲೈ ಕೈಕೇಯಿ, ನೀನು ನನ್ನನ್ನು ಸ್ಪರ್ಶಿಸಬೇಡ ; ಎಲೈ ಪಾಪನಿಶ್ಚಯಿ ! ನಿನ್ನ ಮುಖಾವಲೋಕನವೂ ನನಗೆ ಇಷ್ಟವಿಲ್ಲ. ನೀನು ನನ್ನ ಹೆಂಡತಿಯಲ್ಲ ; ಯಾವ ಆಪ್ತಸಂಬಂಧಿಕಳೂ ಅಲ್ಲ. ನಿನ್ನನ್ನು ಆಶ್ರಯಿಸಿರುವವರೊಡನೆ ನನಗೆ ಯಾವ ಸಂಬಂಧವೂ ಇಲ್ಲ. ಧರ್ಮವನ್ನು ತ್ಯಜಿಸಿ ಕೇವಲ ಸ್ವಾರ್ಥವನ್ನು ಸಾಧಿಸುವ ನಿನ್ನನ್ನು ತ್ಯಜಿಸಿದ್ದೇನೆ. ನಿನ್ನ ಪಾಣಿಗ್ರಹಣ, ನನ್ನಿಂದ ಅಗ್ನಿಗೆ ಹಾಕಿಸಿದ ಪ್ರದಕ್ಷಿಣೆ ಇವುಗಳಿಗೆ ಇಹ-ಪರದಲ್ಲಿ ಇನ್ನುಮುಂದೆ ಯಾವ ಅರ್ಥವೂ ಉಳಿಯಲಿಲ್ಲ. ಭರತನು ಈ ಅಕ್ಷಯರಾಜ್ಯವನ್ನು ಪಡೆದು ಸಂತೋಷಗೊಂಡರೆ, ಪಿತನೆಂದು ಆಚರಿಸುವ ಆತನ ಶ್ರಾದ್ಧಾದಿಗಳು ನನಗೆ ತಲುಪದಿರಲಿ !"

ವಾಲ್ಮೀಕಿಯು ದಶರಥನ ಈ ಉದ್ಗಾರಗಳನ್ನು ಶಾಪವೆಂದೆಣಿಸಿಲ್ಲ ; ಆದರೆ ಅವು ಶಾಪದ ನುಡಿಗಳೇ ಆಗಿವೆ. ಸ್ವರ್ಗಸ್ಥನಾದ ದಶರಥರಾಜನು ಮಹಾದೇವನ ಅಪ್ಪಣೆಯ ಅನುಸಾರ ವಿಮಾನದಿಂದ ಶ್ರೀರಾಮ ಲಕ್ಷ್ಮಣರ ಭೇಟಿಗೆಂದು ಬಂದಾಗ, ಶ್ರೀರಾಮನು ದಶರಥನನ್ನು ವಿನಂತಿಸಿದ್ದಾನೆ ; ಅದರಲ್ಲಿ ಆತನು ಈ ಉದ್ಗಾರಗಳಿಗೆ 'ಶಾಪ'ವೆಂಬ ಶಬ್ದವನ್ನು ಬಳಸಿದ್ದಾನೆ. ಸ್ವರ್ಗಸ್ಥ ದಶರಥನ ದರ್ಶನವಾದ ಬಳಿಕ ಶ್ರೀರಾಮನು ಅವನನ್ನು ಹೀಗೆ ವಿನಂತಿಸಿದನು :

ಯುದ್ಧಕಾಂಡ / ೧೧೯

ಕುರು ಪ್ರಸಾದಂ ಧರ್ಮಜ್ಞ ಕೈಕೇಯ್ಯಾ ಭರತಸ್ಯ ಚ ॥ ೨೫ ॥
ಸಪುತ್ರಾಂ ತ್ವಾಂ ತ್ಯಜಾಮೀತಿ ಯದುಕ್ತಾ ಕೈಕಯೀ ತ್ವಯಾ ।
ಸ ಶಾಪಃ ಕೈಕೇಯೀಂ ಘೋರಃ ಸಪುತ್ರಾಂ ನ ಸ್ಪೃಶೇತ್ಪ್ರಭೋ ॥ ೨೬ ॥

"ಎಲೈ ಧರ್ಮಜ್ಞರೇ ! ಕೈಕೇಯಿ ಮತ್ತು ಭರತನ ಮೇಲೆ ಕೃಪೆಮಾಡಿರಿ ! ನಾನು ಪುತ್ರಸಮೇತಳಾದ ನಿನ್ನನ್ನು ತ್ಯಜಿಸುತ್ತೇನೆ ಎಂದು ಕೈಕೇಯಿಗೆ ಹೇಳಿದಿರಿ ; ಈ ಘೋರಶಾಪವು ಕೈಕೇಯಿಗೆ ಅಥವಾ ಆಕೆಯ ಪುತ್ರನಾದ ಭರತನಿಗೆ ತಾಗದಿರಲಿ !"

ದಶರಥನು ಶ್ರೀರಾಮನ ಈ ಮೇಲಿನ ಬಿನ್ನಪವನ್ನು ಮನ್ನಿಸಿದನು.

ಇದು ಕಟ್ಟಳೆಯ ಶಾಪವಿದೆ.

## ೨೦. ಶ್ರಾವಣ > ದಶರಥ

ಅಯೋಧ್ಯಾಕಾಂಡ / ೬೩

ಶ್ರೀರಾಮನು ವನವಾಸಕ್ಕೆ ಹೋಗಲಿರುವನೆಂದು ಶೋಕಾಕುಲನಾಗಿದ್ದ ದಶರಥನು ಕೌಸಲ್ಯೆಗೆ ತನ್ನ ಪೂರ್ವಚರಿತ್ರೆಯ ಒಂದು ಪ್ರಸಂಗವನ್ನು ಹೇಳುತ್ತಿದ್ದಾನೆ :

ಶ್ರಾವಣನು ವೃದ್ಧರಾದ, ಅಂಧರಾಗಿದ್ದ ತನ್ನ ತಂದೆತಾಯಿಗಳಿಗಾಗಿ ಜಲಾಶಯದಿಂದ ನೀರನ್ನು ತರಲು ಕೊಡವನ್ನು ತೆಗೆದುಕೊಂಡು ಹೋಗಿದ್ದನು. ಆಗ ದಶರಥನರಾಜನು ಬೇಟೆಯಾಡಲು ಅದೇ ಕಾಡಿಗೆ ಬಂದಿದ್ದನು. ದಶರಥನು ಬಿಟ್ಟ ಬಾಣವು ಶ್ರಾವಣನ ಮರ್ಮಸ್ಥಾನಕ್ಕೆ ತಗುಲಿ ಅವನು ಗಾಯಗೊಂಡನು. ಶ್ರಾವಣನ ವಿಲಾಪವನ್ನು ಕೇಳಿದೊಡನೆ ದಶರಥನಿಗೆ ತನ್ನಿಂದ ನಡೆದ ತಪ್ಪಿನ ಅರಿವಾಯಿತು. ಆ ವಿಲಾಪದ ಧ್ವನಿಯನ್ನು ಸಮೀಪಿಸಿದಾಗ, ದಶರಥನು ಗಾಯಗೊಂಡ ಶ್ರಾವಣನು ಮರಣೋನ್ಮುಖನಾಗಿ ಕಸಿವಿಸಿ ಪಡುತ್ತಿದ್ದುದನ್ನು ಕಂಡನು. ಅಂಥ ಅವಸ್ಥೆಯಲ್ಲಿದ್ದ ಶ್ರಾವಣನು ದಶರಥನಿಗೆ ಬಿನ್ನೈಸಿ ಇಂತೆಂದನು : "ನಾನು ನೀರು ತೆಗೆದುಕೊಂಡು ಹೋಗಲು ತುಂಬಾ ಸಮಯವಾದ್ದರಿಂದ ನನ್ನ ತಾಯಿ-ತಂದೆಗಳು ಬಹಳ ಚಿಂತಾತುರರಾಗಿರಬಹುದೆಂಬ ಭಯವು ನನಗಿದೆ ; ಆದಕಾರಣ ರಾಜನೇ, ನೀನು ಬೇಗ ಹೋಗಿ ನೀರನ್ನು ಕೊಡು ; ನಡೆದ ಸಮಾಚಾರವನ್ನು ಅವರಿಗೆ ತಿಳಿಸು !" ಎಂದು ಹೇಳಿದನು. "ಹರಡುವ ಅಗ್ನಿಜ್ವಾಲೆಯು ಯಾವ ರೀತಿ ಅಡವಿಯನ್ನೆಲ್ಲ ಸುಟ್ಟುಹಾಕುತ್ತದೆಯೋ ಅದೇ ರೀತಿ ನನ್ನ ತಂದೆಯು ಕ್ರೋಧಗೊಂಡು ನಿನ್ನನ್ನು ದಹಿಸದಿರಲಿ !" ಎಂದು ಶ್ರಾವಣನು ಸದಿಚ್ಛೆಯನ್ನು ಸಹ ದಶರಥನ ಮುಂದೆ ಪ್ರಕಟಿಸಿದನು. ತನ್ನ ತಂದೆಯಿದ್ದ ಆಶ್ರಮದ ಕಾಲುದಾರಿಯನ್ನು ದಶರಥನಿಗೆ ಕೈಮಾಡಿ ತೋರಿಸಿ ಈ ರೀತಿ ಅಂದನು :

ತಂ ಪ್ರಸಾದಯ ಗತ್ವಾ ತ್ವಂ ನ ತ್ವಾ ಸಂಕುಪಿತಃ ಶಪೇತ । ೪೫

"ನೀನು ಹೋಗಿ ನನ್ನ ತಂದೆಯು ಸಿಟ್ಟಾಗಿ ಶಾಪವನ್ನು ಕೊಡದಂತೆ ಅವರನ್ನು ಉಪಚರಿಸು !" ಶ್ರಾವಣನ ಈ ಮಾತನ್ನು ಕೇಳಿ, ದಶರಥನು ಆತನ ಹೇಳಿಕೆಯಂತೆ ಆತನ ಶರೀರದಲ್ಲಿ ನೆಟ್ಟ ಬಾಣವನ್ನು ಹೊರಕ್ಕೆಳೆದ ನಂತರ ತುಸು ಸಮಯದಲ್ಲಿ ಶ್ರಾವಣನು ಅಸುನೀಗಿದನು.

ನಿಜದಲ್ಲಿ ಶಾಪವನ್ನು ಇನ್ನೂ ನುಡಿಯಲಾಗಿಲ್ಲ ; ಆದರೆ ಶಾಪಕೊಡಬಹುದೆಂಬ ಭಯವನ್ನು ವ್ಯಕ್ತಮಾಡಲಾಗಿದೆ. ಹೀಗಿರುವದರಿಂದ ಶಾಪದ ಸ್ವರೂಪವು ಸ್ಪಷ್ಟವಿಲ್ಲ.

ಇದು ಕಟ್ಟಳೆಯ ಶಾಪವಾಗಿದೆ.

## ೨೧. (ಶ್ರಾವಣನ ತಂದೆ) ಶ್ರವಣ > ದಶರಥ ಅಯೋಧ್ಯಾಕಾಂಡ / ೬೪

ಶ್ರೀರಾಮನು ವನವಾಸಕ್ಕೆ ತೆರಳಲಿರುವನೆಂದು ಶೋಕಾರ್ತನಾದ ದಶರಥನು ತನ್ನ ಜೀವನದಲ್ಲಿ ನಡೆದ ಒಂದು ಘಟನೆಯನ್ನು ಕೌಸಲ್ಯೆಗೆ ಹೇಳುತ್ತಾನೆ :

ಶ್ರಾವಣನಿಗೆ ಬಾಣವು ತಗುಲಿದನಂತರ ಆತನ ಹೇಳಿಕೆಯಂತೆ ದಶರಥನು ಶ್ರಾವಣನ ತಂದೆಯ ಆಶ್ರಮಕ್ಕೆ ಹೋದನು. ಅತ್ಯಂತ ಶೋಕಾಕುಲನಾಗಿ ಆತನು ನಡೆದುದೆಲ್ಲವನ್ನು ಯಥಾಸಾಂಗವಾಗಿ ಅವರಿಗೆ ಹೇಳಿದನು. ತನ್ನಿಂದಾದ ಅಪರಾಧವನ್ನು ಒಪ್ಪಿಕೊಂಡು ಈ ರೀತಿ ಎಂದನು :

ಅಜ್ಞಾನಾತ್ ಭವತಃ ಪುತ್ರಃ ಸಹಸಾಭಿಹತೋ ಮಯಾ ।
ಶೇಷಮೇವಂ ಗತೇ ಯತ್ ಸ್ಯಾತ್ ತತ್ ಪ್ರಸೀದತು ಮೇ ಮುನಿಃ ॥ ೧೯ ॥

"ಅರಿವಿರದೆ ಅಕಸ್ಮಾತ್ತಾಗಿ ನನ್ನಿಂದ ನಿಮ್ಮ ಪುತ್ರನ ವಧೆಯಾಗಿದೆ. ಆದಕಾರಣ ಈ ಪರಿಸ್ಥಿತಿಯಲ್ಲಿ ಸೂಕ್ತವಾದ ಶಾಪವನ್ನು / ಅನುಗ್ರಹವನ್ನು ಕೊಡಬೇಕು."*

ಏಕೈಕಪುತ್ರನ ಮರಣದ ದುರ್ವಾರ್ತೆಯನ್ನು ಕೇಳಿ ಶ್ರಾವಣನ ತಂದೆತಾಯಿಯರಿಗೆ ತಾಳಲಾರದಷ್ಟು ವ್ಯಥೆಯಾಯಿತು. ಶೋಕವಿಹ್ವಲನಾದ, ಮಹಾತೇಜಸ್ವಿಯಾದ ಆ ಶ್ರಾವಣನ ಪಿತನು ದಶರಥನರಾಜನಿಗೆ ಈ ರೀತಿ ನುಡಿದನು : "ಎಲೈ ರಾಜನೇ, ಈ ಅಶುಭಕೃತ್ಯವನ್ನು ಕುರಿತು, ನಿನ್ನ ಬಾಯಿಂದಲೇ ಸ್ವತಃ ನನ್ನ ಮುಂದೆ

---

* ಟಿಪ್ಪಣಿ : (೧) ಈ ಅವಸ್ಥೆಯಲ್ಲಿ ಉಚಿತವಾದ ಶಾಪವನ್ನು ನನಗೆ ಕೊಟ್ಟು ನೀವು ಪ್ರಸನ್ನರಾಗಬೇಕು.
—ಡಾ. ಪ್ರ. ನ. ಜೋಶಿ

(೨) ಈ ರೀತಿ ನಡೆದಾಗ ಮುಂದೆ ಏನು ಮಾಡತಕ್ಕದ್ದು ? ಎಂಬುದನ್ನು ಮುನಿಗಳಾದ ನೀವು ನನಗೆ ಆಜ್ಞಾಪಿಸಿರಿ.
—ಕೈ. ಕಾಶಿನಾಥಶಾಸ್ತ್ರೀ ಲೇಲೆ

ಹೇಳಿರದಿದ್ದರೆ, ನಿನ್ನ ತಲೆಯು ಸಿಡಿದು ಸಹಸ್ರ ಹೋಳಾಗುತ್ತಿತ್ತು. ರಾಜನೇ, ಯಾವ ಕ್ಷತ್ರಿಯನು ಬುದ್ಧಿ ಪೂರ್ವಕವಾಗಿ, ವಾನಪ್ರಸ್ಥಾಶ್ರಮಧರ್ಮದ ಪಾಲನೆಯಲ್ಲಿದ್ದವನನ್ನು ವಧಿಸುವನೋ ಅಂಥವನು ಇಂದ್ರನೇ ಆಗಿದ್ದರೂ ನನ್ನ ಕೋಪದಿಂದ ಸ್ಥಾನಚ್ಯುತನಾಗುತ್ತಿದ್ದನು. ಹೀಗಿರುವಾಗ ನಿನ್ನಂತಹ ಪಾಮರನ ಪಾಡೇನು ? ಮಾತಾಪಿತೃಗಳ ಸೇವೆಯೆಂದರೆ ತಪಸ್ಸಾಧನೆಯೆಂದು ಬಗೆದು ಅದರಲ್ಲಿ ತತ್ಪರನಾಗಿದ್ದ, ವೇದಜ್ಞ-ಬ್ರಾಹ್ಮಣನಂತಿದ್ದ, ಮುನಿಸಮಾನವಾಗಿದ್ದವನ ಮೇಲೆ ಬುದ್ಧಿಪೂರ್ವಕವಾಗಿ ಶರವನ್ನು ಬಿಟ್ಟರೆ ಆ ಶರವನ್ನು ಬಿಡುವಾತನ ತಲೆಯು ಏಳು ಹೋಳಾಗಬೇಕು ; ಆದರೆ ಈ ಕೃತ್ಯವು ನಿನ್ನ ಅಜ್ಞಾನದಿಂದಾದ ಕಾರಣ ನೀನು ಜೀವಿಸಿರುವೆ. ಬುದ್ಧಿಪೂರ್ವಕವಾಗಿ ಈ ಕೃತ್ಯವು ನಿನ್ನಿಂದಾಗಿದ್ದರೆ ರಘುವಂಶವೇ ಉಳಿಯುತ್ತಿರಲಿಲ್ಲ !" ಈ ರೀತಿ ನುಡಿದು ಶ್ರಾವಣನು ಮೃತನಾಗಿ ಬಿದ್ದ ಸ್ಥಳಕ್ಕೆ ತನ್ನನ್ನು ಕರೆದೊಯ್ಯಲು ದಶರಥನಿಗೆ ಹೇಳಿದನು. ಅಲ್ಲಿಗೆ ತಲುಪಿ ಮಗನ ಮೃತಶರೀರವನ್ನು ಸ್ಪರ್ಶಿಸುತ್ತಲೆ ಆ ತಂದೆಯು ಶೋಕಸಾಗರದಲ್ಲಿ ಮುಳುಗಿದನು. ಆತನು ಶ್ರಾವಣನ ಒಳ್ಳೆಯ ಗುಣಗಳನ್ನು ಸ್ಮರಿಸಿ ಬಿಕ್ಕಿಬಿಕ್ಕಿ ರೋದಿಸಿದನು. ಪತ್ನಿಯೊಡಗೂಡಿ ತನ್ನ ಪುತ್ರನಿಗೆ ತಿಲಾಂಜಲಿಯನ್ನಿತ್ತು, ನಂತರ ಈ ರೀತಿ ಎಂದನು :

"ಎಲೈ ರಾಜನೇ, ನೀನು ನನ್ನನ್ನು ಈ ಕ್ಷಣವೇ ವಧಿಸು ! ಒಂದೇ ಬಾಣದಿಂದ ನನ್ನ ಏಕಮೇವ ಪುತ್ರನನ್ನು ಸಾಯಿಸಿ ನೀನು ನನ್ನನ್ನು ನಿಪುತ್ರಿಕನನ್ನಾಗಿ ಮಾಡಿರುವೆ ; ಈಗ ನನಗೆ ಮರಣದ ಭಯವಿಲ್ಲ ; ಅಜ್ಞಾನದಿಂದ ನೀನು ನನ್ನ ಬಾಲಕನನ್ನು ಕೊಂದಿರುವೆ ; ಆದ್ದರಿಂದ ನಾನು ನಿನಗೆ ಅತಿದುಃಖಕಾರಕ, ಭಯಕಾರಕವಾದ ಶಾಪವನ್ನು ಕೊಡುತ್ತೇನೆ.

ಪುತ್ರವ್ಯಸನಜಂ ದುಃಖಂ ಯದೇತನ್ಮಮ ಸಾಂಪ್ರತಮ್ ।
ಏವಂ ತ್ವಂ ಪುತ್ರಶೋಕೇನ ರಾಜನ್ ಕಾಲಂ ಕರಿಷ್ಯಸಿ ॥ ೫೪ ॥
ಅಜ್ಞಾನಾತ್ತು ಹತೋ ಯಸ್ಮಾತ್ ಕ್ಷತ್ರಿಯೇಣ ತ್ವಯಾ ಮುನಿಃ ।
ತಸ್ಮಾತ್ತ್ವಾಂ ನಾವಿಶತ್ಯಾಶು ಬ್ರಹ್ಮಹತ್ಯಾ ನರಾಧಿಪ ॥ ೫೫ ॥
ತ್ವಾಮಪ್ಯೇತಾದೃಶೋ ಭಾವಃ ಕ್ಷಿಪ್ರಮೇವ ಗಮಿಷ್ಯತಿ ।
ಜೀವಿತಾಂತಕರೋ ಘೋರೋ ದಾತಾರಮಿವ ದಕ್ಷಿಣಾಮ್ ॥ ೫೬ ॥
ಏವಂ ಶಾಪಂ ಮಯಿ ನ್ಯಸ್ಯ ವಿಲಪ್ಯ ಕರುಣಂ ಬಹು ।
ಚಿತಾಮಾರೋಪ್ಯ ದೇಹಂ ತನ್ಮಿಥುನಂ ಸ್ವರ್ಗಮಭ್ಯಯಾತ್ ॥ ೫೭ ॥

"ನನಗೆ ಸಧ್ಯದಲ್ಲಿ ಯಾವ ರೀತಿ ಪುತ್ರಮರಣದಿಂದ ದುಃಖವೊದಗಿದೆಯೋ ಅದೇ ರೀತಿ ಪುತ್ರಶೋಕದಿಂದ ನಿನಗೆ ಮರಣ ಬರುವುದು. ಕ್ಷತ್ರಿಯನಾದ ನೀನು ಅಜ್ಞಾನದಿಂದ ನನ್ನ ಪುತ್ರನ ವಧೆಯನ್ನು ಮಾಡಿರುವೆ ; ಆದಕಾರಣ ಎಲೈ ಪ್ರಜಾಧಿಪತಿಯೇ, ಬ್ರಹ್ಮಹತ್ಯೆಗೆ ಸಮಾನವಾದ ಪಾತಕವು ನಿನಗೆ ಅಂಟಲಾರದು. ಒಮ್ಮೆ ಕೊಟ್ಟ ದಕ್ಷಿಣೆಯ ಫಲವು ದಾತೃವಿಗೆ ಪರಲೋಕದಲ್ಲಿ ಪುನಃ ಪ್ರಾಪ್ತವಾಗುತ್ತದೆ. ಅದೇ ರೀತಿಯಾಗಿ, ಪ್ರಾಣನಾಶಕವಾದ ಘೋರ ಅವಸ್ಥೆಯು ನಿನಗೆ ಇದ್ದಕ್ಕಿದ್ದಹಾಗೆ ಬಂದೊದಗುವದು." ಈ ರೀತಿ, ಕರುಣ ಸ್ವರದಿಂದ ಪ್ರಲಾಪಿಸಿ ಆ ತಾಯಿ-ತಂದೆಯರು ದಶರಥನಿಗೆ ಶಾಪವನ್ನಿತ್ತರು. ಆ ದಂಪತಿಗಳು ಚಿತೆಯನ್ನೇರಿ ಸ್ವರ್ಗಕ್ಕೆ ಹೋದರು.

ದಶರಥನು ಅಜ್ಞಾನದಿಂದ ಶ್ರಾವಣನ ವಧೆ ಮಾಡಿದ್ದರಿಂದ ಶಾಪದ ಸ್ವರೂಪವು ಸೌಮ್ಯವಾಗಿದೆ. ಈ ವಧೆಯು ಬುದ್ಧಿಪೂರ್ವಕವಾಗಿ ನಡೆದಿದ್ದರೆ ಶಾಪವು ಎಷ್ಟೊಂದು ಘೋರವಾಗಬಹುದಿತ್ತೆಂಬುದರ ಸ್ಪಷ್ಟಕಲ್ಪನೆಯನ್ನು ಕೊಡಲಾಗಿದೆ.

## ೨೨. ಭರತ > ಕೈಕೇಯಿ — ಅಯೋಧ್ಯಾಕಾಂಡ / ೭೪

ಭರತನು ಕೈಕೇಯಿಯನ್ನು ಧಿಕ್ಕರಿಸುತ್ತಿದ್ದಾನೆ.

ಕೈಕೇಯಿಯು, ದಶರಥನಿಂದ ವರಗಳನ್ನು ಪಡೆದು ಶ್ರೀರಾಮನನ್ನು ಕಾಡಿಗೆ ಕಳುಹಿಸಿದಳು. ಪುತ್ರವಿಯೋಗವನ್ನು ಸಹಿಸಲಾರದೆ ದಶರಥನು ಮರಣಹೊಂದಿದನು. ಈ ಸಮಾಚಾರವನ್ನು ಕೇಳಿ ಭರತನಿಗೆ ಅತೀವ ದುಃಖವಾಯಿತು. ಈ ಆಪತ್ತಿಗೆ ಕೈಕೇಯಿಯೇ ಕಾರಣಳೆಂದು ತಿಳಿದಾಗಂತೂ ಆತನಿಗೆ ತುಂಬ

ಕೋಪವುಂಟಾಯಿತು ; ಅತ್ಯಂತ ಕಠೋರ ನುಡಿಗಳಿಂದ ಆಕೆಯನ್ನು ನಿಂದಿಸಿದನು. "ಈ ನಿನ್ನ ಕೃತಿಯಿಂದ ದಶರಥನು ಮತ್ತು ನೀನು ಪತಿಪತ್ನಿಯರಾಗಿ ಉಳಿಯಲಿಲ್ಲ. ಆತನ ಮೃತ್ಯುವಿಗೆ ಹಾಗೂ ಶ್ರೀರಾಮನ ವನವಾಸಕ್ಕೆ ಕಾರಣಳಾದವಳೇ ನೀನು ; ನಾನು ನಿನ್ನ ಮಗನಾದ್ದರಿಂದ ಈ ಮಹಾಪಾತಕದ ಸಂಸರ್ಗ ನನಗೂ ತಾಗಿದೆ. ಈ ದೋಷದಿಂದ ನನಗೆ ಬಿಡುಗಡೆ ಇಲ್ಲ, ನೀನು ನನ್ನ ಮಾತೆ ಅಲ್ಲ ; ಶತ್ರು ! ನೀನು ನಮ್ಮ ಕುಲವನ್ನು ನಾಶಗೊಳಿಸುವ ರಾಕ್ಷಸಿಯೇ ! ಧರ್ಮಜ್ಞನಾದ ಅಶ್ವಪತಿಯ ಕನ್ಯೆಯೆಂದು ಹೇಳಿಕೊಳ್ಳುವ ಅಧಿಕಾರ ಇನ್ನು ನಿನಗಿಲ್ಲ." ಒಬ್ಬನೇ ಮಗನಿದ್ದ ಕೌಸಲ್ಯೆಗಾದ ಪುತ್ರವಿಯೋಗದ ತೀವ್ರತೆಯನ್ನು ಕೈಕೇಯಿಗೆ ಮನದಟ್ಟುಮಾಡಿಕೊಡಲೆಂದು ಆತನು ಕಾಮಧೇನುವಿನ ಕಥೆಯನ್ನು ಆಕೆಗೆ ಹೇಳುತ್ತಾನೆ. ಕಠೋರ, ನಿಗ್ರಹದ ಶಬ್ದಗಳಲ್ಲಿ ಆಕೆಯನ್ನು ಹಳಿಯುತ್ತಾನೆ. ಆತನ ಉದ್ಗಾರಗಳು ಅತ್ಯಂತ ತೀಕ್ಷ್ಣವಾಗಿವೆ. ಭರತನು ಕೈಕೇಯಿಗೆ "ನೀನು ಅಗ್ನಿಪ್ರವೇಶ ಮಾಡು ! ದಂಡಕಾರಣ್ಯಕ್ಕೆ ತೊಲಗು ; ಉರಲು ಹಾಕಿಕೊಂಡು ಸಾಯು !" ಎಂದು ಹೇಳುತ್ತಾನೆ.

> ಭ್ರೂಣಹತ್ಯಾಮಸಿ ಪ್ರಾಪ್ತಾ ಕುಲಸ್ಯಾಸ್ಯ ವಿನಾಶನಾತ್ ।
> ಕೈಕೇಯಿ ನರಕಂ ಗಚ್ಛ ಮಾ ಚ ತಾತಸಲೋಕತಾಮ್ ॥ ೪ ॥

"ಈ ಕುಲವನ್ನು ಹಾಳುಮಾಡಿದ ಕಾರಣ ನಿನಗೆ ಭ್ರೂಣಹತ್ಯಾಪಾತಕವು* ತಗುಲಿದೆ. ಅದಕ್ಕಾಗಿ ಎಲೈ ಕೈಕೇಯಿ, ನೀನು ನರಕಕ್ಕೆ ಹೋಗು ; ನನ್ನ ಪಿತನಿಗೆ ದೊರೆತ ಸ್ವರ್ಗಲೋಕಕ್ಕೆ ಹೋಗಬೇಡ !"

> ಏಕಪುತ್ರಾ ಚ ಸಾಧ್ವೀ ಚ ವಿವತ್ಸೇಯಂ ತ್ವಯಾ ಕೃತಾ ।
> ತಸ್ಮಾತ್ತ್ವಂ ಸತತಂ ದುಃಖಂ ಪ್ರೇತ್ಯ ಚೇಹ ಚ ಲಪ್ಸ್ಯಸೇ ॥ ೨೯ ॥

"ಒಬ್ಬನೇ ಮಗನಿದ್ದ, ಸಾಧ್ವಿಯಾದ ಕೌಸಲ್ಯೆಯನ್ನು ನೀನು ಪುತ್ರರಹಿತಳನ್ನಾಗಿ ಮಾಡಿರುವೆ ; ಅದಕ್ಕಾಗಿ ಇಹಲೋಕದಲ್ಲಿ ಹಾಗೂ ಮರಣಾನಂತರವೂ ದುಃಖವೇ ನಿನ್ನ ಪಾಲಿಗೆ ಬರಲಿ."

ಭರತನ ಈ ನುಡಿಗಳು ಶಾಪವಂತಿದ್ದರೂ ಅವು ಕ್ರೋಧ-ಉದ್ರೇಕಗಳ ಫಲರೂಪವಾಗಿವೆಯೇ ಹೊರತು ಶಾಪವಲ್ಲ. ಭರತನಿಗೆ ಶಾಪ ಕೊಡುವ ಅಧಿಕಾರ ಹೇಗೆ ಪ್ರಾಪ್ತವಾಗಿತ್ತೆಂಬ ಪ್ರಶ್ನೆಯು ಹಾಗೇ ಉಳಿಯುತ್ತದೆ.

### ಇನ್ನೊಂದು ಉಲ್ಲೇಖ — ಅಯೋಧ್ಯಾಕಾಂಡ / ೧೦೧

ಭರತನು ಭೇಟಿಯ ಕಾಲಕ್ಕೆ ಶ್ರೀರಾಮನಿಗೆ ಈ ರೀತಿ ಹೇಳುತ್ತಾನೆ : "ನಿನ್ನನ್ನು ವನವಾಸಕ್ಕೆ ಕಳುಹಿಸಿ ನನ್ನ ತಾಯಿಯು ಘೋರಪಾಪವನ್ನು ಮಾಡಿದ್ದಾಳೆ.

> ಸಾ ರಾಜ್ಯಫಲಮಪ್ರಾಪ್ಯ ವಿಧವಾ ಶೋಕಕರ್ಶಿತಾ ।
> ಪತಿಷ್ಯತಿ ಮಹಾಘೋರೇ ನರಕೇ ಜನನೀ ಮಮ ॥ ೭ ॥

ಆದ್ದರಿಂದ ನನ್ನ ತಾಯಿಗೆ ರಾಜ್ಯಫಲ ಪ್ರಾಪ್ತಿಯಾಗದೆ ದುರದೃಷ್ಟದ ವೈಧವ್ಯವು ಪ್ರಾಪ್ತವಾಗಿದೆ."

### ೨೩. ವೈಶ್ರವಣ > ತುಂಬರು (ವಿರಾಧ) — ಅರಣ್ಯಕಾಂಡ / ೪

ವಿರಾಧನು ತಾನು ಸಾಯುವ ಮೊದಲು ತನ್ನ ಪೂರ್ವವೃತ್ತಾಂತವನ್ನು ಶ್ರೀರಾಮನಿಗೆ ಹೇಳುತ್ತಾನೆ :

ಪರ್ವತದಷ್ಟು ಮಹಾಕಾಯನಾದ ವಿರಾಧ ರಾಕ್ಷಸನು, ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದ ಶ್ರೀರಾಮ ಲಕ್ಷ್ಮಣಸೀತೆಯರನ್ನು ಕಂಡು ಭಯಂಕರವಾಗಿ ಗರ್ಜಿಸುತ್ತ ಶ್ರೀರಾಮನ ಮೈಮೇಲೆ ಧಾವಿಸಿದನು. ಉನ್ಮತ್ತನಾದ ಆತನು ಈ ರೀತಿ ಅಂದನು : "ಋಷಿಗಳ ಮಾಂಸವನ್ನು ಭಕ್ಷಿಸುತ್ತ ಈ ಭೀಕರವಾದ ಕಾನನದಲ್ಲಿ ವಾಸಿಸಿರುವೆನು. ವಿವಾಹವಾಗಲು ಯೋಗ್ಯಳಾದ ಈ ನಾರಿಯು - ಸೀತೆಯು, ನನ್ನ ಭಾರ್ಯೆಯಾಗುವಳು, ನಾನು ಯುದ್ಧದಲ್ಲಿ ನಿಮ್ಮಿಬ್ಬರ ನೆತ್ತರನ್ನು ಕುಡಿಯುವೆ." ಹೀಗೆಂದು ಅವನು ಸೀತೆಯನ್ನು ತನ್ನ ತೊಡೆಯ

---

* ಕೈ. ಕಾಶೀನಾಥಶಾಸ್ತ್ರೀ ಲೇಲೆ ಅವರು 'ಬ್ರಹ್ಮಹತ್ಯೆಯ ಪಾತಕ'ವೆಂದು ಅನುವಾದಿಸಿದ್ದಾರೆ.

ಮೇಲೆ ಕುಳ್ಳಿರಿಸಿಕೊಂಡನು. ಆಗ ಶ್ರೀರಾಮನಿಗೆ ಅತಿಶಯ ವ್ಯಥೆಯಾಯಿತು. ಲಕ್ಷ್ಮಣನ ಸಿಟ್ಟು ನೆತ್ತಿಗೇರಿತು. ಆದರೆ ವಿರಾಧನಿಗೆ* ಬ್ರಹ್ಮದೇವನ ವರವಿತ್ತು. ವಿರಾಧ ಯಾರಿಂದಲೂ ಗಾಯಗೊಳ್ಳುವಂತಿರಲಿಲ್ಲ, ಸಾಯುವಂತಿರಲಿಲ್ಲ, ಸೋಲುವಂತಿರಲಿಲ್ಲ ; ಆದ್ದರಿಂದ ಶ್ರೀರಾಮಲಕ್ಷ್ಮಣರಿಗೆ ವಿರಾಧನನ್ನು ಕೊಲ್ಲುವುದು ಕಠಿಣವಿತ್ತು. ವಿರಾಧನು ಸೀತೆಯನ್ನು ಒಂದು ಬದಿಗೆ ಇರಿಸಿ, ಕೈಯಲ್ಲಿ ಶೂಲವನ್ನು ಧರಿಸಿ ಶ್ರೀರಾಮ-ಲಕ್ಷ್ಮಣರ ಮೇಲೆ ಏರಿಹೋದನು. ಪರಸ್ತ್ರೀಯನ್ನು ಸ್ಪರ್ಶಿಸಿದ ವಿರಾಧರಾಕ್ಷಸನಿಗೆ ಶಿಕ್ಷೆಯಾಗಲೇಬೇಕೆಂದು ಶ್ರೀರಾಮನಿಗೆ ಎನಿಸಿತು. ಶ್ರೀರಾಮನು ಯುದ್ಧಕ್ಕೆ ಅಣಿಯಾದುದನ್ನು ಕಂಡು ವಿರಾಧನು ಅವನನ್ನು ಅಪಹಾಸ್ಯಕ್ಕೆ ಗುರಿಮಾಡಿ ಮಾತನಾಡಲಾರಂಭಿಸಿದನು. ಅವನು ಸೀತೆಯ ಕಣ್ಣುಮುಂದೆಯೇ ಶ್ರೀರಾಮಲಕ್ಷ್ಮಣರನ್ನು ತನ್ನ ಹೆಗಲ ಮೇಲೆ ಕೂಡಿಸಿಕೊಂಡು ಓಡತೊಡಗಿದನು. ಸೀತೆಯು ಭಯಗೊಂಡು ಆಕ್ರೋಶಿಸಿದಳು. ಆಗ ಶ್ರೀರಾಮಲಕ್ಷ್ಮಣರು ರಾಕ್ಷಸನ ಎರಡೂ ಭುಜಗಳನ್ನು ತುಂಡರಿಸಿದರು ; ಆದರೆ ವಿರಾಧನನ್ನು ಕೊಲ್ಲುವುದು ಅವರಿಂದಾಗಲಿಲ್ಲ. ಹೀಗಾಗಿ ವಿರಾಧನಿಗೆ ಸಾಕಷ್ಟು ಒದೆತ ಗುದ್ದುಗಳನ್ನು ಕೊಟ್ಟು ಅವನನ್ನು ಒಂದು ಗುಂಡಿಯಲ್ಲಿ ಹೂತುಬಿಡಬೇಕೆಂದು ನಿಶ್ಚಯಿಸಿದರು. ಶ್ರೀರಾಮನು ಒಂದು ಪ್ರಚಂಡ ಆನೆಯನ್ನು ಹೂಳುವಷ್ಟು ದೊಡ್ಡ ಗುಂಡಿಯನ್ನು ತೋಡಬೇಕೆಂದು ಲಕ್ಷ್ಮಣನಿಗೆ ಆಜ್ಞಾಪಿಸಿದನು. ಅದನ್ನು ಕೇಳಿಸಿಕೊಂಡ ವಿರಾಧನು ನಮ್ರನಾಗಿ ರಾಮನಿಗೆ ಈ ರೀತಿ ನುಡಿದನು :

"ಎಲೈ ಪುರುಷೋತ್ತಮನೇ, ನನ್ನ ಮೂಢತನದಿಂದಾಗಿ ನಿನ್ನನ್ನು ಗುರುತಿಸಲಿಲ್ಲ. ಹೇ ಶ್ರೀರಾಮನೇ, ನಿನ್ನ ಜನ್ಮದಿಂದಾಗಿ ಕೌಸಲ್ಯೆಯು ಸುಪುತ್ರವತಿಯಾದಳು. ಅಂಥ ಶ್ರೀರಾಮನನ್ನು, ಈ ಮಹಾಭಾಗ್ಯವತಿಯಾದ ಸೀತೆಯನ್ನು, ಯಶಸ್ವಿಯಾದ ಲಕ್ಷ್ಮಣನನ್ನು ಈಗ ಗುರುತಿಸಿದ್ದೇನೆ."—ಹೀಗೆಂದು ವಿರಾಧ ರಾಕ್ಷಸನು ತನ್ನ ಪೂರ್ವವೃತ್ತಾಂತವನ್ನು ಅರುಹಿದನು :

> ಅಭಿಶಾಪಾದಹಂ ಘೋರಾಂ ಪ್ರವಿಷ್ಟೋ ರಾಕ್ಷಸೀಂ ತನುಮ್ ।
> ತುಂಬರುರ್ನಾಮ ಗಂಧರ್ವಃ ಶಪ್ತೋ ವೈಶ್ರವಣೇನ ಹಿ ॥ ೧೭ ॥
> ಪ್ರಸಾದ್ಯಮಾನಶ್ಚ ಮಯಾ ಸೋಽಬ್ರವೀನ್ಮಾಂ ಮಹಾಯಶಾಃ ।
> ಯದಾ ದಾಶರಥೀರಾಮಸ್ತ್ವಾಂ ವಧಿಷ್ಯತಿ ಸಂಯುಗೇ ॥ ೧೭ ॥
> ತದಾ ಪ್ರಕೃತಿಮಾಪನ್ನೋ ಭವಾನ್ ಸ್ವರ್ಗಂ ಗಮಿಷ್ಯತಿ ।
> ಅನುಪಸ್ಥೀಯಮಾನೋ ಮಾಂ ಸ ಕ್ರುದ್ಧೋ ವ್ಯಾಜಹಾರ ಹ ॥ ೧೮ ॥
> ಇತಿ ವೈಶ್ರವಣೋ ರಾಜಾ ರಂಭಾಸಕ್ತಮುವಾಚ ಹ ।
> ತವ ಪ್ರಸಾದಾನ್ಮುಕ್ತೋಽಹಮಭಿಶಾಪಾತ್ಸುದಾರುಣಾತ್ ॥ ೧೯ ॥

"ಶಾಪದಿಂದ ನನಗೆ ಈ ಭೀಕರವಾದ ರಾಕ್ಷಸದೇಹವು ಪ್ರಾಪ್ತವಾಗಿದೆ. ಪೂರ್ವದಲ್ಲಿ 'ತುಂಬರು' ಎಂಬ ಗಂಧರ್ವನಾಗಿದ್ದೆನು. ಕುಬೇರನು ನನಗೆ ಶಾಪವನ್ನು ಕೊಟ್ಟನು. ಶಾಪವಿಮೋಚನೆಯಾಗಬೇಕೆಂದು ಕುಬೇರನನ್ನು ಪ್ರಾರ್ಥಿಸಿದೆನು. ಆಗ ಆ ಕುಬೇರನು ಈ ರೀತಿ ನುಡಿದನು :

"ದಾಶರಥೀರಾಮನು ಬಂದು ಸಂಗ್ರಾಮದಲ್ಲಿ ನಿನ್ನನ್ನು ವಧಿಸುವನು ; ಆಗ ನೀನು ಪುನಃ ಗಂಧರ್ವರೂಪವನ್ನು ತಾಳಿ ಸ್ವರ್ಗವನ್ನು ಸೇರುವೆ. ನಾನು ರಂಭೆಯಲ್ಲಿ ಆಸಕ್ತನಾಗಿದ್ದರಿಂದ ಕುಬೇರರಾಜನ ಸೇವೆಗೆ ಸಕಾಲಕ್ಕೆ ತಲುಪಿರಲಿಲ್ಲ. ಆದ್ದರಿಂದ ಕುಬೇರನು ಕೋಪಗೊಂಡು ನನಗೆ ಮೇಲಿನಂತೆ ಶಾಪವನ್ನು ಕೊಟ್ಟಿದ್ದನು. ಕುಬೇರನ ನುಡಿಯಂತೆ ಇಂದು ನಿನ್ನ ಕೃಪೆಯಿಂದಾಗಿ ಈ ಅತಿಭಯಂಕರ ಶಾಪದಿಂದ ಮುಕ್ತಿಯನ್ನು ಪಡೆಯುತ್ತಿರುವೆನು."

ಇದು ಯಾಚಿತ ಉಃಶಾಪವಾಗಿದೆ.

### ೨೪. ಮುನಿಗಳು > ರಾಕ್ಷಸರು ಅರಣ್ಯಕಾಂಡ / ೧೦

ಶ್ರೀರಾಮನು ದಂಡಕಾರಣ್ಯದಲ್ಲಿ ವಾಸಿಸುತ್ತಿದ್ದಾಗ ರಾಕ್ಷಸರನ್ನು ಸಂಹರಿಸಲೆಂದು ಧನುಸ್ಸನ್ನು ಧರಿಸಿದ್ದನು. ಈ ಸಂಗತಿಯು ಸೀತೆಗೆ ಉಚಿತವೆನಿಸಲಿಲ್ಲ. ಸೀತೆಯು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ

* ಬ್ರಹ್ಮದೇವ > ತುಂಬರು (ವಿರಾಧ), ವರ ಕ್ರಮಾಂಕ ೨೫, ನೋಡಿ.

ಶ್ರೀರಾಮನ ಮುಂದಿಟ್ಟಳು. ಆಗ ಅವಳು ಕ್ಷತ್ರಿಯರ ಕುಲಧರ್ಮ ಯಾವುದೆಂಬುದನ್ನು ಉತ್ತಮವಾಗಿ ವಿವರಿಸಿದಳಾದರೂ ಶ್ರೀರಾಮನು ಅದಕ್ಕೆ ಪ್ರತ್ಯುತ್ತರವಾಗಿ ಈ ರೀತಿ ಹೇಳುತ್ತಾನೆ :

ಹುಟ್ಟಿನಿಂದ ಕ್ಷತ್ರಿಯನಾಗಿದ್ದರೂ ಪರಿಸ್ಥಿತಿಯ ಮೂಲಕ ಶ್ರೀರಾಮನು ವಲ್ಕಲಗಳನ್ನು ಧರಿಸಿ ಮುನಿಯಂತೆ ವನದಲ್ಲಿ ವಾಸವಿದ್ದನು. ಅವರು ಇಂಥ ಕಾಲದಲ್ಲಿ ಸ್ವಸಂರಕ್ಷಣೆಗೆಂದಾಗಲೀ, ಮುನಿಜನರ ಸ್ವಾಸ್ಥ್ಯವನ್ನು ಕಾಪಾಡಲೋಸುಗವಾಗಿಯೇ ಆಗಲಿ ಶಸ್ತ್ರಧಾರಿಯಾಗಿರುವದು ಸೀತೆಗೆ ಸೂಕ್ತವೆನಿಸಲಿಲ್ಲ. ಸತತವಾದ ಶಸ್ತ್ರಸಂಯೋಗವು ಪುರುಷನ ಮನಸ್ಸಿನಲ್ಲಿ ವಿಕೃತಿಯನ್ನುಂಟುಮಾಡುತ್ತದೆ, ಎಂದು ಹೇಳಿ, ಸೀತೆಯು ಅದನ್ನು ಸಮರ್ಥಿಸಿಕೊಳ್ಳಲು ಒಂದು ಕಥೆಯನ್ನು ಹೇಳುತ್ತಾಳೆ. ಇಂದ್ರನು ಮುನಿಗಳ ಬಳಿ ತನ್ನ ಶಸ್ತ್ರಗಳನ್ನು ಠೇವಣಿ ಎಂದು ಇಟ್ಟಕಾರಣ ಆ ಮುನಿಗಳು ಕ್ರೂರಕರ್ಮಿಗಳಾದರು. ಈ ಕಥೆಯನ್ನು ಹೇಳಿ, ಆಕೆ ಶ್ರೀರಾಮನು ರಾಕ್ಷಸರ ಸಂಹಾರದ ವಿಚಾರವನ್ನು ಬಿಟ್ಟುಕೊಡಬೇಕೆಂದು ಪ್ರಯತ್ನಿಸುತ್ತಾಳೆ. ಆಕೆಯ ಹೇಳಿಕೆಯು ಯೋಗ್ಯವಾದದ್ದು, ಹಿತವಾದದ್ದು ಎಂಬುದನ್ನು ಅರಿತ ಶ್ರೀರಾಮನು ಶಾಂತಚಿತ್ತದಿಂದ ಈ ರೀತಿ ಹೇಳುತ್ತಾನೆ :

"ಕ್ಷತ್ರಿಯರು ಶಸ್ತ್ರವನ್ನು ಯಾವಾಗ್ಗೆ ಧರಿಸಬೇಕೆಂಬುದನ್ನು ನೀನು ಬಲ್ಲೆ ; ನರಮಾಂಸಭಕ್ಷಕರಾದ ರಾಕ್ಷಸರು ನಿಷ್ಕಾರಣವಾಗಿ ದಂಡಕಾರಣ್ಯದಲ್ಲಿಯ ಮುನಿಗಳ ತಪಸ್ಸಿನಲ್ಲಿ ವಿಘ್ನಗಳನ್ನು ತಂದು ಅವರನ್ನು ಭಕ್ಷಿಸುತ್ತಿದ್ದಾರೆ. 'ನಮ್ಮನ್ನು ಅನುಗ್ರಹಿಸಿ' ಎಂದು ಆ ಮುನಿಗಳು ನನ್ನನ್ನು ವಿನಂತಿಸಿದ್ದಾರೆ. ಅದನ್ನು ನಾನು ಹೇಗೆ ದುರ್ಲಕ್ಷಿಸಲಿ ? ಬ್ರಾಹ್ಮಣರ ರಕ್ಷಣೆಯೇ ಕ್ಷತ್ರಿಯರ ಧರ್ಮ. ಅಂತಹದರಲ್ಲಿ ಅವರು ರಕ್ಷಣೆಗಾಗಿ ನನ್ನನ್ನು ಅಂಗಲಾಚಿ ಬೇಡಿಕೊಳ್ಳುವರೆಂದರೆ ಕ್ಷತ್ರಿಯನಾದ ನನಗೆ ಅಪಕೀರ್ತಿಕರ. ತಮ್ಮ ಇಷ್ಟದಂತೆ ಬೇಕುಬೇಕಾದ ರೂಪಗಳನ್ನು ಧರಿಸಬಲ್ಲ ರಾಕ್ಷಸರು ಅವರನ್ನು ಬಹಳ ಪೀಡಿಸುತ್ತಿದ್ದಾರೆ. ಮುನಿಗಳು ಹೋಮವನ್ನು ಮಾಡುತ್ತಿದ್ದಾಗ ಮತ್ತು ಪರ್ವಕಾಲದಲ್ಲಿ ರಾಕ್ಷಸರು ಅವರನ್ನು ಹಿಂಸಿಸುತ್ತಿದ್ದಾರೆ. ನಾನೇ ಅಂಥ ಮುನಿಗಳನ್ನು ರಾಕ್ಷಸರಿಂದ ರಕ್ಷಿಸುವವನು ಎಂದು ಅವರು ಗ್ರಹಿಸಿದ್ದಾರೆ. ನಾನೇ ಅವರ ರಕ್ಷಣಕರ್ತನೆಂದು ಹೇಳುತ್ತಾರೆ."

> ಕಾಮಂ ತಪಃಪ್ರಭಾವೇಣ ಶಕ್ತಾ ಹಂತುಂ ನಿಶಾಚರಾನ್ ॥ ೧೩ ॥
> ಚಿರಾರ್ಜಿತಂ ನ ಚೇಚ್ಛಾಮಸ್ತಪಃ ಖಂಡಯಿತುಂ ವಯಮ್ ।
> ಬಹುವಿಘ್ನೋ ತಪೋ ನಿತ್ಯಂ ದುಶ್ಚರಂ ಚೈವ ರಾಘವ ॥ ೧೪ ॥
> ತೇನ ಶಾಪಂ ನ ಮುಂಚಾಮೋ ಭಕ್ಷ್ಯಮಾಣಾಶ್ಚ ರಾಕ್ಷಸೈಃ । ೧೫

"ತಪೋಬಲದಿಂದ ಆ ರಾಕ್ಷಸರನ್ನು ವಧಿಸಲು ಸಮರ್ಥರಾಗಿದ್ದೇವೆ ; ಆದರೆ ಬಹಳ ಕಾಲಾವಧಿಯಿಂದ ಗಳಿಸಿದ ತಪಃಸಿದ್ಧಿಯನ್ನು ವ್ಯಯಗೊಳಿಸುವ ಇಚ್ಛೆ ನಮಗಿಲ್ಲ. ಆದ್ದರಿಂದ ಹೇ ರಾಘವನೇ, ನಮ್ಮ ತಪಸ್ಸಿನಲ್ಲಿ ಅನೇಕ ವಿಘ್ನಗಳುಂಟಾಗುತ್ತಿವೆ ; ತಪಸ್ಸನ್ನಾಚರಿಸುವದು ದುಸ್ತರವಾಗಿದೆ. ರಾಕ್ಷಸರು ನಮ್ಮನ್ನು ತಿಂದು ಹಾಕಿದರೂ ನಾವು ಅವರನ್ನು ಶಪಿಸುವುದಿಲ್ಲ" ಎಂದು ಮುನಿಗಳ ಹೇಳಿಕೆಯಾಗಿದೆ.

ಸೀತೆಗೆ ಇದನ್ನೆಲ್ಲ ವಿವರಿಸಿ ಶ್ರೀರಾಮನು ಮುನಿಗಳ ರಕ್ಷಣೆಗಾಗಿ ಪ್ರತಿಜ್ಞೆಯನ್ನು ಮಾಡಿದನು.

ಪ್ರತ್ಯಕ್ಷದಲ್ಲಿ ಶಾಪವನ್ನು ಕೊಟ್ಟಿಲ್ಲ. ಶಾಪವನ್ನು ಕೊಡುವ ಸಾಮರ್ಥ್ಯವಿದ್ದರೂ ಅದನ್ನು ತಡೆಹಿಡಿಯಲಾಗಿದೆ. ಶಾಪದ ಸ್ವರೂಪವು ಸ್ಪಷ್ಟವಾಗಿಲ್ಲ.

### ೨೫. (ಯತಿಯ ವೇಷ ಧರಿಸಿದ) ರಾವಣ > ಸೀತೆ — ಅರಣ್ಯಕಾಂಡ / ೪೭

ಸೀತೆಯ ಆಸೆಯನ್ನು ಪೂರೈಸಲೆಂದು ಶ್ರೀರಾಮನು ಸುವರ್ಣಮೃಗವನ್ನು ಹುಡುಕುತ್ತ ಅರಣ್ಯವನ್ನು ಹೊಕ್ಕನು ; ಹೊರಡುವ ಮೊದಲು ಸೀತೆಯ ರಕ್ಷಣೆಯನ್ನು ಮಾಡಲು ಲಕ್ಷ್ಮಣನಿಗೆ ಹೇಳಿದನು. ಯಾವ ಪರಿಸ್ಥಿತಿಯಲ್ಲಿಯೂ ಅವಳನ್ನು ಒಂಟಿಯಾಗಿ ಬಿಡಬಾರದೆಂದು ಆಜ್ಞಾಪಿಸಿದನು. ಮಾರೀಚನು, ಶ್ರೀರಾಮನ ಧ್ವನಿಯಂತೆ ಕೂಗಿ ಸೀತೆಯ ಮನಸ್ಸಿನಲ್ಲಿ ಗೊಂದಲವನ್ನುಂಟುಮಾಡಿದನು. ಸೀತೆಯು ಲಕ್ಷ್ಮಣನಿಗೆ ಕೂಡಲೇ ಶ್ರೀರಾಮನನ್ನು ಹುಡುಕಲು ಹೋಗಬೇಕೆಂದು ಹೇಳಿದಳು. ಯಾವುದೇ ಸಂಕಟವನ್ನು ಎದುರಿಸುವ ಸಾಮರ್ಥ್ಯವು ಶ್ರೀರಾಮನಲ್ಲಿರುವದರಿಂದ ಅವನ ಕ್ಷೇಮದ ಬಗ್ಗೆ ಯೋಚಿಸುವದು ಬೇಡ ಎಂದು ಲಕ್ಷ್ಮಣನು

ಪರಿಪರಿಯಾಗಿ ಹೇಳಿದರೂ ಸೀತೆಗೆ ಸಮಾಧಾನವಾಗಲಿಲ್ಲ. ಅವಳು ಕೋಪಗೊಂಡು ಲಕ್ಷ್ಮಣನಿಗೆ ವಿಪರೀತವಾಗಿ ಬೈದಳು. ಆತನ ಚಾರಿತ್ರ್ಯದ ಬಗ್ಗೆ ಸಂಶಯಪಟ್ಟಳು. ಸೀತೆಯ ಮಾತಿನಿಂದ ಲಕ್ಷ್ಮಣನಿಗೆ ವ್ಯಥೆಯಾಯಿತು. ಶ್ರೀರಾಮನ ಆಜ್ಞೆಯನ್ನು ಮೀರಿ ಸೀತೆಯನ್ನು ಒಂಟಿಯಾಗಿ ಬಿಟ್ಟುಹೋಗುವದು ಯೋಗ್ಯವಿರಲಿಲ್ಲ ; ಆದರೆ ಸೀತೆಯ ಒತ್ತಾಯದಿಂದ ಆತನು ಶ್ರೀರಾಮನ ಶೋಧಾರ್ಥ ಹೊರಟನು. ಸೀತೆಯು ಏಕಾಕಿಯಾಗಿದ್ದಾಗ ಆಕೆಯನ್ನು ಅಪಹರಿಸುವ ಉದ್ದೇಶದಿಂದ ಬಂದ ರಾವಣನಿಗೆ ಇದರಿಂದಾಗಿ ಯೋಗ್ಯವಾದ ಸಂಧಿಯು ದೊರಕಿತು. ರಾವಣನು ಬ್ರಾಹ್ಮಣನ ವೇಷವನ್ನು ಧರಿಸಿದ್ದರಿಂದ ಸೀತೆಗೆ ಆತನ ನಿಜರೂಪವು ತಿಳಿಯಲಿಲ್ಲ. ಆಸನ, ಪಾದ್ಯಫಲಾದಿಗಳಿಂದ ಆಕೆಯು ಅತಿಥಿಯಾಗಿ ಬಂದ ಆತನನ್ನು ಸ್ವಾಗತಿಸಿದಳು.

> ಬ್ರಾಹ್ಮಣಶ್ಚಾತಿಥಿಶ್ಚೈಷ ಅಮಕ್ತೋ ಹಿ ಶಪೇತ ಮಾಮ್ । ೨

"ಈ ಬ್ರಾಹ್ಮಣನ ರೂಪದಿಂದ ಒಬ್ಬ ಅತಿಥಿಯು ಬಂದಿದ್ದಾನೆ ; ಅವನು ಕೇಳಿದ ಪ್ರಶ್ನೆಗಳಿಗೆ ನಾನು ಉತ್ತರ ಕೊಡದಿದ್ದರೆ ಆತನು ನನ್ನನ್ನು ಶಪಿಸಬಹುದು" ಎಂದು ಸೀತೆಗೆ ಅನಿಸಿತು.

ನಿಜದಲ್ಲಿ ಶಾಪವನ್ನು ನುಡಿದಿಲ್ಲ. ಕೇವಲ ಶಾಪ ಕೊಡಬಹುದೆಂಬ ಭಯವನ್ನು ವ್ಯಕ್ತಮಾಡಲಾಗಿದೆ. ಹೀಗಿರುವದರಿಂದ ಶಾಪದ ಸ್ವರೂಪವು ತಿಳಿದುಬರುವುದಿಲ್ಲ.

## ೨೬. ಶ್ರೀರಾಮ > ಪ್ರಸ್ರವಣ (ಪರ್ವತ), ನದಿ — ಅರಣ್ಯಕಾಂಡ / ೬೪

ಸೀತೆಯ ಶೋಧಕ್ಕಾಗಿ ಅಲೆದಾಡುತ್ತಿದ್ದಾಗ ಶ್ರೀರಾಮಲಕ್ಷ್ಮಣರು ದಾರಿಯಲ್ಲಿ ಅನೇಕ ವನ-ನದಿ-ಪರ್ವತಗಳನ್ನು ಕಂಡರು. ಸೀತೆಯು ಎಲ್ಲಿರುವಳು ?—ಎಂದು ಗೋದಾವರಿ ನದಿಯನ್ನು ಪ್ರಶ್ನಿಸಿದಾಗ ಅಲ್ಲಿಂದ ಯಾವ ಉತ್ತರವೂ ಬರಲಿಲ್ಲ. ಕಾಡಿನ ಪ್ರಾಣಿಗಳಿಗೆ ಅದೇ ಪ್ರಶ್ನೆಯನ್ನು ಕೇಳಿದಾಗ, ಅವು ದಕ್ಷಿಣಾಭಿಮುಖವಾಗಿ ನಿಂತು ಮೇಲಿಂದಮೇಲೆ ಆಕಾಶದತ್ತ ದೃಷ್ಟಿಸಿದವು. ಇದರಿಂದ ಸೀತೆಯು ಆಕಾಶಮಾರ್ಗವಾಗಿ ದಕ್ಷಿಣದಿಕ್ಕಿಗೆ ಹೋಗಿರಬಹುದೆಂದು ಲಕ್ಷ್ಮಣನು ಊಹಿಸಿದನು. ಅವರಿಬ್ಬರೂ ದಕ್ಷಿಣ ದಿಕ್ಕಿನತ್ತ ಹೊರಟರು. ಶ್ರೀರಾಮನು ಶೋಕಾಕುಲನಾಗಿದ್ದನು. ಅವರು ಹಾದಿಯಲ್ಲಿ ಹೂವುಗಳು ಬಿದ್ದುದನ್ನು ಕಂಡರು. ಶ್ರೀರಾಮನೇ ಆ ಹೂಗಳನ್ನು ಸೀತೆಯ ಮುಡಿಗೆಂದು ತಂದುಕೊಟ್ಟಿದ್ದನು ; ಆದಕಾರಣ ಶ್ರೀರಾಮನು ಅವುಗಳನ್ನು ಗುರುತಿಸಿದನು. ಅಲ್ಲಿಂದ ಅವರು ಪ್ರಸ್ರವಣಪರ್ವತಕ್ಕೆ ತೆರಳಿದರು. ಶ್ರೀರಾಮನು ಆ ಪರ್ವತಕ್ಕೆ 'ಸೀತೆ ಎಲ್ಲಿ ?' ಎಂದು ಕೇಳಿದನು. ಪರ್ವತವು ಯಾವ ಉತ್ತರವನ್ನೂ ಕೊಡಲಿಲ್ಲ ; ಶ್ರೀರಾಮನು ತುಂಬ ರೇಗಿಕೊಂಡನು. ಆತನು ಆ ಪರ್ವತವನ್ನು ಕುರಿತು, "ಎಲೈ ಪರ್ವತರಾಜನೇ, ನೀನು ನನ್ನ ಹೊಂಬಣ್ಣದ ಸುಂದರಿಯಾದ ಸೀತೆಯು ಎಲ್ಲಿದ್ದಾಳೆಂಬುದನ್ನು ತೋರಿಸು ! ಇಲ್ಲವಾದರೆ ನಾನು ನಿನ್ನ ಶಿಖರಗಳನ್ನೆಲ್ಲ ಧ್ವಂಸಗೊಳಿಸುವೆ" ಎಂದನು. ಆಗ ಆ ಪರ್ವತರಾಜನು ಸೀತೆಯು ಹೋದ ಮಾರ್ಗದ ಕುರುಹುಗಳನ್ನು ಸೂಚಿಸಿದನು. ಪ್ರತ್ಯಕ್ಷದಲ್ಲಿ ಆತನಿಗೆ ಸೀತೆಯನ್ನು ತೋರಿಸಲಾಗಲಿಲ್ಲ. ಆಗ ಶ್ರೀರಾಮನು ಪರ್ವತವನ್ನುದ್ದೇಶಿಸಿ ಈ ರೀತಿ ಎಂದನು :

> ಮಮ ಬಾಣಾಗ್ನಿನಿರ್ದಗ್ಧೋ ಭಸ್ಮೀಭೂತೋ ಭವಿಷ್ಯಸಿ ॥ ೩೩ ॥
> ಅಸೇವ್ಯಃ ಸರ್ವತಶ್ಚೈವ ನಿಸ್ತೃಣದ್ರುಮಪಲ್ಲವಃ ॥ ೩೪ ॥

"ನನ್ನ ಬಾಣವು ಅಗ್ನಿಯಾಗಿ ನಿನ್ನನ್ನು ದಹಿಸುವ ಕಾರಣ ನೀನು ಸುಟ್ಟು ಬೂದಿಯಾಗುವೆ. ನಿನ್ನಲ್ಲಿ ಬೆಳೆದ ತೃಣ, ವೃಕ್ಷಪಲ್ಲವಗಳು ಇಲ್ಲವಾಗಿ ನಿನ್ನ ಆಶ್ರಯಕ್ಕೆ ಯಾರೂ ಬರಲಾರರು !"

ಈ ರೀತಿ ನುಡಿದು, ಶ್ರೀರಾಮನು ಲಕ್ಷ್ಮಣನಿಗೆ ಹೀಗೆ ಹೇಳಿದನು :

> ಇಮಾಂ ವಾ ಸರಿತಂ ಚಾದ್ಯ ಶೋಷಯಿಷ್ಯಾಮಿ ಲಕ್ಷ್ಮಣ ॥ ೩೪ ॥
> ಯದಿ ನಾಖ್ಯಾತಿ ಮೇ ಸೀತಾಮದ್ಯ ಚಂದ್ರನಿಭಾನನಾಮ್ ॥ ೩೫ ॥

"ಈ ನದಿಯು ಪೂರ್ಣಚಂದ್ರನಂತೆ ಆಹ್ಲಾದಕರ ಮುಖವುಳ್ಳ ನನ್ನ ಸೀತೆಯು ಎಲ್ಲಿರುವಳೆಂಬುದನ್ನು ಹೇಳದಿದ್ದರೆ ನಾನು ಈ ನದಿಯನ್ನು ಒಣಗಿಸಿಬಿಡುತ್ತೇನೆ."

ಇದು ಕಟ್ಟಳೆಯ ಶಾಪವಾಗಿದೆ.

## ೨೭. ಸ್ಥೂಲಶಿರಾ > ಕಬಂಧ ಅರಣ್ಯಕಾಂಡ / ೭೧

ಕಬಂಧನು ಶ್ರೀರಾಮನಿಗೆ ತನ್ನ ಪೂರ್ವವೃತ್ತಾಂತವನ್ನು ಹೇಳುತ್ತಿದ್ದಾನೆ :

"ಪೂರ್ವದಲ್ಲಿ ನನ್ನ ದೇಹವು ಇಂದ್ರ, ಚಂದ್ರ, ಸೂರ್ಯರ ದೇಹದಂತೆ ದಿವ್ಯವಾಗಿತ್ತು. ನನ್ನಲ್ಲಿ ಪ್ರಚಂಡ ಬಲಶೌರ್ಯಗಳಿದ್ದವು. ಆಗ ನಾನು ಭೀಕರವಾದ ರಾಕ್ಷಸರೂಪವನ್ನು ಧರಿಸಿ ಅರಣ್ಯದಲ್ಲಿದ್ದ ಋಷಿಗಳನ್ನು ಅಂಜಿಸುತ್ತಿದ್ದೆನು. ಒಂದು ಸಲ 'ಸ್ಥೂಲಶಿರಾ' ಎಂಬ ಋಷಿಯು ವನದಲ್ಲಿ ಹಣ್ಣುಹಂಪಲುಗಳನ್ನು ಅರಸುತ್ತಿದ್ದಾಗ ನಾನು ಆತನ ಮೇಲೆ ಧಾವಿಸಿದೆ. ಆಗ ಆ ಋಷಿಗೆ ವಿಪರೀತ ಸಿಟ್ಟುಬಂದಿತು.

ತೇನಾಹಮುಕ್ತಃ ಪ್ರೇಕ್ಷ್ಯೈವಂ ಘೋರಶಾಪಾಭಿಧಾಯಿನಾ ॥ ೪ ॥
ಏತದೇವಂ ನೃಶಂಸಂ ತೇ ರೂಪಮಸ್ತು ವಿಗರ್ಹಿತಮ್ ।
ಸ ಮಯಾ ಯಾಚಿತಃ ಕ್ರುದ್ಧಃ ಶಾಪಸ್ಯಾಂತೋ ಭವೇದಿತಿ ॥ ೫ ॥
ಅಭಿಶಾಪಕೃತಸ್ಯೇತಿ ತೇನೇದಂ ಭಾಷಿತಂ ವಚಃ ।
ಯದಾ ಛಿತ್ತ್ವಾ ಭುಜೌ ರಾಮಸ್ತ್ವಾಂ ದಹೇದ್ವಿಜನೇ ವನೇ ॥ ೬ ॥
ತದಾ ತ್ವಂ ಪ್ರಾಪ್ಸ್ಯಸೇ ರೂಪಂ ಸ್ವಮೇವ ವಿಪುಲಂ ಶುಭಮ್ । ೭

'ಋಷಿಯು ನಿನ್ನ ಶರೀರವು ಇದೇ ತರಹ ನಿಂದಾಸ್ಪದವಾಗಲಿ !' ಎಂದು ಘೋರಶಾಪವನ್ನು ನುಡಿದನು. ಆಗ ನಾನು 'ನಿಮ್ಮ ಮೇಲೇರಿಬಂದ ಕಾರಣ ನೀವು ಶಪಿಸಿದ್ದೀರಿ ; ಆ ಶಾಪವು ಇಲ್ಲದಾಗಲಿ' ಎಂದು ಪ್ರಾರ್ಥಿಸಿದೆ. ಆಗ ಸ್ಥೂಲಶಿರಾ ಋಷಿಯು ಈ ರೀತಿ ಹೇಳಿದನು : "ಶ್ರೀರಾಮನು ನಿರ್ಜನವಾದ ಈ ವನಕ್ಕೆ ಬಂದು ನಿನ್ನ ಭುಜಗಳನ್ನು ಕತ್ತರಿಸಿ ನಿನ್ನನ್ನು ಸುಟ್ಟುಹಾಕುವನು. ಆಗ ಪುನಃ ನಿನ್ನ ಶುಭವಾದ, ಭವ್ಯವಾದ ಸ್ವರೂಪವು ನಿನಗೆ ಪ್ರಾಪ್ತವಾಗುತ್ತದೆ."

ಈ ಶಾಪದ ಉತ್ತರಾರ್ಧದಲ್ಲ ಉಃಶಾಪವಿದ್ದು ಅದು 'ಯಾಚಿತ'ವಾಗಿದೆ.

## ೨೮. ಇಂದ್ರ > ಕಬಂಧ ಅರಣ್ಯಕಾಂಡ / ೭೧

ಕಬಂಧನು ಇಂದ್ರನಿಂದ ಪಡೆದ ಶಾಪದ ವೃತ್ತಾಂತವನ್ನು ಶ್ರೀರಾಮನಿಗೆ ವಿವರಿಸುತ್ತಿದ್ದಾನೆ :

"ನನಗೆ ರಾಕ್ಷಸರೂಪವು ದೊರೆತನಂತರ ನಾನು ಉಗ್ರತಪಸ್ಸನ್ನು ಆಚರಿಸಿ ಬ್ರಹ್ಮದೇವನನ್ನು ಸಂತುಷ್ಟಗೊಳಿಸಿದೆ. ಆಗ ಬ್ರಹ್ಮದೇವನು ನನಗೆ ದೀರ್ಘಾಯುಸ್ಸನ್ನು ದಯಪಾಲಿಸಿದನು. ಅದರಿಂದ ನನ್ನಲ್ಲಿ ಅಹಂಕಾರ ಉಂಟಾಯಿತು. ನಾನು ದೀರ್ಘಾಯುವಾದ್ದರಿಂದ ಇಂದ್ರನು ನನ್ನನ್ನು ಯಾವ ರೀತಿಯಿಂದಲೂ ವಧಿಸಲಾರನೆಂದು ಇಂದ್ರನ ಮೇಲೆ ಏರಿಹೋದೆನು. ಆಗ ಇಂದ್ರನು ಸಹಸ್ರ ಮೊನೆಗಳಿದ್ದ ವಜ್ರಾಯುಧವನ್ನು ನನ್ನ ಮೇಲೆ ಎಸೆದನು. ಆ ಆಘಾತದಿಂದ ನನ್ನ ಎರಡೂ ತೊಡೆಗಳು ಮತ್ತು ನನ್ನ ಶಿರವು ದೇಹದಲ್ಲಿ ಹತ್ತಿಕ್ಕಲ್ಪಟ್ಟವು. ಇಂದ್ರನು ನನ್ನನ್ನು ಕೊಲ್ಲಲಿಲ್ಲ ; ಬ್ರಹ್ಮದೇವನ ಮಾತು ಸತ್ಯವಾಗಲಿ" ಎಂದು ನುಡಿದನು. ಹೀಗೆ ಮುಖಹಸ್ತಗಳು ಭಗ್ನವಾದನಂತರ 'ಆಹಾರವನ್ನು ಸೇವಿಸುವುದು ಹೇಗೆ ? ದೀರ್ಘಕಾಲ ಜೀವಿಸಿರುವುದು ಹೇಗೆ ?' ಎಂದು ಅಳುಕುತ್ತ ನಾನು ಅವನನ್ನು ಕೇಳಿದಾಗ,

...ಶಕ್ರೋ ಮೇ ಬಾಹೂ ಯೋಜನಮಾಯತೌ ॥ ೧೩ ॥
ತದಾ ಚಾಸ್ಯಂ ಚ ಮೇ ಕುಕ್ಷೌ ತೀಕ್ಷ್ಣದಂಷ್ಟ್ರಮಕಲ್ಪಯತ್ ।
ಸೋಽಹಂ ಭುಜಾಭ್ಯಾಂ ದಿರ್ಘಾಭ್ಯಾಂ ಸಂಕ್ಷಿಪ್ಯಾಸ್ಮಿನ್ವನೇಚರಾನ್ ॥ ೧೪ ॥
ಸಿಂಹದ್ವಿಪಮೃಗವ್ಯಾಘ್ರಾನ್ ಭಕ್ಷಯಾಮಿ ಸಮಂತತಃ ।
ಸ ತು ಮಾಮಬ್ರವೀದಿಂದ್ರೋ ಯದಾ ರಾಮಃ ಸಲಕ್ಷ್ಮಣಃ ॥ ೧೫ ॥
ಛೇತ್ಸ್ಯತೇ ಸಮರೇ ಬಾಹೂ ತದಾ ಸ್ವರ್ಗಂ ಗಮಿಷ್ಯಸಿ । ೧೬

"ಇಂದ್ರನು ನನಗೆ ಒಂದು ಯೋಜನದಷ್ಟು ದೀರ್ಘವಾದ ಬಾಹುಗಳನ್ನು ಕೊಟ್ಟನು. ಉದರದಲ್ಲಿ ತೀಕ್ಷ್ಣವಾದ ಹಲ್ಲುಗಳುಳ್ಳ ಮುಖವನ್ನು ನಿರ್ಮಿಸಿದನು. ಆ ದಿನದಿಂದ ನನ್ನ ದೀರ್ಘವಾದ ಬಾಹುಗಳಿಂದ ಈ ಅರಣ್ಯದಲ್ಲಿ ಸಂಚರಿಸುವ ಸಿಂಹ, ಆನೆ, ವ್ಯಾಘ್ರ, ಮೃಗ, ಚಿರತೆಗಳನ್ನು ಹಿಡಿದು ಹಿಡಿದು ಭಕ್ಷಿಸುತ್ತಿದ್ದೇನೆ ; ಅದಿರಲಿ ! 'ಲಕ್ಷ್ಮಣನನ್ನು ಒಡಗೂಡಿದ ಶ್ರೀರಾಮನು ಯುದ್ಧದಲ್ಲಿ ನಿನ್ನ ಭುಜಗಳನ್ನು ತುಂಡರಿಸುವನು ;

ಆಗ ನೀನು ಸ್ವರ್ಗಕ್ಕೆ ಹೋಗುವೆ !' ಎಂದು ಇಂದ್ರನು ನನಗೆ ಹೇಳಿದ್ದಾನೆ.

"ನಾನು ಅಂದಿನಿಂದ ಶ್ರೀರಾಮನ ಬರುವಿಕೆಯನ್ನು ಕಾಯುತ್ತಿದ್ದೇನೆ. ಶ್ರೀರಾಮನು ಯಾರು ಎಂಬುದು ನನಗೆ ಗೊತ್ತಿಲ್ಲ. ಕೈಗೆ ಬಂದುದನ್ನು ಲಪಟಾಯಿಸುವ ಕ್ರಮವನ್ನು ಕೈಕೊಂಡರೆ ಎಂದಾದರೂ ಶ್ರೀರಾಮನ ಭೇಟಿಯಾಗಬಹುದೆಂಬ ಭರವಸೆ ನನಗಿತ್ತು. ನೀನೇ ಆ ಶ್ರೀರಾಮನೆಂದು ತಿಳಿದುಬಂದಿದ್ದರಿಂದ ನನಗೆ ಪರಮಾನಂದವಾಗಿದೆ. ನೀನೇ ನನಗೆ ಅಗ್ನಿಯನ್ನು ಕೊಟ್ಟು ನನ್ನ ಉತ್ತರಕ್ರಿಯಾದಿಗಳನ್ನು ನೆರವೇರಿಸು" ಎಂದು ಶ್ರೀರಾಮನಿಗೆ ಬಿನ್ನವಿಸಿದನು. "ದಹನವಾದಮೇಲೆ ನನ್ನ ಪೂರ್ವರೂಪವು ನನಗೆ ಪ್ರಾಪ್ತವಾಗುತ್ತದೆ ; ಆಗ ನಿನಗೆ ಯುಕ್ತಿಯ ಮಾತುಗಳನ್ನು ತಿಳಿಸಿ ಗೆಳೆತನವನ್ನು ಸಾರ್ಥಕಗೊಳಿಸುತ್ತೇನೆ. ಆದರೆ ಅದುವರೆಗೆ ಯಾವ ರಾಕ್ಷಸನು ನಿನ್ನ ಪತ್ನಿಯನ್ನು ಅಪಹರಿಸಿದ್ದಾನೆಂದು ಹೇಳುವದು ನನ್ನಿಂದ ಅಸಾಧ್ಯ. ಏಕೆಂದರೆ

ಅದಗ್ಧಸ್ಯ ಹಿ ವಿಜ್ಞಾತುಂ ಶಕ್ತಿರಸ್ತಿ ನ ಮೇ ಪ್ರಭೋ । ೨೯

"ಎಂದಿನವರೆಗೆ ಈ ನನ್ನ ದೇಹವು ಸುಟ್ಟುಹೋಗುವುದಿಲ್ಲವೋ ಅಂದಿನವರೆಗೆ ಅದನ್ನು ಅರಿಯುವ ಶಕ್ತಿ ನನ್ನಲ್ಲಿ ಇರುವುದಿಲ್ಲ.

ವಿಜ್ಞಾನಂ ಹಿ ಮಹದ್ ಭ್ರಷ್ಟಂ ಶಾಪದೋಷೇಣ ರಾಘವಮ್ ॥ ೩೦ ॥

"ಹೇ ರಾಘವನೆ ! ನನ್ನ ದುಷ್ಕೃತ್ಯದಿಂದ (ಶಾಪದಿಂದ) ಈ ವಿರೂಪವು ನನಗೆ ದೊರೆತಿದೆ. ನಿನ್ನ ಹೊರತು ಯಾರಿಂದಲೂ ನನಗೆ ಸಾವು ಬರುವಂತಿಲ್ಲ. ಆದ್ದರಿಂದ ನನ್ನ ಪ್ರಾಣ ತೆಗೆದು ನನ್ನನ್ನು ಉಪಕರಿಸು" ಎಂದು ಕಬಂಧನು ಶ್ರೀರಾಮನಿಗೆ ಹೇಳಿದನು.

ಇಂದ್ರನು ಕಬಂಧನ ವಿಕೃತಿಯನ್ನು, ಶಾಪಕೊಟ್ಟು ಮಾಡಿರಲಿಲ್ಲ ; ವಜ್ರಪ್ರಹಾರದಿಂದ ಮಾಡಿರುವದರಿಂದ ಇದಕ್ಕೆ ಶಾಪವೆಂದೆನ್ನಲಾಗದು. ಇಂದ್ರನ ಶಾಪೋದ್ಧಾರವು ಕಂಡುಬಂದಿಲ್ಲ. ಶಾಪದ ಮುಕ್ತಿಯ ಉಲ್ಲೇಖವು ಮಾತ್ರ ನಿಚ್ಚಳವಾಗಿದೆ. ಅದು ಅಯಾಚಿತವಿರಬೇಕೆಂಬ ನಿಶ್ಚಿತ ಕಲ್ಪನೆ ಬರುವುದಿಲ್ಲ.

## ೨೯. ? > ದನು — ಕಿಷ್ಕಿಂಧಾಕಾಂಡ / ೪

ಶ್ರೀರಾಮಲಕ್ಷ್ಮಣರ ಭೇಟಿಯನಂತರ ಮಹಾತ್ಮನಾದ ಸುಗ್ರೀವನಿಗೆ ಸಹಕಾರ ದೊರೆತು ರಾಜ್ಯಪ್ರಾಪ್ತಿಯಾಗುವದೆಂಬ ಭರವಸೆ ಹನುಮಂತನಿಗಾಯಿತು. ಅವರೊಡನೆ ಮಿತ್ರತ್ವವನ್ನು ಬೆಳೆಸುವುದು ಉಚಿತವೆನಿಸಿತು. ಶ್ರೀರಾಮಲಕ್ಷ್ಮಣರು ಯಾವ ಕಾರ್ಯಕ್ಕಾಗಿ ವಿವಿಧ ಪ್ರಕಾರದ ಹಿಂಸ್ರಪ್ರಾಣಿಗಳಿದ್ದ ಈ ಘೋರ ಅರಣ್ಯಕ್ಕೆ ಬಂದಿದ್ದಾರೆಂದು ಹನುಮಂತನು ಅವರನ್ನು ಕೇಳಿದನು. ಆಗ ಶ್ರೀರಾಮನು ಅದನ್ನು ವಿವರಿಸಲು ಲಕ್ಷ್ಮಣನಿಗೆ ಹೇಳಿದನು. ಆಗ ಲಕ್ಷ್ಮಣನು ತಾವಿಬ್ಬರೂ ದಶರಥರಾಜನ ಪುತ್ರರೆಂದು ಹೇಳಿ, ದಶರಥರಾಜನ ಬಗೆಗಿನ, ವನವಾಸದ ಬಗೆಗಿನ ವೃತ್ತಾಂತವನ್ನು ವಿವರಿಸಿದನು. "ಶ್ರೀರಾಮನ ಪತ್ನಿಯಾದ ಸೀತೆಯು ಒಂಟಿಯಾಗಿದ್ದುದನ್ನು ಕಂಡು ಯಾವನೊಬ್ಬ ರಾಕ್ಷಸನು ಆಕೆಯನ್ನು ಅಪಹರಿಸಿದ್ದಾನೆ, ಆ ರಾಕ್ಷಸನು ಯಾರೆಂಬುದು ನಮಗೆ ಗೊತ್ತಿಲ್ಲ. ಸೀತೆಯನ್ನು ಹುಡುಕುತ್ತ ಅಲೆದಾಡುತ್ತಿದ್ದ ನಾವು ಸಾಂಪ್ರತ ಇಲ್ಲಿಗೆ ಬಂದಿದ್ದೇವೆ. ಏಕೆಂದರೆ,

ದನುರ್ನಾಮ ದಿತೇಃ ಪುತ್ರಃ ಶಾಪಾದ್ರಾಕ್ಷಸತಾಂ ಗತಃ ।
ಆಖ್ಯಾತಸ್ತೇನ ಸುಗ್ರೀವಃ ಸಮರ್ಥೋ ವಾನರಾಧಿಪಃ ॥ ೧೫ ॥
ಸ ಜ್ಞಾಸ್ಯತಿ ಮಹಾವೀರ್ಯಸ್ತವ ಭಾರ್ಯಾಪಹಾರಿಣಮ್ ।
ಏವಮುಕ್ತ್ವಾ ದನುಃ ಸ್ವರ್ಗಂ ಭ್ರಾಜಮಾನೋ ದಿವಂಗತಃ ॥ ೧೬ ॥

"ದಿತಿಯ ಮಗನಾದ 'ದನು' ಎಂಬಾತನು ಶಾಪದಿಂದ ರಾಕ್ಷಸನಾಗಿದ್ದನು. ವಾನರರಾಜನಾದ ಸುಗ್ರೀವನು ಶಕ್ತಿಶಾಲಿಯೂ ಸಮರ್ಥನೂ ಇರುವನೆಂದು ಆತನಿಂದ ನಮಗೆ ತಿಳಿಯಿತು. 'ಆ ಮಹಾವೀರನಾದ ಸುಗ್ರೀವನು ನಿನ್ನ ಪತ್ನಿಯನ್ನು ಅಪಹರಿಸಿದವನನ್ನು ಕಂಡುಹಿಡಿಯುವನು' ಎಂದು ಹೇಳಿ ತೇಜಸ್ವಿಯಾದ ದನುವು ಆಕಾಶ ಮಾರ್ಗದಿಂದ ಸ್ವರ್ಗಕ್ಕೆ ಹೋದನು."

ಈ ಶಾಪವನ್ನು ಕೊಟ್ಟವರು ಯಾರು ? ಯಾವ ತಪ್ಪಿಗಾಗಿ ಕೊಟ್ಟರು ? ಶಾಪವು ಯಾವ ಬಗೆಯದಿತ್ತು ? ಇತ್ಯಾದಿಗಳ ಬಗ್ಗೆ ಬಹಳ ಸಂದಿಗ್ಧತೆ ಇದೆ.

ಇಲ್ಲಿ ಕೇವಲ ಶಾಪದ ಉಲ್ಲೇಖ ಮಾತ್ರವಿದೆ.

## ೩೦. ಮತಂಗ > ವಾಲಿ, ವಾನರ — ಕಿಷ್ಕಿಂಧಾಕಾಂಡ / ೧೧

ಸುಗ್ರೀವನು ಶ್ರೀರಾಮನಿಗೆ ವಾಲಿಯ ಪ್ರಚಂಡಪೌರುಷ, ಸಾಮರ್ಥ್ಯ, ಧೈರ್ಯಗಳ ಬಗ್ಗೆ ಹೇಳುತ್ತಿದ್ದಾನೆ.

"ವರಪ್ರಾಪ್ತಿಯಾದನಂತರ ದುಂದುಭಿ ಎಂಬ ರಾಕ್ಷಸನು ಉನ್ಮತ್ತನಾಗಿದ್ದನು. ತನ್ನ ಶಕ್ತಿಬಲಗಳ ಬಗ್ಗೆ ಆತನಿಗೆ ಬಹಳ ಜಂಬವುಂಟಾಗಿತ್ತು. ಕಾಳಗದಲ್ಲಿ ತನ್ನನ್ನು ಸೋಲಿಸುವವರು ಯಾರೂ ಇಲ್ಲ, ತಾನು ಅಜಿಂಕ್ಯನೆಂಬ ಅಹಂಕಾರದಿಂದ ಅವನು ಮೆರೆಯುತ್ತಿದ್ದನು. ಆತನು ಸಮುದ್ರರಾಜನನ್ನು ಯುದ್ಧಕ್ಕೆ ಆಹ್ವಾನಿಸಿದನು. ಸಮುದ್ರರಾಜನು 'ನಿನ್ನೊಡನೆ ಯುದ್ಧಮಾಡಲು ನಾನು ಶಕ್ತನಲ್ಲ ; ಹಿಮವಾನ ಪರ್ವತರಾಜನು ನಿನ್ನೊಡನೆ ಯುದ್ಧಕ್ಕೆ ತಕ್ಕವನು' ಎಂದು ಹೇಳಿದನು. ದುಂದುಭಿಯು ಹಿಮವಾನನನ್ನು ಯುದ್ಧಕ್ಕೆ ಆಹ್ವಾನಿಸಿದನು. 'ತಪಸ್ವಿಗಳಿಗೆ ಆಶ್ರಯಸ್ಥಾನನಾದ ನಾನು ರಣರಂಗದಲ್ಲಿ ಪ್ರವೀಣನಲ್ಲ ; ಕಿಷ್ಕಿಂಧಾಪಟ್ಟಣದಲ್ಲಿರುವ ವಾಲಿಯು ನಿನಗೆ ಸರಿಸಾಟಿಯಾದ ಏಕಮೇವ ವೀರನಾಗಿದ್ದಾನೆ' ಎಂದು ಹೇಳಿದನು. ದುಂದುಭಿಯು ಕೋಣದ ರೂಪವನ್ನು ಧರಿಸಿ ಕಿಷ್ಕಿಂಧೆಯ ಬಳಿಯ ಮರಗಿಡಗಳನ್ನು ಧ್ವಂಸಗೊಳಿಸುತ್ತ, ಭೂಮಿಯು ನಡುಗುವಂತೆ ಭೀಕರವಾಗಿ ಗುಟುರುಹಾಕುತ್ತ ವಾಲಿಯ ಬಳಿಗೆ ಬಂದನು. ಅದನ್ನು ಕೇಳಿ ವಾಲಿಯು ಆತನನ್ನು ಎದುರಿಸಿದನು. ವಾಲಿಯು ದುಂದುಭಿಯ ಅತಿಶಯ ಉನ್ಮತ್ತ, ಉದ್ಧಟ ಮಾತುಗಳನ್ನು ಕೇಳಿ ಕೊಂಬುಗಳಿಂದ ಅವನನ್ನು ಎತ್ತಿ ದೂರಕ್ಕೆ ಎಸೆದನು. ಚೆನ್ನಾಗಿ ಒದೆ ಹಾಕಿ, ಮುಷ್ಟಿಗಳಿಂದ ಗುದ್ದಿ, ಮೊಳಕಾಲಿನಿಂದ ಜಜ್ಜಿ, ಮರಗಳಿಂದ ಹೊಡೆದು ಆತನನ್ನು ಹಣ್ಣುಗಾಯಿ-ನೀರುಗಾಯಿಯನ್ನಾಗಿ ಮಾಡಿದನು. ದುಂದುಭಿಯ ಕಿವಿಮೂಗುಗಳಿಂದ ರಕ್ತಸ್ರಾವವಾಗಹತ್ತಿತು. ಆಗ ವಾಲಿಯು ಆತನನ್ನು ಸಾಯಿಸಿ ಯೋಜನದಷ್ಟು ದೂರ ಎಸೆದಾಗ, ಆ ಕೋಣದ ಬಾಯಿಂದ ತೊಟ್ಟಿಕ್ಕುತ್ತಿದ್ದ ರಕ್ತದ ಹನಿಗಳು ಮತಂಗ ಋಷಿಯ ಆಶ್ರಮದಲ್ಲಿ ಬಿದ್ದವು. ಇದನ್ನು ವೀಕ್ಷಿಸಿದ ಋಷಿಗೆ ತಾಳಲಾರದ ಕೋಪ ಬಂದಿತು. ನಡೆದುದೇನೆಂಬುದನ್ನು ನೋಡಿದಾಗ ಗುಡ್ಡದ ಗಾತ್ರದ ಒಂದು ಕೋಣವು ಕುಸಿದುಬಿದ್ದದ್ದು ಕಂಡಿತು. ಈ ಕೃತ್ಯವು ಕಪಿಯದೆಂದು ಮುನಿಯು ತನ್ನ ತಪೋಬಲದಿಂದ ಅರಿತುಕೊಂಡು ಆ ವಾನರನನ್ನು ಶಪಿಸಿದನು :

> ಇಹ ತೇನಾಪ್ರವೇಷ್ಟವ್ಯಂ ಪ್ರವಿಷ್ಟಸ್ಯ ವಧೋಭವೇತ್ ।
> ವನಂ ಮತ್ಸಂಶ್ರಯಂ ಯೇನ ದೂಷಿತಂ ರುಧಿರಸ್ರವೈಃ ॥ ೫೩ ॥
> ಕ್ಷಿಪತಾ ಪಾದಪಾಶ್ಚೇಮೇ ಸಂಭಗ್ನಾಶ್ಚಾಸುರೀಂ ತನುಮ್ ।
> ಸಮಂತಾದಾಶ್ರಮಂ ಪೂರ್ಣಂ ಯೋಜನಂ ಮಾಮಕಂ ಯದಿ ॥ ೫೪ ॥
> ಆಗಮಿಷ್ಯತಿ ದುರ್ಬುದ್ಧಿರ್ವ್ಯಕ್ತಂ ಸ ನ ಭವಿಷ್ಯತಿ ।
> ಯೇ ಚಾಸ್ಯ ಸಚಿವಾಃ ಕೇಚಿತ್ಸಂಶ್ರಿತಾ ಮಾಮಕಂ ವನಮ್ ॥ ೫೫ ॥
> ನ ಚ ತೈರಿಹ ವಸ್ತವ್ಯಂ ಶ್ರುತ್ವಾ ಯಾಂತು ಯಥಾಸುಖಮ್ ।
> ತೇಽಪಿ ವಾ ಯದಿ ತಿಷ್ಠಂತಿ ಶಪಿಷ್ಯೇ ತಾನಪಿ ಧ್ರುವಮ್ ॥ ೫೬ ॥
> ವನೇಽಸ್ಮಿನ್ಮಾಮಕೇ ನಿತ್ಯಂ ಪುತ್ರವತ್ಪರಿರಕ್ಷಿತೇ ।
> ಪತ್ರಾಂಕುರವಿನಾಶಾಯ ಫಲಮೂಲಾಭವಾಯ ಚ ॥ ೫೭ ॥
> ದಿವಸಶ್ಚಾದ್ಯ ಮರ್ಯಾದಾ ಯಂ ದ್ರಷ್ಟಾ ಶ್ವೋಽಸ್ಮಿ ವಾನರಮ್ ।
> ಬಹುವರ್ಷಸಹಸ್ರಾಣಿ ಸ ವೈ ಶೈಲೋ ಭವಿಷ್ಯತಿ ॥ ೫೮ ॥

"ಯಾರಿಂದ ಈ ದುಷ್ಕರ್ಮವು ನಡೆದಿದೆಯೋ ಆತನು ಈ ಸ್ಥಳವನ್ನು ಪ್ರವೇಶಿಸಕೂಡದು. ಯಾವನು ನನ್ನ ಆಶ್ರಮದ ಸುತ್ತಲಿರುವ ವನವನ್ನು ರಕ್ತಸ್ರಾವದಿಂದ ದೂಷಿತಗೊಳಿಸಿರುವನೋ ಅವನು ಇಲ್ಲಿಗೆ ಪ್ರವೇಶಿಸಿದರೆ ಸತ್ತುಹೋಗುವನು. ರಾಕ್ಷಸರ ದೇಹವನ್ನು ಇಲ್ಲಿಗೆ ಎಸೆಯುವಾಗ ಯಾವನು ಈ ವೃಕ್ಷಗಳನ್ನು ಮುರಿದುಹಾಕಿದ್ದಾನೆಯೋ ಆತನು ನನ್ನ ಆಶ್ರಮದಿಂದ ಒಂದು ಯೋಜನ ಅಂತರದಲ್ಲಿರತಕ್ಕದ್ದು. ಆ ದುರ್ಬುದ್ಧಿಯು ಅದಕ್ಕೂ ಹತ್ತಿರಕ್ಕೆ ಬಂದರೆ ಜೀವಸಹಿತ ಉಳಿಯಲಾರನು. ಅವನ ಮಂತ್ರಿಗಳು

ಯಾರಾದರೂ ಈಗ ನನ್ನ ವನದಲ್ಲಿ ಆಶ್ರಯಿಸುತ್ತಿದ್ದರೆ ನನ್ನ ಈ ವಚನಗಳನ್ನು ಕೇಳಿದ ಕೂಡಲೇ ಅವರು ಇಲ್ಲಿ ಉಳಿಯದೇ ಮನಬಂದೆಡೆ ಹೊರಟುಹೋಗಬೇಕು. ಅವರು ಇಲ್ಲಿಯೇ ಉಳಿದರೆ ನಾನು ಅವರಿಗೂ ಶಾಪ ಕೊಡುವೆ. ನಾನು ಸ್ವಂತ ಮಗನನ್ನು ಪೋಷಿಸುವಂತೆ ಈ ವನವನ್ನು ನೋಡಿಕೊಂಡಿದ್ದೇನೆ. ಈ ವನದಲ್ಲಿ ಕಪಿಗಳ ಆಗಮನವು ಹಣ್ಣು, ಚಿಗುರು, ಎಲೆ, ಬೇರು ಇವೆಲ್ಲವುಗಳ ನಾಶಕ್ಕೆ ಕಾರಣವಾಗುತ್ತದೆ. ಒಂದು ದಿನದ ಅವಕಾಶವನ್ನು ಕೊಡುತ್ತೇನೆ. ವಾಲಿಯ ಸಂಬಂಧವಿದ್ದ ವಾನರನು ನಾಳೆಯಿಂದ ನನ್ನ ಕಣ್ಣಿಗೆ ಕಂಡರೆ ಆತನು ಬಹುವರ್ಷಗಳವರೆಗೆ ಪರ್ವತವಾಗಿ ಬೀಳುವನು." ವಾಲಿ ಮತ್ತು ಸುಗ್ರೀವರಲ್ಲಿ ನಡೆದ ಯುದ್ಧದಲ್ಲಿ ಭಯಭೀತನಾದ ಸುಗ್ರೀವನು ಮತಂಗಋಷಿಯ ವನವನ್ನು ಪ್ರವೇಶಿಸಿದನು.

ನಂ ಪ್ರವಿಷ್ಟಂ ವನಂ ದೃಷ್ಟ್ವಾ ವಾಲೀ ಶಾಪಭಯಾತ್ ತತಃ । ೨೩ ।

"ಆಗ ಮಾತ್ರ ವಾಲಿಯು ಶಾಪದ ಭಯದಿಂದ ಸುಗ್ರೀವನನ್ನು ಅಟ್ಟಿಸಿಕೊಂಡು ಹೋಗಲಿಲ್ಲ."

ವಾಲಿಯು ಈ ಶಾಪವಾಣಿಯನ್ನು ಅರಿತು ಭಯಭೀತನಾದನು. ಅವನು ಆಶ್ರಮಕ್ಕೆ ಹೋಗಿ ಮತಂಗ ಋಷಿಯನ್ನು ಪ್ರಾರ್ಥಿಸಿದನು ; ಆದರೆ ಮತಂಗನು ಯಾವ ಮಾತನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ ; ಅಂದಿನಿಂದ ವಾಲಿಯು ಋಷ್ಯಮೂಕ ಪರ್ವತದ ಸಮೀಪಕ್ಕೆ ಹೋಗದಂತಾದನು.

ಕಿಷ್ಕಿಂಧಾಕಾಂಡ / ೪೬

ವಾಲಿಯು ಸುಗ್ರೀವನನ್ನು ವಧಿಸಬೇಕೆಂದು ಅವನನ್ನು ಬೆನ್ನಟ್ಟಿದಾಗ ಆತನು ಸ್ವಂತದ ರಕ್ಷಣೆಗಾಗಿ ಆಶ್ರಯಸ್ಥಾನವನ್ನು ಹೊಂದಲು ಭೂಮಿಯ ಎಲ್ಲ ದಿಕ್ಕುಗಳಲ್ಲಿ ಅಲೆದಾಡಿದನು. ಹಿಮಾಲಯಪರ್ವತವನ್ನು, ಮೇರುಪರ್ವತವನ್ನು, ಉತ್ತರಸಮುದ್ರವನ್ನು ದಾಟಿದರೂ ಆತನಿಗೆ ಸುರಕ್ಷಿತವಾದ ಸ್ಥಾನವು ದೊರಕಲಿಲ್ಲ. ಹೀಗೆ ಸುಗ್ರೀವನು ಬಹಳೇ ದುಃಖಿತನಾದ ಸಮಯದಲ್ಲಿ ಮತಂಗಋಷಿಯು ವಾಲಿಗೆ ಕೊಟ್ಟ ಶಾಪದ ಸ್ಮರಣೆಯು ಹನುಮಂತನಿಗಾಯಿತು. ಆತನು ಸುಗ್ರೀವನಿಗೆ ಈ ರೀತಿ ನುಡಿದನು :

ಇದಾನೀಂ ಮೇ ಸ್ಮೃತಂ ರಾಜನ್ಯಥಾ ವಾಲೀ ಹರೀಶ್ವರಃ ॥ ೨೧ ॥
ಮತಂಗೇನ ತದಾ ಶಪ್ತೋ ಹ್ಯಸ್ಮಿನ್ನಾಶ್ರಮಮಂಡಲೇ ।
ಪ್ರವಿಶೇದ್ಯದಿ ವೈ ವಾಲೀ ಮೂರ್ಧಾಸ್ಯ ಶತಧಾ ಭವೇತ್ ॥ ೨೨ ॥
ತತ್ರ ವಾಸಃ ಸುಖೋಽಸ್ಮಾಕಂ ನಿರುದ್ವಿಗ್ನೋ ಭವಿಷ್ಯತಿ । ೨೩

"ಎಲೈ ರಾಜನೇ, ಈ ಸಂಗತಿಯು ಈಗ ಸ್ಮರಣೆಗೆ ಬಂದಿದೆ. ಮತಂಗ ಋಷಿಯು 'ವಾಲಿಯು ಈ ಆಶ್ರಮವನ್ನು ಪ್ರವೇಶಿಸಿದರೆ ಆತನ ತಲೆಯು ನೂರು ಹೋಳಾಗಲಿ' ಎಂಬ ಶಾಪವನ್ನು ಕೊಟ್ಟಿದ್ದಾನೆ. ಆದ್ದರಿಂದ ಈ ಮತಂಗಾಶ್ರಮದಲ್ಲಿ ನಮ್ಮ ವಾಸವು ನಿರ್ಭಯವೂ ಸುಖಕರವೂ ಆಗುತ್ತದೆ."

ಹನುಮಂತನ ಹೇಳಿಕೆಯಂತೆ ಸುಗ್ರೀವನು ಋಷ್ಯಮೂಕಪರ್ವತದ ಮೇಲೆ ನಿರಾತಂಕನಾಗಿ ಇದ್ದುಬಿಟ್ಟನು.

ಈ ಶಾಪವು ಕಟ್ಟಳೆಯದಾಗಿದೆ. ಕಟ್ಟಳೆಯನ್ನು ಪಾಲಿಸದಿದ್ದರೆ ಶಾಪದ ಪರಿಣಾಮವಾಗುತ್ತದೆ ; ಅನ್ಯಥಾ. ಆಗುವದಿಲ್ಲ.

## ೩೧. ಕಂಡು > ವನ

ಕಿಷ್ಕಿಂಧಾಕಾಂಡ / ೪೮

ಹನುಮಂತನು ಸೀತೆಯನ್ನು ಶೋಧಿಸಲು ತಾರ ಮತ್ತು ಅಂಗದ ಇವರೊಂದಿಗೆ ವಿಂಧ್ಯಪರ್ವತದಲ್ಲಿಯ ಗುಹೆಗಳನ್ನು, ವನಗಳನ್ನು ಅವಲೋಕಿಸಿದನು. ಆದರೆ ಪ್ರಯೋಜನವಾಗಲಿಲ್ಲ. ಅವರು ಅರಣ್ಯದಲ್ಲಿ ದೊರೆತ ಫಲ-ಮೂಲಗಳನ್ನು ಭಕ್ಷಿಸಿ ದಕ್ಷಿಣ ದಿಕ್ಕಿನಲ್ಲಿದ್ದ ಒಂದು ಕಾಡನ್ನು ತಲುಪಿದರು. ಈ ಕಾಡಿನಲ್ಲಿದ್ದ ಮರಗಳಿಗೆ ಎಲೆ, ಹೂ, ಹಣ್ಣು ಯಾವವೂ ಇರಲಿಲ್ಲ. ಅಲ್ಲಿ ಜಲಾಶಯಗಳೂ ಇರಲಿಲ್ಲ ; ನದಿಗಳಲ್ಲಿ ನೀರು ಇರಲಿಲ್ಲ. ಕೋಣ, ಆನೆ, ಹುಲಿ ಮೊದಲಾದ ಪ್ರಾಣಿಗಳು, ಪಕ್ಷಿಗಳು ಕೂಡ ಇರಲಿಲ್ಲ. 'ಕಂಡು' ಎಂಬ ತಪೋಧನನಾದ ಋಷಿಯು ಇಂಥ ಬರಡಾದ ವನಪ್ರದೇಶದಲ್ಲಿ ವಾಸವಾಗಿದ್ದನು. ಈ ಋಷಿಯ ಹತ್ತು ವರ್ಷ ಪ್ರಾಯದ ಮಗನು ಮರಣಹೊಂದಿದ್ದನು. ಈ ಕಾರಣದಿಂದ ಋಷಿಯು ಕ್ರುದ್ಧನಾಗಿದ್ದನು. ಆತನ ಸಿಟ್ಟು ಮತ್ತು

ತಪಸ್ಸಿನ ನಿಯಮಗಳು ಬಹಳೇ ಕಠೋರವಿದ್ದುದರಿಂದ ಅವನ ಕಣ್ಣೆದುರಿಗೆ ಹಾಯುವ ಧೈರ್ಯವು ಯಾರಲ್ಲೂ ಇರಲಿಲ್ಲ.

ತೇನ ಧರ್ಮಾತ್ಮನಾ ಶಪ್ತಂ ಕೃತ್ಸ್ನಂ ತತ್ರ ಮಹದ್ವನಮ್ ॥ ೧೪ ॥
ಅಶರಣ್ಯಂ ದುರಾಧರ್ಷಂ ಮೃಗಪಕ್ಷಿವಿವರ್ಜಿತಮ್ । ೧೫

ಆ ಮಹಾತ್ಮನಾದ ಋಷಿಯು "ಈ ಪ್ರಚಂಡ ವನವು ಮೃಗರಹಿತ, ಪಕ್ಷಿರಹಿತವಾಗುವದು ; ಇದು ಯಾರಿಗೂ ಆಶ್ರಯಸ್ಥಾನವಾಗಲಾರದು ; ಈ ವನವನ್ನು ಪ್ರವೇಶಿಸುವದು ದುಸ್ತರವಾಗುವದು" ಎಂಬ ಶಾಪವನ್ನು ಈ ವನಕ್ಕೆ ಕೊಟ್ಟಿದ್ದನು.

ಹನುಮಂತನು ಇಂಥ ಭೀಕರ ಪ್ರದೇಶವನ್ನು ಪ್ರವೇಶಿಸಿ ಸೀತೆಯನ್ನು ಶೋಧಿಸಿದನು ; ಆದರೆ ಸೀತೆಯ ಅಥವಾ ರಾವಣನ ಸುಳಿವು ಸಿಗಲಿಲ್ಲ.

ಈ ವನದ ಹೆಸರಿನ ಉಲ್ಲೇಖವಿಲ್ಲ.

### ೩೨. ಋಷಿ > ಪುಂಜಿಕಸ್ಥಲಾ ಕಿಷ್ಕಿಂಧಾಕಾಂಡ / ೬೬

ಜಾಂಬವಾನನು ಹನುಮಂತನಿಗೆ ಆತನ ಜನ್ಮದ ಕಥೆಯನ್ನು ಹೇಳುತ್ತಾನೆ :

"ಅಂಜನಾ (ಅಂಜನಿ) ಇವಳು ಕೇಸರಿ ಎಂಬ ವಾನರನ ಪತ್ನಿ. ಪೂರ್ವಜನ್ಮದಲ್ಲಿ ಅವಳು ಪುಂಜಿಕಸ್ಥಲಾ ಎಂಬ ಹೆಸರಿನ ಖ್ಯಾತ ಅಪ್ಸರೆಯಾಗಿದ್ದಳು.

ವಿಖ್ಯಾತಾ ತ್ರಿಷು ಲೋಕೇಷು ರೂಪೇಣಾಪ್ರತಿಮಾ ಭುವಿ ।
ಅಭಿಶಾಪಾದಭೂತ್ತಾತ ಕಪಿತ್ವೇ ಕಾಮರೂಪಿಣೀ ॥ ೯ ॥

"ಅವಳು ಇಡೀ ಭೂಲೋಕದಲ್ಲಿ ಅತ್ಯಂತ ರೂಪವತಿಯೆಂದು ಖ್ಯಾತಿಯನ್ನು ಹೊಂದಿದ್ದಳು. ಒಬ್ಬ ಋಷಿಯ ಶಾಪದಿಂದಾಗಿ ಅವಳು ವಾನರಜನ್ಮವನ್ನು ಪಡೆದಿದ್ದಳು. ಏಕೆಂದರೆ ಅವಳು ಆ ಋಷಿಯನ್ನು ಅವಮಾನಿಸಿದ್ದಳು."

ಈ ಶಾಪವಿದ್ದರೂ ಅವಳು ತನ್ನ ಇಚ್ಛೆಯನುಸಾರ ರೂಪವನ್ನು ಬದಲಾಯಿಸಬಹುದಿತ್ತು. ಒಮ್ಮೆ ಅವಳು ಒಂದು ಪರ್ವತದ ತುದಿಯಲ್ಲಿದ್ದಾಗ ವಾಯುವು ಆಕೆಯ ವಸ್ತ್ರವನ್ನು ಹಾರಿಸಿದನು. ಆಕೆಯ ಸುಂದರವಾದ ಅಂಗಾಂಗಗಳನ್ನು ಕಂಡು ಕಾಮಪರವಶನಾದ ವಾಯುವು, ಆಕೆಯನ್ನು ಆಲಿಂಗಿಸಿ ತನ್ನ ತೇಜಸ್ಸನ್ನು (ವೀರ್ಯ) ಅವಳಲ್ಲಿ ಸ್ಥಾಪಿಸಿದನು. ಆಗ ಅವಳು ಗೊಂದಲಕ್ಕೀಡಾದಳು. ಪಾತಿವ್ರತ್ಯವು ಭ್ರಷ್ಟವಾಯಿತೆಂಬ ಭೀತಿಯು ಅವಳಿಗಾಯಿತು. ಆ ಭೀತಿಯು ವ್ಯರ್ಥವಾಗಿದೆ ಎಂದು ವಾಯುವು ಆಕೆಗೆ ತಿಳಿಸಿ ಹೇಳಿದನು. "ಮಾನಸಿಕ ಭೋಗದಿಂದ ತನ್ನ ತೇಜಸ್ಸನ್ನು ಅವಳಲ್ಲಿ ಇಟ್ಟ ಕಾರಣ ಆಕೆಗೆ ಅತ್ಯಂತ ಶೂರವೀರನಾದ, ಮಹಾತೇಜಸ್ವಿಯಾದ, ಬುದ್ಧಿವಂತನಾದ, ಪರಾಕ್ರಮಿಯಾದ ಮಗನು ಹುಟ್ಟುವನು ; ವಾಯುವಿನಂತೆ ಅವನು ಗಗನದಲ್ಲಿ ಸಂಚರಿಸಬಲ್ಲನು, ಸಮುದ್ರವನ್ನು ಉಲ್ಲಂಘಿಸಬಲ್ಲನು—" ಎಂಬ ಆಶ್ವಾಸನೆಯನ್ನು ಆಕೆಗೆ ಕೊಟ್ಟನು. ಆಕೆಯ ಮಗನೆಂದರೆ ಹನುಮಂತ.

ಈ ಶಾಪವನ್ನು ಕೊಟ್ಟ ಋಷಿಯ ಹೆಸರಿನ ಉಲ್ಲೇಖವಿಲ್ಲ. ಅವನು ಯಾವ ಕಾರಣಕ್ಕಾಗಿ ಶಾಪವನ್ನು ಕೊಟ್ಟಿದ್ದನು ಎಂಬುದರ ಮಾಹಿತಿಯೂ ಇಲ್ಲ. ಆಕೆಯ ಬಿನ್ನಹದ ಮೇರೆಗೆ ಋಷಿಯು ಆಕೆಗೆ ಉಃಶಾಪವನ್ನು ಕೊಟ್ಟಿದ್ದಾನೆ : ಆದ್ದರಿಂದ ಅವಳು ತನ್ನ ಇಷ್ಟದಂತೆ ವಾನರರೂಪವನ್ನು ಇಲ್ಲವೇ ಮನುಷ್ಯರೂಪವನ್ನು ಧರಿಸಬಹುದಿತ್ತು." (ಶ್ರೀರಾಮಕೋಶಾಂತರ್ಗತ ಹನುಮಾನಕೋಶ, ಪು. ೨)

### ೩೩. ? > ಲಂಕಾದೇವಿ ಸುಂದರಕಾಂಡ / ೩

ಲಂಕಾದೇವಿಯು ಹನುಮಂತನಿಗೆ ತನ್ನ ಚರಿತ್ರೆಯನ್ನು ಹೇಳುತ್ತಾಳೆ :

ಹನುಮಂತನು ಲಂಕೆಯತ್ತ ಹಾರಿಹೋಗುತ್ತಿದ್ದಾಗ ಲಂಕಾನಗರಿಯ ಅಧಿಷ್ಠಾತ್ರಿದೇವತೆಯಾದ ಲಂಕಾದೇವಿಯು ಆಕರಾಳವಿಕರಾಳ ಸ್ತ್ರೀರೂಪವನ್ನು ಧರಿಸಿ, ಭಯಂಕರವಾಗಿ ಗರ್ಜಿಸುತ್ತ ಹನುಮಂತನ

ಮುಂದೆ ಬಂದು ನಿಂತಳು. ರಾವಣನ ಸೈನ್ಯದಿಂದ ರಕ್ಷಿಸಲ್ಪಡುತ್ತಿದ್ದ ಲಂಕೆಯಲ್ಲಿ ಹನುಮಂತನಿಗೆ ಪ್ರವೇಶವು ಸಾಧ್ಯವಿಲ್ಲವೆಂದು ನಿಖರವಾಗಿ ಹೇಳಿದಳು. ಅವಳು ಹನುಮಂತನ ಆಗಮನದ ಉದ್ದೇಶವನ್ನು ಕೇಳಿದಾಗ, ಆತನು 'ಸತ್ಯವನ್ನು ಹೇಳುವೆ' ಎಂಬ ಆಶ್ವಾಸನೆಯನ್ನು ಕೊಟ್ಟು, ಅವಳು ಯಾರೆಂಬುದನ್ನು ಮೊದಲು ಹೇಳಬೇಕೆಂದು ಆಗ್ರಹಪಡಿಸಿದನು. ಅವಳು ಕೋಪಗೊಂಡು ಈ ರೀತಿ ಅಂದಳು : "ನಾನು ಅಜಿಂಕ್ಯಳು ; ಮಹಾತ್ಮನಾದ, ರಾಕ್ಷಸಾಧಿಪತಿಯಾದ ರಾವಣನ ಆಜ್ಞೆಯನ್ನು ಪಾಲಿಸುತ್ತಿದ್ದೇನೆ. ಅವನ ಆಜ್ಞೆಯಂತೆ ನಾನು ಲಂಕಾಪಟ್ಟಣವನ್ನು ರಕ್ಷಿಸುತ್ತಿದ್ದೇನೆ. ನೀನು ನನ್ನನ್ನು ಕಡೆಗಣಿಸಿ ಈ ನಗರವನ್ನು ಪ್ರವೇಶಿಸುವುದು ಎಂದಿಗೂ ಸಾಧ್ಯವಿಲ್ಲ. ನೀನು ಇಂದು ನನ್ನಿಂದ ವಧೆಯಾಗಲಿರುವೆ. ನೀನು ಅಸುನೀಗಿ ಚಿರವಾಗಿ ನಿದ್ರಿಸುವೆ. ನಾನೇ ಲಂಕಾದೇವಿ" ಎಂದಳು. ಆಗ ಹನುಮಂತನು, 'ಲಂಕಾನಗರವನ್ನು ಸುಮ್ಮನೆ ನೋಡಿಕೊಂಡು ಹೋಗುವ ಇಚ್ಛೆ ನನಗಿದೆ' ಎಂದು ಪ್ರಕಟಿಸಿದಾಗ ಆಕೆಯು ಭಯಂಕರವಾಗಿ ಗರ್ಜಿಸಿ ಆತನಿಗೆ ಒಂದೇ ಒಂದು ಬಲವಾದ ಏಟನ್ನು ಕೊಟ್ಟಳು. 'ಸ್ತ್ರೀ' ಇದ್ದುದರಿಂದ ಆಕೆಯನ್ನು ಕೊಲ್ಲಬಾರದೆಂದು ಹನುಮಂತನೂ ಆಕೆಯ ಕೆನ್ನೆಗೆ ಬಲವಾಗಿ ಹೊಡೆದನು. ಆ ಏಟಿನಿಂದ ಹತಬಲಳಾದ ಆ ನಿಶಾಚರಿಯು ಧೊಪ್ಪನೆ ಭೂಮಿಗೆ ಬಿದ್ದಳು. ಹನುಮಂತನಿಗೆ ಅವಳ ಬಗ್ಗೆ ಕನಿಕರವುಂಟಾಯಿತು. ಅವಳು ಬಿಕ್ಕಿಬಿಕ್ಕಿ ಅಳುತ್ತ ತನ್ನ ಪರಾಜಯವನ್ನು ಒಪ್ಪಿಕೊಂಡಳು. ಹನುಮಂತನನ್ನು ಪ್ರಸನ್ನವಾಗಲು ಪ್ರಾರ್ಥಿಸಿ 'ಅತಿಬಲಾಢ್ಯ ಪುರುಷರಿಗೆ ಶೋಭಿಸುವ ಹಾಗೆ ಶಾಸ್ತ್ರಮರ್ಯಾದೆಯನ್ನನುಸರಿಸಿ ಕ್ಷಮೆ ತೋರಬೇಕೆಂದು' ಹನುಮಂತನನ್ನು ಯಾಚಿಸಿದಳು ಮತ್ತು ಮುಂದೆ ಈ ರೀತಿ ಹೇಳಿದಳು : "ಬ್ರಹ್ಮದೇವನು ನನಗೆ ವರವನ್ನು ಕೊಟ್ಟಿದ್ದಾನೆ. 'ಯಾವ ವಾನರನು, ಎಂದು ತನ್ನ ಶೌರ್ಯದಿಂದ ನಿನ್ನನ್ನು ಸೋಲಿಸುವನೋ ಅಂದಿನಿಂದ ರಾಕ್ಷಸಕುಲಕ್ಕೆ ಭಯವಿದೆ. 'ನಿನ್ನ ಭೇಟಿಯಿಂದ ಆ ಸಮಯವು ಬಂದೊದಗಿದೆ. ಸೀತೆಯ ನಿಮಿತ್ತದಿಂದ ದುರಾತ್ಮನಾದ ರಾವಣನ ಮತ್ತು ಸಕಲ ರಾಕ್ಷಸರ ವಿನಾಶಕಾಲವು ಸಮೀಪಿಸಿದೆ. ಎಲೈ ಹನುಮಂತನೇ, ನೀನು ಲಂಕಾನಗರವನ್ನು ಪ್ರವೇಶಿಸು ; ನಿನ್ನ ಇಷ್ಟಕಾರ್ಯವನ್ನು ಪೂರೈಸು !" ಎಂದು ಲಂಕಾದೇವಿಯು ಹೇಳಿದಳು.

ಪ್ರವಿಶ್ಯ ಶಾಪೋಪಹತಾಂ ಹರೀಶ್ವರ ।
ಪುರೀಂ ಶುಭಾಂ ರಾಕ್ಷಸಮುಖ್ಯಪಾಲಿತಾಮ್ । ೫೧

ಪ್ರಮುಖ ರಾಕ್ಷಸರಿಂದ ರಕ್ಷಿಸಲ್ಪಟ್ಟ, ಶಾಪಗ್ರಸ್ತವಾದ ಈ ನಗರವನ್ನು ಪ್ರವೇಶಿಸು. ಲಂಕಾದಹನದ ವರ್ಣನೆಯಲ್ಲಿಯೂ ಈ ಕೆಳಗಿನ ಉಲ್ಲೇಖವು ಕೊಂಡುಬರುತ್ತದೆ :

ಸುಂದರಕಾಂಡ / ೫೪

ಹನೂಮತಃ ಕ್ರೋಧಬಲಾಭಿಭೂತಾ ।
ಬಭೂವ ಶಾಪೋಪಹತೇವ ಲಂಕಾ ॥

ಹನುಮಂತನ ಕ್ರೋಧದಿಂದ ಮತ್ತು ಬಲದಿಂದ ಪೀಡಿತವಾದ ಆ ಲಂಕಾನಗರವು ಅಗ್ನಿಜ್ವಾಲೆಗಳಿಂದ ಮುಸುಕಿಹೋಯಿತು. ಯೋಧರೆಲ್ಲರೂ ಚೆಲ್ಲಾಪಿಲ್ಲಿಯಾದರು. ಲಂಕಾನಗರವು ಶಾಪದಗ್ಧವಾದಂತೆ ಕಂಡಿತು.

'ಶಾಪೋಪಹತ'ವೆಂದು ಲಂಕೆಯ ಉಲ್ಲೇಖವು ರಾಮಾಯಣದಲ್ಲಿ ಬಂದಿದ್ದರೂ ಯಾರು ಅದಕ್ಕೆ ಶಾಪಕೊಟ್ಟರು ? ಏಕೆ ಕೊಟ್ಟರು ? ಎಂಬ ಸಂಗತಿಗಳು ಸ್ಪಷ್ಟವಾಗಿಲ್ಲ. ಈ ಬಗ್ಗೆ ಯಾವ ಮಾಹಿತಿ ದೊರೆತಿಲ್ಲ. ಶಾಪವಿಮುಕ್ತಿಯ ಸಮಯವು ನಿರ್ಧರಿತವಿದ್ದರೂ ಶಾಪದ ಸ್ವರೂಪವು ಏನಿತ್ತೆಂಬುದು ಸ್ಪಷ್ಟವಾಗಿಲ್ಲ.

## ೩೪. ನಂದೀಶ್ವರ > ರಾವಣ

ಸುಂದರಕಾಂಡ / ೫೦

ಹನುಮಂತನನ್ನು ಹಿಡಿದು ರಾವಣನ ಸಭೆಗೆ ತಂದನಂತರ ಆತನನ್ನು ಕಂಡು ರಾವಣನು ಬಹಳ ಕುಪಿತನಾದನು. ಅವನ ಮನಸ್ಸು ಶಂಕೆಗೆ ಒಳಗಾಗಿತ್ತು. ಆತನು ಈ ತೇಜಸ್ಸುಳ್ಳ ವಾನರಾಧಿಪನ ಬಗ್ಗೆ ಆಲೋಚಿಸತೊಡಗಿದನು :

ಕಿಮೇಷ ಭಗವಾನ್ನಂದೀ ಭವೇತ್ಸಾಕ್ಷಾದಿಹಾಗತಃ ॥ ೨ ॥
ಯೇನ ಶಪ್ತೋಽಸ್ಮಿ ಕೈಲಾಸೇ ಮಯಾ ಪ್ರಹಸಿತೇ ಪುರಾ ।
ಸೋಽಯಂ ವಾನರಮೂರ್ತಿಃ ಸ್ಯಾತ್ ಕಿಂ ಸ್ವಿದ್ಬಾಣೋಽಪಿ ವಾಸುರಃ ॥ ३ ॥

"ಇದೇನು ? ಭಗವಾನ್ ನಂದಿಯೇ ಇಲ್ಲಿ ಪ್ರತ್ಯಕ್ಷನಾಗಿ ಬಂದಿರುವನೋ ? ಹಿಂದೆ ನಾನು ಕೈಲಾಸ ಪರ್ವತಕ್ಕೆ ಹೋದಾಗ ಆತನನ್ನು ಕಂಡು ಹಾಸ್ಯಮಾಡಿದ್ದೆ ; ಆಗ ಆತನು 'ನನ್ನ ಹಾಗೆ ಮುಖವುಳ್ಳವರಿಂದ ನಿನ್ನ ನಾಶವಾಗುವುದು' ಎಂದು ಶಾಪವನ್ನು ಉಸುರಿದ್ದನು. ನಂದಿಯಿಂದ ಕಳಿಸಲ್ಪಟ್ಟ ಬಾಣಾಸುರನೇ ವಾನರರೂಪವನ್ನು ತಾಳಿ ಇಲ್ಲಿ ಬಂದಿರುವನೋ ?" ಎಂದು ರಾವಣನ ಜ್ಞಾಪಕಕ್ಕೆ ಬಂದಿತು.

**ಯುದ್ಧಕಾಂಡ / ೬೦**

ಶ್ರೀರಾಮನ ಬಾಣಗಳಿಂದ ತ್ರಸ್ತನಾದ ರಾವಣನಿಗೆ ಹಿಂದೆ ಪಡೆದ ಶಾಪಗಳ ಸ್ಮರಣೆಯಾಯಿತು. 'ನಂದೀಶ್ವರನು ಕೊಟ್ಟ ಶಾಪದ ಸ್ಮರಣೆಯೂ ಆಯಿತು' ಎಂಬ ಉಲ್ಲೇಖವು ಕೆಳಗಿನ ಶ್ಲೋಕದಲ್ಲಿದೆ.

ಉಮಾ ನಂದೀಶ್ವರಶ್ಚಾಪಿ ರಂಭಾ ವರುಣಕನ್ಯಕಾ ॥ ೧೧ ॥
ಯಥೋಕ್ತಾಸ್ತನ್ಮಯಾ ಪ್ರಾಪ್ತಂ ನ ಮಿಥ್ಯಾ ಋಷಿಭಾಷಿತಮ್ । ೧೨

ಪೂರ್ವದಲ್ಲಿ ಉಮೆಯು, ನಂದಿಕೇಶ್ವರನು, ರಂಭೆಯು ಮತ್ತು ವರುಣಕನ್ಯೆಯರು ರಾವಣನಿಗೆ ಶಾಪವನ್ನು ಕೊಟ್ಟ ಉಲ್ಲೇಖವಿದೆ.

**ಉತ್ತರಕಾಂಡ / ೧೬**

ಅಗಸ್ತ್ಯನು ಶ್ರೀರಾಮನಿಗೆ ನಂದಿಯು ರಾವಣನಿಗೆ ಕೊಟ್ಟ ಶಾಪದ ವೃತ್ತಾಂತವನ್ನು ಹೇಳುತ್ತಾನೆ : ಕುಬೇರನನ್ನು ಜಯಿಸಿದನಂತರ ರಾವಣನು ಕುಬೇರನ ಪುಷ್ಪಕ ವಿಮಾನದಲ್ಲಿ ಸಂಚರಿಸುತ್ತ ಒಂದು ಪರ್ವತದ ಮೇಲೆ ಬಂದು ಇಳಿದನು. ಇಷ್ಟದಂತೆ ಸಂಚರಿಸುವ ಆ ವಿಮಾನವು ಆ ಪರ್ವತದ ಮೇಲೆ ಬಂದು ನಿಂತುಬಿಟ್ಟಿತು. ಕುಬೇರನೊಡನಿದ್ದ ವಿಮಾನದ ಸಂಬಂಧವು ಕಡಿದುಹೋಗಿದ್ದರಿಂದ ಹೀಗಾಗಿರಬಹುದೆಂದು ಮಾರೀಚನಿಗೆ ಅನಿಸಿತು. ಅದೇ ಸಮಯದಲ್ಲಿ ಕಪ್ಪು ಮತ್ತು ಕಂದು ಬಣ್ಣದಿಂದ ಕೂಡಿದ ದೃಢಕಾಯ, ಕುಳ್ಳ, ಮುಂಡಿಸಿದ ತಲೆಯುಳ್ಳ, ಚೋಟುಬಾಹುಗಳಿದ್ದ, ಪ್ರಚಂಡ ಹಾಗೂ ಭಯಂಕರನೆನಿಸುವ ಶಂಕರನ ಸೇವಕನಾದ ನಂದೀಶ್ವರನು ವಾನರರೂಪವನ್ನು ಧರಿಸಿ ರಾವಣನ ಮುಂದೆ ನಿಂತು ಮುಂದೆ ಹೋಗದಂತೆ ಅಡ್ಡಿಮಾಡಿದನು. 'ಪರ್ವತದ ಮೇಲೆ ಶಂಕರನ ಕ್ರೀಡೆ ನಡೆಯುತ್ತಿರಲು ಅಲ್ಲಿ ಯಾರಿಗೂ ಪ್ರವೇಶವಿಲ್ಲ !' ಎಂದು ಹೇಳಿದನು. 'ಯಾರು ಈ ಶಂಕರ ?' ಎಂದು ರಾವಣನು ಉದ್ಧಟನಾಗಿ ಕೇಳಿದನು. ಕೈಯಲ್ಲಿ ಝಳಪಿಸುವ ತ್ರಿಶೂಲವಿದ್ದ ನಂದಿಯು ಪ್ರತಿಶಂಕರನಂತೆ ವಿರಾಜಿಸುತ್ತಿದ್ದನು. ರಾವಣನ ಉದ್ಧಟತನವನ್ನು ಸಹಿಸದೇ ಆತನು ಕ್ರುದ್ಧನಾದನು. ಆ ರಾಕ್ಷಸನಿಗೆ ಈ ರೀತಿ ಅಂದನು :

ಯಸ್ಮಾದ್ವಾನರರೂಪಂ ಮಾಮವಜ್ಞಾಯ ದಶಾನನ ।
ಅಶನೀಪಾತಸಂಕಾಶಮಪಹಾಸಂ ಪ್ರಮುಕ್ತವಾನ್ ॥ ೧೬ ॥
ತಸ್ಮಾನ್ಮದ್ವೀರ್ಯಸಂಯುಕ್ತಾ ಮದ್ರೂಪಸಮತೇಜಸಃ ।
ಉತ್ಪತ್ಸ್ಯಂತಿ ವಧಾರ್ಥಂ ಹಿ ಕುಲಸ್ಯ ತವ ವಾನರಾಃ ॥ ೧೭ ॥
ನಖದಂಷ್ಟ್ರಾಯುಧಾಃ ಕ್ರೂರಾ ಮನಃಸಂಪಾತರಂಹಸಃ ।
ಯುದ್ಧೋನ್ಮತ್ತಾ ಬಲೋದ್ರಿಕ್ತಾಃ ಶೈಲಾ ಇವ ವಿಸರ್ಪಿಣಃ ॥ ೧೮ ॥
ತೇ ತವ ಪ್ರಬಲಂ ದರ್ಪಮುತ್ಸೇಧಂ ಚ ಪೃಥಗ್ವಿಧಮ್ ।
ವ್ಯಪನೇಷ್ಯಂತಿ ಸಂಭೂಯ ಸಹಾಮಾತ್ಯಸುತಸ್ಯ ಚ ॥ ೧೯ ॥
ಕಿಂತ್ವಿದಾನೀಂ ಮಯಾ ಶಕ್ಯಂ ಹಂತುಂ ತ್ವಾಂ ಹೇ ನಿಶಾಚರ ।
ನ ಹಂತವ್ಯೋ ಹತಸ್ತ್ವಂ ಹಿ ಪೂರ್ವಮೇವ ಸ್ವಕರ್ಮಭಿಃ ॥ ೨೦ ॥

"ಎಲೈ ದಶಾನನನೇ, ವಾನರರೂಪವನ್ನು ಧರಿಸಿದ ನನ್ನ ಅವಜ್ಞೆಮಾಡಿ ಸಿಡಿಲಿನಂತೆ ಆರ್ಭಟಿಸಿ ಅವಮರ್ಯಾದೆ ತೋರಿ ನಕ್ಕಿರುವೆ ; ಆದ್ದರಿಂದ ನನ್ನ ವೀರ್ಯವನ್ನು ಹೊಂದಿದ, ನನ್ನ ಹಾಗೆ ಪ್ರಭೆಯುಳ್ಳ, ರೂಪವಂತ ವಾನರರು ನಿನ್ನ ಕುಲದ ಸಂಹಾರಕ್ಕಾಗಿ ಹುಟ್ಟುವರು. ಎಲೈ ಕ್ರೂರನೇ, ತಮ್ಮ ಉಗುರುಗಳನ್ನು ಮತ್ತು ದಂತಗಳನ್ನು ಆಯುಧಗಳಂತೆ ಬಳಸುವವರು, ಮನಸ್ಸಿನ ವೇಗವಿದ್ದವರು, ಶಕ್ತಿಸಾಮರ್ಥ್ಯಗಳಿಂದ ಸ್ಫುರಣಗೊಳ್ಳುವವರು, ಮೈಮರೆತು ಯುದ್ಧದಲ್ಲಿ ಕಾದುವವರು, ಚಲಿಸುವ ಪರ್ವತಗಳಷ್ಟು ಪ್ರಚಂಡರು

ಆದ ವಾನರರು ಒಟ್ಟುಗೂಡಿ ನಿನ್ನ, ನಿನ್ನ ಮಂತ್ರಿಗಳ, ನಿನ್ನ ಪುತ್ರರೆಲ್ಲರ ಗರ್ವವನ್ನು, ಬಲವನ್ನು ನಾಮಶೇಷ ಮಾಡುವರು. ಎಲೈ ರಾಕ್ಷಸನೇ, ಈಗಲೇ ನನ್ನ ಕೈಯಿಂದಲೇ ನಿನ್ನ ವಧೆಯು ಸಾಧ್ಯವಿದ್ದರೂ ನಿನ್ನನ್ನು ಕೊಲ್ಲುವದು ಉಚಿತವಲ್ಲ ; ಏಕೆಂದರೆ ನಿನ್ನ ಕರ್ಮಗಳಿಂದ ಈ ಮೊದಲೇ ನೀನು ವಧಿಸಲ್ಪಟ್ಟಿರುವೆ."

ನಂದಿಯು ರಾವಣನಿಗೆ ಇಷ್ಟು ನಿಚ್ಚಳವಾಗಿ, ಆತನ ಭವಿಷ್ಯದ ಕಲ್ಪನೆಯನ್ನು ಕೊಟ್ಟಿದ್ದಾನೆ. ಇಷ್ಟಾದರೂ ರಾವಣನು ಶಂಕರನ ಅವಹೇಳನೆಯನ್ನು ನಿಲ್ಲಿಸಲಿಲ್ಲ. ಆ ಪರ್ವತವನ್ನೇ ಬುಡಮೇಲು ಮಾಡುವ ಉದ್ದೇಶದಿಂದ ರಾವಣನು ತನ್ನ ಕೈಗಳನ್ನು ಪರ್ವತದ ಅಡಿಯಲ್ಲಿ ಹಾಕಿದನು. ಆಗ ಶಂಕರನು ತನ್ನ ಪಾದದ ಹೆಬ್ಬೆರಳಿನಿಂದ ಪರ್ವತವನ್ನು ಅದುಮಿದಾಗ ರಾವಣನ ಕೈಗಳೆರಡೂ ಹತ್ತಿಕ್ಕಲ್ಪಟ್ಟವು. ಇದನ್ನು ಕಂಡು ಎಲ್ಲರೂ ಆಶ್ಚರ್ಯಭರಿತರಾದರು. ಶಂಕರನನ್ನು ಒಲಿಸಿಕೊಳ್ಳೆಂದು ರಾವಣನಿಗೆ ಹೇಳಿದರು. ರಾವಣನು ಶಂಕರನನ್ನು ಪ್ರಸನ್ನಗೊಳಿಸಿಕೊಂಡನು.

### ೩೫. ಬ್ರಹ್ಮದೇವ > ರಾವಣ — ಯುದ್ಧಕಾಂಡ / ೧೩

ರಾವಣನು ತನ್ನ ಜೀವನದಲ್ಲಿ ಒಂದು ತೀರ ಗುಟ್ಟಾಗಿದ್ದ ಘಟನೆಯನ್ನು ಮಹಾಪಾರ್ಶ್ವನ ಮುಂದೆ ಹೇಳುತ್ತಾನೆ :

ಸೀತೆಯನ್ನು ಅಪಹರಿಸಿ ತಂದನಂತರ ಆಕೆಯನ್ನು ಭದ್ರವಾದ ಕಾವಲಿನಲ್ಲಿ ಇಡಲಾಗಿತ್ತು. ರಾವಣನು ಸೀತೆಯ ವಿಷಯದಲ್ಲಿ ಕಾಮಾತುರತೆಯಿಂದ ಪೀಡಿತನಾಗಿದ್ದನು. ಆಗ ಆತನು ರಾಜಸಭಿಕರನ್ನು ಕರೆದು ತನ್ನ ಮನೋಗತವನ್ನು ಪ್ರಕಟಿಸಿದನು. ಆತನ ನಿಷ್ಠೆಯಲ್ಲಿದ್ದವರು ಆತನ ಇಚ್ಛೆಗೆ ತಲೆದೂಗಿದರು. ಕುಂಭಕರ್ಣನು ಶ್ರೀರಾಮನನ್ನು ವಧಿಸಿ, ಸೀತೆಯು ಸದಾಕಾಲವೂ ರಾವಣನ ಭೋಗಕ್ಕೆ ದೊರಕುವಂತೆ ಮಾಡುವ ಪ್ರತಿಜ್ಞೆಯನ್ನು ಮಾಡಿದನು. ರಾವಣನು ಸೀತೆಯನ್ನು ಬಲಾತ್ಕರಿಸಬೇಕೆಂದು ಒಬ್ಬ ಮಂತ್ರಿಯಾದ ಮಹಾಪಾರ್ಶ್ವನೆಂಬಾತನು ಪ್ರೋತ್ಸಾಹಿಸಿದನು. ಆ ಸಂದರ್ಭದಲ್ಲಿ ರಾವಣನು ಆತನಿಗೆ ಈ ರೀತಿ ಹೇಳಿದನು : "ಹಿಂದೊಮ್ಮೆ ಗಗನದಲ್ಲಿ ಅಗ್ನಿಜ್ವಾಲೆಯಂತಿದ್ದ ಪುಂಜಿಕಸ್ಥಲೆ ಎಂಬ ಅಪ್ಸರೆಯು ನನ್ನ ಭೀತಿಯಿಂದ ಮರೆಮರೆಯಾಗಿ, ಬ್ರಹ್ಮದೇವನ ಸ್ಥಾನಕ್ಕೆ ಹೋಗುತ್ತಿರುವದನ್ನು ನಾನು ಕಂಡೆನು. ಕೂಡಲೇ ನಾನು ಅವಳನ್ನು ಬಲಾತ್ಕಾರದಿಂದ ವಸ್ತ್ರಹೀನಳನ್ನಾಗಿ ಮಾಡಿ ಭೋಗಿಸಿಬಿಟ್ಟೆನು. ಆಗ ಅವಳು ಕಮಲಿನಿಯಂತೆ ಕಂಪಿಸುತ್ತ ಬ್ರಹ್ಮಲೋಕಕ್ಕೆ ಹೋದಳು. ನನ್ನ ಕೃತ್ಯವು ಬ್ರಹ್ಮನಿಗೆ ತಿಳಿದಾಗ ಆತನು ಸಿಟ್ಟಿನಿಂದ ಈ ರೀತಿ ನುಡಿದನು :

> ಅದ್ಯಪ್ರಭೃತಿ ಯಾಮನ್ಯಾಂ ಬಲಾನ್ನಾರೀಂ ಗಮಿಷ್ಯಸಿ ।
> ತದಾ ತೇ ಶತಧಾ ಮೂರ್ಧಾ ಫಲಿಷ್ಯತಿ ನ ಸಂಶಯಃ ॥ ೧೪ ॥

"ಈ ದಿನದಿಂದ ಯಾವದೇ ಪರಸ್ತ್ರೀಯನ್ನು ಬಲಾತ್ಕಾರದಿಂದ ಭೋಗಿಸಿದರೆ ತಕ್ಷಣ ನಿನ್ನ ತಲೆ ನೂರು ಹೋಳಾಗಿ ಸಿಡಿದುಹೋಗುವದರಲ್ಲಿ ಸಂದೇಹವಿಲ್ಲ."

ರಾವಣನು ಈ ರೀತಿ ಬ್ರಹ್ಮದೇವನ ಶಾಪಕ್ಕೆ ಭಯಪಟ್ಟಕಾರಣ, ವಿದೇಹದ ರಾಜಕನ್ಯೆಯಾದ ಸೀತೆಯನ್ನು ಶುಭಶಯ್ಯೆಯಲ್ಲಿ ಉಪಭೋಗಿಸಲು ಅಸಮರ್ಥನಾದನು.

ಇದು ಕಟ್ಟಳೆಯ ಶಾಪವಾಗಿದೆ.

### ೩೬. ಶುಕ > ಶ್ರೀರಾಮ — ಯುದ್ಧಕಾಂಡ / ೨೦

ರಾವಣನನ್ನು ವಧಿಸುವ ಕಾರ್ಯದಲ್ಲಿ ಶ್ರೀರಾಮನಿಗೆ ಸಹಾಯಮಾಡಲೆಂದು ಸುಗ್ರೀವನು ತನ್ನ ಸೈನ್ಯವನ್ನು ಸಮುದ್ರತೀರಕ್ಕೆ ತಂದು ನಿಲ್ಲಿಸಿದನು. ರಾವಣನ ಗುಪ್ತಚರನಾದ ಶಾರ್ದೂಲನು ರಾವಣನಿಗೆ ಮುಂಬರಲಿದ್ದ ಆಕ್ರಮಣದ ಮುನ್ಸೂಚನೆಯನ್ನು ಕೊಟ್ಟನು. ರಾವಣನಿಗೆ ತುಂಬ ಕೋಪ ಬಂದರೂ ಸುಗ್ರೀವನೊಡನೆ ಸಾಮೋಪಚಾರಕ್ಕಾಗಿ 'ಶುಕ'ನೆಂಬ ರಾಕ್ಷಸನನ್ನು ದೂತನನ್ನಾಗಿ ಕಳುಹಿಸಿದನು. ಶುಕನು ಪಕ್ಷಿಯ ವೇಷವನ್ನು ಧರಿಸಿ, ರಾವಣನ ಹೇಳಿಕೆಯನ್ನು ಸುಗ್ರೀವನಿಗೆ ಸ್ಪಷ್ಟವಾಗಿ ತಿಳಿಸಿದನು. ಆ ಸಮಯದಲ್ಲಿ ವಾನರರು ಆ ಪಕ್ಷಿಯ ಗರಿಗಳನ್ನು ಕಿತ್ತು ಅದಕ್ಕೆ ಉಪದ್ರವ ಕೊಡಲು ಆರಂಭಿಸಿದರು. ತಾನು ದೂತನೆಂದು ಬಂದಿರುವದ

ರಿಂದ ತನಗೆ ಈ ರೀತಿ ಉಪಟಳವನ್ನು ಕೊಡುವದು ಸರಿಯಲ್ಲವೆಂದನು. ಇದನ್ನು ಕೇಳಿ ಶ್ರೀರಾಮನು, 'ಆತನಿಗೆ ಉಪದ್ರವವನ್ನು ಮಾಡಕೂಡದು !' ಎಂದು ವಾನರರಿಗೆ ನಿಷ್ಠುರವಾಗಿ ಹೇಳಿದನು. ಶುಕನು ದೂತನಾಗಿರದೇ ರಾವಣನ ಗುಪ್ತಚರನಾಗಿರಬೇಕೆಂಬ ಸಂದೇಹವು ಅಂಗದನಿಗೆ ಬಂದಿತು. ಸುಗ್ರೀವನೆದುರು ಅದನ್ನು ವ್ಯಕ್ತಪಡಿಸಿದನು. ಅಷ್ಟೇ ಅಲ್ಲದೆ ಶುಕನನ್ನು ಲಂಕೆಗೆ ಮರಳಿ ಹೋಗಗೊಡದೆ ಸೆರೆಹಿಡಿಯಬೇಕೆಂದು ಸ್ಪಷ್ಟ ಮತವನ್ನಿತ್ತನು. ಆಗ ಸುಗ್ರೀವನ ಆಜ್ಞೆಯಂತೆ ವಾನರರು ಆಕಾಶದತ್ತ ಹಾರಿ ಶುಕಪಕ್ಷಿರೂಪಧಾರಿಯಾದ ರಾಕ್ಷಸನನ್ನು ಬಂಧಿಸಿ, ಆತನನ್ನು ಗಾಸಿಗೊಳಿಸಹತ್ತಿದರು. ಆಗ ಶುಕನು ಶ್ರೀರಾಮನಿಗೆ ಇಂತೆಂದನು :

'ಈ ಕಪಿಗಳು ನನ್ನ ಗರಿಗಳನ್ನು ಕೀಳುತ್ತಿದ್ದಾರೆ ; ನನ್ನ ಕಣ್ಣುಗಳನ್ನು ತಿವಿಯುತ್ತಿದ್ದಾರೆ' ಆದಕಾರಣ -

> ಯಾಂ ಚ ರಾತ್ರಿಂ ಮರಿಷ್ಯಾಮಿ ಜಾಯೇ ರಾತ್ರಿಂ ಚ ಯಾಮಹಮ್ ।
> ಏತಸ್ಮಿನ್ನಂತರೇ ಕಾಲೇ ಯನ್ಮಯಾ ಹ್ಯಶುಭಂ ಕೃತಮ್ ।
> ಸರ್ವಂ ತದುಪಪದ್ಯೇಥಾ ಜಹ್ಯಾಂ ಚೇದ್ಯದಿ ಜೀವಿತಮ್ ॥ ೩೩ ॥

"ನಾನು ಇಲ್ಲಿ ಸತ್ತರೆ, ನನ್ನ ಹುಟ್ಟಿನಿಂದ ಸಾಯುವವರೆಗೆ ನನ್ನಿಂದ ನಡೆದ ಪಾತಕಗಳು ನಿನಗೆ ಅಂಟಲಿ" ಎಂದನು.

ಆತನ ಆಕ್ರೋಶವನ್ನು ಕೇಳಿ ಶ್ರೀರಾಮನಿಗೆ ಕನಿಕರವೆನಿಸಿತು. "ಆಗಮಿಸಿದ ದೂತನನ್ನು ಬಿಡುಗಡೆ ಮಾಡಿರಿ" ಎಂದು ವಾನರರಿಗೆ ಆಜ್ಞಾಪಿಸಿದನು.

ಇದು ಶಾಪವೋ ? ಕಳವಳದ ಉದ್ಗಾರವೋ ? ಶಾಪವಿದ್ದರೆ ಅದನ್ನು ಕಟ್ಟಳೆಯದೆನ್ನಬಹುದು. ಅದನ್ನು ಕೊಡುವ ಸಿದ್ಧಿಯು ಶುಕನಿಗೆ ಎಲ್ಲಿಂದ ಬಂದಿತು ? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ರಾಕ್ಷಸರಿಗೆ ಶಾಪ-ವರಗಳು ಪ್ರಾಪ್ತವಾಗಿದ್ದರೂ ಅವುಗಳನ್ನು ಕೊಡುವ ಸಾಮರ್ಥ್ಯ ಮಾತ್ರ ತಪಃಸಾಧನಾದಿಗಳಿಂದಲೂ ಅವರಿಗೆ ಕೈವಶವಾಗಿರಲಿಲ್ಲವೆಂದು ತೋರುತ್ತದೆ.

## ೩೭. ಬ್ರಹ್ಮದೇವ > ಕುಂಭಕರ್ಣ ಯುದ್ಧಕಾಂಡ / ೬೦

ಯಃಕಶ್ಚಿತ್ ಮಾನವನೊಬ್ಬನಿಂದ ಪರಾಭೂತನಾಗುವ ಸಂದರ್ಭ ರಾವಣನನ್ನು ಮುಳ್ಳಿನಂತೆ ಚುಚ್ಚುತ್ತಿತ್ತು. ವೇದವತಿಯ ನುಡಿಗಳು, ಉಮಾ, ರಂಭಾ, ನಂದೀಶ್ವರ ಮತ್ತು ವರುಣ ಕನ್ಯೆಯರ ಶಾಪಗಳ ನೆನಪು ಆತನಿಗಾಯಿತು. ಆ ಶಾಪಗಳೇ ತನ್ನ ಪರಾಭವಕ್ಕೆ ಕಾರಣವೆಂದು ರಾವಣನು ಮನಗಂಡನು. ಮಹಾ ಬಲಾಢ್ಯ ಸಹೋದರನಾದ ಕುಂಭಕರ್ಣನ ಮೇಲೆಯೇ ಆತನ ಭವಿಷ್ಯವು ಅವಲಂಬಿಸಿತ್ತು ; ಆದರೆ ಕುಂಭಕರ್ಣನು ಗಾಢನಿದ್ರೆಯಲ್ಲಿದ್ದನು. ಆತನನ್ನು ನಿದ್ರೆಯಿಂದ ಎಚ್ಚರಿಸುವ ಪ್ರಯತ್ನ ನಡೆದಾಗ ಒಂದು ಶಾಪದ ಉಲ್ಲೇಖ ಕಂಡುಬರುತ್ತದೆ.

> ಬ್ರಹ್ಮಶಾಪಾಭಿಭೂತಸ್ತು ಕುಂಭಕರ್ಣೋ ವಿಬೋಧ್ಯತಾಮ್ । ೧೪

ಕುಂಭಕರ್ಣನನ್ನು ಎಚ್ಚರಿಸುವ ಹಲವು ಪ್ರಯತ್ನಗಳು ವಿಫಲವಾದವು. ಏಕೆಂದರೆ ಆತನ ನಿದ್ರೆಯು ಶಾಪಜನ್ಯವಿತ್ತೆಂಬ ಉಲ್ಲೇಖವಿದೆ.

> ಶಾಪಸ್ಯ ವಶಮಾಪನ್ನಸ್ತತಃ ಕ್ರುದ್ಧಾ ನಿಶಾಚರಾಃ ॥ ೪೯ ॥

ಶಾಪಾಧೀನನಾದ ಕುಂಭಕರ್ಣನು ಎಚ್ಚರವಾಗದೇ ಇದ್ದುದರಿಂದ ಅಲ್ಲಿ ಸೇರಿದ ರಾಕ್ಷಸರು ಕುಪಿತರಾದರು.

ಯುದ್ಧಕಾಂಡ / ೬೧

ಶ್ರೀರಾಮನ ವಿನಂತಿಯ ಮೇರೆಗೆ ವಿಭೀಷಣನು ಕುಂಭಕರ್ಣನ ಬಗ್ಗೆ ಹೇಳುತ್ತಾನೆ :

ಕುಂಭಕರ್ಣನು ವಿಶ್ರವಸನ ಪರಾಕ್ರಮಿಯಾದ ಪುತ್ರನು ; ಬೇರೆ ಯಾವ ರಾಕ್ಷಸನೂ ಆತನಿಗೆ ಸರಿಸಾಟಿಯಲ್ಲ ; ಆತನು ಸಂಗ್ರಾಮದಲ್ಲಿ ದೇವದಾನವ, ಭುಜಂಗ, ರಾಕ್ಷಸ, ಯಕ್ಷ, ಗಂಧರ್ವ, ಪನ್ನಗ, ವಿದ್ಯಾಧರ ಆದಿ ಎಲ್ಲರನ್ನೂ ಸೋಲಿಸಿದ್ದಾನೆ. ಕುಂಭಕರ್ಣನನ್ನು ವಧಿಸುವುದು ದೇವತೆಗಳಿಗೂ ಸಾಧ್ಯವಾಗಿಲ್ಲ

ಆತನು ರಾಕ್ಷಸರಲ್ಲಿ ಅತ್ಯಂತ ತೇಜಸ್ವಿಯೂ, ವರಪ್ರಾಪ್ತಿಯಿಂದ ತುಂಬ ಬಲಶಾಲಿಯೂ ಆಗಿದ್ದಾನೆ. ಆತನು ರಣರಂಗದಲ್ಲಿ ಇಂದ್ರನ ಐರಾವತದ ದಂತವನ್ನು ಮುರಿದಿದ್ದಾನೆ. ಆತನು ಸಾವಿರಾರು ಜನರನ್ನು ಭಕ್ಷಿಸಲು ಪ್ರಾರಂಭಿಸಿದಾಗ ಭಯಗೊಂಡ ಪ್ರಜೆಗಳು ಇಂದ್ರನಿಗೆ ಮೊರೆಹೋದರು. ಇಂದ್ರನು ವಜ್ರಪ್ರಹಾರವನ್ನು ಮಾಡಿದ ತರುವಾಯವೂ, ಪ್ರಜೆಗಳಿಗೆ ಇನ್ನೂ ಅಧಿಕತಾಪವನ್ನು ಕೊಡಲಾರಂಭಿಸಿದನು. ಇಂದ್ರನನ್ನೂ ಹತಬಲನನ್ನಾಗಿ ಮಾಡಿದನು. ಆಗ ಇಂದ್ರನು ದೇವದಾನವರ ಸಮೇತ ಬ್ರಹ್ಮದೇವನ ಬಳಿಗೆ ಹೋದನು. ಕುಂಭಕರ್ಣನ ನೀಚತ್ವ, ಆತನು ನಡೆಯಿಸಿದ ಪ್ರಜೆಗಳ ಸ್ವಾಹಾಕಾರ, ಪರಸ್ತ್ರೀಯರ ಅಪಹರಣ ಇವೆಲ್ಲ ಸಂಗತಿಗಳನ್ನು ವಿವರಿಸಿದನು. ಇದೇ ರೀತಿ ಮುಂದುವರೆದರೆ ಪ್ರಪಂಚವೇ ಶೂನ್ಯವಾಗಬಹುದೆಂಬ ಭೀತಿಯನ್ನು ವ್ಯಕ್ತಪಡಿಸಿದನು. ಇಂದ್ರನ ಭಾಷಣವನ್ನು ಕೇಳಿ ಬ್ರಹ್ಮದೇವನು ರಾಕ್ಷಸರನ್ನು ಕರೆಯಿಸಿ ಕುಂಭಕರ್ಣನತ್ತ ನೋಡಿದನು. ಕುಂಭಕರ್ಣನನ್ನು ನೋಡುತ್ತಲೆ ಬ್ರಹ್ಮನ ಎದೆ ಝಲ್ಲೆಂದಿತು. ಹೀಗಾದರೂ ಆತನು ಕುಂಭಕರ್ಣನಿಗೆ ಇಂತೆಂದನು :

> ಧ್ರುವಂ ಲೋಕವಿನಾಶಾಯ ಪೌಲಸ್ತ್ಯೇನಾಸಿ ನಿರ್ಮಿತಃ ।
> ತಸ್ಮಾತ್ತ್ವಮದ್ಯಪ್ರಭೃತಿ ಮೃತಕಲ್ಪಃ ಶಯಿಷ್ಯಸೇ ॥ ೨೪ ॥

"ವಿಶ್ರವಸುವು ನಿಃಸಂದೇಹವಾಗಿ ನಿನ್ನನ್ನು ಲೋಕನಾಶಕ್ಕಾಗಿ ಹುಟ್ಟಿಸಿದ್ದಾನೆ. ನೀನು ಇಂದಿನಿಂದ ಮೃತನಾದವನಂತೆ ನಿದ್ರಾವಸ್ಥೆಯಲ್ಲಿರುವೆ."

> ಬ್ರಹ್ಮಶಾಪಾಭಿಭೂತೋಽಥ ನಿಪಪಾತಾಗ್ರತಃ ಪ್ರಭೋಃ । ೨೫

ಬ್ರಹ್ಮದೇವನ ಶಾಪದಿಂದ ಆತನು ರಾವಣನ ಕಣ್ಣೆದುರಿಗೆಯೇ ಭೂಮಿಗೆ ಉರುಳಿದನು. ಆಗ ಅತಿಯಾಗಿ ಭೀತನಾದ ರಾವಣನು ಬ್ರಹ್ಮದೇವನಿಗೆ ಈ ರೀತಿ ಎಂದನು :

> ನ ನಪ್ತಾರಂ ಸ್ವಕಂ ನ್ಯಾಯ್ಯಂ ಶಪ್ತುಮೇವಂ ಪ್ರಜಾಪತೇ ॥ ೨೬ ॥

"ಸ್ವಂತ ಮೊಮ್ಮಗನನ್ನು ಈ ರೀತಿ ಶಪಿಸುವದು ಉಚಿತವಲ್ಲ. ನಿಮ್ಮ ನುಡಿಗಳು ಸುಳ್ಳಾಗಲಾರವು. ಆತನು ನಿದ್ರಿಸ್ತನಾಗಿರುವನು ; ಆದರೆ ಆತನ ನಿದ್ರೆಯ ಹಾಗೂ ಎಚ್ಚರವಿರುವ ಕಾಲವನ್ನು ನೀವು ನಿರ್ಧರಿಸಿರಿ." ರಾವಣನ ಈ ಬಿನ್ನಹವನ್ನು ಕೇಳಿ ಬ್ರಹ್ಮದೇವನು ಇಂತೆಂದನು :

> ಶಯಿತಾ ಹ್ಯೇಷ ಷಣ್ಮಾಸಮೇಕಾಹಂ ಜಾಗರಿಷ್ಯತಿ ॥ ೨೮ ॥
> ಏಕೇನಾಹ್ನಾ ತ್ವಸೌ ವೀರಶ್ಚರನ್ ಭೂಮಿಂ ಬುಭುಕ್ಷಿತಃ ।
> ವ್ಯಾತ್ತಾಸ್ಯೋ ಭಕ್ಷಯೇಲ್ಲೋಕಾನ್ ಸಂವೃದ್ಧ ಇವ ಪಾವಕಃ ॥ ೨೯ ॥

"ತೀರ ಕಡಿಮೆ ಎಂದರೆ ಆರು ತಿಂಗಳವರೆಗಾದರೂ ಈತನು ಸತತವಾಗಿ ನಿದ್ರಿಸಿದನಂತರ ಒಂದು ದಿನದ ಮಟ್ಟಿಗೆ ಎಚ್ಚರವಾಗಿರುವನು. ಆ ಒಂದು ದಿನದಲ್ಲಿ ಹಸಿದ ಈ ವೀರನು 'ಆ' ಎಂದು ಬಾಯಿ ತೆರೆದು ಭೂಮಿಯ ಮೇಲೆ ಸಂಚರಿಸುವಾಗ ಪಸರಿಸುವ ಅಗ್ನಿಜ್ವಾಲೆಯಂತೆ ಜನರನ್ನು ಭಕ್ಷಿಸುತ್ತ ಸಾಗುವನು."

ರಾವಣನ ಬಿನ್ನಹದ ಮೇರೆಗೆ ಆಡಿದ ಬ್ರಹ್ಮದೇವನ ನುಡಿಗಳು ಉಃಶಾಪದಂತಾಗಿವೆ. ಈ ಸಂದರ್ಭದಲ್ಲಿ ಶಾಪಪಡೆದ ಕುಂಭಕರ್ಣನು ಉಃಶಾಪವನ್ನು ಬೇಡಿರದೇ ರಾವಣನು ಕುಂಭಕರ್ಣನ ಪರವಾಗಿ ಉಃಶಾಪವನ್ನು ಬೇಡಿಕೊಂಡಿದ್ದಾನೆ.

## ೩೮. ಅನರಣ್ಯ > ರಾವಣ

ಯುದ್ಧಕಾಂಡ / ೬೦

ಶ್ರೀರಾಮನ ಬಾಣಗಳಿಂದ ಭಯಗೊಂಡ ರಾವಣನಿಗೆ ಬ್ರಹ್ಮದೇವನಿಂದ ಪಡೆದ ವರಗಳ ನೆನಪಾಯಿತು. ಆತನು ದೇವ, ದಾನವ, ಯಕ್ಷ, ರಾಕ್ಷಸ, ಪನ್ನಗರಿಂದ ತನ್ನ ವಧೆಯು ಸಾಧ್ಯವಾಗಬಾರದೆಂದು ಬೇಡಿ ಕೊಂಡಿದ್ದನು. ರಾವಣನಿಗೆ ಮಾನವರ ಗಣನೆಯೇ ಇರಲಿಲ್ಲ. ಮಾನವರನ್ನು ಜಯಿಸುವದು ಸಹಜಸಾಧ್ಯವೆಂಬ ನಂಬಿಕೆ ಆತನದಿತ್ತು. ಅದ್ದರಿಂದ ವರವನ್ನು ಬೇಡುವಾಗ ಆತನು ಮಾನವನ ಉಲ್ಲೇಖವನ್ನು ಮಾಡಿರಲಿಲ್ಲ.

ಆಗ ಬ್ರಹ್ಮದೇವನು "ಮಾನವರಿಂದ ನಿನಗೆ ಭಯವಿದೆ ಎಂಬುದನ್ನು ಗಮನದಲ್ಲಿ ಇಟ್ಟುಕೋ !" ಎಂದು ರಾವಣನಿಗೆ ಸ್ಪಷ್ಟವಾಗಿ ಹೇಳಿದ್ದನು. "ಈ ಮಾನವನು ಮಹೇಂದ್ರಸಮನಾದ ನನ್ನನ್ನು ಸೋಲಿಸಿದ್ದಾನೆ ; ನಾನು ಆಚರಿಸಿದ ಉಗ್ರತಪಸ್ಸು ವ್ಯರ್ಥವಾಯಿತು !" ಎಂಬ ದುಃಖವು ರಾವಣನಿಗಾಯಿತು. ದಶರಥಪುತ್ರನಾದ ಶ್ರೀರಾಮನಿಂದ ತನಗೆ ಭಯವಿದೆ ಎಂಬುದರ ಮನವರಿಕೆಯಾಯಿತು. ವೇದವತಿ, ಉಮೆ, ರಂಭೆ, ನಂದಿಕೇಶ್ವರ, ವರುಣಕನ್ಯೆಯರ ವಚನಗಳು ಜ್ಞಾಪಕಕ್ಕೆ ಬಂದವು. ಹಿಂದೆ ಇಕ್ಷ್ವಾಕುಕುಲೋತ್ಪನ್ನ ಅನರಣ್ಯನು ಕೊಟ್ಟ ಶಾಪದ ಸ್ಮರಣೆಯೂ ಆಯಿತು.

ಉತ್ಪತ್ಸ್ಯತಿ ಹಿ ಮದ್ವಂಶಪುರುಷೋ ರಾಕ್ಷಸಾಧಮ ।
ಯಸ್ತ್ವಾಂ ಸಪುತ್ರಂ ಸಾಮಾತ್ಯಂ ಸಬಲಂ ಸಾಶ್ವಸಾರಥಿಮ್ ॥ ೯ ॥
ನಿಹನಿಷ್ಯತಿ ಸಂಗ್ರಾಮೇ ತ್ವಾಂ ಕುಲಾಧಮ ದುರ್ಮತೇ । ೧೦

"ಎಲೈ ರಾಕ್ಷಸಾಧಮನೇ ! ಹೇ ಕುಲಾಧಮನೇ ! ಹೇ ದುರ್ಮತಿಯೇ ! ನನ್ನ ಕುಲದಲ್ಲಿ ಒಬ್ಬ ಪುರುಷನು ಜನ್ಮತಾಳುವನು. ಆತನು ರಣರಂಗದಲ್ಲಿ, ನಿನ್ನ ಪುತ್ರ, ಅಮಾತ್ಯ, ಸೈನ್ಯ, ಅಶ್ವ ಮತ್ತು ಸಾರಥಿಯರ ನ್ನೊಳಗೊಂಡು ನಿನ್ನನ್ನು ವಧಿಸುವನು."

ಉತ್ತರಕಾಂಡ / ೧೯

ಅಗಸ್ತ್ಯಮುನಿಯು ಶ್ರೀರಾಮನಿಗೆ ಅನರಣ್ಯನು ರಾವಣನಿಗೆ ಕೊಟ್ಟ ಶಾಪದ ಬಗ್ಗೆ ಹೇಳುತ್ತಾನೆ :

'ಮರುತ್ತ' ರಾಜನನ್ನು ಜಯಿಸಿದನಂತರ ರಾವಣನು, "ನನ್ನೊಡನೆ ಯುದ್ಧಮಾಡಿರಿ ; ಇಲ್ಲವೇ ಪರಾಜಯ ವನ್ನು ಒಪ್ಪಿಕೊಳ್ಳಿರಿ !" ಎಂದು ಆಹ್ವಾನಿಸುತ್ತ ಅನೇಕ ಪಟ್ಟಣಗಳತ್ತ ಹೋದನು. ದುಷ್ಯಂತ, ಸುರಥ, ಗಾಧಿ, ಗಯ ಮೊದಲಾದ ರಾಜರು ತಮ್ಮ ಮತ್ತು ರಾವಣನ ಬಲಾಬಲಗಳನ್ನು ಅರಿತು ತಮ್ಮ ಪರಾಭವವನ್ನು ಒಪ್ಪಿಕೊಂಡರು. ಆ ಸಮಯದಲ್ಲಿ ಅಯೋಧ್ಯೆಯಲ್ಲಿ ಇಕ್ಷ್ವಾಕುಕುಲೋತ್ಪನ್ನನಾದ 'ಅನರಣ್ಯ' ರಾಜನು ಆಳುತ್ತಿದ್ದನು. ರಾವಣನು ಯುದ್ಧಕ್ಕೆ ಆಹ್ವಾನಿಸಿದಾಗ ಆತನು ಅದನ್ನು ಸ್ವೀಕರಿಸಿದನು. ಕಾಳಗದಲ್ಲಿ ಅನರಣ್ಯನು ರಾವಣನ ಮೇಲೆ ಬಾಣಗಳ ಮಳೆಗರೆದನು ; ಆದರೆ ಇದರಿಂದ ರಾವಣನಿಗೆ ಕೊಂಚವೂ ಅಪಾಯ ಆಗಲಿಲ್ಲ. ಅದರ ಬದಲು ರಾವಣನ ಹಸ್ತಪ್ರಹಾರದಿಂದ ಅನರಣ್ಯನು ರಥದಿಂದ ನೆಗೆದು ಭೂಮಿಗೆ ಬಿದ್ದನು. ಆಗ ರಾವಣನು ಅಪಹಾಸ್ಯದಿಂದ "ನನ್ನೊಡನೆ ದ್ವಂದ್ವಕ್ಕೆ ನಿಲ್ಲುವವರು ಈ ತ್ರಿಲೋಕಗಳಲ್ಲಿ ಯಾರೂ ಇಲ್ಲ. ವಿಷಯಲೋಲುಪನಾಗಿದ್ದ ನೀನು ನನ್ನ ಬಲದ, ಸಾಮರ್ಥ್ಯದ ಸಂಗತಿಯನ್ನು ಕೇಳಿಲ್ಲ ವೆಂದು ತೋರುತ್ತದೆ" ಎಂದನು. ಆಗ ಮುಮುರ್ಷುವಾದ ಅನರಣ್ಯನು—"ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವಂಥ ನಿನ್ನಿಂದ ನನಗೆ ಮೃತ್ಯು ಬಾರದೇ ಸಾಕ್ಷಾತ್ ಕಾಲನೇ ನನ್ನನ್ನಾವರಿಸಿದ್ದಾನೆ. ನೀನು ಕೇವಲ ನಿಮಿತ್ತಮಾತ್ರನಾಗಿರುವೆ. ನಾನು ಯುದ್ಧದಿಂದ ಕಾಲುತೆಗೆದಿಲ್ಲ. ಯುದ್ಧಕಾಲದಲ್ಲಿಯೇ ನೀನು ನನ್ನನ್ನು ವಧಿಸುತ್ತಿರುವೆ. ನೀನು ನಿನ್ನ ನುಡಿಗಳಿಂದ ಇಕ್ಷ್ವಾಕುಕುಲವನ್ನು ಅವಮಾನಗೊಳಿಸಿರುವೆ. ಆದ್ದರಿಂದ ನಾನು ನಿನಗೆ ಈ ಸಂಗತಿಯನ್ನು ಹೇಳಿಬಿಡುತ್ತೇನೆ :

ಯದಿ ದತ್ತಂ ಯದಿ ಹುತಂ ಯದಿ ಮೇ ಸುಕೃತಂ ತಪಃ ।
ಯದಿ ಗುಪ್ತಾಃ ಪ್ರಜಾಃ ಸಮ್ಯಕ್ತದಾ ಸತ್ಯಂ ವಚೋಽಸ್ತು ಮೇ ॥ ೨೯ ॥
ಉತ್ಪತ್ಸ್ಯತೇ ಕಾಲೇ ಹ್ಯಸ್ಮಿನ್ನಿಕ್ಷ್ವಾಕೂಣಾಂ ಮಹಾತ್ಮನಾಮ್ ।
ರಾಮೋ ದಾಶರಥಿರ್ನಾಮ ಸ ತೇ ಪ್ರಾಣಾನ್ ಹರಿಷ್ಯತಿ ॥ ೩೦ ॥
ತತೋ ಜಲಧರೋದಗ್ರಸ್ತಾಡಿತೋಽಪಿ ದೇವದುಂದುಭಿಃ ।
ತಸ್ಮಿನ್ನುದಾಹೃತೇ ಶಾಪೇ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ॥ ೩೧ ॥

"ನಾನು ದಾನಮಾಡಿದ್ದರೆ, ಹವನಮಾಡಿದ್ದರೆ, ಒಳ್ಳೆಯ ತಪಸ್ಸನ್ನಾಚರಿಸಿದ್ದರೆ, ಪ್ರಜೆಗಳ ಪರಿಪಾಲನೆ ಯನ್ನು ಉತ್ತಮವಾಗಿ ಮಾಡಿದ್ದರೆ, ನನ್ನ ಈ ನುಡಿಗಳು ಸತ್ಯವಾಗುವವು. ಶ್ರೀರಾಮನೆಂಬುವನು ಮಹಾತ್ಮ ನಾದ ಇಕ್ಷ್ವಾಕುವಿನ ಈ ಕುಲದಲ್ಲಿ ದಶರಥನ ಪುತ್ರನಾಗಿ ಜನ್ಮತಾಳುವನು ಮತ್ತು ಆತನು ನಿನ್ನ ಪ್ರಾಣಹರಣ ವನ್ನು ಮಾಡುವನು."

ರಾಜನು ಶಾಪವನ್ನು ಕೊಟ್ಟನಂತರ ದೇವತೆಗಳು ಮೇಘಗರ್ಜನೆ ಮಾಡುವ ದುಂದುಭಿಗಳನ್ನು ಮೊಳಗಿದರು. ಆಕಾಶದಿಂದ ಪುಷ್ಪವೃಷ್ಟಿಯಾಯಿತು.

ಅನರಣ್ಯನ ಉದ್ಗಾರದಲ್ಲಿ ಶಪಥ-ಸತ್ಯಕ್ರಿಯೆ ಮತ್ತು ಶಾಪ ಇವೆಲ್ಲವುಗಳ ಅಂತರ್ಭಾವವಿದೆ. ಉದ್ಗಾರದ ಮೊದಲಿನ ಭಾಗವು (ಉತ್ತರಕಾಂಡ ೧೯ / ೨೯) ಶಪಥವು ಸತ್ಯಕ್ರಿಯೆ(ಯುದ್ಧಕಾಂಡ ೬೦ / ೯-೧೦ ಮತ್ತು ಉತ್ತರಕಾಂಡ ೧೯ / ೩೦)ಯಾಗಿದ್ದು, ಶೇಷಭಾಗವು ಶಾಪವಾಗಿದೆ.

ಉಮಾನಂದೀಶ್ವರಶ್ಚಾಪಿ ರಂಭಾ ವರುಣಕನ್ಯಕಾ ॥ ೧೧ ॥
ಯಥೋಕ್ತಾಸ್ತನ್ಮಯಾ ಪ್ರಾಪ್ತಂ ನ ಮಿಥ್ಯಾ ಋಷಿಭಾಷಿತಮ್ ॥ ೧೨ ॥

ಯುದ್ಧಕಾಂಡ / ೬೦

ಈ ರೀತಿಯಾಗಿ, ಉಮಾ, ನಂದೀಶ್ವರ, ರಂಭೆ ಹಾಗೂ ಪುಂಜಿಕಸ್ಥಲೆಯರ ನುಡಿಗಳ ಪರಿಣಾಮವು ನನ್ನ ಮೇಲೆ ಉಂಟಾಗಿದೆ.* ಋಷಿವಚನ ಎಂದಿಗೂ ಸುಳ್ಳಾಗದು.

## ೩೯. ವೇದವತಿ > ರಾವಣ

ಯುದ್ಧಕಾಂಡ / ೬೦

ಶ್ರೀರಾಮನ ಬಾಣಗಳ ಭೀತಿಯಿಂದ ಗ್ರಸ್ತನಾದ ರಾವಣನಿಗೆ, ಅಗ್ನಿಪ್ರವೇಶಮಾಡುವಾಗ ವೇದವತಿಯು ತೆಗೆದ ಉದ್ಗಾರಗಳ ಸ್ಮರಣೆಯಾಯಿತು.

ಶಪ್ತೋಽಹಂ ವೇದವತ್ಯಾ ಚ ಯಥಾ ಸಾಧರ್ಷಿತಾ ಪುರಾ ॥ ೧೦ ॥
ಸೇಯಂ ಸೀತಾ ಮಹಾಭಾಗಾ ಜಾತಾ ಜನಕನಂದಿನೀ । ೧೧

ಹಿಂದೆ ವೇದವತಿಯನ್ನು ಬಲಾತ್ಕರಿಸಿದ್ದರಿಂದ ಅವಳು ಶಾಪವನ್ನು ಕೊಟ್ಟಿದ್ದಾಳೆ. ಆ ವೇದವತಿಯೇ ಮಹಾಭಾಗ್ಯವತಿಯಾದ ಜನಕಕನ್ಯೆಯಾದ ಸೀತೆಯಾಗಿದ್ದಾಳೆ.

ಅಗಸ್ತ್ಯಮುನಿಯು ಶ್ರೀರಾಮನಿಗೆ ವೇದವತಿಯು ರಾವಣನ ಬಗ್ಗೆ ಮಾಡಿದ ಪ್ರತಿಜ್ಞೆಯ ವೃತ್ತಾಂತವನ್ನು ಹೇಳುತ್ತಿದ್ದಾನೆ :

ರಾವಣನು ಹಿಮಾಲಯದ ಅರಣ್ಯದಲ್ಲಿ ಸುತ್ತುತ್ತಿದ್ದಾಗ, ತಪಸ್ಸಿನಲ್ಲಿ ತೊಡಗಿದ ಬಹಳ ಚೆಲುವೆಯಾದ ಒಬ್ಬಳು ತರುಣಿಯನ್ನು ಕಂಡನು. ಆಕೆಯನ್ನು ನೋಡಿ ಕಾಮಮೋಹಿತನಾದನು ; ಅವಳ ರೂಪಯೌವನಗಳನ್ನು ಬಣ್ಣಿಸಿ ಅವಳನ್ನು ತಪಸ್ಸಿನಿಂದ ಪರಾವೃತ್ತಗೊಳಿಸಲು ಯತ್ನಿಸಿದನು. ಕುಶಲಪ್ರಶ್ನೆಗಳನ್ನು ಕೇಳಿದ ರಾವಣನಿಗೆ ಅವಳು ಯಥೋಚಿತ ಆದರಾತಿಥ್ಯಗಳನ್ನು ಸಲ್ಲಿಸಿದಳು. ಅವಳ ಪಿತನು ಆಕೆಯನ್ನು ವಿಷ್ಣುವಿಗೆ ಅರ್ಪಿಸುವವನಿದ್ದನು ; 'ಶಂಭು' ಎಂಬ ದೈತ್ಯನು ಕೋಪಗೊಂಡು ಇವಳ ತಂದೆಯನ್ನು ಕೊಂದುಹಾಕಿದನು. ಈಕೆಯ ತಾಯಿಯು ಸತಿಹೋದಳು. ತಂದೆಯ ಮನೋರಥವನ್ನು ಪೂರ್ಣಗೊಳಿಸಲು ತಪಸ್ಸನ್ನಾಚರಿಸುತ್ತಿರುವೆನೆಂದು ಹೇಳಿದಳು. ಇದನ್ನು ಕೇಳಿ ರಾವಣನು ವಿಷ್ಣುವಿನ ಬಗ್ಗೆ ತುಚ್ಛವಾಗಿ ಮಾತನಾಡಿದನು ಮತ್ತು ಆ ತರುಣಿಗೆ ತನ್ನ ಭಾರ್ಯೆಯಾಗಲು ವಿನಂತಿಸಿದನು. ಅವಳು ವಿಷ್ಣುವನ್ನು ತುಚ್ಛೀಕರಿಸಿ ಮಾತನಾಡುವ ರಾವಣನನ್ನು ನಿಂದಿಸಿದಳು. ಆಗ ರಾವಣನು ಅವಳ ಜಡೆ ಹಿಡಿದು ಎಳೆದನು. ವೇದವತಿಯು ತನ್ನ ಕೈಯಿಂದ ತನ್ನ ಕೂದಲನ್ನು ತಾನೇ ಕಿತ್ತುಹಾಕಿ ಅವನಿಂದ ಬಿಡಿಸಿಕೊಂಡಳು. ಸಿಟ್ಟಿನಿಂದ ಬೆಂಕಿಯಂತೆ ಸುಡುವ ಶಬ್ದಗಳಲ್ಲಿ "ಎಲೈ ದುಷ್ಟನೇ ! ನೀನು ನನ್ನನ್ನು ಎಳೆದಾಡಿ ಅವಮಾನಿಸಿರುವೆ ; ಆದ್ದರಿಂದ ಇನ್ನು ನನಗೆ ಜೀವಿಸಿರುವ ಆಸೆ ಇಲ್ಲ. ಎಲೈ ರಾಕ್ಷಸನೇ, ನಿನ್ನ ಎದುರೇ ನಾನು ಅಗ್ನಿಪ್ರವೇಶ ಮಾಡುತ್ತೇನೆ."

ಯಸ್ಮಾತ್ತು ಧರ್ಷಿತಾ ಚಾಹಂ ತ್ವಯಾ ಪಾಪಾತ್ಮನಾ ವನೇ ॥ ೩೧ ॥

---

* ಉಮಾನೇ ಕೈಲಾಸ್ ಉಠಾನೇಕೇ ಸಮಯ ಭಯಭೀತ ಹೋನೇಸೇ ರಾವಣಕೋ ಶಾಪ ದಿಯಾ ಥಾ ಕಿ, "ತೇರೀ ಮೃತ್ಯು ಸ್ತ್ರೀಕೇ ಕಾರಣ ಹೋಗಿ." ನಂದೀಶ್ವರಕೀ ವಾಮನ-ಮೂರ್ತಿ ದೇಖಕರ ರಾವಣ ಹಂಸಾ ಥಾ. ಇಸ್‌ಲಿಯೇ ಉನ್ಹೋನೇ ಕಹಾ ಥಾ - "ಮೇರೇ ಸಮಾನ ರೂಪ್ ಔರ್ ಪರಾಕ್ರಮವಾಲೇ ಹೀ ತೇರೇ ಕುಲಕಾ ನಾಶ ಕರೇಂಗೇ." ರಂಭಾಕೇ ನಿಮಿತ್ತಸೇ ನಲಕೂಬರನೇ ಔರ್ ವರುಣಕನ್ಯಕಾ ಪುಂಜಿಕಸ್ಥಲಾಕೇ ನಿಮಿತ್ತ ಬ್ರಹ್ಮಾಜೀನೇ ಶಾಪ ದಿಯಾ ಥಾ ಕಿ, ""ಅನಿಚ್ಛಾಸೇ ಕಿಸೀ ಸ್ತ್ರೀಕೇ ಸಾಥ್ ಸಂಭೋಗ್ ಕರನೇ ಪರ್ ತೇರಿ ಮೃತ್ಯು ಹೋ ಜಾಯೇಗೀ."

—ಗೀತಾ ಪ್ರೆಸ್ ಆವೃತ್ತಿ, ಪು. ೧೨೧೮

ತಸ್ಮಾತ್ತವ ವಧಾರ್ಥಂ ಹಿ ಸಮುತ್ಪತ್ಸ್ಯೇ ಹ್ಯಹಂ ಪುನಃ ।
ನ ಹಿ ಶಕ್ಯಃ ಸ್ತ್ರಿಯಾ ಹಂತುಂ ಪುರುಷಃ ಪಾಪನಿಶ್ಚಯಃ ॥ ೩೨ ॥
ಶಾಪೇ ತ್ವಯಿ ಮಯೋತ್ಸೃಷ್ಟೇ ತಪಸಶ್ಚ ವ್ಯಯೋಭವೇತ್ ।
ಯದಿ ತ್ವಸ್ತಿ ಮಯಾ ಕಿಂಚಿತ್ಕೃತಂ ದತ್ತಂ ಹುತಂ ತಥಾ ॥ ೩೩ ॥
ತಸ್ಮಾತ್ತ್ವಯೋನಿಜಾ ಸಾಧ್ವೀ ಭವೇಯಂ ಧರ್ಮಿಣಃ ಸುತಾ ॥ ೩೪ ॥

"ದುರಾತ್ಮನಾದ ನೀನು ಕಾಡಿನಲ್ಲಿ ನನ್ನನ್ನು ಎಳೆದಾಡಿದ್ದೀಯಾ ! ನಿನ್ನ ವಧೆಗಾಗಿ ನಾನು ಈ ಭೂಮಿಯಲ್ಲಿ ಮರಳಿ ಜನ್ಮತಾಳುವೆ. ಪಾಪಾತ್ಮ ಪುರುಷನ ವಧೆಯು ನನ್ನಂತಹ ಸ್ತ್ರೀಯಿಂದಾಗದು. ನಾನು ನಿನಗೆ ಶಾಪ ಕೊಟ್ಟರೆ ನನ್ನ ತಪಸ್ಸು ಕ್ಷೀಣಿಸುವದು. ಈವರೆಗೆ ನಾನು ತಪಸ್ಸನ್ನಾಚರಿಸಿದ್ದರೆ, ದಾನ, ಹವನಕರ್ಮಗಳನ್ನು ಆಚರಿಸಿದ್ದರೆ, ಆ ಪುಣ್ಯಪ್ರಭಾವದಿಂದ ನಾನು ಒಬ್ಬ ಧರ್ಮನಿಷ್ಠನ 'ಅಯೋನಿಜಾತ' ಸಾಧುಕನ್ಯೆಯಾಗುವೆ."

ಹೀಗೆ ಉಚ್ಚರಿಸಿ ಅವಳು ಪ್ರಜ್ವಲಿತ ಅಗ್ನಿಯಲ್ಲಿ ಧುಮುಕಿದಳು. ಆಗ ಆಕಾಶದಿಂದ ಪುಷ್ಪವೃಷ್ಟಿ ಯಾಯಿತು.

ಉತ್ತರಕಾಂಡದಲ್ಲಿರುವ ವೇದವತಿಯ ನುಡಿಗಳು ಶಾಪದಂತೆ ಇದ್ದರೂ, ತಪಸ್ಸಿನ ಫಲದ ನಾಶವಾಗಬಾರ ದೆಂದು ಶಾಪಕೊಟ್ಟಿಲ್ಲ ಎಂಬುದು ಸ್ಪಷ್ಟವಾಗಿದೆ. ಯುದ್ಧಕಾಂಡದಲ್ಲಿ ರಾವಣನಿಗೆ ವೇದವತಿಯ ಉದ್ಗಾರದ ನೆನಪಾದಾಗ ಆತನು ಅದನ್ನು ಶಾಪವೆಂದಿದ್ದಾನೆ. ಹೀಗಾಗಿ ವೇದವತಿಯ ಉದ್ಗಾರಗಳು ಶಾಪಸಮವಾಗಿದ್ದರೂ ಅವಕ್ಕೆ ಶಾಪವಾಣಿ ಎಂದೆನ್ನಬಹುದೋ ? ಇದನ್ನು ನಿರ್ಧರಿಸುವದು ಕಠಿಣ. ಅವಳ ನುಡಿಗಳ ಕೊನೆಯ ಭಾಗವು ಶಪಥದಂತಿದೆ. ವೇದವತಿಯ ನೆನಪಿನಂತೆಯೇ ರಾವಣನಿಗೆ ಉಮಾ, ನಂದಿಕೇಶ್ವರ, ರಂಭಾ ಮತ್ತು ವರುಣಕನ್ಯೆ ಪುಂಜಕಸ್ಥಳೆ ಈ ಎಲ್ಲರ ನುಡಿಗಳ ನೆನಪಾಗಿದೆ. ವೇದವತಿಯ ಉದ್ಗಾರದಲ್ಲಿ ಶಾಪವೆಂಬ ಸ್ಪಷ್ಟ ಉಲ್ಲೇಖವಿರದಿದ್ದರೂ ಅವು ಶಾಪಸಮನಾಗಿವೆ. ಅದರ ಪರಿಣಾಮವು ಶಾಪದಂತೆಯೇ ಇದೆ.

## ೪೦. ಪತಿವ್ರತೆಯರು > ರಾವಣ

ಯುದ್ಧಕಾಂಡ / ೧೧೧

ರಾವಣನ ವಧೆಯನಂತರ ಮಂಡೋದರಿಯ ಶೋಕಾಲಾಪದಲ್ಲಿ ಈ ಶಾಪದ ಉಲ್ಲೇಖವಿದೆ.

ಯಾಸ್ತ್ವಯಾ ವಿಧವಾ ರಾಜನ್ಕೃತಾ ನೈಕಾಃ ಕುಲಸ್ತ್ರಿಯಃ ॥ ೬೪ ॥
ಪತಿವ್ರತಾಧರ್ಮರತಾ ಗುರುಶುಶ್ರೂಷಣೇ ರತಾಃ ।
ತಾಭಿಃ ಶೋಕಾಭಿತಪ್ತಾಭಿಃ ಶಪ್ತಃ ಪರವಶಂ ಗತಃ ॥ ೬೫ ॥
ತ್ವಯಾ ವಿಪ್ರಕೃತಾಭಿಶ್ಚ ಯದಾ ಶಪ್ತಸ್ತದಾಗತಮ್ ।
ಪ್ರವಾದಃ ಸತ್ಯಮೇವಾಯಂ ತ್ವಾಂ ಪ್ರತಿ ಪ್ರಾಯಶೋ ನೃಪ ॥ ೬೬ ॥

"ಹೇ ರಾಜಶ್ರೇಷ್ಠನೇ, ನೀನು ಯಾವ ಅನೇಕ ಕುಲಸ್ತ್ರೀಯರನ್ನು ವಿಧವೆಯರನ್ನಾಗಿ ಮಾಡಿರುವೆಯೋ ಅವರೆಲ್ಲರೂ ಪತಿವ್ರತೆಯರು, ಧರ್ಮತತ್ಪರರು, ಗುರುಸೇವೆಯಲ್ಲಿ ಸತತ ದಕ್ಷರಾಗಿದ್ದರು. ಶೋಕಾವೇಗದಿಂದ ಆ ಸ್ತ್ರೀಯರು ನಿನ್ನನ್ನು ಶಪಿಸಿದ ಕಾರಣ ನೀನು ಶತ್ರುವಿನ ಅಧೀನನಾದೆ. ನಿನ್ನಿಂದ ಕಾಡಿಸಲ್ಪಟ್ಟ ಪತಿವ್ರತಾ ಸ್ತ್ರೀಯರು ಅಂದು ಕೊಟ್ಟ ಶಾಪದ ಫಲವು ಈಗ ದೊರಕಿದೆ." 'ಪತಿವ್ರತೆಯರ ಕಣ್ಣೀರು ಅನರ್ಥಕ್ಕೆಳೆಯದೇ ಭೂಮಿಗೆ ಬೀಳುವುದಿಲ್ಲ' ಎಂಬ ನಾಣ್ಣುಡಿಯು ರಾವಣನ ಸಂದರ್ಭದಲ್ಲಿ ಸತ್ಯವಾಗಿದೆ.

ಉತ್ತರಕಾಂಡ / ೨೪

ಅಗಸ್ತ್ಯನು ಶ್ರೀರಾಮನಿಗೆ ಅನೇಕ ಪತಿವ್ರತೆಯರು ರಾವಣನಿಗೆ ಕೊಟ್ಟ ಶಾಪಗಳ ಮಾಹಿತಿಯನ್ನು ಹೇಳುತ್ತಿದ್ದಾನೆ :

ದೇವ, ದಾನವ, ರಾಜರ್ಷಿ, ರಾಕ್ಷಸ, ಯಕ್ಷ, ಅಸುರ, ಮಾನವ ಮೊದಲಾದವರ ಸುಂದರ ಸ್ತ್ರೀಯರು ಕಣ್ಣಿಗೆ ಬೀಳುತ್ತಲೇ ರಾವಣನು ಅವರ ಆಪ್ತಬಾಂಧವರನ್ನು ಕೊಂದು ಅವರನ್ನು ತನ್ನ ವಿಮಾನದಲ್ಲಿ ಸೆರೆಯಲ್ಲಿಡತೊಡಗಿದನು. ಹೀಗೆ ಅನೇಕ ಸ್ತ್ರೀಯರನ್ನು ಬಂಧನದಲ್ಲಿಟ್ಟನು. ಆ ಸ್ತ್ರೀಯರು ಪರಮ ದುಃಖಿತರಾಗಿದ್ದರು, ಅಪ್ತೇಷ್ಟರ ವಧೆಯಾದ್ದರಿಂದ ಚಿಂತೆಗೊಳಗಾಗಿದ್ದರು. ರಾವಣನ ಬಗ್ಗೆ ಅವರಿಗೆ ತುಂಬ

ಭಯವೆನಿಸುತ್ತಿತ್ತು. ತಮ್ಮ ವಿಧಿಯನ್ನು ದೂಷಿಸುತ್ತ ಅವರು ಹೇಗೋ ಬಾಳುತ್ತಿದ್ದರು. ತಮ್ಮ ದುಃಖಕ್ಕೆ ಕೊನೆಯೇ ಇಲ್ಲವೆಂದುಕೊಂಡಿದ್ದರು. ಪರಸ್ತ್ರೀಯರನ್ನು ಬಲಾತ್ಕರಿಸುವ ರಾವಣನ ಕೃತಿಯಿಂದ ಅವರು ಕ್ರೋಧಯುಕ್ತರಾಗಿದ್ದರು.

ಯಸ್ಮಾದೇಷ ಪರಕ್ಯಾಸು ರಮತೇ ರಾಕ್ಷಸಾಧಮಃ ‖ ೨೦ ‖
ತಸ್ಮಾದ್ವೈ ಸ್ತ್ರೀಕೃತೇನೈವ ವಧಂ ಪ್ರಾಪ್ಸ್ಯತಿ ದುರ್ಮತಿಃ ‖ ೨೧ ‖
ಶಪ್ತಃ ಸ್ತ್ರೀಭಿಃ ಸತು ಸಮಂ ಹತೌಜಾ ಇವ ನಿಷ್ಪ್ರಭಃ ‖ ೨೨ ‖
ಪತಿವ್ರತಾಭಿಃ ಸಾಧ್ವಿಭಿರ್ಬಭೂವ ವಿಮನಾ ಇವ ‖ ೨೩ ‖

ಆ ಸ್ತ್ರೀಯರು "ಈ ರಾಕ್ಷಸಾಧಮನು ಪರಸ್ತ್ರೀಯರ ಸಂಗದಲ್ಲಿ ವಿಹರಿಸುತ್ತಿದ್ದಾನೆ ; ಆದ್ದರಿಂದ ಓರ್ವ ಸ್ತ್ರೀಯ ಕಾರಣದಿಂದಲೇ ಈ ದುರ್ಬುದ್ಧಿಯ ರಾಕ್ಷಸನ ವಧೆಯಾಗುವದು" ಎಂಬ ಶಾಪವನ್ನು ರಾವಣನಿಗೆ ಕೊಟ್ಟರು.

ಆ ಪತಿವ್ರತೆಯರು ಈ ರೀತಿ ನುಡಿದಾಗ ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದವು, ಪುಷ್ಪವೃಷ್ಟಿಯಾಯಿತು. ಪತಿವ್ರತೆಯರ ಶಾಪದಿಂದ ರಾವಣನ ತೇಜಸ್ಸು, ಪ್ರಭೆ ಇಲ್ಲವಾಗಿ ಅವನು ಕಳಾಹೀನನಾದನು.

## ೪೧. ಪುಲಸ್ತ್ಯ > ತೃಣಬಿಂದು ಕನ್ಯೆ                                                    ಉತ್ತರಕಾಂಡ / ೨

ಅಗಸ್ತ್ಯ ಋಷಿಯು ರಾಮನಿಗೆ ವಿಶ್ರವಾ ಮುನಿಯ ಜನ್ಮವೃತ್ತಾಂತವನ್ನು ಹೇಳುತ್ತಿದ್ದಾನೆ :

ಕೃತಯುಗದಲ್ಲಿ ಪ್ರಜಾಪತಿಯ ಪುತ್ರನಾದ ಪುಲಸ್ತ್ಯ ಎಂಬ ಬ್ರಹ್ಮರ್ಷಿಯು ಧರ್ಮ ಹಾಗೂ ಶೀಲಗಳಿಂದ ದೇವರಿಗೂ ಪ್ರಿಯನಾಗಿದ್ದನು. ಮೇರುಪರ್ವತಕ್ಕೆ ಹತ್ತಿರವಾಗಿದ್ದ ತೃಣಬಿಂದುವಿನ ಆಶ್ರಮದಲ್ಲಿ ತಪಸ್ಸಿಗಾಗಿ ನೆಲೆಸಿದ್ದನು. ಅನೇಕ ನಾಗಕನ್ಯೆಯರು, ಋಷಿಕನ್ಯೆಯರು, ರಾಜರ್ಷಿಕನ್ಯೆಯರು, ಅಪ್ಸರೆಯರು ಕ್ರೀಡಿಸುತ್ತ ಈ ಆಶ್ರಮದ ಬಳಿಗೆ ಬಂದರು. ಅವರು ಆಗಾಗ ಅಲ್ಲಿಗೆ ಬಂದು ನೃತ್ಯಗಾಯನದಲ್ಲಿ ತೊಡಗುತ್ತಿದ್ದರು. ಈ ಯೌವನೆಯರ ಆಗಮನದಿಂದ ಪುಲಸ್ತ್ಯ ಋಷಿಯ ತಪಸ್ಸಿನಲ್ಲಿ ವಿಘ್ನ ಉಂಟಾಗುತ್ತಿದ್ದುದರಿಂದ ಆತನು ಕ್ರುದ್ಧನಾದನು.

'ಯಾವ ಕನ್ಯೆಯು ನನ್ನ ಕಣ್ಣಿಗೆ ಬೀಳುವಳೋ ಅವಳು ಗರ್ಭಿಣಿಯಾಗುವಳು' ಎಂದು ಉಚ್ಚರಿಸಿದನು.

ಯಾ ಮೇ ದರ್ಶನಮಾಗಚ್ಛೇತ್ಸಾ ಗರ್ಭಂ ಧಾರಯಿಷ್ಯತಿ । ೧೩
ಬ್ರಹ್ಮಶಾಪಭಯಾದ್ ಭೀತಾಸ್ತಂ ದೇಶಂ ನೋಪಚಕ್ರಮುಃ । ೧೪

ಈ ಬ್ರಹ್ಮಶಾಪಕ್ಕೆ ಹೆದರಿ ಆ ಕನ್ಯೆಯರು ಆ ಪ್ರದೇಶಕ್ಕೆ ಹೋಗುವದನ್ನು ನಿಲ್ಲಿಸಿದರು ; ಆದರೆ ಈ ಶಾಪವನ್ನು ಕೇಳದೇ ಇದ್ದ 'ತೃಣಬಿಂದು' ಎಂಬಾತನ ಕನ್ಯೆಯು ಆ ಪ್ರದೇಶದ ಹತ್ತಿರ ಹೋದಾಗ ಅಲ್ಲಿ ಒಬ್ಬ ಸಖಿಯೂ ಕಣ್ಣಿಗೆ ಬೀಳಲಿಲ್ಲ. ಅವಳು ಸಂಕೋಚವಿಲ್ಲದೇ ಅಲ್ಲಿ ಸುತ್ತಾಡುತ್ತಿದ್ದಾಗ, ಋಷಿಯ ಕಣ್ಣಿಗೆ ಬಿದ್ದಳು. ತಕ್ಷಣ ಅವಳ ದೇಹವು ಬಿಳಿಚಿಕೊಂಡಿತು. ಅವಳು ಗರ್ಭವತಿಯಾದಳು. ಈ ಪರಿಯ ಅನರ್ಥವುಂಟಾದ್ದರಿಂದ ಅವಳು ಕಂಗೆಟ್ಟು ಆಶ್ರಮದಲ್ಲಿದ್ದ ತನ್ನ ತಂದೆಯ ಮುಂದೆ ಬಂದು ನಿಂತಳು. ಅವಳ ಅವಸ್ಥೆಯನ್ನು ಕಂಡು, ಕೇಳಿ ವಿಚಾರಿಸಿಕೊಂಡನಂತರ ಆತನು ಧ್ಯಾನಸ್ಥನಾದನು. ಆತನಿಗೆ ಎಲ್ಲ ಸಂಗತಿಗಳು ಸ್ಪಷ್ಟವಾದವು. ಕನ್ಯೆಯನ್ನು ಜೊತೆಮಾಡಿಕೊಂಡು ಆತನು ಪುಲಸ್ತ್ಯ ಋಷಿಯತ್ತ ಹೋಗಿ ಈ ರೀತಿ ಅಂದನು—

ಸ ತು ವಿಜ್ಞಾಯತಂ ಶಾಪಂ ಮಹರ್ಷೇರ್ಭಾವಿತಾತ್ಮನಃ । ೨೪
ಭಿಕ್ಷಾಂ ಪ್ರತಿಗೃಹಾಣೇ ಮಾಂ ಮಹರ್ಷೇ ಸ್ವಯಮುದ್ಯತಾಮ್ ‖ ೨೫ ‖

"ಭಗವನ್ ! ಸ್ವಗುಣಗಳಿಂದ ಭೂಷಿತಳಾದ ಈ ನನ್ನ ಕನ್ಯೆಯನ್ನು ಸ್ವೀಕರಿಸಿರಿ ! ಹೇ ಮಹರ್ಷಿಯೇ, ಇದು ತಾನಾಗಿ ಮನೆಗೆ ಬಂದ ಒಂದು ಭಿಕ್ಷೆ ; ಈ ಕನ್ಯೆಯು ತಪಸ್ಸಿನಿಂದ ಉಂಟಾಗುವ ಆಯಾಸವನ್ನು ನಿಮ್ಮ ಸೇವೆಮಾಡಿ ಕಳೆಯುತ್ತಾಳೆ." ಪುಲಸ್ತ್ಯನು ಈ ಹೇಳಿಕೆಗೆ ಸಮ್ಮತಿಸಿದನು. ಮುನಿಯು ಅವಳ ಸೇವೆ, ಶೀಲ ಹಾಗೂ ವರ್ತನೆಯಿಂದ ಸಂತೋಷಗೊಂಡನು.

ಪುಲಸ್ತ್ಯನು ತೃಣಬಿಂದುವಿನ ಬಿನ್ನಹವನ್ನು ಮನ್ನಿಸಿದ್ದು ಉಃಶಾಪವಲ್ಲ. ತೃಣಬಿಂದುವಿನ ಕನ್ಯೆಗೆ ಶಾಪದ ಫಲವಾಗಿ ಗರ್ಭಧಾರಣೆಯಾಗಿದ್ದರೂ ಕೊನೆಯಲ್ಲಿ ಆ ಶಾಪವು ವರವಾಗಿ ಪರಿಣಮಿಸಿದೆ.

### ೪೨. ವಿಶ್ರವಾ > ಕೈಕಸಿ ಉತ್ತರಕಾಂಡ / ೯

ಅಗಸ್ತ್ಯ ಮುನಿಯು ಶ್ರೀರಾಮನಿಗೆ ಸುಮಾಲಿ ಕನ್ಯೆಯಾದ ಕೈಕಸಿಯ ಬಗ್ಗೆ ಹೇಳುತ್ತಿದ್ದಾನೆ :

ಸುಮಾಲಿ ರಾಕ್ಷಸನ ಮಗಳಾದ ಕೈಕಸಿಯು ಬಹಳ ಸುಂದರಿಯಾಗಿದ್ದಳು. ಅವಳು ಮದುವೆಯ ವಯಸ್ಸಿಗೆ ಬಂದಾಗ ಅನೇಕರು ಅವಳನ್ನು ಮದುವೆಯಾಗುವ ಪ್ರಸ್ತಾಪ ಮಾಡಿದ್ದರು ; ಆದರೆ ಸುಮಾಲಿಯು ಯಾವ ಪ್ರಸ್ತಾಪಕ್ಕೂ ಒಪ್ಪಿರಲಿಲ್ಲ. ನಂತರ ಒಪ್ಪಿಗೆ ಸಿಗುವದಿಲ್ಲವೆಂದು ತಿಳುವಳಿಕೆಯಿಂದ ಯಾರೂ ಪ್ರಸ್ತಾಪವನ್ನೇ ಮುಂದಿಡಲಿಲ್ಲ. ಕೈಕಸಿಯ ಮದುವೆಯ ಪ್ರಾಯವು ದಿನೇ ದಿನೇ ಬೆಳೆಯುತ್ತಾ ಹೋಯಿತು. ಅವಳ ಯೌವನದ ಪ್ರಾಯವು ವ್ಯರ್ಥಗೊಳ್ಳುತ್ತಿದೆ ಎಂಬ ಚಿಂತೆಯು ಸುಮಾಲಿಯನ್ನು ಕಾಡಹತ್ತಿತು. ಆತನು ತನ್ನ ಕನ್ಯೆಗೆ ಈ ರೀತಿ ಹೇಳಿದನು :

"ನೀನು ಸಾಕ್ಷಾತ್ ಲಕ್ಷ್ಮಿಯಂತಿರುವೆ ; ಧರ್ಮನಿಷ್ಠರಾದ ನಾವು ನಿನ್ನಿಂದಾಗಿ ಇಕ್ಕಟ್ಟಿನಲ್ಲಿ ಸಿಲುಕಿದ್ದೇವೆ. ಕುಲದ ಪ್ರತಿಷ್ಠೆಗೌರವಗಳ ಧ್ಯಾಸವಿರುವವರಿಗೆ, ಕನ್ಯೆಯ ತಂದೆಯಾಗಿರವದು ಬಹು ಕ್ಲೇಶಕರವಾಗಿರುತ್ತದೆ. ಏಕೆಂದರೆ ಕನ್ಯೆಗೆ ಯಾವ ವರನು ಸಿಗುವನೆಂಬುದರ ಬಗ್ಗೆ ಎಲ್ಲವೂ ಅನಿಶ್ಚಿತವಿರುತ್ತದೆ. ಆದ್ದರಿಂದ ಮುನಿಗಳಲ್ಲಿ ಉತ್ತಮನಾದ ಬ್ರಹ್ಮದೇವನ ಕುಲದಲ್ಲಿ ಜನಿಸಿದ, ಪುಲಸ್ತ್ಯನ ಪುತ್ರನಾಗಿರುವ, ಶ್ರೇಷ್ಠನಾಗಿರುವ 'ವಿಶ್ರವಾ'ನನ್ನು ನೀನಾಗಿ ವರಿಸು ! ಸೂರ್ಯನಂತೆ ತೇಜಸ್ಸುಳ್ಳ, ಧನಾಧಿಪತಿಯಂತಿರುವವನಿಂದ ಆತನಂತಹ ಮಕ್ಕಳನ್ನು ನಿಃಸಂಶಯವಾಗಿ ಪಡೆಯುವೆ."

ತಂದೆಯ ಹೇಳಿಕೆಯಂತೆ ಆ ಕನ್ಯೆಯು ವಿಶ್ರವಾ ಮುನಿಯು ತಪಸ್ಸನ್ನು ಆಚರಿಸುತ್ತಿದ್ದ ಸ್ಥಳಕ್ಕೆ ಹೋಗಿ ಆತನೆದುರು ನಿಂತಳು. ಆಗ ಆತನು ಸಂಧ್ಯಾಸಮಯದ ಅಗ್ನಿಹೋತ್ರದಲ್ಲಿ ತೊಡಗಿದ್ದನು. ಆಕೆಯ ಬರುವಿಕೆಯ ಕಾರಣವನ್ನು ಮುನಿಯು ವಿಚಾರಿಸಿದಾಗ, ಕೈಕಸಿಯು ವಿನಯದಿಂದ ಈ ರೀತಿ ಹೇಳಿದಳು :

"ಹೇ ಮುನಿಶ್ರೇಷ್ಠರೆ ! ನಾನು ಇಲ್ಲಿಗೆ ಬಂದ ಉದ್ದೇಶವನ್ನು ತಪಃಪ್ರಭಾವದಿಂದ ನೀವೇ ಅರಿತುಕೊಳ್ಳಿರಿ ! ಹೇ ಬ್ರಹ್ಮರ್ಷಿ, ತಂದೆಯ ಆಜ್ಞೆಯಂತೆ ನಾನು ಇಲ್ಲಿ ಬಂದಿದ್ದೇನೆಂದು ತಿಳಿಯಬೇಕು ; ನನ್ನ ಹೆಸರು ಕೈಕಸಿ. ಮಿಕ್ಕ ವಿಷಯವನ್ನು ನೀವೇ ಅರಿತುಕೊಳ್ಳಿರಿ !"

ವಿಶ್ರವಾ ಈತನು ಧ್ಯಾನಸ್ಥನಾಗಿ ಆಕೆಯ ಆಗಮನದ ಉದ್ದೇಶವನ್ನು ತಿಳಿದುಕೊಂಡನು. ಆತನು ಕೈಕಸಿಗೆ ಈ ರೀತಿ ನುಡಿದನು :

> ಸುತಾಭಿಲಾಷೋ ಮತ್ತಸ್ತೇ ಮತ್ತಮಾತಂಗಗಾಮಿನಿ ।
> ದಾರುಣಾಯಾಂ ತು ವೇಲಾಯಾಂ ಯಸ್ಮಾತ್ತ್ವಂ ಮಾಮುಪಸ್ಥಿತಾ ॥ ೨೨ ॥
> ಶೃಣು ತಸ್ಮಾತ್ಸುತಾನ್ಭದ್ರೇ ಯಾದೃಶಾನ್ಜನಯಿಷ್ಯಸಿ ।
> ದಾರುಣಾನ್ದಾರುಣಾಕಾರಾನ್ದಾರುಣಾಭಿಜನಪ್ರಿಯಾನ್ ॥ ೨೩ ॥
> ಪ್ರಸವಿಷ್ಯಸಿ ಸುಶ್ರೋಣಿ ರಾಕ್ಷಸಾನ್ ಕ್ರೂರಕರ್ಮಣಃ । ೨೪

"ಎಲೈ ಮತ್ತಳಾದ ಗಜಗಾಮಿನಿಯೇ, ನನ್ನಿಂದ ಪುತ್ರರನ್ನು ಪಡೆಯಲೆಂದು ನೀನು ಬಂದಿರುವೆ ; ಆದರೆ ನೀನು ಬಂದ ಸಮಯವು ತೀರ ಕ್ರೂರ ಗಳಿಗೆಯಾಗಿದೆ ; ಆದ್ದರಿಂದ ನೀನು ಎಂತಹ ಮಕ್ಕಳನ್ನು ಹೊಂದುವೆ ಎಂಬುದನ್ನು ಆಲಿಸು ! ಸ್ವಭಾವದಿಂದಲೂ, ಸೌಷ್ಠವದಿಂದಲೂ ಭಯಕಾರಿಯಾಗಿರುವವರು, ಕ್ರೂರ ಬಾಂಧವರನ್ನು ಬಯಸುವವರು ಮತ್ತು ಕ್ರೂರಕರ್ಮಗಳನ್ನು ಮಾಡುವವರು—ಅಂತಹ ರಾಕ್ಷಸರು ನಿನಗೆ ಹುಟ್ಟುವರು."

ಮುನಿಯ ಈ ಮಾತನ್ನು ಕೇಳಿ ವಿನಯದಿಂದ ಈ ರೀತಿ ಎಂದಳು : "ಹೇ ಭಗವನ್, ತಮ್ಮಂಥ ಬ್ರಹ್ಮಜ್ಞರಿಂದ ಈ ಪರಿಯ ದುರಾಚಾರಿ ಪುತ್ರರನ್ನು ಪಡೆಯುವ ಇಚ್ಛೆ ನನಗಿಲ್ಲ ; ನೀವು ನನಗೆ ದಯೆ ತೋರಿರಿ !"

ಆಕೆಯ ಬಿನ್ನಹವನ್ನು ಮನ್ನಿಸಿ, ಮುನಿಯು ಈ ರೀತಿ ಉತ್ತರಿಸಿದನು : "ನಿನ್ನ ಕೊನೆಯ ಮಗನು ನನ್ನ ವಂಶಕ್ಕೆ ಅನುರೂಪವಾದವನೂ ಧರ್ಮಾತ್ಮನೂ ಆಗುವನು." ಕಾಲಕ್ರಮೇಣ ಕೈಕಸಿಗೆ ರಾವಣ, ಕುಂಭಕರ್ಣ, ಶೂರ್ಪನಖಿ ಮತ್ತು ವಿಭೀಷಣ ಎಂಬ ಮಕ್ಕಳಾದರು.

ಕೈಕಸಿಯ ಬಿನ್ನಹವು ಯಾಚಿತ ಉಃಶಾಪದಂತಿದೆ.

## ೪೩. ವಿಶ್ರವಾ > ರಾವಣ

**ಉತ್ತರಕಾಂಡ / ೧೧**

ಅಗಸ್ತ್ಯಮುನಿಯು ಶ್ರೀರಾಮನಿಗೆ ರಾವಣ-ಮಂಡೋದರಿಯ ವಿವಾಹದ ವಿಷಯವನ್ನು ಹೇಳುತ್ತಾನೆ :

ರಾವಣನು ತನ್ನ ಮಂತ್ರಿಯಾದ ಪ್ರಹಸ್ತನನ್ನು, ಕುಬೇರನ ಬಳಿಗೆ ಕಳುಹಿಸಿ ಲಂಕಾಪಟ್ಟಣದ ಬೇಡಿಕೆಯನ್ನು ಮುಂದಿಟ್ಟನು. ಆಗ ಕುಬೇರನು ತನ್ನ ಪಿತನಾದ 'ವಿಶ್ರವಾ'ನ ಸಲಹೆಯನ್ನು ಕೇಳಿದಾಗ, ಆತನು ಲಂಕೆಯನ್ನು ರಾವಣನಿಗೆ ಅರ್ಪಿಸಿ, ಕುಬೇರನು ಕೈಲಾಸಪರ್ವತದಲ್ಲಿ ವಾಸವಿರಬೇಕೆಂದು ಹೇಳಿದನು. ಇಷ್ಟೇ ಅಲ್ಲದೆ, ಈ ಪೂರ್ವದಲ್ಲಿಯೂ ರಾವಣನು ತನ್ನ ಬಳಿಯಲ್ಲಿಯೂ ಲಂಕಾಪಟ್ಟಣವನ್ನು ಬೇಡಿದ್ದನೆಂದು ಹೇಳಿದನು. 'ಲಂಕೆಯ ಬಗ್ಗೆ ಇಷ್ಟೊಂದು ಅಭಿಲಾಷೆಯನ್ನಿಟ್ಟುಕೊಂಡರೆ ಅದು ನಿನ್ನ ನಾಶಕ್ಕೆ ಕಾರಣವಾಗುತ್ತದೆ' ಎಂದು ವಿಶ್ರವನು ರಾವಣನಿಗೆ ಸ್ಪಷ್ಟವಾಗಿ ಹೇಳಿದ್ದನು. ವರಪ್ರಾಪ್ತಿಯಿಂದ ಉನ್ಮತ್ತನಾದ ರಾವಣನು ವಿಶ್ರವನ ಉಪದೇಶವನ್ನು ಕಡೆಗಣಿಸಿದನು. ವಿಶ್ರವನು ಈ ರೀತಿ ಹೇಳುತ್ತಾನೆ :

ನ ವೇತ್ತಿ ಮಮ ಶಾಪಾಚ್ಚ ಪ್ರಕೃತಿಂ ದಾರುಣಾಂ ಗತಃ ॥ ೪೦ ॥

"ನನ್ನ ಶಾಪದಿಂದ ಆತನ ಸ್ವಭಾವವು ಕ್ರೂರವಾಗಿದೆ."

**ಉತ್ತರಕಾಂಡ / ೧೨**

ರಾವಣನು ಬೇಟೆಯಾಡಲು ಒಂದು ಜನರಹಿತ ಕಾನನದಲ್ಲಿ ಅಲೆಯುತ್ತಿದ್ದಾಗ, ತನ್ನ ಕನ್ಯೆಯೊಡನಿದ್ದ ಮಯನೆಂಬ ದೈತ್ಯನನ್ನು ಕಂಡನು. ರಾವಣನು ಏಕಾಕಿಯಾಗಿದ್ದ ಮಯನನ್ನು ಸಂಧಿಸಿ ಆತನ ಕುಶಲವನ್ನು ಕೇಳಿದನು. ಆಗ ಮಯನು ಈ ರೀತಿ ಉತ್ತರಿಸಿದನು : "ದೇವತೆಗಳು ನನಗೆ 'ಹೇಮಾ' ಎಂಬ ಅಪ್ಸರೆಯನ್ನು ಕೊಟ್ಟರು. ಅವಳಲ್ಲಿ ನಾನು ಸಹಸ್ರಾರು ವರ್ಷಗಳ ಕಾಲ ನಿರತನಾಗಿದ್ದೆ ; ಒಮ್ಮೆ ಆಕೆಯು ದೇವತಾಕಾರ್ಯಕ್ಕೆಂದು ದೇವಲೋಕಕ್ಕೆ ಹೋದವಳು ಹದಿಮೂರು ವರ್ಷಗಳು ಕಳೆದರೂ ಮರಳಿ ಬರಲಿಲ್ಲ, ಅವಳಿಂದ ಹುಟ್ಟಿದ ಈ ಕನ್ಯೆಯು ಈಗ ವಿವಾಹಯೋಗ್ಯವಾಗಿದ್ದಾಳೆ. ಹೇಮಾ ಇವಳ ವಿರಹದಿಂದ ವ್ಯಾಕುಲಗೊಂಡ ನಾನು ವರಸಂಶೋಧನೆಗಾಗಿ ಅಲ್ಲಲ್ಲಿ ಸುತ್ತುತ್ತ ಸಾಂಪ್ರತ ಇಲ್ಲಿಗೆ ಬಂದಿದ್ದೇನೆ." ಇಷ್ಟೊಂದು ನುಡಿದು ಮಯನು ರಾವಣನಿಗೆ ಆತನ ಮಾಹಿತಿಯನ್ನು ಹೇಳಲು ವಿನಂತಿಸಿದನು.

ರಾವಣನು ತಾನು ಪೌಲಸ್ತ್ಯಪುತ್ರ ದಶಗ್ರೀವನೆಂದು ಹೇಳಿದನು.

ಸ ಹಿ ತಸ್ಯ ಮಯೋ ರಾಮ ಶಾಪಾಭಿಜ್ಞಸ್ತಪೋಧನಾತ್ ॥ ೨೦ ॥
ವಿದಿತ್ವಾ ತೇನ ಸಾ ದತ್ತಾ ತಸ್ಯ ಪೈತಾಮಹಂ ಕುಲಮ್ । ೨೧

"ಭೀಕರತನವೇ ನಿನ್ನ ಸಹಜಗುಣವಾಗುವದು" ಎಂದು ವಿಶ್ರವನಿಂದ ರಾವಣನಿಗೆ ದೊರೆತ ಶಾಪದ ಮಾಹಿತಿಯು ಮಯನಿಗಿತ್ತು. ಹೀಗಿದ್ದರೂ, ರಾವಣನ ಪಿತಾಮಹನ ಕುಲಖ್ಯಾತಿಯನ್ನು ಗಮನಿಸಿ ತನ್ನ ಕನ್ಯೆಯನ್ನು ರಾವಣನಿಗೆ ಅರ್ಪಿಸಿದನು. ಈ ಕನ್ಯೆಯೇ ಮಂಡೋದರಿ ! ರಾವಣನು ಅಗ್ನಿಸಾಕ್ಷಿಯಾಗಿ ಅವಳನ್ನು ಪತ್ನಿಯೆಂದು ಸ್ವೀಕರಿಸಿದನು.

**ಉತ್ತರಕಾಂಡ / ೧೩**

ಕೇವಲ ಒಂದು ಉಲ್ಲೇಖ.

ವಿಶ್ರವನು ಯಾವ ಕಾರಣಕ್ಕಾಗಿ ರಾವಣನನ್ನು ಶಪಿಸಿದ್ದನು ? ಎಂಬುದು ಸ್ಪಷ್ಟವಿಲ್ಲ. ಬಹುಶಃ ಇದರ ಸಂಬಂಧವು ವಿಶ್ರವಾ > ಕೈಕಸಿ ಶಾಪದೊಡನೆ ಇರಬೇಕು.

ವೇದವತಿ > ರಾವಣ, ವರ ಕ. ೩೮ ನೋಡಿ.

ವಿಶ್ರವಾಮುನಿಯ ಶಾಪದಿಂದ ಕ್ರೂರನಾದ, ಗುರುಗಳ ಬಗ್ಗೆ ಅನಾಸ್ಥೆಯನ್ನು ತಳೆದ, ಅಸಭ್ಯ ವರ್ತನೆಯುಳ್ಳ ತನ್ನ ಸಹೋದರನಾದ ರಾವಣನು ಯುದ್ಧಕ್ಕೆ ಸಜ್ಜಾದಾಗ ಬ್ರಹ್ಮದೇವನ ಕುಲದಲ್ಲಿ ಹುಟ್ಟಿದವನಿಗೆ ತಕ್ಕ ರೀತಿಯಲ್ಲಿ ಇಂತೆಂದನು.

ಸದೃಷ್ಟ್ವಾ ಭ್ರಾತರಂ ಸಂಖ್ಯೇ ಶಾಪಾದ್ ವಿಪ್ರಪ್ರಗೌರವಮ್ । ೧೭

## ೪೪. ಪಾರ್ವತಿ > ಕುಬೇರ ಉತ್ತರಕಾಂಡ / ೧೩

ಅಗಸ್ತ್ಯಮುನಿಯು ರಾವಣನ ದುರ್ವರ್ತನೆಯ ಬಗ್ಗೆ ಶ್ರೀರಾಮನಿಗೆ ಹೇಳುತ್ತಾನೆ. ಕುಬೇರನು ತನ್ನ ದೂತನ ಮುಖಾಂತರ ರಾವಣನಿಗೆ ಉಪದೇಶಿಸಿದ್ದನ್ನು ದೂತನು ನುಡಿಯುತ್ತಾನೆ.

ದೇವಾದಿಗಳನ್ನು, ಋಷಿ, ಯಕ್ಷ, ಗಂಧರ್ವರನ್ನು ಹೊಡೆಯುವದು-ಬಡೆಯುವದು, ನಂದನ ಮುಂತಾದ ಉದ್ಯಾನಗಳನ್ನು ಧ್ವಂಸಗೊಳಿಸುವದು, ನದಿ-ಪರ್ವತ-ವೃಕ್ಷಗಳನ್ನು ನಾಶಗೊಳಿಸುವದು, ಇವೇ ಮೊದಲಾದ ರಾವಣನ ದುಷ್ಕೃತ್ಯಗಳನ್ನು ಕುರಿತು ಕೇಳಿದ ಕುಬೇರನು, ತನ್ನ ದೂತನೊಬ್ಬನನ್ನು ಲಂಕೆಗೆ ಕಳುಹಿಸಿ, ಸದ್ವರ್ತನೆಯಿಂದಿರಲು ರಾವಣನಿಗೆ ಉಪದೇಶಿಸಿದ್ದಾನೆ. ಈ ಸಂದರ್ಭದಲ್ಲಿ ಕುಬೇರನು ತಾನು ಸ್ವತಃ ನಿರ್ದೋಷಿಯಾಗಿದ್ದರೂ ಪಾರ್ವತಿಯ ಕೋಪಕ್ಕೆ ಯಾವ ರೀತಿ ಬಲಿಯಾದೆ ಎಂಬುದರ ಉದಾಹರಣೆಯನ್ನು ಕೊಟ್ಟಿದ್ದಾನೆ. ದೂತನ ಸಂದೇಶವನ್ನು ರಾವಣನಿಗೆ ಈ ರೀತಿ ಹೇಳುತ್ತಾನೆ :

"ನಾನು ನಿನ್ನ ಬಂಧುವಿನ ಸಂದೇಶವನ್ನು ಇದ್ದಕ್ಕಿದ್ದಂತೆ ನಿನಗೆ ಹೇಳುತ್ತೇನೆ. ಮಾತಾಪಿತೃಗಳ ಕುಲ ಮತ್ತು ಆಚರಣೆಯನ್ನು ಅನುಸರಿಸಿ ನೀನು ಸದ್ವರ್ತನಿಯಾಗಿರು ; ನಿನ್ನಿಂದ ಇನ್ನುಮುಂದೆ ಪಾತಕಗಳು ನಡೆಯದಿರಲಿ. ನಿನ್ನ ಎಲ್ಲ ಕುಚೋದ್ಯಗಳು ನನ್ನ ಕಿವಿಗೆ ಬಂದಿವೆ. ನಿನ್ನ ಪಾರುಪತ್ಯಕ್ಕಾಗಿ ದೇವತೆಯರು ಸಜ್ಜಾಗುತ್ತಿದ್ದಾರೆ. ಕಠೋರವ್ರತವನ್ನಾಚರಿಸುತ್ತಿದ್ದ ಶುದ್ಧ, ಜಿತೇಂದ್ರಿಯನಾದ ನಾನು, ನಿಷ್ಕಾರಣವಾಗಿ ಪಾರ್ವತಿಯ ರೋಷಕ್ಕೆ ಬಲಿಯಾದೆ. ನಾನು ಧರ್ಮಾಚರಣೆಗೆಂದು ಹಿಮಾಲಯ ಪರ್ವತಕ್ಕೆ ಹೋದಾಗ ಪಾರ್ವತೀಪರಮೇಶ್ವರರ ದರ್ಶನವು ನನಗಾಯಿತು. ಬೇರೆ ಯಾವ ಉದ್ದೇಶವಿರದೇ ಕೇವಲ ಕುತೂಹಲದಿಂದ ಅನುಪಮಲಾವಣ್ಯವತಿಯಾದ ಈ ಸ್ತ್ರೀಯತ್ತ ನಾನು ಎಡಗಣ್ಣಿನಿಂದ ನೋಡಿದ ಕ್ಷಣವೇ—

ದೇವ್ಯಾ ದಿವ್ಯಪ್ರಭಾವೇಣ ದಗ್ಧಂ ಸವ್ಯಂ ಮಮೇಕ್ಷಣಮ್ ।
ರೇಣುಧ್ವಸ್ತಮಿವ ಜ್ಯೋತಿಃ ಪಿಂಗಲತ್ವಮುಪಾಗತಮ್ ॥ ೨೪ ॥

ದೇವಿಯ ದಿವ್ಯಪ್ರಭಾವದಿಂದ ನನ್ನ ಎಡಗಣ್ಣು ಸುಟ್ಟು ಭಸ್ಮವಾಯಿತು. ಬಲಗಣ್ಣು ಕೊಳೆ ಸೇರಿಕೊಂಡು ಕಂದುಬಣ್ಣದ್ದಾಯಿತು.

ಅನಂತರ ನಾನು ತಪಸ್ಸಿನಿಂದ ಮಹಾದೇವನನ್ನು ಪ್ರಸನ್ನಗೊಳಿಸಿದೆನು. ಆತನ ಸ್ನೇಹವನ್ನು ಪಡೆದೆನು ; ಆದರೆ ಏಕಾಕ್ಷ, ಪಿಂಗಲ ಎಂಬ ಹೆಸರು ನನಗೆ ದೃಢವಾಯಿತು. ಆದಕಾರಣ ಹೇ ರಾವಣನೇ, ನೀನು ಪಾಪಕೃತ್ಯಗಳಿಂದ ದೂರವಾಗಿರು ! ಕುಲಕ್ಕೆ ಕಲಂಕವನ್ನು ತರುವ ಯಾವ ಕಾರ್ಯವನ್ನೂ ಮಾಡಬೇಡ !"

ದೂತನ ಈ ಭಾಷಣವನ್ನು ಕೇಳಿ ರಾವಣನು ಕೋಪಗೊಂಡನು. ದೂತನ ಸಮೇತ ಕುಬೇರನನ್ನು ಯಮಸದನಕ್ಕೆ ಕಳುಹಿಸುವ ಪ್ರತಿಜ್ಞೆಯನ್ನು ಮಾಡಿ, ಆ ದೂತನನ್ನು ಕೊಂದುಬಿಟ್ಟನು.

ಈ ಶಾಪವು ಸಂಶಯಾಸ್ಪದವಿದೆ. ಕುಬೇರನ ಎಡಗಣ್ಣು ಸುಟ್ಟುಹೋಗಿದ್ದು ಮತ್ತು ಬಲಗಣ್ಣು ಕಂದುಬಣ್ಣಕ್ಕೆ ತಿರುಗಿದ್ದು, ಪಾರ್ವತಿಯ ದಿವ್ಯತೇಜಸ್ಸಿನಿಂದಲೋ ಅಥವಾ ಶಾಪದಿಂದಲೋ ? ಪಾರ್ವತಿಯು ಶಾಪವನ್ನು ಉಚ್ಚರಿಸಲಿಲ್ಲ ; ಶಾಪವು ಒಂದು ವಾಚಾ-ಶಕ್ತಿಯಾಗಿರುತ್ತದೆ ; ಅಂದಬಳಿಕ ಮೇಲಿನ ಘಟನೆ ಶಾಪವೆಂದಾಗಲಾರದು.

## ೪೫. ನಲಕೂಬರ > ರಾವಣ ಉತ್ತರಕಾಂಡ / ೨೬

ಅಗಸ್ತ್ಯಋಷಿಯು ಶ್ರೀರಾಮನಿಗೆ ನಲಕೂಬರನು ರಾವಣನಿಗೆ ಕೊಟ್ಟ ಶಾಪದ ವೃತ್ತಾಂತವನ್ನು ವಿವರಿಸುತ್ತಿದ್ದಾನೆ :

ಒಮ್ಮೆ ರಾವಣನು ಕೈಲಾಸಪರ್ವತದಲ್ಲಿ ವಿಹರಿಸುತ್ತಿದ್ದಾಗ, ದಿವ್ಯಭೂಷಣಗಳಿಂದ ಅಲಂಕೃತಳಾದ ಚಂದ್ರಮುಖಿಯಾದ ರಂಭೆಯು ಆತನ ಕಣ್ಣಿಗೆ ಬಿದ್ದಳು. ಲಾವಣ್ಯವತಿಯಾದ ಅವಳು ಚಂದನದ ಲೇಪನವನ್ನು ಹಚ್ಚಿಕೊಂಡಿದ್ದಳು. ಕಲ್ಪವೃಕ್ಷದ ಕುಸುಮಗಳಿಂದ ಆಕೆಯು ತನ್ನ ಕೇಶರಾಶಿಯನ್ನು ಶೃಂಗರಿಸಿಕೊಂಡಿದ್ದಳು. ಅವಳು ದಿವ್ಯರತಿಸುಖದ ಉಪಭೋಗವನ್ನು ಪಡೆಯಲು ಹೊರಟಿದ್ದಳು. ಉಟ್ಟ ನೀಲವರ್ಣದ ಉಡುಪಿನಿಂದ ಆಕೆ ಪರಮಸುಂದರಿಯಾಗಿ ಕಾಣುತ್ತಿದ್ದಳು. ಮನ್ಮಥನ ಶರಗಳಿಂದ ಪೀಡಿತನಾದ ರಾವಣನು ಆಕೆಯ ಕೈಹಿಡಿದು, "ಎಲೈ ಸುಂದರೀ, ಎಲ್ಲಿಗೆ ಹೊರಟಿರುವೆ ? ಯಾರ ಬಳಿ ಹೋಗಲಿರುವೆ ?" ಎಂದು ಕೇಳಿ ಅವಳಿಂದ ರತಿಸುಖವನ್ನು ಬಯಸಿದನು.

ಲಜ್ಜಾಯುಕ್ತೆಯಾದ ರಂಭೆಯು ಭಯಭೀತಳಾದಳು. ಅವಳು ಕಂಪಿಸುತ್ತಿದ್ದಳು. ಅವಳು ರಾವಣನಿಗೆ ವಿನಯಪೂರ್ವಕವಾಗಿ ಈ ರೀತಿ ಎಂದಳು : "ನನ್ನೊಡನೆ ಈ ರೀತಿ ಮಾತನಾಡುವುದು ನಿಮಗೆ ಯೋಗ್ಯವಲ್ಲ. ನೀವು ನನ್ನ ಮಾವಂದಿರು. ನನ್ನನ್ನು ರಕ್ಷಿಸುವದು ನಿಮ್ಮ ಕರ್ತವ್ಯ. ಕ್ರೋಧದಲ್ಲಿ ಅಗ್ನಿ ಮತ್ತು ಕ್ಷಮೆ ತೋರುವದರಲ್ಲಿ ಪೃಥ್ವಿಗೆ ಸಮಾನರು. ಕುಬೇರನ ಪುತ್ರನಾದ ನಲಕೂಬರನು ನನ್ನ ಪ್ರಿಯಕರನಾಗಿದ್ದಾನೆ. ಈ ಶೃಂಗಾರವನ್ನು ಮಾಡಿಕೊಂಡು ಸಂಕೇತದ ಪ್ರಕಾರ ನಾನು ಆತನ ಬಳಿಗೆ ಹೋಗುತ್ತಿದ್ದೇನೆ ; ನನಗಾಗಿ ಆತನು ಕಾಯುತ್ತಿರುತ್ತಾನೆ ; ಆದಕಾರಣ ನನ್ನನ್ನು ಕೂಡಲೆ ಹೋಗಲು ಬಿಡಿ ! ನಾನು ಅವನ ಬಳಿ ಹೋಗುತ್ತೇನೆ." ಈ ಮಾತನ್ನು ಕೇಳಿ ರಾವಣನು "ನೀನು ನನ್ನ ಸೊಸೆಯೆಂದುಕೊಂಡರೂ ನೀನು ಓರ್ವ ಅಪ್ಸರೆ ; ಜನಸಾಮಾನ್ಯರ ನಿಯಮಗಳು ನಿನಗೆ ಅನ್ವಯಿಸುವದಿಲ್ಲ. ಅಪ್ಸರೆಯರಿಗೆ ಒಬ್ಬನೇ ಪತಿ ಇರುವದಿಲ್ಲ ; ದೇವತೆಗಳಿಗೆ ಒಬ್ಬಳೇ ಪತ್ನಿ ಇರುವದಿಲ್ಲ." ಹೀಗೆಂದು ಬಲಾತ್ಕಾರಮಾಡಿ ರಂಭೆಯನ್ನು ಉಪಭೋಗಿಸಿದನು. ರಂಭೆಯು ಲಜ್ಜಾ-ಭಯಗಳಿಂದ ಕಂಪಿಸುತ್ತ ನಲಕೂಬರನ ಹತ್ತಿರ ಹೋದಳು. ಅವನ ಪಾದಕ್ಕೆ ಬಿದ್ದು ನಡೆದ ವೃತ್ತಾಂತವನ್ನು ಅವನಿಗೆ ಅರುಹಿದಳು. ಅದನ್ನು ಕೇಳಿ ನಲಕೂಬರನು ಕ್ರೋಧವಿವಶನಾದನು. ಕೈಯಲ್ಲಿ ಉದಕವನ್ನು ಎತ್ತಿಕೊಂಡು ಆಚಮನ ಮಾಡಿದನು :

ಉತ್ಸಸರ್ಜ ತದಾ ಶಾಪಂ ರಾಕ್ಷಸೇಂದ್ರಾಯ ದಾರುಣಮ್ ।
ಅಕಾಮಾ ತೇನ ಯಸ್ಮಾತ್ತ್ವಂ ಬಲಾದ್ ಭದ್ರೇ ಪ್ರಧರ್ಷಿತಾ ॥ ೫೬ ॥
ತಸ್ಮಾತ್ಸ ಯುವತೀಮನ್ಯಾಂ ನಾಕಾಮಾಮುಪಯಾಸ್ಯತಿ ।
ಯದಾ ಹ್ಯಕಾಮಾಂ ಕಾಮಾರ್ತೋ ಧರ್ಷಯಿಷ್ಯತಿ ಯೋಷಿತಾಮ್ ॥ ೫೭ ॥
ಮೂರ್ಧಾ ತು ಸಪ್ತಧಾ ತಸ್ಯ ಶಕಲೀಭವಿತಾ ತದಾ । ೫೮

"ಎಲೈ ಕಲ್ಯಾಣೀ, ನಿನ್ನ ಇಚ್ಛೆಯಿರದಾಗ ಅವನು ನಿನ್ನನ್ನು ಬಲಾತ್ಕಾರದಿಂದ ಭೋಗಿಸಿದ್ದಾನೆ ; ಇನ್ನು ಮುಂದೆ ಆತನು ಪುನಃ ಎಂದಿಗೂ ತರುಣಿಯೊಡನೆ ಆಕೆಯ ಸಮ್ಮತಿ ಇರದೆ ಸಮಾಗಮ ನಡೆಸಲಾರನು. ಕಾಮ ಪೀಡಿತನಾದ ಇವನು ಇಚ್ಛೆ ಇಲ್ಲದೆ ಸ್ತ್ರೀಯ ಮೇಲೆ ಬಲಾತ್ಕಾರ ನಡೆಯಿಸಿದರೆ ಈತನ ತಲೆ ಸಿಡಿದು ಏಳು ಹೋಳಾಗುವದು !" ಎಂದು ನಲಕೂಬರನು ರಾವಣನಿಗೆ ಶಾಪವನ್ನು ಕೊಟ್ಟನು.*

ಶ್ರುತ್ವಾ ಸ ತು ದಶಗ್ರೀವಸ್ತಂ ಶಾಪಂ ರೋಮಹರ್ಷಣಮ್ ।
ನಾರೀಷು ಮೈಥುನೀಭಾವಂ ನಾಕಾಮಾಸ್ವಭ್ಯರೋಚಯತ್ ॥ ೫೯ ॥
ತೇನ ನೀತಾಃ ಸ್ತ್ರಿಯಃ ಪ್ರೀತಿಮಾಪುಃ ಸರ್ವಾಃ ಪತಿವ್ರತಾಃ ।
ನಲಕೂಬರನಿರ್ಮುಕ್ತಂ ಶಾಪಂ ಶ್ರುತ್ವಾ ಮನಃಪ್ರಿಯಮ್ ॥ ೬೦ ॥

* "ನಾನು ವೈಶ್ರವಣಪುತ್ರನಾದ ನಲಕೂಬರನೊಡನೆ ಕ್ರೀಡೆಯ ಸಂಕಲ್ಪವನ್ನು ಮಾಡಿರುವದರಿಂದ ಇಂದು ನಾನು ಆತನ ಭಾರ್ಯೆಯಾಗಿದ್ದೇನೆ. ಆದ್ದರಿಂದ ನಾನು ನಿಮ್ಮ ಸೊಸೆ." ರಂಭೆಯ ನುಡಿಯ ಈ ಉಲ್ಲೇಖವು ಶ್ರೀರಾಮಕೋಶ, ಖಂಡ ೧, ಭಾಗ ೧, ಪೃಷ್ಠಸಂಖ್ಯೆ ೬೮ರಲ್ಲಿದೆ. 'ನಾನು ಇಂದು ಅವನ ಭಾರ್ಯೆ' ಎಂಬ ಉಲ್ಲೇಖವನ್ನು ವಾಲ್ಮೀಕಿಯು ಮಾಡಿಲ್ಲ.

ಧರ್ಮತಸ್ತೇ ಸುತಸ್ಯಾಹಂ ಭಾರ್ಯಾ... ॥ ೩೨ ॥ ನಾನು ಧರ್ಮದಿಂದ ನಿಮ್ಮ ಮಗನ ಭಾರ್ಯೆಯಾಗಿದ್ದೇನೆ.
ಯಥಾ ತಸ್ಯ ಹಿ ನಾನ್ಯಸ್ಯ ಭಾವೋ ಮಾಂ ಪ್ರತಿತಿಷ್ಠತಿ ॥ ೩೫ ॥
ಅವನನ್ನು ಪ್ರೀತಿಸುವಂತೆ ನಾನು ಬೇರೆ ಯಾರನ್ನೂ ಪ್ರೀತಿಸುವದಿಲ್ಲ. ಇದು ಸತ್ಯವಾದದ್ದು. ಶ್ಲೋಕದ ಈ ಚರಣಗಳನ್ನು ಗಮನಿಸಿದರೆ ಶ್ರೀರಾಮಕೋಶಕಾರರು ಯೋಜಿಸಿದ 'ಇಂದು' ಎಂಬ ಶಬ್ದದ ಬಳಕೆಯು ಸೂಕ್ತವೆನಿಸದು.

ಮೈನವಿರೇಳಿಸುವ ಆ ಶಾಪವನ್ನು ಕೇಳಿ ರಾವಣನು ಅನುಮತಿ ಇರದ ಯಾವದೇ ಸ್ತ್ರೀಯೊಡನೆ ಬಲಾತ್ಕಾರ ಮಾಡುವದನ್ನು ತ್ಯಜಿಸಿದನು. ರಾವಣನು ಈ ಮೊದಲು ಎಷ್ಟೊಂದು ಸ್ತ್ರೀಯರನ್ನು ಅಪಹರಿಸಿ ಬಲಾತ್ಕರಿಸಿದ್ದನೋ ಅಂಥ ಸ್ತ್ರೀಯರಿಗೆಲ್ಲ ಈ ನಲಕೂಬರನು ರಾವಣನಿಗೆ ಕೊಟ್ಟ ಶಾಪವು ಬಲು ಹಿಡಿಸಿತು. ಅವರೆಲ್ಲ ಸಂತೋಷಪಟ್ಟರು.

**೪೬. ಮುನಿಗಳು > ಹನುಮಾನ** **ಉತ್ತರಕಾಂಡ / ೩೫**

ಹನುಮಂತನ ಗತಿ, ಮತಿ ಮತ್ತು ಬಲಕ್ಕೆ ಸರಿಸಮಾನರಾದವರು ಯಾರೊಬ್ಬರೂ ಇರಲಿಲ್ಲ. ಹೀಗಿದ್ದರೂ ತನ್ನ ಬಲದ ಅರಿವು ಆತನಿಗೆ ಇರಬಾರದೆಂದು ಮುನಿಗಳು ಇಂಥ ಶಾಪವನ್ನು ಕೊಟ್ಟಿದ್ದಾರೆ. ಅಗಸ್ತ್ಯ ಋಷಿಯು ಶ್ರೀರಾಮನಿಗೆ ಈ ಕಥೆಯನ್ನು ಹೇಳುತ್ತಾನೆ.

ಅಮೋಘಶಾಪೈಃ ಶಾಪಸ್ತು ದತ್ತೋಽಸ್ಯ ಮುನಿಭಿಃ ಪುರಾ ।
ನ ವೇತ್ತಾ ಹಿ ಬಲಂ ಸರ್ವಂ ಬಲೀ ಸನ್ನರಿಮರ್ದನ ॥ ೧೬ ॥

ಅಗಸ್ತ್ಯಮುನಿಯು ರಾಮನಿಗೆ ಈ ರೀತಿ ಹೇಳುತ್ತಿದ್ದಾನೆ : "ಎಲೈ ಶತ್ರುನಾಶಕನೇ ! ಹನುಮಂತನು ಬಲಶಾಲಿಯಾಗಿದ್ದರೂ ಸ್ವಂತದ ಬಲದ ಅರಿವು ಆತನಿಗೆ ಇರಕೂಡದೆಂದು ಮುನಿಗಳು ಪೂರ್ವದಲ್ಲಿ ಆತನಿಗೆ ಶಾಪವನ್ನು ಕೊಟ್ಟಿದ್ದಾರೆ. ಆ ಮುನಿಗಳ ಶಾಪವು ಎಂದೆಂದಿಗೂ ವ್ಯರ್ಥವಾಗುವದಿಲ್ಲ."

**ಉತ್ತರಕಾಂಡ / ೩೬**

ವರದಿಂದ ದೊರೆತ ಬಲದಿಂದಾಗಿ ಹನುಮಂತನು ಅಪಾರ, ಅಗಾಧ ಸಮುದ್ರದಂತಿದ್ದಾನೆ. ಆತನ ವೇಗವು ದಿನದಿನಕ್ಕೆ ವರ್ಧಿಸುತ್ತಿದೆ. ಈತನು ಮಹರ್ಷಿಗಳ ಆಶ್ರಮದಲ್ಲಿ ನಿಸ್ಸಂಕೋಚವಾಗಿ ಸಂಚರಿಸಿ ಯಜ್ಞಪಾತ್ರೆಗಳನ್ನು, ಅಗ್ನಿ, ವಲ್ಕಲಗಳನ್ನು ಭಗ್ನಗೊಳಿಸುವದು, ಧ್ವಂಸಗೊಳಿಸುವದು ಮುಂತಾದವುಗಳನ್ನು ಮಾಡುತ್ತಾನೆ. ಬ್ರಹ್ಮದಂಡದಿಂದ ಕೂಡ ಆತನ ವಧೆಯಾಗುವಂತಿಲ್ಲ. ಹೀಗಿದ್ದುದರಿಂದ ಋಷಿಗಳು ಆತನ ಅತಿಕ್ರಮಣವನ್ನು ಸಹಿಸುತ್ತಿದ್ದರು. ತಂದೆಯಾದ ಕೇಸರಿ ಹಾಗೂ ವಾಯು ಇದನ್ನು ನಿಷೇಧಿಸಿದರು. ಹನುಮಂತನು ಮರ್ಯಾದೆಯನ್ನು ಮೀರುತ್ತಿದ್ದನು. ಭೃಗು ಹಾಗೂ ಅಂಗೀರಸ ವಂಶದ ಋಷಿಗಳು ಅವನ ಈ ಕಪಿಚೇಷ್ಟೆಗಳಿಂದ ಸಿಟ್ಟಾದರು ; ಆದರೆ ಹನುಮಂತನನ್ನು ನಾಶಗೊಳಿಸುವ ಇಚ್ಛೆಯನ್ನು ಇಟ್ಟುಕೊಳ್ಳದೇ ಮತ್ತು ಹೆಚ್ಚಾದ ಕೋಪವನ್ನು ವ್ಯಕ್ತಮಾಡದೇ ಅವರು ಈ ರೀತಿ ನುಡಿದರು :

ಬಾಧಸೇ ಯತ್ಸಮಾಶ್ರಿತ್ಯ ಬಲಮಸ್ಮಾನ್ ಪ್ಲವಂಗಮ । ೩೪
ತದ್ದೀರ್ಘಕಾಲಂ ವೇತ್ತಾಸಿ ನಾಸ್ಮಾಕಂ ಶಾಪಮೋಹಿತಃ ।
ಯದಾ ತೇ ಸ್ಮಾರ್ಯತೇ ಕೀರ್ತಿಸ್ತದಾ ತೇ ವರ್ಧತೇ ಬಲಮ್ ॥ ೩೫ ॥

"ಹೇ ಕಪಿಯೇ, ಬಲದ ಆಶ್ರಯದಿಂದ ನೀನು ನಮ್ಮನ್ನು ಕಾಡುತ್ತಿರುವಿ ; ನಮ್ಮ ಶಾಪದಿಂದ ಆ ಬಲದ ಜ್ಞಾಪಕವು ಬಹುಕಾಲದವರೆಗೆ ನಿನಗೆ ಇರಲಾರದು. ಯಾರಾದರೂ ನಿನ್ನ ಯೋಗ್ಯತೆಯ ಬಗ್ಗೆ ನಿನಗೆ ಜ್ಞಾಪಿಸಿಕೊಟ್ಟ ಕ್ಷಣದಿಂದ ನಿನ್ನ ಬಲವು ಪುನಃ ವೃದ್ಧಿಂಗತವಾಗುವದು."

ಮಹರ್ಷಿಗಳ ಈ ಉದ್ಗಾರಗಳಿಂದ ಹನುಮಂತನಲ್ಲಿ ತನ್ನ ಸ್ವಸಾಮರ್ಥ್ಯದ ಅರಿವು ಉಳಿಯಲಿಲ್ಲ ವಾದ್ದರಿಂದ ಆತನು ಸೌಮ್ಯವೃತ್ತಿಯವನಾಗಿ ಆಶ್ರಮಗಳಲ್ಲಿ ಸಂಚರಿಸಹತ್ತಿದನು. ವಾಲಿ ಮತ್ತು ಸುಗ್ರೀವರಲ್ಲಿ ಹಗೆತನ ಉಂಟಾದಾಗ ಹನುಮಂತನಿಗೆ ತನ್ನಲ್ಲಿದ್ದ ಬಲದ ಸ್ಮರಣೆ ಇರಲಿಲ್ಲವಾದ್ದರಿಂದ ವಾಲಿಯನ್ನು ಸದೆಬಡಿಯುವುದು ಆತನಿಂದಾಗಲಿಲ್ಲ.

ಋಷಿಶಾಪಹೃತಬಲಸ್ತದೈವ ಕಪಿಸತ್ತಮಃ ।
ಸಿಂಹಃ ಕುಂಜರರುದ್ಧೋ ವಾ ಆಸ್ಥಿತಃ ಸಹಿತೋ ರಣೇ ॥ ४೩ ॥

ಸುಗ್ರೀವ ಸಂಕಟಕ್ಕೆ ಒಳಗಾದಾಗ ಮುನಿಗಳ ಶಾಪದಿಂದಾಗಿ ಈತನಲ್ಲಿ ತನ್ನ ಸಾಮರ್ಥ್ಯದ ಅರಿವು ಉಳಿದಿರಲಿಲ್ಲ. ಆನೆಯ ಎದುರು ಸಿಂಹವು ತೆಪ್ಪಗಾಗುವಂತೆ ವಾಲಿ-ಸುಗ್ರೀವರ ಕಾಳಗದ ಕಾಲಕ್ಕೆ ಕೂಡ ಈತ ತಟಸ್ಥನಾಗಿ ಅದನ್ನು ನೋಡುತ್ತಲಿದ್ದನು.

ಇದೊಂದು ಉಲ್ಲೇಖ ಮಾತ್ರವಾಗಿದೆ. ಶಾಪದ ಈ ಉತ್ತರಭಾಗವು ಉಃಶಾಪದಂತಿದೆ. ಅದು ಅಯಾಚಿತವಿದೆ. ಉಃಶಾಪವು ಸಾಮಾನ್ಯವಾಗಿ ಯಾಚಿತವಿರುತ್ತದೆ ; ಆದರೆ ಹನುಮಂತನು ಉಃಶಾಪವನ್ನು ಬೇಡಿಕೊಂಡ ದಾಖಲೆಯಿಲ್ಲ.

## ೪೭. ಭೃಗು > ವಿಷ್ಣು    ಉತ್ತರಕಾಂಡ / ೫೧

ಸಾರಥಿಯಾದ ಸುಮಂತ್ರನು ಹಿಂದೆ ದುರ್ವಾಸ ಮುನಿಯು ಹೇಳಿದ ಒಂದು ಕಥೆಯನ್ನು ಲಕ್ಷ್ಮಣನಿಗೆ ಹೇಳುತ್ತಿದ್ದಾನೆ :

ಒಮ್ಮೆ ದಶರಥರಾಜನು ವಸಿಷ್ಠಮುನಿಯ ಆಶ್ರಮಕ್ಕೆ ಹೋಗಿದ್ದನು. ಅಲ್ಲಿ ಅವನಿಗೆ ದುರ್ವಾಸ ಋಷಿಯ ದರ್ಶನವಾಯಿತು. ವರ್ಷಾಕಾಲದ ವಾಸಕ್ಕಾಗಿ ದುರ್ವಾಸ ಋಷಿಯು ಅಲ್ಲಿಗೆ ಬಂದಿದ್ದನು. ರಾಜನು ಆ ಇಬ್ಬರೂ ಋಷಿಗಳನ್ನು ಅಭಿವಾದಿಸಿದನು. ಅವರು ಸಹ ರಾಜನಿಗೆ ಯಥೋಚಿತ ಸ್ವಾಗತವನ್ನು ಬಯಸಿದರು. ದಶರಥರಾಜನು ದುರ್ವಾಸ ಋಷಿಯನ್ನು ಈ ರೀತಿ ಪ್ರಶ್ನಿಸಿದನು : "ನಮ್ಮ ವಂಶವು ಎಷ್ಟು ಕಾಲದವರೆಗೆ ನಡೆಯುವದು ? ಶ್ರೀರಾಮನ ಆಯುಸ್ಸು ಎಷ್ಟಿದೆ ? ಇತರ ಪುತ್ರರ ಆಯುರ್ಮರ್ಯಾದೆ ಎಷ್ಟೆಷ್ಟಿದೆ ? ಶ್ರೀರಾಮನ ಮಕ್ಕಳು ಎಷ್ಟು ಕಾಲ ಜೀವಿಸುವರು ? ಈ ಬಗ್ಗೆ ಹೇಳಬೇಕು." ಆಗ ದುರ್ವಾಸನು ಪೂರ್ವವೃತ್ತಾಂತವನ್ನು ಹೇಳಿದನು :

ದೇವ–ದೈತ್ಯರಲ್ಲಿ ಯುದ್ಧ ನಡೆದಾಗ ದೇವತೆಗಳು ದೈತ್ಯರನ್ನು ಹೀಯಾಳಿಸಹತ್ತಿದರು. ಆಗ ದೈತ್ಯರು ಭೃಗುಪತ್ನಿಯ ಆಶ್ರಯವನ್ನು ಪಡೆದರು. ಅವಳು ದೈತ್ಯರಿಗೆ ಅಭಯವನ್ನಿತ್ತಳು. ದೈತ್ಯರು ಆಕೆಯ ರಕ್ಷಣೆಯಲ್ಲಿರುವುದನ್ನು ಕಂಡು ವಿಷ್ಣುವಿಗೆ ರೇಗಿತು. ಆತನು ತನ್ನ ಚಕ್ರದಿಂದ ಭೃಗುಪತ್ನಿಯ ಶಿರವನ್ನು ಹಾರಿಸಿದನು. ಪತ್ನಿಯ ವಧೆಯಾಗಿದ್ದನ್ನು ಕಂಡು ಭೃಗುವು ಅತ್ಯಂತ ಕ್ರೋಧಾವಿಷ್ಟನಾದನು.

ಅವಧ್ಯಾಂ ಸ್ತ್ರೀತ್ವಾದ್ ಋಷಿಪತ್ನಿತ್ವಾಚ ವಧಾನಾರ್ಹಾಮ್ ॥

ಸ್ತ್ರೀವಧೆಯು ಸರ್ವಥಾ ಅಯೋಗ್ಯ ; ಅದರಲ್ಲೂ ಋಷಿಪತ್ನಿಯ ವಧೆಯಂತೂ ತೀರಾ ಅಯೋಗ್ಯ.

ಶಶಾಪ ಸಹಸಾ ಕ್ರುದ್ಧೋ ವಿಷ್ಣುಂ ರಿಪುಕುಲಾರ್ದನಮ್ ॥ ೧೪ ॥
ಯಸ್ಮಾದವಧ್ಯಾಂ ಮೇ ಪತ್ನೀಮವಧೀಃ ಕ್ರೋಧಮೂರ್ಚ್ಛಿತಃ ।
ತಸ್ಮಾತ್ತ್ವಂ ಮಾನುಷೇ ಲೋಕೇ ಜನಯಿಷ್ಯಸಿ ಜನಾರ್ದನ ॥ ೧೫ ॥
ತತ್ರ ಪತ್ನೀವಿಯೋಗಂ ತ್ವಂ ಪ್ರಾಪ್ಸ್ಯಸೇ ಬಹುವಾರ್ಷಿಕಮ್ । ೧೬

ಭೃಗುವು ಶತ್ರುಸಮೂಹವನ್ನು ನಾಶಗೊಳಿಸುವ ಆ ವಿಷ್ಣುವಿಗೆ ಶಾಪಕೊಟ್ಟನು : "ಎಲೈ ಜನಾರ್ದನನೇ, ನೀನು ಅವಧ್ಯಳಾದ ನನ್ನ ಪತ್ನಿಯನ್ನು ಕೋಪಾವೇಗದಲ್ಲಿ ವಧಿಸಿರುವೆ ; ಅದಕ್ಕಾಗಿ ನೀನು ಮನುಷ್ಯ ಲೋಕದಲ್ಲಿ ಜನ್ಮತಾಳುವೆ ; ಅಲ್ಲಿ ಅನೇಕ ವರುಷಗಳ ಕಾಲ ನಿನಗೆ ಪತ್ನೀವಿಯೋಗದ ದುಃಖವು ಪ್ರಾಪ್ತವಾಗುವದು."

ಶಾಪವನ್ನು ಕೊಟ್ಟನಂತರ ಭೃಗುವು ನೊಂದುಕೊಂಡನು. ಆತನು ವಿಷ್ಣುವನ್ನು ಪೂಜಿಸಿ ಅವನನ್ನು ಸಂತೋಷಪಡಿಸಿದನು. ಭಕ್ತವತ್ಸಲನಾದ ವಿಷ್ಣುವು, ಆಗ ತಾನು "ಲೋಕಕಲ್ಯಾಣಕ್ಕಾಗಿ ಈ ಶಾಪವನ್ನು ಅಂಗೀಕರಿಸಲೇಬೇಕು" ಎಂದನು. ದುರ್ವಾಸನು ರಾಜನಿಗೆ "ಸಾಕ್ಷಾತ್ ವಿಷ್ಣುವು ನಿನ್ನ ಪುತ್ರನಾಗಿ 'ಶ್ರೀರಾಮ' ನೆಂದು ಹುಟ್ಟಿಬಂದಿದ್ದಾನೆ. ಆತನು ಮೂರೂ ಲೋಕದಲ್ಲಿ ಖ್ಯಾತಿಗೊಳ್ಳುವನು. ಭೃಗುವಿನ ಶಾಪದ ವಿಪುಲ ಫಲವು ಆತನಿಗೆ ಲಭಿಸುವದು. ಬಹುಕಾಲದವರೆಗೆ ಅಯೋಧ್ಯಾಪತಿಯಾಗಿ ಬಾಳುವನು ; ಆತನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯವನ್ನಾಳಿ ಬ್ರಹ್ಮಲೋಕಕ್ಕೆ ತೆರಳುವನು. ಅಶ್ವಮೇಧಯಜ್ಞವನ್ನು ಅನೇಕಾವರ್ತಿ ಆಚರಿಸಿ ರಾಜವಂಶದ ಉತ್ಥಾಪನೆಯನ್ನು ಮಾಡುವನು."

## ೪೮. (ಇಬ್ಬರು) ಬ್ರಾಹ್ಮಣರು > ನೃಗರಾಜ    ಉತ್ತರಕಾಂಡ / ೫೩

ಸೀತೆಯನ್ನು ತ್ಯಜಿಸಬೇಕೆಂದು ನಿಶ್ಚಯಿಸಿದನಂತರ ಶ್ರೀರಾಮನು, ಅವಳನ್ನು ವಾಲ್ಮೀಕಿಯ ಆಶ್ರಮದ

ಹತ್ತಿರ ಬಿಟ್ಟುಬರುವ ದುಸ್ತರಕಾರ್ಯವನ್ನು ಲಕ್ಷ್ಮಣನಿಗೆ ವಹಿಸಿದನು. ಸೀತೆಯನ್ನು ಕಳುಹಿಸಿ ಮರಳಿದ ಲಕ್ಷ್ಮಣನು ಶ್ರೀರಾಮನನ್ನು ಭೇಟಿಯಾದಾಗ ಆತನು ಅತ್ಯಂತ ಖಿನ್ನನಾಗಿದ್ದನ್ನು ಕಂಡನು. ಅವನು ಕಳೆದ ನಾಲ್ಕು ದಿನಗಳಲ್ಲಿ ಯಾವ ಪ್ರಜಾಕಾರ್ಯವನ್ನೂ ಮಾಡಿರಲಿಲ್ಲ. ಈ ಸಂಗತಿಯು ಶ್ರೀರಾಮನನ್ನು ಕಾಡುತ್ತಿತ್ತು. ಲಕ್ಷ್ಮಣನು ಆತನನ್ನು ಸಮಾಧಾನವಡಿಸಿದನು. ಆಗ, ಪುರಜನರ ಕಾರ್ಯಗಳನ್ನು ನೆರವೇರಿಸದೆ ಇರುವ ರಾಜನ ಗತಿ ಏನಾಗುತ್ತದೆ ಎಂಬುದರ ಬಗ್ಗೆ ಶ್ರೀರಾಮನು ಲಕ್ಷ್ಮಣನಿಗೆ ನೃಗರಾಜನ ಕಥೆಯನ್ನು ಹೇಳಿದನು :

ಪೂರ್ವದಲ್ಲಿ ಮಹಾಯಶಸ್ವಿಯಾದ, ಬ್ರಾಹ್ಮಣಪ್ರಿಯನಾದ, ಸತ್ಯವಚನಿಯಾದ, ಶಬ್ದಾರ್ಥದಿಂದ ಹಾಗೂ ನಿಜಾರ್ಥದಿಂದ 'ಭೂಪಾಲ'ನೆಂದೆನಿಸಿಕೊಳ್ಳುವ, 'ನೃಗ'ನೆಂಬ ಒಬ್ಬ ರಾಜನಿದ್ದನು. ಒಮ್ಮೆ ಆತನು ಪುಷ್ಕರತೀರ್ಥದಲ್ಲಿ ಸುವರ್ಣಾಭೂಷಿತ ಕೋಟ್ಯಾವಧಿ ಹಸುಗಳನ್ನು ಅವುಗಳ ಕರುಗಳ ಜೊತೆಗೆ ಬ್ರಾಹ್ಮಣನೊಬ್ಬನಿಗೆ ದಾನವಾಗಿ ಕೊಟ್ಟನು. ಅದೇ ಸಮಯದಲ್ಲಿ ಒಬ್ಬ ಬ್ರಾಹ್ಮಣನ ಒಂದು ಹಸುವು ಹೊಲದಲ್ಲಿ ಭೂಮಿಗೆ ಬಿದ್ದ ಧಾನ್ಯ-ಕಣಗಳನ್ನು ಮೇಯ್ದು ಜೀವಿಸುತ್ತಿತ್ತು. ಈ ಹಸುವು ಆ ದಾನಕೊಡಲಿದ್ದ ರಾಜನ ಕೋಟ್ಯಾವಧಿ ಹಸುಗಳ ಮಂದೆಯನ್ನು ಸೇರಿಕೊಂಡಿತ್ತು. ರಾಜನು ಇದನ್ನು ಅರಿಯದೇ ಈ ಹಸುವನ್ನೂ ಒಬ್ಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು. ಆ ಬಡಬ್ರಾಹ್ಮಣನು ತನ್ನ ಕಳೆದುಕೊಂಡ ಹಸುವನ್ನು ಎಲ್ಲೆಡೆಯಲ್ಲಿಯೂ ಹುಡುಕಿದನು. ಸಾಕಷ್ಟು ಸಮಯವು ಕಳೆಯಿತು. ಇದೇ ರೀತಿ ಶೋಧಾರ್ಥವಾಗಿ ಅಲೆಯುತ್ತ ಆ ಬ್ರಾಹ್ಮಣನು ಕನಖಲತೀರ್ಥಕ್ಕೆ ಹೋದನು. ಅಲ್ಲಿ ತನ್ನ ಹಸು ಕರುವಿನೊಂದಿಗೆ ಬೇರೊಬ್ಬ ಬ್ರಾಹ್ಮಣನ ಬಳಿ ಇರುವುದನ್ನು ಕಂಡನು.

"ಶಬಲೆ ! ಇಲ್ಲಿ ಬಾ !" ಎಂದು ಕರೆದ ಕ್ಷಣವೇ ಆ ಹಸು ಧ್ವನಿಯನ್ನು ಗುರುತಿಸಿ ಈ ಬಡಬ್ರಾಹ್ಮಣನ ಬಳಿ ಬಂದಿತು. ಆಗ ಈ ಹಸುವನ್ನು ದಾನವಾಗಿ ಪಡೆದ ಬ್ರಾಹ್ಮಣನು "ರಾಜನಿಂದ ಇದು ದಾನವಾಗಿ ದೊರೆತಿದೆ" ಎಂದು ತಿಳಿಸಿದನು. ಆ ಇಬ್ಬರಲ್ಲಿ ಬಹಳ ಸಮಯದವರೆಗೆ ವಾದ ನಡೆಯಿತು. ಇಬ್ಬರೂ ತಮ್ಮ ತಮ್ಮ ಹೇಳಿಕೆಗಳನ್ನು ಪ್ರತಿಪಾದಿಸಹತ್ತಿದರು. ಕೊನೆಗೆ ರಾಜನನ್ನು ಸಮಕ್ಷಮ ಕಂಡು ತೀರ್ಮಾನಿಸಬೇಕೆಂದು ನಿಶ್ಚಯಿಸಿದರು. ಇಬ್ಬರೂ ಗೋಪ್ರದಾನಮಾಡಿದ ರಾಜನ ಬಳಿ ಹೋದಾಗ ರಾಜನ ಭೇಟಿಯೇ ಆಗಲಿಲ್ಲ. ಅವರು ದೀರ್ಘಸಮಯದವರೆಗೆ ರಾಜದ್ವಾರದಲ್ಲಿ ಕಾಯ್ದು ಕುಳಿತಿರಬೇಕಾಯಿತು. ಆಗ ಅವರು ಸಿಟ್ಟಾಗಿ ಈ ರೀತಿ ಉದ್ಗರಿಸಿದರು :

ಅರ್ಥಿನಾಂ ಕಾರ್ಯಸಿದ್ಧ್ಯರ್ಥಂ ಯಸ್ಮಾತ್ತ್ವಂ ನೈಷಿ ದರ್ಶನಮ್ ‖ ೧೮ ‖
ಅದೃಶ್ಯಃ ಸರ್ವಭೂತಾನಾಂ ಕೃಕಲಾಸೋ ಭವಿಷ್ಯಸಿ ।
ಬಹುವರ್ಷಸಹಸ್ರಾಣಿ ಬಹುವರ್ಷಶತಾನಿ ಚ ‖ ೧೯ ‖
ಶ್ವಭ್ರೇ ತ್ವಂ ಕೃಕಲೀಭೂತೋ ದೀರ್ಘಕಾಲಂ ನಿವತ್ಸ್ಯಸಿ ।
ಉತ್ಪತ್ಸ್ಯತೇ ಹಿ ಲೋಕೇsಸ್ಮಿನ್ಯದೂನಾಂ ಕೀರ್ತಿವರ್ಧನಃ ‖ ೨೦ ‖
ವಾಸುದೇವ ಇತಿ ಖ್ಯಾತೋ ವಿಷ್ಣುಃ ಪುರುಷವಿಗ್ರಹಃ ।
ಸ ತೇ ಮೋಕ್ಷಯಿತಾ ಶಾಪಾದ್ರಾಜಂಸ್ತಸ್ಮಾದ್ಭವಿಷ್ಯಸಿ ‖ ೨೧ ‖
ಕೃತಾ ಚ ತೇನ ಕಾಲೇನ ನಿಷ್ಕೃತಿಸ್ತೇ ಭವಿಷ್ಯತಿ । ೨೨

"ನೀನು ಸಹಾಯವನ್ನು ಕೋರಿ ಬಂದವರ ಕಾರ್ಯಗಳನ್ನು ಪೂರೈಸಲು ಹೊರಗೆ ಬರುತ್ತಿಲ್ಲ ; ಹೇ ರಾಜನೇ, ನೀನು ಸಕಲಪ್ರಾಣಿಗಳಿಗೆ ಅದೃಶ್ಯನಾಗಿರುವ 'ಓತಿಕೇತ'ನಾಗುವೆ ; ನೂರಾರು ಸಾವಿರಾರು ವರ್ಷಗಳವರೆಗೆ ಓತಿಕೇತನಾಗಿ ಬಿಲದಲ್ಲಿ ವಾಸಿಸುವೆ. ವಿಷ್ಣುವು ಈ ಜಗತ್ತಿನಲ್ಲಿ ಯಾದವರ ಕೀರ್ತಿಯನ್ನು ವರ್ಧಿಸಲು ಪುರುಷದೇಹವನ್ನು ಧರಿಸಿ ವಾಸುದೇವನೆಂದು ಜನಿಸುವನು. ಹೇ ರಾಜನೇ, ಆತನು ನಿನ್ನನ್ನು ಈ ಶಾಪದಿಂದ ಮುಕ್ತಗೊಳಿಸುವನು ; ಸಾರಾಂಶದಲ್ಲಿ, ನೀನು ಈಗ 'ಓತಿಕೇತ'ನಾಗುವೆ ; ನಿನ್ನ ಪಾಪ ಪರಿಹಾರವಾಗಲು ಇಷ್ಟೊಂದು ದೀರ್ಘಕಾಲವು ಬೇಕಾಗುವದು."

ಏವಂ ತೌ ಶಾಪಮುತ್ಸೃಜ್ಯ ಬ್ರಾಹ್ಮಣೌ ವಿಗತಜ್ವರೌ । ೨೩

ರಾಜನಿಗೆ ಶಾಪ ಕೊಟ್ಟು ಆ ಇಬ್ಬರು ಬ್ರಾಹ್ಮಣರು ಸ್ವಸ್ಥಚಿತ್ತರಾದರು. ಆ ಹಸು, ಸೋತು ಬಡವಾಗಿದ್ದುದರಿಂದ ಅಗ್ನಿಹೋತ್ರಿ ಬ್ರಾಹ್ಮಣನು ಆ ಇನ್ನೊಬ್ಬ ಬ್ರಾಹ್ಮಣನಿಗೆ ಆ ಹಸುವನ್ನು ಕೊಟ್ಟುಬಿಟ್ಟನು. ಇತ್ತ ರಾಜನು ಆ ಭಯಂಕರ ಶಾಪಕ್ಕೆ ಗುರಿಯಾದನು.

ಏವಂ ಸ ರಾಜಾ ತಂ ಶಾಪಮುಪುಂಕ್ತೇ ಸುದಾರುಣಮ್ II ೨೪ II

ಅಲ್ಪ ಅಪರಾಧಕ್ಕೆ ರಾಜನಿಗೆ ಘೋರಶಾಪವಾಯಿತೆಂದು ಲಕ್ಷ್ಮಣನಿಗೆ ಎನಿಸಿತು.

**ಉತ್ತರಕಾಂಡ / ೫೪**

ಅಲ್ಪಾಪರಾಧೇ ಕಾಕುತ್ಸ್ಥ ದ್ವಿಜಾಭ್ಯಾಂ ಶಾಪ ಈದೃಶಃ I
ಮಹಾನ್ ನೃಗಸ್ಯ ರಾಜರ್ಷೇರ್ಯಮದಂಡ ಇವಾಪರಃ II ೨ II

ಅಲ್ಪಾಪರಾಧವಿದ್ದರೂ ಮಹಾರಾಜರ್ಷಿಯಾದ ನೃಗನು ಯಮದಂಡಸಮವಾದ ಶಾಪವನ್ನು ಅನುಭವಿಸಬೇಕಾಯಿತು. ಲಕ್ಷ್ಮಣನ ಬಿನ್ನಹದ ಮೇರೆಗೆ ಶ್ರೀರಾಮನು ಆತನಿಗೆ ಶಾಪಗ್ರಸ್ತ ನೃಗರಾಜನ ಹೇಳಿಕೆಯನ್ನು ತಿಳಿಸಿದನು.

ಶೃಣು ಸೌಮ್ಯ ಯಥಾಪೂರ್ವಂ ಸ ರಾಜ ಶಾಪವಿಕ್ಷತಃ II ४ II

ನೃಗರಾಜನು ತನ್ನ ಮಂತ್ರಿಗಳ, ನಾಗರಿಕರ, ಪುರೋಹಿತರ ಸಮಕ್ಷಮದಲ್ಲಿ, "ನಾನು ಈ ರಾಜ್ಯವನ್ನು ನನ್ನ ಪುತ್ರನಾದ ವಸುರಾಜಕುಮಾರನಿಗೆ ಒಪ್ಪಿಸಿ ಒಂದು ಕೊಟ್ಟಿಗೆಯಲ್ಲಿ ಶಾಪಿತ ಜೀವನವನ್ನು ಕಳೆಯುವೆ !" ಎಂದು ತನ್ನ ಸಂಕಲ್ಪವನ್ನು ವ್ಯಕ್ತಪಡಿಸಿದನು.

ಯತ್ರಾಹಂ ಸಂಕ್ಷಯಿಷ್ಯಾಮಿ ಶಾಪಂ ಬ್ರಾಹ್ಮಣನಿಃಸೃತಮ್ I ೯

ಆತನು ತನ್ನ ಮಗನಿಗೆ ಈ ರೀತಿ ಉಪದೇಶಿಸಿದನು : "ನೀನು ಧರ್ಮಾನುಸಾರ ವರ್ತಿಸಬೇಕು. ನೀನು ಈರ್ವರು ಬ್ರಾಹ್ಮಣರಿಂದ ನನಗೆ ಶಾಪ ತಗಲಿದ್ದನ್ನು ಕಾಣುತ್ತಿರುವೆ (ಅದನ್ನು ಅಲಕ್ಷಿಸಬೇಡ).

ಪ್ರತ್ಯಕ್ಷಂ ತೇ ತಥಾ ಶಾಪೋ ದ್ವಿಜಾಭ್ಯಾಂ ಮಯಿ ಪಾತಿತಃ II ೧೪ II
ನರಶ್ರೇಷ್ಠ ಸರೋಷಾಭ್ಯಾಮಪರಾಧೇಽಪಿ ಸಾದೃಶೇ I ೧೫

"ಬ್ರಾಹ್ಮಣರು ನನ್ನ ಮೇಲೆ ಮಾಡಿದ ಶಾಪದ ಪ್ರಹಾರವು ನಿನ್ನ ಕಣ್ಣಮುಂದಿದೆ. ನನ್ನ ಅಪರಾಧವು ಅಲ್ಪವಿದ್ದರೂ ಕ್ರೋಧಗೊಂಡ ಬ್ರಾಹ್ಮಣರು ನನ್ನನ್ನು ಶಪಿಸಿದ್ದಾರೆ."

ಬ್ರಾಹ್ಮಣರ ಉದ್ಗಾರಗಳಲ್ಲಿರುವ ಉತ್ತರಾರ್ಧವು ಯಾಚಿತ ಉಃಶಾಪದಂತಿದೆ. ಸಾಮಾನ್ಯತಃ ಉಃಶಾಪವು ಯಾಚಿತವಾಗಿರುತ್ತದೆ. ನೃಗರಾಜನು ಉಃಶಾಪವನ್ನು ಬೇಡಿರಲಿಲ್ಲವಾದರೂ ಅವನ ಶಾಪ ಮುಕ್ತಿಯ ಬಗ್ಗೆ ಬ್ರಾಹ್ಮಣರು ತಾವಾಗಿಯೇ ಹೇಳಿದ್ದಾರೆ.

ಶ್ರೀರಾಮನು ಲಕ್ಷ್ಮಣನಿಗೆ ರಾಜರ ಅಪರಾಧಗಳ ಬಗ್ಗೆ ನೃಗರಾಜನ ಕಥೆಯನ್ನು ಹೇಳಿದನಂತರ ನಿಮಿರಾಜನ ಇನ್ನೊಂದು ಕಥೆಯನ್ನು ಹೇಳುತ್ತಾನೆ.

## ೪೯. ವಸಿಷ್ಠ > ನಿಮಿರಾಜ

**ಉತ್ತರಕಾಂಡ / ೫೫**

'ನಿಮಿ'ಯು ಇಕ್ಷ್ವಾಕುವಿನ ಹನ್ನೆರಡನೆಯ ಪುತ್ರನು. ಆತನು ಶೂರನೂ, ಧರ್ಮಪರಾಯಣನೂ ಆಗಿದ್ದನು. ಗೌತಮ ಮುನಿಯ ಆಶ್ರಮದ ಹತ್ತಿರ ಅಮರಾವತಿಯಂತೆ ಕಂಗೊಳಿಸುವ 'ವೈಜಯಂತ' ಎಂಬ ನಗರವನ್ನು ನಿರ್ಮಿಸಿದನು. ಪಿತನ ಮನಸ್ಸಿಗೆ ಆನಂದವನ್ನುಂಟುಮಾಡಲು ದೀರ್ಘಯಾಗವನ್ನು ಮಾಡಬೇಕೆಂಬ ಇಚ್ಛೆ ಆತನಿಗಾಯಿತು. ಪಿತನ ಸಲಹೆಯಂತೆ ನಿಮಿಯು ಬ್ರಹ್ಮರ್ಷಿಶ್ರೇಷ್ಠನಾದ ವಸಿಷ್ಠನಿಗೆ ಯಜ್ಞದ ಪ್ರಥಮ ಪೌರೋಹಿತ್ಯವನ್ನು ಅರ್ಪಿಸಿದನು. ಅದಕ್ಕೆ "ಇಂದ್ರನು ನನಗೆ ಈ ಮೊದಲೇ ಪೌರೋಹಿತ್ಯವನ್ನು ಕೊಟ್ಟಿರುವ ಕಾರಣ ನೀನು ಆತನ ಯಾಗ ಮುಗಿಯುವವರೆಗೆ ಕಾಯಬೇಕು !" ಎಂದು ವಸಿಷ್ಠನು ಹೇಳಿಕಳುಹಿಸಿದನು.

ಆಗ ನಿಮಿರಾಜನು ವಸಿಷ್ಠನ ಪೌರೋಹಿತ್ಯವನ್ನು ಗೌತಮನಿಗೆ ಒಪ್ಪಿಸಿ ತಾನು ಹಿಮಾಲಯದ ಬಳಿಯಲ್ಲಿ ತನ್ನ ಯಾಗವನ್ನಾರಂಭಿಸಿದನು. ಈ ಯಾಗಕ್ಕಾಗಿ ಐದುಸಾವಿರ ವರ್ಷಗಳ ಅವಧಿಯ ದೀಕ್ಷೆಯನ್ನು ತೆಗೆದುಕೊಂಡನು. ಇಂದ್ರನ ಯಾಗವು ಮುಗಿದನಂತರ ವಸಿಷ್ಠ ಋಷಿಯು ರಾಜನ ಯಜ್ಞವನ್ನು ನೆರವೇರಿಸಲೆಂದು ಬಂದಾಗ ಆ ಸ್ಥಳದಲ್ಲಿ ಗೌತಮನನ್ನು ಕಂಡು ಅವನು ಕೋಪಗೊಂಡನು. ರಾಜನ ಭೇಟಿಗಾಗಿ ಕೆಲವು ಸಮಯ ಕಾಯ್ದನು. ಆ ದಿನ ರಾಜನು ವಿಪರೀತ ನಿದ್ರೆಯಲ್ಲಿದ್ದನು. ಅವನ ಭೇಟಿಯಾಗಲಿಲ್ಲವಾದ್ದರಿಂದ ವಸಿಷ್ಠನಿಗೆ ಇನ್ನಷ್ಟು ರೇಗಿತು—ಆತನು ಈ ರೀತಿ ಉಚ್ಚರಿಸಿದನು :

> ಯಸ್ಮಾತ್ತ್ವಮನ್ಯ ವೃತವಾನ್ಮಾಮವಜ್ಞಾಯ ಪಾರ್ಥಿವ ।
> ಚೇತನೇನ ವಿನಾ ಭೂತೋ ದೇಹಸ್ತೇ ಪಾರ್ಥಿವೈಷ್ಯತಿ ॥ ೧೭ ॥

"ಎಲೈ ರಾಜನೇ, ನನ್ನನ್ನು ಕಡೆಗಣಿಸಿ ನೀನು ಬೇರೆ ಪುರೋಹಿತನನ್ನು ಕಂಡುಕೊಂಡಿರುವೆ ; ಅದಕ್ಕಾಗಿ ನಿನ್ನ ದೇಹವು ಅಚೇತನವಾಗಲಿ !"

> ತತಃ ಪ್ರಬುದ್ಧೋ ರಾಜಾ ತು ಶ್ರುತ್ವಾ ಶಾಪಮುದಾಹೃತಮ್ ॥ ೧೮ ॥

ನಿದ್ರೆಯಿಂದ ಎಚ್ಚೆತ್ತಾಗ ನಿಮಿರಾಜನಿಗೆ ವಸಿಷ್ಠನ ಶಾಪವು ತಿಳಿಯಿತು. ಆತನು ಕೋಪದಿಂದ ಉರಿದೆದ್ದನು. ವಸಿಷ್ಠನಿಗೆ ಪ್ರತಿಶಾಪವನ್ನು ಕೊಟ್ಟನು. ಹೀಗಾಗಿ ಇಬ್ಬರೂ ತಮ್ಮ ಸ್ಥೂಲದೇಹಗಳನ್ನು ಕಳೆದುಕೊಂಡರು.

ನಿಮಿರಾಜ > ವಸಿಷ್ಠ, ಶಾಪ ಕ್ರ. ೫೦ ನೋಡಿ.

### ೫೦. ನಿಮಿರಾಜ > ವಸಿಷ್ಠ

ಉತ್ತರಕಾಂಡ / ೫೫

ವಸಿಷ್ಠ > ನಿಮಿರಾಜ, ಶಾಪ ಕ್ರ. ೪೯ ನೋಡಿ.

ನಿದ್ರೆಯಿಂದ ಎಚ್ಚೆತ್ತಾಗ ವಸಿಷ್ಠನ ಶಾಪದಿಂದ ಕೋಪಗೊಂಡ ನಿಮಿರಾಜನು ಅವನಿಗೆ ಪ್ರತಿಶಾಪವನ್ನಿತ್ತನು :

> ಅಜಾನತಃ ಶಯಾನಸ್ಯ ಕ್ರೋಧೇನ ಕಲುಷೀಕೃತಃ ।
> ಉಕ್ತವಾನ್ ಮಮ ಶಾಪಾಗ್ನಿಂ ಯಮದಂಡಮಿವಾಪರಮ್ ॥ ೧೯ ॥
> ತಸ್ಮಾತ್ತವಾಪಿ ಬ್ರಹ್ಮರ್ಷೇ ಚೇತನೇನ ವಿನಾ ಕೃತಃ ।
> ದೇಹಃ ಸ ಸುರುಚಿರಪ್ರಖ್ಯೋ ಭವಿಷ್ಯತಿ ನ ಸಂಶಯಃ ॥ ೨೦ ॥

"ನೀವು ಬಂದಿರುವದು ನನಗೆ ಗೊತ್ತಿರದೆ, ನಾನು ನಿದ್ರಾವಶನಿದ್ದ ಸಮಯದಲ್ಲಿ, ಕ್ರೋಧವಶರಾಗಿ ನೀವು ಪ್ರತಿಯಮದಂಡದಂತಿರುವ ಶಾಪಾಗ್ನಿಯನ್ನು ನನ್ನ ಮೇಲೆ ಬಿಟ್ಟಿದ್ದೀರಿ ; ಅದಕ್ಕಾಗಿ ಹೇ ಬ್ರಹ್ಮರ್ಷಿ, ನಿಮ್ಮ ಅತಿಮನೋಹರವಾದ ದೇಹವು ನಿಃಸಂಶಯವಾಗಿ ಅಚೇತನಗೊಳ್ಳಲಿ !"

ಉತ್ತರಕಾಂಡ / ೫೬

ವಸಿಷ್ಠ ಹಾಗೂ ನಿಮಿ ಇವರಿಬ್ಬರೂ ಪೂಜ್ಯರಾಗಿದ್ದು ಅವರು ತಮ್ಮ ತಮ್ಮ ದೇಹಗಳನ್ನು ತ್ಯಜಿಸಿ ಹೇಗೆ ಹೊಸವನ್ನು ಪಡೆದುಕೊಂಡರು ?—ಎಂದು ಲಕ್ಷ್ಮಣನು ಶ್ರೀರಾಮನನ್ನು ಕೇಳಿದನು. ಅದಕ್ಕೆ ಶ್ರೀರಾಮನು ಹೀಗೆಂದನು :

> ತೌ ಪರಸ್ಪರಶಾಪೇನ ದೇಹಮುತ್ಸೃಜ್ಯ ಧಾರ್ಮಿಕೌ ।
> ಭೂತಾಂ ನೃಪವಿಪ್ರರ್ಷೀ ವಾಯುಭೂತೌ ತಪಧನೌ ॥ ೪ ॥

ಅವರು ಒಬ್ಬರನ್ನೊಬ್ಬರು ಶಪಿಸಿ ತಮ್ಮ ತಮ್ಮ ದೇಹಗಳನ್ನು ತ್ಯಜಿಸಿದರು. ಹೀಗಾಗಿ ಧರ್ಮಾತ್ಮ ರಾಜರ್ಷಿ (ನಿಮಿ) ಹಾಗೂ ಬ್ರಹ್ಮರ್ಷಿ ವಸಿಷ್ಠರು ವಾಯುರೂಪರಾದರು.

ಉತ್ತರಕಾಂಡ / ೫೭

ನೃಪಪುಂಗವಶಾಪಜಂ ದ್ವಿಜಸ್ಯ ದ್ವಿಜಶಾಪಾಚ್ಚ ಯದದ್ಭುತಂ ನೃಪಸ್ಯ ॥ ೨೧ ॥

ಈ ರೀತಿಯಾಗಿ ಶ್ರೀರಾಮನು ಲಕ್ಷ್ಮಣನಿಗೆ ನಿಮಿ ಹಾಗೂ ವಸಿಷ್ಠರು ಪರಸ್ಪರರಿಗಿತ್ತ ಶಾಪಗಳಿಂದ ಉಂಟಾದ ಅದ್ಭುತವಾದ ಹುಟ್ಟಿನ ಕಾರಣವನ್ನು (ತಿಳಿ)ಹೇಳಿದನು.

ನೃಪಶ್ರೇಷ್ಠನು ಮತ್ತು ದ್ವಿಜಶ್ರೇಷ್ಠನು ಒಬ್ಬರನ್ನೊಬ್ಬರು ಶಪಿಸಿದ ಕಾರಣ ಅವರು ಇಬ್ಬರೂ ಸ್ಥೂಲದೇಹವಿರಹಿತರಾದರು.

ಈ ಎರಡು ಶಾಪಗಳು ಇನ್ನಿತರ ಶಾಪಗಳಂತೆ ಇಲ್ಲ. ಶಾಪಕ್ಕೆ ಸರಿಯಾಗಿ ಪ್ರತಿಶಾಪವಿದೆ ; ಆ ಪ್ರತಿಶಾಪವು ಶಾಪಕ್ಕೆ ಸಮನಾಗಿ ಇದೆ. ವಾಲ್ಮೀಕಿರಾಮಾಯಣದಲ್ಲಿ ಈ ರೀತಿಯ ಉದಾಹರಣೆ ಇದೊಂದೇ ಆಗಿದೆ. ವಸಿಷ್ಠನು ಸೌದಾಸರಾಜನಿಗೆ ಶಾಪಕೊಟ್ಟಾಗ (ಉತ್ತರಕಾಂಡ / ೬೫) ಸೌದಾಸರಾಜನು ಶಾಪಕೊಡಲುದ್ಯುಕ್ತನಾಗಿ ಕೈಯಲ್ಲಿ ಉದಕವನ್ನು ಸಹ ಹಿಡಿದಿದ್ದನು. "ಪುರೋಹಿತನಿಗೆ ಶಾಪಕೊಡುವದು ಸೂಕ್ತವಲ್ಲ" ಎಂದು ಸೌದಾಸನ ಪತ್ನಿಯು ಉಪದೇಶಿಸಿದ್ದರಿಂದ ನಿಜದಲ್ಲಿ ಸೌದಾಸನು ಶಾಪವನ್ನು ಕೊಡಲಿಲ್ಲ. ಹೀಗಾದ್ದರಿಂದ ವಸಿಷ್ಠ > ನಿಮಿರಾಜ ಮತ್ತು ನಿಮಿರಾಜ > ವಸಿಷ್ಠ ಇವರ ಶಾಪ - ಪ್ರತಿಶಾಪ ಇವುಗಳ ಒಂದೇ ಒಂದು ಉದಾಹರಣೆ ಕಂಡುಬರುತ್ತದೆ.

## ೫೧. ಮಿತ್ರ > ಊರ್ವಶೀ

ಉತ್ತರಕಾಂಡ / ೫೬

ವಸಿಷ್ಠ ಮತ್ತು ನಿಮಿರಾಜ ಇವರು ಪರಸ್ಪರರಿಗೆ ಶಾಪಕೊಟ್ಟು ದೇಹವಿಲ್ಲದಂತಾದರು. ಅವರಿಗೆ ಪುನಃ ದೇಹಪ್ರಾಪ್ತಿ ಹೇಗಾಯಿತು ? ಎಂದು ಲಕ್ಷ್ಮಣನು ಕೇಳಿದನು. ಶ್ರೀರಾಮನು ಅದಕ್ಕೆ ಉತ್ತರಿಸುತ್ತಾನೆ :

ದೇಹವಿಲ್ಲದ ಅವರಿಬ್ಬರೂ ವಾಯುರೂಪವನ್ನು ಹೊಂದಿ ಸ್ವಯಂಭೂ ಆದ ಬ್ರಹ್ಮನ ಬಳಿಗೆ ಹೋದರು. ವಸಿಷ್ಠನು ಅವನನ್ನು ನಮಸ್ಕರಿಸಿ ಈ ರೀತಿ ಎಂದನು : "ದೇಹವಿರದೇ ಇದ್ದ ಕಾರಣ ಕಾರ್ಯಲೋಪವಾಗುತ್ತಿದೆ ; ಆದ್ದರಿಂದ ನನಗೆ ಎರಡನೇ ದೇಹವು ಲಭಿಸುವಂತೆ ಕರುಣಿಸಿರಿ." ಆಗ ಬ್ರಹ್ಮದೇವನು "ಎಲೈ ಮಹಾಕೀರ್ತಿವಂತನಾದ ವಸಿಷ್ಠನೇ, ನೀನು ಮಿತ್ರವರುಣರ ತೇಜಸ್ಸನ್ನು ಪ್ರವೇಶಿಸು ! ನೀನು ಅಲ್ಲಿಯೂ ಅಯೋನಿಸಂಭವನಾಗುವೆ." ಇದನ್ನು ಕೇಳಿ ವಸಿಷ್ಠನು ಬ್ರಹ್ಮದೇವನಿಗೆ ಪ್ರದಕ್ಷಿಣೆ ಹಾಕಿ ವರುಣಲೋಕಕ್ಕೆ ಹೋದನು.

ಅದೇ ಸಮಯಕ್ಕೆ ಮಿತ್ರನು ಕ್ಷೀರಸಾಗರಸ್ವರೂಪ ವರುಣರೂಪವನ್ನು ಹೊಂದಿ ದೇವತೆಗಳಿಗೆ ಪ್ರಿಯನಾಗಿದ್ದನು. ಅವನು ವರುಣನ ಅಧಿಕಾರವನ್ನು ನಡೆಯಿಸುತ್ತಿದ್ದನು. ಒಮ್ಮೆ 'ಉರ್ವಸಿ' ಎಂಬ ಅಪ್ಸರೆಯು ಗೆಳತಿಯರೊಡನೆ ಅಲ್ಲಿಗೆ ಬಂದಳು. ಅವಳನ್ನು ವೀಕ್ಷಿಸಿ ವರುಣನಿಗೆ ಪರಮಾನಂದವಾಯಿತು. ಆತನ ಕಾಮವಾಸನೆಯು ಉದ್ದೀಪಿತವಾಗಿ ಅವನು ಉರ್ವಸಿಯೊಡನೆ ರತಿಕ್ರೀಡೆಯನ್ನು ಬಯಸಿದನು. ಆಗ ಉರ್ವಶಿಯು "ನಾನು ಮಿತ್ರನ ಬೇಡಿಕೆಯನ್ನು ಈ ಮೊದಲೇ ಒಪ್ಪಿಕೊಂಡಿದ್ದೇನೆ" ಎಂದು ವಿನಯದಿಂದ ಹೇಳಿದಳು. ಆಗ ವರುಣನು "ನನ್ನೊಡನೆ ಸಮಾಗಮ ಮಾಡುವ ಇಚ್ಛೆಯು ನಿನಗಿರದಿದ್ದರೆ ನಿನಗಾಗಿ ಉತ್ಸರ್ಗಮಾಡಿದ ತೇಜಸ್ಸನ್ನು ಕುಂಭದಲ್ಲಿ ಹಾಕುತ್ತೇನೆ" ಎಂದನು.

ಉರ್ವಸಿಯು ಅದಕ್ಕೆ ಒಪ್ಪಿಕೊಂಡಳು. ವರುಣನು ಆಕೆಯನ್ನು ಪ್ರೀತಿಸುತ್ತಿದ್ದನು. ಆಕೆಯು ವರುಣನನ್ನು ಪ್ರೀತಿಸುತ್ತಿದ್ದರೂ ಅವಳ ದೇಹವು ಆಗ ಮಿತ್ರನ ಅಂಕಿತದಲ್ಲಿತ್ತು. ಹೀಗಾಗಿ ವರುಣನು ತನ್ನ ತೇಜಸ್ಸನ್ನು ಕುಂಭಕ್ಕೆ ಹಾಕಿದನು. ಉರ್ವಸಿಯು ಆ ನಂತರ ಮಿತ್ರನ ಬಳಿಗೆ ಹೋದಳು. ಆಗ ಅವನು ಕೋಪಗೊಂಡು ಈ ರೀತಿ ಅಂದನು :

ಮಯಾಭಿಮಂತ್ರಿತಾ ಪೂರ್ವಂ ಕಸ್ಮಾತ್ತ್ವಮವಸರ್ಜಿತಾ ।
ಪತಿಮನ್ಯಂ ವ್ರತವತೀ ಕಿಮರ್ಥಂ ದುಷ್ಟಚಾರಿಣೀ ॥ ೨೩ ॥
ಅನೇನ ದುಷ್ಕೃತೇನ ತ್ವಂ ಮತ್ಕ್ರೋಧಕಲುಷೀಕೃತಾ ।

ಮನುಷ್ಯಲೋಕಮಾಸ್ಥಾಯ ಕಿಂಚಿತ್ಕಾಲಂ ನಿವತ್ಸ್ಯಸಿ ॥ ೨೪ ॥
ಬುಧಸ್ಯ ಪುತ್ರೋ ರಾಜರ್ಷಿಃ ಕಾಶಿರಾಜಃ ಪುರೂರವಾಃ ।
ತಮಭ್ಯಾಗಚ್ಛ ದುರ್ಬುದ್ಧೇ ಸ ತೇ ಭರ್ತಾ ಭವಿಷ್ಯತಿ ॥ ೨೫ ॥

"ಹೇ ದುರಾಚಾರಿಣಿ, ನಾನು ನಿನ್ನನ್ನು ಮೊದಲೇ ಆಹ್ವಾನಿಸಿದ್ದರೂ ನೀನು ನನ್ನನ್ನು ಹೇಗೆ ತ್ಯಜಿಸಿದೆ ? ಅನ್ಯಪತಿಯನ್ನು ಹೇಗೆ ಸ್ವೀಕರಿಸಿದೆ ? ಈ ಪಾತಕದಿಂದಾಗಿ ನೀನು ನನ್ನ ಕೋಪಕ್ಕೆ ಬಲಿಯಾಗುವೆ. ನೀನು ಮನುಷ್ಯಲೋಕದಲ್ಲಿ ಕೆಲವು ಕಾಲ ವಾಸವಾಗುವೆ. ರಾಜರ್ಷಿಯಾದ, ಬುಧಪುತ್ರನಾದ, ಕಾಶಿರಾಜನಾದ ಪುರೂರವನ ಬಳಿ ಹೋಗು ! ಅವನು ನಿನ್ನ ಪತಿಯಾಗುವನು."

ತತಃ ಸಾ ಶಾಪದೋಷೇಣ ಪುರೂರವಸಮಭ್ಯಗಾತ್ ।
ಪ್ರತಿಷ್ಠಾನೇ ಪುರೂರವಂ ಬುಧಸ್ಯಾತ್ಮಜಮೌರಸಮ್ ॥ ೨೬ ॥

ಅವಳು ಶಾಪದ ದೋಷದಿಂದ ಪ್ರತಿಷ್ಠಾನಪುರಿಯ ಬುಧನ ಸ್ವಂತ ಮಗನಾದ ಪುರೂರವನ ಬಳಿ ಹೋದಳು.

ಸಾ ತೇನ ಶಾಪೇನ ಜಗಾಮ ಭೂಮಿಂ ತದೋರ್ವಶೀ ಚಾರುದತೀ ಸುನೇತ್ರಾ ।
ಬಹೂನಿ ವರ್ಷಾಣ್ಯವಸಚ್ಚ ಸುಭ್ರೂಃ ಶಾಪಕ್ಷಯಾದಿಂದ್ರಸದೋ ಯಯೌ ಚ ॥ ೨೮ ॥

ಮಿತ್ರನು ಕೊಟ್ಟ ಶಾಪದಿಂದ, ಸುಂದರವಾದ ದಂತಗಳಿದ್ದ, ಸುಂದರವಾದ ನಯನಗಳಿದ್ದ ಊರ್ವಶಿಯು ಭೂಮಿಯ ಮೇಲೆ ಅನೇಕ ವರ್ಷಗಳವರೆಗೆ ಇದ್ದು, ಶಾಪಕಳೆದನಂತರ ಮತ್ತೆ ಇಂದ್ರಲೋಕಕ್ಕೆ ತೆರಳಿದಳು.

## ೫೨. ಶುಕ್ರಾಚಾರ್ಯ > ಯಯಾತಿ ಉತ್ತರಕಾಂಡ / ೫೮

"ನಿಮಿರಾಜನು ಶೂರನು, ಕ್ಷತ್ರಿಯನು, ವಿಶೇಷದಲ್ಲಿ ದೀಕ್ಷೆಯನ್ನು ಕೈಕೊಂಡವನಾಗಿದ್ದನು. ಹೀಗಿರುವಾಗ ಆತನು ವಸಿಷ್ಠಮುನಿಯೊಡನೆ ಸರಿಯಾಗಿ ವರ್ತಿಸಲಿಲ್ಲ" ಎಂಬ ತನ್ನ ಅನಿಸಿಕೆಯನ್ನು ಲಕ್ಷ್ಮಣನು ಶ್ರೀರಾಮನಿಗೆ ನುಡಿದನು. ಶ್ರೀರಾಮನು ಅದಕ್ಕೆ "ಕ್ಷಮಾವೃತ್ತಿಯು ಎಲ್ಲರಲ್ಲಿ ಇರುತ್ತದೆ ಎಂದು ಹೇಳಲಾಗುವ್ರದಿಲ್ಲ. ರೋಷವು ತುಂಬ ದುಃಸಹವಾದದ್ದು" ಎಂದು ಹೇಳಿ ಅದನ್ನು ಪುಷ್ಟಿಸಲು ಯಯಾತಿಯ ಶಾಪದ ಕಥೆಯನ್ನು ಹೇಳಿದನು :

ನಹುಷಪುತ್ರನಾದ ಯಯಾತಿಯು ಸತ್ವಗುಣಸಂಪನ್ನನಾಗಿದ್ದನು. ಆತನಿಗೆ ಶರ್ಮಿಷ್ಠೆ ಹಾಗೂ ದೇವಯಾನಿ ಎಂಬ ಇಬ್ಬರು ಪತ್ನಿಯರಿದ್ದರು. ಶರ್ಮಿಷ್ಠೆಗೆ ಪುರು ಮತ್ತು ದೇವಯಾನಿಗೆ ಯದು ಈ ರೀತಿ ಇಬ್ಬರು ಪುತ್ರರಿದ್ದರು. ಪುರುವಿನ ಸಹಜಗುಣಗಳಿಂದಲೂ, ಯಯಾತಿಯು ಶರ್ಮಿಷ್ಠೆಯನ್ನು ಅಧಿಕಪ್ರೀತಿಸುತ್ತಿದ್ದ ಕಾರಣದಿಂದಲೂ ಪುರುವು ಯಯಾತಿಗೆ ಅಧಿಕಪ್ರೀತಿಯವನಾಗಿದ್ದನು. ಈ ಸಂಗತಿಯು ಯದುವನ್ನು ಕಾಡುತ್ತಿತ್ತು. ಯದುವು ಒಮ್ಮೆ ತಾಯಿಯಾದ ದೇವಯಾನಿಗೆ ಈ ರೀತಿ ಎಂದನು : "ನೀನು ಭಾರ್ಗವಕುಲದಲ್ಲಿ ಹುಟ್ಟಿ ಈ ರೀತಿ ದುಃಖ, ಅವಮಾನಗಳನ್ನು ಸಹಿಸುತ್ತಿರುವಿ ; ಇದನ್ನು ಸಹಿಸುವ ಬದಲು ನಾವಿಬ್ಬರೂ ಅಗ್ನಿಪ್ರವೇಶ ಮಾಡೋಣ ! ರಾಜನು ದೈತ್ಯಕನ್ಯೆಯಾದ ಶರ್ಮಿಷ್ಠೆಯೊಡನೆ ಬೇಕಾದಷ್ಟು ಕಾಲ ಬಾಳಲಿ ! ನಿನಗೆ ಅಗ್ನಿಪ್ರವೇಶಮಾಡುವದು ಇಷ್ಟವಿರದಿದ್ದರೆ ನನಗಾದರೂ ಅನುಮತಿಯನ್ನು ಕೊಡು ! ಇನ್ನುಮುಂದೆ ಈ ಬಗೆಯ ಅವಮಾನವನ್ನು ಸಹಿಸಲಾರೆನು. ನಾನು ಪ್ರಾಣತ್ಯಾಗವನ್ನು ಮಾಡುವದು ಖಂಡಿತ" ಎಂದನು. ಪುತ್ರನ ಸಂತಾಪದ ನುಡಿಗಳು ತಾಯಿಯ ಹೃದಯಕ್ಕೆ ತಾಗಿದವು. ಆಕೆಗೆ ವಿಪರೀತ ಸಿಟ್ಟುಬಂದಿತು. ಅವಳ ಪಿತನಾದ ಶುಕ್ರಾಚಾರ್ಯನ ಸ್ಮರಣೆಯನ್ನು ಮಾಡುತ್ತಲೇ ಅವನು ಅಲ್ಲಿಗೆ ಬಂದನು. ದೇವಯಾನಿಯ ದುಃಖಾವಸ್ಥೆಯನ್ನು ಕಂಡು ವ್ಯಥಿತನಾದನು. ದುಃಖದ ಕಾರಣವನ್ನು ಕೇಳಿದಾಗ ಅವಳು "ನಾನು ಅಗ್ನಿಪ್ರವೇಶ ಮಾಡಲಿರುವೆ, ನೀರಿನಲ್ಲಾದರೂ ಮುಳುಗುವೆ ; ಇಲ್ಲವೇ ವಿಷವನ್ನು ಕುಡಿದಾದರೂ ಪ್ರಾಣತ್ಯಾಗವನ್ನು ಮಾಡಲಿರುವೆ ! ನನಗಾಗುವ ಮಾನಹಾನಿಯನ್ನು ಸಹಿಸುವದು ನನ್ನಿಂದಾಗದು. ನನ್ನ ದುಃಖದ ಸುಳಿವೇ ನಿಮಗಿಲ್ಲ. ಆದ್ದರಿಂದ ಯಯಾತಿಯು ಸದಾವಕಾಲವೂ ನನ್ನನ್ನು ಅವಮಾನಿಸುತ್ತಾನೆ. ಯಾವ ಮರ್ಯಾದೆಯನ್ನೂ ನನಗೆ ಕೊಡುವದಿಲ್ಲ" ಎಂದು ಹೇಳಿದಳು. ಮಗಳ ಈ ನುಡಿಗಳನ್ನು ಕೇಳಿ ಶುಕ್ರಾಚಾರ್ಯನು ಸಿಟ್ಟಾಗಿ ಯಯಾತಿಗೆ ಈ ರೀತಿ ಶಾಪವನ್ನುಸುರಿದನು :

ಯಸ್ಮಾನ್ಮಾಮವಜಾನೀಷೇ ನಾಹುಷ ತ್ವಂ ದುರಾತ್ಮವಾನ್ ।
ವಯಸಾ ಜರಯಾ ಜೀರ್ಣ: ಶೈಥಿಲ್ಯಮುಪಯಾಸ್ಯಸಿ ॥ ೨೩ ॥
ಸ ಏವಮುಕ್ತ್ವಾ ದ್ವಿಜಪುಂಗವಾಗ್ರ್ಯ: ಸುತಾಂ ಸಮಾಶ್ವಾಸ್ಯ ಚ ದೇವಯಾನೀಮ್ ।
ಪುನರ್ಯಯೌ ಸೂರ್ಯಸಮಾನತೇಜಾ ದತ್ವಾ ಚ ಶಾಪಂ ನಹುಷಾತ್ಮಜಾಯ ॥ ೨೫ ॥

ಸೂರ್ಯನಂತೆ ತೇಜಸ್ವಿಯಾದ, ಬ್ರಾಹ್ಮಣಶ್ರೇಷ್ಠನಾದ ಶುಕ್ರಾಚಾರ್ಯನು ದೇವಯಾನಿಗೆ ಭರವಸೆಯನ್ನೂ, ನಹುಷನ ಮಗನಾದ ಯಯಾತಿಗೆ ಶಾಪವನ್ನೂ ಇತ್ತನು.

"ಎಲೈ ನಹುಷಪುತ್ರನೇ, ನೀನು ನನ್ನನ್ನು ಕಡೆಗಣಿಸಿದೆಯಾದ್ದರಿಂದ ದುರಾತ್ಮನಾದ ನೀನು ಸದ್ಯ ಇಳಿವಯಸ್ಸಿನವನೂ, ವೃದ್ಧನೂ, ದುರ್ಬಲನೂ ಆಗುವೆ."

ಯಯಾತಿಯು ಕ್ಷಾತ್ರಧರ್ಮವನ್ನು ಅನುಸರಿಸಿ ಭಾರ್ಗವ-ಶುಕ್ರಾಚಾರ್ಯನ ಶಾಪವನ್ನು ತಾಳಿಕೊಂಡನು, ಆದರೆ ನಿಮಿಯು ವಸಿಷ್ಠನ ಶಾಪವನ್ನು ಸಹಿಸಲಿಲ್ಲ.

ಏವ ತೂ ಶಸನಾ ಮುಕ್ತ: ಶಾಪೋತ್ಸರ್ಗೋ ಯಯಾತಿನಾ ।
ಧಾರಿತ: ಕ್ಷತ್ರಧರ್ಮೇಣ ನಿಮಿಶ್ಚ ಕ್ಷಮೇಣ ಚ ॥ ೨೧ ॥

ನೋಡಿ : ಮಹಾಭಾರತ ಶಾಪವಾಣಿ, ಶುಕ್ರಾಚಾರ್ಯ > ಯಯಾತಿ, ಶಾಪ ಕ್ರ. ೨೯.

## ೫೩. ಯಯಾತಿ > ಯದು

ಉತ್ತರಕಾಂಡ / ೫೯

ಭಾರ್ಗವ ಶುಕ್ರಾಚಾರ್ಯನು ಯಯಾತಿಗೆ ಶಾಪವನ್ನು ಕೊಟ್ಟನಂತರ ಯಯಾತಿಯು ತನ್ನ ಇಬ್ಬರೂ ಪುತ್ರರಿಗೂ ಶಾಪದ ವಾರ್ಧಕ್ಯವನ್ನು ಸ್ವೀಕರಿಸಲು ಹೇಳಿದಾಗ ಪುರುವು ಅದನ್ನು ಸ್ವೀಕರಿಸಿದನು : ಯದುವು ಅದನ್ನು ನಿರಾಕರಿಸಿದನು. ಶ್ರೀರಾಮನು ಲಕ್ಷ್ಮಣನಿಗೆ ಆಗ ಯಯಾತಿಯು ಯದುವಿಗೆ ಶಾಪವನ್ನು ನುಡಿದ ವೃತ್ತಾಂತವನ್ನು ಹೇಳುತ್ತಾನೆ :

ಯಯಾತಿಗೆ ಮುಪ್ಪು ಬಂದದ್ದರಿಂದ ಆತನು ಬಹಳ ದು:ಖಿಕ್ಕೊಳಗಾದನು. ಯಯಾತಿಯು ತನ್ನ ವೃದ್ಧತ್ವವನ್ನು ಕೆಲಕಾಲ ಸ್ವೀಕರಿಸಲು ಮತ್ತು ತಾರುಣ್ಯವನ್ನು ಒದಗಿಸಲು ದೇವಯಾನಿಯ ಪುತ್ರನಾದ ಯದುವಿಗೆ : "ನನ್ನ ಈ ಘೋರವೃದ್ಧಾಪ್ಯವನ್ನು ಸ್ವೀಕರಿಸು ; ಅಂದರೆ ನಾನು ವಿಷಯೋಪಭೋಗಗಳಲ್ಲಿ ನಿರತನಾಗುವೆ. ನನ್ನ ವಿಷಯಲಾಲಸೆ ಇನ್ನೂ ತೃಪ್ತಿಗೊಂಡಿಲ್ಲ. ರತಿಕ್ರೀಡೆಯನ್ನು ಇನ್ನೂ ಕೆಲವು ಕಾಲ ಅನುಭವಿಸಿ, ನಾನು ನಿನ್ನಿಂದ ನನ್ನ ಮುಪ್ಪನ್ನು ಮರಳಿ ಸ್ವೀಕರಿಸುವೆ" ಎಂದನು. ತಂದೆಯ ಮಾತನ್ನು ಕೇಳಿ ಯದುವು "ನೀವು ನನ್ನನ್ನು ಸಕಲ ಐಶ್ವರ್ಯಗಳಿಂದ ದೂರವಿರಿಸಿದ್ದೀರಿ ; ಆದ್ದರಿಂದ ನಿಮ್ಮ ಪ್ರಿಯಪುತ್ರನಾದ ಪುರುವು ಈ ನಿಮ್ಮ ವೃದ್ಧತ್ವವನ್ನು ಸ್ವೀಕರಿಸಲಿ ! ನೀವು ಇಂದಿನವರೆಗೆ ನನ್ನನ್ನು ಎಂದೂ ನಿಮ್ಮ ಹತ್ತಿರ ಬರಗೊಡಲಿಲ್ಲ. ನೀವು ಪ್ರತಿದಿನ ಯಾರನ್ನು ಜೊತೆಗೂಡಿ ಭೋಜನವನ್ನು ಮಾಡುತ್ತೀರೋ ಅವರಲ್ಲಿ ಒಬ್ಬರು ನಿಮ್ಮ ವೃದ್ಧತ್ವವನ್ನು ಅಂಗೀಕರಿಸಬೇಕು."—ಈ ರೀತಿ ಎಂದನು. ಶರ್ಮಿಷ್ಠೆಯ ಪುತ್ರನಾದ ಪುರುವನ್ನು ಕೇಳಿದಾಗ ಆತನು ತನ್ನ ತಾರುಣ್ಯವನ್ನು ತಂದೆಗೆ ಅರ್ಪಿಸಿ ಆತನ ವೃದ್ಧತ್ವವನ್ನು ತಾನು ಅಂಗೀಕರಿಸಿದನು. ಯಯಾತಿಯು ಆನಂದಭರಿತನಾದನು. ಆದರೆ ಯದುವಿನ ನುಡಿಗಳಿಂದ ಆತನು ಕೋಪಗೊಂಡಿದ್ದನು ; ಯದುವನ್ನು ಈ ರೀತಿ ಶಪಿಸಿದನು :

ರಾಕ್ಷಸಸ್ತ್ವಂ ಮಯಾ ಜಾತ: ಕ್ಷತ್ರರೂಪೋ ದುರಾಸದ: ।
ಪ್ರತಿಹಂಸಿ ಮಮಾಜ್ಞಾಂ ತ್ವಂ ಪ್ರಜಾರ್ಥೇ ವಿಫಲೋ ಭವ ॥ ೧೪ ॥
ಪಿತರಂ ಗುರುಭೂತಂ ಮಾಂ ಯಸ್ಮಾತ್ತ್ವಮವಮನ್ಯಸೇ ।
ರಾಕ್ಷಸಾನ್ಯಾತುಧಾನಾಂಸ್ತ್ವಂ ಜನಯಿಷ್ಯಸಿ ದಾರುಣಾನ್ ॥ ೧೫ ॥
ನ ತು ಸೋಮಕುಲೋತ್ಪನ್ನೇ ವಂಶೇ ಸ್ಥಾಸ್ಯತಿ ದುರ್ಮತೇ: ।
ವಂಶೋಽಪಿ ಭವತಸ್ತುಲ್ಯೋ ದುರ್ವಿನೀತೋ ಭವಿಷ್ಯತಿ ॥ ೧೬ ॥

"ನನ್ನಿಂದಾಗಿ ನೀನು ಕ್ಷತ್ರಿಯನಾಗಿದ್ದರೂ ಮಹಾಭಯಂಕರ ರಾಕ್ಷಸನಾಗಿ ಹುಟ್ಟಿರುವೆ. ನನ್ನ ಆಜ್ಞೆಯನ್ನು ಮೀರಿದ ಕಾರಣ ಸಂತಾನವಿಫಲನಾಗುವೆ. ಗುರುಸ್ಥಾನದಲ್ಲಿದ್ದ ಪಿತನನ್ನು ಅವಮಾನಿಸಿರುವೆ ; ಆದ್ದರಿಂದ

ನೀನು ಘೋರ ರಾಕ್ಷಸರನ್ನೂ ಯಾತುಧಾನರನ್ನೂ ನಿರ್ಮಿಸುವೆ. ದುಷ್ಟನಾದ ನಿನ್ನ ಸಂತತಿಯು ಸೋಮವಂಶದಲ್ಲಿ ಜೀವಿಸಿರಲಾರದು. ನಿನ್ನಂತೆಯೆ ನಿನ್ನ ಪೀಳಿಗೆಯೂ ಉದ್ಧಟವಾಗುವದು."

ಅವನು ಈ ರೀತಿಯ ಶಾಪವನ್ನು ಯದುವಿಗೆ ಕೊಟ್ಟನು ; ಪುರುವಿನಿಂದ ತಾರುಣ್ಯವನ್ನು ಪಡೆದು ಯಯಾತಿಯು ಸಾವಿರಾರು ಯಾಗಗಳನ್ನು ಮಾಡಿದನು. ಆ ನಂತರ ಪುರುವಿನಲ್ಲಿ ಠೇವಣಿಯಾಗಿಟ್ಟಿದ್ದ ವಾರ್ಧಕ್ಯವನ್ನು ತಾನು ಮರಳಿ ಪಡೆದನು. ಪುರುವಿನ ತಾರುಣ್ಯವನ್ನು ಆತನಿಗೆ ಪುನಃ ಕೊಟ್ಟು ಆತನ ರಾಜ್ಯಾಭಿಷೇಕವನ್ನು ಪೂರೈಸಿದನು.*

**೫೪. ಶ್ವಾನ > ಭಿಕ್ಷು** **ಉತ್ತರಕಾಂಡ / ಪ್ರಕ್ಷಿಪ್ತ ೨ / ೫೯-೬೦**

ಈ ಸರ್ಗಗಳಲ್ಲಿ, ರಾಮರಾಜ್ಯದ ನಿಷ್ಪಕ್ಷಪಾತವಾದ ನ್ಯಾಯಪದ್ಧತಿಯನ್ನು ಗೌರವಿಸುವ ಕಥೆಯು ಬಂದಿದೆ.

ಶ್ರೀರಾಮನು ವಸಿಷ್ಠ, ಕಶ್ಯಪಾದಿ ಋಷಿಗಳು, ಅಮಾತ್ಯರು, ಧರ್ಮಶಾಸ್ತ್ರಜ್ಞರು, ನೀತಿನಿಪುಣ ಸಭಿಕರು, ರಾಜರು, ಇವರಿಂದ ಅಲಂಕೃತವಾದ ಸಭೆಯಲ್ಲಿ ರಾಜಧರ್ಮವನ್ನು ಪಾಲಿಸುತ್ತಿದ್ದನು. ರಾಜ್ಯಕಾರ್ಯಭಾರವು ಧರ್ಮಾನುಸಾರ ನಡೆಯುತ್ತಿದ್ದುದರಿಂದ ಯಾರಿಗೂ ಯಾವ ಉಪದ್ರವವಿರಲಿಲ್ಲ. ಯಾರಿಂದಲೂ ತಕರಾರುಗಳು ಬರುತ್ತಿರಲಿಲ್ಲ. ಹೀಗಿದ್ದರೂ ವಾಡಿಕೆಯಂತೆ ಶ್ರೀರಾಮನು ಯಾರಿಂದಲಾದರೂ ಅರ್ಜಿ ಬಂದಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುತ್ತಿದ್ದನು. ಒಮ್ಮೆ ಲಕ್ಷ್ಮಣನು ಒಂದು ನಾಯಿಯು ರಾಜ್ಯಸಭೆಯ ಬಳಿ ಆಕ್ರೋಶವನ್ನು ಮಾಡುತ್ತಿದ್ದುದನ್ನು ಕಂಡನು. ಈ ಆಕ್ರೋಶದ ಕಾರಣವೇನೆಂದು ಕೇಳಿದಾಗ ಆ ನಾಯಿಯು ಹೀಗೆಂದಿತು : "ನಿರ್ಮಲಚರಿತನು, ಭಯಗೊಂಡವರಿಗೆ ಆಶ್ರಯದಾತನು, ಪರಿಸ್ಥಿತಿಗನುಸಾರವಾಗಿ ಅಭಯವನ್ನು ನೀಡುವ ಶ್ರೀರಾಮನ ಸಮಕ್ಷಮವೇ ನಾನು ಹೇಳಬಯಸುತ್ತೇನೆ." ಕೂಡಲೇ ಲಕ್ಷ್ಮಣನು ಆ ನಾಯಿಯನ್ನು ಸಭೆಗೆ ಕರೆದೊಯ್ಯುವಾಗ, ಪುನಃ ಆ ನಾಯಿಯು "ಮೊದಲು ಶ್ರೀರಾಮನ ಅಪ್ಪಣೆ ಇರದಿದ್ದರೆ ನಾನು ಸಭೆಗೆ ಬರಲಾರೆ" ಎಂದು ಸ್ಪಷ್ಟವಾಗಿ ನುಡಿಯಿತು. ಶ್ರೀರಾಮನು ಅಭಯವನ್ನು ಕೊಟ್ಟು ಪ್ರವೇಶಕ್ಕೆ ಅನುಮತಿಸಿದನು. ಆಗ ತಲೆಗೆ ಗಾಯಗೊಂಡ ಆ ನಾಯಿಯು ಶ್ರೀರಾಮನಿಗೆ ಈ ರೀತಿ ಹೇಳಿತು : "ಸಕಲಸಮೃದ್ಧಿಗಳಿದ್ದ ಓರ್ವ ಭಿಕ್ಷು ಒಬ್ಬ ಬ್ರಾಹ್ಮಣನ ಮನೆಯಲ್ಲಿ ವಾಸವಿದ್ದಾನೆ. ನನ್ನಿಂದ ಯಾವ ಅಪರಾಧ ನಡೆಯದಿದ್ದರೂ ಆ ಭಿಕ್ಷುವು ನನ್ನನ್ನು ಥಳಿಸಿದ್ದಾನೆ." ಈ ತಕರಾರನ್ನು ಕೇಳಿಕೊಂಡು ದೂತರಿಂದ ಆ ಭಿಕ್ಷುವನ್ನು ಕರೆಯಿಸಿದಾಗ, ಆತನು ಈ ರೀತಿ ಹೇಳಿಕೆ ಕೊಟ್ಟನು : "ಭಿಕ್ಷೆ ಬೇಡುವ ಸಮಯವಿಲ್ಲದಾಗ ನಾನು ಒಮ್ಮೆ ಭಿಕ್ಷೆಗಾಗಿ ತಿರುಗುತ್ತಿದ್ದೆ ; ಹಸಿವೆಯಿಂದ ಬಳಲಿದ್ದೆ ; ಆಗ ಈ ನಾಯಿಯು ದಾರಿಗೆ ಅಡ್ಡನಿಂತು ನನಗೆ ದಾರಿ ಕೊಡುತ್ತಿರಲಿಲ್ಲ ; ಸಿಟ್ಟು ತಾಳದೇ ನಾನು ಈ ನಾಯಿಯನ್ನು ಹೊಡೆದೆನು. ಹೇ ರಾಜಾಧಿರಾಜನೇ, ಅಪರಾಧಿಯಾದ ನನಗೆ ಶಾಸನ ದೊರೆಯಲಿ ! ಶಾಸನಹೊಂದಿದರೆ ನನಗೆ ನರಕದ ಭಯ ಉಳಿಯಲಾರದು !" ಶ್ರೀರಾಮನು ಈ ಭಿಕ್ಷುವಿಗೆ ಯಾವ ಶಿಕ್ಷೆಯನ್ನು ವಿಧಿಸತಕ್ಕದ್ದು ? ಎಂದು ಸಭಿಕರಿಗೆ ಕೇಳಿದನು. ಋಷಿಗಳು, ಧರ್ಮಶಾಸ್ತ್ರಜ್ಞರು, ಪಂಡಿತರು ಬ್ರಾಹ್ಮಣನಾದ ಭಿಕ್ಷುವಿಗೆ ವಧೆಯ ಶಿಕ್ಷೆಯನ್ನು ಕೊಡಬಾರದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅಂತಿಮ ತೀರ್ಮಾನಗಳನ್ನು ಶ್ರೀರಾಮನಿಗೆ ಬಿಟ್ಟುಕೊಟ್ಟರು. ಆಗ ಆ ನಾಯಿಯು ವಿನಯಪೂರ್ವಕವಾಗಿ ಈ ರೀತಿ ನುಡಿಯಿತು :

ಯದಿ ತುಷ್ಟೋಽಸಿ ಮೇ ರಾಮ ಯದಿ ದೇಯೋ ವರೋ ಮಮ ॥ ೩೭ ॥
ಪ್ರತಿಜ್ಞಾತಂ ತ್ವಯಾ ವೀರ ಕಿಂ ಕರೋಮೀತಿ ವಿಶ್ರುತಮ್ ।
ಪ್ರಯಚ್ಛ ಬ್ರಾಹ್ಮಣಸ್ಯಾಸ್ಯ ಕೌಲಪತ್ಯಂ ನರಾಧಿಪ ॥ ೩೮ ॥
ಕಾಲಂಜರೇ ಮಹಾರಾಜ ಕೌಲಪತ್ಯಂ ಪ್ರದೀಯತಾಮ್ । ೬೯

"ಭೋ ರಾಜಾ ರಾಮಚಂದ್ರ ! ನೀವು ನನ್ನ ಮೇಲೆ ಸಂತುಷ್ಟರಾಗಿದ್ದರೆ, ಮತ್ತು ನನಗೆ ವರಗಳನ್ನು ಕೊಡುವವರಿದ್ದರೆ ನೀವು ನನ್ನ ವಿನಂತಿಯನ್ನು ಆಲಿಸಬೇಕು. 'ಎಲೈ ವೀರನೇ ! ನಾನು ನಿನ್ನ ಯಾವ

* ನೋಡಿ : ಮಹಾಭಾರತ ಶಾಪವಾಣಿ, ಯಯಾತಿ > ಯದು, ಶಾಪ ಕ್ರ. ೩೩.

ಕಾರ್ಯವನ್ನು ಮಾಡಲಿ ?' ಎಂದು ನೀವು ಕೇಳಿದ್ದೀರಿ. ಆದಕಾರಣ, ಹೇ ರಾಜಾಧಿಪತೇ, ಈ ಬ್ರಾಹ್ಮಣನಿಗೆ ಧರ್ಮಸಂಬಂಧದ ಸಮಾಜದ ಆಧಿಪತ್ಯವನ್ನು ಕೊಡಿರಿ ! ಮಹಾರಾಜರೇ, ನೀವು ಕಾಲಂಜರ ಪರ್ವತದ ಕುಲಪತಿಯ ಅಧಿಕಾರವನ್ನು ಈತನಿಗೆ ಕೊಡಬೇಕು" ಎಂದು ಆ ಶ್ವಾನವು ಹೇಳಿತು.

ಶ್ರೀರಾಮನು ಆ ಶ್ವಾನದ ಕೋರಿಕೆಯಂತೆ ಆ ಭಿಕ್ಷುವಿಗೆ ಕುಲಾಧಿಪತ್ಯದ ಅಭಿಷೇಕವನ್ನು ಮಾಡಿದನು. ಆ ನಂತರ ಆ ಭಿಕ್ಷುವು ಆನೆಯ ಮೇಲೆ ಆರೂಢನಾಗಿ ಅದನ್ನು ಸ್ವೀಕರಿಸಿದನು. ಈ ಘಟನೆಯಿಂದ ಶ್ರೀರಾಮನ ಮಂತ್ರಿಗಳೆಲ್ಲರೂ ಆಶ್ಚರ್ಯಭರಿತರಾದರು. ಶ್ರೀರಾಮನನ್ನು ಈ ರೀತಿ ಕೇಳಿದರು :

ವರೋಽಯಂ ದತ್ತ ಏತಸ್ಯ ನಾಯಂ ಶಾಪೋ ಮಹಾದ್ಯುತೇ ॥ ೪೧ ॥

"ಮಹಾರಾಜರೇ, ಆ ನಾಯಿಯು ಬ್ರಾಹ್ಮಣನಿಗೆ ಶಾಪ ಕೊಡದೇ ವರವನ್ನು ಕೊಟ್ಟಿದೆಯಲ್ಲ ?" ಆಗ ಶ್ರೀರಾಮನು "ನೀವು ಪರಿಣಾಮದ ತತ್ತ್ವಜ್ಞಾನವನ್ನು ಅರಿತಿಲ್ಲ. ಆ ನಾಯಿಯು ಅದನ್ನು ಅರಿತಿದೆ." ಶ್ರೀರಾಮನು ಆ ಬಗ್ಗೆ ಆ ಶ್ವಾನವನ್ನು ಕೇಳಿದಾಗ ಅದು ಈ ರೀತಿ ಹೇಳಿತು : "ನಾನು ಉಂಡುಳಿದ ಅನ್ನವನ್ನು ಭಕ್ಷಿಸಿ, ಆ ಕಾಲಂಜರ ಪರ್ವತರ ಕುಲಪತಿಯಾಗಿದ್ದೆ. ದೇವ-ದ್ವಿಜರ ಪೂಜೆಯನ್ನು ನಡೆಯಿಸಿಕೊಂಡು, ದಾಸ-ದಾಸಿಯರ ಅಧಿಪತಿಯಾಗಿದ್ದೆನು. ಅವರಿಗೆ ಆಹಾರ-ಪಾನೀಯಗಳನ್ನು ಒದಗಿಸುವವನೂ ದೇವಸ್ಥಾನದ ದ್ರವ್ಯದ ರಕ್ಷಣೆಯನ್ನು ಮಾಡುವವನೂ ನಾನೇ ಆಗಿದ್ದೆ. ನನ್ನ ಒಲವು ಶುಭಕರ್ಮದತ್ತ ಇದ್ದಿತು. ನಾನು ವಿನಯಸಂಪನ್ನನಾಗಿ, ಸುಶೀಲನಾಗಿ ಸಕಲ ಪ್ರಾಣಿಗಳ ಹಿತದ ಬಗ್ಗೆ ತತ್ಪರನಾಗಿರುತ್ತಿದ್ದೆನು ; ಆದರೆ ಈ ಘೋರ ನೀಚ ಯೋನಿಯ ಅವಸ್ಥೆಯು ನನಗೆ ಒದಗಿದೆ. ಆದಕಾರಣ ಕೋಪಿಷ್ಠನಾದ, ಧರ್ಮವನ್ನು ತ್ಯಜಿಸಿದ, ಪ್ರಾಣಿಗಳ ಅಹಿತವನ್ನು ಕೋರುವ ಆ ಮಿತ್ರನಿಗೆ ಅಂಥ ಅವಸ್ಥೆಯೇ ಬರಲಿ ! ಕೋಪಿಷ್ಠನಾದವನು, ದುಷ್ಟನಾದವನು, ನಿರ್ದಯನು, ವಿದ್ಯೆಯಿಲ್ಲದವನು, ಅಧಾರ್ಮಿಕ ಪುರುಷನು, ತನ್ನ ಹಿಂದಿನ ಮತ್ತು ನಂತರದ ಏಳು ಪೀಳಿಗೆಗಳನ್ನು ನರಕಕ್ಕೆ ತಳ್ಳುತ್ತಾನೆ. ಯಾವ ಅವಸ್ಥೆ ಬಂದರೂ ಕುಲಪತಿಯ ಅಧಿಕಾರವನ್ನು ಸ್ವೀಕರಿಸಬಾರದು. ಪುತ್ರ, ಪಶು ಮತ್ತು ಬಾಂಧವರ ಸಮೇತ ನರಕವನ್ನು ಸೇರಲಿಚ್ಛಿಸುವವರನ್ನು ದೇವತೆಗಳ, ಹಸುಗಳ ಮತ್ತು ಬ್ರಾಹ್ಮಣರ ಸೇವಾಧಿಕಾರಿಯಾಗಿ ನೇಮಿಸಬೇಕು. ಯಾವನು ಬ್ರಾಹ್ಮಣರಿಗೆ, ದೇವರಿಗೆ, ಸ್ತ್ರೀಯರಿಗೆ ಮತ್ತು ಬಾಲಕರಿಗೆ ಕೊಟ್ಟ ದ್ರವ್ಯವನ್ನು ಅಪಹರಿಸುತ್ತಾನೋ ಅಂಥ ಪುರುಷನು 'ವೀಚಿಸಂಜ್ಞಕ' ಎಂಬ ಘೋರ ನರಕದಲ್ಲಿ ಬೀಳುತ್ತಾನೆ. ಇಷ್ಟೇ ಅಲ್ಲದೆ ದೇವರ ಮತ್ತು ಬ್ರಾಹ್ಮಣರ ಹಣವನ್ನು ಅಪಹರಿಸುವ ವಿಚಾರವನ್ನು ಮನಸ್ಸಿನಲ್ಲಿ ತಂದ ನರಾಧಮನು ಒಂದರನಂತರ ಇನ್ನೊಂದು ನರಕದಲ್ಲಿ ಬೀಳುತ್ತಾನೆ."

ವರವಾಗಿ ಕಾಣುವ ಈ ಶಾಪವು ಬೇರೆ ರೀತಿಯದಾಗಿದೆ.

### ೫೫. ವಸಿಷ್ಠ > ಸೌದಾಸ — ಉತ್ತರಕಾಂಡ / ೬೫

ವಾಲ್ಮೀಕಿ ಋಷಿಯು ಶತ್ರುಘ್ನನಿಗೆ ಸೌದಾಸರಾಜನ ಕಥೆಯನ್ನು ಹೇಳುತ್ತಿದ್ದಾನೆ :

ಶ್ರೀರಾಮನು ಹೇಳಿದ ಕಾರ್ಯವನ್ನು ಮಾಡಲೋಸುಗ ಶತ್ರುಘ್ನನು ದಾರಿಯಲ್ಲಿ ವಾಲ್ಮೀಕಿಯ ಆಶ್ರಮದಲ್ಲಿ ನಿಂತನು. ಋಷಿಯು ಆತನನ್ನು ಯಥೋಚಿತವಾಗಿ ಬರಮಾಡಿಕೊಂಡನು. ಆಶ್ರಮದ ಬಳಿಯಲ್ಲಿದ್ದ ಯಜ್ಞಸಾಮಗ್ರಿಗಳನ್ನು ಕಂಡು ಶತ್ರುಘ್ನನು, ಇದೆಲ್ಲ ಯಾರದು ? ಎಂದು ಪ್ರಶ್ನಿಸಿದಾಗ ವಾಲ್ಮೀಕಿಯು ಆತನಿಗೆ ಈ ರೀತಿ ಹೇಳಿದನು : "ಸೌದಾಸನೆಂಬ ರಾಜನು ನಿಮ್ಮ ಪೂರ್ವಜನಾಗಿದ್ದನು. ಎಳೇ ಪ್ರಾಯದಲ್ಲಿದ್ದಾಗ ಈ ರಾಜನು ಬೇಟೆಯಾಡಲು ಹೋಗಿದ್ದನು. ಅಲ್ಲಿ, ಇಬ್ಬರು ರಾಕ್ಷಸರು ಹುಲಿರೂಪವನ್ನು ಧರಿಸಿ ಮೃಗಗಳನ್ನು ಸಂಹರಿಸುತ್ತಿರುವದನ್ನು ಕಂಡನು. ಈ ರೀತಿ, ಆ ಅಡವಿಯು ಮೃಗಗಳೇ ಇಲ್ಲದಂತಾಗಿರುವದನ್ನು ನೋಡಿ ರಾಜನಿಗೆ ಕೋಪ ಬಂದಿತು. ಆತನು ಬಾಣದಿಂದ ಒಬ್ಬ ರಾಕ್ಷಸನನ್ನು ಕೊಂದುಬಿಟ್ಟನು. ಇದನ್ನು ನೋಡಿ ಸಂಗಾತಿಯಾಗಿದ್ದ ಇನ್ನೊಬ್ಬ ರಾಕ್ಷಸನು ಬಹಳೇ ಸಿಟ್ಟಾಗಿ ಈ ರೀತಿ ಅಂದನು : "ರಾಜನೇ, ನೀನು ನಿರಪರಾಧಿಯಾದ ನನ್ನ ಮಿತ್ರನನ್ನು ಕೊಂದೆ , ನಾನು ಇದರ ಸೇಡನ್ನು ತೀರಿಸಿಕೊಳ್ಳುವೆ."

ಇದಾಗಿ ಕೆಲವು ಕಾಲ ಗತಿಸಿದನಂತರ ಆ ರಾಜನು ಅನೇಕ ವರ್ಷಗಳವರೆಗೆ ನಡೆಯುವ ಒಂದು ಯಜ್ಞವನ್ನು ಪ್ರಾರಂಭಿಸಿದನು. ಆ ಯಜ್ಞವು ದೇವಯಜ್ಞಸಮವಾಗಿತ್ತು. ಹಿಂದಿನ ವೈರತ್ವವನ್ನು ಜ್ಞಾಪದಲ್ಲಿಟ್ಟುಕೊಂಡು

ಈ ರಾಕ್ಷಸನು, ವಸಿಷ್ಠ ಋಷಿಯ ರೂಪವನ್ನು ಧರಿಸಿ, ಯಜ್ಞವು ಮುಗಿದೊಡನೆ ರಾಜನ ಹತ್ತಿರ ಕೂಡಲೇ ಮಾಂಸಾಹಾರವನ್ನು ಇಚ್ಛಿಸಿದನು. ವಸಿಷ್ಠನ ರೂಪದಲ್ಲಿ ಈ ಮಾಯಾವೀ ರಾಕ್ಷಸನು ಬಂದ ಸಂಗತಿಯು ರಾಜನ ಗಮನಕ್ಕೆ ಬರಲಿಲ್ಲ ; ಆತನು ತನ್ನ ಅಡಿಗೆಯವರಿಗೆ ಅಡಿಗೆಯನ್ನು ಸಿದ್ಧಗೊಳಿಸಲು ಅಪ್ಪಣೆ ನೀಡಿದನು. ಅಷ್ಟರಲ್ಲಿ ಆ ರಾಕ್ಷಸನು ವಸಿಷ್ಠನ ರೂಪವನ್ನು ಬಿಟ್ಟು, ಅಡಿಗೆಯವನ ರೂಪವನ್ನು ಧರಿಸಿ ನರಮಾಂಸವನ್ನು ಸಿದ್ಧಗೊಳಿಸಿದನು. ಈ ಭೋಜನವನ್ನು ನಿಜವಾದ ವಸಿಷ್ಠನಿಗೆ ಬಡಿಸಿದಾಗ ಅದು ನರಮಾಂಸವೆಂದು ಋಷಿಗೆ ಗೊತ್ತಾಯಿತು. ಆತನು ಕ್ರೋಧದಿಂದ ಈ ರೀತಿ ಅಂದನು :

ಯಸ್ಮಾತ್ತ್ವಂ ಭೋಜನಂ ರಾಜನ್ನ್ಮೈತದ್ದಾತುಮಿಚ್ಛಸಿ ।
ತಸ್ಮಾದ್ ಭೋಜನಮೇತತ್ತೇ ಭವಿಷ್ಯತಿ ನ ಸಂಶಯಃ ॥ ೨೮ ॥

"ರಾಜನೇ, ನೀನು ಇಂಥ ಭೋಜನವನ್ನು ನನಗೆ ಕೊಡಲು ಬಯಸಿದೆ ; ಅದಕ್ಕಾಗಿ ಖಚಿತವಾಗಿ ಇದೇ ನಿನಗೆ ಭೋಜನವಾಗಿ ಪ್ರಾಪ್ತವಾಗುತ್ತದೆ."

ವಸಿಷ್ಠನ ಈ ಶಾಪವನ್ನು ಕೇಳಿ, ಸೌದಾಸರಾಜ ಆತನಿಗೆ ಪ್ರತಿಶಾಪವನ್ನು ಕೊಡಬಯಸಿದಾಗ, ಅವನ ಪತ್ನಿಯು ಸಮಾಧಾನ ಹೇಳಿ ಅವನನ್ನು ತಡೆದಳು. ರಾಜನು ವಸಿಷ್ಠನಿಗೆ ನಿಜವಾದ ಪರಿಸ್ಥಿತಿಯನ್ನೆಲ್ಲ ಅರುಹಿದನು. ಆಗ ರಾಜನ ನಿರಪರಾಧಿತ್ವವು ಋಷಿಯ ಗಮನಕ್ಕೆ ಬಂದಿತು. ವಸಿಷ್ಠನೆಂದನು :

ಮಯಾ ರೋಷಪರೀತೇನ ಯದಿದಂ ವ್ಯಾಹೃತಂ ವಚಃ ।
ನೈತಚ್ಛಕ್ಯಂ ವೃಥಾ ಕರ್ತುಂ ಪ್ರದಾಸ್ಯಾಮಿ ಚ ತೇ ವರಮ್ ॥ ೩೫ ॥
ಕಾಲೋ ದ್ವಾದಶವರ್ಷಾಣಿ ಶಾಪಸ್ಯಾಂತೋ ಭವಿಷ್ಯತಿ ।
ಮತ್ಪ್ರಸಾದಾಚ್ಚ ರಾಜೇಂದ್ರ ಅತೀತಂ ನ ಸ್ಮರಿಷ್ಯಸಿ ॥ ೩೬ ॥
ಏವಂ ಸ ರಾಜಾ ತಂ ಶಾಪಮುಪಭುಜ್ಯಾರಿಸೂದನಃ ।
ಪ್ರತಿಲೇಭೇ ಪುನಾ ರಾಜ್ಯಂ ಪ್ರಜಾಶ್ಚೈವಾನ್ವಪಾಲಯತ್ ॥ ೩೭ ॥

"ನಾನು ಕೆರಳಿ ಆಡಿದ ಮಾತು ಸುಳ್ಳಾಗದು. ಆದರೂ ನಿನಗಾಗಿ ವರವನ್ನೀವೆ—ಹನ್ನೆರಡು ವರ್ಷಗಳು ಕಳೆದ ತರುವಾಯ ಶಾಪ ಮುಗಿದೀತು. ಎಲೈ ರಾಜೇಂದ್ರನೇ ! ನನ್ನ ಪ್ರಸಾದದಿಂದಾಗಿ ನಿನ್ನಲ್ಲಿ ಹಿಂದಿನ ನೆನಪು ಉಳಿಯದು." ಈ ರೀತಿಯಾಗಿ ಶಾಪವನ್ನು ಅನುಭವಿಸಿದ ತರುವಾಯ ಅವನಿಗೆ ಮತ್ತೆ ರಾಜ್ಯ ಮರಳಿ ದೊರೆಯಿತು. ಅವನು ಪ್ರಜೆಗಳನ್ನು ಚೆನ್ನಾಗಿ ಪರಿಪಾಲಿಸಿದನು.

ವಸಿಷ್ಠನು ಕಲ್ಮಾಷಪಾದನಿಗಿತ್ತ ಈ ವರವು ಉಃಶಾಪದಂತಿದೆ.

ನೋಡಿ : ಮಹಾಭಾರತ ಶಾಪವಾಣಿ, ವಸಿಷ್ಠ > ಸೌದಾಸ, ಶಾಪ ಕ್ರ. ೧೨೧.
ನೋಡಿ : ಸೌದಾಸ > ವಸಿಷ್ಠ, ಶಾಪ ಕ್ರ. ೫೬.

## ೫೬. ಸೌದಾಸ > ವಸಿಷ್ಠ ಉತ್ತರಕಾಂಡ / ೬೫

ನೋಡಿ : ವಸಿಷ್ಠ > ಸೌದಾಸ, ಶಾಪ ಕ್ರ. ೫೫.

ವಸಿಷ್ಠನು ಸೌದಾಸರಾಜನಿಗೆ ಕೊಟ್ಟ ಶಾಪದ ಬಗೆಗೆ ಈ ಮೊದಲು ಹೇಳಿಯಾಗಿದೆ.

ಸೌದಾಸರಾಜನು ವಸಿಷ್ಠನ ಶಾಪವನ್ನು ಅರಿತು ಅತ್ಯಂತ ಕ್ರೋಧಾವಿಷ್ಟನಾದನು. ವಸಿಷ್ಠನೇ ಮಾಂಸಾಹಾರವನ್ನು ಬೇಡಿದ್ದನೆಂದು ರಾಜನ ತಿಳುವಳಿಕೆಯಿತ್ತು. ರಾಕ್ಷಸನು ವಸಿಷ್ಠನ ರೂಪವನ್ನು ಧರಿಸಿದ ಸಂಗತಿಯಾಗಲೀ ನಂತರ ಅದೇ ರಾಕ್ಷಸನು ಅಡಿಗೆಯವನಾಗಿ ನರಮಾಂಸವನ್ನು ಸಿದ್ಧಗೊಳಿಸಿದ ಸಂಗತಿಯಾಗಲೀ ಸೌದಾಸನಿಗೆ ಗೊತ್ತಿರಲಿಲ್ಲವಾದ್ದರಿಂದ, ತನ್ನ ಅಪರಾಧವೇನೆಂಬುದೇ ಅವನಿಗೆ ಗೊತ್ತಿರಲಿಲ್ಲ. ವಸಿಷ್ಠನು ವಿನಾಕಾರಣವಾಗಿ ಶಪಿಸಿದ್ದರಿಂದ, ರಾಜನು ಆತನಿಗೆ ಪ್ರತಿಶಾಪವನ್ನು ಕೊಡಲು ಕೈಯಲ್ಲಿ ಉದಕವನ್ನು ಹಿಡಿದು ಸಿದ್ಧನಾದನು ; ಆದರೆ ರಾಣಿಯಾದ ಮದಯಂತಿಯು ರಾಜನಿಗೆ ಅದನ್ನು ಮಾಡಗೊಡಲಿಲ್ಲ. ಅವಳು ರಾಜನಿಗೆ ತಿಳಿಸಿ ಈ ರೀತಿ ಎಂದಳು —

ರಾಜನ್ಪ್ರಭುರ್ಯತೋಽಸ್ಮಾಕಂ ವಸಿಷ್ಠೋ ಭಗವಾನೃಷಿಃ ।
ಪ್ರತಿಶಪ್ತುಂ ನ ಶಕ್ತಸ್ತ್ವಂ ದೇವತುಲ್ಯಂ ಪುರೋಧಸಮ್ ॥ ೨೦ ॥

"ಭಗವಾನ್ ವಸಿಷ್ಠ ಋಷಿಗಳು ನಮ್ಮ ಪ್ರಭುಗಳಿದ್ದಾರೆ. ಆ ದೇವಸಮಾನರಾದ ಪುರೋಹಿತರನ್ನು ಶಪಿಸುವದು ನಿನಗೆ ತರವಲ್ಲ." ಆತನು ಈ ರೀತಿ ಪತ್ನಿಯ ಉಪದೇಶವನ್ನು ಮನ್ನಿಸಿದನು.

ಅವನು ಕೈಯಲ್ಲಿದ್ದ ತೇಜಸ್ಸು ಮತ್ತು ಬಲಪೂರಿತ ಉದಕವನ್ನು ತನ್ನ ಪಾದಗಳ ಮೇಲೆ ಸುರಿದು ಕೊಂಡನು. ಕೂಡಲೇ ಆತನ ಪಾದಗಳೆರಡೂ ಚಿತ್ರವಿಚಿತ್ರ ಬಣ್ಣದವಾದವು. ಸೌದಾಸರಾಜನು 'ಕಲ್ಮಾಷಪಾದ' ನಾದನು. ಜನರು ಆತನನ್ನು ಹಾಗೆಂದು ಕರೆಯಹತ್ತಿದರು.

ರಾಜನು ರಾಕ್ಷಸನ ಮಾಯಾವೀ ರೂಪದ ಬಗ್ಗೆ ಹಾಗೂ ಆತನು ಸಿದ್ಧಗೊಳಿಸಿದ ಭೋಜನದ ವಿಷಯವನ್ನು ವಸಿಷ್ಠನಿಗೆ ತಿಳಿಸಿದನು. ರಾಜನು 'ನಿರಪರಾಧಿ' ಎಂದು ಆತನಿಗೆ ಅರಿವಾಯಿತು. ಯಾರು ಯಾರಿಗೆ ಈ ಶಾಪವನ್ನು ಕೊಟ್ಟರು ಎಂಬುವದು ಮಹಾಭಾರತದಲ್ಲಿ ಸ್ಪಷ್ಟವಾಗಿಲ್ಲ.

ಮಹಾಭಾರತದ ಶಾಪವಾಣಿ, ?, ? > ಸೌದಾಸ, ಶಾಪ ಕ್ರ. ೬೮.

## ೫೭. ಶುಕ್ರಾಚಾರ್ಯ > ದಂಡ ಉತ್ತರಕಾಂಡ / ೮೧

ಅಗಸ್ತ್ಯಮುನಿಯು ದಂಡರಾಜನ ಶಾಪದ ವೃತ್ತಾಂತವನ್ನು ಹೇಳುತ್ತಿದ್ದಾನೆ :

ಚೈತ್ರಮಾಸದಲ್ಲಿ ಒಮ್ಮೆ ದಂಡರಾಜನು ರಮಣೀಯವಾದ ಭಾರ್ಗವಾಶ್ರಮಕ್ಕೆ ಹೋಗಿದ್ದನು. ಅಲ್ಲಿ ಅತ್ಯಂತ ಲಾವಣ್ಯವತಿಯಾದ ಶುಕ್ರಾಚಾರ್ಯನ (ಭಾರ್ಗವ) ಕನ್ಯೆಯನ್ನು ಕಂಡನು. ಅವಳನ್ನು ನೋಡಿದ ಕ್ಷಣವೇ ಅವನು ಮದನಬಾಣಗಳಿಂದ ಕಾಮಪೀಡಿತನಾದನು. ರಾಜನು ಆಕೆಗೆ ಕುಶಲಪ್ರಶ್ನೆಗಳನ್ನು ಕೇಳಿ ತನ್ನ ವ್ಯಥೆಯನ್ನು ತೋಡಿಕೊಂಡನು. ಆಕೆಯು ರಾಜನಿಗೆ ವಿನಯದಿಂದ ಈ ರೀತಿ ನುಡಿದಳು : "ಹೇ ರಾಜನೇ, ನಾನು ಭಾರ್ಗವರ ಜ್ಯೇಷ್ಠ ಕನ್ಯೆ 'ಅರಜಾ'. ನೀವು ನನ್ನನ್ನು ಬಲಾತ್ಕರಿಸಬಾರದು. ನನ್ನ ತಂದೆಯು ನಿಮ್ಮ ಗುರುವಾಗಿದ್ದು ನೀವು ಆತನ ಶಿಷ್ಯರೆಂಬುದನ್ನು ಮರೆಯಬಾರದು ! ಮಹಾತಪಸ್ವಿಯಾದ ನನ್ನ ತಂದೆಯು ರೇಗಿದರೆ ನಿಮಗೆ ಬಲು ದುಃಖವುಂಟಾಗಬಹುದು. ನೀವು ನನ್ನನ್ನು ಬಯಸುತ್ತಿದ್ದರೆ ಯೋಗ್ಯ ರೀತಿಯಲ್ಲಿ ನನ್ನ ತಂದೆಯ ಹತ್ತಿರ ಮದುವೆಯ ಪ್ರಸ್ತಾಪ ಮಾಡಿರಿ ! ಬಹುಶಃ ಅವರು ಅನುಮತಿಸಬಹುದು." ಇದನ್ನು ಕೇಳಿಯೂ ಆ ಕಾಮಪರವಶ ಮದೋನ್ಮತ್ತ ರಾಜನು ಆಕೆಗೆ "ನಿನಗಾಗಿ ನನ್ನ ಜೀವವು ಕಸಿವಿಸಿಗೊಳ್ಳುತ್ತಿದೆ ; ಕಾಲಾಪಹರಣವು ನನ್ನಿಂದ ಸಾಧ್ಯವಿಲ್ಲ ; ನಿನ್ನನ್ನು ಪಡೆದನಂತರ ನನ್ನ ವಧೆಯಾದರೂ ಪರಿವೆಯಿಲ್ಲ ; ಭೀಕರ ಪಾತಕ ತಗುಲಿದರೂ ಚಿಂತೆಯಿಲ್ಲ ; ನೀನು ಕೂಡಲೇ ನನಗೆ ವಶಳಾಗು ! ನಾನು ಕಾಮವ್ಯಾಕುಲನಾಗಿದ್ದೇನೆ." ಹೀಗೆಂದು ಆಕೆಯ ಇಚ್ಛೆಯ ವಿರುದ್ಧ ಅವಳನ್ನು ಗಟ್ಟಿಯಾಗಿ ತಬ್ಬಿಕೊಂಡು, ಆಕೆಯು ಚಡಪಡಿಸಿ ಒದ್ದಾಡುತ್ತಿದ್ದರೂ ಅವಳನ್ನು ಯಥೇಚ್ಛವಾಗಿ ಭೋಗಿಸಿದನು. ನಂತರ ರಾಜನು ತನ್ನ ನಗರಕ್ಕೆ ಹೊರಟು ಹೋದನು. 'ಅರಜಾ' ಈಕೆಯು ಅತಿಖಿನ್ನಳಾಗಿ ತಂದೆಯ ಬರುವಿಕೆಯನ್ನು ಕಾಯುತ್ತ ಆಶ್ರಮದ ಬಳಿ ಕುಳಿತುಕೊಂಡಳು. (ಉತ್ತರಕಾಂಡ / ೮೦)

ಶೋಕಾಕುಲಳಾದ ಮಗಳನ್ನು ಕಂಡ ಕ್ಷಣವೇ ಆ ಮಹಾತೇಜಸ್ವಿಯಾದ ಭಾರ್ಗವನಿಗೆ ನಡೆದ ಸಂಗತಿಯು ವಿದಿತವಾಯಿತು. ಆತನು ಸಿಟ್ಟಿನಿಂದ ಸಿಡಿಮಿಡಿಗೊಂಡನು. ತನ್ನ ಶಿಷ್ಯರಿಗೆ ಈ ರೀತಿ ನುಡಿದನು (ಉತ್ತರಕಾಂಡ / ೮೧) :

> ಪಶ್ಯಧ್ವಂ ವಿಪರೀತಸ್ಯ ದಂಡಸ್ಯಾವಿದಿತಾತ್ಮನಃ ।
> ವಿಪತ್ತಿಂ ಘೋರಸಂಕಾಶಾಂ ಕ್ರುದ್ಧಾದಗ್ನಿಶಿಖಾಮಿವ ॥ ೪ ॥
> ಕ್ಷಯೋಽಸ್ಯ ದುರ್ಮತೇಃ ಪ್ರಾಪ್ತಃ ಸಾನುಗಸ್ಯ ದುರಾತ್ಮನಃ ।
> ಯಃ ಪ್ರದೀಪ್ತಾಂ ಹುತಾಶಸ್ಯ ಶಿಖಾಂ ವೈ ಸ್ಪ್ರಷ್ಟುಮರ್ಹತಿ ॥ ೫ ॥
> ಯಸ್ಮಾತ್ಸ ಕೃತವಾನ್ಪಾಪಮೀದೃಶಂ ಘೋರಸಂಹಿತಮ್ ।
> ತಸ್ಮಾತ್ಪ್ರಾಪ್ಸ್ಯತಿ ದುರ್ಮೇಧಾಃ ಫಲಂ ಪಾಪಸ್ಯ ಕರ್ಮಣಃ ॥ ೬ ॥
> ಸಪ್ತರಾತ್ರೇಣ ರಾಜಾಸೌ ಸಪುತ್ರಬಲವಾಹನಃ ।
> ಪಾಪಕರ್ಮಸಮಾಚಾರೋ ವಧಂ ಪ್ರಾಪ್ಸ್ಯತಿ ದುರ್ಮತಿಃ ॥ ೭ ॥

"ತನ್ನ ಯೋಗ್ಯತೆಯನ್ನು ಅರಿತುಕೊಂಡಿರದ, ವಿಪರೀತನಾದ ದಂಡರಾಜನು ನನ್ನ ಕೋಪದಿಂದಾಗಿ

ಅಗ್ನಿಜ್ವಾಲೆಯಂತಹ ಭಯಂಕರವಾದ ಅನರ್ಥಕ್ಕೆ ತುತ್ತಾಗುವನು. ಅದನ್ನು ಅವಲೋಕಿಸಿರಿ ! ಈ ಅವಿವೇಕಿ ರಾಜನು ತನ್ನ ಅನುಯಾಯಿಗಳ ಸಮೇತನಾಗಿ ನಾಶವಾಗುವ ಸಮಯವು ಸಮೀಪಿಸಿದೆ. ಧಗಧಗಿಸುವ ಅಗ್ನಿಜ್ವಾಲೆಯ ಸಮಾಗಮವೇ ಈತನಿಗೆ ತಕ್ಕ ಶಾಸ್ತಿ. ಈತನಿಂದ ನಡೆದ ಘೋರಪಾಪಕ್ಕಾಗಿ ಪಾಪಕರ್ಮದ ಫಲವು ದುರ್ಬುದ್ಧಿಯಾದ ಆ ರಾಜನಿಗೆ ಪ್ರಾಪ್ತವಾಗುವದು. ಸ್ವಲ್ಪದರಲ್ಲಿ, ಪಾತಕಿಯಾದ ಈ ದುಷ್ಟಬುದ್ಧಿಯ ರಾಜನು, ಪುತ್ರ, ಸೈನ್ಯ, ವಾಹನಗಳ ಸಮೇತ ಏಳು ದಿನಗಳಲ್ಲಿ ವಧೆಯಾಗುವನು."

ಈ ಶಾಪವನ್ನು ನುಡಿದನಂತರ ಮುನಿಯು, ಆಶ್ರಮವಾಸಿಗಳಿಗೆ ಆ ರಾಜ್ಯದ ಸೀಮೆಯನ್ನು ಬಿಟ್ಟುಹೋಗಲು ಹೇಳಿದನು.

> ತಚ್ಚ ರಾಜ್ಯಂ ನರೇಂದ್ರಸ್ಯ ಸಭೃತ್ಯಬಲವಾಹನಂ ॥ ೧೭ ॥
> ಸಪ್ತಾಹಾದ್ ಭಸ್ಮಸಾದ್‌ಭೂತಂ ಯಥೋಕ್ತಂ ಬ್ರಹ್ಮವಾದಿನಾ । ೧೮

ಏಳು ದಿವಸಗಳಲ್ಲಿ ದಂಡರಾಜನ ರಾಜ್ಯವು, ಸೇವಕರು, ಸೈನ್ಯವು, ವಾಹನಗಳು ಸುಟ್ಟು ಬೂದಿಯಾದವು.

### ೫೮. ಶುಕ್ರಾಚಾರ್ಯ > ದಂಡಕಾರಣ್ಯ

ಉತ್ತರಕಾಂಡ / ೮೧

ದಂಡಕಾರಣ್ಯವು ಜನರಹಿತವಾಗಲು ಕಾರಣವಾವುದು ? ಎಂದು ಶ್ರೀರಾಮನು ಪ್ರಶ್ನಿಸಿದಾಗ, ಅಗಸ್ತ್ಯನು ಈ ರೀತಿ ತಿಳಿಸುತ್ತಾನೆ.

ನೋಡಿ : ಶುಕ್ರಾಚಾರ್ಯ > ದಂಡ, ಶಾಪ ಕ್ರ. ೫೭

ಧರ್ಮಯುಕ್ತ ಕೃತಯುಗದಲ್ಲಿ ರಾಜನು ತದ್ವಿರುದ್ಧವಾಗಿ ವರ್ತಿಸಿದ್ದರಿಂದ ಭಾರ್ಗವನು ಆ ರಾಜನು ವಾಸವಿದ್ದ ಪ್ರದೇಶಕ್ಕೂ, ದಂಡಕಾರಣ್ಯಕ್ಕೂ ಶಾಪವನ್ನು ಕೊಟ್ಟನು :

> ಸಮಂತಾದ್ಯೋಜನಶತಂ ವಿಷಯಂ ಚಾಸ್ಯ ದುರ್ಮತೇಃ ।
> ಧಕ್ಷ್ಯತೇ ಪಾಂಸುವರ್ಷೇಣ ಮಹತಾ ಪಾಕಶಾಸನಃ ॥ ೮ ॥
> ಸರ್ವಸತ್ತ್ವಾನಿ ಯಾನೀಹ ಸ್ಥಾವರಾಣಿ ಚರಾಣಿ ಚ ।
> ಮಹತಾ ಪಾಂಸುವರ್ಷೇಣ ವಿಲಯಂ ಸರ್ವತೋಽಗಮನ್ ॥ ೯ ॥
> ದಂಡಸ್ಯ ವಿಷಯೋ ಯಾವತ್ತಾವತ್ಸರ್ವಂ ಸಮುಚ್ಛ್ರಯಮ್ ।
> ಪಾಂಸುವರ್ಷಮಿವಾಲಕ್ಷ್ಯಂ ಸಪ್ತರಾತ್ರಂ ಭವಿಷ್ಯತಿ ॥ ೧೦ ॥

"ಇಂದ್ರನು ದುರ್ಬುದ್ಧಿಯಾದ ಈ ರಾಜನ ಪ್ರದೇಶದ ಸುತ್ತುಮುತ್ತಲಿನ ನೂರು ಯೋಜನಗಳವರೆಗೆ ಧೂಳನ್ನು ವೃಷ್ಟಿಗರೆದು ಆ ಪ್ರದೇಶವನ್ನು ನಾಶಪಡಿಸುವನು. ಈ ಪ್ರದೇಶದಲ್ಲಿಯ ಚರಾಚರಪ್ರಾಣಿಗಳೆಲ್ಲವೂ ಪ್ರಚಂಡ ಧೂಳಿಯ ವೃಷ್ಟಿಯಿಂದ ಸರ್ವತೋಪರಿ ನಾಶಹೊಂದುವವು ; ದಂಡರಾಜನ ಸಮಸ್ತ ಪ್ರದೇಶವು ಧೂಳಿಯ ವೃಷ್ಟಿಯಿಂದ, ಧೂಳಿಯ ರಾಶಿರಾಶಿಗಳಲ್ಲಿ, ಏಳು ದಿನಗಳಲ್ಲಿ ಅಡಗಿಹೋಗುವದು.

> ಶಪ್ತೋ ಬ್ರಹ್ಮರ್ಷಿಣಾ ತೇನ ವೈಧರ್ಮೇ ಸಹಿತೇ ಕೃತೇ ।
> ತತಃ ಪ್ರಭೃತಿ ಕಾಕುತ್ಸ್ಥ ದಂಡಕಾರಣ್ಯಮುಚ್ಯತೇ ॥ ೧೯ ॥

ಕಾಕುತ್ಸ್ಥನೇ ! ಕೃತಯುಗದಲ್ಲಿ ಧರ್ಮಬಾಹ್ಯ ವರ್ತನೆಯಿಂದ ಬ್ರಹ್ಮರ್ಷಿಯು ರಾಜನಿಗೆ ಮತ್ತು ರಾಜ್ಯಕ್ಕೆ ಶಾಪವನ್ನಿತ್ತನು.

### ೫೯. ದುರ್ವಾಸ > ಲಕ್ಷ್ಮಣ

ಉತ್ತರಕಾಂಡ / ೧೦೫

ಶ್ರೀರಾಮನ ಅವತಾರಕಾರ್ಯವು ಮುಗಿಯುತ್ತಬಂದಿತ್ತು. ಆತನು ಈ ನಂತರ ಏನು ಮಾಡುವದಿದೆ ? ಎಂಬ ಬಗ್ಗೆ ಬ್ರಹ್ಮನ ಆಜ್ಞೆಯಂತೆ ಪ್ರತ್ಯಕ್ಷ ಕಾಲಪುರುಷನು ಮಹತ್ವದ ಸಂದೇಶವನ್ನು ಕೊಂಡು ಶ್ರೀರಾಮನಿಗೆ ಭೇಟಿಯಾಗಲು ಬಂದಿದ್ದನು. ತಂದ ಸಂದೇಶವನ್ನು ಶ್ರೀರಾಮನು ಏಕಾಂತದಲ್ಲಿ ಕೇಳಿಕೊಳ್ಳಬೇಕೆಂದು ಕಾಲನು ಸ್ಪಷ್ಟವಾಗಿ ತಿಳಿಸಿದನು. ಆಗ ಶ್ರೀರಾಮನು ಅಲ್ಲಿದ್ದ ದ್ವಾರಪಾಲಕರನ್ನು ದೂರವಿರಿಸಿ ಲಕ್ಷ್ಮಣನಿಗೆ ಅಲ್ಲಿ ಕಾವಲು ನಿಲ್ಲಲು ಹೇಳಿದನು. ಯಾರನ್ನೂ ಒಳಗೆ ಬಿಡಕೂಡದೆಂದು ಅಪ್ಪಣೆಮಾಡಿದನು. ಯಾವ ಮನುಷ್ಯನು

ಶ್ರೀರಾಮ ಮತ್ತು ಕಾಲಪುರುಷ ಇವರ ಸಂಭಾಷಣೆಯನ್ನು ಕೇಳಿಸಿಕೊಳ್ಳುವನೋ ಅಥವಾ ಅವರನ್ನು ಮಾತನಾಡುವಾಗ ನೋಡುವನೋ ಅವನನ್ನು ವಧಿಸುವುದಾಗಿ ಶ್ರೀರಾಮನು ಪ್ರತಿಜ್ಞೆಮಾಡಿದನು.

ಲಕ್ಷ್ಮಣನು ಶ್ರೀರಾಮನ ಆಜ್ಞೆಯನ್ನು ಬಹು ಎಚ್ಚರಿಕೆಯಿಂದ ಪಾಲಿಸುತ್ತಿದ್ದಾಗ ದುರ್ವಾಸ ಋಷಿಯು ಶ್ರೀರಾಮನನ್ನು ಕಾಣಬೇಕೆಂದು ಬಂದನು. ಲಕ್ಷ್ಮಣನು ಆತನಿಗೆ ನಮಸ್ಕರಿಸಿ ಸ್ವಲ್ಪ ಸಮಯ ತಡೆಯಲು ಹೇಳಿದನು. ಶ್ರೀರಾಮನು ಮಹತ್ವದ ಕಾರ್ಯದಲ್ಲಿರುವುದರಿಂದ ಸ್ವಲ್ಪ ಸಮಯ ಕಾಯಬೇಕಾಗಬಹುದೆಂದು ವಿನಂತಿಸಿದನು. ಲಕ್ಷ್ಮಣನ ಈ ಮಾತುಗಳಿಂದ ದುರ್ವಾಸ ಋಷಿಯ ಕೋಪವು ನೆತ್ತಿಗೇರಿತು. ಆತನು ಕೆರಳಿದ ಕಣ್ಣುಗಳಿಂದ ದಿಟ್ಟಿಸುತ್ತ ಲಕ್ಷ್ಮಣನಿಗೆ ಇಂತೆಂದನು :

ಅಸ್ಮಿನ್ ಕ್ಷಣೇ ಮಾಂ ಸೌಮಿತ್ರೇ ರಾಮಾಯ ಪ್ರತಿವೇದಯ ।
ಅಸ್ಮಿನ್ ಕ್ಷಣೇ ಮಾಂ ಸೌಮಿತ್ರೇ ನ ನಿವೇದಯಸೇ ಯದಿ ।
ವಿಷಯಂ ತ್ವಾಂ ಪುರಂ ಚೈವ ಶಪಿಷ್ಯೇ ರಾಘವಂ ತಥಾ ॥ ೬ ॥
ಭರತಂ ಚೈವ ಸೌಮಿತ್ರೇ ಯುಷ್ಮಾಕಂ ಯಾ ಚ ಸಂತತಿ: ।
ನ ಹಿ ಶಕ್ಷ್ಯಾಮ್ಯಹಂ ಭೂಯೋ ಮನ್ಯುಂ ಧಾರಯಿತುಂ ಹೃದಿ ॥ ೭ ॥

"ಎಲೈ ಸುಮಿತ್ರಾನಂದನನೇ, ನಾನು ಬಂದಿರುವೆನೆಂದು ಈ ಕ್ಷಣ ಶ್ರೀರಾಮನಿಗೆ ತಿಳಿಸು ! ನಾನು ಬಂದಿರುವದನ್ನು ಶ್ರೀರಾಮನು ಕೂಡಲೇ ಗಮನಿಸದಿದ್ದರೆ ನಿನಗೆ, ಅಯೋಧ್ಯಾನಗರಕ್ಕೆ, ಈ ದೇಶಕ್ಕೆ ಮತ್ತು ಶ್ರೀರಾಮನಿಗೆ ಶಾಪವನ್ನು ಕೊಡುವೆನು. ಇಷ್ಟೇ ಅಲ್ಲದೇ ಭರತನಿಗೂ ಮತ್ತು ನಿಮ್ಮ ಸಂತಾನಕ್ಕೂ ಶಾಪ ಕೊಡುವೆನು. ಕ್ರೋಧವನ್ನು ತಡೆಹಿಡಿಯುವ ಸಾಮರ್ಥ್ಯ ನನ್ನಲ್ಲಿಲ್ಲ."

ದುರ್ವಾಸನ ನುಡಿಯನ್ನು ಕೇಳಿ ಲಕ್ಷ್ಮಣ ಈ ರೀತಿ ಯೋಚಿಸಿದನು. 'ನಾನೊಬ್ಬನು ಮರಣಹೊಂದಿದರೂ ಅಡ್ಡಿಯಿಲ್ಲ ; ಆದರೆ ಎಲ್ಲರೂ ನಾಶವಾಗುವದು ಉಚಿತವಲ್ಲ.'—ಹೀಗೆಂದು ಲಕ್ಷ್ಮಣನು ಶ್ರೀರಾಮನ ಕಟ್ಟಪ್ಪಣೆಯನ್ನು ಉಲ್ಲಂಘಿಸಿ, ದುರ್ವಾಸ ಋಷಿಯ ಆಗಮನದ ವಾರ್ತೆಯನ್ನು ಶ್ರೀರಾಮನಿಗೆ ತಿಳಿಸಿದನು. ಕಾಲಪುರುಷನು ಹೋದನಂತರ ಲಕ್ಷ್ಮಣನು ಶ್ರೀರಾಮನಿಗೆ ಈ ರೀತಿ ಎಂದನು : "ನೀನು ನನ್ನನ್ನು ವಧಿಸಿ ನಿನ್ನ ಪ್ರತಿಜ್ಞೆಯನ್ನು ಪಾಲಿಸು !"

ನಿಜದಲ್ಲಿ ಈ ಶಾಪವು ಕೊಡಲ್ಪಟ್ಟಿಲ್ಲ.

# ವರದಾನ

## ೧. ದಶರಥ > ಕೈಕೇಯಿ

ಬಾಲಕಾಂಡ / ೧

ಅತುಲವರಾಕ್ರಮಿಯೂ, ಬಹುಗುಣಸಂಪನ್ನನೂ, ಪ್ರಜಾದಕ್ಷನೂ, ಜ್ಯೇಷ್ಠಪ್ರಿಯಪುತ್ರನೂ ಆದ ಶ್ರೀರಾಮನಿಗೆ, ಪ್ರಜೆಗಳ ಇಚ್ಛಾನುಸಾರವಾಗಿ ಯುವರಾಜ್ಯಾಭಿಷೇಕವನ್ನು ಮಾಡಬೇಕೆಂದು ದಶರಥರಾಜನು ಹವಣಿಸಿದನು ; ಅದಕ್ಕಾಗಿ ಅವಶ್ಯಕವಿದ್ದ ಸಾಹಿತ್ಯಸಾಮಗ್ರಿಗಳನ್ನು ಕಲೆಹಾಕಿಸಿದನು. ಅದನ್ನು ಕಂಡು—

ಪೂರ್ವಂ ದತ್ತವರಾ ದೇವೀ ವರಮೇನಮಯಾಚತ ।
ವಿವಾಸನಂ ಚ ರಾಮಸ್ಯ ಭರತಸ್ಯಾಭಿಷೇಚನಮ್ ॥ ೨೨ ॥

ಪೂರ್ವದಲ್ಲಿ ಯಾರಿಗೆ ವರಗಳನ್ನು ಕೊಡುವೆನೆಂದು (ದಶರಥರಾಜನು) ಆಶ್ವಾಸನೆಯನ್ನು ಕೊಟ್ಟಿದ್ದನೋ, ಆ (ಕೈಕೇಯಿ ಎಂಬ ಆತನ) ಹೆಂಡತಿಯು, ಶ್ರೀರಾಮನಿಗೆ (ಹದಿನಾಲ್ಕು ವರ್ಷ) ವನವಾಸ ಮತ್ತು ಭರತನಿಗೆ (ಯುವರಾಜ್ಯ) ಅಭಿಷೇಕ (ಮಾಡಬೇಕು) ಎಂಬ ವರವನ್ನು ಬೇಡಿದಳು.

ಅಯಾಚತ.

ಅಯೋಧ್ಯಾಕಾಂಡ / ೯

ದಶರಥರಾಜನು ಕೈಕೇಯಿಗೆ ವರ ಕೊಡಬೇಕಾಗಿದ್ದ ಸಂಗತಿಯು ಮಂಥರೆಗೆ ಮೊದಲು ಗೊತ್ತಿರಲಿಲ್ಲ ; ಕೈಕೇಯಿಯು ತಾನಾಗಿ ಅವಳಿಗೆ ಯಾವಾಗಲೋ ಹೇಳಿದ್ದಳು. ಈಗ ಮಂಥರೆಯು ಕೈಕೇಯಿಗೆ ಆ ವರಗಳ ಜ್ಞಾಪಕವನ್ನು ಮಾಡಿಕೊಡುತ್ತಾಳೆ.

ದಂಡಕಾರಣ್ಯದಲ್ಲಿ 'ವೈಜಯಂತ' ಎಂಬ ಪಟ್ಟಣದಲ್ಲಿ 'ತಿಮಿಧ್ವಜ'ನೆಂಬ (ಶಂಬರ) ದೈತ್ಯನು ರಾಜ್ಯವಾಳುತ್ತಿದ್ದನು. ಆತನು ಹಲವು ಮಾಯಾವಿದ್ಯೆಗಳಲ್ಲಿ ಪಳಗಿದವನಿದ್ದನು. ಆತನು ದೇವಗಣರನ್ನು ಕೂಡಿದ ಇಂದ್ರನೊಡನೆ ಕಾಳಗವನ್ನು ಪ್ರಾರಂಭಿಸಿದನು. ಆತನು ಯುದ್ಧದಲ್ಲಿ ಗಾಯಗೊಂಡವರನ್ನು ಎಳೆದೊಯ್ದು ಹಿಂಸಿಸಿ ಪ್ರಾಣತೆಗೆಯುತ್ತಿದ್ದನು. ದಶರಥರಾಜನು ಬಲು ಶೌರ್ಯಸಾಹಸದಿಂದ ಆ ರಾಕ್ಷಸರನ್ನು ಎದುರಿಸಿದನು ; ಆದರೆ ಅವರು ಈತನ ಅಂಗಾಂಗಗಳನ್ನು ಗಾಯಗೊಳಿಸಿ ಊನತೆಯನ್ನುಂಟುಮಾಡಿದರು. ಅಂಥ ಸಮಯದಲ್ಲಿ ಕೈಕೇಯಿಯು ಚಾಕಚಕ್ಯತೆಯಿಂದ ದಶರಥರಾಜನನ್ನು ರಣರಂಗದಾಚೆ ಕರೆದೊಯ್ದು ಆತನನ್ನು ರಕ್ಷಿಸಿದಳು. ಆ ಸಂದರ್ಭವನ್ನು ಜ್ಞಾಪಿಸಿಕೊಟ್ಟು ಮಂಥರೆಯು —

ತುಷ್ಟೇನ ತೇನ ದತ್ತೌ ತೇ ದ್ವೌ ವರೌ ಶುಭದರ್ಶನೇ ।
ಸ ತ್ವಯೋಕ್ತಃ ಪತಿರ್ದೇವಿ ಯದೇಚ್ಛೇಯಂ ತದಾ ವರಮ್ ॥ ೧೭ ॥

"ಎಲೈ ಶುಭದರ್ಶನೆ, ಇದರಿಂದ ಸಂತುಷ್ಟನಾದ ರಾಜನು ನಿನಗೆ ವರಗಳನ್ನು ಕೊಡಬಯಸಿದಾಗ 'ನನ್ನ ಇಚ್ಛೆಯಾದಾಗ ನಾನು ವರಗಳನ್ನು ಬೇಡಿಕೊಳ್ಳುವೆ'ನೆಂದು ನೀನು ಆತನಿಗೆ ಹೇಳಿರುವಿ ; ಎಂದು ನನ್ನ ಮುಂದೆ ಮಾತನಾಡಿದ್ದೆ. ಈಗ ನೀನು ನಿನ್ನ ಪತಿಯನ್ನು ಒಲಿಸಿಕೊಂಡು, ಶ್ರೀರಾಮನ ಯುವರಾಜ್ಯಾಭಿಷೇಕದಿಂದ ಅವನನ್ನು ಪರಾವೃತ್ತಗೊಳಿಸು ! ಭರತನಿಗೆ ರಾಜ್ಯಾಭಿಷೇಕ ಮತ್ತು ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸ—ಈ ಎರಡು ವರಗಳನ್ನು ಬೇಡಿಕೋ !" ಎಂದು ಮಂಥರೆಯು ಕೈಕೇಯಿಗೆ ಸಲಹೆಯಿತ್ತಳು. ನಂತರ ಈ ರೀತಿ ನುಡಿದಳು —

ಯೌ ತೌ ದೇವಾಸುರೇ ಯುದ್ಧೇ ವರೌ ದಶರಥೌ ದದೌ ।
ತೌ ಸ್ಮಾರಯ ಮಹಾಭಾಗೇ ಸೋಽರ್ಥೋ ನ ತ್ವಾ ಕ್ರಮೇದತಿ ॥ ೨೮ ॥
ಯದಾ ತು ತೇ ವರಂ ದದ್ಯಾತ್ ಸ್ವಯಮುತ್ಥಾಪ್ಯ ರಾಘವಃ ।
ವ್ಯವಸ್ಥಾಪ್ಯ ಮಹಾರಾಜಂ ತ್ವಮಿಮಂ ವೃಣುಯಾ ವರಮ್ ॥ ೨೯ ॥

"ಎಲೈ ಮಹಾಭಾಗ್ಯಶಾಲಿಯೇ ! ದೇವದಾನವರ ಯುದ್ಧದಲ್ಲಿ ದಶರಥರಾಜನು ನಿನಗೆ ಕೊಟ್ಟ ಎರಡು ವರಗಳ ಸ್ಮರಣೆಯನ್ನು ಅವನಿಗೆ ಮಾಡಿಕೊಡು ! ವರಪಡೆಯುವ ಮೂಲಕ ನಿನ್ನ ಇಷ್ಟಮನೋರಥವು ಸಫಲವಾಗದೆ ಇರಲಾರದು. ದಶರಥನು ಯಾವ ಸಮಯದಲ್ಲಿ ಭೂಮಿಯ ಮೇಲೆ ಬಿದ್ದಿರುವ ನಿನ್ನನ್ನು ಎಬ್ಬಿಸಿಕೊಂಡು ವರ ನೀಡಲು ಸಿದ್ಧನಾಗುವನೋ ಆಗ ಮಹಾರಾಜನಿಂದ ಸತ್ಯದ ಶಪಥ ಮಾಡಿಸಿ ಆ ನಂತರವೇ ವರವನ್ನು ಕೇಳಿಕೋ ! ಆತನನ್ನು ವಚನಬದ್ಧನನ್ನಾಗಿ ಮಾಡಿಕೊ.

ರಾಮಪ್ರವ್ರಜನಂ ದೂರಂ ನವ ವರ್ಷಾಣಿ ಪಂಚ ಚ ।
ಭರತಃ ಕ್ರಿಯತಾಂ ರಾಜಾ ಪೃಥಿವ್ಯಾಂ ಪಾರ್ಥಿವರ್ಷಭ ॥ ೩೦ ॥
ರಾಮ ಪ್ರವ್ರಾಜನಂ ಚೈವ ದೇವಿ ಯಾಚಸ್ವ ತಂ ವರಮ್ ।
ಏವಂ ಸೇತ್ಸ್ಯಂತಿ ಪುತ್ರಸ್ಯ ಸರ್ವಾರ್ಥಾಸ್ತವ ಕಾಮಿನಿ ॥ ೩೨ ॥

"ಹೇ ರಾಜಾಧಿರಾಜನೇ ! ಹದಿನಾಲ್ಕು ವರ್ಷಗಳವರೆಗೆ ಶ್ರೀರಾಮನನ್ನು ದೂರ ಅಡವಿಗೆ ಕಳುಹಿಸು. ಭರತನಿಗೆ ರಾಜ್ಯವನ್ನು ಕೊಡು !' ಎಂದು ವರವನ್ನು ನೀನು ಅವನಿಂದ ಬೇಡಿಕೊ !

"ದೇವಿಯೆ ! ನೀನು ಶ್ರೀರಾಮನ ವನವಾಸಕ್ಕಾಗಿ ರಾಜನಿಂದ ಅಗತ್ಯವಾಗಿ ವರವನ್ನು ಬೇಡಿಕೋ ! ಸ್ವಂತದ ಮಗನು ರಾಜನಾಗಬೇಕೆಂದು ಬಯಸುವ ನಾರಿಯೇ ! ನೀನು ಹೀಗೆ ವರ್ತಿಸಿದರೆ ನಿನ್ನ ಪುತ್ರನ ಎಲ್ಲ ಅಭಿಲಾಷೆಗಳು ಪೂರ್ತಿಗೊಳ್ಳುವುವು."

ಶ್ರೀರಾಮನು ಹದಿನಾಲ್ಕು ವರುಷ ದೂರ ಹೋಗುವದರಿಂದ ಭರತನ ರಾಜ್ಯವು ಸುಭದ್ರವಾಗುವದೆಂದು ಅವಳು ಕೈಕೇಯಿಯನ್ನು ನಂಬಿಸಲು ಪ್ರಯಾಸಪಟ್ಟಳು.

ಅಯೋಧ್ಯಾಕಾಂಡ / ೧೧

ವರಗಳನ್ನು ಕೇಳುವಾಗ ಕೈಕೇಯಿಯು ದಶರಥನಿಗೆ ಹೀಗೆ ನುಡಿದಳು :

ಯಥಾ ಕ್ರಮೇಣ ಶಪಸೇ ವರಂ ಮಮ ದದಾಸಿ ಚ । ೧೩

"ನೀನು ಮೊದಲು ಪ್ರಿಯಪುತ್ರನ ಮೇಲೆ ಶಪಥಮಾಡಿ ಮತ್ತು ನಂತರ ನಿನ್ನ ಪುಣ್ಯದ ಮೇಲೆ ಶಪಥವನ್ನು ಮಾಡಿ, ನನಗೆ ವರಗಳನ್ನು ಕೊಡುತ್ತಿರುವೆ. ಈ ಇಂದ್ರಾದಿ ಮೂವತ್ತುಮೂರು ಕೋಟಿ ದೇವತೆಗಳು ಇದನ್ನು ಕೇಳಿಡಲಿ ! ಅದೇ ರೀತಿ ಚಂದ್ರ, ಸೂರ್ಯ, ಆಕಾಶ, ಗ್ರಹಗಳು, ರಾತ್ರಿ, ದಿವಸ, ದಿಶೆಗಳು, ಈ ಜಗತ್ತು, ಈ ಪೃಥ್ವಿಯು, ಗಂಧರ್ವ ಮತ್ತು ರಾಕ್ಷಸರನ್ನೊಳಗೊಂಡ ಸ್ವರ್ಗದಲ್ಲಿಯ ದೇವತೆಗಳು, ನಿಶಾಚರಪ್ರಾಣಿಗಳು, ಗೃಹದೇವತೆ ಮತ್ತು ಇತರ ಪ್ರಾಣಿಮಾತ್ರರು, ನೀನು ...

ವರಂ ಮಮ ದದಾತಿ..... ॥ ೧೬ ॥

"ನನಗೆ ವರಕೊಡುವ ಬಗೆಗಿನ ಈ ಪ್ರತಿಜ್ಞೆಯ ಭಾಷಣವನ್ನು ಆಲಿಸಲಿ !" ಎಂದು ಅವಳು ದಶರಥನ ಸತ್ಯತೆಯ ಪ್ರತಿಜ್ಞಾನಿಷ್ಠೆಯ ಗುಣಗಳನ್ನು ಹೊಗಳುತ್ತ ಹೀಗೆಂದಳು :

ತತಃ ಪರಮುವಾಚೇನಂ ವರದ ಕಾಮೋಹಿತಮ್ ॥ ೧೭ ॥

ಕಾಮಾಸಕ್ತನಾಗಿ ವರ ನೀಡಲು ಸಿದ್ಧನಾದ ದಶರಥನಿಗೆ "ಹೇ ರಾಜನೇ, ಪೂರ್ವವೃತ್ತಾಂತವನ್ನು ಸ್ಮರಿಸು ! ದೇವದಾನವರ ಆ ಸಂಗ್ರಾಮದಲ್ಲಿ ಶಂಬರನೆಂಬ ದೈತ್ಯನು ನಿನ್ನನ್ನು ಸದೆಬಡಿದನು—ನಿನ್ನನ್ನು ಜೀವಸಹಿತ ಬಿಟ್ಟನಷ್ಟೇ, ಆಗ—

ತತ್ರ ಚಾಪಿ ಮಯಾ ದೇವ ಯತ್ತ್ವಂ ಸಮಭಿರಕ್ಷಿತಃ ।
ಜಾಗ್ರತ್ಯಾ ಯತಮಾನಾಯಾಸ್ತತೋ ಮೇ ಪ್ರದದೌ ವರೌ ॥ ೧೯ ॥
ತೌ ದತ್ತೌ ಚ ವರೌ ದೇವ ನಿಕ್ಷೇಪೌ ಮೃಗಯಾಮ್ಯಹಮ್ ।
ತವೈವ ಪೃಥಿವೀಪಾಲ ಸಕಾಶೇ ರಘುನಂದನ ॥ ೨೦ ॥
ತತ್ಪ್ರತಿಶ್ರುತ್ಯ ಧರ್ಮೇಣ ನ ಚೇದ್ ದಾಸ್ಯಸಿ ಮೇ ವರಮ್ ।
ಅದ್ಯೈವ ಹಿ ಪ್ರಹಾಸ್ಯಾಮಿ ಜೀವಿತಂ ತ್ವದ್ ವಿಮಾನಿತಾ ॥ ೨೧ ॥

"ನಾನು ಯುದ್ಧಭೂಮಿಯಲ್ಲಿ ಪೂರ್ಣರಾತ್ರಿ ಎಚ್ಚರವಿದ್ದು ವಿವಿಧ ಪ್ರಯತ್ನಗಳಿಂದ ನಿನ್ನನ್ನು ರಕ್ಷಿಸಿದೆ ; ನಿನ್ನ ಪ್ರಾಣವನ್ನು ಕಾಪಾಡಲು ಧಡಪಡಿಸಿದೆ ; ಆದ್ದರಿಂದ ನೀನು ನನಗೆ ಎರಡು ವರಗಳನ್ನು ಕೊಟ್ಟೆ ; ಆ ವರಗಳನ್ನು ಬೇಡಿಕೊಳ್ಳದೇ ನಿನ್ನ ಬಳಿಯಲ್ಲಿಯೇ ಠೇವಣಿಯಾಗಿ ಇಟ್ಟಿದ್ದೆ ; ಇಂದು ನಾನು ಅವುಗಳನ್ನು ಬೇಡುತ್ತಿದ್ದೇನೆ. ಧರ್ಮದ ಶಪಥವನ್ನು ಮಾಡಿಯೂ ನೀನು ವರಗಳನ್ನು ನನಗೆ ಕೊಡದಿದ್ದರೆ ನಿನ್ನಿಂದ ಅವಮಾನವಾಯಿತೆಂದು ಬಗೆದು ಈ ದಿನವೇ ಪ್ರಾಣತ್ಯಾಗವನ್ನು ಮಾಡುವೆ."

ಕೈಕೇಯಿಯು ತನ್ನ ವಾಕ್ಚಾತುರ್ಯದಿಂದ ಮೋಹಗೊಂಡು ವರಗಳನ್ನು ಕೊಡಲು ಸಿದ್ಧನಾದ ದಶರಥನನ್ನು ವಚನಾಧೀನನನ್ನಾಗಿ ಮಾಡಿದಳು. ರಾಜನು ವಚನಭಂಗವನ್ನು ಮಾಡಲಾರನೆಂದು ಮನದಟ್ಟಾದನಂತರ ಅವಳು ಈ ರೀತಿ ಅಂದಳು :

ವರೌ ದೇಯೌ ತ್ವಯಾ ದೇವ ತದಾ ದತ್ತೌ ಮಹೀಪತೇ ॥ ೨೩ ॥
ತೌ ತಾವದಹಮದ್ಯೈವ ವಕ್ಷ್ಯಾಮಿ ಶೃಣು ಮೇ ವಚಃ ।
ಅಭಿಷೇಕಸಮಾರಂಭೋ ರಾಘವಸ್ಯೋಪಕಲ್ಪಿತಃ ॥ ೨೪ ॥
ಅನೇನೈವಾಭಿಷೇಕೇಣ ಭರತೋ ಮೇಽಭಿಷಿಚ್ಯತಾಮ್ ।
ಯೋ ದ್ವಿತೀಯೋ ವರೋ ದೇವ ದತ್ತಃ ಪ್ರೀತೇನ ಮೇ ತ್ವಯಾ ॥ ೨೫ ॥
ತದಾ ದೇವಾಸುರೇ ಯುದ್ಧೇ ತಸ್ಯ ಕಾಲೋಽಯಮಾಗತಃ ।
ನವಪಂಚ ಚ ವರ್ಷಾಣಿ ದಂಡಕಾರಣ್ಯಮಾಶ್ರಿತಃ ॥ ೨೬ ॥
ಚೀರಾಜಿನಧರೋ ಧೀರೋ ರಾಮೋ ಭವತು ತಾಪಸಃ ।
ಭರತೋ ಭಜತಾಮದ್ಯ ಯೌವರಾಜ್ಯಮಕಂಟಕಮ್ ॥ ೨೭ ॥
ಏವ ಮೇ ಪರಮಃ ಕಾಮೋ ದತ್ತಮೇವ ವರಂ ವೃಣೇ ।
ಅದ್ಯ ಚೈವ ಹಿ ಪಶ್ಯೇಯಂ ಪ್ರಯಾಂತಂ ರಾಘವಂ ವನೇ ॥ ೨೮ ॥

"ಹೇ ಭೂಪತಿಯೇ, ಆಗ ನೀನು ಕೊಡಬಯಸಿದ ವರಗಳನ್ನು ಇಂದು ನನಗೆ ಕೊಡಬೇಕು ! ಇಂದೇ ನಾನು ಅವುಗಳನ್ನು ಬೇಡಿಕೊಳ್ಳುತ್ತಿದ್ದೇನೆ. ನನ್ನ ಮಾತುಗಳನ್ನು ಕೇಳಿಕೊಳ್ಳಿ ! ಶ್ರೀರಾಮನ ಅಭಿಷೇಕಕ್ಕಾಗಿ ಏರ್ಪಡಿಸಿದ ಈ ಸಮಾರಂಭವು ಭರತನ ಅಭಿಷೇಕದ ಸಮಾರಂಭವಾಗಲಿ ! ಹೇ ರಾಜನೇ, ಅಂದು ಸುರಾಸುರರಲ್ಲಿ ನಡೆದ ಯುದ್ಧದ ಸಮಯದಲ್ಲಿ ನೀವು ಪ್ರಸನ್ನರಾಗಿ ನನಗೆ ಯಾವ ವರವನ್ನು ಕೊಡ ಬಯಸಿದ್ದಿರೋ ಅದನ್ನು ಬೇಡಿಕೊಳ್ಳುವ ಸಮಯವು ಈಗ ಒದಗಿಬಂದಿದೆ. ಶ್ರೀರಾಮನು ವಲ್ಕಲಗಳನ್ನುಟ್ಟು, ಜಿಂಕೆಯ ಚರ್ಮವನ್ನು ಹೊದ್ದುಕೊಂಡು, ಜ್ಞಾನವಂತನಾದ ಆತನು ತಾಪಸಿಯಂತೆ ಹದಿನಾಲ್ಕು ವರ್ಷಗಳ ಪರ್ಯಂತ ದಂಡಕಾರಣ್ಯದಲ್ಲಿ ವಾಸವಿರಬೇಕು ; ಮತ್ತು ಭರತನು ನಿಷ್ಕಂಟಕನಾಗಿ ಯುವರಾಜ್ಯವನ್ನು ಸ್ವೀಕರಿಸಬೇಕು. ಇದೇ ನನ್ನ ಮುಖ್ಯ ಆಸೆಯಾಗಿದೆ.

"ಈ ಮೊದಲು ನೀನು ನನಗೆ ಕೊಟ್ಟ ವರವನ್ನೇ ನಾನು ಬೇಡುತ್ತಿದ್ದೇನೆ. ನಾನು ಈ ದಿನವೇ ಶ್ರೀರಾಮನು ವನವಾಸಕ್ಕೆ ಹೋಗುವದನ್ನು ಕಾಣುವಂತೆ ವ್ಯವಸ್ಥೆಮಾಡಿರಿ."

ಅವಳು ತನ್ನ ಹೇಳಿಕೆಯನ್ನು ಪುಷ್ಟಿಗೊಳಿಸಲು ನಿಖರವಾಗಿ "ದತ್ತಮೇವ ವರಂ ವೃಣೇ" "ನೀವು ಕೊಟ್ಟ ವರವನ್ನೇ ಬೇಡುತ್ತಿದ್ದೇನೆ" ಎನ್ನುತ್ತಾಳೆ.

**ಅಯೋಧ್ಯಾಕಾಂಡ / ೧೨**

ದಶರಥರಾಜನು ಕೈಕೇಯಿಯ ವರಯಾಚನೆಯು ಕಿವಿಗೆ ಬೀಳುತ್ತಲೇ ಬಹಳ ಕುಪಿತನಾದನು. ಆತನು ಶೋಕಾಕುಲತೆಯಿಂದ ಮೂರ್ಛೆಹೋದನು. ಆತನು ಮೂರ್ಛೆಯಿಂದ ಎಚ್ಚೆತ್ತಾಗ ಕೈಕೇಯಿಯನ್ನು ತೀಕ್ಷ್ಣ ಶಬ್ದಗಳಿಂದ ನಿಂದಿಸಿದನು ; ತಿಳಿಸಿ ಹೇಳಲು ಯತ್ನಿಸಿದನು ; ಇಷ್ಟೇ ಅಲ್ಲದೇ ಆಕೆ ತನ್ನ ಹಟವನ್ನು ಬಿಡ ಬೇಕೆಂದು ದೀನನಾಗಿ ಬೇಡಿಕೊಂಡನು. ಆಗ ದುಃಖದಿಂದ ವ್ಯಾಕುಲನಾದ, ಶೋಕದಲ್ಲಿ ಮುಳುಗಿದ, ಮೂರ್ಛಿತಾವಸ್ಥೆಯಲ್ಲಿದ್ದ, ಕಂಪಿಸುತ್ತಿದ್ದ, ದಶರತನು ಪರಿಪರಿಯಾಗಿ ಬೇಡಿಕೊಳ್ಳುತ್ತಿದ್ದಾಗ, ಕೈಕೇಯಿ ಅತಿಕಠೋರ, ಭಯಂಕರ ಶಬ್ದಗಳಲ್ಲಿ ಅವನಿಗೆ ಈ ರೀತಿ ಅಂದಳು :

ಯದಿ ದತ್ವಾ ವರೌ ರಾಜನ್ ಪುನಃ ಪ್ರತ್ಯನುತಪ್ಯಸೇ ।
ಧಾರ್ಮಿಕತ್ವಂ ಕಥಂ ವೀರ ಪೃಥಿವ್ಯಾಂ ಕಥಯಿಷ್ಯಸಿ ॥ ೩೯ ॥

"ಹೇ ರಾಜನೆ, ವರವನ್ನು ಕೊಟ್ಟಾದನಂತರ ಪುನಃ ಈಗ ಪಶ್ಚಾತ್ತಾಪಪಡುತ್ತಿರುವೆ ; ಹೀಗಾದರೆ ನಿನ್ನ ಧಾರ್ಮಿಕತೆಯನ್ನು ಈ ಪೃಥ್ವಿಯ ಮೇಲಿನ ಜನರು ಪ್ರಶಂಸಿಸುವದೆಂತು ? ಯಾರ ಕೃಪೆಯಿಂದ ನೀನು ಬದುಕಿ ಉಳಿದಿರುವೆಯೋ, ಯಾರು ನಿನ್ನನ್ನು ಕಾಪಾಡಿದರೋ, ಅವಳಿಗೆ ಕೊಟ್ಟ ವಚನಗಳನ್ನು ಮುರಿಯುವೆಯಾ ?

ಯೋ ದತ್ತ್ವಾ ವರಮದ್ಯೈವ ಪುನರನ್ಯಾನಿ ಭಾಷಸೇ । ೪೨

"ವರಗಳನ್ನು ಕೊಟ್ಟಾದನಂತರ ನೀನು ವಿಪರೀತವಾಗಿ ನುಡಿಯುತ್ತಿರುವದರಿಂದ ನಿನ್ನ ಕುಲದಲ್ಲಿಯ ರಾಜರ ಹೆಸರುಗಳಿಗೆ ಕಲಂಕವನ್ನು ತರುತ್ತಿರುವೆ." ತನ್ನ ಮಾತನ್ನು ಸಮರ್ಥಿಸಲೆಂದು ಅವಳು 'ಅಲರ್ಕ' ಮತ್ತು 'ಶೈಬ್ಯ' ರಾಜರ ಉದಾಹರಣೆಗಳನ್ನು ಕೊಟ್ಟು ಅವರು ತಮ್ಮ ಮಾತಿಗೆ ತಪ್ಪಲಿಲ್ಲವೆಂಬುದನ್ನು ದಶರಥನಿಗೆ ತಿಳಿಸಿ ಹೇಳಿದಳು.

ದಶರಥರಾಜನು ದೀನಸ್ವಾಕುಲಸ್ವರದಲ್ಲಿ ಅವಳಿಗೆ — "ಹಿತಕರವೆಂದು ತೋರುವ ಈ ಅನರ್ಥವನ್ನು, ನಿನಗೆ ಯಾರು ಉಪದೇಶಿಸಿದರು ? ಪಿಶಾಚಿಯು ಕರುಳನ್ನು ಕಿವುಚುವಂತಹ ಈ ನಿನ್ನ ಮಾತುಗಳನ್ನು ನನ್ನ ಮುಂದೆ ನುಡಿಯಲು ನಿನಗೆ ನಾಚಿಕೆಯೆನಿಸಬಾರದಿತ್ತೇ ? ನಿನ್ನ ಈ ವರ್ತನೆ ನನಗೆ ವಿಪರೀತವೆಂದೆನಿಸುತ್ತದೆ" ಎಂದನು.

ಕುತೋ ವಾ ತೇ ಭಯಂ ಜಾತಂ ಯಾ ತ್ವಮೇವಂ ವಿಧಂ ವರಮ್ ॥ ೫೮ ॥
ರಾಷ್ಟ್ರೇ ಭರತಮಾಸೀನಂ ವೃಣೀಷೇ ರಾಘವಂ ವನೇ ।
ವಿರಮೈತೇನ ಭಾವೇನ ತ್ವಮೇತೇನಾನೃತೇನ ಚ ॥ ೫೯ ॥

"ಭರತನಿಗೆ ರಾಜ್ಯವನ್ನು ಕೊಟ್ಟು ಶ್ರೀರಾಮನನ್ನು ವನವಾಸಕ್ಕಟ್ಟುವ ವರವನ್ನು ಬೇಡಿಕೊಳ್ಳಲು, ನಿನಗೆ ಇಂಥ ಭಯವು ಎಲ್ಲಿಂದ ತೋರಿತು ? ಪತಿಯ ಬಗ್ಗೆ, ಭರತನ ಬಗ್ಗೆ ಮತ್ತು ಜನರ ಬಗ್ಗೆ ಪ್ರೀತಿವಿಶ್ವಾಸ ಗಳನ್ನಿಟ್ಟುಕೊಳ್ಳುವದು ಕರ್ತವ್ಯವೆಂದೆನಿಸುತ್ತಿದ್ದರೆ ನೀನು ಈ ಅನೃತಮಾರ್ಗಗಳನ್ನು ಬಿಟ್ಟುಬಿಡು !" ಎಂದು ದಶರಥನು ನುಡಿದನು.

ಅಯೋಧ್ಯಾಕಾಂಡ / ೧೩

ಶ್ರೀರಾಮನಿಂದ ಭರತನಿಗೆ ಭಯವುಂಟಾಗಬಹುದೆಂಬ ಹೆದರಿಕೆಯಿಂದ, ಜನಾಪವಾದಕ್ಕೆ ಬೆದರದ ಕೈಕೇಯಿ ಬಹಳೇ ಶೋಕಾಕುಲನಾಗಿದ್ದ ದಶರಥನಿಗೆ ಈ ರೀತಿ ನುಡಿದಳು :

ತ್ವಂ ಕತ್ಥಸೇ ಮಹಾರಾಜ ಸತ್ಯವಾದೀ ದೃಢವ್ರತಃ ।
ಮಮ ಚೇದಂ ವರಂ ಕಸ್ಮಾದ್ವಿಧಾರಯಿತುಮಿಚ್ಛಸಿ ॥ ೩ ॥

"ಮಹಾರಾಜನೇ, ಸತ್ಯವಾದಿಯೆಂದು ಮತ್ತು ಸ್ವೀಕರಿಸಿದ ವ್ರತವನ್ನು ನಿಷ್ಠೆಯಿಂದ ಪಾಲಿಸುವವನೆಂದು ನಿನ್ನ ಖ್ಯಾತಿಯಿದೆ. ಹೀಗಿರುವಾಗ ಈ ವರವನ್ನು ಏಕೆ ಈಡೇರಿಸುತ್ತಿಲ್ಲ ?"

ಅಯೋಧ್ಯಾಕಾಂಡ / ೧೪

ಕೈಕೇಯಿಯು ಪುತ್ರಶೋಕದಿಂದ ವ್ಯಾಕುಲನಾಗಿ ಚಡಪಡಿಸುತ್ತಿದ್ದ ದಶರಥನಿಗೆ ಇಂತೆಂದಳು :

ಪಾಪಂ ಕೃತ್ವೇವ ಕಿಮಿದಂ ಮಮ ಸಂಶ್ರುತ್ಯ ಸಂಶ್ರವಮ್ ॥ ೨ ॥

"ನನಗೆ ವರವನ್ನೀಯುವ ಪ್ರತಿಜ್ಞೆಯನ್ನು ಮಾಡಿದ ನೀನು ಪಾಪಮಾಡಿದಂತೆ ಶೋಕಾಭೂತನಾಗಿ ಭೂಮಿಯ ಮೇಲೆ ಏಕೆ ಬಿದ್ದಿರುವೆ ? ನೀನು ಸತ್ಯಪಾಲನೆಯನ್ನು ಆಚರಿಸುವ ಸಜ್ಜನರಂತೆ ವರ್ತಿಸುವದು ಯೋಗ್ಯ ;

ಸ ವರಃ ಸಫಲೋ ಮೇಽಸ್ತು ವರದೋ ಹ್ಯಸಿ ತಸ್ಯಮ ॥ ೮ ॥

"ನನಗೆ ಕೊಟ್ಟ ವರವು ಸಫಲವಾಗಲೇಬೇಕು. ಏಕೆಂದರೆ ನೀನೇ ವರದಾತನು. ಧರ್ಮಪಾಲನೆ ಗಾಗಿಯೇ ಶ್ರೀರಾಮನನ್ನು ವನವಾಸಕ್ಕೆ ಕಳಿಸೆಂದು ನಾನು ಹೇಳುತ್ತಿದ್ದೇನೆ. ನೀನು ನನ್ನ ಈ ಶರತ್ತನ್ನು ಪಾಲಿಸಲಾರೆ ಯಾದರೆ, ನಿನ್ನಿಂದ ಉಪೇಕ್ಷಿತಳಾದ ನಾನು ನಿನ್ನೆದುರಿನಲ್ಲಿ ಪ್ರಾಣತ್ಯಾಗವನ್ನು ಮಾಡುವೆ !"

ಶ್ರೀರಾಮನು ಕೈಕೇಯಿಯ ನಿವಾಸಕ್ಕೆ ಹೋದಾಗ, ಅಲ್ಲಿ ಅತಿದುಃಖಿತನಾದ ದಶರಥರಾಜನನ್ನು ಕಂಡನು. ದಶರಥನ ಮುಖವು ಕಳೆಹೀನವಾಗಿತ್ತು. ಶ್ರೀರಾಮನು ಮಾತಾಪಿತರನ್ನು ವಂದಿಸಿದನು. ದಶರಥನ ಅಂಥ ಅವಸ್ಥೆಯನ್ನು ಕಂಡು ಶ್ರೀರಾಮನೂ ಖಿನ್ನನಾದನು. ರಾಜನ ದುಃಖದ ಕಾರಣವನ್ನು ಕೈಕೇಯಿಗೆ ಕೇಳಿದಾಗ ಅವಳು ಈ ರೀತಿ ನುಡಿದಳು : "ರಾಜನು ಕೋಪದಲ್ಲಿಲ್ಲ ; ಯಾವ ಸಂಕಟವೂ ಒದಗಿಲ್ಲ ; ರಾಜನು ನಿನಗೆ ಒಂದು ವಿಷಯವನ್ನು ಹೇಳಬಯಸುತ್ತಾನೆ. ನೀನು ಅವನಿಗೆ ಅತ್ಯಂತ ಪ್ರಿಯನಾದ್ದರಿಂದ ನಿನಗೆ ಅಪ್ರಿಯ ವಾದುದನ್ನು ಹೇಳಲು ಹಿಂಜರಿಯುತ್ತಿದ್ದಾನೆ. ಆತನು ನನಗೆ ಒಂದು ವಚನವನ್ನು ಕೊಟ್ಟಿದ್ದಾನೆ ; ಆ ವಚನದ ಪೂರ್ತಿಯು ನಿನ್ನಿಂದಾಗಬೇಕಾಗಿದೆ.

ಏಷ ಮಹ್ಯಂ ವರಂ ದತ್ವಾ ಪುರಾ ಮಾಮಭಿಪೂಜ್ಯ ಚ ।
ಸ ಪಶ್ಚಾತ್ತಪ್ಯತೇ ರಾಜಾ ಯಥಾನ್ಯಃ ಪ್ರಾಕೃತಸ್ತಥಾ ॥ ೨೨ ॥
ಅತಿಸೃಜ್ಯ ದದಾನೀತಿ ವರಂ ಮಮ ವಿಶಾಂಪತಿಃ ॥ ೨೩ ॥

"ರಾಜನು ನನಗೆ ಮೊದಲು ವರಗಳನ್ನು ನೀಡಿ ನನ್ನನ್ನು ಗೌರವಿಸಿದ್ದಾನೆ. ಈಗ ಈ ರಾಜನು ಸಾಮಾನ್ಯ ರಂತೆ ಪಶ್ಚಾತ್ತಾಪಪಡುವದೆಂದರೆ ನೀರೆಲ್ಲ ಹರಿದುಹೋದನಂತರ ಒಡ್ಡುವನ್ನು ಹಾಕಿದಂತೆ ನಿರರ್ಥಕ." ರಾಜನ ಅನುಮತಿಯಂತೆ ತಾನು ಹೇಳುತ್ತಿರುವದನ್ನು ಪೂರೈಸಲು ಶ್ರೀರಾಮನಿಂದ ಪ್ರತಿಜ್ಞೆಯನ್ನು ಮಾಡಿಸಿ, ಆ ನಂತರ ಕೈಕೇಯಿಯು ಆತನಿಗೆ ಈ ರೀತಿ ಎಂದಳು :

ಪುರಾ ದೇವಾಸುರೇ ಯುದ್ಧೇ ಪಿತ್ರಾ ತೇ ಮಮ ರಾಘವ ।
ರಕ್ಷಿತೇನ ವರೌ ದತ್ತೌ ಸಶಲ್ಯೇನ ಮಹಾರಣೇ ॥ ೩೨ ॥

"ಪೂರ್ವದಲ್ಲಿ ಸುರಾಸುರರ ಯುದ್ಧದಲ್ಲಿ ಈತನಿಗೆ ಶಸ್ತ್ರದಿಂದ ಗಾಯವಾದಾಗ ಅದನ್ನು ತೆಗೆದು ಅವನನ್ನು ರಕ್ಷಿಸಿದ್ದೇನೆ. ಆಗ ಆ ಮಹಾಯುದ್ಧದಲ್ಲಿ ನಿನ್ನ ತಂದೆಯು ನನಗೆ ಎರಡು ವರಗಳನ್ನು ಕೊಡ ಬಯಸಿದನು.

ತತ್ರ ಮೇ ಯಾಚಿತೋ ರಾಜಾ ಭರತಸ್ಯಾಭಿಷೇಚನಮ್ ।
ಗಮನಂ ದಂಡಕಾರಣ್ಯೇ ತವ ಚಾದ್ಯೈವ ರಾಘವ ॥ ೩೩ ॥

"ಭರತನಿಗೆ ಇಂದು ರಾಜ್ಯಾಭಿಷೇಕ ನಡೆಯಬೇಕು ಮತ್ತು ನೀನು ಈ ದಿನವೇ ದಂಡಕಾರಣ್ಯಕ್ಕೆ ಹೊರಟುಹೋಗಬೇಕು ; ಎಂಬ ಎರಡು ವರಗಳನ್ನು ಕೊಡಲು ರಾಜನನ್ನು ಪ್ರಾರ್ಥಿಸಿದ್ದೇನೆ. ಆ ಕಾರಣ ನಿನ್ನ ತಂದೆಯ ಹಾಗೂ ಸ್ವತಃ ನಿನ್ನ ಪ್ರತಿಜ್ಞೆಯನ್ನು ಸತ್ಯಗೊಳಿಸಲು ನೀನು ತತ್ಪರನಾಗು !

ತ್ವಯಾರಣ್ಯಂ ಪ್ರವೇಷ್ಟವ್ಯಂ ನವವರ್ಷಾಣಿ ಪಂಚ ಚ ॥ ೩೫ ॥
ಭರತಶ್ಚಾಭಿಷಿಚ್ಯೇತ ಯದೇತದಭಿಷೇಚನಮ್ ।
ತ್ವದರ್ಥೇ ವಿಹಿತಂ ರಾಜ್ಞಾ ತೇನ ಸರ್ವೇಣ ರಾಘವ ॥ ೩೬ ॥
ಸಪ್ತ ಸಪ್ತ ಚ ವರ್ಷಾಣಿ ದಂಡಕಾರಣ್ಯಮಾಶ್ರಿತಃ ।
ಅಭಿಷೇಕಮಿದಂ ತ್ಯಕ್ತ್ವಾ ಜಟಾಚೀರಧರೋ ಭವ ॥ ೩೭ ॥

"ಈ ನಿನ್ನ ತಂದೆಯು ನನಗೆ ಕೊಟ್ಟ ವರಗಳನುಸಾರ 'ನೀನು ಹದಿನಾಲ್ಕು ವರ್ಷ ಕಾಡಿಗೆ ಹೋಗಬೇಕು ; ಮತ್ತು ನಿನ್ನ ಸಲುವಾಗಿ ಅಭಿಷೇಕಕ್ಕೆಂದು ಸಂಗ್ರಹಿಸಿದ ಎಲ್ಲ ಸಾಮಗ್ರಿಯಿಂದ ಭರತನಿಗೆ ಅಭಿಷೇಕ ನಡೆಯಬೇಕು ! ಈ ರಾಜ್ಯಾಭಿಷೇಕವನ್ನು ತ್ಯಜಿಸು ; ಜಟಾವಲ್ಕಲಗಳನ್ನು ಧರಿಸಿ ನೀನು ಹದಿನಾಲ್ಕು ವರ್ಷಗಳ ಕಾಲ ದಂಡಕಾರಣ್ಯದ ಆಶ್ರಯದಲ್ಲಿರಬೇಕು."

ಏತತ್ಕುರು ನರೇಂದ್ರಸ್ಯ ವಚನಂ ರಘುನಂದನ ॥ ೪೦ ॥

ಇಲ್ಲಿ ಕೈಕೇಯಿಯು 'ವರ' ಎಂಬುದರ ಬದಲು 'ವಚನ' ಶಬ್ದವನ್ನು ಬಳಸಿದ್ದಾಳೆ.
ಇದು ಅಯಾಚಿತ ವರವಾಗಿದೆ.

ಅಯೋಧ್ಯಾಕಾಂಡ / ೩೪

ಯಸ್ತು ಯುದ್ಧೇ ವರೋ ದತ್ತಃ ಕೈಕೇಯ್ಯೇ ವರದ ತ್ವಯಾ || ೪೨ ||
ದೀಯತಾಂ ನಿಖಿಲೇನೈವ ಸತ್ಯಸ್ತ್ವಂ ಭವ ಪಾರ್ಥಿವ | ೪೩

"ಎಲೈ ವರದಾಯಕ ರಾಜನೇ ! ನೀನು ದೇವದಾನವರ ಯುದ್ಧದಲ್ಲಿ ಕೈಕೇಯಿಗೆ ವರವನ್ನೀಯುವ ಪ್ರತಿಜ್ಞೆಯನ್ನು ಮಾಡಿದ್ದೆ ; ಅದನ್ನು ಈಡೇರಿಸಿ ನಿನ್ನ ಸತ್ಯಪ್ರತಿಜ್ಞೆಯತ್ವವನ್ನು ಕಾಪಾಡಿಕೊ !"

ಅರಣ್ಯಕಾಂಡ / ೨

ವಿರಾಧನು ಸೀತೆಯನ್ನೆತ್ತಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡುದನ್ನು ಕಂಡು ಶ್ರೀರಾಮನಿಗೆ ಅತೀವ ದುಃಖವಾಯಿತು. ತನಗಾದ ವ್ಯಥೆಯನ್ನು ಲಕ್ಷ್ಮಣನ ಎದುರು ಹೀಗೆ ವ್ಯಕ್ತಪಡಿಸಿದನು :

ಯದಭಿಪ್ರೇತಮಸ್ಮಾಸು ಪ್ರಿಯಂ ವರವೃತಂ ಚ ಯತ್ || ೧೮ ||
ಕೈಕೇಯ್ಯಾಸ್ತು ಸುಸಂವೃತ್ತಂ ಕ್ಷಿಪ್ರಮದ್ಯೈವ ಲಕ್ಷ್ಮಣ |
ಯಾ ನ ತುಷ್ಯತಿ ರಾಜ್ಯೇನ ಪುತ್ರಾರ್ಥೇ ದೀರ್ಘದರ್ಶಿನೀ || ೧೯ ||
ಯಯಾಹಂ ಸರ್ವಭೂತಾನಾಂ ಪ್ರಿಯಃ ಪ್ರಸ್ಥಾಪಿತೋ ವನಮ್ |
ಅದ್ಯೇದಾನೀಂ ಸಕಾಮಾ ಸಾ ಯಾ ಮಾತಾ ಮಧ್ಯಮಾ ಮಮ || ೨೦ ||

"ಲಕ್ಷ್ಮಣನೇ, ಕೈಕೇಯಿಯಾದರೋ ವನದಲ್ಲಿ ನಾವು ಕಷ್ಟಪಡಬೇಕೆಂದು ಬಯಸಿದಳು. ಅದೇ ರೀತಿ ವರಗಳನ್ನು ಪಡೆದು ತನಗೆ ಹಿತವಾದುದನ್ನು ಅಪೇಕ್ಷಿಸಿದಳು ; ಇಂದು ಅವಳು ಅದೆಲ್ಲವನ್ನೂ ಪಡೆದಂತೆ ಆಯಿತು. ಅವಳು ಅತಿದೂರದರ್ಶಿಯಾಗಿದ್ದರಿಂದ ತನ್ನ ಮಗನಿಗೆ ರಾಜ್ಯ ದೊರೆತದ್ದು ಸಾಲದೇ, ಅದು ಆತನಿಗೆ ಚಿರವಾಗಿ ದಕ್ಕಲೆಂದು ನಮ್ಮ ನಾಶವನ್ನು ಬಯಸುತ್ತಿದ್ದಾಳೆ."

ಅರಣ್ಯಕಾಂಡ / ೪೭

ಬ್ರಾಹ್ಮಣನ ವೇಷದಲ್ಲಿ ಬಂದವನು ರಾವಣನಿರುವನೆಂದು ಸೀತೆಯು ಗುರುತಿಸಲಿಲ್ಲ. ಅತಿಥಿಯು ಕೇಳಿದ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸದಿದ್ದರೆ ಆತನು ಶಪಿಸಬಹುದೆಂಬ ಭೀತಿಯಿಂದ ಸೀತೆಯು ರಾವಣನಿಗೆ ತನ್ನ ಎಲ್ಲ ವೃತ್ತಾಂತವನ್ನು ಹೇಳಿದಳು. ಈ ಸಂದರ್ಭದಲ್ಲಿ ಈ ವರದ ಉಲ್ಲೇಖವು ಬಂದಿದೆ.

ಕೈಕೇಯೀ ನಾಮ ಭರ್ತಾರಂ ಮಮಾರ್ಯಾ ಯಾಚತೇ ವರಮ್ || ೬ ||

ಕೈಕೇಯಿಯು ತನ್ನ ಪತಿಯ ಬಳಿಯಲ್ಲಿ ವರವನ್ನು ಬೇಡಿಕೊಂಡಳು.

ಪರಿಗೃಹ್ಯ ತು ಕೈಕೇಯೀ ಶ್ವಶುರಂ ಸುಕೃತೇನ ಮೇ |
ಮಮ ಪ್ರವ್ರಾಜನಂ ಭರ್ತುರ್ಭರತಸ್ಯಾಭಿಷೇಚನಮ್ || ೭ ||
ದ್ವಾವಯಾಚತ ಭರ್ತಾರಂ ಸತ್ಯಸಂಧಂ ನೃಪೋತ್ತಮಮ್ || ೮ ||

"ಅವಳು ನನ್ನ ಮಾವನಿಗೆ ಧರ್ಮದ ಮೇಲೆ ಶಪಥವನ್ನಿಟ್ಟಳು ; ಅನಂತರ ಕೈಕೇಯಿಯು ನನ್ನ ಪತಿಗೆ ವನವಾಸ ಮತ್ತು ಭರತನಿಗೆ ಅಭಿಷೇಕ ಎಂಬ ಎರಡು ವರಗಳನ್ನು ಸತ್ಯವಚನಿಯಾದ, ನೃಪಶ್ರೇಷ್ಠನಾದ ತನ್ನ ಗಂಡನಿಂದ (ದಶರಥನಿಂದ) ಬೇಡಿಕೊಂಡಳು.

"ಕೊಟ್ಟ ವಚನವನ್ನು ಈಡೇರಿಸದಿದ್ದಲ್ಲಿ ಅಸುನೀಗುವೆನೆಂದು ಭಯವನ್ನು ತೋರಿಸಿದಳು."

ಕಿಷ್ಕಿಂಧಾಕಾಂಡ / ೫೬

ವಿಂಧ್ಯಪರ್ವತದಲ್ಲಿಯ ಗುಹೆಯಿಂದ ಹೊರಬಂದ ವಾನರರನ್ನು ಕಂಡು ಗೃಧ್ರರಾಜನಾದ ಸಂಪಾತಿಗೆ ಆನಂದವಾಯಿತು. ಪ್ರಾಯೋಪವೇಶನ ಮಾಡಲಿರುವ ಒಂದೊಂದು ಕಪಿಯು ಮೃತವಾದಂತೆ ಅದನ್ನು ತಾನು ಭಕ್ಷಿಸಬಹುದಾದ ಸಂಧಿಯನ್ನು ಕಂಡು ಆತನಿಗೆ ಸಂತೋಷವಾಗಿತ್ತು. ಈ ಸಂಪಾತಿಯನ್ನು ನೋಡಿದ ನಂತರ ಅಂಗದನು ಹನುಮಂತನಿಗೆ ಇಂತೆಂದನು—"ಈ ಗೃಧ್ರರಾಜನು ವಾನರರ ನಾಶಕ್ಕಾಗಿಯೇ ಇಲ್ಲಿ

ಬಂದಂತಿದೆ. ಜಟಾಯುವಿನ ಮರಣ, ದಶರಥನ ಮರಣ, ಮತ್ತು ಸೀತೆಯ ಅಪಹರಣ—ಇವುಗಳಿಂದ ವಾನರರು ಸಂಕಟದಲ್ಲಿ ಸಿಲುಕಿದ್ದಾರೆ."

ಸೀತೆಯ ಸಹಿತವಾಗಿ ಶ್ರೀರಾಮಲಕ್ಷ್ಮಣರ ಅರಣ್ಯದಲ್ಲಿಯ ವಾಸ್ತವ್ಯ, ಶ್ರೀರಾಮನ ಬಾಣದಿಂದ ವಾಲಿಯ ವಧೆ, ಮತ್ತು ಶ್ರೀರಾಮನ ಕೋಪದಿಂದ ಎಲ್ಲ ರಾಕ್ಷಸರ ವಧೆ ಇತ್ಯಾದಿ—

ಕೈಕೇಯ್ಯಾ ವರದಾನೇನ ಇದಂ ಚ ವಿಕೃತಂ ಕೃತಮ್ ॥ ೧೬ ॥

ಎಲ್ಲ ಅನರ್ಥಗಳು ನಡೆಯಲು ಕಾರಣವೆಂದರೆ ದಶರಥರಾಜನು ಕೈಕೇಯಿಗೆ ಕೊಟ್ಟ ವರ.

ಸುಂದರಕಾಂಡ / ೩೩

ಸೀತೆಯ ಭೇಟಿಗೆಂದು ಅಶೋಕವನಕ್ಕೆ ಬಂದ ಹನುಮಂತನ ಬಗ್ಗೆ ಅವಳಲ್ಲಿ ಸಂದೇಹವುಂಟಾಯಿತು. ಆಗ ಆತನು ತಾನು ರಾಮದೂತನೆಂದು ಅವಳಿಗೆ ಮನವರಿಕೆ ಮಾಡಿಕೊಟ್ಟನು. ಹನುಮಂತನು ವಿಚಾರಿಸಿದ ಕಾರಣ ಸೀತೆಯು ತನ್ನ ವೃತ್ತಾಂತವನ್ನು ಹೇಳುತ್ತಿದ್ದಾಳೆ: "ನಾನು ದಶರಥಪುತ್ರನಾದ ಶ್ರೀರಾಮನ ಪತ್ನಿಯಾಗಿದ್ದೇನೆ. ಶ್ರೀರಾಮನಿಗೆ ಯುವರಾಜ್ಯಾಭಿಷೇಕದ ಸಿದ್ಧತೆ ನಡೆದಾಗ ಕೈಕೇಯಿಯು ದಶರಥನಿಗೆ ಈ ರೀತಿ ಎಂದಳು : 'ಶ್ರೀರಾಮನಿಗೆ ರಾಜ್ಯಾಭಿಷೇಕವಾಗುವದಿದ್ದರೆ ನನಗೆ ಊಟವೂ ಬೇಡ ; ಪಾನೀಯವೂ ಬೇಡ !'

ಯತ್ತದುಕ್ತಂ ತ್ವಯಾ ವಾಕ್ಯಂ ಪ್ರೀತ್ಯಾ ನೃಪತಿಸತ್ತಮ ।
ತಚ್ಚೇನ್ನ ವಿತಥಂ ಕಾರ್ಯಂ ವನಂ ಗಚ್ಛತು ರಾಘವಃ ॥ ೨೦ ॥
ಸ ರಾಜಾ ಸತ್ಯವಾಗ್ದೇವ್ಯಾ ವರದಾನಮನುಸ್ಮರನ್ ।
ಮುಮೋಹ ವಚನಂ ಶ್ರುತ್ವಾ ಕೈಕೇಯ್ಯಾಃ ಕ್ರೂರಮಪ್ರಿಯಮ್ ॥ ೨೧ ॥

"ಆಗ ನೀನು ವರದಾನರೂಪದ ಪ್ರಿಯಭಾಷಣವನ್ನು ನನ್ನ ಬಳಿ ಮಾಡಿರುವೆ ; ಆ ಪ್ರಿಯವಚನವು ವ್ಯರ್ಥವಾಗಬಾರದೆಂದಿದ್ದರೆ, ಶ್ರೀರಾಮನು ವನಕ್ಕೆ ಹೋಗಲಿ !" ಕೈಕೇಯಿಯ ಈ ಕಠೋರ ಹಾಗೂ ಅಪ್ರಿಯವಾದ ಭಾಷಣವನ್ನು ಕೇಳಿ, ದಶರಥನಿಗೆ ತಾನು ಆಕೆಗೆ ಕೊಟ್ಟ ವರಗಳ ಸ್ಮರಣೆಯಾಯಿತು. ಆ ಸತ್ಯವಚನವನ್ನು ಕೇಳಿ ರಾಜನು ಮೂರ್ಛೆಹೋದನು. ಸೀತೆಯು ಇದನ್ನು ಹನುಮಂತನಿಗೆ ಹೇಳಿದಳು.

ಉತ್ತರಕಾಂಡ / ೨

ವರಪ್ರದಾನಂ ಚ ತಥಾ ತಸ್ಮೈ ದತ್ತಂ ಬ್ರವೀಮಿ ತೇ ॥ ೩ ॥

ಇಲ್ಲಿ ಅಗಸ್ತ್ಯನು ಶ್ರೀರಾಮನಿಗೆ ಪುಲಸ್ತ್ಯವಂಶದ ಹಿರಿಮೆಯನ್ನು ಬಣ್ಣಿಸುತ್ತ ರಾವಣನು ಪಡೆದುಕೊಂಡ ವರದ ಉಲ್ಲೇಖವನ್ನು ಮಾಡಿದ್ದಾನೆ.

## ಪ್ರತಿಕ್ರಿಯೆಗಳು

**ಶ್ರೀರಾಮ** ಅಯೋಧ್ಯಾಕಾಂಡ / ೨೬

ವನವಾಸಕ್ಕೆ ಹೋಗಲು ಸಿದ್ಧನಾದ ಶ್ರೀರಾಮನು ಕೌಸಲ್ಯೆಯನ್ನು ವಂದಿಸಿ ಸೀತೆಯ ಬಳಿ ಬಂದನು. ಯುವರಾಜ್ಯಾಭಿಷೇಕದ ಸಮಯವು ಸಮೀಪಿಸಿದ್ದರೂ ಮುಖದ ಮೇಲೆ ಹಾಸ್ಯದ ಛಾಯೆಯಿರದ ಅಧೋಮುಖನಾದ ಶ್ರೀರಾಮನನ್ನು ಕಂಡು ಸೀತೆಯು ವಿಸ್ಮಯಗೊಂಡಳು. ಆಗ ಶ್ರೀರಾಮನು ಸೀತೆಗೆ ಹೀಗೆಂದನು : "ಎಲೈ ಧರ್ಮಚಾರಿಣಿಯಾದ ಜಾನಕಿಯೇ, ನನ್ನ ಪಿತನು ಯಾವ ಕಾರಣದಿಂದ ನನ್ನನ್ನು ವನವಾಸಕ್ಕೆ ಕಳುಹುತ್ತಿದ್ದಾನೆಂಬುದನ್ನು ಕೇಳು !

ರಾಜ್ಞಾ ಸತ್ಯಪ್ರತಿಜ್ಞೇನ ಪಿತ್ರಾ ದಶರಥೇನ ವೈ ।
ಕೈಕೇಯ್ಯೈ ಮಮ ಮಾತ್ರೇ ತು ಪುರಾ ದತ್ತೌ ಮಹಾವರೌ ॥ ೨೦ ॥

ತಯಾದ್ಯ ಮಮ ಸಜ್ಜೇऽಸ್ಮಿನ್ನಭಿಷೇಕೇ ನೃಪೋದ್ಯತೇ ।
ಪ್ರಚೋದಿತಃ ಸ ಸಮಯೋ ಧರ್ಮೇಣ ಪ್ರತಿನಿರ್ಜಿತ. ॥ ೨೫ ॥
ಚತುರ್ದಶ ಹಿ ವರ್ಷಾಣಿ ವಸ್ತವ್ಯಂ ದಂಡಕೇ ಮಯಾ ।
ಪಿತ್ರಾ ಮೇ ಭರತಶ್ಚಾಪಿ ಯೌವರಾಜ್ಯೇ ನಿಯೋಜಿತಃ ॥ ೨೬ ॥

"ಸತ್ಯಪ್ರತಿಜ್ಞನಾದ ನಮ್ಮ ತಂದೆ ದಶರಥನು ನನ್ನ ತಾಯಿಯಾದ ಕೈಕೇಯಿಗೆ ಈ ಮೊದಲು ಎರಡು ವರಗಳನ್ನು ಕೊಟ್ಟಿದ್ದನು. ರಾಜನ ಉಪಕ್ರಮದಂತೆ ಇಂದು ನನಗೆ ಅಭಿಷೇಕವಾಗುವದನ್ನು ನಿಶ್ಚಯಿಸಿದ ನಂತರ ಕೈಕೇಯಿಯು ಮೊದಲಿನ ಸಂಕೇತವನ್ನು ಮುಂದಿಟ್ಟು ಧರ್ಮಬಂಧನದ ಮೂಲಕ ರಾಜನನ್ನು ವಶಮಾಡಿಕೊಂಡಳು ; ಆದ್ದರಿಂದ ನಾನು ಹದಿನಾಲ್ಕು ವರ್ಷ ದಂಡಕಾರಣ್ಯದಲ್ಲಿ ವಾಸವಿರಬೇಕು ; ಮತ್ತು ಭರತನಿಗೆ ಯುವರಾಜ್ಯಾಭಿಷೇಕವನ್ನು ಮಾಡಬೇಕು !—ಎಂದು ನಿಶ್ಚಯಿಸಿಯಾಗಿದೆ.

"ಪಿತನ ಆಜ್ಞೆಯನ್ನು ಸತ್ಯಗೊಳಿಸಲು ನಾನು ಇಂದು ಅರಣ್ಯಕ್ಕೆ ಹೋಗುತ್ತಿದ್ದೇನೆ, ಈ ಸಮಾಚಾರವನ್ನು ನಿನಗೆ ತಿಳಿಸಲೋಸುಗ ನಾನು ಬಂದಿದ್ದೇನೆ." ತಾನು ಇಲ್ಲಿ ಇಲ್ಲದಿರುವಾಗ ಅವಳು ಹೇಗೆ ವರ್ತನೆಯನ್ನಿಟ್ಟು ಕೊಳ್ಳಬೇಕೆಂದು ಶ್ರೀರಾಮನು ಅವಳಿಗೆ ಉಪದೇಶಿಸಿದ್ದಾನೆ.

ಅಯೋಧ್ಯಾಕಾಂಡ / ೩೪

ವನವಾಸಕ್ಕೆ ನಡೆದ ಶ್ರೀರಾಮನು ದಶರಥನಿಗೆ 'ಹೋಗಿಬರುವೆ'ನೆಂದು ಹೇಳಲು ಬಂದಾಗ ದಶರಥನು ಈ ರೀತಿ ಅಂದನು—

ಅಹಂ ರಾಘವ ಕೈಕೇಯ್ಯಾ ವರದಾನೇನ ಮೋಹಿತಃ ।
ಅಯೋಧ್ಯಾಯಾಂ ತ್ವಮೇವಾದ್ಯ ಭವ ರಾಜಾ ನಿಗೃಹ್ಯ ಮಾಮ್ ॥ ೨೬ ॥

"ಹೇ ರಾಘವನೇ, ಕೈಕೇಯಿಯು ಈ ವರದಾನದಿಂದ ನನ್ನನ್ನು ಮೋಹಿತಗೊಳಿಸಿದ್ದಾಳೆ ; ಆದ್ದರಿಂದ ನೀನು ನನ್ನನ್ನು ಬಂಧಿಸಿಟ್ಟು ಅಯೋಧ್ಯೆಯ ರಾಜನಾಗು !" ಆಗ ಶ್ರೀರಾಮನು ದಶರಥನಿಗೆ ನುಡಿದದ್ದೇನೆಂದರೆ —"ನನಗೆ ರಾಜ್ಯದಾಸೆ ಇಲ್ಲ. ತಾವು ಸಾವಿರಾರು ವರ್ಷಗಳವರೆಗೆ ಪೃಥ್ವೀಪತಿಯಾಗಿರಬೇಕು. ನಾನು ಅರಣ್ಯದಲ್ಲಿ ವಾಸಿಸುವೆ. ವನವಾಸದಲ್ಲಿ ಹದಿನಾಲ್ಕು ವರ್ಷಗಳನ್ನು ಕಳೆದು ಪ್ರತಿಜ್ಞೆಯ ಪೂರ್ತಿಯಾದನಂತರ ನಾನು ತಮ್ಮ ಚರಣಸೇವೆಗಾಗಿ ಬರುವೆನು."

ಆ ದಿನವೇ ಶ್ರೀರಾಮನು ವನಕ್ಕೆ ತೆರಳಬೇಕೆಂದು ಕೈಕೇಯಿಯ ಬಲವಂತವಿತ್ತು ; ಇತ್ತ ದಶರಥನು ದುಃಖಾರ್ತನಾಗಿದ್ದನು. ಶ್ರೀರಾಮನು ವನವಾಸಕ್ಕೆ ತೆರಳುವದು ದಶರಥನಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ. "ನನ್ನ ನಿಶ್ಚಯ ದೃಢವಾದದ್ದು" ಎಂದು ನುಡಿದು ಶೋಕವನ್ನು ತಡೆದುಕೊಳ್ಳಲು ವಿನಂತಿಸುತ್ತ ಈ ರೀತಿ ಎಂದನು :

ಯಸ್ತು ಯುದ್ಧೇ ವರೋ ದತ್ತಃ ಕೈಕೇಯ್ಯ ವರದ ತ್ವಯಾ ॥ ೪೨ ॥
ದೀಯತಾಂ ನಿಖಿಲೇನೈವ ಸತ್ಯಸ್ತ್ವಂ ಭವ ಪಾರ್ಥಿವ ।
ಅಹಂ ನಿದೇಶಂ ಭವತೋ ಯಥೋಕ್ತಮನುಪಾಲಯನ್ ॥ ೪೩ ॥
ಚತುರ್ದಶ ಸಮಾವತ್ಸ್ಯೇ ವನೇ ವನಚರೈಃ ಸಹ ।
ಮಾ ವಿಮರ್ಶೋ ವಸುಮತೀ ಭರತಾಯ ಪ್ರದೀಯತಾಮ್ । ೪೪ ॥
ನ ಹಿ ಮೇ ಕಾಂಕ್ಷಿತಂ ರಾಜ್ಯಂ ಸುಖಮಾತ್ಮನಿ ವಾ ಪ್ರಿಯಮ್ ।
ಯಥಾ ನಿದೇಶಂ ಕರ್ತುಂ ವೈ ತವೈವ ರಘುನಂದನ ॥ ೪೫ ॥

"ಹೇ ವರಪ್ರದರೇ, ಕೈಕೇಯಿಗೆ ಯುದ್ಧಸಮಯದಲ್ಲಿ ಕೊಡಬಯಸಿದ ವರವನ್ನು ಪೂರ್ಣವಾಗಿ ಕೊಡಿ. ಹೇ ಭೂಪತಿ, ನಿಮ್ಮ ನುಡಿಯು ಸತ್ಯವೆಂದಾಗಲಿ. ನೀವು ಸತ್ಯವಂತರಾಗಬೇಕು. ನಿಮ್ಮ ಹೇಳಿಕೆಯನುಸಾರ ನಿಮ್ಮ ಆಜ್ಞೆಯನ್ನು ಪಾಲಿಸಿ, ವನಚರರೊಂದಿಗೆ ಹದಿನಾಲ್ಕು ವರ್ಷ ಅರಣ್ಯದಲ್ಲಿ ವಾಸಿಸುವೆನು. ಇನ್ನು ನೀವು ಯಾವ ಯೋಚನೆಯನ್ನೂ ಮಾಡಬೇಡಿ ! ಭರತನಿಗೆ ಈ ಪೃಥ್ವಿಯ ರಾಜ್ಯವನ್ನು ಕೊಟ್ಟುಬಿಡಿರಿ ! ವೈಯಕ್ತಿಕ ಸುಖಕ್ಕಾಗಿ ಅಥವಾ ಸ್ವಜನರನ್ನು ಸಂತೋಷಪಡಿಸಲು ನನಗೆ ರಾಜ್ಯವು ಬೇಕಿರಲಿಲ್ಲ. ಕೇವಲ ನಿಮ್ಮ ಆಜ್ಞೆಯನ್ನು ಪಾಲಿಸುವ ಉದ್ದೇಶದಿಂದ ರಾಜ್ಯವನ್ನು ಸ್ವೀಕರಿಸಲಿದ್ದೆ. ಹೇ ರಘುನಂದನ, ನಿಮ್ಮ ಆಜ್ಞೆಯನ್ನು ಪಾಲಿಸುವದು ನನಗೆ ಪ್ರಿಯವಾದುದು. ಐಹಿಕ ಸುಖದ ಆಸಕ್ತಿ ನನಗಿಲ್ಲ. ರಾಜ್ಯದ ಆಸೆಯೂ ನನಗಿಲ್ಲ."

**ದಶರಥ** ಅಯೋಧ್ಯಾಕಾಂಡ / ೩೬

ಶ್ರೀರಾಮನು ವನವಾಸಕ್ಕೆ ಹೋಗಬೇಕಾದ ಸಂಗತಿಯು ದಶರಥನಿಗೆ ಅಸಹನೀಯವಾಗಿತ್ತು. ಕೈಕೇಯಿಯು ಆತನನ್ನು ವಚನಬಂಧನದಲ್ಲಿ ತೊಡಕಿಸಿದ್ದರಿಂದ ಅತ್ಯಂತ ಕ್ಲೇಶಕರವಾದ ವರವನ್ನು ಕೊಡಬೇಕಾಯಿತು. ಕೈಕೇಯಿಯ ಮೇಲೆ ಸಾಕಷ್ಟು ಕೋಪಬಂದಿದ್ದರೂ ವರವನ್ನು ಕೊಟ್ಟ ಕಾರಣ ಅವನು ಅಗತಿಕನಾಗಿದ್ದನು. ಭರತನು ಸತ್ವವನ್ನು ತೆಗೆದುಹಾಕಿದ ನಂತರ ಅರುಚಿಯಾಗುವ ಮದ್ಯದಂತಿದ್ದ, ಧನರಹಿತ ಶೂನ್ಯರಾಜ್ಯವನ್ನು ಸ್ವೀಕರಿಸಲಾರನೆಂದು ಕೈಕೇಯಿಯು ಶ್ರೀರಾಮನನ್ನು ಉದ್ದೇಶಿಸಿ ಆಡಿದ ದುಷ್ಟನುಡಿಗಳು, ದಶರಥನ ಹೃದಯವನ್ನು ಶಲ್ಯನಾಗೊಳಿಸಿದವು. ಆಗ ಕ್ರೋಧಗೊಂಡ ದಶರಥನು ಕೈಕೇಯಿಗೆ ಹೀಗೆಂದನು—

ವಹಂತಂ ಕಿಂ ತುದಸಿ ಮಾಂ ನಿಯುಜ್ಯ ಧುರಿ ಮಾಹಿತೇ ।
ಅನಾರ್ಯೇ ಕೃತ್ಯಮಾರಬ್ಧಂ ಕಿಂ ನ ಪೂರ್ವಮುಪಾರುಧಃ ॥ ೧೪ ॥

"ಎಲೈ ಅಹಿತಕಾರಕ ಸ್ತ್ರೀಯೆ, ನನ್ನ ಕತ್ತಿನ ಮೇಲೆ ನೊಗವನ್ನಿಟ್ಟಿರುವೆ ; ಇನ್ನೂ ಏಕೆ ನನ್ನನ್ನು ಪೀಡಿಸುತ್ತಿರುವೆ ? ಹೇ ದುಷ್ಟಳೇ, ನೀನು ಈಗ ನಡೆಯಿಸಿರುವ ಕಾಯಕದ ಬಗ್ಗೆ ಮೊದಲೇ ಏಕೆ ನನಗೆ ಹೇಳಲಿಲ್ಲ ?"

ಸಂಸ್ಕೃತ ಶ್ಲೋಕದಲ್ಲಿ 'ವರ' ಈ ಶಬ್ದವು ಸ್ಪಷ್ಟವಾಗಿಲ್ಲ ; ಆದರೆ ದಿವಂಗತ ಶ್ರೀ ಕಾಶಿನಾಥಶಾಸ್ತ್ರಿ ಲೇಲೆ ಅವರು ತಮ್ಮ ಅನುವಾದದಲ್ಲಿ ಕಂಸಚಿಹ್ನೆಯಲ್ಲಿ ಈ ಕೆಳಗೆ ಕೊಟ್ಟ ವಿವರಣೆಯಲ್ಲಿ 'ವರ' ಎಂಬ ಶಬ್ದದ ಉಲ್ಲೇಖವು ಸ್ಪಷ್ಟವಾಗಿದೆ.

["ಶ್ರೀರಾಮನು ಭೋಗವಸ್ತುಗಳನ್ನು ತೆಗೆದುಕೊಂಡು ವನವಾಸಕ್ಕೆ ಹೋಗಕೂಡದು ! ಎಂದು ನೀನು ಈಗ ಹೇಳುತ್ತಲಿರುವೆ. ನೀನು ಇದನ್ನು ವರಗಳನ್ನು ಬೇಡಿಕೊಳ್ಳುವ ಕಾಲದಲ್ಲಿಯೇ ಹೇಳಬೇಕಿತ್ತು ; ಆಗ ಬೇಡಿಕೊಂಡಿರದ ಕಾರಣ ನಾನು ನಿನಗೆ ಅದನ್ನು ಕೊಟ್ಟಿಲ್ಲ. ಹೀಗಿರುವುದರಿಂದ ಶ್ರೀರಾಮನು ಭೋಗವಸ್ತುಗಳನ್ನು ಜೊತೆಗೆ ಕೊಂಡೊಯ್ಯಬಾರದೆಂದು ಹೇಳುವ ಅಧಿಕಾರವು ನಿನಗೆ ಈಗ ಇಲ್ಲ."]

ಅಯೋಧ್ಯಾಕಾಂಡ / ೫೯

ಶ್ರೀರಾಮನು ವನಕ್ಕೆ ಹೋದ ವೃತ್ತಾಂತವನ್ನು ಸುಮಂತ್ರನಿಂದ ಕೇಳಿಕೊಂಡನಂತರ ದಶರಥನರಾಜನು ಅತ್ಯಂತ ಶೋಕಾಕುಲನಾದನು. ಶೋಕಮಗ್ನನಾಗಿ ಕೌಸಲ್ಯೆಗೆ ಹೀಗೆ ನುಡಿದನು : "ಈ ನನ್ನ ದುಃಖವು ಕಡಲಿನಷ್ಟಿದೆ. ಇದರಲ್ಲಿ ಶ್ರೀರಾಮನ ಅಗಲುವಿಕೆಯು ಒಂದು ಪ್ರಚಂಡಶೋಕಾವೇಗವಾಗಿದೆ. ಸೀತೆಯ ದೂರವಿರುವಿಕೆಯು ಇದರ ದೂರದ ದಡದಂತಿದೆ. ದುಃಖದ ನಿಟ್ಟುಸುರಿನ ಅಲೆಗಳೇ ರಭಸದಿಂದ ಸುತ್ತುತ್ತಿರುವ ತಿರುಗಣಿಮಡುಗಳಾಗಿವೆ. ಧಾರಾಕಾರ ಕಂಬನಿಯ ಪ್ರವಾಹದಿಂದ ಈ ಸಾಗರವು ಕಲುಷಿತವಾಗಿದೆ. ದುಃಖಾತಿರೇಕದಿಂದ ನಡೆಯುವ ಹಸ್ತಗಳ ಚಲನವಲನಗಳೇ ಇಲ್ಲಿ ಮೀನುಗಳಂತಿವೆ. ನನ್ನ ಆಕ್ರೋಶವೇ ಈ ಕಡಲಿನ ಭೋರ್ಗರೆಯುವಿಕೆ ; ಕೆದರಿದ ತಲೆಗೂದಲೇ ಇಲ್ಲಿ ಹಾವಸೆಯಾಗಿದೆ. ಈ ದಾರುಣ ದುಃಖಸಾಗರದಲ್ಲಿ ಕೈಕೇಯಿಯು ಬಡಬಾಗ್ನಿಯಂತಿದ್ದಾಳೆ.

ಮಮಾಶ್ರುವೇಗಪ್ರಭವಃ ಕುಬ್ಜಾವಾಕ್ಯಮಹಾಗ್ರಹಃ ।
ವರವೇಲೋ ನೃಶಂಸಾಯಾ ರಾಮಪ್ರವ್ರಾಜನಾಯತಃ ॥ ೩೦ ॥

"ನನ್ನ ಕಂಬನಿಯ ಉಗಮವಾದ ಈ ಸಾಗರದಲ್ಲಿ ಗೂನಿಯಾದ ಮಂಥರೆಯ ಮಾತುಗಳೇ ಭೀಕರ ಮೊಸಳೆಗಳಾಗಿವೆ. ಕೈಕೇಯಿಗೆ ಕೊಟ್ಟ ವರಗಳು ಇದರ ಮೇರೆಯಾಗಿವೆ. ಶ್ರೀರಾಮನನ್ನು ಕಾಡಿಗೆ ಕಳುಹಿಸುವ ಕಾಲಕೂಟ ವಿಷವು ಇದರಿಂದ ಹೊರಚಿಮ್ಮಿದೆ. ಈ ಪರಿಯ ಶೋಕಸಾಗರದಲ್ಲಿ ನಾನು ಮುಳುಗಿದ್ದೇನೆ."

**ಲಕ್ಷ್ಮಣ** ಅಯೋಧ್ಯಾಕಾಂಡ / ೨೩

ಶ್ರೀರಾಮನು ವನಕ್ಕೆ ಹೋಗುವೆನೆಂದು ಪ್ರತಿಜ್ಞೆಯನ್ನು ಮಾಡಿದಾಗ ಲಕ್ಷ್ಮಣನು ಅದನ್ನು ಸ್ಪಷ್ಟವಾಗಿ

ನಿಷೇಧಿಸಿದನು. ತನ್ನ ಅನಿಸಿಕೆಯನ್ನು ತಿಳಿಸಿಕೊಡಲು ಆತನು ಹಲವು ರೀತಿಗಳಲ್ಲಿ ಪ್ರಯತ್ನಿಸಿದನು. ಪಿತನ ಆಜ್ಞೆಯ ಉಲ್ಲಂಘನವಾದರೆ ಅದು ಧರ್ಮದ ವಿರುದ್ಧವಾಗುವದೆಂದು ಶ್ರೀರಾಮನು ವನಕ್ಕೆ ಹೋಗುವದೆಂದು ನಿಶ್ಚಯಿಸಿದ್ದನು. ಶ್ರೀರಾಮನ ಈ ನಿರ್ಣಯವು ಲಕ್ಷ್ಮಣನಿಗೆ ತರಾತುರಿಯ ನಿರ್ಣಯವೆಂದೆನಿಸುತ್ತದೆ. ಆ ದುಷ್ಟ ಸ್ತ್ರೀ-ಪುರುಷರ ಬಗ್ಗೆ (ಕೈಕೇಯಿ ಮತ್ತು ದಶರಥ) ಶ್ರೀರಾಮನಿಗೆ ಸಂದೇಹವೇಕೆ ಉಂಟಾಗುತ್ತಿಲ್ಲ ? ಎಂದು ನಿಚ್ಚಳವಾಗಿ ಕೇಳುತ್ತಾನೆ. ಧರ್ಮದ ಮುಸುಕು ಹಾಕಿಕೊಂಡು ಪುರುಷರು ಪಾಪಾಸಕ್ತರಿರುತ್ತಾರೆಂದು ದಶರಥನನ್ನು ಉದ್ದೇಶಿಸಿ ನುಡಿಯುತ್ತಾನೆ. ನೀನು ಅರಣ್ಯಕ್ಕೆ ಹೋಗುವದರಿಂದ, ನಿನ್ನನ್ನು ಹೊರಗಟ್ಟುವ ಕೈಕೇಯಿಯ ಮತ್ತು ದಶರಥನ ಸ್ವಾರ್ಥವು ನಿರಾಯಾಸವಾಗಿ ಕೈಗೂಡುತ್ತದೆ ಎಂಬುದನ್ನು ಶ್ರೀರಾಮನ ನಿದರ್ಶನಕ್ಕೆ ತರುತ್ತಾನೆ ಮತ್ತು ತನಗಿದ್ದ ಸಂದೇಹವನ್ನು ಈ ರೀತಿ ವ್ಯಕ್ತಪಡಿಸುತ್ತಾನೆ :

> ತಯೋಃ ಸುಚರಿತಂ ಸ್ವಾರ್ಥಂ ಶಾಠ್ಯಾತ್ ಪರಿಜಿಹೀರ್ಷತೋಃ ।
> ಯದಿ ನೈವಂ ವ್ಯವಸಿತಂ ಸ್ಯಾದ್ಧಿ ಪ್ರಾಗೇವ ರಾಘವ ।
> ತಯೋಃ ಪ್ರಾಗೇವ ದತ್ತಶ್ಚ ಸ್ಯಾದ್ವರಃ ಪ್ರಕೃತಶ್ಚ ಸಃ ॥ ೯ ॥

ಧರ್ಮದ ನೆಪದಲ್ಲಿ ಆ ಈರ್ವರು ನಿನ್ನಂಥ ಚಾರಿತ್ರ್ಯಸಂಪನ್ನ ಪುರುಷನನ್ನು ತ್ಯಜಿಸಲು ಹವಣಿಸುತ್ತಿದ್ದಾರೆ. "ಈ ರೀತಿ ನಿಶ್ಚಿತವಾಗಿರದಿದ್ದರೆ ಈಗ ಬಂದ ವರದ ಪ್ರಸ್ತಾಪವೂ ಅದರ ವಿನಿಮಯವೂ ಈ ಮೊದಲೇ ನಡೆಯಬೇಕಿತ್ತು ; ಆದರೆ ಹಾಗೆ ನಡೆದಿಲ್ಲವಾದ್ದರಿಂದ ಪೂರ್ವದಲ್ಲಿ ವರವನ್ನು ಕೊಟ್ಟಾಗಿತ್ತು ; ಈ ವರೆಗೆ ಬೇಡಿಕೊಂಡಿರಲಿಲ್ಲ — ಎಂಬುದೆಲ್ಲ ಸುಳ್ಳಿನ ಕಂತೆ" ಎಂದು ಲಕ್ಷ್ಮಣನು ಹೇಳಿದ್ದಾನೆ.

> ಯದಯಂ ಕಿಲ್ಬಿಷಾದ್ಭೇದಃ ಕೃತೋಽಪ್ಯೇವಂ ನ ಗೃಹ್ಯತೇ ।
> ಜಾಯತೇ ತತ್ರ ಮೇ ದುಃಖಂ ಧರ್ಮಸಂಗಶ್ಚ ಗರ್ಹಿತಃ ॥ ೧೩ ॥

"ನಿನಗೆ ನಡೆಯಲಿರುವ ಅಭಿಷೇಕವನ್ನು ಬುದ್ಧಿಪೂರ್ವಕವಾಗಿ, ದುಷ್ಟಹೇತುವಿನಿಂದ ತಡೆಯಲು ಈ ವರ ನಿಮಿತ್ತವಾಗಿದೆ." ಕಪಟದ ಧರ್ಮಾಸಕ್ತಿ ನಿಂದ್ಯ ಎಂಬುದು ಸ್ಪಷ್ಟವಿದ್ದರೂ ಶ್ರೀರಾಮನಿಗೆ ಯಾವುದೂ ಎನಿಸುತ್ತಿಲ್ಲವೆಂಬುದೇ ಲಕ್ಷ್ಮಣನ ದುಃಖದ ವಿಷಯವಾಗಿತ್ತು. ದಶರಥನು ಶ್ರೀರಾಮನನ್ನು ವನಕ್ಕೆ ಕಳಿಸುವದು ಲಕ್ಷ್ಮಣನಿಗೆ ಹಿಡಿಸಿರಲಿಲ್ಲ. ಅದಕ್ಕೆ ಆತನು—

> ಯದಿ ಪ್ರವ್ರಾಜಿತೋ ರಾಮೋ ಲೋಭಕಾರಣಕಾರಿತಂ ।
> ವರದಾನನಿಮಿತ್ತಂ ವಾ ಸರ್ವಥಾ ದುಷ್ಕೃತ್ಯಂ ಕೃತಮ್ ॥ ೨೮ ॥

**ಅಯೋಧ್ಯಾಕಾಂಡ / ೫೮**

ಕೈಕೇಯಿಯ ಮೋಹದಿಂದ ಅಥವಾ ಆಕೆಗೆ ಯಾವದೇ ನಿಮಿತ್ತವಾಗಿ ಕೊಟ್ಟ ವರದಿಂದಾಗಿ ದಶರಥನು ಶ್ರೀರಾಮನನ್ನು ವನವಾಸಕ್ಕೆ ಕಳುಹಿಸುವ ದುಷ್ಕೃತ್ಯವನ್ನು ಎಸಗಿದ್ದಾನೆ.

ಲಕ್ಷ್ಮಣನು ದಶರಥನ ಉಲ್ಲೇಖವನ್ನು ಏಕವಚನದಲ್ಲಿ ಮಾಡಿದ್ದಾನೆ.

## ಭರತ

**ಅಯೋಧ್ಯಾಕಾಂಡ / ೭೨**

ಭರತನು ಅಯೋಧ್ಯೆಗೆ ಮರಳಿದನಂತರ ತನ್ನ ಪಿತನನ್ನು ಕಾಣಲು ತಂದೆಯ ನಿವಾಸಸ್ಥಾನಕ್ಕೆ ಹೋದಾಗ ಅಲ್ಲಿ ತಂದೆಯ ಭೇಟಿಯಾಗದ್ದರಿಂದ ಕೈಕೇಯಿಯನ್ನು ಭೇಟಿಯಾಗಲು ಆಕೆಯ ಸದನಕ್ಕೆ ಹೋದನು. ಮನೆಯಲ್ಲಿಯ ಐಶ್ವರ್ಯವೆಲ್ಲ ನಶಿಸಿಹೋದ ಸಂಗತಿ ನಿದರ್ಶನಕ್ಕೆ ಬಂದರೂ ಅದರ ಕಾರಣ ತಿಳಿಯದೇ ಇದ್ದುದರಿಂದ ತಾಯಿಗೆ ಈ ರೀತಿ ಕೇಳಿದನು :

"ಮಹಾರಾಜರು ಸದಾಕಾಲವೂ ತಮ್ಮ ಸ್ವಂತದ ನಿವಾಸದಲ್ಲಿಯೇ ಇರುವದು ವಾಡಿಕೆ ; ಆದರೆ ಇಂದು ಅವರು ಅಲ್ಲಿ ಕಾಣಲಿಲ್ಲ. ಅವರು ಈಗ ಎಲ್ಲಿ ? ಎಂಬುದನ್ನು ನೀನು ತ್ವರೆಯಾಗಿ ಹೇಳು !" ಎಂದನು. ಆಗ ಕೈಕೇಯಿಯು ದಶರಥನ ನಿಧನದ ವಾರ್ತೆಯನ್ನು ತಿಳಿಸಿದಳು. ಈ ದುಃಖದ ವಾರ್ತೆಯನ್ನು ಕೇಳಿ

ಭರತನಿಗೆ ಅತಿಶಯ ಸಂತಾಪವಾಯಿತು. ಕಂಬನಿ ತಡೆಯಲಾಗಲಿಲ್ಲ ; ಆದರೂ ಆತನು ತನ್ನನ್ನು ತಾನೇ ಸಂತೈಸಿಕೊಂಡು "ಧರ್ಮಜ್ಞರ ದೃಷ್ಟಿಯಲ್ಲಿ ಹಿರಿಯ ಸಹೋದರನು ತಂದೆಯ ಸಮಾನನಿರುತ್ತಾನೆ. ಆದ್ದರಿಂದ ನಾನು ಆತನ ಚರಣಗಳನ್ನು ಸ್ಪರ್ಶಿಸಲು ಬಯಸುತ್ತೇನೆ. ಈ ನಂತರ ಆತನೇ ನನಗೆ ಆಧಾರ ; ನಾನು ಬಂದುದನ್ನು ಶ್ರೀರಾಮನಿಗೆ ಹೇಳಿಕಳುಹಿಸು !" ಆಗ ಕೈಕೇಯಿಯು "ಪುತ್ರನೇ ! ಶ್ರೀರಾಮನು ನಾರುಬಟ್ಟೆಗಳನ್ನು ಧರಿಸಿ ಸೀತೆಯನ್ನೊಡಗೂಡಿ ಕಾಡಿಗೆ ಹೋಗಿದ್ದಾನೆ. ಲಕ್ಷ್ಮಣನು ಅವರನ್ನು ಹಿಂಬಾಲಿಸಿದ್ದಾನೆ." ಕೈಕೇಯಿಯ ಈ ನುಡಿಗಳನ್ನು ಕೇಳಿ ಭರತನು ಭಯಗೊಂಡನು. ಆತನು ಕೈಕೇಯಿಯನ್ನು ಕೇಳಿದನು : "ಮಾತೆಯೇ ! ಶ್ರೀರಾಮನು ಯಾವುದೇ ನೆವದಲ್ಲಿ ಓರ್ವ ಬ್ರಾಹ್ಮಣನ ಧನವನ್ನು ಅಪಹರಿಸಿದ್ದಾನೆಯೇ ? ಯಾವುದೇ ಬಡಪಾಯಿ, ನಿಷ್ಪಾಪಿಯ ಕೊಲೆ ಶ್ರೀರಾಮನಿಂದ ನಡೆದಿಲ್ಲ ತಾನೇ ? ಆತನು ಪರಸ್ತ್ರೀಮೋಹಿತನಾಗಿದ್ದಾನೆಯೇ ? ಶ್ರೀರಾಮನಿಂದ ಅದೆಂಥ ಅಪರಾಧವು ಜರುಗಿದೆ ?" —ಈ ಮುಂತಾದ ಅನೇಕ ಪ್ರಶ್ನೆಗಳನ್ನು ಕೈಕೇಯಿಗೆ ಕೇಳಿದನು. ಆಗ ತಾನು ಬಹಳ ಜಾಣೆ ಎಂದು ಬಗೆದುಕೊಂಡ ಕೈಕೇಯಿಯು ಬಹಳ ಆನಂದಭರಿತಳಾಗಿ ಆತುರಾತುರದಿಂದ—

> ನ ಬ್ರಾಹ್ಮಣಧನಂ ಕಿಂಚಿದ್ ಧೃತಂ ರಾಮೇಣ ಕಸ್ಯಚಿತ್ ।
> ಕಶ್ಚಿನ್ನಾಢ್ಯೋ ದರಿದ್ರೋ ವಾ ತೇನಪಾಪೋ ವಿಹಿಂಸಿತಃ ।
> ನ ರಾಮಃ ಪರದಾರಾನ್ ಸ ಚಕ್ಷುರ್ಭ್ಯಾಮಪಿ ಪಶ್ಯತಿ ॥ ೪೮ ॥
> ಮಯಾ ತು ಪುತ್ರ ಶ್ರುತ್ವೈವ ರಾಮಸ್ಯೇಹಾಭಿಷೇಚನಮ್ ।
> ಯಾಚಿತಸ್ತೇ ಪಿತಾ ರಾಜ್ಯಂ ರಾಮಸ್ಯ ಚ ವಿವಾಸನಮ್ ॥ ೪೯ ॥

"ರಾಮನು ಯಾವದೇ ಬ್ರಾಹ್ಮಣರ ಧನವನ್ನು ಅಪಹರಿಸಿಲ್ಲ ; ನಿರಪರಾಧಿಯಾದ ಯಾವ ಶ್ರೀಮಂತನ ಇಲ್ಲವೇ ಬಡವನ ಪ್ರಾಣಾಪಹರಣವನ್ನು ಮಾಡಿಲ್ಲ ; ಆತನು ಯಾವ ಪರಸ್ತ್ರೀಯರನ್ನೂ ಕಣ್ಣೆತ್ತಿ ನೋಡಿಲ್ಲ ; ಆದರೆ ಶ್ರೀರಾಮನಿಗೆ ರಾಜ್ಯಾಭಿಷೇಕವಾಗಲಿದೆಯೆಂದು ತಿಳಿದ ತಕ್ಷಣ ನಿನಗೆ ರಾಜ್ಯ, ಶ್ರೀರಾಮನಿಗೆ ವನವಾಸ ಎಂಬೆರಡು ವರಗಳನ್ನು ನಿನ್ನ ಪಿತನಿಂದ ಬೇಡಿಕೊಂಡೆನು" ಎಂದಳು.

ಅಯೋಧ್ಯಾಕಾಂಡ / ೧೦೭

ಅರಣ್ಯಕ್ಕೆ ತೆರಳಿದ ಶ್ರೀರಾಮನನ್ನು ಅಯೋಧ್ಯೆಗೆ ಪುನಃ ಕರೆತಂದು ರಾಜ್ಯಾಭಿಷೇಕವನ್ನು ಮಾಡುವ ಉದ್ದೇಶಪ್ರೇರಿತನಾಗಿ ಭರತನು ಶ್ರೀರಾಮನ ಭೇಟಿಗೆಂದು ಹೋದನು. ಶ್ರೀರಾಮನ ಭೇಟಿಯಾದಾಗ, ಅಯೋಧ್ಯೆಗೆ ಮರಳಲು ಭರತನು ಕಳಕಳಿಯಿಂದ ಪ್ರಾರ್ಥಿಸಿದನು ; ಆದರೆ ಶ್ರೀರಾಮನು ದೃಢನಿಶ್ಚಯನಾಗಿದ್ದನು. ಆತನು ಭರತನಿಗೆ - "ನೀನು ತಕ್ಕದ್ದನ್ನೇ ನುಡಿದೆ ; ದಶರಥರಾಜನಿಂದ ನೀನು ಕೈಕೇಯಿಯ ಉದರದಿಂದ ಜನಿಸಿರುವೆ ; ನಮ್ಮ ತಂದೆಯು ನಿನ್ನ ತಾಯಿಯ ಪಾಣಿಗ್ರಹಣ ಮಾಡಿದಾಗ ಇವಳಿಂದ ಹುಟ್ಟಿದ ಮಗನಿಗೆ ರಾಜ್ಯವನ್ನು ಕೊಡುವೆನೆಂದು ನಿಮ್ಮ ಅಜ್ಜನೆದುರು ಪ್ರತಿಜ್ಞೆಮಾಡಿದ್ದನು. ಕನ್ಯೆಯ ಬದಲು ರಾಜ್ಯರೂಪದ ಸಂಪತ್ತನ್ನು ನಿನಗೆ ಕೊಡುವುದಾಗಿ ನಿನ್ನ ಅಜ್ಜನಿಗೆ ವಚನ ಕೊಟ್ಟಿದ್ದನು. ಅನಂತರ ಪಾಣಿಗ್ರಹಣ ನಡೆಯಿತು.

> ದೇವಾಸುರೇ ಚ ಸಂಗ್ರಾಮೇ ಜನನ್ಯೈ ತವ ಪಾರ್ಥಿವಃ ।
> ಸಂಪ್ರಹೃಷ್ಟೋ ದದೌ ರಾಜಾ ವರಮಾರಾಧಿತಃ ಪ್ರಭುಃ ॥ ೪ ॥
> ತತಃ ಸಾ ಸಂಪ್ರತಿಶ್ರಾವ್ಯ ತವ ಮಾತಾ ಯಶಸ್ವಿನೀ ।
> ಅಯಾಚತ ನರಶ್ರೇಷ್ಠಂ ದ್ವೌ ವರೌ ವರವರ್ಣಿನೀ ॥ ೫ ॥
> ತವ ರಾಜ್ಯಂ ನರವ್ಯಾಘ್ರ ಮಮ ಪ್ರವ್ರಾಜನಂ ತಥಾ ।
> ತಚ್ಚ ರಾಜಾ ತಥಾ ತಸ್ಯೈ ನಿಯುಕ್ತಃ ಪ್ರದದೌ ವರಮ್ ॥ ೬ ॥
> ತೇನ ಪಿತ್ರಾಹಮಪ್ಯತ್ರ ನಿಯುಕ್ತಃ ಪುರುಷರ್ಷಭ ।
> ಚತುರ್ದಶ ವನೇ ವಾಸಂ ವರ್ಷಾಣಿ ವರದಾನಿಕಮ್ ॥ ೭ ॥

"ಸುರಾಸುರರ ಸಂಗ್ರಾಮದಲ್ಲಿ ನಿನ್ನ ತಾಯಿಯು ವೃಥ್ವೀಪತಿಯಾದ ರಾಜನ ಸೇವೆಯನ್ನು ಮಾಡಿದುದಕ್ಕಾಗಿ ಆತನು ಸಂತೋಷಗೊಂಡು ನಿನ್ನ ತಾಯಿಗೆ ಎರಡು ವರಗಳನ್ನು ಕೊಡಲು ಸಿದ್ಧನಾದನು. ಆಗ ಎರಡು

ವರಗಳನ್ನು ಕೊಡುವ ಪ್ರತಿಜ್ಞೆಯನ್ನು ಅವನಿಂದ ಮಾಡಿಸಿ, ಸ್ತ್ರೀಯರಲ್ಲಿ ಯಶಸ್ವಿನಿಯಾದ ನಿನ್ನ ಮಾತೆಯು ನಿನಗೆ ರಾಜ್ಯವನ್ನೂ, ನನಗೆ ವನವಾಸವನ್ನೂ ಈ ಎರಡು ವರಗಳಿಂದ ಪಡೆದುಕೊಂಡಳು. ವಚನಬದ್ಧನಾದ ರಾಜನು ಈ ವರಗಳನ್ನು ಕೊಟ್ಟನು ; ಅದರ ಕಾರಣದಿಂದ ನಾನು ಹದಿನಾಲ್ಕು ವರ್ಷ ವನವಾಸದಲ್ಲಿರಬೇಕೆಂದು ಆಜ್ಞಾಪಿಸಿದನು.

"ನಾನು ಸತ್ಯವಚನವನ್ನು ಪಾಲಿಸುವ ಧರ್ಮಜ್ಞನಾದ ರಾಜನ ಆಜ್ಞೆಯನ್ನು ಪಾಲಿಸಲೇಬೇಕು ! ಅದೇ ರೀತಿ ನೀನು ರಾಜ್ಯವನ್ನಾಳಬೇಕೆಂದು ಪಿತನ ಆಜ್ಞೆಯಿರುವದರಿಂದ ನೀನು ರಾಜ್ಯವನ್ನು ಆಳಲೇಬೇಕು !"

**ಅಯೋಧ್ಯಾಕಾಂಡ / ೧೧೧**

ಶ್ರೀರಾಮನು ರಾಜ್ಯವನ್ನು ಸ್ವೀಕರಿಸಬೇಕೆಂದು ಭರತನು ಪರಿಪರಿಯಾಗಿ ಆತನನ್ನು ಬಿನ್ನವಿಸಿದನು ; ಆದರೆ ಶ್ರೀರಾಮನು ತನ್ನ ನಿಶ್ಚಯದಿಂದ ಪರಾವೃತ್ತಗೊಳ್ಳಲಿಲ್ಲ. ಭರತನು ರಾಜ್ಯವನ್ನಾಳುವದು ಮತ್ತು ತಾನು ವನವಾಸದಲ್ಲಿರುವದು ಹೇಗೆ ಯೋಗ್ಯವಾಗಿದೆ ಎಂದು ಶ್ರೀರಾಮನು ಭರತನಿಗೆ ತಿಳಿಸಿಹೇಳಲು ಯತ್ನಿಸಿದನು. ಕೊನೆಗೆ ಶ್ರೀರಾಮನು ನುಡಿದದ್ದು ಭರತನಿಗೆ ಸರಿಯೆನಿಸಿತು. ಆಚಮನವನ್ನು ಮಾಡಿ ಭರತನು ಇಂತೆಂದನು—

ಶೃಣ್ವಂತು ಮೇ ಪರಿಷದೋ ಮಂತ್ರಿಣಃ ಶೃಣುಯಸ್ತಥಾ ॥ ೨೪ ॥
ನ ಯಾಚೇ ಪಿತರಂ ರಾಜ್ಯಂ ನಾನುಶಾಸಾಮಿ ಮಾತರಮ್ ।
ಏವಂ ಪರಮಧರ್ಮಜ್ಞಂ ನಾನುಜಾನಾಮಿ ರಾಘವಮ್ ॥ ೨೫ ॥
ಯದಿ ತ್ವವಶ್ಯಂ ವಸ್ತವ್ಯಂ ಕರ್ತವ್ಯಂ ಚ ಪಿತುರ್ವಚಃ ।
ಅಹಮೇವ ನಿವತ್ಸ್ಯಾಮಿ ಚತುರ್ದಶ ವನೇ ಸಮಾಃ ॥ ೨೬ ॥

"ಸಭಿಕರು ಮತ್ತು ಮಂತ್ರಿಗಳು ನನ್ನ ಹೇಳಿಕೆಯನ್ನು ಆಲಿಸಬೇಕು. ನಾನು ರಾಜ್ಯಕ್ಕಾಗಿ ತಂದೆಯನ್ನು ಪ್ರಾರ್ಥಿಸಿಲ್ಲ. ಈ ರೀತಿ ವರವನ್ನು ಕೇಳೆಂದು ತಾಯಿಗೆ ಹೇಳಲಿಲ್ಲ ; ಅದೇ ರೀತಿ ಪರಮಧರ್ಮಜ್ಞನಾದ ಶ್ರೀರಾಮನು ವನಕ್ಕೆ ಹೋಗಬೇಕೆಂದು ಆಜ್ಞಾಪಿಸಿಲ್ಲ. ಹೀಗಿದ್ದರೂ ಶ್ರೀರಾಮನು ವನದಲ್ಲಿ ವಾಸವಾಗಿ ಪಿತನ ಆಜ್ಞೆಯನ್ನು ಪಾಲಿಸುವದಿದ್ದರೆ, ನಾನೇ ಹದಿನಾಲ್ಕು ವರ್ಷ ವನವಾಸದಲ್ಲಿರುವೆ."

ಸಂಸ್ಕೃತ ಶ್ಲೋಕದಲ್ಲಿ 'ವರ' ಈ ಶಬ್ದವಿರದಿದ್ದರೂ ಅದು ಅಭಿಪ್ರೇತವಾಗಿದೆ.

ಭರತನ ಭಾಷಣವನ್ನು ಕೇಳಿ, ಶ್ರೀರಾಮನಿಗೆ ಆಶ್ಚರ್ಯವಾಯಿತು. ಅವನು ಪುರಜನರಿಗೆ ಈ ರೀತಿ ಅಂದನು : "ಭರತನು ವನವಾಸದಲ್ಲಿರುವದು ಸರಿಯಲ್ಲ. ತಂದೆಯ ಮಾತಿನಂತೆ ಸರಿಯಾಗಿ ನಡೆದುಕೊಳ್ಳುವದೆಂದರೆ ನಾನು ವನವಾಸದಲ್ಲಿರಬೇಕು ; ಮತ್ತು ಭರತನು ಅಯೋಧ್ಯೆಯಲ್ಲಿದ್ದು ರಾಜ್ಯಾಡಳಿತವನ್ನು ಮಾಡಬೇಕು ! ರಾಜ್ಯಾಡಳಿತದ ಎಲ್ಲ ಯೋಗ್ಯತೆ ಆತನಲ್ಲಿದೆ ಎಂಬುದನ್ನು ಬಲ್ಲೆನು. ವನವಾಸವನ್ನು ಪೂರೈಸಿ ಮರಳಿ ಬಂದನಂತರ ನಾನು ಪೃಥ್ವಿಯ ಪರಿಪಾಲನೆಯನ್ನು ಮಾಡುವೆನು.

ವೃತೋ ರಾಜಾ ಹಿ ಕೈಕೇಯ್ಯಾ ಮಯಾ ತದ್ವಚನಂ ಕೃತಮ್ ।
ಅನೃತಾನ್ಮೋಚಯಾನೇನ ಪಿತರಂ ತಂ ಮಹೀಪತಿಮ್ ॥ ೩೨ ॥

"ಕೈಕೇಯಿಯು ರಾಜನ ಬಳಿ ವರವನ್ನು ಬೇಡಿಕೊಂಡಳು. ಆ ವಚನವನ್ನು ನಾನು ಒಪ್ಪಿಕೊಂಡಿರುವೆನು. ಹೇ ಭರತನೇ, ನಾನು ಹೇಳಿದಂತೆ ನಡೆದುಕೊಂಡು ನೀನು ನಮ್ಮ ತಂದೆ ಅಸತ್ಯನಾಗದಂತೆ ಅವನನ್ನು ಮುಕ್ತಗೊಳಿಸು."

**ಕೌಸಲ್ಯಾ** **ಅಯೋಧ್ಯಾಕಾಂಡ / ೪೩**

ಶ್ರೀರಾಮನು ಕೌಸಲ್ಯೆಗೆ ತಾನು ವನವಾಸಕ್ಕೆ ಹೋಗಲಿರುವ ತನ್ನ ನಿರ್ಣಯವನ್ನು ತಿಳಿಸಿದಾಗ ಅವಳು ತುಂಬಾ ಶೋಕಾಕುಲಳಾದಳು. ಅವಳು ಪರಿಪರಿಯಾಗಿ ತಿಳಿಸಿ ಅವನನ್ನು ತೀರ್ಮಾನದಿಂದ ಪರಾವೃತ್ತಗೊಳಿಸಲು ಯತ್ನಿಸಿದಳು ; ಆದರೆ ಶ್ರೀರಾಮನು ತನ್ನ ತೀರ್ಮಾನವನ್ನು ಖಂಡಿತವಾಗಿ ಬದಲಿಸಲಾರೆ ! ಎಂದು ಹೇಳಿದಾಗ ಕೌಸಲ್ಯೆಯು ಈ ರೀತಿ ನುಡಿದಳು :

ಅಥಾಸ್ಮಿನ್ ನಗರೇ ರಾಮಶ್ಚರನ್ ಭೈಕ್ಷಂ ಗೃಹೇ ವಸೇತ್ ।
ಕಾಮಕಾರೋ ವರಂ ದಾತುಮಪಿ ದಾಸಂ ಮಮಾತ್ಮಜಮ್ ॥ ೪ ॥

ಮನೆಯಲ್ಲಿಯೇ ಉಳಿದುಕೊಂಡು ಶ್ರೀರಾಮನು (ಅಯೋಧ್ಯಾ)ನಗರದಲ್ಲಿ ಒಂದು ವೇಳೆ ತಿರುಪೆ ಬೇಡಿಕೊಳ್ಳುತ್ತ ತಿರುಗಿದರೂ ಅಥವಾ ಕೈಕೇಯಿಯ ದಾಸನಾಗಿ ಉಳಿದರೂ ಕೂಡ ಅದು ಇಚ್ಛಿತ ವರದಾನವೇ ಎನಿಸಬಹುದು. (ಆಗ ಏನಿಲ್ಲೆಂದರೂ ಪ್ರತಿದಿನ ಶ್ರೀರಾಮನ ದರ್ಶನವಾಗಬಹುದು.)

### ಶತ್ರುಘ್ನ

ಅಯೋಧ್ಯಾಕಾಂಡ / ೭೭

ದಶರಥನ ಶ್ರಾದ್ಧಾದಿ ಕ್ರಿಯೆಗಳು ಪೂರ್ಣಗೊಂಡನಂತರ ಶತ್ರುಘ್ನನಿಗೆ ತಂದೆಯ ನೆನಪಿನಿಂದ ಶೋಕ ಉಕ್ಕೇರಿತು. ಆತನ ಪ್ರಜ್ಞೆ ತಪ್ಪಿತು. ಆತನ ವಿಲಾಪದಲ್ಲಿ ದಶರಥನು ಕೈಕೇಯಿಗೆ ಕೊಟ್ಟ ವರದ ಮತ್ತು ಆ ವರದಿಂದ ಉದ್ಭವಿಸಿದ ಅನರ್ಥಗಳ ಉಲ್ಲೇಖವಿದೆ.

ಮಂಥರಾ ಪ್ರಭವಸ್ತೀವ್ರಃ ಕೈಕೇಯೀಗ್ರಾಹಸಂಕುಲಃ ।
ವರದಾನಮಯೋಽಕ್ಷೋಭ್ಯೋಽಮಜ್ಜಯಚ್ಛೋಕಸಾಗರಃ ॥ ೧೬ ॥

ಮಂಥರೆಯಿಂದ ಉದ್ಭವಿಸಿದ ಕೈಕೇಯಿ ಎಂಬ ಮೊಸಳೆಯಿಂದ ವ್ಯಾಪಿಸಿದ, ಎಂದಿಗೂ ಕಡಿಮೆಯಾಗ ಲಾರದ ವರದಾನಯುಕ್ತ ಶೋಕಸಾಗರವು ನಮ್ಮೆಲ್ಲರನ್ನೂ ಮುಳುಗಿಸಿಬಿಟ್ಟಿದೆ.

### ಸುಮಂತ್ರ

ಅಯೋಧ್ಯಾಕಾಂಡ / ೫೮

ವನವಾಸಕ್ಕೆ ಹೋಗಲಿರುವ ಶ್ರೀರಾಮನನ್ನು ಬೀಳ್ಕೊಡಲು ಸುಮಂತ್ರನನ್ನು ರಥಸಹಿತವಾಗಿ ಕಳಿಸ ಲಾಗಿತ್ತು. ಶ್ರೀರಾಮನನ್ನು ಬೀಳ್ಕೊಟ್ಟುಬಂದನಂತರ ಸುಮಂತ್ರನು ದಶರಥನಿಗೆ ಪಯಣದ ಮಾಹಿತಿಯನ್ನು ಕೊಡುತ್ತಿದ್ದಾನೆ. ಲಕ್ಷ್ಮಣನು ತುಂಬಾ ಸಿಟ್ಟಿನಿಂದ ಮಾತಾಡಿದ್ದನ್ನು ಸುಮಂತ್ರ ಹೇಳುತ್ತಾನೆ—

"ಯಾವ ಅಪರಾಧಕ್ಕೆಂದು ಶ್ರೀರಾಮನನ್ನು ಅಡವಿಗೆ ಅಟ್ಟಲಾಗಿದೆ ? ಆತುರಾತುರದಲ್ಲಿ ಕೈಕೇಯಿಗೆ ವಚನವನ್ನು ಕೊಟ್ಟದ್ದು ಒಳ್ಳೆಯದೇ ಇರಲಿ ಕೆಟ್ಟದ್ದೇ ಇರಲಿ, ನಮಗೆ ತುಂಬ ಕ್ರೋಧವನ್ನುಂಟುಮಾಡಿದೆ."

ಯದಿ ಪ್ರವ್ರಾಜಿತೋ ರಾಮೋ ಲೋಭಕಾರಣಕಾರಿತಮ್ ।
ವರದಾನನಿಮಿತ್ತಂ ವಾ ಸರ್ವಥಾ ದುಷ್ಕೃತಂ ಕೃತಮ್ ॥ ೨೮ ॥

"ಶ್ರೀರಾಮನನ್ನು ವನವಾಸಕ್ಕೆ ಅಟ್ಟಿದ್ದು ಲೋಭದಿಂದಲೇ ಇರಲಿ ಅಥವಾ ಕೈಕೇಯಿಗೆ ಕೊಟ್ಟ ವರದಿಂದಲೇ ಇರಲಿ, ಅದೊಂದು ರಾಜನಿಂದ ನಡೆದ ಘೋರ ಅನರ್ಥವೆಂಬುದು ಖಂಡಿತ."

### ವಸಿಷ್ಠ

ಅಯೋಧ್ಯಾಕಾಂಡ / ೩೭

ವನವಾಸಕ್ಕೆ ಹೋಗುವಾಗ ಶ್ರೀರಾಮನು ಭೋಗವಸ್ತುಗಳನ್ನು ತ್ಯಾಗಮಾಡಿ ಹೋಗಬೇಕೆಂದು ಆಗ್ರಹ ಹಿಡಿದ ಕೈಕೇಯಿಯು ಶ್ರೀರಾಮನೊಡನೆ ಹೊರಟ ಸೀತೆಯೂ ಕೂಡ ವಲ್ಕಲಗಳನ್ನು ಧರಿಸಬೇಕೆಂದು ನುಡಿದಾಗ ವಸಿಷ್ಠಮುನಿಗಳು ಸೀತೆಗೆ ಈ ರೀತಿ ಮಾಡಲು ಪ್ರತಿಬಂಧಿಸಿದರು ಮತ್ತು ಬೇಡಿಕೊಂಡ ವರಗಳ ಮಿತಿಯನ್ನು ಸ್ಪಷ್ಟವಾಗಿ ಕೈಕೇಯಿಗೆ ವಿವರಿಸಿ ಹೇಳಿದರು :

ಏಕಸ್ಯ ರಾಮಸ್ಯ ವನೇ ನಿವಾಸಸ್ತ್ವಯಾ ವೃತಃ ಕೇಕಯರಾಜಪುತ್ರಿ ।
ವಿಭೂಷಿತೇಯಂ ಪ್ರತಿಕರ್ಮನಿತ್ಯಾ ವಸತ್ವರಣ್ಯೇ ಸಹ ರಾಘವೇಣ ॥ ೩೫ ॥
ಯಾನೈಶ್ಚ ಮುಖ್ಯೈಃ ಪರಿಚಾರಕೈಶ್ಚ ಸುಸಂವೃತಾ ಗಚ್ಛತು ರಾಜಪುತ್ರೀ ।
ವಸ್ತ್ರೈಶ್ಚ ಸರ್ವೈಃ ಸಹಿತೈರ್ವಿಧಾನೈರ್ನೇಯಂ ವೃತಾ ತೇ ವರಸಂಪ್ರದಾನೇ ॥ ೩೭ ॥

"ಎಲೈ ರಾಜಕನ್ಯೆಯೇ, ಶ್ರೀರಾಮ ಒಬ್ಬನಿಗೆ ಮಾತ್ರ ವನವಾಸವೆಂದು ನೀನು ಬೇಡಿಕೊಂಡಿರುವೆ ಯಾದ್ದರಿಂದ ಈ ಸೀತೆಯು ನಿತ್ಯಾಲಂಕಾರಭೂಷಿತಳಾಗಿ ಶ್ರೀರಾಮನೊಡನೆ ಕಾಡಿನಲ್ಲಿ ವಾಸವಿರಲಿ ; ಉತ್ಕೃಷ್ಟ

ವಾಹನಗಳು, ಸೇವಕರು, ಎಲ್ಲ ಉಡಿಗೆತೊಡಿಗೆ ಪಾತ್ರೆಪಡಗಗಳ ಸಹಿತವಾಗಿ ಈ ರಾಜಕನ್ಯೆಯು ಒಳ್ಳೆಯ ಏರ್ಪಾಟಿನೊಂದಿಗೆ ಹೋಗಲಿ ! ಏಕೆಂದರೆ ನೀನು ವರವನ್ನು ಬೇಡಿದಾಗ ಇವಳ ಪ್ರಸ್ತಾಪ ಬಂದಿಲ್ಲ."

**ಸಿದ್ಧಾರ್ಥ** **ಅಯೋಧ್ಯಾಕಾಂಡ / ೩೬**

ರಘುವಂಶದ ಸಗರರಾಜನು 'ಅಸಮಂಜ'ನೆಂಬ ತನ್ನ ಹಿರಿಯ ಪುತ್ರನಿಗೆ ರಾಜ್ಯಭೋಗಗಳನ್ನು ನಿರಾಕರಿಸಿ ವನವಾಸಕ್ಕೆ ಕಳುಹಿಸಿದ ದಾಖಲೆಯನ್ನು ಕೊಟ್ಟು ಕೈಕೇಯಿಯು ದಶರಥನನ್ನು ನಿರುತ್ತರಗೊಳಿಸಿದಳು. ಅವಳ ಈ ಮಾತನ್ನು ಕೇಳಿ ದಶರಥನು ಆಕೆಯನ್ನು ಧಿಕ್ಕರಿಸಿದನು. ಆಗ ಎಲ್ಲ ಸೇವಕವರ್ಗದವರಿಗೂ ಬೇಸರ ವಾಯಿತು. ಶ್ರೀರಾಮನನ್ನು ಅಸಮಂಜನಿಗೆ ಹೋಲಿಸುವದು ತಪ್ಪೆಂದು ಮಂತ್ರಿಯಾದ ಸಿದ್ಧಾರ್ಥನು ಸ್ಪಷ್ಟ ಗೊಳಿಸಿದನು ; ಲೋಕಾಪವಾದದ ಭಯವಾದರೂ ಇರಬೇಕೆಂದು ಕೈಕೇಯಿಯ ಗಮನಕ್ಕೆ ತಂದು ಕೊಟ್ಟನು.

**೨. ಬ್ರಹ್ಮದೇವ > ಹನುಮಾನ** **ಬಾಲಕಾಂಡ / ೧**

ಬ್ರಹ್ಮದೇವನು ಹನುಮಂತನಿಗೆ ಕೊಟ್ಟ ವರದ ಬಗ್ಗೆ ಕೇವಲ ಒಂದು ಉಲ್ಲೇಖ.

ಅಸ್ತ್ರೇಣೋನ್ಮುಕ್ತಮಾತ್ಮಾನಂ ಜ್ಞಾತ್ವಾ ಪೈತಾಮಹಾದ್ ವರಾತ್ ।
ಮರ್ಷಯನ್ ರಾಕ್ಷಸಾನ್ ವೀರೋ ಯಾಂತ್ರಿಣಸ್ತಾನ್ ಯದೃಚ್ಛಯಾ ॥ ೭೬ ॥

ಬ್ರಹ್ಮದೇವನ ವರದಾನದಿಂದಾಗಿ ಬ್ರಹ್ಮಪಾಶದಿಂದ ತನ್ನ ಬಿಡುಗಡೆಯಾದುದನ್ನು ಅರಿತು ಕೂಡ ಹನುಮಂತನು ತನ್ನನ್ನು ಬಿಗಿದು ಕಟ್ಟುವ ರಾಕ್ಷಸರ ಅಪರಾಧವನ್ನು ಸ್ವೇಚ್ಛೆಯಿಂದ ಸಹಿಸಿದನು.

**ಕಿಷ್ಕಿಂಧಾಕಾಂಡ / ೬೬**

ಜಾಂಬವಂತನು ಹನುಮಂತನಿಗೆ ಆತನ ಜನ್ಮದ ವೃತ್ತಾಂತವನ್ನು ಹೇಳುತ್ತಿದ್ದಾನೆ :

ಅಂಜನಿಯ ಅನುಪಮ ಲಾವಣ್ಯವನ್ನು ಕಂಡು ಕಾಮಪೀಡಿತನಾದ ವಾಯುವು ಆಕೆಯನ್ನು ಆಲಿಂಗಿಸಿ ತನ್ನ ತೇಜಸ್ಸನ್ನು (ವೀರ್ಯ) ಆಕೆಯಲ್ಲಿ ಸ್ಥಾಪಿಸಿದನು. ತನ್ನ ಪಾತಿವ್ರತ್ಯವು ಯಾರಿಂದಲೋ ಭ್ರಷ್ಟವಾಗು ತ್ತಿದ್ದುದನ್ನು ಅರಿತು ಅವಳು ಬೆಚ್ಚಿಬಿದ್ದಳು. ಆಗ ವಾಯುವು ಆಕೆಗೆ ಈ ರೀತಿ ನುಡಿದನು : "ಹೇ, ಸುಂದರಿಯೇ, ನಾನು ನಿನ್ನನ್ನು ಭ್ರಷ್ಟಗೊಳಿಸುತ್ತಿಲ್ಲ. ನೀನು ಭಯಪಡದಿರು. ನಾನು ನಿನ್ನನ್ನು ಆಲಿಂಗಿಸಿ ಮಾನಸಿಕ ಭೋಗ ದಿಂದ ನನ್ನ ತೇಜಸ್ಸನ್ನು ನಿನ್ನಲ್ಲಿಟ್ಟಿದ್ದೇನೆ. ನಿನಗೆ ಇದರಿಂದ ವೀರನಾದ, ಬುದ್ಧಿವಂತನಾದ ಮಗನು ಹುಟ್ಟುವನು. ಆ ಪುತ್ರನು ಬಹಳ ಶೂರನೂ, ತೇಜಸ್ವಿಯೂ, ಪರಾಕ್ರಮಿಯೂ ಆಗುವವನಿದ್ದು, ಮಾರ್ಗವನ್ನು ಉಲ್ಲಂಘಿಸುವದರಲ್ಲಿ ಆತನು ನನಗೆ ಸರಿಸಮಾನನಾಗುವನು. ವಾಯುವಿನ ನುಡಿಗಳನ್ನು ಕೇಳಿ ಅಂಜನಿಯು ಸಂತೋಷಗೊಂಡಳು. ಒಂದು ಗುಹೆಯಲ್ಲಿ ಅವಳು ಪ್ರಸೂತಳಾಗಿ ಅವಳಿಗೆ ಹನುಮಾನನು ಹುಟ್ಟಿದನು. ಆ ಸಮಯಕ್ಕೆ ಸರಿಯಾಗಿ ಅದೇ ಮೂಡಿದ ಸೂರ್ಯನನ್ನು ಕಂಡ ಹನುಮಾನನು ಅದೊಂದು ಫಲವಿರ ಬೇಕೆಂದು ಗ್ರಹಿಸಿ ಅದನ್ನು ತಿನ್ನಲೆಂದು ಆಕಾಶದಲ್ಲಿ ಮುನ್ನೂರು ಯೋಜನಗಳಷ್ಟು ಎತ್ತರಕ್ಕೆ ಜಿಗಿದನು. ಇದನ್ನು ಕಂಡ ಇಂದ್ರನಿಗೆ ಆಶ್ಚರ್ಯವಾದುದಲ್ಲದೆ ಕೋಪವು ಉಂಟಾಗಿ ಆತನು ಹನುಮಾನನ ಮೇಲೆ ವಜ್ರಾಯುಧದ ಪ್ರಹಾರವನ್ನು ಮಾಡಿದನು. ಅದರಿಂದ ಹನುಮಂತ 'ಹನು' ಅಂದರೆ 'ಗದ್ದ'ದ ಎಡಭಾಗವು ಮುರಿಯಿತು. ಆಗಿನಿಂದ ಈತನಿಗೆ ಹನುಮಾನನೆಂಬ ಹೆಸರು ಬಂದಿತು. ಹೀಗೆ ಹನುಮಂತನ ಮೇಲೆ ವಜ್ರಾಯುಧವನ್ನು ಇಂದ್ರನು ಎಸೆದನೆಂದು ವಾಯುವಿಗೆ ಕೋಪ ಬಂದಿತು. ವಾಯುವು ಸಮಸ್ತ ಮೂರೂ ಲೋಕಗಳ ತನ್ನ ಸಂಚಾರವನ್ನು ನಿಲ್ಲಿಸಿಬಿಟ್ಟನು. ಆಗ ಉಸಿರುಗಟ್ಟಿದಂತಾಗಿ ಮೂರೂ ಲೋಕಗಳಲ್ಲಿಯ ದೇವತೆಗಳು ಹೆದರಿಕೊಂಡು ವಾಯುವನ್ನು ಸ್ತುತಿಸಿ ಪ್ರಸನ್ನಗೊಳಿಸಲು ಉದ್ಯುಕ್ತರಾದರು.

ಪ್ರಸಾದಿತೇ ಚ ಪವನೇ ಬ್ರಹ್ಮಾ ತುಭ್ಯಂ ವರಂ ದದೌ ।
ಅಶಸ್ತ್ರವಧ್ಯತಾಂ ತಾತ ಸಮರೇ ಸತ್ಯವಿಕ್ರಮ ॥ ೨೭ ॥

ದೇವತೆಗಳು ವಾಯುವನ್ನು ಪ್ರಸನ್ನಗೊಳಿಸಿದರು. ಬ್ರಹ್ಮದೇವನು "ಸಂಗ್ರಾಮಭೂಮಿಯಲ್ಲಿ ಶಸ್ತ್ರಗಳಿಂದ ನಿನ್ನ ವಧೆಯಾಗಲಾರದು !" ಎಂಬ ವರವನ್ನು ಕೊಟ್ಟನು.

ಇದು 'ಅಯಾಚಿತ' ವರವಾಗಿದೆ.

೩. ದೇವತಾ > ಶ್ರೀರಾಮ

ಬಾಲಕಾಂಡ / ೧

ಶ್ರೀರಾಮನು ಲಂಕೆಯಲ್ಲಿ ವಿಭೀಷಣನಿಗೆ ರಾಜ್ಯಾಭಿಷೇಕವನ್ನು ಮಾಡಿ ಕೃತಕೃತ್ಯನಾದನು.

ದೇವತಾಭ್ಯೋ ವರಂ ಪ್ರಾಪ್ಯ ಸಮುತ್ಥಾಪ್ಯ ಚ ವಾನರಾನ್ ।
ಅಯೋಧ್ಯಾಂ ಪ್ರಸ್ಥಿತೋ ರಾಮಃ ಪುಷ್ಪಕೇಣ ಸುಹೃದ್ವೃತಃ ॥ ೮೬ ॥

"ಯುದ್ಧದಲ್ಲಿ ಮಡಿದ ವಾನರರು ನಿದ್ರೆಯಿಂದ ಎಚ್ಚೆತ್ತವರಂತೆ ಜೀವಿತವಾಗಲಿ" ಎಂಬ ವರವನ್ನು ದೇವತೆಗಳಿಂದ ಪಡೆದುಕೊಂಡನಂತರ ವಾನರರನ್ನು ಎಚ್ಚರಿಸಿ ಸ್ವಜನಪರಿವಾರದಿಂದೊಡಗೂಡಿದ ಶ್ರೀರಾಮನು, ಪುಷ್ಪಕವಿಮಾನದಲ್ಲಿ ಕುಳಿತು ಅಯೋಧ್ಯಾನಗರದತ್ತ ಸಾಗಿದನು.

ಈ ಸಂದರ್ಭದಲ್ಲಿ ವರ ಕೊಟ್ಟವರು ಅನೇಕ ದೇವತೆಗಳೆಂದು ಉಲ್ಲೇಖವಿದೆ.

ಯುದ್ಧಕಾಂಡ / ೧೨೪

ವನವಾಸವನ್ನು ಪೂರೈಸಿದನಂತರ ರಾಮನು ಭರದ್ವಾಜ ಮುನಿಯ ಆಶ್ರಮಕ್ಕೆ ಬಂದಾಗ ಶ್ರೀರಾಮನು ಕೇಳಿದ ಪ್ರಶ್ನೆಗೆ ಉತ್ತರಿಸುವಾಗ ಭರದ್ವಾಜನು ಈ ರೀತಿ ಉಲ್ಲೇಖಿಸಿದ್ದಾನೆ :

ಯಥಾ ಚ ನಿಹತೇ ತಸ್ಮಿನ್ರಾವಣೇ ದೇವಕಂಟಕೇ ।
ಸಮಾಗಮಶ್ಚ ತ್ರಿದಶೈರ್ಯಥಾ ದತ್ತಶ್ಚ ತೇ ವರಃ ॥ ೧೫ ॥

"ದೇವತೆಗಳಿಗೆ ಕಂಟಕಪ್ರಾಯನಾದ ರಾವಣನನ್ನು ನೀನು ವಧಿಸಿದನಂತರ ದೇವತೆಗಳು ನಿನ್ನನ್ನು ಭೇಟಿಯಾಗಿ ವರಗಳನ್ನು ಕೊಟ್ಟ ವಿಷಯವನ್ನು ತಪಸ್ಸಿನ ಬಲದಿಂದ ನಾನು ಅರಿತುಕೊಂಡೆನು" ಎಂದು ಆ ಮುನಿಯು ಹೇಳಿದನು.

ಇಲ್ಲಿ ಉಲ್ಲೇಖಿಸಲ್ಪಟ್ಟ ವರ ಮತ್ತು ಇಂದ್ರನು ಶ್ರೀರಾಮನಿಗೆ ಕೊಟ್ಟ ವರವು ಒಂದೇ ಇರಬಹುದೋ ಅಥವಾ ಬೇರೆಬೇರೆಯಾಗಿರಬಹುದೋ ? ದೇವತೆಗಳಿಂದ ದೊರೆತ ವರವು ಬೇರೆ ಇರಬಹುದು. ಏಕೆಂದರೆ 'ದೇವತೆಗಳಿಂದ' ಎಂಬ ಬಹುವಚನದ ಉಲ್ಲೇಖವಿದೆ. ಇಂದ್ರನಿಂದ ದೊರೆತ ವರ ಬೇರೆ ಇರಬಹುದು. ಇಲ್ಲಿ ವರದ ಸ್ವರೂಪವು ಸ್ಪಷ್ಟವಿಲ್ಲ. ಇದು ಕೂಡ 'ಅಯಾಚಿತ' ವರವಿರಬೇಕು.

ಯುದ್ಧಕಾಂಡ / ೧೨೫

ಶ್ರೀರಾಮನು ಹನುಮಂತನನ್ನು ಅಯೋಧ್ಯೆಯತ್ತ ಮುಂಚೂಣಿಯಲ್ಲಿ ಕಳುಹಿಸಿ, ತನ್ನ ಕುಶಲವನ್ನು ಅಯೋಧ್ಯಾವಾಸಿಗಳಿಗೆ ತಿಳಿಸಿ ಅವರನ್ನು ಸಂತೋಷಪಡಿಸಲು ಹೇಳಿದನು. ಸೀತಾಪಹರಣ, ಸುಗ್ರೀವನೊಡನೆ ಮಿತ್ರತ್ವ, ವಾಲಿಯ ವಧೆ, ಸಮುದ್ರವನ್ನು ಕಂಡಿದ್ದು, ಸೇತುವಿನ ನಿರ್ಮಾಣ, ನಂತರ ನಡೆದ ರಾವಣನ ವಧೆ ಇವೆಲ್ಲವನ್ನೂ ವಿವರವಾಗಿ ತಿಳಿಸಲು ಶ್ರೀರಾಮನು ಸೂಚಿಸುತ್ತಿದ್ದಾಗ, ಈ ಕೆಳಗಿನ ಉಲ್ಲೇಖವು ಬಂದಿದೆ.

ವರದಾನಂ ಮಹೇಂದ್ರೇಣ ಬ್ರಹ್ಮಣಾ ವರುಣೇನ ಚ ।
ಮಹಾದೇವಪ್ರಸಾದಾಚ್ಚ ಪಿತ್ರಾ ಮಮ ಸಮಾಗಮಮ್ ॥ ೧೧ ॥

"ಇಂದ್ರ, ಬ್ರಹ್ಮ, ವರುಣ ಇವರು ಯಾವ ವರಗಳನ್ನು ಕರುಣಿಸಿದರು ? ಮತ್ತು ಮಹಾದೇವನ ಕೃಪೆಯಿಂದ ನನ್ನ ತಂದೆಯಾದ ದಶರಥನ ಭೇಟಿ ಯಾವ ರೀತಿಯಾಯಿತು ? ಎಂಬುದನ್ನು ಹೇಳಿ, ನಾನು ಇಲ್ಲಿಗೆ ಸಮೀಪಿಸಿದ್ದೇನೆಂದು ನೀನು ಭರತನಿಗೆ ತಿಳಿಸು."

ಹೀಗೆ, ಇಲ್ಲಿ ಇಂದ್ರನ ಉಲ್ಲೇಖದೊಡನೆ ಬ್ರಹ್ಮ ಮತ್ತು ವರುಣ ಇವರು ಕೊಟ್ಟ ವರಗಳ ಉಲ್ಲೇಖ ಸಹ ಬಂದಿದೆ. ಇಂದ್ರನು ಕೊಟ್ಟ ವರದ ಸ್ವರೂಪವು (ಯುದ್ಧಕಾಂಡ - ಸರ್ಗ ೧೨೦ರಲ್ಲಿ) ಸ್ಪಷ್ಟವಾಗಿದೆ.

**ಯುದ್ಧಕಾಂಡ / ೧೨೬**

**ಹನುಮಂತನಿಂದ ಶ್ರೀರಾಮನ ಸುವಾರ್ತೆಯನ್ನು ಕೇಳಿದ ಭರತನಿಗೆ ಅತಿಶಯ ಆನಂದವಾಯಿತು. ಆತನು ಇನ್ನೂ ಹೆಚ್ಚಾಗಿ ವಿವರಿಸಲು ವಿನಂತಿಸಿದನು. ಹನುಮಂತನು ವಿವರಿಸಿದ ಸಂಗತಿಯಲ್ಲಿ ಈ ಉಲ್ಲೇಖವು ಬಂದಿದೆ.**

> ಸ ಶಕ್ರೇಣ ಸಮಾಗಮ್ಯ ಯಮೇನ ವರುಣೇನ ಚ ।
> ಮಹೇಶ್ವರಸ್ವಯಂಭೂಭ್ಯಾಂ ತಥಾ ದಶರಥೇನ ಚ ॥ ೫೧ ॥
> ತೈಶ್ಚ ದತ್ತವರಃ ಶ್ರೀಮಾನ್ಋಷಿಭಿಶ್ಚ ಸಮಾಗತೈಃ ।
> ಸುರರ್ಷಿಭಿಶ್ಚ ಕಾಕುತ್ಸ್ಥೋ ವರಾಂಲ್ಲೇಭೇ ಪರಂತಪಃ ॥ ೫೨ ॥

"ಇಂದ್ರ, ಯಮ, ವರುಣ, ಮಹೇಶ್ವರ, ಬ್ರಹ್ಮದೇವ ಹಾಗೂ ದಶರಥ ಇವರೆಲ್ಲರ ಭೇಟಿಯಾದ ನಂತರ ಅವರು ಹಾಗೂ ಅಲ್ಲಿದ್ದ ಋಷಿಗಳು ಆ ವೈಭವಸಂಪನ್ನ ಶ್ರೀರಾಮನಿಗೆ ವರವನ್ನಿತ್ತರು. ಆ ಶತ್ರುತಾಪನ, ಕಾಕುತ್ಸ್ಥಕುಲೋತ್ಪನ್ನ ಶ್ರೀರಾಮನಿಗೆ ದೇವ, ಋಷಿಗಳಿಂದಲೂ ವರವು ದೊರಕಿತು."

ಇಲ್ಲಿ ಇಂದ್ರನಂತೆ ಇತರ ದೇವತೆಗಳು ಮತ್ತು ಋಷಿಗಳು ಸಹ ಶ್ರೀರಾಮನಿಗೆ ವರವನ್ನು ಕೊಟ್ಟ ಉಲ್ಲೇಖವಿದೆ. ಶ್ರೀರಾಮನು ರಾವಣನನ್ನು ವಧಿಸುವಂಥ ದುಸ್ತರಕಾರ್ಯವನ್ನು ಮಾಡಿದ್ದರಿಂದ ಸಂತೋಷಗೊಂಡ ಅಲ್ಲಿ ಉಪಸ್ಥಿತರಿದ್ದ ದೇವತೆಗಳು, ಋಷಿಗಳು, ಅವನಿಗೆ ವರವನ್ನಿತ್ತರು. ಸಾರಾಂಶದಲ್ಲಿ, ಈ ಎಲ್ಲ ವರಗಳು 'ಅಯಾಚಿತ'ವಾಗಿವೆ.

**ಯುದ್ಧಕಾಂಡ / ೧೨೭**

> ತಸ್ಯ ಚೈವ ವರಂ ದತ್ತೋ ವಾಸವೇನ ಪರಂತಪ । ೨೭

ಇಂದ್ರನು ಆತನಿಗೆ ವರವನ್ನು ಕೊಟ್ಟ ಇನ್ನೊಂದು ಉಲ್ಲೇಖ.
ಅಯಾಚಿತವಾದುದು.

### ೪. ಬ್ರಹ್ಮದೇವ > ವಾಲ್ಮೀಕಿ — ಬಾಲಕಾಂಡ / ೨

ಒಬ್ಬ ನಿಷಾದನು ಕಾಮಭೋಗಾಸಕ್ತ ಕ್ರೌಂಚ ಪಕ್ಷಿಯ ಜೊತೆಯಲ್ಲಿಯ ಗಂಡುಪಕ್ಷಿಯನ್ನು ಕೊಂದುದನ್ನು ಕಂಡು ವಾಲ್ಮೀಕಿ ಋಷಿಯ ಬಾಯಿಯಿಂದ -

> ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ । ೧೫

ಎಂಬ ಶಾಪವಾಣಿಯು ಹೊರಬಂದಿತು ; ಆದರೆ ತಪಸ್ಸನ್ನು ಕೆಡಿಸುವ ಶಬ್ದಗಳನ್ನು ಉಚ್ಚರಿಸಬಾರದಿತ್ತೆಂದು ಕೊರಗು ಉಂಟಾಯಿತು ; ಆದ್ದರಿಂದ ಆತನಿಗೆ ತುಂಬ ಕೆಡಕೆನಿಸಿತು. ಈ ಶ್ಲೋಕಬದ್ಧ ಶಾಪವಾಣಿಯು ಆತನ ಮನಸ್ಸಿನಲ್ಲಿ ತಾಳಹಾಕುತ್ತಿದ್ದ ಸಮಯದಲ್ಲಿಯೇ ಸಾಕ್ಷಾತ್ ಬ್ರಹ್ಮದೇವನು ಆತನ ಭೇಟಿಗೆ ಬಂದನು. ಅರ್ಘ್ಯ, ಪಾದ್ಯ, ಆಸನ ವಂದನಾದಿಗಳಿಂದ ವಾಲ್ಮೀಕಿಯು ಬ್ರಹ್ಮದೇವನನ್ನು ಯಥಾಯೋಗ್ಯವಾಗಿ ಪೂಜಿಸಿದನು. ಬ್ರಹ್ಮದೇವನು ಅದನ್ನು ಸ್ವೀಕರಿಸಿದನು. ಚಿಂತಾಗ್ರಸ್ತನಾದ ವಾಲ್ಮೀಕಿಗೆ ಬ್ರಹ್ಮದೇವನು ನಗುನಗುತ್ತ ಈ ರೀತಿ ನುಡಿದನು : "ನಿನ್ನಿಂದ ರಚಿತವಾದ ಈ ಶ್ಲೋಕವು ಶಾಪೋದ್ಧಾರವಿದ್ದರೂ, ಅದು ಯಶೋರೂಪವಾಗುವದು ! ಏಕೆಂದರೆ ನನ್ನ ಪ್ರೇರಣೆಯಿಂದ ಸರಸ್ವತಿಯು ನಿನ್ನಲ್ಲಿ ಪ್ರವೃತ್ತಳಾಗಿದ್ದಾಳೆ. ನಿನ್ನ ವಾಣಿಯು ಯತ್ಕಿಂಚಿತವೂ ಸುಳ್ಳಾಗಲಾರದು." ಹೀಗೆಂದು ಬ್ರಹ್ಮದೇವನು ಈ ರೀತಿ ಆಜ್ಞಾಪಿಸಿದನು.

> ಕುರು ರಾಮಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಮ್ ।
> ಯಾವತ್ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ॥ ೩೬ ॥
> ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ।
> ಯಾವದ್ರಾಮಸ್ಯ ಚ ಕಥಾ ತ್ವತ್ಕೃತಾ ಪ್ರಚರಿಷ್ಯತಿ ॥ ೩೭ ॥
> ತಾವದೂರ್ಧ್ವಮಧಶ್ಚ ತ್ವಂ ಮಲ್ಲೋಕೇಷು ನಿವತ್ಸ್ಯಸಿ । ೩೮

"ಮನೋಹರವಾದ, ಪುಣ್ಯಕಾರಕವಾದ ಈ ಶ್ಲೋಕಬದ್ಧ ಶ್ರೀರಾಮಕಥೆಯನ್ನು ನೀನು ಬಣ್ಣಿಸು ! ಗಿರಿನದಿಗಳು ಭೂಲೋಕದಲ್ಲಿರುವವರೆಗೆ ಶ್ರೀರಾಮಕಥೆಯು ಪ್ರಚಾರದಲ್ಲಿ ಉಳಿಯುವದು. ನೀನು ರಚಿಸಿದ ಶ್ರೀರಾಮಕಥೆಯು ಲೋಕದಲ್ಲಿರುವವರೆಗೆ (ನಿನ್ನ ಕ್ರೋಧದ ಕಾರಣದಿಂದ) ಕೆಳಮಟ್ಟದಲ್ಲಿರಲು ಯೋಗ್ಯನಾದ ನೀನು ಎಲ್ಲರಿಗಿಂತ ಉನ್ನತಮಟ್ಟದಲ್ಲಿದ್ದ ನನ್ನ ಲೋಕದಲ್ಲಿ ವಾಸವಾಗುವೆ !"

ಬ್ರಹ್ಮದೇವನ ಆಜ್ಞೆಯನ್ನು ತಲೆಬಾಗಿ ಮನ್ನಿಸಿ, ವಾಲ್ಮೀಕಿಯು ರಾಮಾಯಣವನ್ನು ರಚಿಸಿದನು.

ಬ್ರಹ್ಮದೇವನ ಶಬ್ದಗಳು ವರದಾನದಂತಿದ್ದರೂ ಅದರ ಉಲ್ಲೇಖವು 'ವರ'ವೆಂದು ಸ್ಪಷ್ಟವಿಲ್ಲ ; ಅದಕ್ಕಾಗಿ ಆ ಶಬ್ದಗಳು ಆಶೀರ್ವಾದದ ಸಮವಾಗಿ 'ಸದಿಚ್ಛೆ'ಯನ್ನು ವ್ಯಕ್ತಪಡಿಸುವಂತಾಗಿವೆ.

ಇದನ್ನು ವರವೆಂದು ಬಗೆದರೆ ಇದು 'ಅಯಾಚಿತ' ವರವಾಗಿದೆ.

## ೫. ಮುನಿಗಳು > ಕುಶ - ಲವ ಬಾಲಕಾಂಡ / ೪

ಒಮ್ಮೆ ಸಕಲಗುಣಸಂಪನ್ನರಾದ, ಭಾಗ್ಯವಂತರಾದ ಕುಶ-ಲವರು ಋಷಿಗಳ ಸಭೆಯಲ್ಲಿ ರಾಮಾಯಣ ಕಾವ್ಯವನ್ನು ಹಾಡಲು ಉಪಕ್ರಮಿಸಿದಾಗ ಶ್ರೋತೃಗಳ ನೇತ್ರಗಳು ಬಾಷ್ಪಭರಿತವಾದವು. ಎಲ್ಲರೂ ಆ ಬಾಲಕರನ್ನು ಬಲು ಅಕ್ಕರೆಯಿಂದ ಶ್ಲಾಘಿಸಿದರು. ತಮ್ಮ ಹತ್ತಿರ ಇದ್ದುದನ್ನು ಅವರಿಗೆ ಕೊಟ್ಟರು. ಯಾರ ಬಳಿ ಕೊಡಲು ಯಾವ ಸಂಗತಿಯೂ ಇರದವರು ಬಾಯಿತುಂಬ ಆಶೀರ್ವದಿಸಿದರು. ಈ ಬಾಲಕರಿಗೆ ದೀರ್ಘಾಯುಸ್ಸನ್ನು ಕೋರಿದರು.

ದದುಶ್ಚೈವಂ ವರಾನ್ಸರ್ವೇ ಮುನಯಃ ಸತ್ಯವಾದಿನಃ । ೨೬

ಯಾರ ಮಾತು ಎಂದಿಗೂ ಸುಳ್ಳಾಗುವುದಿಲ್ಲವೋ ಅಂಥ ಮುನಿಗಳೆಲ್ಲರೂ ವರಗಳನ್ನು ಕೊಟ್ಟರು. ಈ ವರಗಳು ಯಾವುವು ? ಅವುಗಳ ಸ್ವರೂಪ ಯಾವದು ? ಎಷ್ಟು ವರಗಳನ್ನು ಕೊಟ್ಟರು ? ಎಂಬುದು ನಿಶ್ಚಿತವಿಲ್ಲ. ಇವು ಅಯಾಚಿತ ವರಗಳಾಗಿವೆ.

ನಿಶ್ಚಿತವಾಗಿ ಯಾವ ವರಗಳನ್ನು ಕೊಟ್ಟರು, ಅವುಗಳ ಸ್ವರೂಪ ಹಾಗೂ ಸಂಖ್ಯೆ ಸ್ಪಷ್ಟವಾಗಿಲ್ಲ.

ಕಲಶ, ವಲ್ಕಲಗಳು, ಮೃಗಚರ್ಮ, ಯಜ್ಞೋಪವೀತ, ಕಮಂಡಲು, ಮುಂಜಿಯ ನಡುಪಟ್ಟಿ, ಆಸನ, ಕೌಪೀನ, ಕೊಡಲಿ, ವಸ್ತ್ರಘಾಟ, ಜಟಾಬಂಧನ, ಕಾಷ್ಠಬಂಧನ, ಯಜ್ಞಪಾತ್ರಗಳು, ಸೌದೆ, ಅತ್ತಿಮರದ ಮಣೆ ಇತ್ಯಾದಿ ವಸ್ತುಗಳನ್ನು ಮುನಿಗಳು ಕುಶಲವರಿಗೆ ಕೊಟ್ಟರೂ ಅವುಗಳನ್ನು ವರಗಳೆಂದು ಭಾವಿಸುವದು ಸರಿಯಲ್ಲ. ಇವುಗಳ ಸ್ವರೂಪವನ್ನು ಗಮನಿಸಿದರೆ ಇವೆಲ್ಲ ಅನುಗ್ರಹಗಳೆಂದೆನ್ನಬಹುದು. ಇದೇ ಬಗೆಯಲ್ಲಿ ಮುನಿಗಳ ಕೆಲವು ಉದ್ಗಾರಗಳು ಆಶೀರ್ವಾದಗಳಂತೆ ಇವೆ ; ಆದರೆ ಇಲ್ಲಿದ್ದ ವರಗಳೆಲ್ಲ ಅಯಾಚಿತವಾಗಿದೆ.

## ೬. ಋಷ್ಯಶೃಂಗ > ರೋಮಪಾದ ಬಾಲಕಾಂಡ / ೧೦

ದಶರಥರಾಜನು ಪುತ್ರಪ್ರಾಪ್ತಿಗಾಗಿ ಅಶ್ವಮೇಧಯಾಗವನ್ನು ಮಾಡಲು ಹವಣಿಸಿದಾಗ ಸನತ್ಕುಮಾರರು ಹೇಳಿದ ಒಂದು ಐತಿಹಾಸಿಕ ಕಥೆಯನ್ನು ಸುಮಂತ್ರನು ದಶರಥನಿಗೆ ಹೇಳಿದನು. ರೋಮಪಾದ ಎಂಬಾತನು ಅಂಗದೇಶದ ರಾಜನಾಗಿದ್ದನು. ಆತನಿಂದ ಧರ್ಮದ ಉಲ್ಲಂಘನೆಯಾದಕಾರಣ ರಾಜ್ಯವು ಕಷ್ಟಕ್ಕೆ ಸಿಲುಕಿತು. ಅನಾವೃಷ್ಟಿ ಎಸಗಿತು. ಅದನ್ನು ನಿವಾರಿಸಲು ರಾಜನು ವಿದ್ಯಾವಂತ ಬ್ರಾಹ್ಮಣರೊಡನೆ ವಿಚಾರವಿನಿಮಯ ನಡೆಯಿಸಿದನು. ಅವರು ಯಾವದೊಂದು ಉಪಾಯದಿಂದ ಋಷ್ಯಶೃಂಗ ಮುನಿಯನ್ನು ರಾಜ್ಯಕ್ಕೆ ಬರಮಾಡಿಕೊಳ್ಳಲು ಸೂಚಿಸಿದರು. ಋಷ್ಯಶೃಂಗನು ಸದಾಕಾಲವೂ ವನದಲ್ಲಿಯೇ ವಾಸಿಸುತ್ತಿದ್ದನು. ಈತನು ಪಿತನಾದ ವಿಭಾಂಡಕ ಋಷಿಯನ್ನು ಹೊರತುಪಡಿಸಿ ಇನ್ಯಾವ ಬೇರೆ ಮಾನವನನ್ನು ಕಂಡಿರಲಿಲ್ಲ. ಕೆಲವು ವೇಶ್ಯೆಯರ ಸಹಾಯದಿಂದ ರಾಜನು ಋಷ್ಯಶೃಂಗಋಷಿಯನ್ನು ರಾಜ್ಯಕ್ಕೆ ಕರೆತಂದನು. ಋಷ್ಯಶೃಂಗನ ಆಗಮನವಾದೊಡನೆ ಇಂದ್ರನು ಮಳೆಗರೆದನು. ರಾಜನು ಮುನಿಯ ಪಾದಗಳಿಗೆ ತಲೆಬಾಗಿದನು. ನಂತರ ಈ ರೀತಿ ನುಡಿದನು :

ವವ್ರೇ ಪ್ರಸಾದಂ ವಿಪ್ರೇಂದ್ರಾನ್ಮಾ ವಿಪ್ರಂ ಮನ್ಯುರಾ ವಿಶೇತ್ ॥ ೩೦ ॥

"ಭೋ ಭಗವನ್ ! ನಿಮ್ಮ ಮತ್ತು ನಿಮ್ಮ ಪೂಜ್ಯ ಪಿತನ ಕೃಪಾಪ್ರಸಾದವು ನನಗೆ ಲಭಿಸಲಿ !"

ಯಾಚಿತ.

೭. ಬ್ರಹ್ಮದೇವ > ರಾವಣ

ಬಾಲಕಾಂಡ / ೧೫

ದಶರಥನ ಬಿನ್ನಹವನ್ನು ಮನ್ನಿಸಿ ಋಷ್ಯಶೃಂಗಮುನಿಯು ಪುತ್ರಪ್ರಾಪ್ತಿಯ ಸಾಧನವಾಗುವ ಇಷ್ಟಿಯನ್ನು (ಯಾಗ) ಆರಂಭಿಸಿದನು. ಅಗ್ನಿಯಲ್ಲಿ ಮಂತ್ರಸಹಿತವಾಗಿ ಹವನ ಮಾಡಿದನು. ಹವ್ಯವನ್ನು ಯಥಾವಿಧಿಯಾಗಿ ಪ್ರತಿಗ್ರಹಿಸಲು ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ಅಲ್ಲಿ ಸೇರಿದರು. ತನ್ನ ಆಂತರಿಕ ಶಕ್ತಿಯಿಂದ ಬ್ರಹ್ಮನು ಯಾರ ಕಣ್ಣಿಗೂ ಗೋಚರನಾಗದೇ ಆ ಯಜ್ಞಮಂಟಪದಲ್ಲಿ ಉಪಸ್ಥಿತನಾಗಿದ್ದನು. ಅಲ್ಲಿ ಸೇರಿದವರೆಲ್ಲರೂ ಬ್ರಹ್ಮನಿಗೆ ಈ ರೀತಿ ವಿನಯಪೂರ್ವಕವಾಗಿ ಬೇಡಿಕೊಂಡರು :

"ಹೇ ಭಗವನ್, ನಿಮ್ಮ ಕೃಪಾಪ್ರಸಾದದಿಂದ ಉನ್ಮತ್ತನಾದ ರಾವಣನೆಂಬ ರಾಕ್ಷಸನು ತನ್ನ ಬಲದಿಂದ ನಮ್ಮನ್ನೆಲ್ಲ ಪೀಡಿಸುತ್ತಿದ್ದಾನೆ.

ತ್ವಯಾ ತಸ್ಮೈ ವರೋ ದತ್ತಃ ಪ್ರೀತೇನ ಭಗವಂಸ್ತದಾ ।
ಮಾನಯಂತಶ್ಚ ತಂ ನಿತ್ಯಂ ಸರ್ವಂ ತಸ್ಯ ಕ್ಷಮಾಮಹೇ ॥ ೭ ॥

"ಹೇ ಭಗವನ್, ತಾವು ಪ್ರಸನ್ನರಾಗಿ ಆತನಿಗೆ ವರ ಕೊಟ್ಟ ಸಮಯದಿಂದ ನಿಮ್ಮ ವಚನವನ್ನು ಗೌರವಿಸಲೋಸುಗ ನಾವೆಲ್ಲರೂ ಎಲ್ಲವನ್ನೂ ಸಹನೆ ಮಾಡುತ್ತಿದ್ದೇವೆ. ಆ ದುರ್ಮತಿಯು ತ್ರೈಲೋಕ್ಯವನ್ನು ಪೀಡಿಸುತ್ತಿದ್ದು ಸ್ವರ್ಗಾಧಿಪತಿಯಾದ ಇಂದ್ರನನ್ನು ಜಯಿಸುವ ಅಭಿಲಾಷೆಯನ್ನಿಟ್ಟುಕೊಂಡಿದ್ದಾನೆ."

ಋಷೀನ್ಯಕ್ಷಾನ್ಸಗಂಧರ್ವಾನ್ಬ್ರಾಹ್ಮಣಾನಸುರಾಂಸ್ತದಾ ।
ಅತಿಕ್ರಾಮತಿ ದುರ್ಧರ್ಷೋ ವರದಾನೇನ ಮೋಹಿತಃ ॥ ೯ ॥

"ನಿಮ್ಮ ವರದಾನದಿಂದ ನಿರ್ಭೀತನಾದ ಈ ರಾಕ್ಷಸನನ್ನು ಯಾರೂ ಸೋಲಿಸುವಂತಿಲ್ಲ. ಹೀಗಾಗಿ ಈತನು ಋಷಿ, ಗಂಧರ್ವ, ಯಕ್ಷ, ಬ್ರಾಹ್ಮಣ ಮತ್ತು ಅಸುರರನ್ನು ಪೀಡಿಸಿ ತೊಂದರೆಗೀಡುಮಾಡುತ್ತಿದ್ದಾನೆ."

ದೇವತೆಗಳ ಪ್ರಾರ್ಥನೆಯನ್ನು ಕೇಳಿ ಬ್ರಹ್ಮದೇವನು ಕೊಂಚಕಾಲ ಆಲೋಚಿಸಿ ಈ ರೀತಿ ಅಂದನು : "ಆ ದುರಾತ್ಮನನ್ನು ವಧಿಸುವ ಒಂದು ಉಪಾಯವು ನನಗೆ ತೋಚಿದೆ.

ತೇನ ಗಂಧರ್ವಯಕ್ಷಾಣಾಂ ದೇವತಾನಾಂ ಚ ರಕ್ಷಸಾಮ್ ।
ಅವಧ್ಯೋऽಸ್ಮೀತಿ ವಾಗುಕ್ತಾ ತಥೇತ್ಯುಕ್ತಂ ಚ ತನ್ಮಯಾ ॥ ೧೩ ॥
ನಾಕೀರ್ತಯದವಜ್ಞಾನಾತ್ತದ್ರಕ್ಷೋ ಮಾನುಷಾಂಸ್ತದಾ ।
ತಸ್ಮಾತ್ಸ ಮಾನುಷಾದ್ವಧ್ಯೋ ಮೃತ್ಯುರ್ನಾನ್ಯೋऽಸ್ಯ ವಿದ್ಯತೇ ॥ ೧೪ ॥

" 'ಗಂಧರ್ವ, ಯಕ್ಷ, ದೇವತೆಗಳು ಮತ್ತು ರಾಕ್ಷಸರು ಇವರಿಂದ ನನಗೆ ಸಾವು ಇರಬಾರದು' ಎಂದು ಆತನು ವರವನ್ನು ಬೇಡಿದಾಗ ನಾನು 'ತಥಾಸ್ತು' ಎಂದೆನು. ರಾವಣನಿಗೆ ಮಾನವರ ಪರಿವೆ ಇರದ ಕಾರಣ ವರವನ್ನು ಬೇಡುವಾಗ ಆತನು ಮಾನವರ ಉಲ್ಲೇಖವನ್ನು ಮಾಡಲಿಲ್ಲ ; ಆದ್ದರಿಂದ ಮಾನವನಿಂದ ಅವನ ವಧೆಯಾಗುವ ಸಾಧ್ಯತೆ ಇದೆ. ಅವನನ್ನು ವಧಿಸುವದು ಬೇರೆ ಯಾರಿಗೂ ಸಾಧ್ಯವಿಲ್ಲ." ಬ್ರಹ್ಮದೇವನ ಮಾತುಗಳನ್ನು ಕೇಳಿ ದೇವತೆಯರೆಲ್ಲರೂ ಸಂತೋಷಗೊಂಡರು. ಅವರು ವಿಷ್ಣುವನ್ನು ಸ್ತುತಿಸಿ ಇಂತೆಂದರು : "ಲೋಕಹಿತಕ್ಕಾಗಿ ನಾವು ಪ್ರಾರ್ಥಿಸುತ್ತಿದ್ದೇವೆ. ನೀವು ಮಾನವಾವತಾರವನ್ನು ಧರಿಸಿ ಸಂಗ್ರಾಮದಲ್ಲಿ ರಾವಣನನ್ನು ವಧಿಸಬೇಕು ! ಇನ್ನಿತರರಿಂದ ಅವನು ಸಾಯುವಂತಿಲ್ಲ ; ಕೇವಲ ಮನುಷ್ಯರಿಂದ ಮಾತ್ರ ಆತನ ಮರಣವಿದೆಯೆಂದು ಬ್ರಹ್ಮದೇವನು ಹೇಳಿದ್ದಾನೆ."

ಬಾಲಕಾಂಡ / ೧೬

ರಾವಣನು ಪೂರ್ವದಲ್ಲಿ ಬಹುಕಾಲದವರೆಗೆ ಘೋರ ತಪಶ್ಚರ್ಯೆಯನ್ನು ಆಚರಿಸಿದ್ದನು.

ಯೇನ ತುಷ್ಟೋऽಭವದ್ ಬ್ರಹ್ಮಾ ಲೋಕಕೃಲ್ಲೋಕಪೂರ್ವಜಃ ॥ ೪ ॥
ಸಂತುಷ್ಟಃ ಪ್ರದದೌ ತಸ್ಮೈ ರಾಕ್ಷಸಾಯ ವರಂ ಪ್ರಭುಃ ।
ನಾನಾವಿಧೇಭ್ಯೋ ಭೂತೇಭ್ಯೋ ಭಯಂ ನಾನ್ಯತ್ರ ಮಾನುಷಾತ್ ॥ ೫ ॥
ಅವಜ್ಞಾತಾಃ ಪುರಾ ತೇನ ವರದಾನೇ ಹಿ ಮಾನವಾಃ ।
ಏವಂ ಪಿತಾಮಹಾತ್ತಸ್ಮಾದ್ವರದಾನೇನ ಗರ್ವಿತಃ ॥ ೬ ॥

ಉತ್ಸಾದಯತಿ ಲೋಕಾನ್ ತ್ರೀನ್ಸ್ತ್ರಿಯಶ್ಚಾಪ್ಯಪಕರ್ಷತಿ ।
ತಸ್ಮಾತ್ತಸ್ಯ ವಧೋ ದೃಷ್ಟೋ ಮಾನುಷೇಭ್ಯಃ ಪರಂತಪ ॥ ೭ ॥

ಆಗ ಲೋಕಗಳ ಆದ್ಯಜನಕನಾದ ಬ್ರಹ್ಮದೇವನು ಪ್ರಸನ್ನನಾಗಿ "ಮನುಷ್ಯನನ್ನು ಬಿಟ್ಟು ಬೇರೆ ಯಾವ ಪ್ರಾಣಿಯಿಂದಲೂ ನಿನಗೆ ಭಯವಿಲ್ಲ !" ಎಂಬ ವರವನ್ನು ಆತನಿಗೆ ಕೊಟ್ಟನು ; ಏಕೆಂದರೆ ಆ ರಾಕ್ಷಸನು ವರವನ್ನು ಬೇಡುವಾಗ ಮನುಷ್ಯನನ್ನು ಲೆಕ್ಕಿಸಿರಲಿಲ್ಲ ; ಈ ರೀತಿ ವರವನ್ನು ಬ್ರಹ್ಮನಿಂದ ಪಡೆದನಂತರ ಈ ರಾಕ್ಷಸನು ಗರ್ವಿಷ್ಠನಾಗಿ ಮೂರು ಲೋಕಗಳನ್ನೂ ಧ್ವಂಸಗೊಳಿಸುತ್ತಿದ್ದು ಪರರ ಸ್ತ್ರೀಯರನ್ನೂ ಈತನು ಎಳೆದೊಯ್ಯಲಾರಂಭಿಸಿದ್ದಾನೆ. ಹೀಗಿರುವದರಿಂದ, ಹೇ ಶತ್ರುತಾಪನನೇ, ಮನುಷ್ಯನಿಂದಲೇ ಆತನ ವಧೆ ನಡೆಯುವದು ಖಂಡಿತ."

ಬಾಲಕಾಂಡ / ೨೦

ಪುಲಸ್ತ್ಯಕುಲದಲ್ಲಿ ಜನಿಸಿದ ರಾವಣನಿಗೆ ಬ್ರಹ್ಮದೇವನಿಂದ ವರ ದೊರೆತ ಒಂದು ಉಲ್ಲೇಖ—

ಪೌಲಸ್ತ್ಯವಂಶಪ್ರಭವೋ ರಾವಣೋ ನಾಮ ರಾಕ್ಷಸಃ ।
ಸ ಬ್ರಹ್ಮಾ ದತ್ತ ವರಸ್ತ್ರೈಲೋಕ್ಯಂ ಬಾಧತೇ ಭೃಶಮ್ ॥ ೧೬ ॥

ಅರಣ್ಯಕಾಂಡ / ೫೪

ಇನ್ನೊಂದು ಉಲ್ಲೇಖ —

ಸ ತಾನ್ ದೃಷ್ಟ್ವಾ ಮಹಾವೀರ್ಯೋ ವರದಾನೇನ ಮೋಹಿತಃ । ೧೯

ಯುದ್ಧಕಾಂಡ / ೭೬

ಸುಗ್ರೀವನು ಕುಂಭನೊಡನೆ ಮಾತನಾಡುವಾಗ ರಾವಣನು ಪಡೆದ ವರದ ಉಲ್ಲೇಖ ಮಾಡುತ್ತಾನೆ.

ವರದಾನಾತ್ ಪಿತೃವ್ಯಸ್ತೇ ಸಹತೇ ದೇವದಾನವಾನ್ । ೭೫

ಕೇವಲ ವರ ದೊರೆತ ಕಾರಣ ನಿನ್ನ ದೊಡ್ಡಪ್ಪನಾದ ರಾವಣನು ದೇವದಾನವರ ವೇಗವನ್ನು ಸಹಿಸುವನು.

ಉತ್ತರಕಾಂಡ / ೯, ೧೦

ರಾವಣನ ತಾಯಿಯಾದ ಕೈಕಸಿಯು, ವೈಶ್ರವಣನಂತೆ ಆಗಲು ಯತ್ನಿಸೆಂದು ರಾವಣನಿಗೆ ಉಪದೇಶಿಸಿದಳು. ರಾವಣನು ತಾಯಿಯ ಉಪದೇಶಕ್ಕೆ ತಲೆಬಾಗಿ ಅವಳ ಇಚ್ಛೆಯನ್ನು ಗೌರವಿಸುವಂತೆ ಪ್ರತಿಜ್ಞೆಯನ್ನು ಮಾಡಿದನು. ಬ್ರಹ್ಮದೇವನನ್ನು ಪ್ರಸನ್ನಗೊಳಿಸಲು ಗೋಕರ್ಣಕ್ಕೆ ಹೋಗಿ ಘೋರ ತಪಸ್ಸನ್ನು ಆಚರಿಸಬೇಕೆಂದು ನಿಶ್ಚಯಿಸಿದನು.

ಸ ರಾಕ್ಷಸಸ್ತತ್ರ ಸಹಾನುಜಸ್ತದಾ ತಪಶ್ಚಚಾರಾತುಲಮುಗ್ರವಿಕ್ರಮಃ ।
ಅತೋಷ ಯಚ್ಚಾಪಿ ಪಿತಾಮಹಂ ವಿಭುಂ ದದೌ ಸ ತುಷ್ಟಶ್ಚ ವರಾಞ್ಜಯಾವಹಾನ್ ॥ ೪೮ ॥

ಬಂಧುಗಳನ್ನೊಡಗೂಡಿದ ಆ ಪರಾಕ್ರಮಿಯಾದ ರಾಕ್ಷಸನು, ಅಲ್ಲಿ ಘೋರತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಪ್ರಸನ್ನಗೊಳಿಸಿದನು. ಸಂತೋಷಗೊಂಡ ಬ್ರಹ್ಮದೇವನು ರಾವಣನಿಗೆ ಜಯಪ್ರದವಾದ ವರಗಳನ್ನು ಕೊಟ್ಟನು. ಅಷ್ಟೇ ಅಲ್ಲದೆ—

ಉತ್ತರಕಾಂಡ / ೧೦

ಶ್ರೀರಾಮನು ಕೇಳಿದ ಕಾರಣ ಅಗಸ್ತ್ಯಮುನಿಯು, ರಾವಣನ ತಪಶ್ಚರ್ಯೆಯ ಬಗ್ಗೆ ಆತನಿಗೆ ವಿವರಿಸುತ್ತಿದ್ದಾನೆ.

ಯಾವ ಆಹಾರಪಾನೀಯಗಳನ್ನೂ ಸೇವಿಸದೆ ರಾವಣನು ಹತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಆಚರಿಸಿದನು. ಒಂದು ಸಹಸ್ರ ವರ್ಷದ ತಪಸ್ಸಿಗೊಮ್ಮೆ ಅಗ್ನಿದೇವತೆಗೆ ತನ್ನ ಒಂದು ಶಿರವನ್ನು ಹವನ ಮಾಡುತ್ತಿದ್ದನು. ಈ ರೀತಿ ಒಂಬತ್ತು ಸಾವಿರ ವರ್ಷಗಳು ಮುಗಿದಾಗ ತನ್ನ ಒಂಬತ್ತು ಶಿರಗಳನ್ನು ಅರ್ಪಿಸಿದ್ದನು. ಹತ್ತುಸಾವಿರ ವರ್ಷಗಳು ಪೂರ್ತಿಗೊಂಡಾಗ ರಾವಣನು ತನ್ನ ಹತ್ತನೆಯ ಶಿರವನ್ನು ಅಗ್ನಿದೇವತೆಗೆ ಅರ್ಪಿಸಲು ಸಿದ್ಧನಾದನು. ಆಗ ಸಕಲದೇವತೆಗಳ ಸಮೇತ ಬ್ರಹ್ಮದೇವನು ರಾವಣನ ಎದುರು ಪ್ರಕಟನಾಗಿ, "ಹೇ ದಶಗ್ರೀವನೇ, ನಾನು ಪ್ರಸನ್ನನಾಗಿದ್ದೇನೆ" ಎಂದನು.

ಶೀಘ್ರಂ ವರಯ ಧರ್ಮಜ್ಞ ವರೋ ಯಸ್ತೇऽಭಿಕಾಂಕ್ಷಿತಃ ।
ಕಿಂ ತೇ ಕಾಮಂ ಕರೋಮ್ಯದ್ಯ ನ ವೃಥಾ ತೇ ಪರಿಶ್ರಮಃ ॥ ೧೪ ॥

"ಹೇ ಧರ್ಮಜ್ಞನೇ, ನಿನಗೆ ಇಷ್ಟವಾದ ವರವನ್ನು ಸತ್ವರವಾಗಿ ಬೇಡಿಕೊ ! ನಿನ್ನ ಪರಿಶ್ರಮವು ವ್ಯರ್ಥವಾಗದಂತೆ ನಿನ್ನ ಯಾವ ಮನೋರಥವನ್ನು ಈಡೇರಿಸಲಿ ?"

ಸಂತೋಷಗೊಂಡ ರಾವಣನು ಶಿರಬಾಗಿ ಬ್ರಹ್ಮದೇವನಿಗೆ ಈ ರೀತಿ ಎಂದನು :

ಭಗವನ್ಪ್ರಾಣಿನಾಂ ನಿತ್ಯಂ ನಾನ್ಯತ್ರ ಮರಣಾದ್ ಭಯಮ್ ।
ನಾಸ್ತಿ ಮೃತ್ಯುಸಮಃ ಶತ್ರುರಮರತ್ವಮಹಂ ವೃಣೇ ॥ ೧೬ ॥

"ಹೇ ಭಗವನ್, ಮರಣಕ್ಕಿಂತ ಹೆಚ್ಚಿನ ಭಯವು ಪ್ರಾಣಿಮಾತ್ರರಿಗಿಲ್ಲ ; ಮೃತ್ಯುವಿನಂತಹ ಶತ್ರು ಬೇರೆ ಯಾರೂ ಇಲ್ಲ ; ಆ ಕಾರಣ ನಾನು ಅಮರತ್ವವನ್ನು ಬೇಡುತ್ತೇನೆ."

ರಾವಣನು ಈ ರೀತಿಯ ವರವನ್ನು ಕೇಳಿದಾಗ,

ನಾಸ್ತಿ ಸರ್ವಾಮರತ್ವಂ ತೇ ವರಮನ್ಯಂ ವೃಣೀಶ್ವ ಮೇ ॥ ೧೭ ॥

"ಪೂರ್ಣ ಅಮರತ್ವವು ದೊರಕುವದು ಸಾಧ್ಯವಿಲ್ಲ ! ನೀನು ಇನ್ನೊಂದು ವರವನ್ನು ಬೇಡು !" ಎಂದು ಬ್ರಹ್ಮನು ಹೇಳಿದಾಗ ರಾವಣನು ಕರಾಂಜಲಿಬದ್ಧನಾಗಿ ಈ ರೀತಿ ಕೇಳಿದನು :

ಸುಪರ್ಣನಾಗಯಕ್ಷಾಣಾಂ ದೈತ್ಯದಾನವರಕ್ಷಸಾಮ್ ।
ಅವಧ್ಯೋऽಹಂ ಪ್ರಜಾಧ್ಯಕ್ಷ ದೇವತಾನಾಂ ಚ ಶಾಶ್ವತ ॥ ೧೯ ॥
ನ ಹಿ ಚಿಂತಾ ಮಮಾನ್ಯೇಷು ಪ್ರಾಣಿಷ್ವಮರಪೂಜಿತ ।
ತೃಣಭೂತಾ ಹಿ ತೇ ಮನ್ಯೇ ಪ್ರಾಣಿನೋ ಮಾನುಷಾದಯಃ ॥ ೨೦ ॥

"ಹೇ ಪ್ರಜಾಧಿಪತಿಯೇ, ಹೇ ಸನಾತನನೇ, ಗರುಡ, ನಾಗ, ಯಕ್ಷ, ದೈತ್ಯ, ದಾನವ, ರಾಕ್ಷಸ ಮತ್ತು ದೇವತೆಗಳಿಂದ ನನ್ನ ವಧೆ ನಡೆಯಕೂಡದು ! ಹೇ ದೇವಗಣ್ಯನೇ, ಇನ್ನಿತರ ಪ್ರಾಣಿಗಳ ಭಯ ನನಗಿಲ್ಲ. ಮನುಷ್ಯಾದಿ ಪ್ರಾಣಿಗಳು ನನಗೆ ಕಸದ ಸಮಾನ" ಎಂದನು. ಆಗ ಬ್ರಹ್ಮನು "ನೀನು ಕೇಳಿದುದೆಲ್ಲವೂ ಆಗುವದು !" ಎಂಬ ಆಶ್ವಾಸನೆಯನ್ನಿತ್ತನು.

ಆಗ ದೇವತೆಗಳು, ಯಕ್ಷ, ರಾಕ್ಷಸ, ಋಷಿ, ಮಾನವಾದಿ ಸಮೂಹಗಳಲ್ಲಿ ಈ ವರದ ಬಗ್ಗೆ ಭಿನ್ನಭಿನ್ನ ಪ್ರತಿಕ್ರಿಯೆಗಳು ಪ್ರಕಟವಾದವೆಂದು ಕಂಡುಬಂದಿದೆ.

ಶ್ರುಣು ಚಾಪಿ ವರೋ ಭೂಯಃ ಪ್ರೀತಸ್ಯೇಹ ಶುಭೋ ಮಮ ।
ಹುತಾನಿ ಯಾನಿ ಶೀರ್ಷಾಣಿ ಪೂರ್ವಮಗ್ನೌ ತ್ವಯಾನಘ ॥ ೨೩ ॥
ಪುನಸ್ತಾನಿ ಭವಿಷ್ಯಂತಿ ತಥೈವ ತವ ರಾಕ್ಷಸ ।
ವಿತರಾಮೀಹ ತೇ ಸೌಮ್ಯ ವರಂ ಚಾನ್ಯಂ ದುರಾಸದಮ್ ॥ ೨೪ ॥
ಛಂದತಸ್ತವ ರೂಪಂ ಚ ಮನಸಾ ಯದ್ಯಥೇಪ್ಸಿತಮ್ । ೨೫

"ನಿನ್ನಲ್ಲಿ ಪ್ರಸನ್ನನಾದ ನಾನು ಇನ್ನೊಂದು ವರವನ್ನು ಕೊಡುತ್ತೇನೆ ; ಕೇಳು ! ಹೇ ನಿಷ್ಪಾಪನೇ, ಈ ಮೊದಲು ನೀನು ನಿನ್ನ ಶಿರಗಳನ್ನು ಅಗ್ನಿಯಲ್ಲಿ ಸಮರ್ಪಿಸಿರುವೆ ; ಆ ಶಿರಗಳು ನಿನಗೆ ಮೊದಲಿದ್ದಂತೆ ಪ್ರಾಪ್ತವಾಗುವವು ! ಹೇ ವಿನಯಸಂಪನ್ನನೇ, ನೀನು, ನಿನ್ನ ಇಚ್ಛೆಯನುಸಾರ, ನಿನಗೆ ಇಷ್ಟವಿದ್ದ ರೂಪವನ್ನು

ಧರಿಸಬಹುದಾದ ಇನ್ನೊಂದು ದುರ್ಲಭವಾದ ವರವನ್ನು ನಿನಗೆ ಕೊಡುತ್ತಿದ್ದೇನೆ" ಎಂದು ಬ್ರಹ್ಮದೇವನು ಹೇಳಿದನು.

ಉತ್ತರಕಾಂಡ / ೧೬

ಶಂಕರನ ಬಳಿ ವರವನ್ನು ಬೇಡುವಾಗ ರಾವಣನು ಬ್ರಹ್ಮದೇವನಿಂದ ಪಡೆದ ವರದ ಉಲ್ಲೇಖವನ್ನು ಈ ರೀತಿ ಮಾಡಿದ್ದಾನೆ :

ಅವಧ್ಯತ್ವಂ ಮಯಾ ಪ್ರಾಪ್ತಂ ದೇವಗಂಧರ್ವದಾನವೈಃ ।
ರಾಕ್ಷಸೈರ್ಗುಹ್ಯಕೈರ್ನಾಗೈರ್ಯೇ ಚಾನ್ಯೇ ಬಲವಂತರಾಃ ॥ ೪೧ ॥
ಮನುಷ್ಯಾನ್ ನ ಗಣೇ ದೇವ ಸ್ವಲ್ಪಾಸ್ತೇ ಮಮ ಸಮ್ಮತಾಃ ।
ದೀರ್ಘಮಾಯುಶ್ಚ ಮೇ ಪ್ರಾಪ್ತಂ ಬ್ರಹ್ಮಣಸ್ತ್ರಿಪುರಾಂತಕ ॥ ೪೨ ॥

ದೇವತೆಗಳು, ಗಂಧರ್ವ, ದಾನವ, ರಾಕ್ಷಸ, ಗುಹ್ಯಕ, ನಾಗ ಹಾಗೂ ಬೇರೆ ಹಲವು ಬಲಿಷ್ಠ ಪ್ರಾಣಿಗಳಿಂದ ನನಗೆ ಸಾವು ಬರಕೂಡದು ಎಂಬ ವರವನ್ನು ನಾನು ಪಡೆದುಕೊಂಡಿದ್ದೇನೆ. ನನ್ನ ಲೆಕ್ಕದಲ್ಲಿ ಮಾನವನ ಪಾಡೇನು ? ಅವನ ಸಾಮರ್ಥ್ಯ ನನ್ನ ದೃಷ್ಟಿಯಲ್ಲಿ ಯಃಕಶ್ಚಿತ. ಭೋ ! ತ್ರಿಪುರಾಂತಕನೆ, ಬ್ರಹ್ಮದೇವನಿಂದ ದೀರ್ಘಾಯುಷ್ಯವು ಲಭಿಸಿದೆ.

ಯಾಚಿತ.

## ಪ್ರತಿಕ್ರಿಯೆಗಳು

**ಶ್ರೀರಾಮ** ಯುದ್ಧಕಾಂಡ / ೩೭

ರಾವಣನು ಲಂಕೆಯ ಸಂರಕ್ಷಣೆಗಾಗಿ ಕೈಕೊಂಡ ಏರ್ಪಾಡುಗಳ ಬಗೆಗೆ ವಿಭೀಷಣ ಶ್ರೀರಾಮನಿಗೆ ಹೇಳುತ್ತಾನೆ. ಆಗ ಶ್ರೀರಾಮನು ತಾನು ಯೋಜಿಸಿದ ಸೈನ್ಯರಚನೆಯನ್ನು ಕುರಿತು ವಿವರಿಸುತ್ತಾನೆ —

ಲಂಕೆಯ ಪೂರ್ವದ್ವಾರದಲ್ಲಿ ನೀಲನು, ದಕ್ಷಿಣದ್ವಾರದಲ್ಲಿ ಅಂಗದನು, ಪಶ್ಚಿಮದ್ವಾರದಲ್ಲಿ ಅತರ್ಕ್ಯರೂಪದಲ್ಲಿ ಹನುಮಂತನು, ಈ ರೀತಿ ಅನೇಕ ವಾನರರ ಸಹಿತವಾಗಿ ರಾಕ್ಷಸರ ಮೇಲೆ ಏರಿಹೋಗಬೇಕು !

ದೈತ್ಯದಾನವಸಂಘಾನಾಮೃಷೀಣಾಂ ಚ ಮಹಾತ್ಮನಾಮ್ ।
ವಿಪ್ರಕಾರಪ್ರಿಯಃ ಕ್ಷುದ್ರೋ ವರದಾನಬಲಾನ್ವಿತಃ ॥ ೨೯ ॥
ಪರಿಕ್ರಮತಿ ಯಃ ಸರ್ವಾಂಲ್ಲೋಕಾನ್ಸಂತಾಪಯನ್ಪ್ರಜಾಃ ।
ತಸ್ಯಾಹಂ ರಾಕ್ಷಸೇಂದ್ರಸ್ಯ ಸ್ವಯಮೇವ ವಧೇ ಧೃತಃ ॥ ೩೦ ॥

ವರಪ್ರಾಪ್ತಿಯಾದ್ದರಿಂದ ಬಲಗೊಂಡ ಆ ನೀಚನು, ದೈತ್ಯ, ದಾನವ ಮತ್ತು ಮಹಾತ್ಮರಾದ ಋಷಿಗಳನ್ನೂ ಪೀಡಿಸುವದರಲ್ಲಿ ಆನಂದಪಡೆಯುತ್ತಾನೆ. ಪ್ರಜೆಗಳಿಗೆ ದುಃಖವನ್ನುಂಟುಮಾಡಿ ಅವರ ಪ್ರದೇಶಗಳನ್ನು ವಶಮಾಡಿಕೊಳ್ಳುತ್ತಾನೆ. ಆ ರಾಕ್ಷಸಾಧಿಪತಿಯಾದ ರಾವಣನನ್ನು ವಧಿಸುವ ನಿರ್ಧಾರವನ್ನು ಮಾಡಿದ್ದೇನೆ. ಸೈನ್ಯದೊಡನೆ ರಾವಣನು ಇರುವ ನಗರದ ಉತ್ತರದ್ವಾರದ ಮೇಲೆ ದಾಳಿಮಾಡಿ ಲಕ್ಷ್ಮಣನೊಡನೆ ಒಳಗೆ ಪ್ರವೇಶಿಸುವೆ.

ಯುದ್ಧಕಾಂಡ / ೪೧

ರಾಕ್ಷಸರನ್ನು ಕೊಲ್ಲಲು ಶ್ರೀರಾಮನು ಸೈನ್ಯವನ್ನು ಸಜ್ಜುಗೊಳಿಸಿದನು. ಯುದ್ಧವನ್ನು ಪ್ರಾರಂಭಿಸುವ ಮೊದಲು, ರಾಮನು ಮಾತುಕತೆಗೆಂದು ಅಂಗದನನ್ನು ರಾವಣನ ಬಳಿಗೆ ಕಳುಹಿದನು. "ಸಮುದ್ರವನ್ನು ದಾಟಿ ನಿರ್ಭಯನಾಗಿ ನಾನು ನಿನ್ನ ಲಂಕಾನಗರಕ್ಕೆ ಬಂದಿದ್ದೇನೆ" ಎಂದು ರಾವಣನಿಗೆ ತಿಳಿಸೆಂದು ಹೇಳಿದನು.

ಋಷೀಣಾಂ ದೇವತಾನಾಂ ಚ ಗಂಧರ್ವಾಪ್ಸರಸಾಂ ತಥಾ ।
ನಾಗಾನಾಮಥ ಯಕ್ಷಾಣಾಂ ರಾಜ್ಞಾಂ ಚ ರಜನೀಚರ ॥ ೬೨ ॥
ಯಚ್ಚ ಪಾಪಂ ಕೃತಂ ಮೋಹಾದವಲಿಪ್ತೇನ ರಾಕ್ಷಸ ।
ನೂನಂ ತೇ ವಿಗತೋ ದರ್ಪಃ ಸ್ವಯಂಭೂವರದಾನಜಃ ।
ತಸ್ಯ ಪಾಪಸ್ಯ ಸಂಪ್ರಾಪ್ತಾ ವ್ಯಷ್ಟಿರದ್ಯ ದುರಾಸದಾ ॥ ೬೩ ॥

"ಹೇ ನಿಶಾಚರನೇ, ಬ್ರಹ್ಮದೇವನ ವರದಿಂದ ಮುಕ್ತನಾಗಿದ್ದ ನೀನು, ಮೂರ್ಖತನದಿಂದ ಋಷಿ, ದೇವತೆ, ಗಂಧರ್ವ, ಅಪ್ಸರೆಯರು, ನಾಗ, ಯಕ್ಷ ಮತ್ತು ರಾಜರುಗಳನ್ನು ಪೀಡಿಸಿರುವೆ. ಬ್ರಹ್ಮದೇವನ ವರದಿಂದ ಉಂಟಾದ ನಿನ್ನ ಅಹಂಕಾರವು ನಿಜವಾಗಿಯೂ ಇಂದು ನಾಶವಾಗುವದು."

ಯುದ್ಧಕಾಂಡ / ೧೨೩

ಸುಗ್ರೀವ, ವಿಭೀಷಣ, ಅನೇಕ ವಾನರರು, ಋಕ್ಷ (ಕರಡಿ) ಮುಂತಾದವರನ್ನು ಕೂಡಿಕೊಂಡು, ಶ್ರೀರಾಮನು ಸೀತೆಯ ಸಹಿತ ಕುಬೇರನ ಪುಷ್ಪಕವಿಮಾನವನ್ನು ಏರಿದನು. ಆತನ ಅಪ್ಪಣೆಯಂತೆ ಆ ವಿಮಾನವು ಆಕಾಶದಲ್ಲಿ ಸಂಚರಿಸಲಾರಂಭಿಸಿತು ; ಆಗ ಶ್ರೀರಾಮನು ಸೀತೆಯನ್ನು ಕುರಿತು, "ವೈದೇಹಿ, ಇತ್ತ ಅವಲೋಕಿಸು ! ಕೈಲಾಸಶಿಖರದಂತೆ ಭಾಸವಾಗುವ ಈ ತ್ರಿಕುಟಾಚಲದ ಶಿಖರದ ಮೇಲೆ, ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಈ ಲಂಕೆಯನ್ನು ನೋಡು ! ಅದೇ ರೀತಿ ವಾನರರು ಮತ್ತು ರಾಕ್ಷಸರಲ್ಲಿ ನಡೆದ ಘೋರ ಹತ್ಯಾಕಾಂಡದಿಂದಾದ ರಕ್ತ-ಮಾಂಸಗಳ ಕೆಸರಿನ ಮಡುವುಗಳನ್ನು ಅವಲೋಕಿಸು !

ಏಷ ದತ್ತವರಃ ಶೇತೇ ಪ್ರಮಾಥೀ ರಾಕ್ಷಸೇಶ್ವರಃ ।
ತವ ಹೇತೋರ್ವಿಶಾಲಾಕ್ಷಿ ನಿಹತೋ ರಾವಣೋ ಮಯಾ ॥ ೫ ॥

"ಹೇ ವಿಶಾಲನಯನೇ, ವರ ಪಡೆದು ಮಹಾಬಲಾಢ್ಯನಾದ ರಾಕ್ಷಸಾಧಿಪತಿ ರಾವಣನು ನಿನ್ನ ಕಾರಣದಿಂದ ಇಲ್ಲಿಯೇ ವಧಿಸಲ್ಪಟ್ಟಿದ್ದಾನೆ."

## ದೇವತೆಗಳು

ಉತ್ತರಕಾಂಡ / ೧೮

ವೇದವತಿಯು ಅಗ್ನಿಪ್ರವೇಶವನ್ನು ಮಾಡಿದನಂತರ, ರಾವಣನು ಪುಷ್ಪಕವಿಮಾನದಲ್ಲಿ ಕುಳಿತು ಪೃಥ್ವಿಯ ಪರ್ಯಟನಕ್ಕೆ ಹೊರಟನು. ಅವನು 'ಉಶಿರಬೀಜ'ವೆಂಬ ದೇಶದಲ್ಲಿ ಮರುತರಾಜನು ದೇವತೆಗಳ ಸಹಿತವಾಗಿ ಯಜ್ಞವನ್ನು ಮಾಡುತ್ತಿರುವದನ್ನು ಕಂಡನು. ಬೃಹಸ್ಪತಿಯ ಬಂಧುವಾದ ಸಂವರ್ತ ಮಹರ್ಷಿಯು ಅಲ್ಲಿ ಪುರೋಹಿತನಾಗಿದ್ದನು.

ದೃಷ್ಟ್ವಾ ದೇವಾಸ್ತು ತದ್ರಕ್ಷೋ ವರದಾನೇನ ದುರ್ಜಯಮ್ ।
ತಿರ್ಯಗ್ಯೋನಿಂ ಸಮಾವಿಷ್ಟಾಸ್ತಸ್ಯ ಧರ್ಷಣಭೀರವಃ । ೪

ವರಪ್ರಾಪ್ತಿಯ ಮೂಲಕ ಜಯಿಸಲಸಾಧ್ಯನಾದ ಆ ರಾಕ್ಷಸನನ್ನು ಕಂಡಕೂಡಲೇ ಆತನಿಂದ ಹಲ್ಲೆ ನಡೆಯಬಹುದೆಂಬ ಭಯದಿಂದ ದೇವತೆಗಳು ಪಕ್ಷಿಗಳ ರೂಪವನ್ನು ಧರಿಸಿದರು. ಇಂದ್ರನು ನವಿಲು ಪಕ್ಷಿಯಾದನು ; ಯಮನು ಕಾಗೆಯಾದನು ; ಧನಾಧ್ಯಕ್ಷನಾದ ಕುಬೇರನು ಓತಿಕೇತದ ರೂಪವನ್ನು ಧರಿಸಿದನು ; ವರುಣನು ಹಂಸರೂಪವನ್ನು ಸ್ವೀಕರಿಸಿದನು.

## ಮರುತರಾಜ

ಉತ್ತರಕಾಂಡ / ೧೮

ರಾವಣನು ಯಜ್ಞಮಂಟಪದಲ್ಲಿ ಪ್ರವೇಶಿಸಿ ಮರುತರಾಜನಿಗೆ "ಯುದ್ಧಕ್ಕೆ ಸಜ್ಜಾಗು ! ಅಥವಾ ಪರಾಭವವನ್ನು ಒಪ್ಪಿಕೋ !" ಎಂದು ಆಹ್ವಾನಿಸಿದನು. ಆಗ ಮರುತರಾಜನು "ನೀನು ಯಾರು ?" ಎಂದು ಕೇಳಿದಾಗ ಗರ್ವೋನ್ಮತ್ತನಾದ ರಾವಣನು ತಾನು ರಾಕ್ಷಸಶ್ರೇಷ್ಠನಿದ್ದು, ಬಂಧುವಾದ ಕುಬೇರನನ್ನು ಸೋಲಿಸಿ ಆತನ ಪುಷ್ಪಕವಿಮಾನವನ್ನು ಕಸಿದುತಂದಿದ್ದೇನೆಂದು ಹೇಳಿ, ತನ್ನಂಥ ಬಲಾಢ್ಯ ರಾಕ್ಷಸಾಧಿಪತಿಯನ್ನು ಗುರುತಿಸ

ರಿರುವ ಬಗೆಗೆ ಮರುತರಾಜನ ಅಪಹಾಸ್ಯವನ್ನು ಮಾಡಿದನು. ಆಗ ಮರುತರಾಜನು, "ಹಿರಿಯ ಬಂಧುವನ್ನು ರಣರಂಗದಲ್ಲಿ ಗದ್ದ ನೀನು ಧನ್ಯನು ! ನಿನ್ನಂತೆ ಸ್ತುತಿಗೆ ಯೋಗ್ಯರು ಬೇರೆ ಯಾರೂ ಇರಲಿಕ್ಕಿಲ್ಲ !" ಎಂದನು.

ಕಂ ತ್ವಂ ಪ್ರಾಕ್ಕೇವಲಂ ಧರ್ಮಂ ಚರಿತ್ವಾ ಲಬ್ಧವಾನ್ವರಮ್ । ೧೨

"ಈ ಮೊದಲು ಕೇವಲ ತಪಸ್ಸನ್ನಾಚರಿಸಿ ಅದೆಂಥ ವರವನ್ನು ಪಡೆದುಕೊಂಡಿರುವೆ ? ನೀನು ಏನೆಲ್ಲ ಹೇಳಿದೆಯೋ ಆ ರೀತಿ ನಾನು ಈ ಮೊದಲು ಎಂದಿಗೂ ಕೇಳಿಲ್ಲ. ಎಲೈ ದುರ್ಬುದ್ಧಿಯೇ, ನನ್ನ ಕೈಯಿಂದ ನೀನು ಇಂದು ಜೀವಿತವಾಗಿ ಹಿಂದಿರುಗಲಾರೆ! ನನ್ನ ತೀಕ್ಷ್ಣಬಾಣಗಳಿಂದ ನಾನು ನಿನ್ನನ್ನು ಯಮಸದನಕ್ಕಟ್ಟುವೆನು." ಹೀಗೆಂದು ಮರುತರಾಜನು ಯುದ್ಧಕ್ಕೆ ಸಿದ್ಧನಾದನು. ಆಗ ಪುರೋಹಿತನಾದ ಸಂವರ್ತನು ಆತನನ್ನು ಪರಾವೃತ್ತಗೊಳಿಸಿದನು ; ಏಕೆಂದರೆ ಯಜ್ಞದೀಕ್ಷೆಯನ್ನು ಸ್ವೀಕರಿಸಿದವನಿಗೆ ಯುದ್ಧದ ಅಧಿಕಾರ ಉಳಿಯುವುದಿಲ್ಲ. ಗುರುವಿನ ಆಜ್ಞೆಯನ್ನು ಮನ್ನಿಸಿ ಆ ಮರುತರಾಜನು ಧನುಸ್ಸನ್ನು ಬಿಚ್ಚಿಹಾಕಿದನು.

## ಬ್ರಹ್ಮದೇವ — ಉತ್ತರಕಾಂಡ / ೯

ರಾವಣನ ತಪಸ್ಸಿನಿಂದ ಸಂತುಷ್ಟನಾದ ಬ್ರಹ್ಮದೇವನು ಆತನಿಗೆ ವರ ನೀಡಿದ ಒಂದು ಉಲ್ಲೇಖ...

ದದೌ ಸ ತುಷ್ಟಶ್ಚ ವರಾಂಜಯಾವಹಾನ್ ॥ ೪೮ ॥

ಧರ್ಮರಾಜ ಯಮ ಮತ್ತು ರಾವಣ ಇವರಲ್ಲಿ ಯುದ್ಧ ನಡೆದಾಗ ರಾಕ್ಷಸನನ್ನು ನಿರ್ಮೂಲಗೊಳಿಸಲು ಯಮನು ಅಮೋಘವಾದ ಕಾಲದಂಡವನ್ನು ಎತ್ತಿಕೊಂಡನು. ಕೇವಲ ದೃಷ್ಟಿಕ್ಷೇಪದಿಂದ ಪ್ರಾಣಾಪಹರಣವನ್ನು ಮಾಡುವ ಶಕ್ತಿಯು ಆ ಕಾಲದಂಡದಲ್ಲಿತ್ತು. ಅಂತಹ ಕಾಲದಂಡದಿಂದ ರಾವಣನನ್ನು ದಹಿಸಲು ಯಮನು ಸಿದ್ಧನಾದಾಗ ಬ್ರಹ್ಮದೇವನು ಪ್ರತ್ಯಕ್ಷನಾಗಿ ಈ ರೀತಿ ಅಂದನು —

ವೈವಸ್ವತ ಮಹಾಬಾಹೋ ನ ಖಲ್ವಮಿತವಿಕ್ರಮ ।
ನ ಹಂತವ್ಯಸ್ತ್ವಯೈತೇನ ದಂಡೇನೈಷ ನಿಶಾಚರಃ ॥ ೩೯ ॥
ವರಃ ಖಲು ಮಯೈತಸ್ಮೈ ದತ್ತಸ್ತ್ರಿದಶಪುಂಗವ ।
ಸ ತ್ವಯಾ ನಾನೃತಃ ಕಾರ್ಯೋ ಯನ್ಮಯಾ ವ್ಯಾಹೃತಂ ವಚಃ ॥ ೪೦ ॥

"ಹೇ ಮಹಾಪರಾಕ್ರಮಿಯಾದ ವೈವಸ್ವತನೇ, ಹೇ ಅತುಲವಿಕ್ರಮನೇ, ಈ ದಂಡದಿಂದ ನೀನು ಈ ರಾಕ್ಷಸನನ್ನು ವಧಿಸಬೇಡ ! ಎಲೈ ಸುರಶ್ರೇಷ್ಠನೇ, ಹೀಗೆ ಮಾಡುವದರಿಂದ ನಾನು ರಾವಣನಿಗೆ ಕೊಟ್ಟ ನಿಜವಾದ ವರವು ಅಸತ್ಯವೆನಿಸುವದು.

"ನನ್ನ ವಚನವನ್ನು ಅಸತ್ಯಗೊಳಿಸುವವನು ದೇವತೆಯೇ ಆಗಿರಲಿ, ಮಾನವನೇ ಆಗಿರಲಿ, ಆತನು ತ್ರೈಲೋಕ್ಯವನ್ನು ಅಸತ್ಯಗೊಳಿಸಿದ ಪಾಪಕ್ಕೆ ಗುರಿಯಾಗುವನು. ಈ ದಂಡದ ಏಟಿನಿಂದ ಯಾರೂ ಕ್ಷಣ ಮಾತ್ರವೂ ಬದುಕಿರಲಾರರು ; ಆದ್ದರಿಂದ ನೀನು ರಾವಣನ ತಲೆಯ ಮೇಲೆ ಈ ದಂಡದ ಪ್ರಹಾರವನ್ನು ಮಾಡಬೇಡ ! ಇದರಿಂದ ರಾಕ್ಷಸನು ಸತ್ತರೆ ಇಲ್ಲವೇ ಒಂದುವೇಳೆ ಸಾಯದಿದ್ದರೂ ನನ್ನ ವಚನವು ಸುಳ್ಳಾಗುವದು ಖಂಡಿತ ; ಆದ್ದರಿಂದ ನೀನು ಈ ದಂಡವನ್ನು ಹಿಂತೆಗೆದುಕೋ !" ಬ್ರಹ್ಮದೇವನ ವಿನಂತಿಯ ಮೇರೆಗೆ ಯಮನು ಕಾಲದಂಡವನ್ನು ಹಿಂದೆ ತೆಗೆದುಕೊಂಡನು. ಯಮನು ಬ್ರಹ್ಮದೇವನಿಗೆ ಈ ರೀತಿ ಹೇಳಿದನು—

ಕಿಂತ್ವಿದಾನೀಂ ಮಯಾ ಶಕ್ಯಂ ಕರ್ತುಂ ರಣಗತೇನ ಹಿ ।
ನ ಮಯಾ ಯದ್ಯಯಂ ಶಕ್ಯೋ ಹಂತುಂ ವರಪುರಸ್ಕೃತಃ ॥ ೪೫ ॥

"ನೀವು ನಮ್ಮ ಅಧಿಪತಿಗಳು ; ಈಗ ಈ ರಾಕ್ಷಸನಿಗೆ ವರ ಸಿಕ್ಕಿರುವುದರಿಂದ ನನ್ನಿಂದ ಈತನ ವಧೆಯಾಗುವಂತಿಲ್ಲ ; ಆದ್ದರಿಂದ ಸಂಗ್ರಾಮದಲ್ಲಿ ನಾನು ನಿಂತು ಮಾಡಬಹುದಾದರೂ ಏನು ? ನಾನು ಕಣ್ಮರೆಯಾಗುತ್ತೇನೆ."

## ಇಂದ್ರ ಮತ್ತು ವಿಷ್ಣು

**ಉತ್ತರಕಾಂಡ / ೨೭**

ಕೈಲಾಸಪರ್ವತವನ್ನು ದಾಟಿದ ರಾವಣನು ಸೈನ್ಯ-ವಾಹನಸಮೇತನಾಗಿ ಇಂದ್ರಲೋಕವನ್ನು ತಲುಪಿದನು. ಇಂದ್ರನು ಅವನನ್ನು ನೋಡಿ ಭಯಗೊಂಡನು. ವಸು, ರುದ್ರ, ಆದಿತ್ಯಾದಿ ದೇವತೆಗಳಿಗೆ ರಾವಣನೊಡನೆ ಯುದ್ಧಕ್ಕೆ ಸಿದ್ಧರಾಗಲು ಹೇಳಿದನು. ವಿಷ್ಣುವನ್ನು ಸಮೀಪಿಸಿ, "ನಾನು ರಾವಣನ ವಿಷಯದಲ್ಲಿ ಏನು ಮಾಡಬೇಕು ?" ಎಂದು ಪ್ರಶ್ನಿಸಿದನು.

ವರಪ್ರದಾನಾದ್‌ಬಲವಾನ್ನ ಖಲ್ವನ್ಯೇನ ಹೇತುನಾ ।
ತತ್ತು ಸತ್ಯಂ ವಚಃ ಕಾರ್ಯಂ ಯದುಕ್ತಂ ಪದ್ಮಯೋನಿನಾ ॥ ೮ ॥

"**ಕೇವಲ ವರ ದೊರೆತ ಮೂಲಕ ಆತನು ಬಲಾಢ್ಯನಾಗಿದ್ದಾನೆ. ಏನೇ ಇದ್ದರೂ ಬ್ರಹ್ಮದೇವನ ವಚನವು ಸತ್ಯಗೊಳ್ಳಬೇಕು.** ನೀವು ಈಗ ರಾವಣನ ವಧೆಯ ಉಪಾಯವನ್ನು ನನಗೆ ತಿಳಿಸಿರಿ !" ಎಂದು ಇಂದ್ರನು ವಿಷ್ಣುವಿಗೆ ವಿನಂತಿಸಿದನು. "ನೀವು ಸ್ವತಃ ರಾವಣನೊಡನೆ ಖಡ್ಗ ಮತ್ತು ಚಕ್ರಪಾಣಿಯಾಗಿ ಯುದ್ಧವನ್ನು ಮಾಡುವಿರಾ ?" ಎಂದು ಕೇಳಿದನು. ಇಂದ್ರನ ಬಿನ್ನಹವನ್ನು ಕೇಳಿ, ವಿಷ್ಣುವು, "ಭಯಪಡುವ ಕಾರಣವಿಲ್ಲ" ಎಂದು ಹೇಳಿದನು.

ನ ತಾವದೇಷ ದುಷ್ಟಾತ್ಮಾ ಶಕ್ಯೋ ಜೇತುಂ ಸುರಾಸುರೈಃ ।
ಹಂತುಂ ಚಾಪಿ ಸಮಾಸಾದ್ಯ ವರದಾನೇನ ದುರ್ಜಯಃ ॥ ೧೫ ॥

ದೇವ-ದೈತ್ಯರಿಂದ ಈ ದುರಾತ್ಮನ ಪರಾಭವವಾಗಲೀ ವಧೆಯಾಗಲೀ ಆಗುವ ಸಂಭವವಿಲ್ಲ. ವರ ಪಡೆದ ಈತನು ಯಾರಿಗೂ ಸೋಲುವಂತಿಲ್ಲ. ವಿಷ್ಣುವು ಸ್ವತಃ ತಾನು ರಾವಣನೊಡನೆ ಯುದ್ಧಮಾಡುವದಿಲ್ಲವೆಂದು ಸ್ಪಷ್ಟಪಡಿಸಿದನು. ಏಕೆಂದರೆ —

ನಾಹತ್ವಾ ಸಮರೇ ಶತ್ರುಂ ವಿಷ್ಣುಃ ಪ್ರತಿನಿವರ್ತತೇ ।
ದುರ್ಲಭಶ್ಚೈವ ಕಾಮೋಽದ್ಯ ವರಗುಪ್ತಾದ್ಧಿ ರಾವಣಾತ್ ॥ ೧೬ ॥

"ಸಂಗ್ರಾಮದಲ್ಲಿ ಶತ್ರುವನ್ನು ವಧಿಸದೇ ವಿಷ್ಣುವು ಹಿಂತಿರುಗುವದಿಲ್ಲ. ವರಪ್ರಾಪ್ತಿಯಿಂದ ರಕ್ಷಿತನಾದ ರಾವಣನೊಡನೆ ಯುದ್ಧ ನಡೆದರೆ ಈ ಸಂಕಲ್ಪವು ಈಡೇರುವದು ದುಸ್ತರವಾಗುತ್ತದೆ. ಹೀಗಿರುವದರಿಂದ ಆ ರಾಕ್ಷಸನಿಗೆ ಆತನ ಮೃತ್ಯುವಿನ ಕಾರಣವನ್ನು ತಿಳಿಸಿ, ತಕ್ಕ ಕಾಲದಲ್ಲಿ ಆತನ ವಧೆಯನ್ನು ನಾನೇ ಪೂರೈಸಿ ದೇವದಾನವರನ್ನು ಸಂತೋಷಗೊಳಿಸುವೆ"ನೆಂದು ವಿಷ್ಣುವು ಇಂದ್ರನಿಗೆ ಆಶ್ವಾಸನೆಯನ್ನಿತ್ತನು. ಸದ್ಯ ಭಯ ರಹಿತನಾಗಿ ದೇವತೆಗಳನ್ನು ಕೂಡಿಕೊಂಡು ರಾವಣನೊಡನೆ ಯುದ್ಧಮಾಡಲು ಹೇಳಿದನು.

**ಉತ್ತರಕಾಂಡ / ೨೯**

ರಾವಣನೊಡನೆ ಯುದ್ಧ ನಡೆದಾಗ ಇಂದ್ರನು ದೇವತೆಗಳಿಗೆ ಈ ರೀತಿ ನುಡಿದನು : "ರಾವಣನನ್ನು ನೀವು ಜೀವಿತನಾಗಿ ಸೆರೆಹಿಡಿಯಿರಿ ! ಗಾಳಿವೇಗದಿಂದ ಚಲಿಸುವ ರಥದ ಸಹಾಯದಿಂದ ಈ ಅತಿಬಲಾಢ್ಯ ರಾಕ್ಷಸನು ಸೇನೆಯಲ್ಲಿ ಶೀಘ್ರವಾಗಿ ಮುಂದುವರೆಯುವನು.

ನ ಹ್ಯೇಷ ಹಂತುಂ ಶಕ್ಯೋದ್ಯ ವರದಾನಾತ್ಸುನಿರ್ಭಯಃ ।
ತದ್ ಗ್ರಹೀಷ್ಯಾಮಹೇ ರಕ್ಷೋ ಯತ್ತಾ ಭವತ ಸಂಯುಗೇ ॥ ೧೫ ॥

"ವರಪ್ರಾಪ್ತಿಯಿಂದ ಈತನಿಗೆ ಭಯವಿಲ್ಲದಾಗಿದೆ : ಆದ್ದರಿಂದ ಈಗ ಈತನ ವಧೆಯಾಗುವಂತಿಲ್ಲ. ನೀವು ರಣರಂಗಕ್ಕೆ ಸಿದ್ಧರಾಗಿರಿ ! ನಾವು ಆ ರಾಕ್ಷಸರನ್ನು ನಿಗ್ರಹಿಸೋಣ !"

## ಸಹಸ್ರಾರ್ಜುನ

**ಉತ್ತರಕಾಂಡ / ೩೨**

ಸಹಸ್ರಾರ್ಜುನ ಮತ್ತು ರಾವಣ ಇವರಲ್ಲಿ ಗದಾಯುದ್ಧವಾಗುತ್ತಿದ್ದಾಗ ಕ್ರೋಧಗೊಂಡ ಸಹಸ್ರಾರ್ಜುನನು ತನ್ನ ಗದೆಯನ್ನು ರಾವಣನ ಹರವಾದ ಎದೆಯ ಮೇಲೆ ಎಸೆದನು. ಆದರೆ —

11

ವರದಾನಕೃತತ್ರಾಣೇ ಸಾ ಗದಾ ರಾವಣೋರಸಿ ।
ದುರ್ಬಲೇವ ಯಥಾ ವೇಗಂ ದ್ವಿಧಾಭೂತಾಪತತ್ಕ್ಷಿತೌ ॥ ೬೧ ॥

ಗದೆಯು ವರದಾನದಿಂದ ರಕ್ಷಿತನಾಗಿದ್ದ, ಆ ರಾವಣನ ಎದೆಯ ಮೇಲೆ ಪ್ರಹಾರವನ್ನು ಮಾಡಲು ಅಸಮರ್ಥವಾಯಿತು. ಅದಕ್ಕೆ ತನ್ನ ವೇಗದ ಪ್ರಭಾವದಿಂದ ಯಾವ ಪರಿಣಾಮವನ್ನುಂಟುಮಾಡಲೂ ಆಗಲಿಲ್ಲ. ಆ ಗದೆಯೇ ಇಬ್ಭಾಗವಾಗಿ ಮುರಿದು ಭೂಮಿಗೆ ಬಿದ್ದಿತು. ಗದೆಯ ಏಟಿನಿಂದ ರಾವಣನು ಕಳವಳಗೊಂಡನು ; ಆಗ ಸಹಸ್ರಾರ್ಜುನನು ರಾವಣನ ಮೇಲೆ ಎರಗಿ ಆತನನ್ನು ಕಟ್ಟಿಹಾಕಿದನು. ರಾಕ್ಷಸರ ವಿರೋಧವನ್ನು ಲೆಕ್ಕಿಸದೆ ಅವರನ್ನು ದಿಕ್ಕೇಡುಮಾಡಿ ರಾವಣನನ್ನು ತನ್ನ ನಗರಕ್ಕೆ ಕೊಂಡೊಯ್ದನು.

## ಮಾಲ್ಯವಾನ ಯುದ್ಧಕಾಂಡ / ೩೫

ರಾವಣನ ಅಜ್ಜನಾದ ಮಾಲ್ಯವಾನನು ಅತಿಬುದ್ಧಿವಂತನಾಗಿದ್ದನು. ರಾವಣನು ಶ್ರೀರಾಮನೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕೆಂದು ಆತನ ಅನಿಸಿಕೆ ಇತ್ತು. ತನ್ನ ಅನಿಸಿಕೆಯನ್ನು ರಾವಣನು ಮನ್ನಿಸಬೇಕೆಂದು ಪ್ರಯತ್ನಿಸಿದನು. ರಾವಣನಿಗೆ ಈ ರೀತಿ ನುಡಿದನು —

ದೇವದಾನವಯಕ್ಷೇಭ್ಯೋ ಗೃಹೀತಶ್ಚ ವರಸ್ತ್ವಯಾ ।
ಮನುಷ್ಯಾ ವಾನರಾ ಋಕ್ಷಾ ಗೋಲಾಂಗೂಲಾ ಮಹಾಬಲಾಃ ।
ಬಲವಂತ ಇಹಾಗಮ್ಯ ಗರ್ಜಂತಿ ದೃಢವಿಕ್ರಮಾಃ ॥ ೨೩ ॥

ದೇವತೆಗಳು - ದಾನವರು - ಯಕ್ಷರು ಇವರಿಂದ ಸಾವು ಬಾರದಂತೆ ನೀನು ಬ್ರಹ್ಮನಿಂದ ವರವನ್ನು ಪಡೆದಿರುವೆ ; ಆದರೆ ಬಲಾಢ್ಯರಾದ ಮನುಷ್ಯರು, ವಾನರರು, ಕರಡಿಗಳು, ಗೋಲಾಂಗೂಲಗಳು ಇವರೆಲ್ಲ ಇಲ್ಲಿ ಆಗಮಿಸಿದ್ದಾರೆ. ಆ ಮಹಾಪರಾಕ್ರಮಿಗಳಾದ, ಬಲಾಢ್ಯರಾದ ಮನುಷ್ಯ ಮುಂತಾದವರು ಇಲ್ಲಿಗೆ ಬಂದು ಆರ್ಭಟಿಸುತ್ತಿದ್ದಾರೆ. ಇದು ರಾಕ್ಷಸರ ವಿನಾಶಕಾಲವು ಸಮೀಪಿಸಿದ ಅಪಾಯದ ಚಿಹ್ನೆಯೆಂದು ಮಾಲ್ಯವಾನನು ಸೂಚಿಸಿದನು. ಅಹಂಕಾರದಿಂದ ಮದವೇರಿದ ರಾವಣನಿಗೆ ಅದು ಹಿಡಿಸಲಿಲ್ಲ.

## ಹನುಮಾನ ಯುದ್ಧಕಾಂಡ / ೫೯

ಮಾಲ್ಯವಾನನು ಸೂಚಿಸಿದಂತೆ ಹನುಮಂತನು ಸಹ ರಾವಣನಿಗೆ ಆತನ ವರದ ಇತಿಮಿತಿಗಳ ಅರಿವನ್ನು ಮಾಡಿಕೊಟ್ಟಿದ್ದಾನೆ. ಬಾಣಗಳ ಮಳೆಗರೆತದಿಂದ ವಾನರರನ್ನು ಸುತ್ತುವರೆದ ರಾವಣನನ್ನು ಎದುರಿಸಿ, ಹನುಮಂತನು ಹೀಗೆಂದನು :

ದೇವದಾನವಗಂಧರ್ವೈರ್ಯಕ್ಷೈಶ್ಚ ಸಹ ರಾಕ್ಷಸೈ ।
ಅವಧ್ಯತ್ವಂ ತ್ವಯಾ ಪ್ರಾಪ್ತಂ ವಾನರೇಭ್ಯಸ್ತು ತೇ ಭಯಮ್ ॥ ೫೫ ॥

"ದೇವ, ದಾನವ, ಗಂಧರ್ವ, ಯಕ್ಷ ಮತ್ತು ರಾಕ್ಷಸರಿಂದ ನಿನಗೆ ಮರಣದ ಭಯವಿರದಿದ್ದರೂ ವಾನರರಿಂದ ನಿನಗೆ ಮೃತ್ಯುವಿನ ಭಯವಿದೆ.

## ವಿಭೀಷಣ ಯುದ್ಧಕಾಂಡ / ೧೯

ಶ್ರೀರಾಮನು ಶರಣಾಗತನಾದ ವಿಭೀಷಣನಿಗೆ ಅಭಯವನ್ನಿತ್ತನು. ಶ್ರೀರಾಮನು ರಾಕ್ಷಸರ ಬಲಾಬಲ ಎಷ್ಟಿದೆ ಎಂಬುದನ್ನು ನಿಜ ಹೇಳಬೇಕೆಂದು ವಿಭೀಷಣನನ್ನು ವಿನಂತಿಸಿದನು. ವಿಭೀಷಣನು ಈ ರೀತಿ ಹೇಳಿದನು :

ಅವಧ್ಯಃ ಸರ್ವಭೂತಾನಾಂ ಗಂಧರ್ವೋರಗಪಕ್ಷಿಣಾಮ್ ।
ರಾಜಪುತ್ರ ದಶಗ್ರೀವೋ ವರದಾನಾತ್ಸ್ವಯಂಭುವಃ ॥ ೬ ॥

"ಹೇ ರಾಜಪುತ್ರನೇ, 'ಗಂಧರ್ವ, ಉರಗ, ಪಕ್ಷಿ ಮುಂತಾದ ಯಾವ ಪ್ರಾಣಿಗಳಿಂದಲೂ ರಾವಣನು

ಸಾಯುವಂತಿಲ್ಲ' ಎಂಬ ವರವು ಬ್ರಹ್ಮನಿಂದ ರಾವಣನಿಗೆ ದೊರೆತಿದೆ." ಇದನ್ನು ಹೇಳಿ ವಿಭೀಷಣನು ಇನ್ನಿತರ ರಾಕ್ಷಸರ ಸಾಮರ್ಥ್ಯದ ಬಗ್ಗೆ ಯಥಾಸ್ಥಿತವಾಗಿ ವಿವರಿಸಿದನು.

**ರಾವಣ** **ಯುದ್ಧಕಾಂಡ / ೬೦**

ಶ್ರೀರಾಮನ ಶರಗಳಿಂದ ಗ್ರಸ್ತನಾದ ರಾವಣನು ಇತರ ರಾಕ್ಷಸರಿಗೆ ಇಂತೆಂದನು—"ಮಹೇಂದ್ರನಿಗೆ ಸಾಟಿಯಾದ ನನ್ನನ್ನು ಈ ಮಾನವನು ಪರಾಭವಗೊಳಿಸಿದ್ದಾನೆ. ನಾನು ಆಚರಿಸಿದ ತಪಸ್ಸು ವ್ಯರ್ಥವಾಯಿತು. 'ಮಾನವರಿಂದ ನಿನಗೆ ಭಯವಿದೆ ; ಎಚ್ಚರಿಕೆ !' ಎಂದು ಬ್ರಹ್ಮದೇವನು ನುಡಿದ ಮಾತು ಈಗ ನಿಜವಾಗುವ ಪ್ರಸಂಗವು ನನ್ನ ಮೇಲೆ ಬಂದಿದೆ."

> ದೇವದಾನವಗಂಧರ್ವೈರ್ಯಕ್ಷರಾಕ್ಷಸಪನ್ನಗೈಃ ।
> ಅವಧ್ಯತ್ವಂ ಮಯಾ ಪ್ರೋಕ್ತಂ ಮಾನುಷೇಭ್ಯೋ ನ ಯಾಚಿತಮ್ ॥ ೭ ॥

"ದೇವತೆಗಳು, ದಾನವರು, ಯಕ್ಷರು, ರಾಕ್ಷಸರು, ಗಂಧರ್ವರು, ನಾಗರು ಇವರಿಂದ ನನ್ನ ವಧೆಯಾಗ ಕೂಡದೆಂದು ನಾನು ಬೇಡಿಕೊಂಡೆ ; ಆದರೆ ಮಾನವನಿಂದ ವಧೆಯಾಗಬಾರದೆಂಬ ವರವನ್ನು ಬೇಡಿಕೊಂಡಿಲ್ಲ" ಎಂದು ರಾವಣನು ಈಗ ಉದ್ವಿಗ್ನನಾಗಿದ್ದಾನೆ.

**ಯುದ್ಧಕಾಂಡ / ೯೨**

ಮೇಘನಾದನ (ಇಂದ್ರಜಿತು) ವಧೆಯಾದ್ದರಿಂದ ಅತ್ಯಂತ ಸಂತಾಪಕ್ಕೊಳಗಾದ ರಾವಣನು, ತನ್ನ ರಾಕ್ಷಸರು ದಿಕ್ಕೆಡಬಾರದೆಂಬ ಉದ್ದೇಶದಿಂದ ಅವರಿಗೆ ಈ ರೀತಿ ಎಂದನು - "ಸಹಸ್ರಾರು ವರ್ಷಗಳವರೆಗೆ ಅತಿ ಉಗ್ರವಾದ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಆಗಾಗ ಪ್ರಸನ್ನಗೊಳಿಸಿದ್ದೇನೆ."

> ತಸ್ಯೈವ ತಪಸೋ ವ್ಯುಷ್ಟ್ಯಾ ಪ್ರಸಾದಾಚ್ಚ ಸ್ವಯಂಭುವಃ ।
> ನಾಸುರೇಭ್ಯೋ ನ ದೇವೇಭ್ಯೋ ಭಯಂ ಮಮ ಕದಾಚನ ॥ ೨೯ ॥

"ಆ ತಪಸ್ಸಿನಿಂದಲೇ ನನಗೆ ಬ್ರಹ್ಮದೇವನ ಪ್ರಸಾದವು ಪ್ರಾಪ್ತವಾಯಿತು. ಆ ಪ್ರಸಾದದಿಂದ 'ಅಸುರ ಮತ್ತು ದೇವತೆಗಳಿಂದ ನನಗೆ ಎಂದಿಗೂ ಭಯವುಂಟಾಗಲಾರದು' ಎಂಬ ವರವು ನನಗೆ ದೊರಕಿತು.

> ಕವಚಂ ಬ್ರಹ್ಮದತ್ತಂ ಮೇ ಯದಾದಿತ್ಯಸಮಪ್ರಭಮ್ । ೩೦

'ಬ್ರಹ್ಮದೇವನು ನನಗೆ ಸೂರ್ಯನಂತಹ, ತೇಜಸ್ವಿಯಾದ ಕವಚವನ್ನಿತ್ತಿರುವನು' ಅಲ್ಲದೆ,

> ಯತ್ ತದಾಭಿಪ್ರಸನ್ನೇನ ಸಶರಂ ಕಾರ್ಮುಕಂ ಮಹತ್ ।
> ದೇವಾಸುರವಿಮರ್ದೇಷು ಮಮ ದತ್ತಂ ಸ್ವಯಂಭುವಾ ॥ ೩೨ ॥

"ದೇವಾಸುರರ ಯುದ್ಧದ ವೇಳೆಗೆ ಬ್ರಹ್ಮದೇವನು ನನಗೆ ಬಾಣಗಳೊಂದಿಗೆ ವಿಶಾಲವಾದ ಬಿಲ್ಲನ್ನು ಕೊಟ್ಟಿರುವನು"' ಎಂದು ರಾವಣ ಹೇಳುತ್ತಾನೆ.

'ಬ್ರಹ್ಮದೇವನಿಂದ ಪಡೆದ ಕವಚವನ್ನು ಧರಿಸಿ ಸಂಗ್ರಾಮದಲ್ಲಿ ರಥಾರೂಢನಾದ ನನ್ನ ಮೇಲೆ ಏರಿಬರುವ ಸಾಮರ್ಥ್ಯವು ಪ್ರತ್ಯಕ್ಷ ಇಂದ್ರನಿಗೂ ಇರುವದಿಲ್ಲ. ಸುರಾಸುರರ ಯುದ್ಧದ ಪ್ರಸಂಗದಲ್ಲಿ ಇಂದ್ರನು ನನಗೆ ಕೊಟ್ಟ ಪ್ರಚಂಡ ಬಿಲ್ಲನ್ನು ಶ್ರೀರಾಮ-ಲಕ್ಷ್ಮಣರನ್ನು ವಧಿಸಲೋಸುಗ ನೀವು ಎತ್ತಿಹಿಡಿಯಿರಿ !"

ನೋಡಿ : ವಿಶ್ರವ > ರಾವಣ, ಶಾಪ ಕ್ರ. ೪೦.

**ರಾಕ್ಷಸಸ್ತ್ರೀಯರು** **ಯುದ್ಧಕಾಂಡ / ೯೪**

ಇಂದ್ರಜಿತುವಿನ ವಧೆಯಾದೊಡನೆ ಲಂಕೆಯಲ್ಲಿ ಹಾಹಾಕಾರವುಂಟಾಯಿತು. ರಾಕ್ಷಸಸ್ತ್ರೀಯರು ಭಯಭೀತರಾದರು. ಯುದ್ಧದಲ್ಲಿ ಅವರ ಬಂಧುಬಳಗದವರು ಕೊಲ್ಲಲ್ಪಟ್ಟ ಕಾರಣ ಅವರು ಅತಿದುಃಖ ಗೊಂಡು ರೋದಿಸಹತ್ತಿದರು. "ರುದ್ರ, ವಿಷ್ಣು, ಮಹೇಂದ್ರ, ಇಲ್ಲವೆ ಪ್ರತ್ಯಕ್ಷ ಮೃತ್ಯುವೇ ಶ್ರೀರಾಮನ

ರೂಪದಲ್ಲಿ ನಮ್ಮ ವಧೆಯನ್ನು ಕೈಕೊಂಡಿದ್ದಾನೆ. ಶ್ರೀರಾಮನು ನಮ್ಮ ವೀರರನ್ನು ಕೊಂದ ಕಾರಣ ಇನ್ನು ಬದುಕಿರುವ ಆಸೆ ನಮ್ಮಲ್ಲಿ ಉಳಿದಿಲ್ಲ. ಈ ಭಯವು ಕೊನೆಗಾಣುವ ಚಿಹ್ನೆಗಳು ಇರುವದಿಲ್ಲ."

ರಾಮಹಸ್ತಾದ್ವಶಗ್ರೀವಃ ಶೂರೋ ದತ್ತಮಹಾವರಃ ।
ಇದಂ ಭಯಂ ಮಹಾಘೋರಂ ಸಮುತ್ಪನ್ನಂ ನ ಬುದ್ಧ್ಯತೇ ॥ ೨೬ ॥

"ಬ್ರಹ್ಮದೇವನಿಂದ ದೊಡ್ಡ ವರವನ್ನು ಪಡೆದ ಈ ಶೂರ ರಾವಣನಿಗೆ, ಶ್ರೀರಾಮನಿಂದ ಉಂಟಾಗಿರುವ ಈ ಮಹಾಘೋರ ವಿಪತ್ತು ಅರ್ಥವಾಗುತ್ತಿಲ್ಲ" ಎಂದು ರಾಕ್ಷಸಿಯರಿಗೆ ಅನಿಸುತ್ತಿತ್ತು. ರಾವಣನ ಪ್ರತಿ ಸಂಗ್ರಾಮದಲ್ಲಿ ಒಂದಿಲ್ಲೊಂದು ಉತ್ಪಾತಗಳು ಕಂಡುಬರಹತ್ತಿವೆ. ಈ ಉತ್ಪಾತಗಳು ಆತನ ವಿನಾಶವನ್ನು ಸೂಚಿಸುತ್ತಿವೆ. ದೇವ, ಗಂಧರ್ವ, ಪಿಶಾಚಿ ಮತ್ತು ರಾಕ್ಷಸರು ಒಂದಾಗಿ ಆತನನ್ನು ರಕ್ಷಿಸಲು ಯತ್ನಿಸಿದರೂ ಅವರಿಗೆ ಯಶ ದೊರೆಯಲಾರದು ; ಏಕೆಂದರೆ —

ಪಿತಾಮಹೇನ ಪ್ರೀತೇನ ದೇವದಾನವರಾಕ್ಷಸೈಃ ।
ರಾವಣಸ್ಯಾಭಯಂ ದತ್ತಂ ಮನುಷ್ಯೇಭ್ಯೋ ನ ಯಾಚಿತಮ್ ॥ ೨೯ ॥

ಬ್ರಹ್ಮದೇವನು ಪ್ರಸನ್ನನಾಗಿ ರಾವಣನಿಗೆ ದೇವ, ದಾನವ ಮತ್ತು ರಾಕ್ಷಸರಿಂದ ಅಭಯವನ್ನು ಕೊಟ್ಟಿದ್ದಾನೆ ; ಆದರೆ ರಾವಣನು ಮನುಷ್ಯರಿಂದ ಅಭಯವಿರಬೇಕೆಂಬ ವರವನ್ನು ಬೇಡಲಿಲ್ಲವಾದ್ದರಿಂದ ಬ್ರಹ್ಮದೇವನು ಅದನ್ನು ಕೊಟ್ಟಿಲ್ಲವೆಂಬುದು ರಾಕ್ಷಸಸ್ತ್ರೀಯರಿಗೆ ಗೊತ್ತಿತ್ತು.

## ಇನ್ನೊಂದು ಉಲ್ಲೇಖ

ಪೀಡ್ಯಮಾನಾಸ್ತು ಬಲಿನಾ ವರದಾನೇನ ರಕ್ಷಸಾ । ೩೧
ದೇವತಾನಾಂ ಹಿತಾರ್ಥಾಯ ಮಹಾತ್ಮಾ ವೈ ಪಿತಾಮಹಃ ।
ಉವಾಚ ದೇವತಾಸ್ತುಷ್ಟ ಇದಂ ಸರ್ವಾ ಮಹದ್ವಚಃ ॥ ೩೨ ॥

ಉಗ್ರತಪಸ್ಸಿನ ಮತ್ತು ವರಪಡೆದ ಪ್ರಭಾವದಿಂದ ಬಲಾಢ್ಯನಾದ ರಾವಣನು ದೇವತೆಗಳನ್ನು ಪೀಡಿಸ ತೊಡಗಿದಾಗ ಬ್ರಹ್ಮದೇವನು ಅವರಿಗೆ ಅಭಯವನ್ನಿತ್ತನು.

## ಸುಮಾಲಿ

ಉತ್ತರಕಾಂಡ / ೧೧

ಸುಮಾಲಿ ರಾಕ್ಷಸನು ನಿರ್ಭಯನಾಗಿ ತನ್ನ ಅನುಯಾಯಿಗಳೊಡನೆ ರಸಾತಳದಿಂದ ಹೊರಬಂದನು. ರಾಕ್ಷಸರಲ್ಲಿಯ ಶ್ರೇಷ್ಠರೆನಿಸುವ ಮಂತ್ರಿಗಳ ಸಮೇತ ಸುಮಾಲಿಯು ರಾವಣನ ಬಳಿಗೆ ಹೋದನು. ರಾವಣನು ಆನಂದದಿಂದ ಅಪ್ಪಿಕೊಂಡು ಇಂತೆಂದನು.

ದಿಷ್ಟ್ಯಾ ತೇ ವತ್ಸ ಸಂಪ್ರಾಪ್ತಶ್ಚಿಂತಿತೋಽಯಂ ಮನೋರಥಃ ।
ಯಸ್ತ್ವಂ ತ್ರಿಭುವನಶ್ರೇಷ್ಠಾಲ್ಲಬ್ಧವಾನ್ವರಮುತ್ತಮಮ್ ॥ ೪ ॥

"ಹೇ ವತ್ಸನೇ, ತ್ರೈಲೋಕ್ಯದಲ್ಲಿ ಶ್ರೇಷ್ಠನೆನಿಸುವ ಬ್ರಹ್ಮನಿಂದ ನಿನಗೆ ಉತ್ತಮವಾದ ವರವು ದೊರಕಿದೆ. ಬಹುದಿನದಿಂದ ಇದ್ದ ನಮ್ಮ ಮನೋವಾಂಛಿತವನ್ನು ನೀನು ಪಡೆದಿರುವಿ. ವಿಷ್ಣುವಿನ ಭಯದಿಂದ ನಾವು ರಸಾತಳದಲ್ಲಿ ಅಡಗಿದ್ದೆವು. ಇನ್ನು ಆ ಭಯವು ಉಳಿಯಲಿಲ್ಲ. ವಿಶ್ವಪ್ರಯತ್ನವನ್ನಾದರೂ ಮಾಡಿ ಲಂಕಾನಗರವನ್ನು ಕುಬೇರನಿಂದ ಪಡೆದುಕೊಳ್ಳಬೇಕು !" ಎಂದು ಸುಮಾಲಿಯು ರಾವಣನಿಗೆ ಸಲಹೆ ಇತ್ತನು.

ಉತ್ತರಕಾಂಡ / ೧೧

ರಾವಣನು ಕುಬೇರನ ಬಳಿ ಬಂದು ಲಂಕೆಯನ್ನು ಬೇಡಿದಾಗ—

ಕುಬೇರನು (ವೈಶ್ರವಣ) ತನ್ನ ತಂದೆಯಾದ ವಿಶ್ರವನ ಬಳಿ ಹೋದನು. ರಾವಣನ ಬೇಡಿಕೆಯನ್ನು ತಿಳಿಸಿದಾಗ ವಿಶ್ರವನು ಆತನಿಗೆ "ನೀನು ಧರ್ಮಾನುಸಾರವಾದ ನನ್ನ ಹೇಳಿಕೆಯನ್ನು ಆಲೈಸು ! ಲಂಕೆಯನ್ನು ಬಿಟ್ಟುಕೊಟ್ಟು ಹೊಸ ನಗರವನ್ನು ನಿರ್ಮಿಸು ! ಏಕೆಂದರೆ ರಾವಣನು ವಿವೇಕವನ್ನು ಕಳೆದುಕೊಂಡಿದ್ದಾನೆ.

ವರಪ್ರದಾನಸಮ್ಮೂಢೋ ಮಾನ್ಯಾಮಾನ್ಯಂ ಸುದುರ್ಮತಿಃ ।
ನ ವೇತ್ತಿ ಮಮ ಶಾಪಾಚ್ಚ ಪ್ರಕೃತಿಂ ದಾರುಣಾಂ ಗತಃ ॥ ४० ॥

"ವರ ಪಡೆದ ರಾವಣನು ಮದೋನ್ಮತ್ತನಾಗಿದ್ದಾನೆ. ನನ್ನ ಶಾಪದಿಂದಲೇ ಆತನು ಈ ರೀತಿ ಉಗ್ರಪ್ರಕೃತಿಯವನಾಗಿದ್ದಾನೆ. ರಾಕ್ಷಸರೊಡನೆ ಹಗೆತನ ನಿನಗೆ ಸರಿಯಲ್ಲ."

## ವಿಶ್ವಾಮಿತ್ರ

ಬಾಲಕಾಂಡ / ೨೦

ಯಜ್ಞದಲ್ಲಿ ವಿಘ್ನಗಳನ್ನುಂಟುಮಾಡುತ್ತಿದ್ದ ರಾಕ್ಷಸರನ್ನು ಸದೆಬಡಿಯಲು ಶ್ರೀರಾಮನನ್ನು ಸಹಾಯಕ್ಕಾಗಿ ಕಳುಹಿಸಬೇಕೆಂದು ವಿಶ್ವಾಮಿತ್ರನು ದಶರಥನಿಗೆ ಬಿನ್ನವಿಸಿದನು. ಮೊದಲು ಅನುಮತಿಯನ್ನು ಕೊಟ್ಟಿದ್ದರೂ ವಿಶ್ವಾಮಿತ್ರನ ಪ್ರತ್ಯಕ್ಷ ಈ ಬೇಡಿಕೆಯನ್ನು ಕೇಳಿ ದಶರಥನ ಮನಸ್ಸು ವಿಚಲಿತವಾಯಿತು. ಆತನು ಇದೆ ಒಂದನ್ನು ಬಿಟ್ಟು ಬೇರೆ ಯಾವದನ್ನಾದರೂ ಬೇಡಬಹುದೆಂದು ವಿನಯಪೂರ್ವಕವಾಗಿ ವಿಶ್ವಾಮಿತ್ರನಿಗೆ ಹೇಳಿದನು. ದಶರಥನ ಮಾತುಗಳನ್ನು ಕೇಳಿ ವಿಶ್ವಾಮಿತ್ರನು ಹೀಗೆಂದನು :

ಪೌಲಸ್ತ್ಯವಂಶಪ್ರಭವೋ ರಾವಣೋ ನಾಮ ರಾಕ್ಷಸಃ ।
ಸ ಬ್ರಹ್ಮಣಾ ದತ್ತವರಸ್ತ್ರೈಲೋಕ್ಯಂ ಬಾಧತೇ ಭೃಶಮ್ ॥ ೧೬ ॥

"ರಾವಣನೆಂಬ ರಾಕ್ಷಸನು ಪೌಲಸ್ತ್ಯವಂಶದಲ್ಲಿ ಜನಿಸಿದ್ದಾನೆ. ಬ್ರಹ್ಮದೇವನಿಂದ ವರವನ್ನು ಪಡೆದು ಆತನು ತ್ರೈಲೋಕವನ್ನು ಅತಿಶಯವಾಗಿ ಪೀಡಿಸುತ್ತಿದ್ದಾನೆ. ಆತನು ವಿಶ್ರವಾ ಮುನಿಯ ಪುತ್ರನಾಗಿದ್ದು ಕುಬೇರನ ತಮ್ಮನಾಗಿದ್ದಾನೆ. ಈ ರಾವಣನು ಅತಿಬಲಾಢ್ಯನಾಗಿದ್ದುದರಿಂದ ತಾನು ಸ್ವತಃ ಯಜ್ಞದಲ್ಲಿ ವಿಘ್ನಗಳನ್ನು ತರುವದು ಕನಿಷ್ಠವೆಂದು ಭಾವಿಸಿ, ಅಂಥ ಕೆಲಸಗಳನ್ನು ಸುಬಾಹು, ಮಾರೀಚ ಮೊದಲಾದ ರಾಕ್ಷಸರಿಂದ ಮಾಡಿಸುತ್ತಿದ್ದಾನೆ ; ಆದ್ದರಿಂದ ಅವರನ್ನು ಸದೆಬಡಿಯಲು ನೀನು ಶ್ರೀರಾಮನನ್ನು ನನ್ನ ಜೊತೆ ಕಳುಹಿಸು !"

ಉತ್ತರಕಾಂಡ / ೧೪

ಅಹಂಕಾರದಿಂದ ಉನ್ಮತ್ತನಾದ ರಾವಣನು ತನ್ನ ಆರು ಜನ ಅಮಾತ್ಯರೊಡನೆ ಕೈಲಾಸಪರ್ವತಕ್ಕೆ ಹೋದನು. ಅಲ್ಲಿ ಆತನ ಅಣ್ಣನಾದ ಧನಾಧ್ಯಕ್ಷ ಕುಬೇರನು ರಾಜ್ಯವನ್ನಾಳುತ್ತಿದ್ದನು. ರಾವಣನನ್ನು ಪ್ರತಿಭಟಿಸಲು ಆತನು ಯಕ್ಷಸೈನ್ಯವನ್ನು ಕಳುಹಿಸಿದನು. ರಾವಣನು ಅವರೆಲ್ಲರನ್ನೂ ಸೋಲಿಸಿದನು. ಅನಂತರ ರಾವಣನು ಪ್ರವೇಶದ್ವಾರದ ಬಳಿ ಬಂದಾಗ ಅಲ್ಲಿದ್ದ ದ್ವಾರಪಾಲಕರು ತಡೆದರೂ ರಾವಣನು ಅವರನ್ನು ಲೆಕ್ಕಿಸಲಿಲ್ಲ.

ತತ್ರಸ್ತೋ ರಣಮುತ್ಸಾಟ್ಯ ತೇನ ಯಕ್ಷೇಣ ತಾಡಿತಃ ।
ರುಧಿರಂ ಪ್ರಸ್ರವನ್ಭಾತಿ ಶೈಲೋ ಧಾತುಸ್ರವೈರಿವ ॥ ೨೬ ॥
ಸ ಶೈಲಶಿಖರಾಭೇಣ ತೋರಣೇನ ಸಮಾಹತಃ ।
ಜಗಾಮ ನ ಕ್ಷತಿಂ ವೀರೋ ವರದಾನಾತ್ಸ್ವಯಂಭುವಃ ॥ ೨೮ ॥

ಆಗ ದ್ವಾರದ ಬಳಿಯಲ್ಲಿದ್ದ ದಂಡವನ್ನೆತ್ತಿಕೊಂಡು ಆ ಯಕ್ಷನು ರಾವಣನಿಗೆ ಹೊಡೆದನು. ರಾವಣನ ದೇಹದಿಂದ ರಕ್ತಸ್ರಾವವು ಶುರುವಾಯಿತು. ಆಗ ರಾವಣನು ಧಾತುಸ್ರಾವದಿಂದ ಶೋಭಿಸುವಂತಹ ಪರ್ವತದಂತೆ ಕಂಗೊಳಿಸಿದನು. ಪರ್ವತಶಿಖರದಷ್ಟು ಗಾತ್ರದ ದಂಡದಿಂದ ಹೊಡೆದಿದ್ದರೂ ಬ್ರಹ್ಮದೇವನ ವರದಿಂದ ಆ ವೀರನಿಗೆ ಗಾಯದ ಕಲೆ ಕೂಡ ಆಗಲಿಲ್ಲ ; ಇಷ್ಟೇ ಅಲ್ಲದೆ ರಾವಣನು ಅದೇ ದಂಡವನ್ನು ತಾನು ಎತ್ತಿಕೊಂಡು ಆ ಯಕ್ಷನಿಗೆ ಹೊಡೆದು ನುಚ್ಚುನೂರು ಮಾಡಿದನು. ರಾವಣನಿಗೆ ಯಾರಿಂದ ಮರಣಭಯವಿಲ್ಲ ಎಂಬುದರ ಬಗ್ಗೆ ಬ್ರಹ್ಮದೇವನ ವರದಲ್ಲಿ ಉಲ್ಲೇಖವಿದೆ. ಮೇಲೆ ಕೊಟ್ಟ ಶ್ಲೋಕಗಳಲ್ಲಿ ತುಸು ಭಿನ್ನತೆಯು ಕಂಡು ಬರುತ್ತದೆ. ಎಲ್ಲ ಪ್ರಾಣಿಗಳ ಉಲ್ಲೇಖವು ಎಲ್ಲೆಡೆಯಲ್ಲಿ ಸಮಾನವಾಗಿಲ್ಲ. ಮನುಷ್ಯ, ವಾನರರು, ಕರಡಿ ಇವರ ಉಲ್ಲೇಖವು ಮಾತ್ರ ಎಲ್ಲಿಯೂ ಇಲ್ಲ. ವರ ಪಡೆಯಬೇಕೆಂಬ ಉದ್ದೇಶವನ್ನಿಟ್ಟುಕೊಂಡು ತಪಸ್ಸನ್ನು ಕೈಕೊಂಡ ಕಾರಣ ರಾವಣನಿಗೆ ಅದು 'ಯಾಚಿತ' ವರವಾಗಿದೆ.

ಉತ್ತರಕಾಂಡ / ಪ್ರಕ್ಷಿಪ್ತ ೪

ಚಂದ್ರಕಿರಣಗಳಿಂದ ಭಯವುಂಟಾದಾಗ ಕ್ರೋಧಗೊಂಡ ರಾವಣನು 'ನಾರಾಚ' ಎಂಬ ಬಾಣದಿಂದ ಚಂದ್ರನಿಗೆ ಗುರಿಯಿಟ್ಟನು. ಆಗ ಬ್ರಹ್ಮದೇವನು ಚಂದ್ರಲೋಕಕ್ಕೆ ಹೋಗಿ ರಾವಣನಿಗೆ—"ನೀನು ಇಲ್ಲಿಂದ ಮರಳಿ ಹೋಗು ! ಚಂದ್ರನನ್ನು ಪೀಡಿಸಬೇಡ ! ಅವನು ಲೋಕಕ್ಕೆ ಹಿತಕಾರಿಯಾಗಿದ್ದಾನೆ. ನಾನು ನಿನಗೆ ಒಂದು ಮಂತ್ರವನ್ನು ಕೊಡುವೆ ; ಪ್ರಾಣ ಹೋಗುವ ಪ್ರಸಂಗ ಉಂಟಾದಾಗ ಯಾವ ಪುರುಷನು ಈ ಮಂತ್ರವನ್ನು ಜಪಿಸುವನೋ ಅವನಿಗೆ ಮರಣಭಯವಿರಲಾರದು." ಕೂಡಲೇ ರಾವಣನು ಆ ಮಂತ್ರವನ್ನು ಕೊಡೆಂದು ಕೇಳಿದನು. ಬ್ರಹ್ಮದೇವನು ರಾವಣನಿಗೆ ಕೆಲವು ಮಹತ್ವದ ಸೂಚನೆಗಳನ್ನು ಕೊಟ್ಟನು. ಪ್ರಾಣಾಪಾಯವಿದ್ದಾಗ ಮಾತ್ರ ಇದನ್ನು ಜಪಿಸಬೇಕು ; ಇತರ ಕಾಲದಲ್ಲಿ ಜಪಿಸಬಾರದು ! ಮಂತ್ರವನ್ನು ಜಪಿಸದ ಹೊರತು ಸಿದ್ಧಿಯು ಸಾಧ್ಯವಿರುವದಿಲ್ಲ ; ಆದ್ದರಿಂದ ರಾವಣನಿಗೆ ಶಿರೋಮಂತ್ರವನ್ನು ಜಪಿಸಲು ಹೇಳಿ ಮಂತ್ರವನ್ನು ತಿಳಿಸಿದನು.

ಮಯಾ ಪ್ರೋಕ್ತಮಿದಂ ಪುಣ್ಯಂ ನಾಮಾಷ್ಟಶತಮುತ್ತಮಮ್ ।
ಸರ್ವಪಾಪಹರಂ ಪುಣ್ಯಂ ಶರಣ್ಯಂ ಶರಣಾರ್ಥಿನಾಮ್ ।
ಜಪ್ತಮೇತದ್ದಶಗ್ರೀವ ಕುರ್ಯಾಚ್ಛತ್ರುವಿನಾಶನಮ್ ॥ ೫೦ ॥

"ಹೇ ರಾವಣನೇ, ನಾನು ತಿಳಿಸಿದ, ಪವಿತ್ರವಾದ, ಉತ್ತಮವಾದ ನಾಮಾಷ್ಟಶತಕವು, ಸರ್ವಪಾಪ ನಾಶಕವೂ ಪುಣ್ಯಕಾರಕವೂ ಆಗಿದೆ ; ಶರಣವನ್ನು ಬಯಸುವವರಿಗೆ ಆಸರೆಯೋಗ್ಯವಾಗಿದೆ. ಇದನ್ನು ಜಪಿಸಿದರೆ ಶತ್ರುವಿನ ನಾಶವಾಗುತ್ತದೆ" ಎಂದು ಬ್ರಹ್ಮದೇವನು ನುಡಿದನು.

ಉತ್ತರಕಾಂಡ / ಪ್ರಕ್ಷಿಪ್ತ ೫

ದತ್ವಾ ತು ರಾವಣಸ್ಯೈವಂ ವರಂ ಸ ಕಮಲೋದ್ಭವಃ ॥ ೧ ॥

ಈ ರೀತಿ ವರವನ್ನು ಅನುಗ್ರಹಿಸಿ ಪಿತಾಮಹನಾದ ಬ್ರಹ್ಮದೇವನು ಬ್ರಹ್ಮಲೋಕಕ್ಕೆ ತೆರಳಿದನು.
ಅಯಾಚಿತ.

## ೮. ವಿಷ್ಣು > ದೇವತೆಗಳು

ಬಾಲಕಾಂಡ / ೧೫

ಋಷ್ಯಶೃಂಗ ಮುನಿಯು, ದಶರಥರಾಜನ ಪುತ್ರಕಾಮೇಷ್ಟಿಯಜ್ಞದ ಋತ್ವಿಜನಾಗಿದ್ದನು. ಆತನು ಪುತ್ರ ಪ್ರಾಪ್ತಿಗೆ ಸಾಧನಕಾರಕವಾದ ಇಷ್ಟಿಯನ್ನು ಪ್ರಾರಂಭಿಸಿದಾಗ ದೇವ, ಸಿದ್ಧ, ಮಹರ್ಷಿ ಇವರೆಲ್ಲರೂ ಪ್ರತಿಗ್ರಹ ವನ್ನು ಮಾಡಲು ತಮ್ಮ ಆಂತರಿಕ ಶಕ್ತಿಯಿಂದ ಯಾರ ದೃಷ್ಟಿಗೂ ಬೀಳದಂತೆ ಯಜ್ಞಮಂಟಪದಲ್ಲಿ ಬಂದು ಸೇರಿದರು. ಅವರು ಬ್ರಹ್ಮದೇವನಿಗೆ "ಹೇ ಭಗವನ್, ತಮ್ಮ ಪ್ರಸಾದದಿಂದ ರಾವಣನೆಂಬ ರಾಕ್ಷಸನು ಮದೋನ್ಮತ್ತನಾಗಿ ತನ್ನ ಬಲದಿಂದ ನಮ್ಮೆಲ್ಲರನ್ನೂ ಪೀಡಿಸುತ್ತಿದ್ದಾನೆ. ಅವನನ್ನು ಶಿಕ್ಷಿಸುವುದು ನಮ್ಮಿಂದಾಗದು ; ನೀವು ಪ್ರಸನ್ನರಾಗಿ ಆತನಿಗೆ ವರ ಕೊಟ್ಟ ಕಾಲದಿಂದ, ನಿಮ್ಮ ವಚನವನ್ನು ಗೌರವಿಸಲು ನಾವೆಲ್ಲರೂ ಅವನ ಎಲ್ಲ ಕಾಟವನ್ನೂ ಸಹಿಸುತ್ತಿದ್ದೇವೆ. ದುರ್ಮತಿಯಾದ ರಾವಣನು ತ್ರೈಲೋಕ್ಯವನ್ನು ಪೀಡಿಸುತ್ತಿದ್ದು, ಸ್ವರ್ಗಾಧಿಪತಿಯಾದ ಇಂದ್ರನನ್ನು ಜಯಿಸುವ ಇಚ್ಛೆಯನ್ನಿಟ್ಟುಕೊಂಡಿದ್ದಾನೆ. ನಿಮ್ಮ ವರದಾನದಿಂದ ಅವನಿಗೆ ಯಾವ ಮಿತಿಮೇರೆಗಳೂ ಉಳಿದಿಲ್ಲ. ಹೀಗಾಗಿರುವದರಿಂದ ನೀವು ಆತನನ್ನು ವಧಿಸುವ ಉಪಾಯವನ್ನು ಯೋಚಿಸಬೇಕು !" ದೇವತೆಗಳ ವಿನಂತಿಯನ್ನು ಕೇಳಿ ಯೋಚನೆಗೆ ತೊಡಗಿದ ಬ್ರಹ್ಮದೇವನಿಗೆ, ರಾವಣನನ್ನು ವಧಿಸುವ ಒಂದು ಉಪಾಯವು ಹೊಳೆಯಿತು. ವರವನ್ನು ಬೇಡುವಾಗ ರಾವಣನು, ಗಂಧರ್ವ, ಯಕ್ಷ, ರಾಕ್ಷಸ, ದೇವತೆಗಳಿಂದ ತನ್ನ ವಧೆ ಸಾಧ್ಯವಾಗಬಾರದೆಂದು ಬೇಡಿ ಕೊಂಡಿದ್ದಾನೆ. ಅದರಲ್ಲಿ ಮನುಷ್ಯರ ಉಲ್ಲೇಖವಿರಲಿಲ್ಲ ; ಏಕೆಂದರೆ ರಾವಣನಿಗೆ ಮನುಷ್ಯರ ಭಯ-ಪರಿವೆ ಕಿಂಚಿತ್ತೂ ಇರಲಿಲ್ಲ. ಅವನ ವಧೆಯು ಮನುಷ್ಯರಿಂದ ಸಾಧ್ಯ ! ಎಂಬುದು ಬ್ರಹ್ಮದೇವನ ಗಮನಕ್ಕೆ ಬಂದಿತು. ಆಗ ದೇವತೆಗಳೆಲ್ಲರೂ ಸೇರಿ ವಿಷ್ಣುವನ್ನು ಈ ರೀತಿ ವಿನಂತಿಸಿದರು : "ಹೇ ವಿಷ್ಣೋ,

ಲೋಕಹಿತಕ್ಕಾಗಿ, ನಾವು ನಿಮ್ಮನ್ನು ಒಂದು ಕಾರ್ಯಾರ್ಥ ಯೋಜಿಸಬೇಕೆಂದಿದ್ದೇವೆ. ದಶರಥರಾಜನ ಮೂವರು ಮಡದಿಯರಲ್ಲಿ, ನೀವು ಸ್ವಂತದ ನಾಲ್ಕು ಅಂಶಗಳ ರೂಪದಲ್ಲಿ ಅವನ ಪುತ್ರರೆಂದು ಅವತರಿಸಬೇಕು ; ಮತ್ತು ನೀವು ದೇವತೆಗಳಿಂದಲೂ ಮರಣವಿರದ ಮದೋನ್ಮತ್ತ ರಾವಣನನ್ನು ಸಂಹರಿಸಬೇಕು ! ನಮ್ಮೆಲ್ಲರಿಗೂ ನೀವೇ ಆಧಾರಭೂತರು. ದೇವತೆಗಳ ಶತ್ರುವನ್ನು ಕೊಲ್ಲಲು ಮಾನವಲೋಕದಲ್ಲಿ ಅವತರಿಸುವ ಮನಸ್ಸುಮಾಡಬೇಕು ! ದೇವತೆಗಳ ವಿನಂತಿಯನ್ನು ಕೇಳಿ ವಿಷ್ಣುವು ಹೀಗೆ ನುಡಿದನು :

ಭಯಂ ತ್ಯಜತ ಭದ್ರಂ ವೋ ಹಿತಾರ್ಥಂ ಯುಧಿ ರಾವಣಮ್ ।
ಸಪುತ್ರಪೌತ್ರಂ ಸಾಮಾತ್ಯಂ ಸಮಂತ್ರಿಜ್ಞಾತಿಬಾಂಧವಮ್ ॥ ೨೮ ॥
ಹತ್ವಾ ಕ್ರೂರಂ ದುರಾಧರ್ಷಂ ದೇವರ್ಷೀಣಾಂ ಭಯಾವಹಮ್ ।
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ॥ ೨೯ ॥
ವತ್ಸ್ಯಾಮಿ ಮಾನುಷೇ ಲೋಕೇ ಪಾಲಯನ್ ಪೃಥಿವೀಮಿಮಾಮ್ ।
ಏವಂ ದತ್ವಾ ವರಂ ದೇವೋ ದೇವಾನಾಂ ವಿಷ್ಣುರಾತ್ಮವಾನ್ ॥ ೩೦ ॥

"ನಿಮಗೆ ಶುಭವಾಗಲಿ ! ಭಯಪಡಬೇಡಿರಿ ! ದೇವ-ಋಷಿಗಳಿಂದಲೂ ಸೋಲದ ಈ ಭಯಂಕರ ರಾವಣನನ್ನು ಆತನ ಪುತ್ರಪೌತ್ರ, ಅಮಾತ್ಯ, ಮಂತ್ರ, ಆಪ್ತಬಾಂಧವರೊಂದಿಗೆ ಸಂಹರಿಸುವೆನು. ನಿಮ್ಮ ಹಿತರಕ್ಷಣೆಗಾಗಿ ಆತನನ್ನು ಕಾಳಗದಲ್ಲಿ ವಧಿಸಿ, ಆ ನಂತರ ಹನ್ನೊಂದು ಸಾವಿರ ವರ್ಷಗಳವರೆಗೆ ಮನುಷ್ಯ ಲೋಕದಲ್ಲಿ ವಾಸಿಸುವೆನು" ಎಂಬ ವರವನ್ನು ದೇವತೆಗಳಿಗೆ ಅನುಗ್ರಹಿಸಿದನು.

ದೇವತೆಗಳ ಕೋರಿಕೆಯ ಮೇರೆಗೆ ಮನುಷ್ಯಲೋಕದಲ್ಲಿ ಜನ್ಮತಾಳಲು ಅನುರೂಪರಾದವರೆಂದರೆ ದಶರಥರಾಜನ ಪತ್ನಿಯರು ಎಂದು ಮನದಲ್ಲಿ ನಿರ್ಧರಿಸಿ ತನ್ನ ನಾಲ್ಕು ಅಂಶಗಳ ಪಿತನಾಗಲು ದಶರಥನು ಯೋಗ್ಯನೆಂದು ನಿರ್ಧರಿಸಿದನು.

ಯಾಚಿತ.

## ೯. ? > ಜಯಾ, ಸುಪ್ರಭಾ ಬಾಲಕಾಂಡ / ೨೧

ವಸಿಷ್ಠಮುನಿಯು ದಶರಥನಿಗೆ ವಿಶ್ವಾಮಿತ್ರನ ಸಾಮರ್ಥ್ಯದ ಬಗ್ಗೆ ಹೇಳಿ, ಕೊಟ್ಟ ವಚನವನ್ನು ನಿಜಗೊಳಿಸಲು ಆತನನ್ನು ಪ್ರೇರಿಸುತ್ತಾನೆ.

ಮಾರೀಚ ಹಾಗೂ ಸುಬಾಹು ಎಂಬ ಇಬ್ಬರು ರಾಕ್ಷಸರು, ವಿಶ್ವಾಮಿತ್ರನ ಯಜ್ಞದಲ್ಲಿ ವಿಘ್ನಗಳನ್ನು ತಂದು ನಾಶಗೊಳಿಸುತ್ತಿದ್ದರೆ ಅವರ ಪಾರುಪತ್ಯವು ವಿಶ್ವಾಮಿತ್ರನಿಗೆ ಅಸಾಧ್ಯವಿರಲಿಲ್ಲ ; ಆದರೆ ಯಜ್ಞದೀಕ್ಷೆಯನ್ನು ಸ್ವೀಕರಿಸಿದಾತನಿಗೆ ಕೆಲವು ನೀತಿಬಂಧನಗಳಿರುತ್ತವೆ. ವಿಶ್ವಾಮಿತ್ರನು ತನ್ನ ಯಜ್ಞವು ನಿರ್ವಿಘ್ನವಾಗಿ ನೆರವೇರಬೇಕೆಂದು ವಿನಂತಿಸಲು ದಶರಥನ ಬಳಿ ಹೋದನು. ವಿಶ್ವಾಮಿತ್ರನ ವಿನಂತಿಯನ್ನು ಕೇಳಿಕೊಳ್ಳುವ ಮುನ್ನವೇ ದಶರಥನು ಅದನ್ನು ಪೂರ್ತಿಗೊಳಿಸುವ ವಚನವನ್ನು ನುಡಿದನು. ಆಗ ವಿಶ್ವಾಮಿತ್ರನು ಯಜ್ಞವನ್ನು ರಕ್ಷಿಸಲು ಮತ್ತು ರಾಕ್ಷಸರಿಂದ ಯಜ್ಞದ ಸಮಯಕ್ಕಾಗುವ ಉಪಟಳವನ್ನು ತಡೆಯಲು, ಶ್ರೀರಾಮನನ್ನು ತನ್ನ ಜೊತೆಗೆ ಕಳುಹಬೇಕೆಂದು ಕೇಳಿಕೊಂಡನು. ಇದನ್ನು ಕೇಳಿ ದಶರಥರಾಜನಿಗೆ ದುಃಖವಾಯಿತು. ಅನೇಕ ಪರ್ಯಾಯಗಳನ್ನು ಸೂಚಿಸಿ ಶ್ರೀರಾಮನನ್ನು ಆತನೊಡನೆ ಕಳುಹಿಸಲು ಹಿಂದುಮುಂದು ನೋಡಹತ್ತಿದನು. ಇದನ್ನು ಗಮನಿಸಿದ ವಿಶ್ವಾಮಿತ್ರನಿಗೆ ವಿಪರೀತ ಸಿಟ್ಟುಬಂದಿತು. ಇಕ್ಷ್ವಾಕುವಂಶದವರಿಗೆ ಪ್ರತಿಜ್ಞೆಯ ಭಂಗವು ಶೋಭಿಸುವುದಿಲ್ಲವೆಂದು ನುಡಿದು ವಿಶ್ವಾಮಿತ್ರನು ಹೊರಟು ನಿಂತನು. ವಿಶ್ವಾಮಿತ್ರನ ಕೋಪವು ವಿಪರೀತಕ್ಕೆ ಹೋಗಬಾರದೆಂದು, ವಸಿಷ್ಠಋಷಿಯು ದಶರಥನಿಗೆ ಉಪದೇಶಿಸಲು ಈ ರೀತಿ ನುಡಿದನು : "ದಶರಥನೇ, ಧರ್ಮಾತ್ಮನೆಂದು ನಿನ್ನ ಖ್ಯಾತಿಯು ಮೂರೂ ಲೋಕದಲ್ಲಿದೆ. ವಿಶ್ವಾಮಿತ್ರನ ವಿನಂತಿಯನುಸಾರ ಆತನ ಯಜ್ಞವನ್ನು ರಕ್ಷಿಸಲು ನೀನು ಶ್ರೀರಾಮನನ್ನು ಕಳುಹಿಸಿಕೊಡು ! ಕುಶಿಕಪುತ್ರರು ಬೆಂಬಲಕ್ಕಿರುವಾಗ, ರಾಕ್ಷಸರು ಶ್ರೀರಾಮನನ್ನು ಮುಟ್ಟುವಂತಿಲ್ಲ. ವಿಶ್ವಾಮಿತ್ರನಂತಹ ತಪಸ್ವಿಗಳು ತ್ರೈಲೋಕ್ಯದಲ್ಲಿಲ್ಲ. ಆತನಿಗೆ ಅನೇಕ ವಿದ್ಯೆಗಳು ಜ್ಞಾತವಿವೆ ; ಆತನು ಅಸ್ತ್ರಗಳ ಜ್ಞಾನಿಯೂ ಆಗಿದ್ದಾನೆ. ಆತನಲ್ಲಿದ್ದಷ್ಟು ಅಸ್ತ್ರವಿದ್ಯೆಯು ಇನ್ನಾರಿಗೂ ದೊರೆಯುವ ಸಂಭವವಿಲ್ಲ. ಈ ವಿಶ್ವಾಮಿತ್ರನು ಮೊದಲು ರಾಜ್ಯವನ್ನಾಳುತ್ತಿದ್ದಾಗ ಶಿವನು, ಅತ್ಯಂತ

ಧಾರ್ಮಿಕವಾದ 'ಕುಶಾಶ್ವಪುತ್ರ'ವೆಂದೆನಿಸುವ ಎಲ್ಲ ಪ್ರಕಾರದ ಅಸ್ತ್ರಗಳನ್ನೂ ಈತನಿಗೆ ಕರುಣಿಸಿರುವನು.

> ಜಯಾ ಚ ಸುಪ್ರಭಾ ಚೈವ ದಕ್ಷಕನ್ಯೇ ಸುಮಧ್ಯಮೇ ।
> ತೇ ಸೂತೇಽಸ್ತ್ರಾಣಿ ಶಸ್ತ್ರಾಣಿ ಶತಂ ಪರಮಭಾಸ್ವರಮ್ ॥ ೧೫ ॥
> ಪಂಚಾಶತಂ ಸುತಾಂಲ್ಲೇಭೆ ಜಯಾ ಲಬ್ಧವರಾ ವರಾನ್ ।
> ವಧಾಯಾಸುರಸೈನ್ಯಾನಾಮಪ್ರಮೇಯಾನರೂಪಿಣಃ ॥ ೧೬ ॥
> ಸುಪ್ರಭಾಜನಯಚ್ಚಾಪಿ ಪುತ್ರಾನ್ ಪಞ್ಚಾಶತಂ ಪುನಃ ।
> ಸಂಹಾರಾನ್ನಾಮ ದುರ್ಧರ್ಷಾಂದುರಾಕ್ರಾಮಾನ್ಬಲೀಯಸಃ ॥ ೧೭ ॥

ಜಯಾ ಮತ್ತು ಸುಪ್ರಭಾ ಇವರಿಬ್ಬರು ಸೌಂದರ್ಯವತಿಯರಾಗಿದ್ದು, ದಕ್ಷಪ್ರಜಾಪತಿಯ ಕನ್ಯೆಯರಾಗಿದ್ದರು. ಇವರಿಗೆ ಪುತ್ರರೂಪದಲ್ಲಿ ಅತ್ಯಂತ ತೇಜಸ್ಸುಳ್ಳ ನೂರು ಅಸ್ತ್ರಗಳು, ಶಸ್ತ್ರಗಳು ದೊರೆತವು. ವರವನ್ನು ಪಡೆದ ಜಯಾ ಇವಳಿಗೆ ರಾಕ್ಷಸಸೈನ್ಯವನ್ನು ಸಂಹರಿಸಲು 'ಅಚಿಂತ್ಯ' ಮತ್ತು 'ಅದೃಷ್ಟ' ಎಂಬ ಐವತ್ತು ಶ್ರೇಷ್ಠ ಪುತ್ರರು ಪ್ರಾಪ್ತರಾದರು. ಸುಪ್ರಭಾ ಇವಳಿಗೆ, ಬೇರೆಯವರು ತಾಳಿಕೊಳ್ಳಲಾರದಂಥ 'ಅಶಕ್ಯ' ಮತ್ತು 'ಅಜಿಂಕ್ಯ' ಎಂಬ ಸಂಹಾರನಾಮಕ ಐವತ್ತು ಪುತ್ರರಾದರು. ದಕ್ಷಕನ್ಯೆಯರಿಗೆ ಹುಟ್ಟಿದ ಆ ಪುತ್ರರು ಅತಿ ತೇಜಸ್ಸುಳ್ಳವರೂ, ವಿಜಯಶಾಲಿಗಳೂ ಮತ್ತು ಮಹಾವೀರರೂ ಆಗಿದ್ದರು ; ಇದಲ್ಲದೆ ಹಲವು ಪ್ರಕಾರದ ರೂಪಗಳನ್ನು ಧರಿಸುವ ಶಕ್ತಿಯು ಅವರಲ್ಲಿತ್ತು. ವಿಶ್ವಾಮಿತ್ರನು ಈ ಎಲ್ಲ ಕುಶಿಕಪುತ್ರರೆಂದೆನಿಸುವ ಅಸ್ತ್ರಗಳನ್ನು ಯಥಾವತ್ತಾಗಿ ಅರಿತಿದ್ದನು. ಅಪೂರ್ವ ಅಸ್ತ್ರಗಳನ್ನು ನಿರ್ಮಿಸುವ ಸಾಮರ್ಥ್ಯವೂ ಆತನ ಬಳಿ ಇತ್ತು. "ಆ ಮಹಾತೇಜಸ್ವಿ, ಮಹಾವೀರನಾದ ವಿಶ್ವಾಮಿತ್ರಮುನಿಯು ಶ್ರೀರಾಮನನ್ನು ಕರೆದೊಯ್ಯುತ್ತಿರುವುದರಿಂದ ನಿನಗೆ ಯಾವ ಸಂದೇಹವೂ ಬೇಡ ! ನಿನ್ನ ಪುತ್ರನನ್ನು ಅನುಗ್ರಹಿಸಲೆಂದು ಈತನು ನಿನ್ನ ಬಳಿ ಬಂದಿದ್ದಾನೆ." ಈ ರೀತಿ ವಸಿಷ್ಠರು ದಶರಥನಿಗೆ ಉಪದೇಶಿಸಿದ್ದರಿಂದ ಅದು ಅವನಿಗೆ ಸರಿಯೆನಿಸಿತು.

ಜಯಾ ಮತ್ತು ಸುಪ್ರಭಾ ಇವರಿಗೆ ಯಾರು ವರಗಳನ್ನು ಕೊಟ್ಟರು ? ಯಾವ ಕಾರಣಕ್ಕಾಗಿ ಕೊಟ್ಟರು ? ಎಂಬುದು ಸ್ಪಷ್ಟವಾಗಿಲ್ಲ ; ಆದ್ದರಿಂದ ಈ ವರಕ್ಕೆ 'ಯಾಚಿತ' ವರ ಇಲ್ಲವೇ 'ಅಯಾಚಿತ' ವರವೆಂದು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ.

ಅನಿಶ್ಚಿತವಾದುದು.

## ೧೦. ಇಂದ್ರ > ಮಲದ, ಕರುಷ — ಬಾಲಕಾಂಡ / ೨೪

ಶ್ರೀರಾಮಲಕ್ಷ್ಮಣರು ವಿಶ್ವಾಮಿತ್ರ ಋಷಿಯ ಯಜ್ಞದ ರಕ್ಷಣೆಗೆಂದು ಆತನೊಡನೆ ಹೋಗುತ್ತಿದ್ದಾಗ, ಶ್ರೀರಾಮನ ಇಷ್ಟದಂತೆ ವಿಶ್ವಾಮಿತ್ರನು ಸರಯೂ ನದಿಯ ಉತ್ಪತ್ತಿ, ತಾಟಕವನ ಇತ್ಯಾದಿ ವಿಷಯಗಳನ್ನು ಕುರಿತು ಅವರಿಗೆ ಹೇಳುತ್ತಾನೆ :

ಪೂರ್ವದಲ್ಲಿ ದೇವತೆಗಳ ಪ್ರಯತ್ನದಿಂದ 'ಮಲದ' ಹಾಗೂ 'ಕರುಷ' ಈ ದೇಶಗಳು ನಿರ್ಮಿತವಾದವು. ಆ ದೇಶಗಳು ಬಹಳ ಸಮೃದ್ಧವಾಗಿದ್ದವು. ವೃತ್ರಾಸುರನ-ಸಂಹಾರದ ಸಮಯದ ಅಶುದ್ಧ ಆಚರಣೆಯಿಂದಾಗಿ ಇಂದ್ರನಿಗೆ ಬ್ರಹ್ಮಹತ್ಯೆ ತಗುಲಿತು. ಆಗ ದೇವತೆಗಳು ಹಾಗೂ ಋಷಿಗಳು ಕಲ್ಮಷಗೊಂಡ ಇಂದ್ರನನ್ನು ಗಂಗಾಜಲದಿಂದ ಸ್ನಾನಮಾಡಿಸಿ ಆತನ ಕಲ್ಮಷವನ್ನು ಕಳೆದರು. ಈ ಭೂಪ್ರದೇಶದಲ್ಲಿ ದೇವತೆಗಳು ಮಹೇಂದ್ರನ ಕಲ್ಮಷವನ್ನೂ, ಶರೀರದಲ್ಲಿಯ ಕೊಳೆಯನ್ನೂ, ಕ್ಷುಧೆಯನ್ನೂ ವಿಸರ್ಜಿಸಿದರು. ಇಂದ್ರನು ಶುದ್ಧನಾದನು. ಈ ಭೂಪ್ರದೇಶಗಳು ಆತನ ದೋಷಗಳನ್ನು ಸ್ವೀಕರಿಸಿದ್ದರಿಂದ ಇಂದ್ರನು ಈ ದೇಶಗಳ ಮೇಲೆ ಸಂತುಷ್ಟನಾದನು.

> ತತೋ ದೇಶಸ್ಯ ಸುಪ್ರೀತೋ ವರಂ ಪ್ರಾದಾದನುತ್ತಮಮ್ ।
> ಇಮೌ ಜನಪದೌ ಸ್ಫೀತೌ ಖ್ಯಾತಿಂ ಲೋಕೇ ಗಮಿಷ್ಯತಃ ॥ ೨೨ ॥

"ನನ್ನ ದೇಹದ ಕೊಳೆಯನ್ನು ಮತ್ತು ಹಸಿವನ್ನು ಇಂಗಿಸಿದ ಈ ಪ್ರದೇಶಗಳು 'ಮಲದ' ಮತ್ತು 'ಕರುಷ' ಎಂದು ಖ್ಯಾತಿಪಡೆದು ಸಮೃದ್ಧಗೊಳ್ಳುವವು ; ಅಲ್ಲದೆ ಪೃಥ್ವಿಯಲ್ಲಿ ಪ್ರಸಿದ್ಧಿಯನ್ನು ಪಡೆಯುವವು" ಎಂದು

ಇಂದ್ರನು ಅತ್ಯುತ್ತಮ ವರವನ್ನು ಕೊಟ್ಟನು. ಆ ದೇಶಗಳನ್ನು ಗೌರವಿಸಿದ ಸಂಗತಿಯನ್ನು ಕಂಡು ದೇವತೆಗಳು ಇಂದ್ರನನ್ನು ಅಭಿನಂದಿಸಿದರು.

ಅಯಾಚಿತ.

## ೧೧. ಬ್ರಹ್ಮದೇವ > ಸುಕೇತು, ತಾಟಕಿ ಬಾಲಕಾಂಡ / ೨೫

ವಿಶ್ವಾಮಿತ್ರನು ಶ್ರೀರಾಮನಿಗೆ ತಾಟಕಿಯ ವೃತ್ತಾಂತವನ್ನು ಹೇಳುತ್ತಿದ್ದಾನೆ.

ಪೂರ್ವದಲ್ಲಿ ಸುಕೇತು ಎಂಬ ದೊಡ್ಡ ಯಕ್ಷನು ಆಗಿಹೋದನು. ಆತನು ವೀರನಾಗಿದ್ದರೂ ಆತನಿಗೆ ಸಂತತಿಯಿರಲಿಲ್ಲ. ಸದಾಚಾರಿಯಾದ ಆ ಯಕ್ಷನು ಮಕ್ಕಳನ್ನು ಪಡೆಯಬೇಕೆಂದು ಮಹಾತಪಸ್ಸನ್ನು ಆಚರಿಸಿದನು. ಆಗ ಸಂತೋಷಗೊಂಡ ಬ್ರಹ್ಮದೇವನು ಯಕ್ಷಾಧಿಪತಿಗೆ ತಾಟಕಿ ಎಂದು ಖ್ಯಾತಿಗೊಂಡ ಕನ್ಯೆಯನ್ನು ಕೊಟ್ಟನು.

ವರದಾನಕೃತಂ ವೀರ್ಯಂ ಧಾರಯತ್ಯಬಲಾ ಬಲಮ್ । ೪

ಆ ಅಬಲೆಯು ವರಪ್ರದಾನದಿಂದಾಗಿ ಇಂಥ ಬಲ ಮತ್ತು ವೀರ್ಯವನ್ನು ಧರಿಸುತ್ತಿದ್ದಾಳೆ.

ದದೌ ನಾಗಸಹಸ್ರಸ್ಯ ಬಲಂ ಚಾಸ್ಯಾಃ ಪಿತಾಮಹಃ ॥ ೭ ॥

ಸಾವಿರ ಆನೆಗಳ ಬಲವನ್ನು ಕೊಟ್ಟನು.

ಬ್ರಹ್ಮದೇವನು ಯಕ್ಷಾಧಿಪತಿಗೆ ಕೇವಲ ಕನ್ಯಾರತ್ನವನ್ನು ಕೊಟ್ಟನೇ ಹೊರತು ಪುತ್ರರತ್ನವನ್ನು ಕರುಣಿಸಲಿಲ್ಲ. ಪುತ್ರನನ್ನು ಕೊಟ್ಟಿದ್ದರೆ ಆತನು ಜನರನ್ನು ಅತಿಯಾಗಿ ಪೀಡಿಸಬಹುದಿತ್ತು ; ಕನ್ಯೆಯಿಂದಲೂ ಪೀಡೆ ಕಡಿಮೆಯಾಯಿತೆಂದಲ್ಲ ; ಕೊನೆಗೆ ಬ್ರಹ್ಮನೇ ಅವಳನ್ನು ವಧಿಸುವ ಉಪಾಯವನ್ನು ಕಂಡುಹಿಡಿಯಬೇಕಾಯಿತು.

ಸಂತತಿಯಾಗಬೇಕೆಂಬ ಉದ್ದೇಶವನ್ನಿಟ್ಟುಕೊಂಡು ತಪಸ್ಸನ್ನು ಆಚರಿಸಿದ ಕಾರಣ ಅದು ಉದ್ದೇಶ ಪೂರಿತವಾಗಿದೆ. ಹೀಗಿರುವದರಿಂದ ಸುಕೇತುವಿಗೆ ದೊರೆತ ವರವು 'ಯಾಚಿತ' ವರವಾಗಿದೆ. ತಾಟಕಿಯು ವರವನ್ನು ಬೇಡಿಕೊಂಡ ಉಲ್ಲೇಖವಿಲ್ಲ. ಅವಳಿಗೆ ದೊರೆತ ವರವು 'ಅಯಾಚಿತ'ವಾಗಿದೆ.

ಅಯಾಚಿತ.

## ೧೨. ವಿಷ್ಣು > ಕಶ್ಯಪ ಬಾಲಕಾಂಡ / ೨೯

ವಿಶ್ವಾಮಿತ್ರನು ಶ್ರೀರಾಮನಿಗೆ ಸಿದ್ಧಾಶ್ರಮದ ಕಥೆಯನ್ನು ಹೇಳುತ್ತಿದ್ದಾನೆ.

ದೇವತೆಗಳಿಗೆ ಪೂಜ್ಯನಾದ ಮಹಾತಪಸ್ವಿಯಾದ ವಿಷ್ಣುವು ಜನರ ಮನಸ್ಸು ತಪಸ್ಸಿನತ್ತ ಪ್ರವೃತ್ತಗೊಳ್ಳಬೇಕೆಂದು, ಈ ಆಶ್ರಮದಲ್ಲಿ ಬಹುವರ್ಷಗಳವರೆಗೆ ತಪಸ್ಸನ್ನಾಚರಿಸಿದನು. ನೂರಾರು ಯುಗಗಳನ್ನು ಇಲ್ಲಿ ವಾಸಿಸಿ ಕಳೆದನು. ವಾಮನಾವತಾರವನ್ನು ತಾಳುವ ಮೊದಲು ವಿಷ್ಣುವು ಈ ಆಶ್ರಮವನ್ನು ಸ್ವೀಕರಿಸಿದ್ದನು. ಆತನು ತಪಶ್ಚರ್ಯೆಯಲ್ಲಿ ತೊಡಗಿದಾಗ ವಿರೋಚನನ ಪುತ್ರನಾದ ಬಲಿಯು ಇಂದ್ರ ಹಾಗೂ ಮರುತ್-ಗಣ ಇವರನ್ನು ಗೆದ್ದು ಇಂದ್ರಪದವನ್ನು ಪಡೆಯಲು ಯತ್ನಿಸಿದನು. ಬಲಿಯು ಒಂದು ಮಹಾಯಾಗವನ್ನು ಮಾಡಿದನು. ಆಗ ಅಗ್ನಿ ಮೊದಲಾದ ಎಲ್ಲ ದೇವತೆಗಳು ವಿಷ್ಣು ವಾಸಿಸಿದ್ದ ಆಶ್ರಮಕ್ಕೆ ಬಂದರು. ಬಲಿಯ ವ್ರತವು ಪೂರ್ತಿಗೊಳ್ಳುವ ಮೊದಲೇ ದೇವತೆಗಳ ಒಳಿತಿಗಾಗಿ, ವಾಮನಾವತಾರವನ್ನು ತಾಳಿ ಬಲಿಯನ್ನು ನಿಯಂತ್ರಿಸಬೇಕೆಂದು ಬೇಡಿಕೊಂಡರು. ಆಗ ಅಗ್ನಿಯಂತೆ ಪ್ರಖರನಾಗಿದ್ದ ಭಗವಾನ್ ಕಶ್ಯಪನು ಅದಿತಿಯೊಡನೆ ಅಲ್ಲಿಗೆ ಬಂದನು. ಆತನು ವಿಷ್ಣುವನ್ನು ಸ್ತುತಿಸಿ ಈ ರೀತಿ ಎಂದನು : "ನಾನು ಆಚರಿಸಿದ ತಪದ ಪ್ರಭಾವದಿಂದ ನಿನ್ನ ದೇಹದಲ್ಲಿ ಸಮಸ್ತ ಜಗತ್ತನ್ನು ಕಾಣುತ್ತಿದ್ದೇನೆ. ನೀನು ಅನಾದಿಯೂ ಅತರ್ಕ್ಯನೂ ಇರುವೆ. ನಾನು ನಿನಗೆ ಶರಣುಬಂದಿದ್ದೇನೆ."

ವರಂ ವರಯ ಭದ್ರಂ ತೇ ವರಾರ್ಹೋಽಸಿ ಮತೋ ಮಮ ॥ ೧೪ ॥

"ವರವನ್ನು ಬೇಡಿಕೊ ! ನಿನಗೆ ಮಂಗಳವಾಗಲಿ ! ನೀನು ವರವನ್ನು ಬೇಡಲು ಯೋಗ್ಯನಿರುವೆ" ಎಂದು ಶ್ರೀಹರಿಯು ಪ್ರಸನ್ನನಾಗಿ ಪಾಪವಿಮೋಚಿತನಾದ ಕಶ್ಯಪನಿಗೆ ನುಡಿದನು. ಆಗ ಕಶ್ಯಪ ಮುನಿಯು —

ಅದಿತ್ಯಾ ದೇವತಾನಾಂ ಚ ಮಮ ಚೈವಾನುಯಾಚಿತಮ್ ॥ ೧೫ ॥
ವರಂ ವರದ ಸುಪ್ರೀತೋ ದಾತುಮರ್ಹಸಿ ಸುವ್ರತ ।
ಪುತ್ರತ್ವಂ ಗಚ್ಛ ಭಗವನ್ನದಿತ್ಯಾ ಮಮ ಚಾನಘ ॥ ೧೬ ॥
ಭ್ರಾತಾ ಭವ ಯವೀಯಾಂಸ್ತ್ವಂ ಶಕ್ರಸ್ಯಾಸುರಸೂದನ ।
ಶೋಕಾರ್ತಾನಾಂ ತು ದೇವಾನಾಂ ಸಾಹಾಯ್ಯಂ ಕರ್ತುಮರ್ಹಸಿ ॥ ೧೭ ॥
ಅಯಂ ಸಿದ್ಧಾಶ್ರಮೋ ನಾಮ ಪ್ರಸಾದಾತ್ತೇ ಭವಿಷ್ಯತಿ । ೧೮

"ಹೇ ವರಪ್ರದರೇ, ಅದಿತಿಯು, ದೇವತೆಯರು ಮತ್ತು ನಾನು ಕೂಡಿ, ಪ್ರಾರ್ಥಿಸಿದ ವರವನ್ನು ನೀವು ಪ್ರಸನ್ನರಾಗಿ ನಮಗೆ ಕೊಡಿರಿ ! ಹೇ ಸುವ್ರತರೇ, ಹೇ ಭಗವನ್, ಹೇ ಪಾಪರಹಿತರೇ, ನೀವು ನನ್ನ ಮತ್ತು ಅದಿತಿಯ ಪುತ್ರನಾಗಿ ಜನಿಸಿರಿ ! ಹೇ ದೈತ್ಯನಾಶಕರೇ; ನೀವು ಇಂದ್ರನ ತಮ್ಮನಾಗಿರಿ ! ಶೋಕಗ್ರಸ್ತರಾದ ದೇವತೆಗಳಿಗೆ ಸಹಾಯವನ್ನು ಮಾಡಿರಿ ! ನಿಮ್ಮ ಕರುಣೆಯಿಂದ ಈ ಪ್ರದೇಶವು ಸಿದ್ಧಾಶ್ರಮವೆಂದು ಖ್ಯಾತಿಗೊಳ್ಳುವುದು." —ಈ ರೀತಿ ನುಡಿದನು.

ಕಶ್ಯಪ ಮುನಿಯ ಪ್ರಾರ್ಥನೆಯನುಸಾರ ವಿಷ್ಣುವು ಅದಿತಿಯ ಹೊಟ್ಟೆಯಲ್ಲಿ ಹುಟ್ಟಿದನು. 'ವಾಮನ'ನಾಗಿ ಬಲಿಯನ್ನು ಪಾತಾಳಕ್ಕೆ ಅದುಮಿದನು.

ಇದು 'ಯಾಚಿತ' ವರವಾಗಿದೆ.

## ೧೩. ಚೂಲಿ > ಸೋಮದಾ ಬಾಲಕಾಂಡ / ೩೩

ವಿಶ್ವಾಮಿತ್ರನು ಶ್ರೀರಾಮನಿಗೆ ಕುಶನಾಭನು ತನ್ನ ಕನ್ಯೆಯರಿಗೆ ತಿಳಿಸಿ ಹೇಳಿ ಅವರ ವಿವಾಹವನ್ನು ಬ್ರಹ್ಮದತ್ತನೊಡನೆ ಮಾಡಿಕೊಟ್ಟ ಕಥೆಯನ್ನು ಹೇಳುತ್ತಿದ್ದಾನೆ.

ಒಮ್ಮೆ ಕುಶನಾಭನ ನೂರು ಕನ್ಯೆಯರು ಉತ್ತಮ ಅಲಂಕಾರಗಳನ್ನು ಧರಿಸಿ ಒಂದು ಉಪವನದಲ್ಲಿ ನೃತ್ಯ-ಗಾಯನಾದಿಗಳಲ್ಲಿ ತೊಡಗಿದ್ದಾಗ ವಾಯುವು ಅವರನ್ನು ಕಂಡನು. ಅವರ ತಾರುಣ್ಯಕ್ಕೆ, ಸೌಂದರ್ಯಕ್ಕೆ ಮೋಹಿತನಾದ ವಾಯುವು ಅವರನ್ನು "ನನ್ನ ಭಾರ್ಯೆಯರಾಗಿರಿ !" ಎಂದು ವಿನಂತಿಸಿದನು. ಆ ಕನ್ಯೆಯರು ಅದನ್ನು ನಿರಾಕರಿಸಿದರು. ಆಗ ಕೋಪಗೊಂಡ ವಾಯುವು ಅವರ ಅಂಗಭಂಗಮಾಡಿದ್ದರಿಂದ ಅವರ ರೂಪಲಾವಣ್ಯವು ನಶಿಸಿ ಅವರು ಕುಬ್ಜೆಯರಾದರು.

ಹೀಗೆ ಅಂಗಭಂಗದಿಂದ ಲಜ್ಜೆಗೊಂಡ, ಭಯಭೀತರಾದ ಆ ಕುಶಕನ್ಯೆಯರು ನಡೆದುದೆಲ್ಲವನ್ನೂ ತಮ್ಮ ತಂದೆಗೆ ಹೇಳಿದರು. ಅವರ ಕರುಣಾಜನಕ ಸ್ಥಿತಿಯನ್ನು ಕಂಡು ಕುಶನಾಭನಿಗೆ ವ್ಯಥೆಯಾಯಿತು. ಕುಶಕನ್ಯೆಯರಲ್ಲಿ ಶಾಪಕೊಡುವ ಸಾಮರ್ಥ್ಯವಿದ್ದರೂ ಅವನು ಅವರು ತೋರಿದ ಕ್ಷಮಾಶೀಲವೃತ್ತಿಯನ್ನು ತುಂಬ ಶ್ಲಾಘಿಸಿದನು. ದಾನ, ಸತ್ಯ, ಯಜ್ಞ, ಯಶ ಮತ್ತು ಧರ್ಮ ಇವೆಲ್ಲವೂ ಕ್ಷಮೆಯಲ್ಲಿ ಅಂತರ್ಭೂತ ವಾಗಿರುವದರಿಂದ, ಕ್ಷಮೆಯು ಜಗತ್ತಿನ ಪ್ರಮುಖ ಆಧಾರವೆಂಬ ಶ್ರದ್ಧೆ ಕುಶನಾಭನದಾಗಿತ್ತು. ಅವನು ತನ್ನ ಪುತ್ರಿಯರಿಗೆ ಸಮಾಧಾನ ಹೇಳಿದನು. ಆತನು ಮಂತ್ರಿಮಂಡಳದವರೊಡನೆ ವಿಚಾರವಿನಿಮಯ ಮಾಡಿ, ಕನ್ಯೆಯರಿಗಾಗಿ ತಕ್ಕ ವರಶೋಧನೆಯನ್ನು ಪ್ರಾರಂಭಿಸಿದನು. ಆಗ ಮಹಾತೇಜಸ್ವಿಳ್ಳ, ಊರ್ಧ್ವರೇತನಾದ, ಸದಾಚಾರಸಂಪನ್ನನಾದ 'ಚೂಲಿ' ಎಂಬ ಮಹರ್ಷಿಯು ಬ್ರಹ್ಮಪ್ರಾಪ್ತಿಗಾಗಿ ತಪಸ್ಸನ್ನಾಚರಿಸುತ್ತಿದ್ದನು. 'ಸೋಮದಾ' ಎಂಬ ಗಂಧರ್ವಿಯೊಬ್ಬಳು ಆತನಿಗೆ ಅನನ್ಯಸೇವೆಯನ್ನು ಸಲ್ಲಿಸುತ್ತಿದ್ದಳು. ಅವಳ ಸೌಜನ್ಯಶೀಲ, ನಿಷ್ಠಾಪೂರ್ಣ ಸೇವೆಯಿಂದ ಈ ಮುನಿಯು ಪ್ರಸನ್ನನಾಗಿ ಆಕೆಗೆ ಹೀಗೆಂದನು—

ಪರಿತುಷ್ಟೋಽಸ್ಮಿ ಭದ್ರಂ ತೇ ಕಿಂ ಕರೋಮಿ ತವ ಪ್ರಿಯಮ್ ॥ ೧೪ ॥

"ನಿನಗೆ ಮಂಗಳವಾಗಲಿ ! ನಿನಗೆ ಪ್ರಿಯವಿರುವ ಯಾವುದನ್ನು ಮಾಡಲಿ ?" ಮುನಿಯು ಈ ರೀತಿ ಸಂತುಷ್ಟನಿರುವದನ್ನು ಕಂಡು ಅವಳು ಈ ರೀತಿ ನುಡಿದಳು :

ಲಕ್ಷ್ಮ್ಯಾ ಸಮುದಿತೋ ಬ್ರಾಹ್ಮ್ಯಾ ಬ್ರಹ್ಮಭೂತೋ ಮಹಾತಪಾಃ ।
ಬ್ರಾಹ್ಮೇಣ ತಪಸಾ ಯುಕ್ತಂ ಪುತ್ರಮಿಚ್ಛಾಮಿ ಧಾರ್ಮಿಕಮ್ ॥ ೧೬ ॥
ಅಪತಿಶ್ಚಾಸ್ಮಿ ಭದ್ರಂ ತೇ ಭಾರ್ಯಾ ಚಾಸ್ಮಿ ನ ಕಸ್ಯಚಿತ್ ।
ಬ್ರಾಹ್ಮೇಣೋಪಗತಯಾಶ್ಚ ದಾತುಮರ್ಹಸಿ ಮೇ ಸುತಮ್ ॥ ೧೭ ॥
ತಸ್ಯಾಃ ಪ್ರಸನ್ನೋ ಬ್ರಹ್ಮರ್ಷಿರ್ದದೌ ಬ್ರಾಹ್ಮಮನುತ್ತಮಮ್ ।
ಬ್ರಹ್ಮದತ್ತ ಇತಿ ಖ್ಯಾತಂ ಮಾನಸಂ ಚೂಲಿನಃ ಸುತಮ್ ॥ ೧೮ ॥

"ಹೇ ಮಹಾತಪಸ್ವಿ, ನೀವು ನಿಮ್ಮ ಬ್ರಹ್ಮತೇಜದಿಂದ ಕೇವಲ ಬ್ರಹ್ಮಸ್ವರೂಪರಾಗಿರುವಿರಿ ; ಅದಕ್ಕಾಗಿ ಬ್ರಹ್ಮತಪದಿಂದ ಯುಕ್ತನಾದ ಧಾರ್ಮಿಕ ಪುತ್ರನು ಆಗಬೇಕೆಂಬ ಇಚ್ಛೆಯು ನನ್ನದಿದೆ. ಹೇ ಮುನಿಯೇ, ದೇವರು ನಿಮಗೆ ಒಳಿತನ್ನು ಮಾಡಲಿ ! ನನಗೆ ಪತಿ ಇರುವದಿಲ್ಲ ; ಈ ನಂತರವೂ ಹೀಗೆಯೇ ಉಳಿಯ ಬೇಕೆಂದು ಬಯಸುತ್ತೇನೆ. ನಾನು ಯಾರೊಬ್ಬರ ಪತ್ನಿಯಾಗಬಯಸುವದಿಲ್ಲ. ಹೀಗಿರುವ ನನಗೆ ಬ್ರಹ್ಮ ಸಂಬಂಧಿತ ಉಪಾಯದಿಂದ ಒಬ್ಬ ಪುತ್ರನನ್ನು ಪಡೆಯುವಂತೆ ಮಾಡಿರಿ ! ನಾನು ನಿಮಗೆ ಶರಣುಬಂದಿದ್ದೇನೆ."

ಅವಳ ಪ್ರಾರ್ಥನೆಯನ್ನು ಕೇಳಿ, ಆ ಮಹರ್ಷಿಯು ಬ್ರಹ್ಮ ವಿಷಯದ ತಪಸ್ಸಿದ್ಧಿಯಿಂದ 'ಬ್ರಹ್ಮದತ್ತ'ನೆಂಬ ಮಾನಸಪುತ್ರನನ್ನು ಆಕೆಗೆ ಕೊಟ್ಟನು. ಚೂಲಿಯು ಸೋಮದೆಯ ಮೇಲೆ ಪ್ರಸನ್ನನಾಗಿ ಅವಳಿಚ್ಛೆಯನ್ನು ಪೂರ್ತಿಗೊಳಿಸಿದನು.

ಬ್ರಹ್ಮದತ್ತನ ಕೈಸ್ಪರ್ಶದಿಂದಾಗಿ ಕುಬ್ಜರಾದ ಕುಶಕನ್ಯೆಯರಿಗೆ ಅವರ ಮೂಲ ಸೌಂದರ್ಯವೇನೋ ಪ್ರಾಪ್ತವಾಯಿತು. ಆದರೆ ಇದನ್ನು ವರವೆನ್ನಲಾಗದು. ಇಂಥ ವರ ತಮಗೆ ದೊರಕಬೇಕೆಂದು ಕುಶಕನ್ಯೆಯರೂ ತಮ್ಮ ಬಯಕೆಯನ್ನು ವ್ಯಕ್ತಪಡಿಸಿಲ್ಲ. ಬ್ರಹ್ಮದೇವನೂ ಕೂಡ ಸಂತುಷ್ಟನಾಗಿ ಅವರಿಗೆ ದಯೆ ತೋರಿಲ್ಲ. ಮೇಲ್ಗಡೆಯಲ್ಲಿ ಹೀಗೆಂದು ಉಲ್ಲೇಖವೂ ಬಂದಿಲ್ಲ. ವರದಂತೆ ತೋರುವ ಈ ಪರಿಣಾಮವು ಬ್ರಹ್ಮದತ್ತನ ಕೈಗುಣವಾಗಲಿ ಇಲ್ಲವೆ ಕುಶಕನ್ಯೆಯರ ಪೂರ್ವಪುಣ್ಯದ ಫಲವಾಗಿರಲು ಸಾಕು.

ಯಾಚಿತವಾದುದು.

### ೧೪. ಭೃಗು > ಸಗರ, ಕೇಶಿನಿ, ಸುಮತಿ — ಬಾಲಕಾಂಡ / ೩೮

ವಿಶ್ವಾಮಿತ್ರನು ಶ್ರೀರಾಮನಿಗೆ ಸಗರ ರಾಜನ ವೃತ್ತಾಂತವನ್ನು ಹೇಳುತ್ತಿದ್ದಾನೆ :

ಪೂರ್ವದಲ್ಲಿ 'ಸಗರ'ನೆಂಬ ಧರ್ಮಾತ್ಮನು ಅಯೋಧ್ಯೆಯಲ್ಲಿ ರಾಜನಾಗಿದ್ದನು ; ಆತನಿಗೆ ಮಕ್ಕಳಿರಲಿಲ್ಲ ವಾದ್ದರಿಂದ ಸಂತಾನಪ್ರಾಪ್ತಿಗಾಗಿ ತುಂಬ ಹಂಬಲಿಸುತ್ತಿದ್ದನು. ಧರ್ಮನಿಷ್ಠೆಯುಳ್ಳ, ಸತ್ಯವಚನಿಯಾದ, ವಿದರ್ಭರಾಜಕನ್ಯೆಯಾದ ಕೇಶಿನಿಯು ಆತನ ಹಿರಿಯ ಮಡದಿಯಾಗಿದ್ದಳು. 'ಅರಿಷ್ಟನೇಮಿ'ಯ ಕನ್ಯೆಯಾದ ಸುಮತಿಯು ಆತನ ಎರಡನೆಯ ಮಡದಿಯಾಗಿದ್ದಳು. ಈ ಈರ್ವರನ್ನೂ ಕೂಡಿಕೊಂಡು ಸಗರರಾಜನು, ಹಿಮಾಲಯದ ಸಮೀಪದಲ್ಲಿರುವ 'ಭೃಗು-ಪ್ರಸ್ರವಣ' ಪರ್ವತದ ಮೇಲೆ ತಪಸ್ಸನ್ನಾಚರಿಸಿದನು. ಒಂದು ನೂರು ವರ್ಷಗಳ ತಪಸ್ಸನ್ನಾಚರಿಸಿದನಂತರ ಭೃಗುಮುನಿಯು ಸಂತುಷ್ಟನಾಗಿ ಇಂತೆಂದನು :

ಸಗರಾಯ ವರಂ ಪ್ರಾದಾದ್ ಭೃಗುಃ ಸತ್ಯವತಾಂ ವರಃ ॥ ೬ ॥
ಅಪತ್ಯಲಾಭಃ ಸುಮಹಾನ್ಭವಿಷ್ಯತಿ ತವಾನಘ ।
ಕೀರ್ತಿಂ ಚಾಪ್ರತಿಮಾಂ ಲೋಕೇ ಪ್ರಾಪ್ಸ್ಯಸೇ ಪುರುಷರ್ಷಭ ॥ ೭ ॥
ಏಕಾ ಜನಯಿತಾ ತಾತ ಪುತ್ರಂ ವಂಶಕರಂ ತವ ।
ಷಷ್ಟಿಂ ಪುತ್ರಸಹಸ್ರಾಣಿ ಅಪರಾ ಜನಯಿಷ್ಯತಿ ॥ ೮ ॥

ಸತ್ಯವನ್ನು ನುಡಿಯುವವರಲ್ಲಿ ಶ್ರೇಷ್ಠನಾಗಿದ್ದ ಭೃಗುಮಹರ್ಷಿಯು ಸಗರರಾಜನಿಗೆ ಈ ರೀತಿ ವರವನ್ನು ಕೊಟ್ಟನು : "ಹೇ ಪಾಪರಹಿತನೇ, ನಿನಗೆ ಒಳ್ಳೆಯ ಸಂತಾನವಾಗುವದು, ಲೋಕದಲ್ಲಿ ನಿನಗೆ ಅಪ್ರತಿಮ ಕೀರ್ತಿಯು ದೊರೆಯುವದು. ಹೇ ಸಗರನೇ, ನಿನ್ನ ಓರ್ವ ಪತ್ನಿಗೆ ವಂಶತಾರಕ ಮಗನು ಜನಿಸುವನು, ಇನ್ನೊಬ್ಬಳಿಗೆ ಅರವತ್ತುಸಾವಿರ ಗಂಡುಮಕ್ಕಳಾಗುವರು."

ಭೃಗುಮುನಿಯ ವಚನವನ್ನು ಕೇಳಿ ಸಂತುಷ್ಟರಾದ ಸಗರಪತ್ನಿಯರು, ಒಬ್ಬ ಮಗನು ಅವರೀರ್ವರಲ್ಲಿ

ಯಾರಿಗೆ ಹುಟ್ಟುವನು ? ಅರವತ್ತುಸಾವಿರ ಪುತ್ರರು ಯಾರಿಗೆ ಹುಟ್ಟಲಿರುವರು ? ಎಂಬುದನ್ನು ಅರಿತುಕೊಳ್ಳುವ ಆಸೆಯನ್ನು ವ್ಯಕ್ತಪಡಿಸಿದರು. ಆಗ ಮುನಿಯು ಅವರಿಬ್ಬರ ಇಚ್ಛೆಗಳ ಬಗ್ಗೆ ವಿಚಾರಿಸಿದನು.

> ಏಕೋ ವಂಶಕರೋ ವಾಸ್ತು ಬಹವೋ ವಾ ಮಹಾಬಲಾಃ ।
> ಕೀರ್ತಿವಂತೋ ಮಹೋತ್ಸಾಹಾಃ ಕಾ ವಾ ಕಂ ವರಮಿಚ್ಛತಿ ॥ ೧೨ ॥

ವಂಶತಾರಕ ಪುತ್ರನು ಬೇಕಿದ್ದರೆ ಒಬ್ಬನೇ ಹುಟ್ಟುವನು. ಕೀರ್ತಿಕರ, ಉತ್ಸಾಹವುಳ್ಳ, ಮಹಾಬಲಾಢ್ಯ ಪುಷ್ಕಳ ಪುತ್ರರು ಬೇಕಿದ್ದರೆ ಅಂಥವರೂ ಹುಟ್ಟುವರು.

ಕೇಶಿನಿಯು ವಂಶಕಾರ ಒಬ್ಬ ಪುತ್ರನನ್ನು ಬೇಡಿಕೊಂಡಳು. ಸುಮತಿಯು ಅರವತ್ತುಸಾವಿರ ಪುತ್ರರನ್ನು ಬೇಡಿಕೊಂಡಳು. ಕೇಶಿನಿಗೆ 'ಅಸಮಂಜ'ನೆಂಬ ಒಬ್ಬ ಮಗನು ಹುಟ್ಟಿದನು. ಸುಮತಿಗೆ ಒಂದು 'ಗರ್ಭತುಂಬ'ವಾಯಿತು. ಆ ತುಂಬವು ಒಡೆದು ಅದರಿಂದ ಅರವತ್ತುಸಾವಿರ ಪುತ್ರರು ಹೊರಬಂದರು.

ಯಾಚಿತ.

ನೋಡಿ : ಮಹಾಭಾರತದ ವರದಾನ, ಶಂಕರ > ಸಗರ, ವರ ಕ್ರ. ೬೯.

## ೧೫. ಬ್ರಹ್ಮದೇವ > ಭಗೀರಥ   ಬಾಲಕಾಂಡ / ೪೨

ವಿಶ್ವಾಮಿತ್ರನು ಶ್ರೀರಾಮನಿಗೆ ಗಂಗೆಯನ್ನು ದೊರಕಿಸಲು ಭಗೀರಥನು ಆಚರಿಸಿದ ತಪಸ್ಸಿನ ಬಗ್ಗೆ ತಿಳಿಸುತ್ತಿದ್ದಾನೆ.

ಧರ್ಮನಿಷ್ಠನಾದ ಭಗೀರಥನಿಗೆ ಸಂತಾನವಿಲ್ಲದ ಕಾರಣ ಆತನು ತನ್ನ ರಾಜ್ಯವನ್ನು ಮತ್ತು ಪ್ರಜೆಗಳನ್ನು ಮಂತ್ರಿಗಳ ಆಡಳಿತಕ್ಕೆ ಒಪ್ಪಿಸಿ, ಗಂಗೆಯನ್ನು ಪಡೆದು ಪಿತೃಗಳಿಗೆ ಸ್ವರ್ಗವನ್ನು ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ಗೋಕರ್ಣದಲ್ಲಿ ದೀರ್ಘತಪಸ್ಸನ್ನಾರಂಭಿಸಿದನು. ಪಂಚಾಗ್ನಿಸಾಧನೆಯನ್ನು ಕೈಕೊಂಡು ಆತನು ತಿಂಗಳಿಗೊಂದು ಸಲ ಮಾತ್ರ ಆಹಾರವನ್ನು ಸೇವಿಸುತ್ತಿದ್ದನು. ಈ ರೀತಿ ಒಂದು ಸಹಸ್ರ ವರ್ಷಗಳ ತಪವು ಪೂರೈಸಿದಾಗ ಭಗವಂತನಾದ ಬ್ರಹ್ಮದೇವನು ಪ್ರಸನ್ನನಾಗಿ ದೇವಗಣಸಮೇತನಾಗಿ ಭಗೀರಥನ ಭೇಟಿಗಾಗಿ ಬಂದು ಈ ರೀತಿ ಎಂದನು :

> ಭಗೀರಥಮಹಾರಾಜ ಪ್ರೀತಸ್ತೇಽಹಂ ಜನಾಧಿಪ ।
> ತಪಸಾ ಚ ಸುತಪ್ತೇನ ವರಂ ವರಯ ಸುವ್ರತ ॥ ೧೬ ॥

"ಹೇ ಪ್ರಜಾಧಿಪತಿ ಭಗೀರಥ ಮಹಾರಾಜನೇ, ಉತ್ಕೃಷ್ಟವಾಗಿ ಆಚರಿಸಲ್ಪಟ್ಟ ನಿನ್ನ ತಪದ ಪ್ರಭಾವದಿಂದ ನಾನು ನಿನಗೆ ಪ್ರಸನ್ನನಾಗಿದ್ದೇನೆ. ಹೇ ಸದಾಚರಣಸಂಪನ್ನ ನೃಪಶ್ರೇಷ್ಠನೇ, ನಿನಗೆ ಅಪೇಕ್ಷಿತವಾದ ವರವನ್ನು ಬೇಡಿಕೊ !"

ಬ್ರಹ್ಮದೇವನ ನುಡಿಗಳನ್ನು ಕೇಳಿ ಮಹಾತೇಜಸ್ಸುಳ್ಳ, ಮಹಾಪರಾಕ್ರಮಿಯಾದ ಭಗೀರಥನು ಕರಗಳೆರಡನ್ನೂ ಜೋಡಿಸಿ ಇಂತೆಂದನು :

> ಯದಿ ಮೇ ಭಗವಾನ್ಪ್ರೀತೋ ಯದ್ಯಸ್ತಿ ತಪಸಃ ಫಲಮ್ ।
> ಸಗರಸ್ಯಾತ್ಮಜಾಃ ಸರ್ವೇ ಮತ್ತಃ ಸಲಿಲಮಾಪ್ನುಯುಃ ॥ ೧೮ ॥
> ಗಂಗಾಯಾಃ ಸಲಿಲಕ್ಲಿನ್ನೇ ಭಸ್ಮನ್ಯೇಷಾಂ ಮಹಾತ್ಮನಾಮ್ ।
> ಸ್ವರ್ಗಂ ಗಚ್ಛೇಯುರತ್ಯಂತಂ ಸರ್ವೇ ಚ ಪ್ರಪಿತಾಮಹಾಃ ॥ ೧೯ ॥
> ದೇವ ಯಾಚೇ ಹ ಸಂತತ್ಯೈ ನಾವಸೀದೇತ್ಕುಲಂ ಚ ನಃ ।
> ಇಕ್ಷ್ವಾಕೂಣಾಂ ಕುಲೇ ದೇವ ಏಷ ಮೇಽಸ್ತು ವರಃ ಪರಃ ॥ ೨೦ ॥

"ಹೇ ಭಗವನ್, ತಾವು ನನಗೆ ಪ್ರಸನ್ನರಾಗಿದ್ದರೆ, ನನ್ನ ತಪಸ್ಸಿನ ಫಲವು ನನಗೆ ಲಭಿಸುವಂತಿದ್ದರೆ, ಸಗರಪುತ್ರರೆಲ್ಲರ ಉತ್ತರಕ್ರಿಯೆಯು ನನ್ನಿಂದ ಆಗಬೇಕು. ಆ ಮಹಾತ್ಮರ ಭಸ್ಮವು ಗಂಗಾಜಲದಲ್ಲಿ ಬೆರೆಯಿತೆಂದರೆ, ನನ್ನ ಆ ಪ್ರಪಿತಾಮಹರಿಗೆ ಅಕ್ಷಯಸ್ವರ್ಗ ದೊರೆಯುವದು. ಹೇ ದೇವರೇ, ನಮ್ಮ ಕುಲವು ಉಚ್ಛಿನ್ನವಾಗಬಾರದೆಂದು ನಾನು ಸಂತಾನವನ್ನು ಬೇಡುತ್ತಿದ್ದೇನೆ. ನಾನು ಕೇಳಿದ ವರವು ಇಡಿಯ ಇಕ್ಷ್ವಾಕು

ವಂಶಕ್ಕೆ ಅನ್ವಯಿಸಲಿ. ಹೇ ದೇವ, ಇಕ್ಷ್ವಾಕುವಂಶದಲ್ಲಿ ಹುಟ್ಟಿದ ನನಗೆ ಇನ್ನೊಂದು ವರವು ನಿಮ್ಮಿಂದ ದೊರೆಯಬೇಕು."

ಭಗೀರಥನ ವಿನಂತಿಯನ್ನು ಆಲಿಸಿ ಬ್ರಹ್ಮದೇವನು ಹೀಗೆ ನುಡಿದನು:

ಮನೋರಥೋ ಮಹಾನೇಷ ಭಗೀರಥ ಮಹಾರಥ ।
ಏವಂ ಭವತು ಭದ್ರಂ ತೇ ಇಕ್ಷ್ವಾಕುಕುಲವರ್ಧನ ॥ ೨೨ ॥

"ಹೇ ಮಹಾರಥಿಯೆ ! ಈ ನಿನ್ನ ಇಚ್ಛೆ ದೊಡ್ಡದಾಗಿದೆ. ಹೇ ಇಕ್ಷ್ವಾಕುಕುಲವರ್ಧನನೇ ! ನೀನು ನುಡಿದಂತೆ ಆಗಲಿ. ಅದಕ್ಕಾಗಿ ಹಿಮಾಮಲಯದ ಜ್ಯೇಷ್ಠಪುತ್ರಿಯಾದ ಗಂಗೆಯನ್ನು ಧರಿಸಲು ಶಂಕರನನ್ನು ನಿಯೋಜಿಸ ಬೇಕು. ಗಂಗೆಯ ಪ್ರಪಾತವನ್ನು ಪೃಥ್ವಿಯು ತಡೆದುಕೊಳ್ಳಲಾರಳು. ಗಂಗೆಯನ್ನು ಧರಿಸುವ ಸಾಮರ್ಥ್ಯವು ಶಂಕರನ ಹೊರತು ಬೇರೆ ಯಾರಲ್ಲೂ ಇಲ್ಲ." ಈ ರೀತಿ ಹೇಳಿ, ಭಗೀರಥನನ್ನು ಯೋಗ್ಯ ಸಮಯದಲ್ಲಿ ಅನುಗ್ರಹಿಸಲು ಗಂಗೆಗೆ ತಿಳಿಸಿದನು.

ಸಾಗರಸ್ಯ ಜಲಂ ಲೋಕೇ ಯಾವತ್ ಸ್ಥಾಸ್ಯತಿ ಪಾರ್ಥಿವ ।
ಸಾಗರಸ್ಯಾತ್ಮಜಾಃ ಸರ್ವೇ ದಿವಿ ಸ್ಥಾಸ್ಯಂತಿ ದೇವವತ್ ॥ ೪ ॥
ಇಯಂ ಚ ದುಹಿತಾ ಜ್ಯೇಷ್ಠಾ ತವ ಗಂಗಾ ಭವಿಷ್ಯತಿ ।
ತ್ವತ್ಕೃತೇನ ಚ ನಾಮ್ನಾಯ ಲೋಕೇ ಸ್ಥಾಸ್ಯತಿ ವಿಶ್ರುತಾ ॥ ೫ ॥
ಗಂಗಾ ತ್ರಿಪಥಗಾ ನಾಮ ದಿವ್ಯಾ ಭಾಗೀರಥೀತಿ ಚ ।
ತ್ರೀನ್ ಪಥೋ ಭಾವಯಂತೀತಿ ತಸ್ಮಾತ್ ತ್ರಿಪಥಗಾ ಸ್ಮೃತಾ ॥ ೬ ॥

ಕಡಲಲ್ಲಿ ನೀರಿರುವವರೆಗೆ ಸಗರನ ಮಕ್ಕಳೆಲ್ಲರೂ ಸ್ವರ್ಗಲೋಕದಲ್ಲಿ ದೇವತೆಗಳಂತೆ ಪ್ರತಿಷ್ಠಿತರಾಗಿ ಉಳಿಯುವರು. ಈ ಗಂಗೆ ನಿನ್ನ ಹಿರಿಯ ಮಗಳೆನ್ನಿಸುವಳು. ಅಲ್ಲದೆ ಅವಳು ನಿನ್ನ ಹೆಸರಿನಿಂದಾಗಿಯೇ ಭಾಗೀರಥಿಯೆಂದು ಈ ಪ್ರಪಂಚದಲ್ಲಿ ಹೆಸರುವಾಸಿಯಾಗುವಳು. ಇದೇ ರೀತಿ, ಅವಳು ತ್ರಿಪಥಗಾ, ದಿವ್ಯಾ ಹಾಗೂ ಭಾಗೀರಥಿ ಎಂಬೀ ಮೂರು ಹೆಸರುಗಳಿಂದಲೂ ಖ್ಯಾತಿಯನ್ನು ಪಡೆಯುವಳು.

ಬ್ರಹ್ಮದೇವನನ್ನು ಪ್ರಸನ್ನಗೊಳಿಸಿ ಪಿತೃಗಳಿಗೆ ಸ್ವರ್ಗವನ್ನು ದೊರಕಿಸಿಕೊಡುವದು ಮತ್ತು ತಾನು ಮಕ್ಕಳನ್ನು ಪಡೆಯವದು ಎಂಬ ಉದ್ದೇಶಗಳಿದ್ದಕಾರಣ ಈ ಎರಡೂ ವರಗಳು 'ಯಾಚಿತ'ವಾಗಿವೆ.

ಯಾಚಿತ.

### ೧೬. ಕಶ್ಯಪ > ದಿತಿ ಬಾಲಕಾಂಡ / ೪೬

ವಿಶ್ವಾಮಿತ್ರ ಋಷಿಯು ಶ್ರೀರಾಮನಿಗೆ ಮರುದ್ಗಣಗಳ ಜನ್ಮವೃತ್ತಾಂತವನ್ನು ಹೇಳುತ್ತಿದ್ದಾನೆ.

ದಿತಿ ಮತ್ತು ಅದಿತಿಯರು ಕಶ್ಯಪನ ಭಾರ್ಯೆಯರಾಗಿದ್ದರು. ದಿತಿಯ ಪುತ್ರರೆಂದರೆ ದೈತ್ಯರು ಮತ್ತು ಅದಿತಿಯ ಪುತ್ರರೆಂದರೆ ದೇವತೆಗಳು. ಅಮೃತಮಂಥನದ ಕಾಲಕ್ಕೆ ದೇವ-ದಾನವರ ನಡುವೆ ನಡೆದ ಯುದ್ಧದಲ್ಲಿ ದೇವತೆಗಳು ದೈತ್ಯರನ್ನು ವಧಿಸಿದರು. ಆಗ ದಿತಿಯು ದುಃಖಿತಳಾಗಿ ತನ್ನ ಪತಿಗೆ ಈ ರೀತಿ ಎಂದಳು— "ಭಗವನ್, ನಿಮ್ಮ ಪರಾಕ್ರಮಿಗಳಾದ ಪುತ್ರರು ನನ್ನ ಮಕ್ಕಳನ್ನು ಕೊಂದಿದ್ದಾರೆ. ಉಗ್ರತಪಸ್ಸನ್ನಾಚರಿಸಿ ಇಂದ್ರನನ್ನು ಘಾತಿಸುವಂಥ ಪುತ್ರನನ್ನು ನಿಮ್ಮಿಂದ ಹೊಂದಬೇಕೆಂಬ ಇಚ್ಛೆ ನನಗಿದೆ. ನಾನು ತಪಸ್ಸನ್ನು ಆಚರಿಸುವೆ. ನನಗೆ ಗರ್ಭಾಧಾನವನ್ನು ಮಾಡಿರಿ !"

ಇಂದ್ರನನ್ನು ವಧಿಸುವ ಪುತ್ರನನ್ನು ಪಡೆಯಲೋಸುಗ ತಪಸ್ಸನ್ನು ಕೈಕೊಳ್ಳಲು ಅವಳು ಅನುಜ್ಞೆಯನ್ನು ಬೇಡಿದಾಗ ಕಶ್ಯಪ ಮುನಿಯು ಹೀಗೆಂದನು :

ಏವಂ ಭವತು ಭದ್ರಂ ತೇ ಶುಚಿರ್ಭವ ತಪೋಧನೇ ।
ಜನಯಿಷ್ಯಸಿ ಪುತ್ರಂ ತ್ವಂ ಶಕ್ರಹಂತಾರಮಾಹವೇ ॥ ೫ ॥
ಪೂರ್ಣೇ ವರ್ಷಸಹಸ್ರೇ ತು ಶುಚಿರ್ಯದಿ ಭವಿಷ್ಯಸಿ ।
ಪುತ್ರಂ ತ್ರೈಲೋಕ್ಯಹಂತಾರಂ ಮತ್ತಸ್ತ್ವಂ ಜನಯಿಷ್ಯಸಿ ॥ ೬ ॥

"ಹೇ ತಪೋಧನಳೆ ! ನಿನಗೆ ಶುಭವಾಗಲಿ ! ನೀನು ಶುಚಿರ್ಭೂತಳಾಗಿರು. ಅಂದರೆ ಇಂದ್ರನನ್ನು

ಯುದ್ಧದಲ್ಲಿ ಜಯಿಸುವ ಪುತ್ರನು ನಿನಗೆ ಹುಟ್ಟುವನು. ಒಂದು ಸಾವಿರ ವರ್ಷಗಳವರೆಗೆ ಶುಚಿರ್ಭೂತಳಾಗಿ ನೀನು ಉಳಿದರೆ ತ್ರೈಲೋಕ್ಯಾಧಿಪತಿಯಾದ ಇಂದ್ರನನ್ನು ಕೊಲ್ಲುವ ಮಗನು ನನ್ನಿಂದ ನಿನಗೆ ಹುಟ್ಟುವನು."

ಹೀಗೆ ನುಡಿದು ಮಹಾತೇಜಸ್ವಿಯಾದ ಕಶ್ಯಪನು ಅವಳ ಮೈಸಿರಿಯನ್ನು ಸ್ಪರ್ಶಿಸಿದನು. 'ನಿನಗೆ ಶುಭವಾಗಲಿ' ಎಂದು ಹರಸಿ ತಪಸ್ಸಿಗಾಗಿ ತೆರಳಿದನು.

ದಿತಿಗೆ ಅತಿಶಯ ಆನಂದವಾಯಿತು. ಅವಳು ಉಗ್ರತಪಸ್ಸನ್ನು ಕೈಗೊಂಡಳು. ಆ ಸಮಯದಲ್ಲಿ ಇಂದ್ರನು ದಿತಿಗೆ ಉತ್ಕೃಷ್ಟ ಸೇವೆಯನ್ನು ಸಲ್ಲಿಸಿದನು. ಸಾವಿರ ವರ್ಷಗಳ ತಪಸ್ಸು ಪೂರ್ಣವಾಗಲು ಕೇವಲ ಹತ್ತು ವರ್ಷಗಳು ಉಳಿದಾಗ ಆಕೆಯು ಸಂತೋಷಭರಿತಳಾಗಿ ಇಂದ್ರನಿಗೆ ಇಂತೆಂದಳು : "ಹೇ ಸುರಶ್ರೇಷ್ಠನೇ, ನಿನ್ನ ಸೇವೆಯಿಂದ ನಾನು ಸಂತೋಷಗೊಂಡಿದ್ದೇನೆ. ನಿನ್ನನ್ನು ವಧಿಸಲೆಂದು ಬಯಸಿದ ಪುತ್ರನು ಹುಟ್ಟದೇ ನಿನಗೆ ಜಯವನ್ನುಂಟುಮಾಡುವ ಪುತ್ರನನ್ನೇ ಹೆರುವೆ."

ವರೋ ವರ್ಷಸಹಸ್ರಾಂತೇ ಮಮ ದತ್ತಃ ಸುತಂ ಪ್ರತಿ । ೧೫

ಮಹಾತ್ಮನಾದ ನಿನ್ನ ಪಿತನನ್ನು ಪ್ರಾರ್ಥಿಸಿಕೊಂಡಾಗ ಆತನು "ಸಾವಿರ ವರ್ಷಗಳನಂತರ ನಿನಗೆ ಪುತ್ರನು ಹುಟ್ಟುವನು !" ಎಂಬ ವರವನ್ನು ಕೊಟ್ಟಿದ್ದಾನೆ.

ಹೀಗಿರುವಾಗ ಒಂದು ಮಧ್ಯಾಹ್ನದ ಸಮಯದಲ್ಲಿ ಸೂರ್ಯನು ನಡುನೆತ್ತಿಯ ಮೇಲೇರಿದಾಗ ದಿತಿ ಕುಳಿತಲ್ಲಿಯೇ ತೂಕಡಿಸಹತ್ತಿದಳು. ಅವಳಿಗೆ ನಿದ್ರೆಹತ್ತಿತು. ತಲೆ ನೆಲಕ್ಕೆ ತಗಲಿತು. ಪಾದಗಳನ್ನು ಸ್ಪರ್ಶಿಸಿತು. ಈ ವರ್ತನೆಯಿಂದ ಅವಳಲ್ಲಿಯ ಶುಚಿರ್ಭೂತತನವು ಇಲ್ಲದಾಯಿತು. ಇದರಿಂದ ಇಂದ್ರನಿಗೆ ಆನಂದವಾಗಿ, ಆತನು ಆಕೆಯ ಶರೀರದಲ್ಲಿ ಜಾಗರೂಕತೆಯಿಂದ ಪ್ರವೇಶಿಸಿ ಅವಳ ಗರ್ಭವನ್ನು ಏಳು ಭಾಗಗಳಲ್ಲಿ ತುಂಡರಿಸಿದನು. ಆಗ ಆ ಗರ್ಭವು ಅಳತೊಡಗಿತು. ಆ ರೋದನವನ್ನು ಕೇಳಿ ದಿತಿಯು 'ಮಾ ರುದ !' 'ಮಾ ರುದ !' ಎಂದಳು. ಗರ್ಭವನ್ನು ನಾಶಪಡಿಸಬಾರದೆಂದು ಅವಳು ಇಂದ್ರನಿಗೆ ಹೇಳಿದಳು. ಆಗ ಆತನು ಅವಳ ದೇಹದಿಂದ ಹೊರಗೆ ಬಂದು ಈ ರೀತಿ ನುಡಿದನು : "ಪಾದಗಳನ್ನಿಡುವ ಜಾಗದಲ್ಲಿ ನೀನು ತಲೆ ಇಟ್ಟು ಮಲಗಿದ ಕಾರಣ ನಿನ್ನಲ್ಲಿ ಅಶುಚಿಯುಂಟಾಯಿತು. ನಿನ್ನ ಈ ನ್ಯೂನತೆಯನ್ನು ಗಮನಿಸಿ ಯುದ್ಧದಲ್ಲಿ ನನ್ನನ್ನು ವಧಿಸಬಹುದಾದ ನಿನ್ನ ಪುತ್ರನನ್ನು ಏಳು ಭಾಗಗಳಲ್ಲಿ ತುಂಡರಿಸಿರುವೆನು ; ಅದಕ್ಕಾಗಿ ನನ್ನನ್ನು ಕ್ಷಮಿಸು !"

ಇದನ್ನು ಕೇಳಿದನಂತರ ದಿತಿಯು ಇಂದ್ರನಿಗೆ ಹೀಗೆಂದಳು :

"ನೀನು ಮಾಡಿದ ಸಂಗತಿಯು ಇಬ್ಬರಿಗೂ ಹಿತಕರವಾಗಬೇಕು ; ಈ ಏಳು ಪುತ್ರರು ಏಳು ಮರುದ್ಗಣರ ಸ್ಥಾನವನ್ನು ಕಾಪಾಡಲಿ." ಈ ಇಚ್ಛೆಯನ್ನು ಇಂದ್ರನು ಮನ್ನಿಸಿದನು. ಈ ಏಳು ಪುತ್ರರು ಮರುತ್‌ರೆಂದು ಖ್ಯಾತಿಪಟ್ಟರು.

ಯಾಚಿತ.

## ೧೭. ಇಂದ್ರ > ದಿತಿ ಬಾಲಕಾಂಡ / ೪೭

ವಿಶ್ವಾಮಿತ್ರ ಋಷಿಯು ಶ್ರೀರಾಮನಿಗೆ ಮರುದ್ಗಣದ ಜನ್ಮವೃತ್ತಾಂತವನ್ನು ಹೇಳುತ್ತಿದ್ದಾನೆ.

ಕಶ್ಯಪನು ದಿತಿಗೆ ಅವಳ ಇಚ್ಛೆಯನುಸಾರ ಇಂದ್ರನನ್ನು ವಧಿಸುವ ಮಗನು ಹುಟ್ಟುವನೆಂಬ ವರವನ್ನು ಕೊಟ್ಟನು. ವರದ ಫಲ ಸಿಗಬೇಕಾದರೆ ಒಂದು ಸಾವಿರ ವರ್ಷಗಳವರೆಗೆ ಆಕೆಗೆ ಶುಚಿಯಾಗಿದ್ದು ತಪಸ್ಸನ್ನಾಚರಿಸಲು ಹೇಳಿದನು. ಆ ಕಾಲಾವಧಿಯು ಪೂರ್ಣಗೊಳ್ಳಲು ಕೇವಲ ಹತ್ತು ವರ್ಷಗಳಿದ್ದಾಗ ಒಮ್ಮೆ ಒಂದು ಮಧ್ಯಾಹ್ನದಲ್ಲಿ ದಿತಿಯು ತನ್ನ ತಲೆಯನ್ನು ಪಾದಗಳತ್ತ ಇಟ್ಟು ಮಲಗಿದಳು. ಅದರಿಂದ ಅಶುಚಿಯಾಯಿತು. ಇಂದ್ರನು ದಿತಿಯ ಉದರವನ್ನು ಪ್ರವೇಶಿಸಿ ಅವಳ ಗರ್ಭವನ್ನು ಏಳು ತುಂಡುಗಳನ್ನಾಗಿ ಮಾಡಿದನು. ಆಗ ದಿತಿಗೆ ಬಹಳೇ ದುಃಖವಾಯಿತು. ಅವಳು ಇಂದ್ರನಿಗೆ ಹೀಗೆ ನುಡಿದಳು -

ಮಮಾಪರಾಧಾದ್ ಗರ್ಭೋಽಯಂ ಸಪ್ತಧಾ ಶಕಲೀಕೃತಃ ।
ನಾಪರಾಧೋ ಹಿ ದೇವೇಶ ತವಾತ್ರ ಬಲಸೂದನ ॥ ೨ ॥

ಪ್ರಿಯಂ ತ್ವತ್ಕೃತಮಿಚ್ಛಾಮಿ ಮಮ ಗರ್ಭವಿಪರ್ಯಯೇ ।
ಮರುತಾಂ ಸಪ್ತಸಪ್ತಾನಾಂ ಸ್ಥಾನಪಾಲಾ ಭವಂತು ತೇ ॥ ೩ ॥
ವಾತಸ್ಕಂಧಾ ಇಮೇ ಸಪ್ತ ಚರಂತು ದಿವಿಪುತ್ರಕ ।
ಮಾರುತಾ ಇತಿ ವಿಖ್ಯಾತಾ ದಿವ್ಯರೂಪಾ ಮಮಾತ್ಮಜಾಃ ॥ ೪ ॥

"ಹೇ ದೇವಾಧಿಪತೇ, ನನ್ನ ಅಪರಾಧದಿಂದ ಈ ಗರ್ಭದ ಏಳು ತುಂಡುಗಳಾಗಿವೆ. ಇದರಲ್ಲಿ ನಿನ್ನ ಯಾವ ತಪ್ಪೂ ಇಲ್ಲ. ಈಗ ನನ್ನ ಗರ್ಭವನ್ನು ನಾಶಗೊಳಿಸಲೆಂದು ನೀನು ಮಾಡಿದ ಕೃತ್ಯವು ಇಬ್ಬರಿಗೂ ಪ್ರಿಯವಾಗ ಬೇಕೆಂದು ನಾನು ಬಯಸುತ್ತೇನೆ. ಆದ್ದರಿಂದ ಈ ಏಳು ಪುತ್ರರು ಮರುದ್ಗಣಗಳ ಸ್ಥಾನರಕ್ಷಣೆಯನ್ನು ಮಾಡಲಿ ! ಹೇ ಪುತ್ರನೇ, ಮಾರುತ ಎಂದು ಖ್ಯಾತಿಗೊಂಡು ಈ ನನ್ನ ದಿವ್ಯಪುತ್ರರು ಆಕಾಶದಲ್ಲಿರುವ ಏಳು ವಾಯುಪ್ರವಾಹಗಳಲ್ಲಿ ಸಂಚರಿಸಲಿ !" ಅವಳ ಈ ನುಡಿಯನ್ನು ಕೇಳಿ ಇಂದ್ರನು ಕೈಮುಗಿದು ಹೀಗೆಂದನು :

ಸರ್ವಮೇತದ್ಯಥೋಕ್ತಂ ತೇ ಭವಿಷ್ಯತಿ ನ ಸಂಶಯಃ ॥ ೮ ॥

"ನೀನು ಹೇಳಿದಂತೆಯೇ ಆಗುವದು ! ಅದರಲ್ಲಿ ಸಂದೇಹ ಬೇಡ."

ಇಂದ್ರನು ಅವಳಿಗೆ ಶುಭವನ್ನು ಕೋರಿ, ಅವಳ ಮಕ್ಕಳು ಅವಳು ಬಯಸಿದಂತೆ ಸಂಚರಿಸುವರೆಂಬ ಆಶ್ವಾಸನೆಯನ್ನು ಕೊಟ್ಟನು.

- 'ವರ'ವೆಂದು ಸ್ಪಷ್ಟವಾಗಿ ಉಲ್ಲೇಖಿಸಿರದಿದ್ದರೂ ಇಂದ್ರನು ಕೊಟ್ಟ ಆಶ್ವಾಸನೆಯು ವರದಂತೆಯೇ ಇದೆ. ಯಾಚಿತ.

## ೧೮. ಶಂಕರ > ವಿಶ್ವಾಮಿತ್ರ ಬಾಲಕಾಂಡ / ೫೫

ವಿಶ್ವಾಮಿತ್ರನಿಗೆ ಯಾವ ರೀತಿಯಲ್ಲಿ ಅಸ್ತ್ರಗಳು ದೊರೆತವೆಂಬ ಬಗ್ಗೆ ಶತಾನಂದನು ಶ್ರೀರಾಮನಿಗೆ ಹೇಳುತ್ತಿದ್ದಾನೆ.

ವಿಶ್ವಾಮಿತ್ರನ್ನು ವಸಿಷ್ಠನ ಕಾಮಧೇನುವನ್ನು ಬಲವಂತದಿಂದ ಎಳೆದೊಯ್ಯಾಗ ಕಾಮಧೇನುವಿನ 'ಅಂಬಾ' ಎಂಬ ಕರೆಯಿಂದಾಗಿ ಕಾಂಬೋಜ ಹಾಗೂ ಅವಳ ಅವಯವಗಳಿಂದ ಬರ್ಬರ, ಯವನ, ಶಕ, ಮ್ಲೇಚ್ಛ, ಹಾರಿತ, ಕಿರಾತ ಮುಂತಾದವರು ಉಂಟಾಗಿ ವಿಶ್ವಾಮಿತ್ರನ ಸೈನ್ಯವೆಲ್ಲವನ್ನೂ ನಾಶಗೊಳಿಸಿದರು. ಆಗ ಕೋಪಗೊಂಡ ವಿಶ್ವಾಮಿತ್ರನ ಪುತ್ರರು ವಸಿಷ್ಠನ ಮೇಲೆ ಏರಿಹೋದರು. ವಸಿಷ್ಠನು ಕೇವಲ ತನ್ನ ಹೂಂಕಾರದಿಂದಲೇ ಅವರನ್ನು ಸುಟ್ಟುಹಾಕಿದನು. ಸೈನ್ಯ ಹಾಗೂ ಮಕ್ಕಳು ನಾಶಗೊಂಡಿದ್ದನ್ನು ನೋಡಿ ವಿಶ್ವಾಮಿತ್ರನು ನಾಚಿಕೆಯಿಂದ ಕಳೆಹೀನನಾದನು. ರಾಜ್ಯವನ್ನು ತನ್ನ ಒಬ್ಬ ಮಗನಿಗೆ ಒಪ್ಪಿಸಿ ವಿಶ್ವಾಮಿತ್ರನು ತಪಶ್ಚರ್ಯೆಗಾಗಿ ವನಕ್ಕೆ ತೆರಳಿದನು. ಶಿವನನ್ನು ಪ್ರಸನ್ನಗೊಳಿಸಲು ಆತನು ಉಗ್ರತಪಸ್ಸನ್ನು ಆಚರಿಸಿದನು. ಪ್ರಸನ್ನನಾದ ಶಂಕರನು ಆತನಿಗೆ ದರ್ಶನವನ್ನು ಕೊಟ್ಟು ಇಂತೆಂದನು :

ದರ್ಶಯಾಮಾಸ ವರದೋ ವಿಶ್ವಾಮಿತ್ರಂ ಮಹಾಮುನಿಮ್ ॥ ೧೩ ॥
ಕಿಮರ್ಥಂ ತಪ್ಯಸೇ ರಾಜನ್ಬ್ರೂಹಿ ಯತ್ತೇ ವಿವಕ್ಷಿತಮ್ ।
ವರದೋಽಸ್ಮಿ ವರೋ ಯಸ್ತೇ ಕಾಂಕ್ಷಿತಃ ಸೋಽಭಿಧೀಯತಾಮ್ ॥ ೧೪ ॥

"ಹೇ ರಾಜನೇ, ಏತಕ್ಕಾಗಿ ನೀನು ತಪಸ್ಸನ್ನಾಚರಿಸುತ್ತಿರುವೆ ? ನಿನಗೆ ಏನು ಬೇಕಾಗಿದೆ ? ನಾನು ವರವನ್ನು ಕೊಡಲು ಸಿದ್ಧನಾಗಿದ್ದೇನೆ. ಇಷ್ಟವಾದಂಥ ವರವನ್ನು ಬೇಡಿಕೊ !"

ಯದಿ ತುಷ್ಟೋ ಮಹಾದೇವ ಧನುರ್ವೇದೋ ಮಮಾನಘ ।
ಸಾಂಗೋಪಾಂಗೋಪನಿಷದಃ ಸರಹಸ್ಯಃ ಪ್ರದೀಯತಾಮ್ ॥ ೧೬ ॥
ಯಾನಿ ದೇವೇಷು ಚಾಸ್ತ್ರಾಣಿ ದಾನವೇಷು ಮಹರ್ಷಿಷು ।
ಗಂಧರ್ವಯಕ್ಷರಕ್ಷಃಸು ಪ್ರತಿಭಾಂತು ಮಮಾನಘ ॥ ೧೭ ॥
ತವ ಪ್ರಸಾದಾದ್ಭವತು ದೇವದೇವ ಮಮೇಪ್ಸಿತಮ್ ।
ಏವಮಸ್ತ್ವಿತಿ ದೇವೇಶೋ ವಾಕ್ಯಮುಕ್ತ್ವಾ ಗತಸ್ತದಾ ॥ ೧೮ ॥

"ಹೇ ಮಹಾದೇವರೇ, ಹೇ ಪಾಪರಹಿತರೇ, ನೀವು ಸಂತುಷ್ಟರಾಗಿದ್ದರೆ, ಅಂಗ, ಪ್ರತ್ಯಂಗ, ಮಂತ್ರ ಮತ್ತು ರಹಸ್ಯ ಇವುಗಳನ್ನು ಒಳಗೊಂಡ ಧನುರ್ವೇದವನ್ನು ನನಗೆ ಕರುಣಿಸಿರಿ ! ಹೇ ಪಾಪರಹಿತರೇ, ದೇವತೆಗಳು, ದಾನವರು, ಮಹರ್ಷಿಗಳು, ಗಂಧರ್ವರು, ಯಕ್ಷರು ಮತ್ತು ರಾಕ್ಷಸರು ಇವರ ಬಳಿಯಿದ್ದ ಅಸ್ತ್ರಗಳ ಸ್ಫೂರ್ತಿಯೂ ನನಗಾಗಲಿ ! ಭೋ ದೇವಾಧಿದೇವರೇ, ನಿಮ್ಮ ಕೃಪಾಪ್ರಸಾದದಿಂದ ನನ್ನ ಇಚ್ಛೆಯು ಈಡೇರಲಿ !"

ಆಗ ಶಿವನು 'ತಥಾಸ್ತು' ಎಂದು ನುಡಿದು ಸಮ್ಮತಿಸಿದನು.

ಈ ವರವನ್ನು ಪಡೆದನಂತರ ವಸಿಷ್ಠರ ನಾಶವಾಯಿತೆಂದು ವಿಶ್ವಾಮಿತ್ರನು ಭಾವಿಸಿದನು. ದಹಿಸುವಂತಹ ಅಸ್ತ್ರಗಳನ್ನು ಪ್ರಯೋಗಿಸಿ ವಸಿಷ್ಠರ ಆಶ್ರಮಕ್ಕೆ ತೊಂದರೆ ಕೊಡಲಾರಂಭಿಸಿದನು. ಆಗ ವಸಿಷ್ಠರ ಆಶ್ರಮದಲ್ಲಿಯ ಸಕಲ ಪ್ರಾಣಿಮಾತ್ರರು ಭಯದಿಂದ ದಿಕ್ಕುಪಾಲಾಗಿ ಓಡತೊಡಗಿದರು. ತುಸುಕಾಲದಲ್ಲಿಯೇ ವಸಿಷ್ಠರ ಆಶ್ರಮವು ನೀರವವಾಯಿತು.

ಯಾಚಿತ.

## ೧೯. ಬ್ರಹ್ಮದೇವ > ವಿಶ್ವಾಮಿತ್ರ ಬಾಲಕಾಂಡ / ೬೫

ವಿಶ್ವಾಮಿತ್ರನಿಗೆ ಬ್ರಹ್ಮರ್ಷಿಪದವು ಹೇಗೆ ಲಭಿಸಿತೆಂಬುದನ್ನು ಕುರಿತು ಶತಾನಂದನು ಶ್ರೀರಾಮನಿಗೆ ಹೇಳುತ್ತಿದ್ದಾನೆ :

ಕ್ಷಾತ್ರತೇಜಸ್ಸಿಗಿಂತ ಬ್ರಹ್ಮತೇಜಸ್ಸು ಹೆಚ್ಚು ಪ್ರಭಾವಶಾಲಿಯಾದದ್ದು ಎಂಬುದನ್ನು ಅರಿತುಕೊಂಡನಂತರ, ತಾನೂ ಬ್ರಹ್ಮರ್ಷಿಯಾಗಬೇಕೆಂಬ ಉದ್ದೇಶದಿಂದ ವಿಶ್ವಾಮಿತ್ರನು ಘೋರತಪಸ್ಸನ್ನು ಕೈಗೊಂಡನು. ಮೌನ ವ್ರತಸ್ಥನಾಗಿ ಶ್ವಾಸೋಚ್ಛ್ವಾಸವನ್ನು ಅವರೋಧಿಸಿ ಒಂದು ಸಾವಿರ ವರ್ಷಗಳ ತಪಸ್ಸನ್ನು ಆಚರಿಸಿದನಂತರ ಆತನ ಶಿರಸ್ಸಿನಿಂದ ಹೊಗೆಯು ಹೊರಬರಹತ್ತಿತು. ಆ ಹೊಗೆಯಿಂದ ಮೂರೂ ಲೋಕಗಳು ಗೊಂದಲ ಕ್ಕೀಡಾದವು. ದೇವತೆಗಳು, ಋಷಿಗಳು, ಗಂಧರ್ವರು, ಪನ್ನಗರು, ಉರಗಗಳು, ರಾಕ್ಷಸರು, ಎಲ್ಲರೂ ಆ ತಪಸ್ಸಿನ ತೇಜಸ್ಸಿನಿಂದ ದಂಗುಬಡೆದು ಮೋಹಿತರಾದರು. ಸೂರ್ಯನು ಕಳೆಗುಂದಿದನು. ಆಗ ಎಲ್ಲರೂ ಬ್ರಹ್ಮನ ಬಳಿಗೆ ಹೋಗಿ ಇಂತೆಂದರು : "ತಪಸ್ಸಿನ ಪ್ರಭಾವದಿಂದ ವಿಶ್ವಾಮಿತ್ರನ ಮಾಹಾತ್ಮ್ಯವು ವರ್ಧಿಸುತ್ತಿದೆ. ಕಾಮಕ್ರೋಧಾದಿ ಲೋಪದೋಷಗಳು ವಿಶ್ವಾಮಿತ್ರನಲ್ಲಿ ಕಂಡುಬರುತ್ತಿಲ್ಲ. ಹೀಗಿರುವಾಗ ಆತನ ಮನಸ್ಸಿನಲ್ಲಿಯ ಇಚ್ಛೆಯು ಈಡೇರದಿದ್ದರೆ, ಸಕಲ ಪ್ರಾಣಿಗಳನ್ನು ಒಳಗೊಂಡಿದ ಸಮಸ್ತ ಸ್ಥಾವರ-ಜಂಗಮ ತ್ರೈಲೋಕ್ಯವು ನಾಶಕ್ಕೀಡಾಗಬಹುದು. ಈ ಅಗ್ನಿಸಮನಾದ ಮುನಿಯನ್ನು ಹೇಗಾದರೂ ಮಾಡಿ ಪ್ರಸನ್ನ ಗೊಳಿಸಬೇಕು. ಆತನಿಗೆ ದೇವಲೋಕವು ಬೇಕಿದ್ದರೆ ಅದನ್ನು ಸಹ ಕೊಟ್ಟುಬಿಡಬೇಕು ; ತ್ರೈಲೋಕ್ಯಕ್ಕೆ ಆಗ ಬಹುದಾದ ನಾಶವನ್ನು ತಡೆಯಬೇಕು."

ದೇವತೆಗಳೆಲ್ಲರ ವಿನಂತಿಯನ್ನು ಮನ್ನಿಸಿ ಬ್ರಹ್ಮಾದಿ ಸಕಲರು ವಿಶ್ವಾಮಿತ್ರನಿಗೆ ಈ ರೀತಿ ನುಡಿದರು :

> ಬ್ರಹ್ಮರ್ಷೇ ಸ್ವಾಗತಂ ತೇಽಸ್ತು ತಪಸಾ ಸ್ಮ ಸುತೋಷಿತಾಃ ॥ ೧೯ ॥
> ಬ್ರಾಹ್ಮಣ್ಯಂ ತಪಸೋಗ್ರೇಣ ಪ್ರಾಪ್ತವಾನಸಿ ಕೌಶಿಕ ।
> ದೀರ್ಘಮಾಯುಶ್ಚ ತೇ ಬ್ರಹ್ಮನ್ ದದಾಮಿ ಸಮರುದ್ಗಣಃ ॥ ೨೦ ॥
> ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಗಚ್ಛ ಸೌಮ್ಯ ಯಥಾಸುಖಮ್ ॥ ೨೧ ॥

"ಹೇ ಬ್ರಹ್ಮರ್ಷೇ, ನಿನಗೆ ಸುಸ್ವಾಗತ ! ನಿನ್ನ ತಪಸ್ಸಿನಿಂದ ನಾವು ತುಂಬಾ ಸಂತೋಷಗೊಂಡಿದ್ದೇವೆ. ಹೇ ಕುಶಿಕವಂಶಜನೇ, ನಿನ್ನ ಉಗ್ರತಪಸ್ಸಿನಿಂದ ನಿನಗೆ ಬ್ರಾಹ್ಮಣತ್ವವು ದೊರೆತಿದೆ. ಹೇ ಬ್ರಹ್ಮನ್, ಮರುದ್ಗಣಸಮೇತರಾಗಿ ನಿನಗೆ ದೀರ್ಘ ಆಯುಸ್ಸನ್ನು ಕೊಡುತ್ತೇವೆ. ಹೇ ಸತ್ವಗುಣಸಂಪನ್ನನೇ, ನಿನಗೆ ಸುಖವು ದೊರೆಯಲಿ ! ನಿನಗೆ ಶುಭವಾಗಲಿ ! ತಪಶ್ಚರ್ಯೆಯನ್ನು ಕೊನೆಗೊಳಿಸಿ ನಿನಗೆ ಇಷ್ಟವಿದ್ದ ಕಡೆಗೆ ಪ್ರಯಾಣ ಮಾಡು !" ಇದನ್ನು ಆಲೈಸಿದ ವಿಶ್ವಾಮಿತ್ರನು ಬಹಳ ಸಂತೋಷಭರಿತನಾದನು. ದೇವತೆಗಳಿಗೆ ವಂದಿಸಿ ಹೀಗೆಂದನು :

ಬ್ರಾಹ್ಮಣ್ಯಂ ಯದಿ ಮೇ ಪ್ರಾಪ್ತಂ ದೀರ್ಘಮಾಯುಸ್ತಥೈವ ಚ ॥ ೨೨ ॥
ಓಂಕಾರೋಽಥ ವಷಟ್ಕಾರೋ ವೇದಾಶ್ಚ ವರಯಂತು ಮಾಮ್ ।
ಕ್ಷತ್ರವೇದವಿದಾಂ ಶ್ರೇಷ್ಠೋ ಬ್ರಹ್ಮವೇದವಿದಾಮಪಿ ॥ ೨೩ ॥
ಬ್ರಹ್ಮಪುತ್ರೋ ವಸಿಷ್ಠೋ ಮಾಮೇವಂ ವದತು ದೇವತಾಃ ।
ಯದ್ಯೇವಂ ಪರಮಃ ಕಾಮಃ ಕೃತೋ ಯಾಂತು ಸುರರ್ಷಭಾಃ ॥ ೨೪ ॥

"ನನಗೆ ಬ್ರಾಹ್ಮಣ್ಯ ಮತ್ತು ದೀರ್ಘಾಯುಸ್ಸು ಪ್ರಾಪ್ತವಾಗಿದ್ದಲ್ಲಿ ಓಂಕಾರ, ವಷಟ್ಕಾರ ಮತ್ತು ವೇದಗಳು ನನಗೆ ವರಪ್ರಸಾದವಾಗಲಿ ! ಸಾರಾಂಶದಲ್ಲಿ, ಅಧ್ಯಾಪನವನ್ನು ಮಾಡುವ ಯಜ್ಞಯಾಗಗಳನ್ನು ನೆರವೇರಿಸುವ ಅಧಿಕಾರವು ನನಗೆ ಪ್ರಾಪ್ತವಾಗಲಿ ! ಇದಲ್ಲದೆ, ಧನುರ್ವಿದ್ಯೆಯನ್ನು ಅರಿತವರಲ್ಲಿ ಶ್ರೇಷ್ಠ ನೆನಿಸಿಕೊಂಡ ನನಗೆ ಬ್ರಹ್ಮಪುತ್ರನಾದ ವಸಿಷ್ಠನು 'ಬ್ರಾಹ್ಮಣ'ನೆಂದು ಸಂಬೋಧಿಸಲಿ. ಈ ರೀತಿ ನನ್ನ ಮನೋರಥವು ಸಾರ್ಥಕವಾದರೆ, ಸುರಶ್ರೇಷ್ಠರೇ, ನೀವು ನಿಮ್ಮ ಸ್ಥಾನಗಳಿಗೆ ಮರಳಬಹುದು."

ವಸಿಷ್ಠನು ವಿಶ್ವಾಮಿತ್ರನನ್ನು 'ಬ್ರಹ್ಮರ್ಷಿ' ಎಂದು ಕರೆಯಬೇಕೆಂದು ದೇವತೆಗಳು ಸಾಕಷ್ಟು ಪ್ರಯತ್ನಪಟ್ಟರು. ಆಗ ವಸಿಷ್ಠನು, ಅವರ ವಿನಂತಿಯನ್ನು ಮನ್ನಿಸಿ, ವಿಶ್ವಾಮಿತ್ರನೊಡನೆ ಮಿತ್ರತ್ವವನ್ನು ಸಂಪಾದಿಸಿದನು.

ಬ್ರಹ್ಮರ್ಷಿಸ್ತ್ವಂ ನ ಸಂದೇಹಃ ಸರ್ವಂ ಸಂಪದ್ಯತೇ ತವ ॥ ೨೬ ॥

"ನೀನು ಬ್ರಹ್ಮರ್ಷಿಯಾದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಬ್ರಾಹ್ಮಣತ್ವವನ್ನು ಹೊಂದಲು ಆವಶ್ಯಕವಿದ್ದ ಎಲ್ಲ ಸಂಗತಿಗಳೂ ನಿನಗೆ ಲಬ್ಧವಾಗಿವೆ" ಎಂದು ವಿಶ್ವಾಮಿತ್ರನಿಗೆ ಹೇಳಿ ದೇವತೆಗಳು ಸ್ವಸ್ಥಾನಕ್ಕೆ ತೆರಳಿದರು.

ಯಾಚಿತ.

## ೨೦. ಕೈಕೇಯಿ > ಮಂಥರೆ ಅಯೋಧ್ಯಾಕಾಂಡ / ೭

ಮಂಥರೆ 'ಶ್ರೀರಾಮನಿಗೆ ಯುವರಾಜ್ಯ ಅಭಿಷೇಕ ನಡೆಯಲಿದೆ' ಎಂಬ ವಾರ್ತೆಯನ್ನು ಕೈಕೇಯಿಗೆ ತಿಳಿಸಿ, ಆಕೆಯನ್ನು ಸಕಾಲದಲ್ಲಿ ಎಚ್ಚರಿಸುವ ಪ್ರಯತ್ನವನ್ನು ಮಾಡಿದಳು. ಅದು ಫಲವಾಯಿತು. ಈ ವಾರ್ತೆಯನ್ನು ಕೇಳಿ ಕೈಕೇಯಿಗೆ ತುಂಬಾ ಸಂತೋಷವಾಯಿತು. ಮಂಥರೆ ಕೈಕೇಯಿಯ ಮುಂದಿನ ಜೀವನದ ಬಗ್ಗೆ ಯೋಚಿಸಿದರೆ ಈ ವಾರ್ತೆಯು ಎಷ್ಟೊಂದು ಅಶುಭವಾಗಿದೆ ? ಭಯಾನಕವಾಗಿದೆ ? ಯಾವ ರೀತಿ ಕೈಕೇಯಿಯ ಜೀವನವನ್ನು ಹಾಳುಮಾಡುವಂತಹದಿದೆ ? ಎಂಬೆಲ್ಲ ಸಂಗತಿಗಳನ್ನು ಅವಳಿಗೆ ತಿಳಿಸಿ ಹೇಳಲು ಪ್ರಯಾಸ ಪಟ್ಟಳು. ಅವಳು ಕೈಕೇಯಿಗೆ ಹಿತದ ನಾಲ್ಕು ಮಾತುಗಳನ್ನು ಪರಿಪರಿಯಾಗಿ ಹೇಳಿದಳು ; ಆದರೆ ಕೈಕೇಯಿಗೆ ಯಾವ ಮಾತೂ ಹಿಡಿಸಲಿಲ್ಲ. ಅಷ್ಟೇ ಅಲ್ಲದೆ, ಈ ಒಳ್ಳೆಯ ವಾರ್ತೆಯನ್ನು ಕೇಳಿಕೊಂಡು ಮಂಥರೆಗೆ 'ಶುಭ' ಎಂಬ ದಿವ್ಯ ಆಭರಣವನ್ನು ಕೊಟ್ಟಳು. ಇನ್ನೂ ಏನಾದರೂ ಕೊಡಬೇಕೆಂಬ ಸಮಸ್ಯೆ ಸಹ ಕೈಕೇಯಿಯ ಮುಂದೆ ಇತ್ತು. ಶ್ರೀರಾಮ ಮತ್ತು ಭರತ ಇವರ ಬಗೆಗೆ ಯಾವ ಭೇದಭಾವವೂ ಅವಳಲ್ಲಿರಲಿಲ್ಲ. ಶ್ರೀರಾಮನಿಗೆ ಯುವರಾಜ್ಯಾಭಿಷೇಕವಾಗಲಿದೆ ಎಂಬ ಸಂಗತಿಯನ್ನು ತಿಳಿದು ಕೈಕೇಯಿಯು ಸಂತೋಷಗೊಂಡು ಮಂಥರೆಗೆ ಈ ರೀತಿ ಎಂದಳು :

ನ ಮೇ ಪರಂ ಕಿಂಚಿದಿತೋ ವರಂ ಪುನಃ ।
ಪ್ರಿಯಂ ಪ್ರಿಯಾರ್ಹೇ ಸುವಚಂ ವಚೋಽಮೃತಮ್ ॥
ತಥಾ ಹ್ಯವೋಚಸ್ತ್ವಮತಃ ಪ್ರಿಯೋತ್ತರಂ ।
ವರಂ ಪರಂ ತೇ ಪ್ರದದಾಮಿ ತಂ ವೃಣು ॥ ೩೬ ॥

"ಎಲೈ ದಾನಯೋಗ್ಯಳಾದ ಪ್ರಿಯ ಮಂಥರೆಯೇ, ಈಗ ನೀನು ತಂದ ಪ್ರಿಯವಾರ್ತೆಗಿಂತ ಇನ್ನು ಬೇರೆ ಯಾವ ಸಂಗತಿಯೂ ನನಗೆ ಹೆಚ್ಚು ಸಂತೋಷಕಾರಕವಾಗಿಲ್ಲ. ಅಮೃತಕ್ಕೆ ಸಮವಾದ ಈ ವಾರ್ತೆಯನ್ನು ನನಗೆ ತಿಳಿಸಿರುವೆ. ಹೀಗಿರುವದರಿಂದ ಈ ಸಂತೋಷದ ಸುದ್ದಿಯನ್ನು ಕೇಳಿ, ನಾನು ನಿನಗೆ ಶ್ರೇಷ್ಠವರವನ್ನು ಕೊಡಲಿರುವೆ. ನೀನು ಬೇಡಿಕೊ !!"

ನಿಜದಲ್ಲಿ ಈ ವರವನ್ನು ಕೈಕೇಯಿಯು ಕೊಡಲಿಲ್ಲ. ಮಂಥರೆಯು ಅದನ್ನು ಸ್ವೀಕರಿಸಲೂ ಇಲ್ಲ. ಮಂಥರೆಯು ವರವನ್ನು ಬೇಡದೇ ಇದ್ದರೂ ಸಂತೋಷಗೊಂಡ ಕೈಕೇಯಿಯು ಅದನ್ನು ಕೊಡಬಯಸಿದ್ದಳು ; ಆದರೆ ಇದು 'ಅಯಾಚಿತ' ವರವಾಗಿದೆ. ಕೈಕೇಯಿಯು ಮಂಥರೆಗೆ ಕೊಟ್ಟ 'ಶುಭ'ವೆಂಬ ಆಭರಣವು ಅನುಗ್ರಹವಾಗಿದೆ ; ವರವಲ್ಲ.

ಅಯಾಚಿತ.

## ೨೧. ಅಲರ್ಕ > ಅಂಧಬ್ರಾಹ್ಮಣ ಅಯೋಧ್ಯಾಕಾಂಡ / ೧೨

ಒಮ್ಮೆ ವಚನವನ್ನು ಕೊಟ್ಟನಂತರ ಅದನ್ನು ಪೂರೈಸಲು ಯಾವ ತ್ಯಾಗವನ್ನೂ ಮಾಡಲು ಸಿದ್ಧರಿರಬೇಕು ಎಂಬುದನ್ನು ಮನವರಿಕೆ ಮಾಡಿಕೊಡಲೆಂದು ಕೈಕೇಯಿಯು ದಶರಥನಿಗೆ ಹಲವು ಉದಾಹರಣೆಗಳನ್ನು ಹೇಳುತ್ತಿದ್ದಾಳೆ.

ದೇವ-ದಾನವರಲ್ಲಿ ನಡೆದ ಸಂಗ್ರಾಮದ ಸಮಯದಲ್ಲಿ ರಥದ ಗಾಲಿಯ ಅಚ್ಚು ಮುರಿದಿತ್ತು. ಆಗ ಕೈಕೇಯಿಯು ತನ್ನ ಸ್ವಂತದ ಕೈಯನ್ನು ಅಲ್ಲಿ ಸೇರಿಸಿ ದಶರಥನಿಗೆ ಜಯವಾಗುವಷ್ಟು ಸಹಾಯವನ್ನು ಮಾಡಿದ್ದಳು. ಆಗ ಸಂತೋಷಗೊಂಡ ದಶರಥನು ಕೊಡಬಯಸಿದ ಎರಡು ವರಗಳನ್ನು 'ಸಮಯ ಬಂದಾಗ ಕೇಳಿಕೊಳ್ಳುವೆ' ಎಂದು ಕೈಕೇಯಿಯು ಹೇಳಿದ್ದಳು. ದಶರಥನು ಶ್ರೀರಾಮನಿಗೆ ಯುವರಾಜ್ಯಾಭಿಷೇಕವನ್ನು ಗೊತ್ತುಪಡಿಸಿದಾಗ ಮಂಥರೆಯು ಕೈಕೇಯಿಯ ಮತ್ಸರವನ್ನು ಕೆರಳಿಸಿದಳು. ದಶರಥನು ಪೂರ್ವದಲ್ಲಿ ಕೊಡಬಯಸಿದ ಎರಡು ವರಗಳನ್ನು ಬೇಡಿಕೊಳ್ಳಲು ಇದೇ ತಕ್ಕ ಸಮಯವೆಂದು ಭಾವಿಸಿ ಕೈಕೇಯಿಯು ಅವನ ಬಳಿ ವರಗಳನ್ನು ಬೇಡುವದೆಂದು ನಿರ್ಧರಿಸಿದಳು. ವರಗಳನ್ನು ಬೇಡುವ ಮೊದಲು ಅವಳು ದಶರಥನಿಂದ ವಚನವನ್ನು ಪೂರೈಸುವ ಶಪಥವನ್ನು ಮಾಡಿಸಿದಳು. ಅಷ್ಟೇ ಅಲ್ಲದೆ, ಸತ್ಯಪ್ರತಿಜ್ಞನೂ, ಮಹಾತೇಜಸ್ವಿಯೂ, ಧರ್ಮಜ್ಞನೂ, ಸತ್ಯವಚನಿಯೂ, ಶುದ್ಧಾಚರಣೆಯುಳ್ಳವನೂ ಆದ ರಾಜನು ತನಗೆ ವರವನ್ನು ಕೊಡಲಿದ್ದಾನೆಂದು ಎಲ್ಲ ದೇವತೆಗಳೆದುರು ಸಾರಿಹೇಳಿದಳು. ಕಾಮಮೋಹಿತನಾಗಿ, ವರಗಳನ್ನು ಕೊಡಲು ಉದ್ಯುಕ್ತನಾದ ರಾಜನನ್ನು ಮೊದಲು ವಚನಬದ್ಧನನ್ನಾಗಿ ಮಾಡಿ, ಆಮೇಲೆ ಶ್ರೀರಾಮನಿಗೆ ವನವಾಸ ಮತ್ತು ಭರತನಿಗೆ ಯುವರಾಜ್ಯಾಭಿಷೇಕ ಎಂಬೆರಡು ವರಗಳನ್ನು ಬೇಡಿಕೊಂಡಳು. ಕೈಕೇಯಿಯು ಆಡಿದ ನುಡಿಗಳನ್ನು ಕೇಳಿ ದಶರಥರಾಜನು ಮೂರ್ಛೆಹೋದನು. ಪ್ರಜ್ಞೆ ಮರಳಿದಾಗ ದಶರಥರಾಜನು ಕೈಕೇಯಿಯ ಮೇಲೆ ಕೋಪಗೊಂಡು ಅವಳನ್ನು ಅತಿಯಾಗಿ ತೆಗಳಿದನು. ಆಕೆಗೆ ವರಗಳನ್ನು ಕೊಟ್ಟಿದ್ದಕ್ಕಾಗಿ ಪರಮ ಪಶ್ಚಾತ್ತಾಪಪಟ್ಟನು. ಹಲವಾರು ರೀತಿಯಿಂದ ಆಕೆಯ ಮನವೊಲಿಸಲು ಪ್ರಯತ್ನಪಟ್ಟು ವಿಫಲಗೊಂಡನು. ಕೈಕೇಯಿಯ ಮೇಲೆ ಅವನ ಮಾತುಗಳ ಪರಿಣಾಮವು ಎಳ್ಳಷ್ಟೂ ಆಗಲಿಲ್ಲ. ಇದಕ್ಕೆ ಪ್ರತಿಯಾಗಿ ಅವಳು ಕೊಟ್ಟ ವಚನವನ್ನು ಪಾಲಿಸದಿರುವ ದಶರಥನನ್ನು ಬಿರುನುಡಿಗಳಿಂದ ಈ ರೀತಿ ಧಿಕ್ಕರಿಸಿದಳು :

"ಸತ್ಯಪ್ರತಿಜ್ಞರಾದ ಪುರುಷರು ಕೊಟ್ಟ ವಚನವನ್ನು ಪಾಲಿಸಲು ಎಷ್ಟೊಂದು ಅಪೂರ್ವ ತ್ಯಾಗವನ್ನು ಮಾಡಿದ್ದಾರೆ ಎಂಬುದನ್ನು ಅವಳು ಉದಾಹರಣೆಗಳನ್ನು ಕೊಟ್ಟು ಹೇಳಿದಳು. ವಚನಭಂಗವು ಕುಲಕ್ಕೆ ಕಲಂಕವನ್ನು ತರುವಂತಹದು ಎಂದು ನಿಖರವಾಗಿ ಹೇಳಿದಳು. ಈ ಸಂದರ್ಭದಲ್ಲಿ ಅವಳು 'ಶಿಬಿರಾಜ', 'ಸಮುದ್ರ' ಮತ್ತು 'ಅಲರ್ಕ' ರಾಜನ ಉದಾಹರಣೆಗಳನ್ನು ಕೊಟ್ಟಳು.

ಅಲರ್ಕರಾಜನು ಒಬ್ಬ ಕುರುಡನಾದ ಬ್ರಾಹ್ಮಣನಿಗೆ ವರವನ್ನು ಕೊಡಬಯಸಿದನು. ಆಗ ಆ ಅಂಧನಾದ ಬ್ರಾಹ್ಮಣನು ರಾಜನ ಕಣ್ಣುಗಳನ್ನೇ ಬೇಡಿದನು. ಆಗ :

ಅಲರ್ಕಶ್ಚಕ್ಷುಷೀ ದತ್ವಾ ಜಗಾಮ ಗತಿಮುತ್ತಮಾಮ್ ॥ ೪೬ ॥

ಅಲರ್ಕ ರಾಜನು ತನ್ನ ವಚನವನ್ನು ಪೂರೈಸಲು ತನ್ನ ಕಣ್ಣುಗಳನ್ನು ಆ ಬ್ರಾಹ್ಮಣನಿಗೆ ಕೊಟ್ಟು ಸದ್ಗತಿಯನ್ನು ಪಡೆದನು.

ಅಯಾಚಿತ.

## ೨೨. ಋಷಿ > ಕೈಕೇಯಿ ಅಯೋಧ್ಯಾಕಾಂಡ / ೩೫

ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಲೇಬೇಕೆಂದು ಕೈಕೇಯಿಯು ಹಟ ಹಿಡಿದಳು. ಆಗ ಸುಮಂತ್ರನು ಅವಳನ್ನು ಅತ್ಯಂತ ಕಟುವಾಗಿ ಜರಿಯುತ್ತಿದ್ದಾನೆ.

ಪರಿಣಾಮಗಳ ಪರಿವೆಯಿಲ್ಲದೆ ಕೈಕೇಯಿಯು ತನ್ನ ವರಗಳ ಪರಿಪೂರ್ತಿಗಾಗಿ ಹಟ ಹಿಡಿದಾಗ, ದಶರಥ, ಲಕ್ಷ್ಮಣ, ವಸಿಷ್ಠಾದಿಗಳು ಆಕೆಗೆ ತಿಳಿಹೇಳಲು ಸಾಕಷ್ಟು ಪ್ರಯತ್ನಗಳನ್ನು ಮಾಡಿದರು. ಆಕೆಯನ್ನು ಹಳಿದರು. ಇಷ್ಟಾದರೂ ಅವಳ ದುರಾಗ್ರಹವು ಕಳೆಯಲಿಲ್ಲ. ಸುಮಂತ್ರನಿಗೆ ತಡೆಯಲಾಗದ ಕೋಪ ಬಂದಿತು. ಅವನು ಅವಳ ಅಂತರಂಗಕ್ಕೆ ತಾಗುವಂಥ ಮಾತುಗಳನ್ನು ಈ ರೀತಿ ಆಡಿದನು ;

"ಎಲೈ ಕೈಕೇಯಿ, ನೀನು ನಿನ್ನ ಪತಿಯ ಮತ್ತು ಸಮಸ್ತ ಕುಲದ ಧ್ವಂಸಿನಿಯಾಗಿರುವೆ. ನೀನು ನಿನ್ನ ನಡತೆಯಿಂದ ದಶರಥನನ್ನು ದಳ್ಳುರಿಯಲ್ಲಿ ಹಾಕಿರುವೆ. ರಾಜನ ಮೃತ್ಯುವಿನ ನಂತರ ಆತನ ಮಕ್ಕಳಿಗೆ ವಯಸ್ಸಿನ ಕ್ರಮವನ್ನು ಅನುಸರಿಸಿ ರಾಜ್ಯಗಳು ದೊರೆಯುತ್ತಿರುತ್ತವೆ ; ಆದರೆ ಇಕ್ಷ್ವಾಕುಕುಲೋತ್ಪನ್ನನಾದ ದಶರಥರಾಜನು ಜೀವಿತವಿದ್ದರೂ ಆ ಕ್ರಮವನ್ನು ತಪ್ಪಿಸುವ ಇಚ್ಛೆ ನಿನಗಿದೆ. ನಿನ್ನ ಮಗನಾದ ಭರತನು ರಾಜನಾಗಿ ಪೃಥ್ವಿಯನ್ನು ಪರಿಪಾಲಿಸಲಿ ! ಆದರೆ ಎಲ್ಲಿ ಶ್ರೀರಾಮನಿರುವನೋ ಅಲ್ಲಿಗೆ ನಾವೆಲ್ಲರೂ ಹೋಗುತ್ತೇವೆ. ನಿನ್ನ ದೇಶ ಯಾವ ಬ್ರಾಹ್ಮಣನೂ ವಾಸವಿರಲು ಯೋಗ್ಯವೆನಿಸದು ; ನೀನು ಅಂಥ ಕುಕರ್ಮವನ್ನು ಮಾಡುತ್ತಿರುವೆ. ಕಹಿಬೇವಿನ ಮರದಿಂದ ಜೇನು ತೊಟಕಲಾರದು—ಎಂಬುದೇ ನಿಜ. ನಿನ್ನ ಕುಲೀನತೆಯು ನಿನ್ನ ತಾಯಿಯದರಂತೆಯೇ ಇರುವದೆಂಬುದನ್ನು ಬಲ್ಲೆ ; ನಿನ್ನ ತಾಯಿಯ ಪಾಪಕರ್ಮದ ಆಸಕ್ತಿಯನ್ನು ಸಂಪೂರ್ಣವಾಗಿ ಕೇಳಿ ತಿಳಿದಿರುವೆನು.

> ಪಿತುಸ್ತೇ ವರದಃ ಕಶ್ಚಿದ್ದದೌ ವರಮನುತ್ತಮಮ್ ॥ ೧೮ ॥
> ಸರ್ವಭೂತರುತಂ ತಸ್ಮಾತ್ಸಂಜಜ್ಞೇ ವಸುಧಾಧಿಪಃ ।
> ತೇನ ತಿರ್ಯಗ್ಗತಾನಾಂ ಚ ಭೂತಾನಾಂ ವಿದಿತಂ ವಚಃ ॥ ೧೯ ॥

"ಒಮ್ಮೆ ಒಬ್ಬ ಋಷಿಯು ನಿನ್ನ ತಂದೆಗೆ ಒಂದು ಅನುಪಮವಾದ ವರವನ್ನು ಕೊಟ್ಟನು. ಆ ವರದ ಪ್ರಭಾವದಿಂದ ಎಲ್ಲ ಪ್ರಾಣಿಗಳ ಭಾಷೆಗಳ ಅರ್ಥವು ಆತನಿಗೆ ತಿಳಿಯಬರಹತ್ತಿತು. ಎಲ್ಲ ಪಶುಪಕ್ಷಿಗಳ ಸಂಭಾಷಣೆಯು ಆತನಿಗೆ ಅರ್ಥವಾಗುತ್ತಿತ್ತು.

"ಅಂತಹ ನಿನ್ನ ತಂದೆಯಾದ ಕೈಕೇಯನು ಹಾಸಿಗೆಯ ಮೇಲೆ ಮಲಗಿದ್ದಾಗ, ಬಹಳ ತೇಜಸ್ಸುಳ್ಳ ಜೃಂಭ ಪಕ್ಷಿಜೋಡಿಯ ಸಂಭಾಷಣೆಯು ಆತನಿಗೆ ಕೇಳಿಬಂದಿತು. ಆ ಪಕ್ಷಿಗಳ ಧ್ವನಿಯ ಅಭಿಪ್ರಾಯವು ಆತನಿಗೆ ತಿಳಿಯಿತು. ಆಗ ಆತನು ಒಂದೇ ಸಮನೆ ನಗಲಾರಂಭಿಸಿದನು. ನಿನ್ನ ತಾಯಿಯು ಅವನನ್ನು ನಗುವ ಕಾರಣ ಏನೆಂಬುದನ್ನು ಹೇಳಬೇಕೆಂದು ಕೇಳಿದಳು. ಆಗ ಕೈಕೇಯನು ಅವಳಿಗೆ — 'ನಾನು ಏತಕ್ಕಾಗಿ ನಗುತ್ತಿರುವೆನು ಎಂಬುದನ್ನು ನಿನಗೆ ತಿಳಿಸಿದರೆ ನಾನು ತಕ್ಷಣ ಮರಣಹೊಂದುವೆ' ಎಂದನು. ಆಗ ಪತಿಯ ಮೃತ್ಯುವನ್ನು ಬಯಸುವ ನಿನ್ನ ತಾಯಿಯು ಕೋಪಗೊಂಡು 'ನೀನು ಬದುಕಿರು ಇಲ್ಲವೇ ಸತ್ತುಹೋಗು ; ನನಗೆ ನಿನ್ನ ನಗುವಿನ ಕಾರಣವು ತಿಳಿಯಲೇಬೇಕು !' ಎಂದು ಹಟತೊಟ್ಟಳು. ಆಗ ಕೈಕೇಯರಾಜನು ಆ ವರವನ್ನು ಕೊಟ್ಟ ಋಷಿಯ ಬಳಿಗೆ ಹೋಗಿ ನಡೆದ ವೃತ್ತಾಂತವನ್ನೆಲ್ಲ ಅರುಹಿದನು. ಆ ಋಷಿಯ ಅಪ್ಪಣೆಯಂತೆ ಆತನು ತನ್ನ ಹೆಂಡತಿಯನ್ನು ಅರಮನೆಯಿಂದ ಹೊರಗೆ ಹಾಕಿದನು."

ಈ ಸಂಗತಿಯನ್ನು ಸುಮಂತ್ರನು ಕೈಕೇಯಿಗೆ ತಿಳಿಸಿ, "ನಿನ್ನ ನಡತೆಯೂ ನಿನ್ನ ತಾಯಿಯದರಂತೆಯೇ ಇದೆ. ನೀನು ನಿನ್ನ ದುರಾಗ್ರಹವನ್ನು ಬಿಟ್ಟುಕೊಡು ; ಪತಿಯ ಇಚ್ಛೆಯಂತೆ ವರ್ತಿಸು ಮತ್ತು ಜನರ ಹಿತರಕ್ಷಣೆ ಮಾಡು !" ಎಂದನು.

ವರವನ್ನು ಕೊಟ್ಟ ಋಷಿಯ ಹೆಸರು ಮತ್ತು ಯಾವ ಕಾರಣದಿಂದ ಈ ವರವನ್ನು ಕೊಟ್ಟಿದ್ದನು ಎಂಬುದು ಸ್ಪಷ್ಟವಿಲ್ಲ. ಹೀಗಿರುವದರಿಂದ ಈ ವರವು ಯಾಚಿತವೋ ಅಥವಾ ಅಯಾಚಿತವೋ ಎಂಬುದನ್ನು ನಿಖರವಾಗಿ ಹೇಳಲು ಬರುವಂತಿಲ್ಲ.

ಅನಿಶ್ಚಿತ.

ಅಯೋಧ್ಯಾಕಾಂಡ / ೪೩

ಶ್ರೀರಾಮ ಕಾಡಿಗೆ ಹೋಗುವನೆಂದು ಕೌಸಲ್ಯೆ ತುಂಬ ದುಃಖಕ್ಕೀಡಾಗಿದ್ದಳು. ಅದಕ್ಕೆ ಬದಲಾಗಿ ಅವನು ಅಯೋಧ್ಯೆಯಲ್ಲಿಯೇ ಉಳಿದು ಬಿಕ್ಕೆ ಬೇಡಿಯಾಗಲಿ ಇಲ್ಲವೇ ಕೈಕೇಯಿಯ ಅಡಿಯಾಳಾಗಿದ್ದರೂ ಸರಿಯೇ ಎಂದುಕೊಂಡಿದ್ದಳು. ಹಾಗಾಗಿದ್ದರೆ ಅವಳು ಶ್ರೀರಾಮನಿಂದ ಬೇರ್ಪಟ್ಟು ಬವಣೆಪಡಬೇಕಾಗಿರಲಿಲ್ಲ.

ಅಥಾಸ್ಮಿನ್ ನಗರೇ ರಾಮಶ್ಚರನ್ ಭೈಕ್ಷಂ ಗೃಹೇ ವಸೇತ್ ।
ಕಾಮಕಾರೋ ವರಂ ದಾತುಮಪಿ ದಾಸಂ ಮಮಾತ್ಮಜಮ್ ॥ ೪ ॥

ಇಲ್ಲಿ ವರವನ್ನೀಯಲಾಗಿಲ್ಲ. ಆದರೆ ಹೀಗಾದರೆ ಅದು ವರಕ್ಕೆ ಸರಿಸಾಟಿಯೆನ್ನಿಸೀತು ಎಂದು ಉಸುರಲಾಗಿದೆ.

**೨೩. ಚ್ಯವನಭಾರ್ಗವ > ಕಾಲಿಂದಿ** ಅಯೋಧ್ಯಾಕಾಂಡ / ೧೧೦

ವಸಿಷ್ಠಮುಷಿಯು ಶ್ರೀರಾಮನಿಗೆ ರಘುವಂಶದ ಪುರುಷರ ಘನವಂತಿಕೆಯನ್ನು ಕುರಿತು ಹೇಳುತ್ತಿದ್ದಾನೆ. ಭರತರಾಜನ ಮಗ ಅಸಿತ. ಹೈಹಯ, ತಾಲಜಂಘ, ಶೂರಶಶಬಿಂದು ಎಂಬ ಶತ್ರುಗಳು ಈತನನ್ನು ಕಾಳಗದಲ್ಲಿ ಪರಾಜಿತನನ್ನಾಗಿ ಮಾಡಿದರು. ಅನಂತರ ಆ ರಾಜರ್ಷಿಯು ಒಂದು ಪರ್ವತದ ಮೇಲೆ ಹೋಗಿ ಮರಣಹೊಂದಿದನು. ಆಗ ಆತನ ಇಬ್ಬರು ಮಡದಿಯರು ಗರ್ಭವತಿಯರಾಗಿದ್ದರು. 'ಕಾಲಿಂದಿ' ಎಂಬ ಭಾರ್ಯೆಯು ತನಗೆ ಉತ್ಕೃಷ್ಟ ಪುತ್ರನು ಹುಟ್ಟಬೇಕೆಂಬ ಇಚ್ಛೆಯನ್ನು ಹೊಂದಿ, ಹಿಮಾಲಯ ಪರ್ವತದಲ್ಲಿ ವಾಸವಾಗಿದ್ದ ದೇವಸಮನಾದ, ತೇಜಸ್ವಿಯಾದ, ಭಗವಾನ್ ಭಾರ್ಗವಮುನಿಗೆ ವಂದಿಸಿದಳು. ಆಗ—

ಸ ತಾಮಭ್ಯವದತ್ಪ್ರೀತೋ ವರೇಪ್ಸುಂ ಪುತ್ರಜನ್ಮನಿ ।
ಪುತ್ರಸ್ತೇ ಭವಿತಾ ದೇವಿ ಮಹಾತ್ಮಾ ಲೋಕವಿಶ್ರುತಃ ॥ ೨೧ ॥
ಧಾರ್ಮಿಕಶ್ಚ ಸುಭೀಮಶ್ಚ ವಂಶಕರ್ತಾರಿಸೂದನಃ ।
ಶ್ರುತ್ವಾ ಪ್ರದಕ್ಷಿಣಂ ಕೃತ್ವಾ ಮುನಿಂ ತಮನುಮಾನ್ಯ ಚ ॥ ೨೨ ॥

ಪುತ್ರನನ್ನು ಪಡೆಯುವ ವರವನ್ನು ಇಚ್ಚಿಸುವ ಆ ಕಾಲಿಂದಿಗೆ ಮುನಿಯು ಈ ರೀತಿ ನುಡಿದನು— "ಎಲೈ ರಾಣಿಯೇ, ನೀನು ಒಬ್ಬ ಮಹಾತ್ಮನೆನಿಸುವ, ಜಗದಲ್ಲಿ ಖ್ಯಾತಿ ಹೊಂದಲಿರುವ, ಧಾರ್ಮಿಕನಾಗಲಿರುವ, ವಂಶವನ್ನು ಮುಂದೆ ನಡೆಯಿಸುವ, ಶತ್ರುಗಳನ್ನು ದಮನಿಸಲಿರುವ ಪುತ್ರನನ್ನು ಪಡೆಯುವೆ." ಮುನಿಯ ಈ ನುಡಿಗಳನ್ನು ಆಲಿಸಿ ಕಾಲಿಂದಿಯು ಮುನಿಗೆ ಪ್ರದಕ್ಷಿಣೆ ಹಾಕಿ ಆತನ ಅನುಮತಿಯನ್ನು ಪಡೆದು ಸ್ವಸ್ಥಾನಕ್ಕೆ ಮರಳಿದಳು.

ಯಥಾಕಾಲ ಅವಳು ಪ್ರಸೂತೆಳಾಗಿ ಗಂಡು ಮಗುವನ್ನು ಪಡೆದಳು. ಇವಳು ಬಸುರಿಯಿದ್ದಾಗ ಈಕೆಯ ಸವತಿಯು ಈ ಗರ್ಭವು ನಾಶವಾಗಲೆಂದು ಈಕೆಗೆ ವಿಷವನ್ನು ಕೊಟ್ಟಿದ್ದಳು. ಈ ವಿಷದಿಂದ ಗರ್ಭದ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಕಾಲಿಂದಿಯ ಮಗನು ಈ ಪರಿಯ ಗರ(ವಿಷ)ಸಹಿತ ಜನ್ಮ ತಾಳಿದನೆಂದು ಆತನಿಗೆ 'ಸಗರ'ನೆಂದು ಹೆಸರನ್ನು ಇಡಲಾಯಿತು.

ಸಗರನ ಜನ್ಮದ ಕಥೆಯು ಬಾಲಕಾಂಡದಲ್ಲಿ (ಸರ್ಗ ೭೦ / ೩೪ - ೩೫ರಲ್ಲಿ) ಬಂದಿದೆ. ಅದರಲ್ಲಿ ಚ್ಯವನಋಷಿಯು ಪುತ್ರನನ್ನು ಪಡೆಯುವ ಇಚ್ಛೆಯಿಂದ ಅಭಿವಂದಿಸಿದ ಕಾಲಿಂದಿಗೆ ಈ ರೀತಿ ಎಂದನು :

ಸ ತಾಮಭ್ಯವದದ್ವಿಪ್ರಃ ಪುತ್ರೇಪ್ಸುಂ ಪುತ್ರಜನ್ಮನಿ ।
ತವ ಕುಕ್ಷೌ ಮಹಾಭಾಗೇ ಸುಪುತ್ರಃ ಸುಮಹಾಬಲಃ ॥ ೩೪ ॥
ಮಹಾವೀರ್ಯೋ ಮಹಾತೇಜಾ ಅಚಿರಾತ್ಸಂಜನಿಷ್ಯತಿ ।
ಗರೇಣ ಸಹಿತಃ ಶ್ರೀಮಾನ್ಮಾ ಶುಚಃ ಕಮಲೇಕ್ಷಣೇ ॥ ೩೫ ॥

"ಹೇ, ಮಹಾಭಾಗ್ಯವತಿಯೇ, ಅತಿಬಲಾಢ್ಯನಾದ, ಮಹಾವೀರನಾದ, ಮತ್ತು ಮಹಾತೇಜಸ್ವಿಯಾದ ಒಬ್ಬ ವೈಭವಸಂಪನ್ನನಾದ ಸತ್ಪುತ್ರನು ವಿಷಸಹಿತವಾಗಿ ನಿನ್ನ ಉದರದಿಂದ ಜನಿಸುವನು. ಎಲೈ ಕಮಲನಯನೇ, ನೀನು ಶೋಕಿಸಬೇಡ !"

ಈ ಉದ್ಗಾರಗಳು, ವರವೋ ? ಆಶೀರ್ವಾದವೋ ? ಎಂಬುದನ್ನು ವಾಲ್ಮೀಕಿಯು ಸ್ಪಷ್ಟವಾಗಿ ಉಲ್ಲೇಖಿಸಿಲ್ಲ. ಅಯೋಧ್ಯಾಕಾಂಡದಲ್ಲಿ 'ವರೇಪ್ಸು' ಎಂಬ ಸ್ಪಷ್ಟ ನಿರ್ದೇಶನವಿದೆ. ಹೀಗಿರುವದರಿಂದ ಇದು ವರವೇ ಸರಿಯೆನಿಸುತ್ತದೆ ; ಆಶೀರ್ವಾದವಾಗಿರುವುದಿಲ್ಲ.

ಯಾಚಿತ.

**೨೪. ಅನಸೂಯೆ > ಸೀತಾ** **ಅಯೋಧ್ಯಾಕಾಂಡ / ೧೧೮**

ಶ್ರೀರಾಮ, ಲಕ್ಷ್ಮಣ ಮತ್ತು ಸೀತೆ ಈ ಮೂವರು ಕಾಡಿನಲ್ಲಿ ಸಂಚರಿಸುತ್ತ 'ಅತ್ರಿ' ಋಷಿಯ ಆಶ್ರಮಕ್ಕೆ ಬಂದರು. ಋಷಿಯು ಅವರನ್ನು ಮಕ್ಕಳಂತೆ ಬರಮಾಡಿಕೊಂಡನು. ತನ್ನ ಪತ್ನಿಯಾದ ಅನಸೂಯೆಗೆ ಸೀತೆಯನ್ನು ಬರಮಾಡಿಕೊಳ್ಳಲು ಹೇಳಿದನು. ಅನಸೂಯೆಯು ಮಾಡುತ್ತಿದ್ದ ತಪಸ್ಸಿನ ಬಗ್ಗೆ ಋಷಿಯು ಶ್ರೀರಾಮನಿಗೆ ಹೇಳಿದ್ದನು. ಶ್ರೀರಾಮನು ಸೀತೆಗೆ ಅನಸೂಯೆಯತ್ತ ಹೋಗಲು ಅನುಮತಿಯನ್ನು ಕೊಟ್ಟನು. ಸೀತೆಯು ಅನಸೂಯೆಯನ್ನು ಅಭಿವಂದಿಸಿದಳು. ಅನಸೂಯೆಯು ಸೀತೆಯ ಕ್ಷೇಮ, ಕುಶಲ, ಆರೋಗ್ಯದ ಬಗ್ಗೆ ಕೇಳಿಕೊಂಡು ಅವಳಿಗೆ ಸ್ತ್ರೀಧರ್ಮ, ಕರ್ತವ್ಯಗಳನ್ನು ಉಪದೇಶಿಸಿದಳು. ಸೀತೆಗೆ ಈ ಉಪದೇಶವು ತುಂಬಾ ಹಿಡಿಸಿತು. ಆಗ ಸೀತೆಯು ತನ್ನ ಆಚರಣೆಯ ರೀತಿ, ಪತಿಯ ಬಗ್ಗೆ ತನಗಿದ್ದ ನಿಷ್ಠೆ ಇವುಗಳನ್ನು ವಿವರಿಸಿ ಹೇಳಿದಳು. ಅನಸೂಯೆಗೆ ಅದನ್ನು ತಿಳಿದುಕೊಂಡು ಸಂತೋಷವಾಯಿತು. ಆಗ ಸೀತೆಯ ತಲೆಯನ್ನು ಆಘ್ರಾಣಿಸಿ ಅನಸೂಯೆಯು ಇಂತೆಂದಳು :

ನಿಯಮೈರ್ವಿವಿಧೈರಾಪ್ತಂ ತಪೋ ಹಿ ಮಹದಸ್ತಿ ಮೇ ।
ತತ್ಸಂಶ್ರಿತ್ಯ ಬಲಂ ಸೀತೇ ಛಂದಯೇ ತ್ವಾಂ ಶುಚಿವ್ರತೇ ॥ ೧೪ ॥
ಉಪಪನ್ನಂ ಚ ಯುಕ್ತಂ ಚ ವಚನಂ ತವ ಮೈಥಿಲಿ ।
ಪ್ರೀತಾ ಚಾಸ್ಮ್ಯುಚಿತಾಂ ಸೀತೇ ಕರವಾಣಿ ಪ್ರಿಯಂ ಚ ಕಿಮ್ ॥ ೧೫ ॥

"ಹಲವಾರು ಬಗೆಯ ನಿಯಮಗಳನ್ನಾಚರಿಸಿ ಮಹಾತಪಸ್ಸಿನ ಬಲವನ್ನು ಸಂಪಾದಿಸಿದ್ದೇನೆ. ನೀನು ನನ್ನ ಹತ್ತಿರ ವರವನ್ನು ಬೇಡಿಕೊಳ್ಳಬೇಕೆಂದು ನನ್ನ ಇಚ್ಛೆ. ಎಲೈ ಮೈಥಿಲಿಯೇ, ನಿನ್ನ ಸಂಭಾಷಣೆಯು ಅರ್ಥಪೂರ್ಣವಾಗಿಯೂ ಯೋಗ್ಯವಾಗಿಯೂ ಇದೆ. ನಿನಗೆ ಪ್ರಿಯವಾದ ಯಾವುದನ್ನು ಮಾಡಲಿ ? ಹೇಳು !"

ಅನಸೂಯೆಯ ನುಡಿಯನ್ನು ಕೇಳಿ ಸೀತೆಗೆ ವಿಸ್ಮಯವಾಯಿತು. ಆಕೆಯು ಈ ರೀತಿ ಉತ್ತರಿಸಿದಳು : "ನಿಮ್ಮ ಕೃಪೆಯಿಂದ ಎಲ್ಲವೂ ಸರಿಯಾಗಿದೆ. ನನಗೆ ಯಾವ ಕೊರತೆಯೂ ಇಲ್ಲ." ಸೀತೆಯ ಈ ಮಾತನ್ನು ಕೇಳಿ ಅನಸೂಯೆಯು ಪ್ರಸನ್ನಳಾಗಿ ಸೀತೆಗಾಗಿ ಶ್ರೇಷ್ಠವಾದ ಮಾಲೆ, ವಸ್ತ್ರಗಳು, ಆಭೂಷಣಗಳು, ಲೇಪನ, ಚಂದನ ಮುಂತಾದ ಬಹುಮೂಲ್ಯ ವಸ್ತುಗಳನ್ನು ಕೊಟ್ಟಳು.

ಅನಸೂಯೆಯು ಅಯಾಚಿತವಾದ ವರವನ್ನು ಕೊಡಬಯಸಿದಳು ; ಅದನ್ನು ಸ್ವೀಕರಿಸಬೇಕೆಂದು ಸೀತೆಗೆ ಬಲವಂತ ಮಾಡಿದಳು. ಆದರೆ ಸೀತೆಯು ಅದನ್ನು ಸ್ವೀಕರಿಸಲಿಲ್ಲ. ಸೀತೆಗೆ ದೊರೆತ ದಿವ್ಯಮಾಲೆ, ವಸ್ತ್ರಾಲಂಕಾರ, ಆಭರಣ, ಚಂದನ, ಲೇಪನ ಇವೆಲ್ಲವೂ ಅನುಗ್ರಹಸ್ವರೂಪದವಾಗಿವೆ.

ಇದು ವರವಲ್ಲ.

**೨೫. ಬ್ರಹ್ಮದೇವ > ತುಂಬರು (ವಿರಾಧ)** **ಅರಣ್ಯಕಾಂಡ / ೩**

ಶ್ರೀರಾಮಲಕ್ಷ್ಮಣಸೀತೆಯರು ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದಾಗ ಒಬ್ಬ ರಾಕ್ಷಸನನ್ನು ಕಂಡರು. ಆ ರಾಕ್ಷಸನು ಅತಿಪ್ರಚಂಡನೂ, ಅಕ್ರಾಳವಿಕ್ರಾಳರೂಪಿಯೂ, ಬೀಭತ್ಸನೂ, ಕುರೂಪಿಯೂ ಆಗಿದ್ದನು. ಆತನ ಮುಖಚರ್ಯೆ ಭಯಂಕರವಿತ್ತು. ಕಣ್ಣುಗಳು ಒಳಹೊಕ್ಕಿದ್ದವು. ಹೊಟ್ಟೆಯು ವಿಶಾಲವಾಗಿತ್ತು. ಶ್ರೀರಾಮಲಕ್ಷ್ಮಣರು ತಪಸ್ವಿಗಳ ವೇಷದಲ್ಲಿದ್ದರು ; ಆದರೆ ಕೈಯಲ್ಲಿ ಶಸ್ತ್ರಗಳನ್ನು ಧರಿಸಿದ್ದರು. ಇದನ್ನು ಕಂಡು ಆ ರಾಕ್ಷಸನು ಕ್ರುದ್ಧನಾದನು. ದರ್ಪದಿಂದ ಅವನು ಶ್ರೀರಾಮಲಕ್ಷ್ಮಣರಿಗೆ ಈ ರೀತಿ ನುಡಿದನು :

"ನೀವು ಕೈಯಲ್ಲಿ ಹಿಡಿದ ಆಯುಧಗಳು ಮುನಿವೇಷಕ್ಕೆ ಶೋಭಿಸುವದಿಲ್ಲ. ನೀವಿಬ್ಬರೂ ಈ ಒಬ್ಬಳೇ ಸ್ತ್ರೀಯಲ್ಲಿ ಅನುರಕ್ತರಾದಂತಿದೆ. ನೀವು ಅಧರ್ಮಿಗಳಾದ ಪಾಪಿಗಳು ; ಮುನಿಗಳ ಹೆಸರಿಗೆ ಕಲಂಕವನ್ನು ತರುವವರಾಗಿದ್ದೀರಿ ! ಯಾರು ನೀವು ? ನಾನು 'ವಿರಾಧ'ನೆಂಬ ರಾಕ್ಷಸನಿದ್ದೇನೆ. ಋಷಿಗಳ ಮಾಂಸವನ್ನು ಭಕ್ಷಿಸಿ ಬಾಳುವವನು. ಮದುವೆಗೆ ತಕ್ಕವಳಾದ ಈ ನಾರಿಯು ನನ್ನ ಭಾರ್ಯೆಯಾಗುವಳು. ಯುದ್ಧದಲ್ಲಿ ಪಾಪಿಷ್ಠರಾದ ನಿಮ್ಮಿಬ್ಬರ ರಕ್ತಪ್ರಾಶನವನ್ನು ಮಾಡುವೆ" ಎಂದು ಕಿರಿಚಿ ಭಯದಿಂದ ಕಂಪಿಸುತ್ತಿದ್ದ ಸೀತೆಯನ್ನು ಎಳೆದು, ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಅದನ್ನು ಕಂಡು ಶ್ರೀರಾಮನಿಗೆ ಅತೀವದುಃಖವಾಯಿತು. ಶ್ರೀರಾಮನ ಮುಖವು ಬಾಡಿತು. ಪರಪುರುಷನ ಸ್ಪರ್ಶವಾದುದನ್ನು ಕಂಡು ಸೀತೆಗೆ ಪರಮವ್ಯಥೆಯಾಯಿತು. ಕೋಪಗೊಂಡ ಲಕ್ಷ್ಮಣನು ರಾಕ್ಷಸನ ಈ ಹೀನಕೃತಿಯಿಂದ ದುಃಖಿತನಾದ ಶ್ರೀರಾಮನನ್ನು ಸಂತೈಸಿ, ರಾಕ್ಷಸನನ್ನು ಸದೆಬಡಿಯಲು ಸಜ್ಜಾದನು. ಆಗ ವಿರಾಧನು ಪುನಃ "ಯಾರು ನೀವು ? ಎಲ್ಲಿಗೆ ಹೊರಟಿರು ವಿರಿ ?" ಎಂದು ಪ್ರಶ್ನಿಸಿದನು. ಶ್ರೀರಾಮನು, ತಾನು ಇಕ್ಷ್ವಾಕುಕುಲೋತ್ಪನ್ನನಿದ್ದೇನೆ ಎಂದು ಹೇಳಿ "ನೀನು ಯಾರು ?" ಎಂದು ಪ್ರಶ್ನಿಸಿದನು. ಅದನ್ನು ಕೇಳಿ ವಿರಾಧನು —

> ಪುತ್ರಃ ಕಿಲ ಜವಸ್ಯಾಹಂ ಮಾತಾ ಮಮ ಶತಹ್ರದಾ ।
> ವಿರಾಧ ಇತಿ ಮಾಮಾಹುಃ ಪೃಥಿವ್ಯಾಂ ಸರ್ವರಾಕ್ಷಸಾಃ ॥ ೫ ॥
> ತಪಸಾ ಚಾಭಿಸಂಪ್ರಾಪ್ತಾ ಬ್ರಹ್ಮಣೋ ಹಿ ಪ್ರಸಾದಜಾ ।
> ಶಸ್ತ್ರೇಣಾವಧ್ಯತಾ ಲೋಕೇಽಚ್ಛೇದ್ಯಾಭೇದ್ಯತ್ವಮೇವ ಚ ॥ ೬ ॥

"ನಾನು 'ಜವ'ನೆಂಬ ರಾಕ್ಷಸನ ಪುತ್ರನಾಗಿದ್ದು ನನ್ನ ಮಾತೆಯ ಹೆಸರು 'ಶತಹ್ರದಾ'. ಈ ಭೂಮಿಯ ಮೇಲಿನ ಎಲ್ಲ ರಾಕ್ಷಸರೂ ನನ್ನನ್ನು 'ವಿರಾಧ'ನೆಂದು ಕರೆಯುತ್ತಾರೆ. ನಾನು ತಪಸ್ಸಿನಿಂದ ಬ್ರಹ್ಮದೇವನನ್ನು ಪ್ರಸನ್ನಗೊಳಿಸಿದ್ದೇನೆ. ಆತನಿಂದ ಪಡೆದ ವರದಿಂದಾಗಿ ನನಗೆ ಯಾವ ಶಸ್ತ್ರಗಳೂ ನಾಟಲಾರವು ; ನನ್ನನ್ನು ಛೇದಿಸಲಾರವು ; ನನ್ನನ್ನು ತುಂಡರಿಸಲಾರವು. ನೀವು ಜೀವದಾನವನ್ನು ಬಯಸುತ್ತಿದ್ದರೆ ಈ ಸ್ತ್ರೀಯನ್ನು ಇಲ್ಲಿಯೇ ಬಿಟ್ಟು ತೆರಳಿರಿ !" ಎಂದು ನುಡಿಯುತ್ತಲೇ, ಶ್ರೀರಾಮನು ಆ ರಾಕ್ಷಸನ ಮೇಲೆ ತೀಕ್ಷ್ಣಬಾಣಗಳನ್ನು ಬಿಟ್ಟನು. ಲಕ್ಷ್ಮಣನು ಕೂಡ ಅವನ ಮೇಲೆ ಬಾಣಗಳ ಸುರಿಮಳೆಗರೆದನು ; ಆದರೆ ಬಾಣಗಳೆಲ್ಲ ರಾಕ್ಷಸನ ದೇಹದಿಂದ ಕೆಳಗೆ ಉದುರಿ ಬೀಳಹತ್ತಿದವು. ಏಕೆಂದರೆ —

> ಸ್ಪರ್ಶಾತ್ತು ವರದಾನೇನ ಪ್ರಾಣಾನ್ಸಂರೋಧ್ಯ ರಾಕ್ಷಸಃ ॥ ೧೬ ॥

'ರಾಕ್ಷಸನಿಗೆ ತೀವ್ರ ವೇದನೆಯಾಗುತ್ತಿದ್ದರೂ ವರದಾನವನ್ನು ಹೊಂದಿದ್ದರಿಂದ ಆತನ ಪ್ರಾಣವು ಹೋಗಲಿಲ್ಲ.'

ವಿರಾಧನು ಅನಂತರ ಶ್ರೀರಾಮನಿಗೆ ಶರಣುಬಂದನು. ತನ್ನ ಸಾವಿನ ಉಪಾಯವನ್ನು ತಾನೇ ರಾಮಲಕ್ಷ್ಮಣರಿಗೆ ಹೇಳಿದನು.

> ....ರಾಕ್ಷಸೋಽಯಂ ನ ಶಕ್ಯತೇ ।
> ಶಸ್ತ್ರೇಣ ಯುಧಿ ನಿರ್ಜೇತುಂ ರಾಕ್ಷಸಂ ನಿಖನಾವಹೇ ॥ ೧೦ ॥

ಶಸ್ತ್ರಗಳಿಂದ ಈ ರಾಕ್ಷಸನನ್ನು ಸೋಲಿಸಲಾಗದು. ಹೀಗಾಗಿ ಈತನನ್ನು ಗುಂಡಿ ತೋಡಿ ಹೂತುಬಿಡುವಾ. ಆ ರಾಕ್ಷಸನ ಹೇಳಿಕೆಯಂತೆ ಆತನನ್ನು ಒಂದು ಆಳವಾದ ಗುಂಡಿಯಲ್ಲಿ ಹೂತು ಸಾಯಿಸಿದರು. ಇದು 'ಯಾಚಿತ' ವರವಾಗಿದೆ.

### ೨೬. ಇಂದ್ರ > ಶರಭಂಗ ಅರಣ್ಯಕಾಂಡ / ೫

ವಿರಾಧನನ್ನು ವಧಿಸಿದನಂತರ ಶ್ರೀರಾಮಲಕ್ಷ್ಮಣಸೀತೆಯರು ಶರಭಂಗ ಋಷಿಗಳ ಆಶ್ರಮಕ್ಕೆ ಬಂದರು. ತುಂಬಾ ಕ್ಲೇಶಕಾರಕ ಹಾಗೂ ದುರ್ಗಮವಾದ ಕಾಡಿನಲ್ಲಿ ವಾಸಿಸುವ ಅನುಭವವು ಅವರಿಗೆ ಇರಲಿಲ್ಲ. ಈ ಆಶ್ರಮವನ್ನು ಸಮೀಪಿಸುತ್ತಿದ್ದಂತೆ ಒಂದು ಸೋಜಿಗದ ಸಂಗತಿಯು ಶ್ರೀರಾಮನಿಗೆ ಕಂಡುಬಂದಿತು. ಇಂದ್ರನು

ಅನೇಕ ಮಹಾತ್ಮರನ್ನೊಡಗೂಡಿಕೊಂಡು ತನ್ನ ದಿವ್ಯರಥದಲ್ಲಿ ಈ ಋಷಿಯ ಆಶ್ರಮಕ್ಕೆ ಬರುತ್ತಿದ್ದನು. ಶ್ರೀರಾಮನು ಇಂದ್ರನನ್ನು ಗುರುತಿಸಿದನು. ರಥಾರೂಢನಾದ ಇಂದ್ರನನ್ನು ಲಕ್ಷ್ಮಣನಿಗೆ ತೋರಿಸಿದನು. ಶರಭಂಗ ಋಷಿಯೊಡನೆ ಇಂದ್ರನ ಮಾತುಕತೆ ನಡೆದಾಗ ಶ್ರೀರಾಮನು ಅಲ್ಲಿಗೆ ಬರುತ್ತಿದ್ದ ವಿಷಯವು ಇಂದ್ರನಿಗೆ ತಿಳಿಯಿತು. ಆಗ ಆತುರದಲ್ಲಿ ಶರಭಂಗ ಋಷಿಯ ಅಪ್ಪಣೆಯನ್ನು ಪಡೆದು ಇಂದ್ರನು ಸುರಲೋಕಕ್ಕೆ ತೆರಳಿದನು. ಶ್ರೀರಾಮನನ್ನು ಅಲ್ಲಿ ಭೇಟಿಯಾಗುವದು ಇಂದ್ರನಿಗೆ ಇಷ್ಟವಿರಲಿಲ್ಲ. ಶ್ರೀರಾಮನು ರಾವಣನನ್ನು ಸೋಲಿಸಿದನಂತರ ಇಂದ್ರನು ಶ್ರೀರಾಮನನ್ನು ಕಾಣಬಯಸಿದ್ದನು. ಶ್ರೀರಾಮಲಕ್ಷ್ಮಣಸೀತೆಯರು ಶರಭಂಗ ಋಷಿಗೆ ವಂದಿಸಿದರು. ಮುನಿಯು ಅವರಿಗೆ ಭೋಜನಾದಿ ಆತಿಥ್ಯವನ್ನು ಸಲ್ಲಿಸಿ ಅವರ ವಾಸಕ್ಕೆ ಏರ್ಪಾಡನ್ನು ಮಾಡಿದನು. ಇಂದ್ರನು ಆಗಮಿಸಿದ ಬಗ್ಗೆ ಶ್ರೀರಾಮನು ಕೇಳಿದಾಗ ಶರಭಂಗ ಮುನಿಯು ಈ ರೀತಿ ಉತ್ತರಿಸಿದನು :

> ಮಾಮೇಷ ವರದೋ ರಾಮ ಬ್ರಹ್ಮಲೋಕಂ ನಿನೀಷತಿ ।
> ಜಿತಮುಗ್ರೇಣ ತಪಸಾ ದುಷ್ಪ್ರಾಪಮಕೃತಾತ್ಮಭಿಃ ॥ ೨೮ ॥

"ಎಲೈ ಶ್ರೀರಾಮನೇ, ಚಿತ್ತಶುದ್ಧಿಯನ್ನು ಮಾಡಿಕೊಳ್ಳದಿರುವ ಪುರುಷರಿಗೆ ದುರ್ಲಭವಾದಂಥ ಬ್ರಹ್ಮಲೋಕವನ್ನು ಉಗ್ರತಪಸ್ಸಿನಿಂದ ಸಂಪಾದಿಸಿಬಿಟ್ಟಿದ್ದೇನೆ. ಆ ವರವನ್ನಿತ್ತ ಇಂದ್ರನು ಆ ಬ್ರಹ್ಮಲೋಕಕ್ಕೆ ನನ್ನನ್ನು ಕರೆದೊಯ್ಯಬಯಸಿ ಆಗಮಿಸಿದ್ದನು." ಆದರೆ ಶ್ರೀರಾಮನಂಥ ಅತಿಥಿಯು ಆಶ್ರಮದ ದ್ವಾರದಲ್ಲಿ ಬಂದುದನ್ನು ಕಂಡು ಶರಭಂಗನು ಬ್ರಹ್ಮಲೋಕಕ್ಕೆ ಹೋಗುವ ವಿಚಾರವನ್ನು ಮುಂದೂಡಿದನು.

ಇಂದ್ರನಿಗೆ ಇಲ್ಲಿ ವರದನೆಂದು ವಿಶೇಷಣವನ್ನು ಕೊಟ್ಟಿದ್ದರೂ ಆತನ ವರದ ಬಗ್ಗೆ ಸ್ಪಷ್ಟವಾದ ಉಲ್ಲೇಖವಿಲ್ಲ.

ಅನಿಶ್ಚಿತ.

## ೨೭. ಶರಭಂಗ > ಶ್ರೀರಾಮ  ಅರಣ್ಯಕಾಂಡ / ೫

ಇಂದ್ರ > ಶರಭಂಗ - ವರ ಕ್ರಮಾಂಕ ೨೬ ನೋಡಿರಿ.

ಸಾಕ್ಷಾತ್ ಇಂದ್ರನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ಬಂದಿದ್ದರೂ, ಶ್ರೀರಾಮನಂತಹ ಅತಿಥಿಯು ಬರುತ್ತಿದ್ದುದನ್ನು ಕಂಡು ಶರಭಂಗ ಋಷಿಯು ಇಂದ್ರನೊಡನೆ ತೆರಳಲು ನಿರಾಕರಿಸಿದನು. "ನಿನ್ನಂತಹ ಧರ್ಮತತ್ಪರ ಮಹಾತ್ಮನನ್ನು ಕಂಡು ಅನಂತರವೇ ನಿಕೃಷ್ಟವಾದ ಸ್ವರ್ಗ ಮತ್ತು ಉತ್ಕೃಷ್ಟವಾದ ಬ್ರಹ್ಮಲೋಕಕ್ಕೆ ಹೋಗುವದೆಂದು ನಿರ್ಧರಿಸಿದ್ದೇನೆ."

> ಅಕ್ಷಯಾ ನರಶಾರ್ದೂಲ ಜಿತಾ ಲೋಕಾ ಮಯಾ ಶುಭಾಃ ।
> ಬ್ರಾಹ್ಮ್ಯಾಶ್ಚ ನಾಕಪೃಷ್ಠ್ಯಾಶ್ಚ ಪ್ರತಿಗೃಹ್ಣೀಷ್ವ ಮಾಮಕಾನ್ ॥ ೩೧ ॥

"ಹೇ ಪುರುಷೋತ್ತಮನೇ, ನಾನು ತಪೋಬಲದಿಂದ ಅಕ್ಷಯವಾದ ಶುಭವಾದ ಬ್ರಹ್ಮಲೋಕವನ್ನು ಸ್ವರ್ಗಲೋಕವನ್ನೂ ಪಡೆದುಕೊಂಡಿದ್ದೇನೆ. ಆ ಲೋಕಗಳನ್ನು ಸ್ವೀಕರಿಸು !" ಇದನ್ನು ಕೇಳಿ ಶ್ರೀರಾಮನು ಆ ಮುನಿಗೆ ಇಂತೆಂದನು —

> ಅಹಮೇವಾಹರಿಷ್ಯಾಮಿ ಸರ್ವಾಂಲ್ಲೋಕಾನ್ಮಹಾಮುನೇ ।
> ಆವಾಸಂ ತ್ವಹಮಿಚ್ಛಾಮಿ ಪ್ರದಿಷ್ಟಮಿಹ ಕಾನನೇ ॥ ೩೩ ॥

"ಹೇ ಮಹಾಮುನಿಯೇ, ನಾನೇ ತಪಸ್ಸನ್ನಾಚರಿಸಿ ಎಲ್ಲ ಲೋಕಗಳನ್ನೂ ಸಂಪಾದಿಸುವೆ. ನೀವು ಈ ಅರಣ್ಯದಲ್ಲಿ ನಮಗೆ ವಾಸಕ್ಕೆ ಯೋಗ್ಯವಾದ ಸ್ಥಳವನ್ನು ತೋರಿಸಬೇಕೆಂಬ ಇಚ್ಛೆ ಮಾತ್ರ ನನ್ನದಾಗಿದೆ."

ಆಗ ಶರಭಂಗ ಋಷಿಯು ಶ್ರೀರಾಮನಿಗೆ 'ಸುತೀಕ್ಷ್ಣ' ಮುನಿಯ ಆಶ್ರಮಕ್ಕೆ ಹೋಗಲು ಹೇಳಿದನು.

ಅಯಾಚಿತ, ಅಸ್ವೀಕೃತ.

**೨೭. ಶ್ರೀರಾಮ > (ದಂಡಕಾರಣ್ಯದ) ಮುನಿಗಳು** ಅರಣ್ಯಕಾಂಡ / ೬

ರಾಕ್ಷಸರು ದಂಡಕಾರಣ್ಯದಲ್ಲಿ ವಾಸವಾಗಿದ್ದ ಮುನಿಗಳನ್ನು ಅಕಾರಣವಾಗಿ ಹಿಂಸಿಸುತ್ತಿದ್ದರು. ಅವರನ್ನು ಕೊಲ್ಲುತ್ತಿದ್ದರೂ ಕೂಡ. ಹೀಗಾಗಿ ಬೆದರಿಹೋದ ಆ ಮುನಿಗಳು ಶ್ರೀರಾಮನನ್ನು ಮೊರೆಹೊಕ್ಕರು. ರಕ್ಕಸರಿಂದ ತಮ್ಮನ್ನು ಕಾಪಾಡೆಂದು ಅವನನ್ನು ಕೇಳಿಕೊಂಡರು. ಅವರ ಅವಸ್ಥೆಯನ್ನು ಕಂಡು ಮನಕರಗಿದ ಶ್ರೀರಾಮನು ಅವರಿಗೆ ಇಂತೆಂದನು : "ನೀವು ಹೀಗೆಲ್ಲ ದೈನ್ಯದಿಂದ ಬೇಡಿಕೊಳ್ಳುವ ಅಗತ್ಯವಿಲ್ಲ. ನಿಮ್ಮನ್ನು ಕಾಪಾಡುವುದು ನನ್ನ ಕರ್ತವ್ಯವೇ ಆಗಿದೆ. ದೈವಯೋಗದಿಂದಾಗಿಯೇ ನಾನಿಲ್ಲಿ ನಿಮ್ಮ ಸೇವೆಗಾಗಿ ಬಂದಿದ್ದೇನೆಂದು ತಿಳಿಯಿರಿ. ನಿಮ್ಮನ್ನು ಪೀಡಿಸುವ ರಾಕ್ಷಸರನ್ನು ಸಂಹರಿಸಬಯಸುತ್ತೇನೆ. ನನ್ನ ಹಾಗೂ ನನ್ನ ತಮ್ಮನ ಕಲಿತನವನ್ನು ಕಂಡೀರಂತೆ."

ದತ್ತ್ವಾ ವರಂ ಚಾಪಿ ತಪೋಧನಾನಾಂ ಧರ್ಮೇ ಧೃತಾತ್ಮಾ ಸಹಲಕ್ಷ್ಮಣೇನ ।
ತಪೋಧನೈಶ್ಚಾಪಿ ಸಹಾರ್ಯದತ್ತಃ ಸುತೀಕ್ಷ್ಣಮೇವಾಭಿಜಗಾಮ ವೀರಃ ॥ ೨೬ ॥

ಈ ಬಗೆಯಾಗಿ ಆ ತಪೋಧನರಿಗೆ ವರಹನ್ನಿತ್ತು ಧರ್ಮದ ಮೇಲೆ (ಅವಿಚಲವಾದ) ಶ್ರದ್ಧೆಯುಳ್ಳ ಶ್ರೀರಾಮಲಕ್ಷ್ಮಣರು ಅವರೆಲ್ಲರೊಡನೆ ಸುತೀಕ್ಷ್ಣ ಮುನಿಗಳಲ್ಲಿಗೆ ಹೋದರು.

ಯಾಚಿತವಾದುದು.

**೨೮. ಬ್ರಹ್ಮದೇವ > ಮಾರೀಚ** ಅರಣ್ಯಕಾಂಡ / ೩೮

ಸೀತೆಯನ್ನು ಅಪಹರಿಸುವ ಕಾರ್ಯದಲ್ಲಿ ಸಹಾಯವನ್ನು ಕೋರಿದ ರಾವಣನಿಗೆ ಮಾರೀಚನು ಹಿತೋಪದೇಶವನ್ನು ಮಾಡುತ್ತಾನೆ :

"ಶ್ರೀರಾಮನೊಡನೆ ಶತ್ರುತ್ವವನ್ನು ಕಟ್ಟಿಕೊಳ್ಳುವುದು ; ಆತನ ಸ್ತ್ರೀಯನ್ನು ಅಪಹರಿಸುವದು ; ಈ ಸಂಗತಿಗಳು ಸ್ವಂತ ರಾವಣನಿಗಾಗಲೀ ಆತನ ಬಂಧುಗಳಿಗಾಗಲೀ ಒಳಿತಿಗಾಗಿ ಆಗಲಾರವು !" ಎಂದು ಮಾರೀಚನು ರಾವಣನಿಗೆ ಪರಿಪರಿಯಾಗಿ ಹೇಳುತ್ತಾನೆ. ಶ್ರೀರಾಮನ ಶಕ್ತಿಸಾಮರ್ಥ್ಯಗಳ ಅರಿವು ಅನುಭವದಿಂದ ಮಾರೀಚನಿಗಾಗಿದೆ. ಶ್ರೀರಾಮನಿಂದ ತನಗಾದ ದುರವಸ್ಥೆಯನ್ನು ರಾವಣನೆದುರು ವಿವರವಾಗಿ ಹೇಳುತ್ತಾನೆ. ಮಾರೀಚನನ್ನು ವಿನಾಶಗೊಳಿಸಲೆಂದು ಯಾವ ರೀತಿ ವಿಶ್ವಾಮಿತ್ರನು ದಶರಥನ ಬಳಿಗೆ ಹೋಗಿ ಯಜ್ಞದ ರಕ್ಷಣೆಗಾಗಿ ಶ್ರೀರಾಮನನ್ನು ಕರೆತಂದಿದ್ದನು ; ರಾಕ್ಷಸರನ್ನು ಸದೆಬಡಿಯಲು, ಹೇಗೆ ಶ್ರೀರಾಮನ ಹೊರತು ಪಡಿಸಿ ಬೇರೆ ಯಾರಲ್ಲೂ ಸಾಮರ್ಥ್ಯವಿಲ್ಲವೆಂಬುದನ್ನು ವಿಶ್ವಾಮಿತ್ರನು ತಿಳಿದುಕೊಂಡಿದ್ದನೆಂಬುದನ್ನು ಮಾರೀಚನು ಈ ರೀತಿ ಹೇಳುತ್ತಾನೆ :

ತತೋऽಹಂ ಮೇಘಸಂಕಾಶಸ್ತಪ್ತಕಾಂಚನಕುಂಡಲಃ ।
ಬಲೀ ದತ್ತವರೋ ದರ್ಪಾದಾಜಗಾಮಾಶ್ರಮಾಂತರಮ್ ॥ ೧೬ ॥

"ಅನಂತರ ಮೇಘಸಮನಾದ, ಶುದ್ಧ ಚಿನ್ನದ ಕುಂಡಲಗಳನ್ನು ಧರಿಸಿದ ಮಹಾಬಲಾಢ್ಯನಾದ ನಾನು ದೇವರಿಂದ ವಧಿಸಲ್ಪಡದಿರುವ ವರವನ್ನು ಬ್ರಹ್ಮದೇವನಿಂದ ಪಡೆದ ಕಾರಣ ಅಹಂಕಾರದಿಂದ ಆ ಆಶ್ರಮಕ್ಕೆ ತಲುಪಿದೆನು.

"ಒಳಹೋಗುವಾಗ ಶ್ರೀರಾಮನು ನನ್ನನ್ನು ಕಂಡನು. ಆದರೆ ನನ್ನನ್ನು ನೋಡಿದ ಕ್ಷಣವೇ ಸ್ವಲ್ಪ ಕೂಡ ಅಂಜದೆ ಆತನು ತನ್ನ ಬಿಲ್ಲಿಗೆ ಹೆದೆಯೇರಿಸಿದನು. ಅವನೊಬ್ಬ ಬಾಲಕನೆಂದು ಬಗೆದು ನಾನು ವೇದಿಯತ್ತ ಧಾವಿಸಿದೆ. ಆಗ ಶ್ರೀರಾಮನು ಒಂದು ತೀಕ್ಷ್ಣವಾದ ಬಾಣದಿಂದ ನನ್ನನ್ನು ಸಮುದ್ರದಲ್ಲಿ ನೂರು ಯೋಜನೆ ಗಳಷ್ಟು ದೂರ ಎಸೆದನು" ಎಂದು ಸ್ವಂತ ಮಾರೀಚನೇ ಒಪ್ಪಿಕೊಂಡನು. ತನ್ನನ್ನು ಕೊಲ್ಲುವ ಇಚ್ಛೆ ಶ್ರೀರಾಮನದಾಗಿರಲಿಲ್ಲವಾದ್ದರಿಂದಲೇ ತಾನು ಬದುಕಿಕೊಂಡಿರುವುದೆಂದು ಸಹ ಹೇಳಿದನು.

ಶ್ರೀರಾಮನೊಡನೆ ಕಲಹವನ್ನು ನಡೆಯಿಸಿದರೆ ಘೋರ ಆಪತ್ತು ಒದಗಿ ಅವನ ನಾಶವು ಕೂಡಲೇ ಆಗುವದೆಂದು ಕೂಡ ರಾವಣನಿಗೆ ಎಚ್ಚರಿಸಿದನು.

ಈ ವರವು ಮಾರೀಚನಿಗೆ ಏಕೆ, ಯಾವ ರೀತಿ ದೊರೆಯಿತೆಂಬ ಬಗ್ಗೆ ನಿಚ್ಚಳವಾದ ಉಲ್ಲೇಖವಿಲ್ಲ. ಇದು ಯಾಚಿತ ವರವೋ ಅಯಾಚಿತ ವರವೋ ಎಂಬುದನ್ನು ಖಚಿತವಾಗಿ ಹೇಳಲಾಗುವುದಿಲ್ಲ.

ಅನಿಶ್ಚಿತ.

## ೩೦. ಇಂದ್ರ > ಸೀತಾ    ಅರಣ್ಯಕಾಂಡ / ಪ್ರಕ್ಷಿಪ್ತ / ೫೬ರ ನಂತರ

ರಾವಣನು ಸೀತೆಯನ್ನು ಬಲವಂತವಾಗಿ ಅಪಹರಿಸಿ ಲಂಕೆಯ ಅಶೋಕವನದಲ್ಲಿ ರಾಕ್ಷಸಿಯರ ಕಣ್ಣೆದುರು ಭದ್ರಕಾವಲಿನಲ್ಲಿ ಇಟ್ಟಿದ್ದನು. ಆಗ ಸೀತೆಯು ಜೀವನಾವಶ್ಯಕವಾದ ಅನ್ನಪಾನೀಯಗಳನ್ನು ತ್ಯಜಿಸಿದಳು. ಇದರಿಂದ ಬ್ರಹ್ಮದೇವನಿಗೆ ಬಹಳೇ ಚಿಂತೆಯುಂಟಾಯಿತು. ಸೀತೆಯು ಉಪವಾಸವಿದ್ದು ಪ್ರಾಣವನ್ನು ತ್ಯಜಿಸಬಾರದೆಂದು ಆತನು ಇಂದ್ರನನ್ನು ಲಂಕೆಗೆ ಹೋಗಲು ಪ್ರೇರೇಪಿಸಿದನು. ಅಲ್ಲಿಗೆ ಹೋಗಿ ಉತ್ಕೃಷ್ಟವಾದ ಹವಿಷ್ಯಾನ್ನವನ್ನು ಸೀತೆಗೆ ಅರ್ಪಿಸಲು ಎಲ್ಲ ವಿಧದ ಪ್ರಯತ್ನಗಳನ್ನು ಮಾಡಬೇಕೆಂದು ಹೇಳಿದನು. ಇಂದ್ರನು ತನ್ನ ಜೊತೆಗೆ ನಿದ್ರಾದೇವಿಯನ್ನು ಕರೆದೊಯ್ದು ಅಲ್ಲಿಯ ರಾಕ್ಷಸಿಯರಿಗೆ ಮೋಹನಿದ್ರೆ ಬರಿಸುವಂತೆ ಆಜ್ಞಾಪಿಸಿದನು. ಕಾವಲಿದ್ದ ರಾಕ್ಷಸಿಯರೆಲ್ಲ ಮೋಹನಿದ್ರೆಯ ವಶವರಾದನಂತರ ಇಂದ್ರನು ಸೀತೆಯನ್ನು ಭೇಟಿಮಾಡಿದನು ; ತನ್ನ ಆಗಮನದ ಉದ್ದೇಶವನ್ನು ವಿವರಿಸಿದನು. ದೇವತಾಕಾರ್ಯಕ್ಕಾಗಿ ಶ್ರೀರಾಮನ ಯೋಜನೆಯಾಗಿದೆ. ಆತನಿಗೆ ಸರ್ವರಿಂದ ಸಕಲ ರೀತಿಯಲ್ಲಿ ಸಹಾಯವು ದೊರೆಯಲಿರುವದು ಮತ್ತು,

> ಮತ್ಪ್ರಸಾದಾತ್ಸಮುದ್ರಂ ಸ ತರಿಷ್ಯತಿ ಬಲೈಃ ಸಹ । ೧೩

"ನನ್ನ ಅನುಗ್ರಹದಿಂದ ಶ್ರೀರಾಮನು ಸೈನ್ಯಸಮೇತನಾಗಿ ಸಮುದ್ರವನ್ನು ದಾಟಿಬರುವನು" ಎಂಬ ಆಶ್ವಾಸನೆಯನ್ನು ಕೊಟ್ಟನು. "ರಾಕ್ಷಸಿಯರು ಮೋಹನಿದ್ರೆಯ ಅಧೀನರಾಗಬೇಕೆಂದು ನಾನು ನಿದ್ರಾದೇವಿಯನ್ನು ಜೊತೆಗೆ ತಂದಿದ್ದೇನೆ. ಈ ಹವಿಷ್ಯಾನ್ನವನ್ನು ನಿನಗಾಗಿ ತಂದಿದ್ದೇನೆ."

> ಏತದತ್ಸ್ಯಸಿ ಮದ್ಧಸ್ತಾನ್ನ ತ್ವಾಂ ಬಾಧಿಷ್ಯತೇ ಶುಭೇ ।
> ಕ್ಷುಧಾ ತೃಷಾ ಚ ರಂಭೋರು ವರ್ಷಾಣಾಮಯುತೈರಪಿ ॥ ೧೫ ॥

"ಎಲೈ ಕಲ್ಯಾಣೀ, ನೀನು ಇದನ್ನು ಸೇವಿಸಿದರೆ ಸಾವಿರಾರು ವರ್ಷಗಳವರೆಗೆ ನಿನಗೆ ಹಸಿವೆನೀರಡಿಕೆಗಳು ಬಾಧಿಸಲಾರವು."

ಭೇಟಿಯಾಗಲು ಬಂದವನು ಇಂದ್ರನೇ ಇರುವ ಬಗ್ಗೆ ಮನವರಿಕೆ ಮಾಡಿಕೊಳ್ಳಲು ಶ್ರೀರಾಮಲಕ್ಷ್ಮಣರಲ್ಲಿ ಅವಳು ಕಂಡಿದ್ದ ದೇವತಾಸ್ವರೂಪಚಿಹ್ನೆಗಳನ್ನು, ಇಂದ್ರನು ತನ್ನಲ್ಲಿ ತೋರಿಸಬೇಕೆಂದು ವಿನಂತಿಸಿದಳು. ಇಂದ್ರನು ಸೀತೆಗೆ ಅದನ್ನು ಖಚಿತಪಡಿಸಿದ ನಂತರ ಹವಿಷ್ಯಾನ್ನವನ್ನು ಸ್ವೀಕರಿಸಲು ಅನುಮತಿಸಿದಳು.

ಇದಕ್ಕೆ ವರವೆನ್ನಬೇಕೋ ? ಅನುಗ್ರಹವೆನ್ನಬೇಕೋ ? ಅಥವಾ ಇಂದ್ರನ ಶಕ್ತಿಯ ಪ್ರಭಾವವೆನ್ನಬೇಕೋ ? ವರವಾಗಿದ್ದರೆ ಇದು ಅಯಾಚಿತ ವರವಿದೆ. ಹವಿಷ್ಯಾನ್ನವು ದೊರೆಯುವದು ಅನುಗ್ರಹಸ್ವರೂಪವಾಗಿದೆ.

ಅಯಾಚಿತ.

ಅನುಗ್ರಹ — ಹವಿಷ್ಯಾನ್ನವು ಮೂರ್ತರೂಪದ ವಸ್ತುವು.

## ೩೧. ಬ್ರಹ್ಮದೇವ > ಕಬಂಧ    ಅರಣ್ಯಕಾಂಡ / ೭೧

ಕಬಂಧ ಶ್ರೀರಾಮನಿಗೆ ತನ್ನ ಪೂರ್ವವೃತ್ತಾಂತವನ್ನು ಹೇಳುತ್ತಿದ್ದಾನೆ —

"ಹಿಂದಕ್ಕೆ ನನ್ನ ದೇಹವು ಸೂರ್ಯಚಂದ್ರರಂತೆ ತೇಜಸ್ವಿಯಾಗಿತ್ತು. ನಾನಾಗ ರಾಕ್ಷಸರೂಪವನ್ನು ತಳೆದು ಋಷಿಗಳನ್ನು ಬೆದರಿಸುತ್ತಿದ್ದೆ. ನನ್ನೀ (ತಪ್ಪು)ನಡತೆಯಿಂದಾಗಿ ಒಂದು ಸಲ ಶಿರಾ ಮುನಿಗಳು ಕೆರಳಿದರು. ಅವರು ನನಗೊಂದು ಘೋರವಾದ ಶಾಪವಿತ್ತರು.* ಅಂದಿನಿಂದ ನನಗಿಂಥ ಭಯಂಕರ ಸ್ವರೂಪವು

* ನೋಡಿ : ಸ್ಥೂಲಶಿರಾ > ಕಬಂಧ, ಶಾಪ ಕ್ರ. ೨೮.

ಬಂದೊದಗಿದೆ. ನಾನು ಆ ಮುನಿಯನ್ನು ಮೊರೆಹೊಕ್ಕೆ. ಉಶ್ಶಾಪಕ್ಕಾಗಿ ಅವರನ್ನು ಕೋರಿದೆ. ಅದಕ್ಕವರು, 'ಶ್ರೀರಾಮಲಕ್ಷ್ಮಣರೆಂಬ ಸೋದರರು ನಿನ್ನ ಕೈಕಾಲುಗಳನ್ನು ಕಡಿದು ಈ ಕಾಡಿನಲ್ಲಿ ನಿನ್ನನ್ನು ಸುಟ್ಟುಬಿಡುವರು. ಆಗ ನಿನಗೆ ನಿನ್ನ ಮೊದಲ ರೂಪವು ಪ್ರಾಪ್ತವಾದೀತೆಂದು ನನಗೆ ಹೇಳಿದರು.' "

ಅಹಂ ಹಿ ತಪಸೋಗ್ರೇಣ ಪಿತಾಮಹಮತೋಷಯಮ್ ॥ ೮ ॥
ದೀರ್ಘಮಾಯುಃ ಸ ಮೇ ಪ್ರಾದಾತ್ ತತೋ ಮಾಂ ವಿಭ್ರಮೋಽಸ್ಪೃಶತ್ । ೯

"ಹಿಂದಕ್ಕೆ ನಾನು ಘೋರವಾದ ತಪವನ್ನಾಚರಿಸಿ ಪಿತಾಮಹನಾದ ಬ್ರಹ್ಮದೇವನನ್ನು ಒಲಿಸಿಕೊಂಡೆ. ಹೀಗಾಗಿ ಅವನು ನನಗೆ ದೀರ್ಘಾಯುಷಿಯಾಗೆಂದು ವರವಿತ್ತನು."

ಯಾಚಿತ.

**೩.೨. ತಪಸ್ವಿ > ಶಬರಿ** **ಅರಣ್ಯಕಾಂಡ / ೭೪**

ಕಬಂಧನು ತೋರಿಸಿದ ಮಾರ್ಗವನ್ನು ಅನುಸರಿಸಿ ಪಂಪಾಸರೋವರದತ್ತ ಸಾಗುತ್ತಿದ್ದ ಶ್ರೀರಾಮ ಲಕ್ಷ್ಮಣರಿಗೆ ಶಬರಿಯ ಆಶ್ರಮವು ಕಾಣಿಸಿತು. ಅಸಂಖ್ಯ ವೃಕ್ಷಗಳಿದ್ದ ಪ್ರಕೃತಿಸೌಂದರ್ಯದಿಂದ ಕಂಗೊಳಿಸುತ್ತಿದ್ದ ಆ ಆಶ್ರಮವು ರಮಣೀಯವಾಗಿತ್ತು. ಅವರು ಶಬರಿಯ ಸಮೀಪ ಹೋದಾಗ ಅವಳಿಗೆ ತುಂಬಾ ಸಂತೋಷವಾಯಿತು. ಶಬರಿಯು ಅತ್ಯಂತ ವಿನಯಪೂರ್ವಕವಾಗಿ ಕರಗಳೆರಡನ್ನೂ ಜೋಡಿಸಿ ವಂದಿಸಿದಳು. ಪಾದ್ಯ ಆಚಮನಗಳಿಂದ ಯಥೋಚಿತ ಸ್ವಾಗತವನ್ನಿತ್ತಳು. ಆಕೆಯ ತಪಸ್ಸಿನ ಬಗ್ಗೆ, ಅದರಲ್ಲಿ ವಿಘ್ನವನ್ನು ತರುವ ಷಡ್ರಿಪುಗಳ ದಮನದ ಬಗ್ಗೆ, ಕೋಪನಿಗ್ರಹ, ನಿಯಂತ್ರಿತ ಆಹಾರ, ನಿಯಮಪಾಲನೆ ಇವೆಲ್ಲವುಗಳ ಬಗ್ಗೆ ಶ್ರೀರಾಮನು ಶಬರಿಯನ್ನು ಪ್ರಶ್ನಿಸಿ ತಿಳಿದುಕೊಂಡುದಲ್ಲದೆ, ಆಕೆಯ ಕ್ಷೇಮಸಮಾಚಾರವನ್ನು ವಿಚಾರಿಸಿಕೊಂಡನು. ಅವಳು ಶ್ರೀರಾಮನಿಗೆ ವಿನಯದಿಂದ ಈ ರೀತಿ ನುಡಿದಳು :

"ನಿನ್ನ ದರ್ಶನದಿಂದ ನನ್ನ ತಪವು ಇಂದು ಫಲಿಸಿತು. ನನ್ನ ಜನ್ಮವು ಸಾರ್ಥಕವಾಯಿತು. ಗುರುಜನರ ಉತ್ಕೃಷ್ಟ ಸೇವೆಯನ್ನು ಸಲ್ಲಿಸಿದ ಫಲವು ಇಂದು ಲಭಿಸಿದಂತಾಯಿತು. ನಿನ್ನಂಥ ಪುರುಷಶ್ರೇಷ್ಠನನ್ನು ಪೂಜಿಸಿದ್ದರಿಂದ ನನಗೆ ಇನ್ನು ಸ್ವರ್ಗಪ್ರಾಪ್ತಿಯಾಗುವದು. ನಿನ್ನ ಮನೋಹರದೃಷ್ಟಿಯಿಂದ ಇಂದು ಪವಿತ್ರಳಾದೆನು.

"ನಿನ್ನ ಕೃಪಾಪ್ರಸಾದದಿಂದ ನನಗೆ ಅಕ್ಷಯಲೋಕಗಳು ಲಭಿಸಲಿವೆ.

ಚಿತ್ರಕೂಟಂ ತ್ವಯಿ ಪ್ರಾಪ್ತೇ ವಿಮಾನೈರತುಲಪ್ರಭೈಃ ।
ಇತಸ್ತೇ ದಿವಮಾರೂಢಾ ಯಾನಹಂ ಪರ್ಯಚಾರಿಷಮ್ ॥ ೧೪ ॥
ತೈಶ್ಚಾಹಮುಕ್ತಾ ಧರ್ಮಜ್ಞೈರ್ಮಹಾಭಾಗೈರ್ಮಹರ್ಷಿಭಿಃ ।
ಆಗಮಿಷ್ಯತಿ ತೇ ರಾಮಃ ಸುಪುಣ್ಯಮಿಮಮಾಶ್ರಮಮ್ ॥ ೧೫ ॥
ಸ ತೇ ಪ್ರತಿಗ್ರಹೀತವ್ಯಃ ಸೌಮಿತ್ರಿಸಹಿತೋಽತಿಥಿಃ ।
ತಂ ಚ ದೃಷ್ಟ್ವಾ ವರಾಂಲ್ಲೋಕಾನಕ್ಷಯಾಂಸ್ತ್ವಂ ಗಮಿಷ್ಯಸಿ ॥ ೧೬ ॥

"ನೀನು ಚಿತ್ರಕೂಟ ಪರ್ವತವನ್ನು ತಲುಪಿದ ಕ್ಷಣವೇ, ನಾನು ಸೇವೆಗೈದ ತಪಸ್ವಿಗಳು ಕಾಂತಿಮಯ ವಿಮಾನದ ಸಹಾಯದಿಂದ ಸ್ವರ್ಗದತ್ತ ಸಾಗಿದರು. ಹೋಗುವಾಗ ಧರ್ಮಜ್ಞ ಮಹಾಭಾಗ್ಯವಾನರಾದ ಆ ಮಹರ್ಷಿಗಳು ನನಗೆ : 'ಈ ನಿನ್ನ ಪುಣ್ಯಭೂಮಿಗೆ ಲಕ್ಷ್ಮಣನೊಡಗೂಡಿ ಶ್ರೀರಾಮನು ಬರಲಿರುವನು ; ನೀನು ಆತನನ್ನು ಸ್ವಾಗತಿಸು ! ಆತನ ದರ್ಶನದಿಂದ ನಿನಗೆ ಅಕ್ಷಯವಾದ ಉತ್ತಮ ಲೋಕಗಳು ಪ್ರಾಪ್ತವಾಗುವವು.' "

ಹೀಗೆ ಅವರು ಹೇಳಿದ್ದರಿಂದ ಶ್ರೀರಾಮನ ಸ್ವಾಗತಕ್ಕಾಗಿ ಅನೇಕ ವನ್ಯಪದಾರ್ಥಗಳನ್ನು ಸಂಗ್ರಹಿಸಿಟ್ಟಿದ್ದನ್ನು ಆತನಿಗೆ ತಿಳಿಸಿ ಅವುಗಳನ್ನು ಸ್ವೀಕರಿಸಬೇಕೆಂದು ಅವಳು ವಿನಂತಿಸಿದಳು.

ಶಬರಿಯು ಅರ್ಪಿಸಿದ ಕಾಡಿನ ಫಲಗಳನ್ನು ಸ್ವೀಕರಿಸಿ ಶ್ರೀರಾಮನು ಅವಳಿಗೆ ಈ ರೀತಿ ನುಡಿದನು : "ಹೇ ಕಲ್ಯಾಣೀ, ನೀನು ನನ್ನನ್ನು ಪೂಜಿಸಿರುವೆ. ಈಗ ನಿನ್ನ ಮನೋರಥವು ವಿನಾಯಾಸವಾಗಿ ಪೂರ್ಣ

ಗೊಳ್ಳುವದು." ಶ್ರೀರಾಮನ ಅನುಜ್ಞೆಯನ್ನು ಪಡೆದು ಶಬರಿಯು ಅಗ್ನಿಯಲ್ಲಿ ತನ್ನ ಹವನವನ್ನು ಪೂರೈಸಿ ಸ್ವರ್ಗವನ್ನು ಸೇರಿದಳು. ಆಗ ಅವಳು ದಿವ್ಯಾಲಂಕಾರ, ದಿವ್ಯಪುಷ್ಪ, ದಿವ್ಯಚಂದನ ಮತ್ತು ದಿವ್ಯವಸ್ತ್ರಗಳಿಂದ ಶೋಭಿತಳಾಗಿದ್ದಳು.

ತಪಸ್ವಿಗಳ ಹೇಳಿಕೆಯು ಸದಿಚ್ಛೆಯೋ ? ವರವೋ ? ವರವಾಗಿದ್ದರೆ 'ಅಯಾಚಿತ'ವಾಗಿದೆ. ದಿವ್ಯಪುಷ್ಪ, ಚಂದನ ಮತ್ತು ವಸ್ತ್ರಗಳು ವರದಿಂದ ದೊರೆತವೆಂದಲ್ಲ ; ಇವು ಅನುಗ್ರಹವೆನಿಸುತ್ತವೆ.

ಅನುಗ್ರಹ.

## ೩೩. ? > ದುಂದುಭಿ — ಕಿಷ್ಕಿಂಧಾಕಾಂಡ / ೧೧

ಸುಗ್ರೀವನು ವಾಲಿಯ ಅತುಲನೀಯ ಸಾಮರ್ಥ್ಯದ ಬಗ್ಗೆ ಶ್ರೀರಾಮನಿಗೆ ಹೇಳುತ್ತಿದ್ದಾನೆ :

"ಸೂರ್ಯೋದಯವಾಗುವ ಮೊದಲು ಬ್ರಾಹ್ಮೀಮುಹೂರ್ತದಲ್ಲಿ ವಾಲಿಯು ಪ್ರತಿನಿತ್ಯವೂ ಪಶ್ಚಿಮ ಸಮುದ್ರದಿಂದ ಪೂರ್ವಸಮುದ್ರದವರೆಗೆ ಮತ್ತು ದಕ್ಷಿಣಸಮುದ್ರದಿಂದ ಉತ್ತರಸಮುದ್ರದವರೆಗೆ ಸ್ವಲ್ಪ ಕೂಡ ಆಯಾಸವೆನಿಸದೆ ನಡೆದುಕೊಂಡು ಹೋಗುತ್ತಾನೆ. ಆತನು ಪರ್ವತಾರೋಹಣವನ್ನು ಮಾಡಿ ಅತಿವೇಗದಿಂದ ಧುಮುಕಿ ಪರ್ವತಗಳ ಶಿಖರಗಳೊಡನೆ ಚೆಂಡಿನಂತೆ ಆಟವಾಡುತ್ತಾನೆ. ವಿಶಾಲವೃಕ್ಷಗಳನ್ನು ತನ್ನ ಕೈಗಳಿಂದ ಮುರಿದುಹಾಕುತ್ತಾನೆ" ಎಂದು ವಾಲಿಯ ಬಗ್ಗೆ ಹೇಳಿದನು.

ಕೈಲಾಸಪರ್ವತದ ಶಿಖರದಂತೆ ಹೊಳಪುಳ್ಳ, ಒಂದು ಕೋಣನ ರೂಪವನ್ನು ಧರಿಸಿದ 'ದುಂದುಭಿ' ಎಂಬ ದೈತ್ಯನು ಇದ್ದನು. ಆತನಲ್ಲಿ ಒಂದು ಸಹಸ್ರ ಆನೆಗಳ ಬಲವಿತ್ತು.

ಸ ವೀರ್ಯೋತ್ಸೇಕದುಷ್ಟಾತ್ಮಾ ವರದಾನೇನ ಮೋಹಿತಃ । ೮

ವರವನ್ನು ಪಡೆದುದರಿಂದ ಗರ್ವೋನ್ಮತ್ತನಾಗಿ, ವೀರತ್ವದ ಅಹಂಕಾರದಿಂದ ದುರಾತ್ಮನಾದ ಆ ದುಂದುಭಿ ದೈತ್ಯನು ಸಮುದ್ರದ ಬಳಿಗೆ ಹೋಗಿ ಅದನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಸಮುದ್ರವು ಯುದ್ಧಮಾಡಲು ತಾನು ಅಸಮರ್ಥನೆಂದು ಹೇಳಿ ದುಂದುಭಿಗೆ ಹಿಮವಾನ ಪರ್ವತದ ಬಳಿ ಹೋಗಲು ತಿಳಿಸಿತು. ಹಿಮವಾನನು ತಾನು ರಣರಂಗದಲ್ಲಿ ಪ್ರವೀಣನಲ್ಲವೆಂದು ಒಪ್ಪಿಕೊಂಡು, ವಾಲಿಯತ್ತ ಹೋಗಲು ಹೇಳಿದನು. ವಾಲಿಯು ದುಂದುಭಿಯನ್ನು ಕೊಂದುಬಿಟ್ಟನು.

ದುಂದುಭಿಗೆ ಯಾರಿಂದ ವರವು ದೊರೆಯಿತು ? ಎಂಬುದರ ಸ್ಪಷ್ಟ ಉಲ್ಲೇಖವಿಲ್ಲ. ಅದನ್ನು ಅವನು ತಪಸ್ಸಿನಿಂದ ಪಡೆದುದರಿಂದ ಅದು 'ಯಾಚಿತ' ವರವಾಗಿದೆ.

ಯಾಚಿತ.

## ೩೪. ಆದಿತ್ಯ (ಸೂರ್ಯ) > ಮೇರು — ಕಿಷ್ಕಿಂಧಾಕಾಂಡ / ४೨

ಸುಗ್ರೀವನು ಸೀತೆಯ ಶೋಧಾರ್ಥ ಕಪಿಶ್ರೇಷ್ಠರನ್ನು ಅನೇಕ ವಾನರರ ಸಮೇತ ಎಲ್ಲ ದಿಕ್ಕುಗಳತ್ತ ಕಳುಹಿಸಿದನು. ಪಶ್ಚಿಮ ದಿಕ್ಕಿನತ್ತ ಹೋಗಿ ಶೋಧ ನಡೆಸಲು ಮರೀಚಿ ಮಹರ್ಷಿಯ ಪುತ್ರನನ್ನು ಯೋಜಿಸಿದನು. ಸುಗ್ರೀವನು ಆ ಗುಂಪಿನ ಪ್ರಮುಖನಾದ 'ಅರ್ಚಿಷ್ಮಾನ್'ಗೆ ಚಿಕ್ಕಪುಟ್ಟ ಸಂಗತಿಗಳ ವಿವರಣೆಯನ್ನು ಕೊಟ್ಟು, ಮಾರ್ಗದರ್ಶನವನ್ನು ಮಾಡುವಾಗ 'ಮೇರು'ಪರ್ವತದ ಬಗ್ಗೆ ವಿವರಿಸುತ್ತಾನೆ.

ಅನೇಕ ಪರ್ವತಗಳನ್ನು ದಾಟಿಹೋದನಂತರ ಇಂದ್ರನಿಂದ ರಕ್ಷಿಸಲ್ಪಡುತ್ತಿದ್ದ ಒಂದು ಪರ್ವತವು ಕಂಡುಬರುವುದು. ಅದರಾಚೆ ಅರವತ್ತುಸಾವಿರ ಪರ್ವತಗಳ ಒಂದು ಸಮೂಹವಿದೆ. ಆ ಸಮಸ್ತ ಪರ್ವತ ಶ್ರೇಣಿಯು ಎಳೆಯ ಸೂರ್ಯಕಿರಣಗಳ ಹೊನ್ನಿನ ಕಾಂತಿಯಂತೆ ಬೆಳಗುತ್ತಿರುವದು. ಆ ಪರ್ವತಶ್ರೇಣಿಯ ಮಧ್ಯಭಾಗದಲ್ಲಿ ಪರ್ವತರಾಜನಾದ 'ಮೇರು' ಎಂಬ ಪರ್ವತವಿದೆ.

ಆದಿತ್ಯೇನ ಪ್ರಸನ್ನೇನ ಶೈಲೋ ದತ್ತವರಃ ಪುರಾ ॥ ೩೮ ॥
ತೇನೈವಮುಕ್ತಃ ಶೈಲೇಂದ್ರಃ ಸರ್ವ ಏವ ತ್ವದಾಶ್ರಯಾಃ ।
ಮತ್ಪ್ರಸಾದಾದ್ ಭವಿಷ್ಯಂತಿ ದಿವಾರಾತ್ರೌ ಚ ಕಾಂಚನಾಃ ॥ ೩೯ ॥

ತ್ವಯಿ ಯೇ ಚಾಪಿ ವತ್ಸ್ಯಂತಿ ದೇವಗಂಧರ್ವದಾನವಾಃ ।
ತೇ ಭವಿಷ್ಯಂತಿ ಭಕ್ತಾಶ್ಚ ಪ್ರಭಯಾ ಕಾಂಚನಪ್ರಭಾಃ ॥ ೪೦ ॥

ಪೂರ್ವದಲ್ಲಿ ಪ್ರಸನ್ನನಾದ ಸೂರ್ಯನು ವರವನ್ನು ಕೊಡುವಾಗ ಆ ಪರ್ವತಕ್ಕೆ ಇಂತೆಂದನು : "ಹಗಲಿರುಳೂ ನಿನ್ನ ಆಶ್ರಯಕ್ಕಿರುವ ಎಲ್ಲರೂ ನನ್ನ ಕೃಪೆಯಿಂದ ಸುವರ್ಣಕಾಂತಿಯವರಾಗುವರು. ನಿನ್ನಲ್ಲಿ ವಾಸಿಸುವ ದೇವತೆಗಳು, ಗಂಧರ್ವರು ಮತ್ತು ದಾನವರು ನನ್ನ ಭಕ್ತರಾಗಿ ಹೊನ್ನಿನಂತೆ ಪ್ರಭೆಯುಳ್ಳವರಾಗುವರು."

ಸ್ಪಷ್ಟವಾದ ಉಲ್ಲೇಖವು ಇರದ ಕಾರಣ ಈ ವರವು ಯಾಚಿತವೋ ಅಯಾಚಿತವೋ ? ಎಂಬುದನ್ನು ನಿಶ್ಚಿತವಾಗಿ ಹೇಳಲಾಗುವದಿಲ್ಲ.

ಅನಿಶ್ಚಿತ.

## ೩೫. ಬ್ರಹ್ಮದೇವ > ಮಯ ಕಿಷ್ಕಿಂಧಾಕಾಂಡ / ೫೧

ಹನುಮಂತನ ವಿನಂತಿಗನುಸಾರ ಸ್ವಯಂಪ್ರಭೆಯು 'ಋಕ್ಷಬಿಲ'ದ ವೃತ್ತಾಂತವನ್ನು ಹೇಳುತ್ತಾಳೆ :

ಮಯೋ ನಾಮ ಮಹಾತೇಜಾ ಮಾಯಾವೀ ವಾನರರ್ಷಭ ॥ ೧೦ ॥
ತೇನೇದಂ ನಿರ್ಮಿತಂ ಸರ್ವಂ ಮಾಯಯಾ ಕಾಂಚನಂ ವನಮ್ ।
ಪುರಾ ದಾನವಮುಖ್ಯಾನಾಂ ವಿಶ್ವಕರ್ಮಾ ಬಭೂವ ಹ ॥ ೧೧ ॥
ಯೇನೇದಂ ಕಾಂಚನಂ ದಿವ್ಯಂ ನಿರ್ಮಿತಂ ಭವನೋತ್ತಮಮ್ ।
ಸ ತು ವರ್ಷಸಹಸ್ರಾಣಿ ತಪಸ್ತಪ್ತ್ವಾ ಮಹದ್ವನೇ ॥ ೧೨ ॥
ಪಿತಾಮಹಾದ್ವರಂ ಲೇಭೇ ಸರ್ವಮೌಶನಸಂ ಧನಮ್ । ೧೩

"ಹೇ ವಾನರಶ್ರೇಷ್ಠನೇ, 'ಮಯ'ನೆಂಬ ಮಹಾತೇಜಸ್ವಿ ಮಾಯಾವಿಯೊಬ್ಬನಿದ್ದಾನೆ. ಆತನು ತನ್ನ ಮಾಯೆಯಿಂದ ಸುವರ್ಣವನವನ್ನು ನಿರ್ಮಿಸಿದ್ದಾನೆ. ಪೂರ್ವದಲ್ಲಿ ಈತನು ಶ್ರೇಷ್ಠರೆನಿಸಿದ ದಾನವರ ಶಿಲ್ಪಿಯಾಗಿದ್ದನೆಂದು ಪ್ರಸಿದ್ಧವಾಗಿದೆ. ಆತನೇ ಈ ದಿವ್ಯವಾದ ಸರ್ವೋತ್ಕೃಷ್ಟವಾದ ವಸತಿಸ್ಥಾನವನ್ನೂ ನಿರ್ಮಿಸಿದ್ದಾನೆ. ಮಹಾರಣ್ಯದಲ್ಲಿ ಸಾವಿರಾರು ವರ್ಷಗಳ ತಪಸ್ಸನ್ನು ಆಚರಿಸಿದನಂತರ ಆತನಿಗೆ ಬ್ರಹ್ಮನಿಂದ ವರ ಪ್ರಾಪ್ತವಾಯಿತು. ಇದಲ್ಲದೆ 'ಉಶನ' (ಶುಕ್ರಾಚಾರ್ಯ) ಮಹರ್ಷಿಯಿಂದ ರಚಿಸಲ್ಪಟ್ಟ ಎಲ್ಲ 'ಶಿಲ್ಪಶಾಸ್ತ್ರ' ಸ್ವರೂಪದ ಧನವು ಈತನಿಗೆ ಲಭಿಸಿತು."

ಬೇಕುಬೇಕಾದ ಭೋಗ್ಯಪದಾರ್ಥಗಳನ್ನು ನಿರ್ಮಿಸುವ ಶಕ್ತಿಯನ್ನು ಹೊಂದಿದ್ದ ಬಲಾಢ್ಯ ದಾನವನಾದ ಈ ಮಯನು ಇದನ್ನೆಲ್ಲ ನಿರ್ಮಿಸಿ ಕೆಲವು ಕಾಲದವರೆಗೆ ಸುಖದಿಂದ ಬಾಳಿದನು. ಈ ನಂತರ 'ಹೇಮಾ' ಎಂಬ ಅಪ್ಸರೆಯೊಡನೆ ಲಂಪಟನಾದ್ದರಿಂದ ಇಂದ್ರನು ವಜ್ರಾಘಾತದಿಂದ ಸಂಹರಿಸಿದನು. ಇದು 'ಯಾಚಿತ' ವರವಾಗಿದೆ.

ಯಾಚಿತ.

## ೩೬. ಹೇಮಾ > ಸ್ವಯಂಪ್ರಭಾ ಕಿಷ್ಕಿಂಧಾಕಾಂಡ / ೫೧

ಸ್ವಯಂಪ್ರಭೆಯು ಹನುಮಂತನಿಗೆ ಋಕ್ಷ-ಬಿಲದ ವೃತ್ತಾಂತವನ್ನು ಅರುಹುತ್ತಾಳೆ. ಸೀತೆಯ ಶೋಧಾರ್ಥ ಅರಣ್ಯವನ್ನು ಸುತ್ತುತ್ತಿದ್ದ ಹನುಮಂತ ಮುಂತಾದ ವಾನರರು ಋಕ್ಷ-ಬಿಲವನ್ನು ಪ್ರವೇಶಿಸಿದರು. ಅಲ್ಲಿಯ ಅಪೂರ್ವಸೌಂದರ್ಯವನ್ನು ಕಂಡು ಅವರು ಆಶ್ಚರ್ಯಚಕಿತರಾದರು. ಅಲ್ಲಿ ಓರ್ವ ವಲ್ಕಲ-ಕೃಷ್ಣಾಜಿನಗಳನ್ನು ಧರಿಸಿದ್ದ ತಪಸ್ವಿನಿಯು ಕಂಡುಬಂದಳು. ಆಕೆಯು ಇವರೆಲ್ಲರಿಗೂ ಯೋಗ್ಯವಾದ ಆದರಾತಿಥ್ಯವನ್ನು ಸಲ್ಲಿಸಿದಳು. ಆನಂತರ ಹನುಮಂತನ ವಿನಂತಿಯನುಸಾರ 'ಋಕ್ಷ-ಬಿಲ'ದ ವೃತ್ತಾಂತವನ್ನು ಹೇಳಿದಳು. ಮಯನು ಈ ಸುವರ್ಣವನವನ್ನು, ಎಂದಿಗೂ ಕಡಿಮೆಯಾಗಲಾರದ ಭೋಗ್ಯವಸ್ತುಗಳನ್ನು ನಿರ್ಮಿಸಿ, ಈ ಸುವರ್ಣಮಯ ವಸತಿಸ್ಥಾನವನ್ನು ರಚಿಸಿದ್ದನು. ಇಂದ್ರನು ಈ ಮಯನನ್ನು ಸಂಹರಿಸಿದನಂತರ

ಬ್ರಹ್ಮದೇವನು, ಈ ಎಲ್ಲವನ್ನೂ ಮಯನ ಭಾರ್ಯೆಯಾದ 'ಹೇಮಾ' ಎಂಬ ಅಪ್ಸರೆಗೆ ಕೊಟ್ಟನು. ಇದನ್ನು ತಿಳಿಸಿ ಸ್ವಯಂಪ್ರಭೆಯು ತನ್ನ ವೃತ್ತಾಂತವನ್ನು ಹೇಳುತ್ತಾಳೆ —

ದುಹಿತಾ ಮೇರುಸಾವರ್ಣೇರಹಂ ತಸ್ಯಾ: ಸ್ವಯಂಪ್ರಭಾ ॥ ೧೬ ॥
ಇದಂ ರಕ್ಷಾಮಿ ಭವನಂ ಹೇಮಾಯಾ ವಾನರೋತ್ತಮ ।
ಮಮ ಪ್ರಿಯಸಖೀ ಹೇಮಾ ನೃತ್ಯಗೀತವಿಶಾರದಾ ॥ ೧೭ ॥
ತಯಾ ದತ್ತವರಾ ಚಾಸ್ಮಿ ರಕ್ಷಾಮಿ ಭವನಂ ಮಹತ್ ॥ ೧೮ ॥

"ನಾನು ಮೇರುಸಾವರ್ಣಿಯ ಸ್ವಯಂಪ್ರಭೆ ಹೆಸರಿನ ಕನ್ಯೆಯಾಗಿದ್ದೇನೆ. ಈ ವಸತಿಸ್ಥಾನವು ಹೇಮಾ ಅಪ್ಸರೆಯದಿದೆ ; ಅದನ್ನು ನಾನು ರಕ್ಷಿಸುತ್ತಿದ್ದೇನೆ. ನೃತ್ಯ ಮತ್ತು ಸಂಗೀತದಲ್ಲಿ ನಿಪುಣಳಾದ ಹೇಮಾ ನನ್ನ ಗೆಳತಿಯಾಗಿದ್ದಾಳೆ. ಅವಳು ಇದನ್ನು ರಕ್ಷಿಸುವ ಸಾಮರ್ಥ್ಯವನ್ನು ವರವಾಗಿ ನನಗೆ ಕೊಟ್ಟಿದ್ದಾಳೆ. ಆ ಕಾರಣ, ಈ ಪ್ರಚಂಡ ಗೃಹದ ಸಂರಕ್ಷಣೆಯನ್ನು ಮಾಡುತ್ತಲಿರುವೆನು."

ಅನಂತರ ಅವಳು ಹನುಮಂತನಿಗೆ ಆತನ ಆಗಮನದ ಕಾರಣವನ್ನು ಕೇಳಿ ಈ ದುರ್ಗಮವಾದ ವನವು ಅವರ ದೃಷ್ಟಿಗೆ ಹೇಗೆ ಕಂಡುಬಂದಿತು ? ಎಂಬುದನ್ನು ತಿಳಿಸಲು ಹೇಳಿದಳು. ಇದು 'ಅಯಾಚಿತ' ವರವಿರಬಹುದು.

ಅಯಾಚಿತ.

## ೩೭. ಹನುಮಾನ > ಸ್ವಯಂಪ್ರಭಾ — ಕಿಷ್ಕಿಂಧಾಕಾಂಡ / ೫೨

ಹೇಮಾ ಅಪ್ಸರೆಯ ಸಖಿಯಾದ ಸ್ವಯಂಪ್ರಭೆಯು ಋಕ್ಷ-ಬಿಲವನ್ನು ಸಂರಕ್ಷಿಸುತ್ತಿದ್ದಳು. ಆಗ ಅಲ್ಲಿ ಪ್ರವೇಶಿಸಿದ ಹನುಮಾನ ಮುಂತಾದ ವಾನರರಿಗೆ ಅವರ ವೃತ್ತಾಂತವನ್ನು ಹೇಳಬೇಕೆಂದು ಪ್ರಾರ್ಥಿಸಿದಳು. ಸೀತೆಯ ಶೋಧವನ್ನು ಮಾಡಲು ಅಲೆಯುತ್ತ ಆ ಸ್ಥಳಕ್ಕೆ ಹೇಗೆ ತಲುಪಿದರು ಎಂಬುದರ ಬಗ್ಗೆ ಹನುಮಂತನು ವಿಸ್ತರಿಸಿ ಹೇಳಿದನು :

ತ್ವಾಂ ಚೈವೋಪಗತಾ: ಸರ್ವೇ ಪರಿದ್ಯೂನಾ ಬುಭುಕ್ಷಿತಾ: ।
ಆತಿಥ್ಯಧರ್ಮದತ್ತಾನಿ ಮೂಲಾನಿ ಚ ಫಲಾನಿ ಚ ॥ ೧೬ ॥
ಅಸ್ಮಾಭಿರುಪಯುಕ್ತಾನಿ ಬುಭುಕ್ಷಾಪರಿಪೀಡಿತೈ: ।
ಯತ್ತ್ವಯಾ ರಕ್ಷಿತಾ: ಸರ್ವೇ ಮ್ರಿಯಮಾಣಾ ಬುಭುಕ್ಷಯಾ ॥ ೧೭ ॥
ಬ್ರೂಹಿ ಪ್ರತ್ಯುಪಕಾರಾರ್ಥಂ ಕಿಂ ತೇ ಕುರ್ವಂತು ವಾನರಾ: । ೧೮

"ನಾವೆಲ್ಲರೂ ಹಸಿದು ಬಳಲಿದವರಾಗಿದ್ದೆವು. ಹೀಗಾಗಿ ನಿನ್ನ ಬಳಿಗೆ ಬಂದೆವು. ನಮ್ಮನ್ನು ಅತಿಥಿಗಳೆಂದು ಬಗೆದು ನೀನು ಕೊಟ್ಟ ಹಣ್ಣುಹಂಪಲುಗಳನ್ನು ಹಸಿವೆಯಿಂದ ವ್ಯಾಕುಲರಾದ ನಾವು ಭಕ್ಷಿಸಿದ್ದೇವೆ. ಹಸಿವೆಯಿಂದ ಬಳಲಿ ಮರಣವನ್ನು ಸಮೀಪಿಸುತ್ತಿದ್ದ ವಾನರರಾದ ನಮ್ಮನ್ನು ರಕ್ಷಿಸಿರುವೆಯಾದ್ದರಿಂದ ಆ ಉಪಕಾರವನ್ನು ತೀರಿಸಲು ನಮ್ಮಿಂದ ನಿನ್ನ ಯಾವ ಕಾರ್ಯವಾಗಬೇಕಾಗಿದೆ ಎಂಬುದನ್ನು ಹೇಳು !"

ಆಗ ಸ್ವಯಂಪ್ರಭೆಯು ವಾನರಪ್ರಮುಖನಾದ ಹನುಮಂತನಿಗೆ ಈ ರೀತಿ ಉತ್ತರಿಸಿದಳು :

ಸರ್ವೇಷಾಂ ಪರಿತುಷ್ಟಾಸ್ಮಿ ವಾನರಾಣಾಂ ತರಸ್ವಿನಾಮ್ ॥ ೧೯ ॥
ಚರಂತ್ಯಾ ಮಮ ಧರ್ಮೇಣ ನ ಕಾರ್ಯಮಿಹ ಕೇನಚಿತ್ । ೨೦

"ಎಲ್ಲ ಬಲಶಾಲಿಗಳಾದ ವಾನರರ ಬಗೆಗೂ ಪ್ರಸನ್ನಳಾಗಿದ್ದೇನೆ. ಧರ್ಮನಿರತಳಾದ ನನಗೆ ಯಾರಿಂದಲೂ ಯಾವ ಬಗೆ ಕಾರ್ಯಾಪೇಕ್ಷೆಯೂ ಉಳಿದಿಲ್ಲ."

'ವರ' ಎಂಬ ಸ್ಪಷ್ಟ ಉಲ್ಲೇಖವು ವಾಲ್ಮೀಕಿಯಿಂದ ಮಾಡಲ್ಪಟ್ಟಿಲ್ಲ. 'ಪ್ರತ್ಯುಪಕಾರಾರ್ಥಮ್' — ಈ ಶಬ್ದವನ್ನು ಬಳಸಿರುವದರಿಂದ ಕೃತಜ್ಞತೆಯು ವ್ಯಕ್ತವಾಗುತ್ತದೆ. ಇದಕ್ಕೆ ವರ ಎನ್ನುವುದಾದರೆ ಇದು ಅಯಾಚಿತವೂ ಮತ್ತು ಅಸ್ವೀಕೃತವೂ ಆಗಿದೆ.

ಅಯಾಚಿತ, ಅಸ್ವೀಕೃತ.

## ೩೮. ನಿಶಾಕರ > ಸಂಪಾತಿ

**ಕಿಷ್ಕಿಂಧಾಕಾಂಡ / ೬೨**

ಸಂಪಾತಿಯು ವಾನರರಿಗೆ ತನ್ನ ಪೂರ್ವವೃತ್ತಾಂತವನ್ನು ಹೇಳುತ್ತಿದ್ದಾನೆ.

ಭಗವಾನ ನಿಶಾಕರ ಮುನಿಯ ವಿನಂತಿಯನುಸಾರ ಸಂಪಾತಿಯು ತನ್ನ ರೆಕ್ಕೆಗಳು ಹೇಗೆ ಸುಟ್ಟುಹೋದವು ಎಂಬುದರ ಬಗ್ಗೆ ವಿಸ್ತಾರವಾಗಿ ಹೇಳುತ್ತಿದ್ದಾನೆ. ಒಮ್ಮೆ ಹೆಮ್ಮೆಯಿಂದ ಕೊಬ್ಬಿದ ಅವನು ಮತ್ತು ಅವನ ತಮ್ಮನಾದ ಜಟಾಯು ಇವರಲ್ಲಿ ಯಾರು ಬಲುದೂರ ಹಾರಬಲ್ಲರೋ ಅವರೇ ಶ್ರೇಷ್ಠರು, ಎಂದು ತಿಳಿಯಬೇಕೆಂಬ ಸ್ಪರ್ಧೆ ಶುರುವಾಯಿತು. ಅವರಿಬ್ಬರೂ ಹಾರಿ, ಅನೇಕ ಪ್ರದೇಶಗಳನ್ನು, ನದಿಪರ್ವತಗಳನ್ನು ದಾಟಿ ತುಂಬ ಎತ್ತರಕ್ಕೆ ತಲುಪಿದರು. ಆಗ ಅವರಿಗೆ ದಿಕ್ಕುಗಳ ಪ್ರಜ್ಞೆಯೂ ಉಳಿಯಲಿಲ್ಲ. ತುಂಬ ಹಾರಿ ದಣಿದು ಸೋತರು, ಭಯಗೊಂಡರು. ತಾವು ಅಗ್ನಿಯಿಂದ ದಹಿಸಲ್ಪಡುತ್ತಿದ್ದೇವೆ ಎಂಬ ಅನುಭವವು ಅವರಿಗೆ ಆಗಹತ್ತಿತು. ಸೂರ್ಯನತ್ತ ನೋಡಿದಾಗ ಸೂರ್ಯನು ಅತಿದೊಡ್ಡವನಾಗಿ ಕಾಣಹತ್ತಿದನು. ಆಗ ಇದ್ದಕ್ಕಿದ್ದಂತೆ ಜಟಾಯುವು ಧರಣಿಯತ್ತ ಕುಸಿದನು. ರೆಕ್ಕೆಗಳನ್ನು ಹರಡಿ ಸಂಪಾತಿಯು ಆತನ ಮೇಲೆ ನೆರಳನ್ನುಂಟುಮಾಡಿದನು. ಇದರಿಂದ ಜಟಾಯುವು ಸುಟ್ಟುಹೋಗಲಿಲ್ಲ ; ಆದರೆ ಶಾಖದಿಂದ ಸಂಪಾತಿಯ ರೆಕ್ಕೆಗಳೆರಡೂ ಸುಟ್ಟುಹೋಗಿ ಸಂಪಾತಿಯು ವಿಂಧ್ಯಪರ್ವತದ ಮೇಲೆ ಒಂದು ಮುದ್ದೆಯಾಗಿ ಬಿದ್ದನು. ಸಂಪಾತಿಗೆ ಈ ರೀತಿ ತಮ್ಮನಾದ ಜಟಾಯುವಿನಿಂದ ವಿಯೋಗವಾಯಿತು ; ರಾಜ್ಯವಿಲ್ಲದಂತಾಯಿತು. ರೆಕ್ಕೆಗಳಿಲ್ಲದೆ ಪರಾಕ್ರಮವಿಲ್ಲದಂತಾಗಿ ಅತೀವ ದುಃಖವಾಗಿ ಮರಣವನ್ನಪ್ಪುವ ವಿಚಾರದಿಂದ ಆತನು ಪರ್ವತದಿಂದ ಕೆಳಗೆ ಧುಮುಕಬೇಕೆಂಬ ತನ್ನ ಇಚ್ಛೆಯನ್ನು ನಿಶಾಕರ ಮುನಿಯ ಬಳಿ ಪ್ರಕಟಿಸಿದನು. ಆಗ ನಿಶಾಕರ ಮುನಿಯು ನುಡಿದದ್ದೇನೆಂದರೆ : "ಮುಂಬರುವ ಕಾಲದಲ್ಲಿ ನಡೆಯಲಿರುವ ಒಂದು ಮಹತ್ವದ ಕಾರ್ಯದ ಬಗ್ಗೆ ಪುರಾಣದಿಂದ ಕೇಳಿದ್ದಲ್ಲದೆ, ತಪಸ್ಸಾಮರ್ಥ್ಯದಿಂದಲೂ ಅದನ್ನು ಅವಲೋಕಿಸಿದ್ದೇನೆ. ಸೀತೆಯನ್ನು ಹುಡುಕುತ್ತ ಬರಲಿರುವ ವಾನರರಿಗೆ ಒಂದು ಮಹತ್ವದ ವಿಷಯವನ್ನು ನೀನು ಅರುಹಬೇಕಾಗಿದೆ. ಹೀಗಿರುವದರಿಂದ ಈ ಸ್ಥಳವನ್ನು ಬಿಟ್ಟು ನೀನು ಕದಲುವದು ಯೋಗ್ಯವಾಗಲಾರದು."

> ಪಕ್ಷೌ ಚ ತೇ ಪ್ರಪಕ್ಷೌ ಚ ಪುನರನ್ಯೌ ಭವಿಷ್ಯತಃ।
> ಚಕ್ಷುಷೀ ಚೈವ ಪ್ರಾಣಾಶ್ಚ ವಿಕ್ರಮಶ್ಚ ಬಲಂ ಚ ತೇ ॥ ೨ ॥

"ನಿನ್ನ ಮುಖ್ಯ ರೆಕ್ಕೆಗಳು ಮತ್ತು ಉಪರೆಕ್ಕೆಗಳು ಮತ್ತೆ ಮೂಡಲಿರುವವು ; ಅದೇ ರೀತಿ ದೃಷ್ಟಿ, ಪ್ರಾಣ, ಪರಾಕ್ರಮ ಇವೆಲ್ಲವೂ ನಿನ್ನಲ್ಲಿ ಸಂವರ್ಧಿಸಲಿರುವವು."

> ದೇಶಕಾಲೌ ಪ್ರತೀಕ್ಷಸ್ವ ಪಕ್ಷೌ ತ್ವಂ ಪ್ರತಿಪತ್ಸ್ಯಸೇ ॥ ೧೨ ॥

"ದೇಶ ಮತ್ತು ಸಮಯದ ಪ್ರತೀಕ್ಷೆಯಲ್ಲಿರು ; ನಿನಗೆ ರೆಕ್ಕೆಗಳು ತಾನಾಗಿ ಮೂಡುವವು."

ಆ ನಿಶಾಕರ ಮುನಿಯು ಇನ್ನೂ ನುಡಿದದ್ದೆಂದರೆ : "ನಾನು ಇಂದೇ ನಿನಗೆ ರೆಕ್ಕೆಗಳನ್ನು ಅನುಗ್ರಹಿಸ ಬಹುದಿತ್ತು ; ಆದರೆ ಒಮ್ಮೆ ರೆಕ್ಕೆಗಳು ಪ್ರಾಪ್ತವಾದನಂತರ ನೀನು ಈ ಸ್ಥಳದಲ್ಲಿ ಇರದೇ ಇದನ್ನು ಬಿಟ್ಟು ಹೋಗುವ ಸಂಭವವಿದೆ ; ಮತ್ತು ಮುಂದೆ ನಿನ್ನಿಂದ ನಡೆಯಬೇಕಾದ ದೇವತಾಕಾರ್ಯವು ಆಗಲಾರದು ; ಆದ್ದರಿಂದ ಸಾಂಪ್ರತ ನಾನು ನಿನಗೆ ರೆಕ್ಕೆಗಳನ್ನು ಕೊಡುತ್ತಿಲ್ಲ."

**ಕಿಷ್ಕಿಂಧಾಕಾಂಡ / ೬೩**

ಸಂಪಾತಿಯು ನಿಶಾಕರ ಮುನಿಯ ಹೇಳಿಕೆಯಂತೆ, ವಾನರರು ಬರುವ ದಾರಿ ಕಾಯುತ್ತ ಕಾಲಕ್ರಮಿಸ ಹತ್ತಿದನು. ವಾನರರ ಸಮೂಹವು ಬಂದನಂತರ ಅವರಿಗೆ ತನ್ನ ಪೂರ್ವವೃತ್ತಾಂತವನ್ನು ತಿಳಿಸುತ್ತಿದ್ದಾಗ—

> ಉತ್ಪೇತತುಸ್ತದಾ ಪಕ್ಷೌ ಸಮಕ್ಷಂ ವನಚಾರಿಣಾಮ್ ।
> ಸ ದೃಷ್ಟ್ವಾ ಸ್ವಾಂ ತನುಂ ಪಕ್ಷೈರುದ್ಗತೈರರುಣಚ್ಛದೈಃ ॥ ೯ ॥

ಆ ವಾನರರ ಸಮಕ್ಷಮವೇ ಸಂಪಾತಿಗೆ ರೆಕ್ಕೆಗಳು ಮೂಡಿಬಂದವು. ತನ್ನ ಶರೀರವು ನೂತನ ಕೆಂಪುವರ್ಣದ ರೆಕ್ಕೆಗಳಿಂದ ಯುಕ್ತವಾಗಿದೆ — ಎಂಬುದನ್ನು ಅವಲೋಕಿಸಿ ಸಂಪಾತಿಗೆ ಬಹಳ ಆನಂದವಾಯಿತು.

ಅಯಾಚಿತ.

**೩೯. ಇಂದ್ರ > ಹನುಮಾನ** **ಕಿಷ್ಕಿಂಧಾಕಾಂಡ / ೬೬**

ಬ್ರಹ್ಮದೇವ > ಹನುಮಾನ - ವರ ಕ್ರಮಾಂಕ ೧ ನೋಡಿ.

ಜಾಂಬವಂತನು ಹನುಮಂತನಿಗೆ ಆತನ ಜನ್ಮದ ವೃತ್ತಾಂತವನ್ನು ಹೇಳುತ್ತಿದ್ದಾನೆ. ತಾನು ಕೇಸರಿಯ ಕ್ಷೇತ್ರಜ ಹಾಗೂ ವಾಯುವಿನ ಹೊಟ್ಟೆಯ ಮಗನೆಂದು ಹೇಳುತ್ತಾನೆ.

> ವಜ್ರಸ್ಯ ಚ ನಿಪಾತೇನ ವಿರುಜಂ ತ್ವಾಂ ಸಮೀಕ್ಷ್ಯ ಚ ।
> ಸಹಸ್ರನೇತ್ರಃ ಪ್ರೀತಾತ್ಮಾ ದದೌ ತೇ ವರಮುತ್ತಮಮ್ ॥ ೨೮ ॥
> ಸ್ವಚ್ಛಂದತಶ್ಚ ಮರಣಂ ತವ ಸ್ಯಾದಿತಿ ವೈ ಪ್ರಭೋ ॥ ೨೯ ॥

ವಜ್ರಾಯುಧದ ಪೆಟ್ಟಿನಿಂದಲೂ ಹನುಮಂತನಿಗೆ ಯಾವ ಗಾಯವೂ ಆಗಲಿಲ್ಲ ಎಂಬುದನ್ನು ಕಂಡು ಇಂದ್ರನ ಮನಸ್ಸು ಪ್ರಸನ್ನಗೊಂಡಿತು.

ಇಂದ್ರನು "ನೀನು ಇಚ್ಛಾಮರಣನಾಗುವೆ" ಎಂಬ ಉತ್ಕೃಷ್ಟ ವರವನ್ನು ಹನುಮಾನನಿಗೆ ಕೊಟ್ಟನು.

**ಅಯಾಚಿತ.**

**೪೦. ಇಂದ್ರ > ಮೈನಾಕ** **ಸುಂದರಕಾಂಡ / ೧**

ಸಮುದ್ರವನ್ನು ಲಂಘಿಸಿ ಲಂಕೆಗೆ ಹೋಗುತ್ತಿರುವ ಹನುಮಾನನಿಗೆ ಸಹಾಯ ಮಾಡುವ ಇಚ್ಛೆಯಿಂದ ಸಾಗರನು, ತನ್ನ ಉದರದಲ್ಲಿ ಅಡಗಿದ ಮೈನಾಕ ಪರ್ವತಕ್ಕೆ ಮೇಲೆ ಎದ್ದು ಬರಲು ಹೇಳಿದನು. ಹನುಮಂತನಿಗಾಗಿ ಕೆಲವು ಸಮಯ ಮೈನಾಕ ಪರ್ವತದ ಮೇಲೆ ವಿಶ್ರಮಿಸುವ ವ್ಯವಸ್ಥೆಯನ್ನು ಮಾಡಲು ಅವನು ಮೈನಾಕ ಪರ್ವತಕ್ಕೆ ಅಪ್ಪಣೆಯಿತ್ತನು. ಆ ರೀತಿ ಮೈನಾಕ ಪರ್ವತವು ಸಮುದ್ರದ ನೀರಿನ ಮೇಲ್ಭಾಗಕ್ಕೆ ಬಂದಿತು. ಅದನ್ನು ಕಂಡ ಹನುಮಾನನು ತನ್ನ ಮಾರ್ಗದಲ್ಲಿ ವಿಘ್ನವುಂಟಾಯಿತೆಂದು ಭಾವಿಸಿ ಮೈನಾಕ ಪರ್ವತಕ್ಕೆ ತನ್ನ ಎದೆಯಿಂದ ಢಿಕ್ಕಿಹೊಡೆದನು ; ಆ ಪರ್ವತವನ್ನು ಸಮುದ್ರದಲ್ಲಿ ಉರುಳಿಸಿದನು. ಹನುಮಂತನ ಬಲವನ್ನು ಅನುಭವಿಸಿದ ಮೈನಾಕನು ಸೋಜಿಗಪಟ್ಟನಲ್ಲದೇ ಸಂತೋಷಗೊಂಡನು. ಮನುಷ್ಯರೂಪವನ್ನು ಧರಿಸಿ ಪುನಃ ಮೇಲೆ ಬಂದು ಹನುಮಂತನಿಗೆ ಈ ರೀತಿ ಎಂದನು : "ಹೇ ಕಪಿಶ್ರೇಷ್ಠನೇ, ನೀನು ದುಸ್ತರವಾದ ಕೆಲಸವನ್ನು ಮಾಡಿದೆ ; ಇನ್ನೂ ನಿನಗೆ ನೂರು ಯೋಜನಗಳಷ್ಟು ದೂರ ಕ್ರಮಿಸುವದಿದೆ. ನನ್ನ ಪರ್ವತದ ಶಿಖರದಲ್ಲಿ ನೀನು ವಿಶ್ರಮಿಸು ! ಶ್ರೀರಾಮನ ಹಿತವನ್ನು ಬಯಸುವ ಸಾಗರ ರಾಜನು ನಿನಗೆ ಈ ರೀತಿ ವಿನಂತಿಸಿದ್ದಾನೆ." ನಂತರ ಮೈನಾಕನು ಹನುಮಂತನನ್ನು ಸ್ತುತಿಸಿ ತನ್ನ ಪೂರ್ವದ ಸಂಬಂಧಗಳನ್ನು ವಿವರಿಸಿದನು : "ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವು. ಆಗ ಪರ್ವತಗಳು ಇಚ್ಛೆಬಂದಂತೆ ಸಂಚರಿಸ ಬಹುದಿತ್ತು. ಒಮ್ಮೆ ಈ ರೀತಿ ಸಂಚರಿಸುತ್ತಿದ್ದಾಗ, ಆ ಪರ್ವತಗಳು ತಮ್ಮ ಮೇಲೆ ಕುಸಿಯಬಹುದೆಂಬ ಸಂದೇಹವು ದೇವತೆಗಳಿಗೆ ಉಂಟಾಯಿತು. ಆಗ ಕೋಪಗೊಂಡ ಇಂದ್ರನು ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದನು. ಆ ಸಮಯದಲ್ಲಿ ಇಂದ್ರನು, ನನ್ನತ್ತ ಬರುವದನ್ನು ಕಂಡು ನಿನ್ನ ಪಿತನಾದ ವಾಯುವು ನನ್ನನ್ನು ಆಕಾಶದಲ್ಲಿ ಹಾರಿಸಿ ನನ್ನ ರಕ್ಷಣೆ ಮಾಡಿದನು ; ಆದ್ದರಿಂದ ನೀನು ನನಗೆ ಪೂಜ್ಯ ನಾಗಿರುವಿ !" ಹನುಮಂತನು ಮೈನಾಕನ ಮನೋಭಾವವನ್ನರಿತು ಆತನನ್ನು ಹಸ್ತಗಳಿಂದ ಸ್ಪರ್ಶಿಸಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದನು. ತಾನು ಸಮುದ್ರವನ್ನು ಲಂಘಿಸುವಾಗ ಎಲ್ಲಿಯೂ ವಿಶ್ರಮಿಸುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವದಾಗಿ ತಿಳಿಸಿ, ಪರ್ವತಶಿಖರದಲ್ಲಿ ಎಲ್ಲಿಯೂ ವಿಶ್ರಮಿಸಲು ನಿರಾಕರಿಸಿದನು.

ಶ್ರೀರಾಮನ ಸೇವೆಯ ಕಾರ್ಯದಲ್ಲಿ ಮೈನಾಕ ಪರ್ವತವು ಸಹಾಯ ಮಾಡಲು ಸಮುದ್ರದ ಮೇಲಕ್ಕೆ ಬಂದದ್ದನ್ನು ನೋಡಿ ಇಂದ್ರನು ಸಂತೋಷಪಟ್ಟನು. ಮೈನಾಕ ಪರ್ವತಕ್ಕೂ ಸಾರ್ಥಕವೆನಿಸಿತು. ಇಂದ್ರನು ಆ ಪರ್ವತಕ್ಕೆ ಈ ರೀತಿ ನುಡಿದನು :

> ಹಿರಣ್ಯನಾಭ ಶೈಲೇಂದ್ರ ಪರಿತುಷ್ಟೋಽಸ್ಮಿ ತೇ ಭೃಶಮ್ ।
> ಅಭಯಂ ತೇ ಪ್ರಯಚ್ಛಾಮಿ ಗಚ್ಛ ಸೌಮ್ಯ ಯಥಾಸುಖಮ್ ॥ ೧೩೯ ॥

"ಎಲೈ ಸುವರ್ಣಕಾಂತಿಯ ಪರ್ವತರಾಜನೇ, ನಾನು ನಿನ್ನ ಮೇಲೆ ಪರಮಸಂತುಷ್ಟನಾಗಿದ್ದೇನೆ. ನಾನು ನಿನಗೆ ಅಭಯವನ್ನು ಕೊಡುವೆ. ಹೇ ವಿನಯಸಂಪನ್ನನೇ, ನೀನು ನಿಶ್ಚಿಂತೆಯಿಂದ ಇರು !"

ಈ ವರವು ದೊರೆತನಂತರ ಮೈನಾಕ ಪರ್ವತವು ಮೊದಲಿನಂತೆ ನೀರಿನಲ್ಲಿ ಮುಳುಗಿತು.

ಸ ವೈ ದತ್ತವರಃ ಶೈಲೋ ಬಭೂವಾವಸ್ಥಿತಸ್ತದಾ । ೧೪೩

ಅಯಾಚಿತ.

## ೪೧. ಬ್ರಹ್ಮದೇವ > ಸುರಸಾ ಸುಂದರಕಾಂಡ / ೧

ಎಷ್ಟೇ ಸಂಕಷ್ಟಗಳು ಎದುರಾದರೂ ಅವುಗಳನ್ನು ನಿವಾರಿಸಿ, ಸೀತೆಯನ್ನು ಹಾಗೂ ಅವಳು ಸಿಕ್ಕದಿದ್ದರೆ ರಾವಣನನ್ನು ಹೆಡೆಮುರಿಗೆ ಕಟ್ಟಿ ಮರಳುವ ಪ್ರತಿಜ್ಞೆಯನ್ನು ಮಾಡುವ ಹನುಮಾನನ ಶಕ್ತಿಸಾಮರ್ಥ್ಯವನ್ನು ಪರೀಕ್ಷಿಸುವ ಉದ್ದೇಶದಿಂದ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ಸುರಸೆಯನ್ನು ಪ್ರಾರ್ಥಿಸುತ್ತಿದ್ದಾರೆ.

"ಈ ವಾಯುಪುತ್ರನು ಸಮುದ್ರವನ್ನು ದಾಟುತ್ತಿರುವಾಗ ಎಲೈ ಸುರಸೇ, ನೀನು ಪರ್ವತಪ್ರಾಯವಾದಂಥ ಭಯಂಕರ ರೂಪವನ್ನು ಧರಿಸು ! ಆಕಾಶವನ್ನೇ ಸ್ಪರ್ಶಿಸುವಷ್ಟು ವಿಶಾಲವಾಗಿ ಬಾಯ್ತೆರೆದು ನೀನು ಕ್ಷಣಕಾಲ ಆತನಿಗೆ ವಿಘ್ನವನ್ನುಂಟುಮಾಡು !" ಎಂದು ಮನವಿಮಾಡಿದರು. ಆಗ ಘೋರರೂಪವನ್ನು ತಾಳಿ ಸುರಸೆಯು ಹನುಮಂತನನ್ನು ಮಾರ್ಗದಲ್ಲಿ ತಡೆದು ಆತನಿಗೆ ಈ ರೀತಿ ಎಂದಳು :

ಮಮ ಭಕ್ಷ್ಯಃ ಪ್ರದಿಷ್ಟಸ್ತ್ವಮೀಶ್ವರೈರ್ವಾನರರ್ಷಭ ।
ಅಹಂ ತ್ವಾಂ ಭಕ್ಷಯಿಷ್ಯಾಮಿ ಪ್ರವಿಶೇದಂ ಮಮಾನನಮ್ ॥ ೧೫೦ ॥
ವರ ಏಷ ಪುರಾ ದತ್ತೋ ಮಮ ಧಾತ್ರೇತಿ ಸತ್ವರಾ ।
ವ್ಯಾದಾಯ ವಕ್ತ್ರಂ ವಿಪುಲಂ ಸ್ಥಿತಾ ಸಾ ಮಾರುತೇಃ ಪುರಃ ॥ ೧೫೧ ॥

"ಈಶ್ವರನು ವಾನರಶ್ರೇಷ್ಠನಾದ ನಿನ್ನನ್ನು ನನ್ನ ಆಹಾರವೆಂದು ಯೋಜಿಸಿದ್ದಾನೆ. ಅದಕ್ಕಾಗಿ ನಾನು ನಿನ್ನನ್ನು ಭಕ್ಷಿಸುವೆ. ಈ ನನ್ನ ವಿಶಾಲವಾದ ಬಾಯಿಯನ್ನು ಪ್ರವೇಶಿಸು ! ನನ್ನ ಎದುರಿನಲ್ಲಿ ಬಂದವನು ನನ್ನ ಬಾಯಿಯನ್ನು ಪ್ರವೇಶಿಸಲೇಬೇಕು — ಎಂಬ ವರವನ್ನು ಬ್ರಹ್ಮದೇವನಿಂದ ನಾನು ಪಡೆದಿದ್ದೇನೆ" ಎಂದು ಹೇಳಿ ಸುರಸೆಯು ತನ್ನ ಬಾಯಿಯನ್ನು ವಿಶಾಲಗೊಳಿಸಿದಳು. ಹನುಮಂತನು ಆಗ, ತಾನು ಕೈಕೊಂಡ ಕಾರ್ಯವು ಎಷ್ಟು ಮಹತ್ವದ್ದಾಗಿದೆ ಎಂಬುದನ್ನು ಶಾಂತಚಿತ್ತದಿಂದ ವಿವರಿಸಿದನು. ಶ್ರೀರಾಮನ ಕಾರ್ಯದಲ್ಲಿ ನೆರವಾಗಿ ತನ್ನ ಬಿಡುಗಡೆ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಈ ಬಿನ್ನಹವನ್ನು ಮನ್ನಿಸಲು ಸಾಧ್ಯವಿರದಿದ್ದರೆ ಸೀತೆ ಹಾಗೂ ಉದಾರಕಾರ್ಯನಿರತನಾದ ಶ್ರೀರಾಮನನ್ನು ಅವಲೋಕನಮಾಡಿ ಮರಳಿ ಬರುವೆನೆಂದು ಪ್ರತಿಜ್ಞೆಮಾಡಿ ಹೇಳಿದನು. ಇಷ್ಟೆಲ್ಲ ಹೇಳಿದರೂ ಬೇಕುಬೇಕಾದ ರೂಪವನ್ನು ಧರಿಸಬಲ್ಲ ಸುರಸೆಯು ಆತನಿಗೆ —

ಅಬ್ರವೀನ್ನಾತಿವರ್ತೇನ್ಮಾಂ ಕಶ್ಚಿದೇಷ ವರೋ ಮಮ ॥ ೧೫೬ ॥

"ನನ್ನನ್ನು ತಪ್ಪಿಸಿ ಯಾರೂ ಮುಂದೆ ಹೋಗುವಂತಿಲ್ಲ — ಎಂಬ ವರವು ನನಗೆ ದೊರೆತಿದೆ" ಎಂದು ಹೇಳುತ್ತಿದ್ದರೂ ಹನುಮಾನನು ಮುಂದೆ ಸಾಗಹತ್ತಿದನು. ಆಗ ಹನುಮಾನನ ಬಲದ ಪರೀಕ್ಷೆಯನ್ನು ಮಾಡಲು ಆಕೆಯು ಅವನಿಗೆ —

ನಿವಿಶ್ಯ ವದನಂ ಮೇಽದ್ಯ ಗಂತವ್ಯಂ ವಾನರೋತ್ತಮ ।
ವರ ಏಷ ಪುರಾ ದತ್ತೋ ಮಮ ಧಾತ್ರೇತಿ ಸತ್ವರಾ ॥ ೧೫೮ ॥

"ನನ್ನಿಂದ ಪಾರಾಗುವದು ಯಾರಿಗೂ ಸಾಧ್ಯವಾಗಬಾರದೆಂಬ ವರವನ್ನು ಪಡೆದಿದ್ದೇನೆ" ಎಂದು ನುಡಿದು ತನ್ನ ಬಾಯಿಯನ್ನು ಇನ್ನಷ್ಟು ವಿಶಾಲಗೊಳಿಸಿದಳು. ಆಗ ಹನುಮಂತನು ಹೀಗೆಂದನು : "ನೀನು ನನ್ನನ್ನು ಸಹಿಸಿಕೊಳ್ಳುವಷ್ಟು ವಿಶಾಲವಾಗಿ ನಿನ್ನ ಬಾಯಿಯನ್ನು ತೆರೆ."

ಆಗ ಸುರಸೆಯು ಇನ್ನಷ್ಟು ಹೆಚ್ಚಾಗಿ ತನ್ನ ಬಾಯಿಯನ್ನು ತೆರೆದಳು. ಆಗ ಹನುಮಂತನು ತನ್ನ ಆಕಾರವನ್ನು ಕಿರಿದಾಗಿ ಮಾಡಿ ಕೈಯ ಹೆಬ್ಬೆರಳಿನಷ್ಟು ಗಾತ್ರದವನಾಗಿ ಆಕೆಯ ಬಾಯಿಯನ್ನು ಪ್ರವೇಶಿಸಿ, ತತ್‌ಕ್ಷಣ ಹೊರಗೆ ಬಂದುಬಿಟ್ಟನು. ಅನಂತರ ಅಂತರಿಕ್ಷದಲ್ಲಿ ಸ್ಥಿರವಾಗಿ ಉಳಿದು ಅವಳಿಗೆ ಈ ರೀತಿ ಎಂದನು —

ಪ್ರವಿಷ್ಟೋಽಸ್ಮಿ ಹಿ ತೇ ವಕ್ತ್ರಂ ದಾಕ್ಷಾಯಣಿ ನಮೋಽಸ್ತು ತೇ ।
ಗಮಿಷ್ಯೇ ಯತ್ರ ವೈದೇಹೀ ಸತ್ಯಶ್ಚಾಸೀದ್ ವರಸ್ತವ ॥ ೧೬೮ ॥

"ಹೇ ದಾಕ್ಷಾಯಣೀ, ನಮೋನಮಃ. ನಿನ್ನ ಹೇಳಿಕೆಯಂತೆ ನಾನು ನಿನ್ನ ಬಾಯಿಯನ್ನು ಪ್ರವೇಶಿಸಿದ್ದೆನು. ಈಗ ವಿದೇಹರಾಜನ ಕನ್ಯೆಯು ಎಲ್ಲಿರುವಳೋ ಅಲ್ಲಿಗೆ ಹೋಗುವೆ. ನಿನಗೆ ದೊರೆತ ವರವು ನಿಜವಾದಂತೆ ಆಯಿತು."

ಸುರಸೆಯು ತನ್ನ ಪೂರ್ವರೂಪವನ್ನು ತಾಳಿ ಈ ರೀತಿ ಎಂದಳು : "ನೀನು ಈಗ ನಿನ್ನ ಕಾರ್ಯಕ್ಕೆ ನಿರಾತಂಕವಾಗಿ ಹೊರಡು ! ಮಹಾತ್ಮನೆನಿಸಿದ ರಘುಕುಲದ ಶ್ರೀರಾಮನೊಡನೆ ಸೀತೆಯ ಭೇಟಿಯನ್ನು ಮಾಡಿಸು !"

ವಾನರರಿಗೆ, ಹನುಮಂತನು ತನ್ನ ಲಂಕಾಪ್ರಯಾಣದ ವೃತ್ತಾಂತವನ್ನು ಹೇಳುತ್ತಿದ್ದಾಗ ಸುರಸೆಯ ವರದ ಉಲ್ಲೇಖವನ್ನು ಮಾಡುತ್ತಾನೆ. "ಕಾರ್ಯಪೂರ್ತಿಯನಂತರ ಸುರಸೆಯ ಹೇಳಿಕೆಯಂತೆ ಅವಳ ಬಾಯಿಯನ್ನು ಪ್ರವೇಶಿಸುವೆ ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿದರೂ ಅವಳು ನನ್ನ ವಿನಂತಿಯನ್ನು ಮನ್ನಿಸಲಿಲ್ಲ."

"ಈ ರೀತಿ ದೊರೆತ ವರವನ್ನು ವಿಫಲಗೊಳಿಸುವ ಸಾಮರ್ಥ್ಯವು ಯಾರಿಗೂ ಇಲ್ಲ."

ಸುರಸೆಗೆ ವರವು ಏಕೆ ? ಮತ್ತು ಯಾವ ರೀತಿ ದೊರಕಿತು ? ಎಂಬುದರ ಸ್ಪಷ್ಟ ಉಲ್ಲೇಖವಿಲ್ಲ. ಹೀಗಿರುವದರಿಂದ ಇದು ಯಾಚಿತ ವರವೋ ಅಯಾಚಿತ ವರವೋ ಎಂದು ನಿಶ್ಚಿತವಾಗಿ ತಿಳಿದುಬರುವಂತಿಲ್ಲ.

ಅನಿಶ್ಚಿತ.

## ೪೨. ಬ್ರಹ್ಮದೇವ > ಲಂಕಾದೇವಿ — ಉತ್ತರಕಾಂಡ / ೩

ಲಂಕಾದೇವಿಯು ಹನುಮಾನನಿಗೆ ತನ್ನ ಕಥೆಯನ್ನು ತಿಳಿಸುತ್ತಾಳೆ.

ಲಂಕಾದೇವಿಯು ಲಂಕೆಯನ್ನು ಪ್ರವೇಶಿಸುತ್ತಿದ್ದ ಹನುಮಾನನನ್ನು ವಿರೋಧಿಸಿದಳು. ಹನುಮಂತನು ತನ್ನ ಉದ್ದೇಶವನ್ನು ತಿಳಿಸಿದ್ದರೂ ಆಕೆಯು ಬಲು ದರ್ಪದಿಂದ ಹನುಮಾನನೊಡನೆ ಮಾತನಾಡುತ್ತಿದ್ದಳು. ಅವಳು ಹನುಮಾನನಿಗೆ ಒಂದು ಬಲವಾದ ಏಟನ್ನು ಕೊಟ್ಟಳು. ಆಗ ಹನುಮಾನನು ಅವಳು ಓರ್ವ ಸ್ತ್ರೀಯಾದ್ದರಿಂದ ಅವಳಿಗೆ ಬಲವಾಗಿ ಹೊಡೆಯದೇ ತನ್ನ ಶಕ್ತಿಯನ್ನು ಅವಳಿಗೆ ಮನವರಿಕೆ ಮಾಡಿಕೊಡುವಷ್ಟು ಒಂದು ಸೌಮ್ಯವಾದ ಏಟನ್ನು ಕೊಟ್ಟನು. ಅಷ್ಟೇ ಪೆಟ್ಟಿನಿಂದ ಅವಳು ಭೂಮಿಗೆ ಕುಸಿದಳು. ಅವಳಿಗಿದ್ದ ಕೊಬ್ಬು ಒಮ್ಮೆಲೇ ಇಳಿಯಿತು. ಬಿಕ್ಕಿಬಿಕ್ಕಿ ಅಳುತ್ತ ಅವಳು ಹನುಮಾನನಿಗೆ ಈ ರೀತಿ ನುಡಿದಳು : "ಹೇ ವಾನರಶ್ರೇಷ್ಠನೇ, ನೀನು ಪ್ರಸನ್ನನಾಗಿ ನನ್ನನ್ನು ಕಾಪಾಡು ! ಸತ್ವಶೀಲರಾದ, ಪರಾಕ್ರಮವುಳ್ಳ ಪುರುಷರು ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ವರ್ತಿಸುತ್ತಾರೆ. ಆ ರೀತಿ ನೀನು ನನ್ನನ್ನು ಕ್ಷಮಿಸು !"

ಅಹಂ ತು ನಗರೀ ಲಂಕಾ ಸ್ವಯಮೇವ ಪ್ಲವಂಗಮ ।
ನಿರ್ಜಿತಾಹಂ ತ್ವಯಾ ವೀರ ವಿಕ್ರಮೇಣ ಮಹಾಬಲ ॥ ೪೫ ॥
ಇದಂ ಚ ತಥ್ಯಂ ಶೃಣು ಮೇ ಬ್ರುವಂತ್ಯಾ ವೈ ಹರೀಶ್ವರ ।
ಸ್ವಯಂ ಸ್ವಯಂಭುವಾ ದತ್ತಂ ವರದಾನಂ ಯಥಾ ಮಮ ॥ ೪೬ ॥
ಯದಾ ತ್ವಾಂ ವಾನರಃ ಕಶ್ಚಿದ್ವಿಕ್ರಮಾದ್ವಶಮಾನಯೇತ್ ।
ತದಾ ತ್ವಯಾ ಹಿ ವಿಜ್ಞೇಯಂ ರಕ್ಷಸಾಂ ಭಯಮಾಗತಮ್ ॥ ೪೭ ॥
ಸ ಹಿ ಮೇ ಸಮಯಃ ಸೌಮ್ಯ ಪ್ರಾಪ್ತೋಽದ್ಯ ತವ ದರ್ಶನಾತ್ ॥ ೪೮ ॥

"ಹೇ ಮಹಾಬಲಾಢ್ಯ ವೀರನೇ, ನಾನು ಸ್ವತಃ ಲಂಕೆಯಾಗಿದ್ದೇನೆ. ನೀನು ನನ್ನನ್ನು ಸೋಲಿಸಿರುವೆ. ಹೇ ವಾನರಾಧಿಪನೇ, ನಿನಗೆ ಒಂದು ಗುಟ್ಟನ್ನು ಹೇಳುವೆ. 'ಪರಾಕ್ರಮವುಳ್ಳ ಒಬ್ಬ ವಾನರನು ನನ್ನನ್ನು ಎಂದಿಗೆ ಸೋಲಿಸುವನೋ ಅಂದೇ ರಾಕ್ಷಸಕುಲಕ್ಕೆ ಅಳಿಗಾಲದ ಭಯವು ಒದಗಿದೆ' ಎಂದು ತಿಳಿಯಬೇಕೆಂದು

ಬ್ರಹ್ಮದೇವನು ನನಗೆ ವರವನ್ನು ಕೊಟ್ಟಿದ್ದನು. ಬ್ರಹ್ಮದೇವನು ಮುನ್ಸೂಚಿಸಿದ ಆ ಸಮಯವು ನಿನ್ನ ದರ್ಶನದಿಂದ ಇಂದು ಪ್ರಾಪ್ತವಾಗಿದೆ." ಹೀಗೆಂದು ಅವಳು ಹನುಮಾನನಿಗೆ ಲಂಕಾನಗರವನ್ನು ಪ್ರವೇಶಿಸಲು ದಾರಿಮಾಡಿಕೊಟ್ಟಳು. ತನ್ನ ಇಷ್ಟದಂತೆ ಕಾರ್ಯಗಳನ್ನು ಪೂರ್ಕೈಸಿಕೊಳ್ಳಲು ಸಮ್ಮತಿಸಿದಳು.

ಈ ವರವು ಯಾಚಿತವೋ ಅಯಾಚಿತವೋ ಎಂದು ನಿರ್ಧಾರದಿಂದ ಹೇಳಲು ಬರುವಂತಿಲ್ಲ.

ಈ ವರದ ಕಾರಣಗಳು ಸಹ ಸ್ಪಷ್ಟವಾಗಿಲ್ಲ.

ಅನಿಶ್ಚಿತ.

**೪೩. ಬ್ರಹ್ಮದೇವ > ಹನುಮಾನ** **ಸುಂದರಕಾಂಡ / ೪೮**

ಹನುಮಾನನು ಉದ್ಯಾನಗಳನ್ನು, ರಾಕ್ಷಸರನ್ನು ಮತ್ತು ಆಕರ್ಷಕ ಪ್ರಾಸಾದಗಳನ್ನು ಧ್ವಂಸಗೊಳಿಸಿದನು. ಮಂತ್ರಿಗಳ ಪುತ್ರರಾದ ಜಂಬೂಮಾಲಿ, ವಿರೂಪಾಕ್ಷ, ಅಕ್ಷ ಮುಂತಾದವರನ್ನು ಯಮಸದನಕ್ಕೆ ಅಟ್ಟಿದ್ದಾನೆ ಎಂಬುದನ್ನು ತಿಳಿದು ಕ್ರೋಧಗೊಂಡ ರಾವಣನು ಹನುಮಾನನನ್ನು ನಿಯಂತ್ರಿಸಲು ಇಂದ್ರಜಿತುವಿಗೆ ಆಜ್ಞಾಪಿಸಿದನು. ಇಂದ್ರಜಿತು ಹಾಗೂ ಹನುಮಾನ ಇವರು ಸಮಬಲರಾಗಿದ್ದರು. ಪರಸ್ಪರರ ಬಲದ ಅರಿವು ಅವರಿಬ್ಬರಿಗೂ ಇತ್ತು.

ಅವರಿಬ್ಬರಲ್ಲಿ ನಡೆದ ಯುದ್ಧವು ಎಲ್ಲರೂ ಬೆರಗಾಗುವಂತೆ ನಡೆಯಿತು. ವಾನರನನ್ನು ಸೋಲಿಸಲಾಗುವದಿಲ್ಲವೆಂದು ಇಂದ್ರಜಿತುವು ಧರ್ಮಬಲದಿಂದ ತಿಳಿದುಕೊಂಡಿದ್ದನು. ಇಂದ್ರಜಿತುವಿನ ಅಸ್ತ್ರಜ್ಞಾನವು ಉತ್ತಮವಿತ್ತು. ಆತನು ಹನುಮಾನನ ಮೇಲೆ ಬ್ರಹ್ಮಾಸ್ತ್ರವನ್ನು ಬಿಟ್ಟನು. ಬ್ರಹ್ಮಾಸ್ತ್ರಕ್ಕೂ ಹನುಮಾನನು ಮಣಿಯುತ್ತಿಲ್ಲವೆಂದು ತಿಳಿದ ಇಂದ್ರಜಿತುವು ಹನುಮಾನನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದನು. ಆಗ ಹನುಮಾನನು ಭೂಮಿಯ ಮೇಲೆ ನಿಶ್ಚೇಷ್ಟನಾಗಿ ಬಿದ್ದನು. ಪ್ರಭುವಿನ ಕೃಪೆಯಿಂದ ಈ ಅಸ್ತ್ರದಿಂದ ಹನುಮಾನನಿಗೆ ಯಾವ ಅಪಾಯವೂ, ಯಾತನೆಯೂ ಆಗಲಿಲ. ಏಕೆಂದರೆ —

> ತತಃ ಸ್ವಾಯಂಭುವೈರ್ಮಂತ್ರೈರ್ಬ್ರಹ್ಮಾಸ್ತ್ರಂ ಚಾಭಿಮಂತ್ರಿತಮ್ ।
> ಹನುಮಾಂಶ್ಚಿಂತಯಾಮಾಸ ವರದಾನಂ ಪಿತಾಮಹಾತ್ ॥ ೪೦ ॥

ಬ್ರಹ್ಮವಿಷಯಕ ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ ಬ್ರಹ್ಮಾಸ್ತ್ರದ ಬಂಧನದಲ್ಲಿ ತಾನು ಸಿಲುಕಿದ ವಿಷಯವನ್ನು ತಿಳಿದ ಹನುಮಾನನು "ನನ್ನ ಅಸ್ತ್ರದಿಂದ ನೀನು ಒಂದು ಕ್ಷಣದಲ್ಲಿ ಮುಕ್ತನಾಗುವೆ !" ಎಂದು ಬ್ರಹ್ಮದೇವನು ಕೊಟ್ಟ ವರದ ಸ್ಮರಣೆಯನ್ನು ಮಾಡಿದನು.

ಬ್ರಹ್ಮದೇವನ ಅನುಗ್ರಹವನ್ನು ಮತ್ತು ಅಸ್ತ್ರಬಂಧನದಿಂದ ಮುಕ್ತನಾಗಲು ಬೇಕಾಗಿದ್ದ ತನ್ನ ಸಾಮರ್ಥ್ಯವನ್ನು ಕ್ಷಣಕಾಲ ಮನದಲ್ಲಿ ಆಲೋಚಿಸಿ, ಬ್ರಹ್ಮದೇವನ ಆಜ್ಞೆಯನ್ನು ಅವಲಂಬಿಸಿದನು. ಮನದಲ್ಲಿ ನಿಶ್ಚಯಿಸಿದ ಹನುಮಾನನು ಚೇತನ ಇಲ್ಲದಂತೆ ಬಿದ್ದುಕೊಂಡನು. ಆಗ ರಾಕ್ಷಸರು ಮರದ ತೊಗಟೆಗಳಿಂದ, ಸೆಣಬಿನ ಹಗ್ಗಗಳಿಂದ ಆತನನ್ನು ಕಟ್ಟಿಹಾಕಿದರು. ರಾವಣನೊಡನೆ ಮಾತನಾಡುವ ಇಚ್ಛೆಯು ಹನುಮಾನನಿಗೆ ಇತ್ತು ; ಆದ್ದರಿಂದ ರಾಕ್ಷಸರಿಂದ ನಡೆದ ಅಪಹಾಸ್ಯ, ಅವಮಾನಗಳನ್ನು ಆತನು ಸುಮ್ಮನಿದ್ದು ಸಹಿಸಿದನು.

> ಸ ಬದ್ಧಸ್ತೇನ ವಲ್ಕೇನ ವಿಮುಕ್ತೋಽಸ್ತ್ರೇಣ ವೀರ್ಯವಾನ್ ।
> ಅಸ್ತ್ರಬಂಧಃ ಸ ಚಾನ್ಯಂ ಹಿ ನ ಬಂಧಮನುವರ್ತತೇ ॥ ೪೮ ॥

ಆ ವೀರ ಹನುಮಾನನನ್ನು ಮರಗಳ ತೊಗಟೆಗಳಿಂದ ಕಟ್ಟಿಹಾಕಿದ್ದರಿಂದ, ಅಸ್ತ್ರಗಳ ಬಂಧನಪ್ರಭಾವವು ಇಲ್ಲದಾಯಿತು. ಇದಕ್ಕೆ ಕಾರಣವೆಂದರೆ, ಎರಡನೆಯ ಬಂಧನವು ಪ್ರಾಪ್ತವಾದಾಗ ಮೊದಲನೆಯ ಅಸ್ತ್ರದ ಬಂಧನವು ಇಲ್ಲವಾಗುತ್ತದೆ.

ಈ ಸಂಗತಿಯು ಇಂದ್ರಜಿತುವಿನ ಗಮನಕ್ಕೆ ಬಂದಿತು. ಆತನಿಗೆ ಚಿಂತೆಯುಂಟಾಯಿತು. ಆತನ ಅಸ್ತ್ರಪ್ರಭಾವವನ್ನು ಬಳಸುವಂತಿರುವದಿಲ್ಲ. ಇಂದ್ರಜಿತುವಿಗೆ ಈ ಸಂಗತಿಯು ಗೊತ್ತಿತ್ತು. ಹೀಗಾಗಿ ಜಯದ ಬಗ್ಗೆ ಆತನಲ್ಲಿ ಸಂದೇಹವು ಮೂಡಿತು.

ರಾವಣನನ್ನು ಕಾಣುವ ಔತ್ಸುಕ್ಯವಿದ್ದ ಹನುಮಾನನು ಅಸ್ತ್ರಬಂಧನದಿಂದ ಮುಕ್ತನಾಗಿದ್ದರೂ ರಾಕ್ಷಸರಿಗೆ ಅದನ್ನು ತೋರಗೊಡಲಿಲ್ಲ. ರಾಕ್ಷಸರು ಅವನನ್ನು ಎಳೆದು ರಾವಣನ ಸಭೆಗೆ ತಂದರು.

**ಸುಂದರಕಾಂಡ / ೫೦**

ರಾಕ್ಷಸರು ಹನುಮಂತನನ್ನು ರಾವಣನ ಸಭಾಗೃಹಕ್ಕೆ ತಂದಾಗ ರಾವಣನು ಆತನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದನು. "ನಿಜ ಹೇಳಿದರೆ ನಿನ್ನನ್ನು ಬಿಟ್ಟುಬಿಡುವೆ ; ಸುಳ್ಳನ್ನು ಆಡಿದರೆ ನೀನು ಬದುಕಿರುವದು ಕಷ್ಟ" ಎಂಬ ಬೆದರಿಕೆಯನ್ನು ಹಾಕಿದನು. ಆಗ ಹನುಮಂತನು ಯಾವ ಭಯವೂ ಇಲ್ಲದೆ ಈ ರೀತಿ ನುಡಿದನು : "ನಾನು ಇಂದ್ರನ, ಯಮನ ಅಥವಾ ವರುಣ ಇವರ ರೂಪತಾಳಿ ಬಂದಿರುವದಿಲ್ಲ. ಕುಬೇರನು ನನ್ನ ಸ್ನೇಹಿತನಲ್ಲ ; ವಿಷ್ಣುವು ನನ್ನನ್ನು ಇಲ್ಲಿಗೆ ಕಳುಹಿಸಿಲ್ಲ. ನಾನು ಜಾತಿಯಿಂದ ವಾನರನೇ ಇರುವೆ. ವಾನರನಾಗಿಯೇ ರಾಕ್ಷಸರ ರಾಜನನ್ನು ಕಾಣಲೆಂದು ಬಂದಿರುವೆನು. ಈ ದುರ್ಲಭದರ್ಶನವಾಗಬೇಕೆಂದು ನಾನು ಉದ್ಯಾನವನಗಳನ್ನು ಧ್ವಂಸಗೊಳಿಸಿದೆನು. ಆಗ ಬಲಾಢ್ಯರಾದ ರಾಕ್ಷಸರು ನನ್ನ ಮೈಮೇಲೆ ಧಾವಿಸಿಬಂದರು.

> ರಕ್ಷಣಾರ್ಥಂ ಚ ದೇಹಸ್ಯ ಪ್ರತಿಯುದ್ಧಾ ಮಯಾ ರಣೇ ।
> ಅಸ್ತ್ರಪಾಶೈರ್ನ ಶಕ್ಯೋಽಹಂ ಬದ್ಧುಂ ದೇವಾಸುರೈರಪಿ ॥ ೧೭ ॥
> ಪಿತಾಮಹಾದೇಷ ವರೋ ಮಮಾಪಿ ಹಿ ಸಮಾಗತಃ ।
> ರಾಜಾನಂ ದ್ರಷ್ಟುಕಾಮೇನ ಮಯಾಸ್ತ್ರಮನುವರ್ತಿತಮ್ ॥ ೧೭ ॥

"ನನ್ನ ದೇಹದ ರಕ್ಷಣೆಗಾಗಿ ನಾನು ಸಂಗ್ರಾಮದಲ್ಲಿ ಅವರೊಡನೆ ಕಾದಾಡಬೇಕಾಯಿತು. ದೇವ, ಅಸುರ ಇವರು ಯಾರೂ ನನ್ನನ್ನು ಅಸ್ತ್ರಪಾಶಗಳಿಂದ ಬಂಧಿಸಲಾರರು. ಅಂತಹ ವರವನ್ನು ನಾನು ಬ್ರಹ್ಮದೇವನಿಂದ ಪಡೆದಿದ್ದೇನೆ. ರಾಕ್ಷಸರಾಜನ ದರ್ಶನವಾಗಬೇಕೆಂದು ನಾನು ಈ ಅಸ್ತ್ರಕ್ಕೆ ಮರ್ಯಾದೆಯನ್ನು ಕೊಟ್ಟಿರುವೆನು."

> ಯದಿ ಶಕ್ರಜಿತೋಽಸ್ತ್ರಾಣಿ ದುರ್ನಿರೀಕ್ಷ್ಯಾಣಿ ಸಂಯುಗೇ ।
> ನಾನ್ಯಹಂ ನಿಹನಿಷ್ಯಾಮಿ ವಿಧಮಿಷ್ಯಮಿ ರಾಕ್ಷಸಾನ್ ॥ ೧೦ ॥

"ಇಂದ್ರಜಿತನ ಅಸ್ತ್ರಗಳನ್ನು ಕಣ್ಣಿಂದ ಕಾಣಲಾಗದಿದ್ದರೂ, ಅದೇ ಬಗೆಯಾಗಿ ಶತ್ರುಗಳು ನಾಶಪಡಿಸಲಾಗುತ್ತಿದ್ದರೂ ನಾನು ಅವುಗಳನ್ನು ನಿವಾರಿಸಬಲ್ಲೆ. ರಾಕ್ಷಸರನ್ನು ಸಂಹರಿಸುವ ಕೆಲಸದಲ್ಲಿ ಈ ವರದಿಂದಾಗಿ ನನಗೆ ನೆರವು ದೊರೆತೀತು."

ಈ ವರವು ಯಾಚಿತವೋ ಅಯಾಚಿತವೋ ಎಂಬು ಬಗ್ಗೆ ಸ್ಪಷ್ಟ ಕಲ್ಪನೆ ಬರುವದಿಲ್ಲ.

ಅನಿಶ್ಚಿತ.

**೪೪. ಬ್ರಹ್ಮದೇವ > (ಮೈಂದ, ದ್ವಿವಿದ) (ಅಶ್ವಿನೀಕುಮಾರಪುತ್ರರು)  ಸುಂದರಕಾಂಡ / ೬೦**

ಲಂಕೆಯಿಂದ ಮರಳಿ ಬಂದನಂತರ ಹನುಮಂತನು ಅಂಗದಸಮೇತರಾದ ಬೇರೆಲ್ಲ ವಾನರರಿಗೆ ತನ್ನ ವೃತ್ತಾಂತವನ್ನು ಹೇಳಿದನು. ಅನಂತರ ಯಾವ ಕಾರ್ಯವನ್ನು ಕೈಗೊಳ್ಳಬೇಕು ? ಎಂಬ ಬಗ್ಗೆ ವಿಚಾರವಿನಿಮಯ ನಡೆದಾಗ ಅಂಗದನು ಈ ರೀತಿ ಎಂದನು —

> ಅಶ್ವಿಪುತ್ರೌ ಮಹಾವೇಗೌ ಬಲವಂತೌ ಪ್ಲವಂಗಮೌ ॥ ೧ ॥
> ಪಿತಾಮಹವರೋತ್ಸೇಕಾತ್ಪರಮಂ ದರ್ಪಮಾಸ್ಥಿತೌ ।
> ಅಶ್ವಿನೋರ್ಮಾನನಾರ್ಥಂ ಹಿ ಸರ್ವಲೋಕಪಿತಾಮಹಃ ॥ ೨ ॥
> ಸರ್ವಾವಧ್ಯತ್ವಮತುಲಮನಯೋರ್ದತ್ತವಾನ್ಪುರಾ ।
> ವರೋತ್ಸೇಕೇನ ಮತ್ತೌ ಚ ಪ್ರಮಥ್ಯ ಮಹತೀಂ ಚಮೂಮ್ ॥ ೩ ॥

"ಶೀಘ್ರಗತಿಯವರಾಗಿದ್ದ ಈ ಅಶ್ವಿನೀಕುಮಾರಪುತ್ರರಾದ ಮೈಂದ, ದ್ವಿವಿದರು ಮಹಾವೀರರಾದ ವಾನರರಾಗಿದ್ದಾರೆ. ಬ್ರಹ್ಮದೇವನ ವರದಿಂದ ಅವರು ತುಂಬ ಗರ್ವಿಷ್ಠರಾಗಿದ್ದಾರೆ. ಅಶ್ವಿನೀಕುಮಾರರನ್ನು ಸನ್ಮಾನಿಸಲು, ಸರ್ವಲೋಕಾಧಿಪತಿಯಾದ ಬ್ರಹ್ಮದೇವನು ಇವರಿಗೆ ಈ ಮೊದಲು 'ನಿಮಗೆ ಯಾರಿಂದಲೂ

ಪೀಡೆಯಾಗಲಾರದು' ಎಂಬ ಉತ್ತಮ ವರವನ್ನು ಕೊಟ್ಟಿರುವನು. ಆ ವರದಿಂದ ಮದವೇರಿ, ಪ್ರಚಂಡ ಸೇನೆಯನ್ನು ಪರಾಭವಗೊಳಿಸಿ ಈ ಮಹಾಬಲಾಢ್ಯ ವಾನರವೀರರು ದೇವತೆಗಳ ಬಳಿಯ ಅಮೃತವನ್ನು ಪ್ರಾಶಿಸಿದ್ದಾರೆ."

ಹೀಗಿರುವದರಿಂದ ಮಿಕ್ಕೆಲ್ಲ ವಾನರರು ಬರಿಗೆ ಉಳಿದುಕೊಂಡರೂ "ಇವರಿಬ್ಬರೇ ಲಂಕೆಯಲ್ಲಿಯ ಅಶ್ವ, ಗಜ, ರಥಸಮೇತ ಪೂರ್ಣಲಂಕೆಯನ್ನೇ ನಾಶಗೊಳಿಸಲು ಸಮರ್ಥರಾಗಿದ್ದಾರೆ. ಹೀಗಿರುವದರಿಂದ ಕಿಷ್ಕಿಂಧೆಗೆ ಮರಳುವದು ಬೇಡ ; ಎಲ್ಲರೂ ಲಂಕೆಗೆ ಹೋಗಿ ರಾಕ್ಷಸರನ್ನು ನಾಶಗೊಳಿಸೋಣ ; ಸೀತೆಯನ್ನು ಜೊತೆಗೆ ಕರೆದುಕೊಂಡು ಶ್ರೀರಾಮನತ್ತ ಮರಳಿ ಹೋಗೋಣ !" ಎಂದು ಅಂಗದನು ಸೂಚಿಸಿದನು.

ವರವನ್ನಿತ್ತುದೇಕೆಂಬ ಮಾತು ನಿಖರವಾಗಿಲ್ಲ. ಇದೊಂದು ಉಲ್ಲೇಖ ಮಾತ್ರ. ಈ ವರವು ಯಾಚಿತವೋ ಅಯಾಚಿತವೋ ಎಂಬುದನ್ನು ನಿಶ್ಚಿತವಾಗಿ ಹೇಳಲಾಗುವದಿಲ್ಲ.

ಅನಿಶ್ಚಿತ.

### ೪೫. ದೇವತೆಗಳು > ಮಧುವನ ಸುಂದರಕಾಂಡ / ೬೩

ಸುಗ್ರೀವ ತುಂಬ ಇಷ್ಟಪಡುವ ಹೂದೋಟವೆಂದರೆ ಮಧುವನ. ಅವನ ಅಪ್ಪಣೆಯಿಲ್ಲದೆ ಯಾರೂ ಅಲ್ಲಿ ಕಾಲಿಕ್ಕುವಂತಿರಲಿಲ್ಲ. ಅಂಗದ, ಹನುಮಂತ ಮೊದಲಾದ ವಾನರರು ಆ ಹೂದೋಟವನ್ನು ಹಾಳು ಗೆಡಹಿದರು. ದಧಿಮುಖನು ಈ ವಾರ್ತೆಯನ್ನು ಸುಗ್ರೀವನಿಗೆ ಹೇಳಿದನು. ಆಗ ಅವನು ಸೀತೆಯನ್ನು ಕಂಡು ಹಿಡಿದ ವಿಜಯೋತ್ಸಾಹದಲ್ಲಿ ವಾನರರು ಈ ರೀತಿ ತುಳಿದಾಡಿರಬಹುದೆಂದುಕೊಂಡನು.

ನ ಚಾಪ್ಯದೃಷ್ಟ್ವಾ ವೈದೇಹೀಂ ವಿಶ್ರುತಾಃ ಪುರುಷರ್ಷಭ ।
ವನಂ ದತ್ತವರಂ ದಿವ್ಯಂ ಧರ್ಷಯೇಯುರ್ವನೌಕಸಃ ॥ ೨೭ ॥

ಸೀತೆಯ ದರ್ಶನವಾಗದೇ ಹೋಗಿದ್ದರೆ ದೇವತೆಗಳು ಪೂರ್ವಜನಿಗೆ ವರದಾನವೆಂದು ಇತ್ತ ಈ ಹೂದೋಟ ವಾನರರಿಂದ ಹಾಳಾಗುತ್ತಿರಲಿಲ್ಲ.

### ೪೬. ? > ಕಾಲಕೇಯ (ದಾನವ) ಯುದ್ಧಕಾಂಡ / ೭

ಶ್ರೀರಾಮನು ಲಂಕೆಯತ್ತ ಸಾಗಿಬರುತ್ತಿರುವದನ್ನು ಅರಿತ ರಾವಣನು ಮಹಾಬಲಾಢ್ಯರಾದ ತನ್ನ ರಾಕ್ಷಸರನ್ನು ಒಟ್ಟಿಗೆ ಕರೆಯಿಸಿ ಅವರೊಡನೆ ವಿಚಾರವಿನಿಮಯ ಮಾಡಿದನು. ಆಗ ಅವರೆಲ್ಲರೂ ರಾವಣನ ಪೂರ್ವ ಪರಾಕ್ರಮವನ್ನು ಹೊಗಳುತ್ತ "ನಿನಗೆ ಜಯವು ನಿಶ್ಚಿತವಿದೆ. ಚಿಂತೆಗೆ ಯಾವ ಕಾರಣವೂ ಇಲ್ಲ ! ಪೂರ್ವದಲ್ಲಿ ಪಾತಾಳದ ಭೋಗವತಿ ಪಟ್ಟಣದಲ್ಲಿಯ ಭುಜಂಗಗಳ, ಕುಬೇರನ, ವಾಸುಕಿಯ, ತಕ್ಷಕ ಮುಂತಾದ ಅನೇಕರ ಪರಾಭವವನ್ನು ಮಾಡಿರುವೆ. ಇಷ್ಟೇ ಅಲ್ಲದೆ—

ಅಕ್ಷಯಾ ಬಲವಂತಶ್ಚ ಶೂರಾ ಲಬ್ಧವರಾಃ ಪುನಃ ।
ತ್ವಯಾ ಸಂವತ್ಸರಂ ಯುದ್ಧ್ವಾ ಸಮರೇ ದಾನವಾ ವಿಭೋ ॥ ೧೦ ॥

"ಕ್ಷೀಣಿಸದ, ಬಲಾಢ್ಯರಾದ, ಶೂರ ಹಾಗೂ ವರವನ್ನು ಪಡೆದಂಥ ಕಾಲಕೇಯ ದಾನವರೊಡನೆ ರಣರಂಗದಲ್ಲಿ ಒಂದು ಸಂವತ್ಸರದವರೆಗೆ ಯುದ್ಧಮಾಡಿ ನಿನ್ನ ಸ್ವಂತ ಬಲದಿಂದ ಅವರನ್ನು ಪಾದಾಕ್ರಾಂತಗೊಳಿಸಿರುವೆ."

ಕಾಲಕೇಯನಿಗೆ ಯಾರು, ಯಾವ ಕಾರಣದಿಂದ, ಯಾವ ವರವನ್ನು ಯಾವಾಗ ಕೊಟ್ಟರೆಂಬುದು ಸ್ಪಷ್ಟವಿಲ್ಲ. ಕೇವಲ ವರ ದೊರೆತ ಉಲ್ಲೇಖ ಮಾತ್ರ ಬಂದಿದೆ.

ಅನಿಶ್ಚಿತ.

### ೪೭. ? > ಮೇಘನಾದ ಯುದ್ಧಕಾಂಡ / ೭

ಲಂಕೆಯತ್ತ ಶ್ರೀರಾಮನು ಸಾಗಿಬರುತ್ತಿರುವದನ್ನು ಅರಿತ ರಾವಣನು ತನ್ನ ಮಹಾಬಲಾಢ್ಯ ರಾಕ್ಷಸರನ್ನು

ಒಟ್ಟಿಗೆ ಕರೆಯಿಸಿ ಅವರೊಡನೆ ವಿಚಾರವಿನಿಮಯ ನಡೆಯಿಸಿದನು. ಆಗ ಆ ರಾಕ್ಷಸರು, ರಾವಣನ ಸಾಮರ್ಥ್ಯವನ್ನು ಮತ್ತು ಆತನ ಮೊದಲಿನ ಪರಾಕ್ರಮಗಳನ್ನು ಬಣ್ಣಿಸಿ ಅವನಿಗೆ ಈ ರೀತಿ ನುಡಿಯುತ್ತಾರೆ :

"ಪೂರ್ವದಲ್ಲಿ ನೀನು ಅನೇಕ ಬಲಾಢ್ಯ ಶತ್ರುಗಳನ್ನು ಸಂಗ್ರಾಮದಲ್ಲಿ ತುಲನೆಯಿಲ್ಲದ ನಿನ್ನ ಪರಾಕ್ರಮದಿಂದ ಸೋಲಿಸಿರುವೆ. ಇಂಥ ನೀನು ಶ್ರೀರಾಮನ ಭಯವನ್ನು ಇಟ್ಟುಕೊಳ್ಳಬಾರದು. ನಿನಗೆ ವಿಜಯವು ಖಂಡಿತ." ಈ ರಾಕ್ಷಸರು ಇಂದ್ರಜಿತುವಿನಿಂದ ಪರಾಭೂತರಾದವರೆಲ್ಲರ ಹೆಸರುಗಳನ್ನು ನಿರ್ದೇಶಿಸಿ, ಆತನ ಎಣೆಯಿಲ್ಲದ ಸಾಮರ್ಥ್ಯದ ಬಗ್ಗೆ ಗೌರವದಿಂದ ಮಾತನಾಡಿದರು. ಇಂದ್ರಜಿತುವೊಬ್ಬನೇ ಶ್ರೀರಾಮನನ್ನು, ಆತನ ವಾನರಸೇನೆಯನ್ನು ಸದೆಬಡಿಯಲು ಶಕ್ತನಿದ್ದಾನೆಂದು ಹೊಗಳಿ —

ಅನೇನ ಚ ಮಹಾರಾಜ ಮಾಹೇಶ್ವರಮನುತ್ತಮಮ್ ।
ಇಷ್ಟ್ವಾ ಯಜ್ಞಂ ವರೋ ಲಬ್ಧೋ ಲೋಕೇ ಪರಮದುರ್ಲಭಃ ॥ ೧೯ ॥

"ಹೇ ಮಹಾರಾಜನೇ, ಈ ಇಂದ್ರಜಿತುವು ಅತ್ಯಂತ ಉತ್ತಮವಾದ ಮಾಹೇಶ್ವರೀ ಯಾಗವನ್ನು ಮಾಡಿ ಜಗತ್ತಿನಲ್ಲಿ ಶ್ರೇಷ್ಠವಾದ ವರವನ್ನು ಸಂಪಾದಿಸಿದ್ದಾನೆ" ಎಂದರು.

ಹೀಗಿರುವದರಿಂದ ಶ್ರೀರಾಮನನ್ನು ನಾಶಗೊಳಿಸಲು ಇಂದ್ರಜಿತುವನ್ನೇ ನಿಯಮಿಸಬೇಕು.

ಇಂದ್ರಜಿತುವಿಗೆ ಯಾರು ವರವನ್ನು ಕೊಟ್ಟರೆಂಬುದಕ್ಕೆ ಆಧಾರವಿರದಿದ್ದರೂ ಅದನ್ನು ಬಹುಶಃ ಶಂಕರನೇ ಕೊಟ್ಟಿರಬಹುದು. ಇಂದ್ರಜಿತುವು ಆಚರಿಸಿದ ಏಳು ಯಜ್ಞಗಳಲ್ಲಿ ಮಾಹೇಶ್ವರೀ ಯಾಗವು ಒಂದಾಗಿದ್ದು, ಶಿವಪ್ರಸಾದದಿಂದ ಆತನಿಗೆ ದಿವ್ಯರಥಗಳು, ಬಿಲ್ಲುಬಾಣಗಳು, ಶಸ್ತ್ರಗಳು, ತಾಮಸೀ ಮಾಯಾವಿದ್ಯೆ ಇವೆಲ್ಲವೂ ಪ್ರಾಪ್ತವಾದವು.

ವಾಸ್ತವದಲ್ಲಿ ಇದೊಂದು ಅನುಗ್ರಹವೇ ಹೊರತು ವರವೆನಿಸದು. ವಾಲ್ಮೀಕಿಯು 'ವರ' ಶಬ್ದವನ್ನು ಬಳಸಿದ್ದಾನೆ.

ಹೀಗೆ ಇಲ್ಲಿ ವರದ ಉಲ್ಲೇಖ ಮಾತ್ರವಿದೆ.

ನೋಡಿ : ಮಹೇಶ್ವರ > ಮೇಘನಾದ, ವರ ಕ್ರ. ೭೦, ಉತ್ತರಕಾಂಡ / ೨೫.

## ೪೮. ಶ್ರೀರಾಮ > ಮರುಪ್ರದೇಶ ಯುದ್ಧಕಾಂಡ / ೨೨

"ಇಂದು ನಾನು ಸಮುದ್ರವನ್ನು ದಾಟಬೇಕು ; ಇಲ್ಲವೆ ನನ್ನಿಂದ ಈ ಸಮುದ್ರರಾಜನ ಕೊನೆಯಾಗಬೇಕು !" ಎಂಬ ಪ್ರತಿಜ್ಞೆಯನ್ನು ಮಾಡಿ ಶ್ರೀರಾಮನು ಸಮುದ್ರರಾಜನಿಗೆ ಕೈಮುಗಿದು, ದರ್ಭೆಯ ಹಾಸುಗೆಯನ್ನು ಮಾಡಿ ಅದರಲ್ಲಿ ಒರಗಿಕೊಂಡನು. ಶ್ರೀರಾಮನು ಸಮುದ್ರರಾಜನನ್ನು ಸತ್ಕರಿಸಿ ಮೂರು ರಾತ್ರಿಗಳು ಕಳೆದರೂ ಸಾಗರರಾಜನ ದರ್ಶನವಾಗಲಿಲ್ಲ. ಸಾಗರರಾಜನು ಮಂದಬುದ್ಧಿಯವನಿದ್ದನು. ಅವನಿಗೆ ತುಂಬ ಅಹಂಕಾರವಿತ್ತು. ಸಾಗರರಾಜನ ಮೇಲೆ ಶ್ರೀರಾಮನಿಗೆ ತುಂಬ ಕೋಪ ಬಂದಿತು. ಶ್ರೀರಾಮನು ತೀಕ್ಷ್ಣಬಾಣಗಳನ್ನು ಬಿಟ್ಟು ಸಾಗರನನ್ನು ಕೆರಳಿಸಿದನು. ರಾಮನ ಬಾಣಗಳಿಂದ ಸಮುದ್ರದ ಜಲಚರಪ್ರಾಣಿಗಳೂ, ಪಾತಾಳದಲ್ಲಿಯ ದಾನವರೂ ತೊಂದರೆಗೆ ಈಡಾದರು. ಸಾಗರನು ಭೋರ್ಗರೆಯಲಾರಂಭಿಸಿದನು. ಎಲ್ಲೆಡೆಯಲ್ಲಿಯೂ ಹಾಹಾಕಾರ ಉಂಟಾಯಿತು. ಆಗ ಲಕ್ಷ್ಮಣನು ಶ್ರೀರಾಮನಿಗೆ "ಇಂಥ ಅನರ್ಥವನ್ನು ಮಾಡಬೇಡ" ಎಂದು ಪ್ರಾರ್ಥಿಸಿದನು. ಶ್ರೀರಾಮನು ಸಾಗರನನ್ನು ಕುರಿತು, "ನನ್ನ ಬಾಣಗಳಿಂದ ನಿನ್ನಲ್ಲಿಯ ಜಲವನ್ನು ಬತ್ತಿಸುವೆ. ನಿನ್ನ ಉದರದಲ್ಲಿಯ ಜಲಚರಗಳೆಲ್ಲ ನನ್ನಿಂದ ಹತವಾಗುವವು." ಹೀಗೆ ನುಡಿದು ಶ್ರೀರಾಮನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿದ ಒಂದು ಬಾಣವನ್ನು ಧನುಸ್ಸಿಗೆ ಹೂಡಿದನು. ಬಾಣವನ್ನು ಬಿಟ್ಟ ಕ್ಷಣವೇ ಸ್ವರ್ಗ ಹಾಗೂ ಪೃಥ್ವಿಯಲ್ಲಿಯ ಚರಾಚರಸೃಷ್ಟಿಗೆ ನಡುಕವುಂಟಾಗಿ ಛಿನ್ನವಿಚ್ಛಿನ್ನವಾಗಹತ್ತಿತು. ಮಹಾಸಾಗರದಲ್ಲಿ ಅಲ್ಲೋಲಕಲ್ಲೋಲವಾಯಿತು. ಆಗ ಜಲಾಶಯದ ಮಧ್ಯದಿಂದ ಸಾಗರರಾಜನು ಮೇಲಕ್ಕೆ ಎದ್ದುಬಂದು ವಿನಯಪೂರ್ವಕವಾಗಿ ಶ್ರೀರಾಮನಿಗೆ ಇಂತೆಂದನು :

"ಹೇ ಸೌಮ್ಯಶ್ರೀರಾಮನೇ, ಈ ಪೃಥ್ವಿ, ವಾಯು, ಆಕಾಶ, ಜಲ ಮತ್ತು ಅಗ್ನಿ ಇವು ಅನಾದಿಕಾಲದಿಂದಲೂ ತಮ್ಮತಮ್ಮ ಧರ್ಮಕ್ರಮವನ್ನು ಅನುಸರಿಸುತ್ತಲಿವೆ. ನಾನು ಅಪಾರನಾಗಿದ್ದೇನೆ. ನನ್ನನ್ನು ದಾಟುವದು

ಯಾರಿಗೂ ಸಾಧ್ಯವಿಲ್ಲ. ಇದುವೇ ನನ್ನ ಧರ್ಮ ; ಅಸ್ಥಿರತೆಯು ನನ್ನ ಪ್ರಮುಖ ವಿಕಾರವಾಗಿದೆ. ಅಭಿಲಾಷೆ, ಲೋಭ, ಭಯ, ಅನುರಾಗಗಳನ್ನು ಹೊಂದಿದ ಜಲಚರರಿಂದ ತುಂಬಿದ ಈ ನನ್ನ ಉದಕವನ್ನು ಎಂದಿಗೂ ಸ್ತಬ್ಧಗೊಳಿಸಲಾರೆನು. ಹೀಗಿದ್ದರೂ ನೀನು ದಾಟಹೋಗಲು ಏರ್ಪಾಟನ್ನು ಮಾಡುವೆ. ನಿನ್ನ ಸೇನೆಯು ದಾಟಹೋಗುವವರೆಗೆ ಮೊಸಳೆ ಮುಂತಾದ ಜಲಚರಪ್ರಾಣಿಗಳು ವಾನರರ ಮೇಲೆ ದಾಳಿ ಮಾಡಲಾರವೆಂದು ನಾನು ಖಂಡಿತವಾಗಿ ಹೇಳುತ್ತೇನೆ."

ಆಗ ಶ್ರೀರಾಮನು "ಈ ಅಮೋಘವಾದ ಬಾಣವನ್ನು ಯಾವ ಪ್ರದೇಶದಲ್ಲಿ ಎಸೆಯಲಿ ?" ಎಂದು ಸಾಗರರಾಜನನ್ನು ಕೇಳಿದನು.

ಸಾಗರರಾಜನು ಶ್ರೀರಾಮನಿಗೆ, "ದ್ರುಮತುಲ್ಯವೆಂದು ಜಗತ್ತಿನಲ್ಲಿ ಪ್ರಸಿದ್ಧವಾದ, ಪವಿತ್ರವಾದ ನನ್ನ ಒಂದು ಸ್ಥಳವು ಉತ್ತರದಿಕ್ಕಿನಲ್ಲಿದೆ. ಅಲ್ಲಿ ಆಭೀರ ಮುಂತಾದ ದುಷ್ಟ ದಸ್ಯುಗಳು ನನ್ನ ಜಲವನ್ನು ಸೇವಿಸಿ ವಾಸವಿರುತ್ತಾರೆ. ಅವರು ಬಹುಸಂಖ್ಯೆಯಲ್ಲಿದ್ದಾರೆ. ಅವರ ಮುಖಗಳು ಭಯಂಕರವಿದ್ದಷ್ಟೇ ಅವರ ಕೃತ್ಯಗಳೂ ಭಯಂಕರವಾಗಿವೆ. ಇಂಥ ಪಾಪಿಗಳ ಸ್ಪರ್ಶವು ನನಗೆ ಹಿಡಿಸುವದಿಲ್ಲ. ಹೀಗಿರುವದರಿಂದ ನಿನ್ನ ಉತ್ಕೃಷ್ಟ ಬಾಣದ ಸದುಪಯೋಗವನ್ನು ನೀನು ಆ ಸ್ಥಳದತ್ತ ಮಾಡು !" ಎಂದು ತಿಳಿಸಿದನು.

ಸಾಗರನ ಹೇಳಿಕೆಯಂತೆ, ಶ್ರೀರಾಮನು ಆ ತೇಜಸ್ಸುಳ್ಳ ಬಾಣವನ್ನು 'ಮರುಕಾಂತಾರ'ವೆಂಬ ಪ್ರದೇಶದ ಮೇಲೆ ಬಿಟ್ಟನು. ಆಗ ಆ ಬಾಣದಿಂದ ತತ್ತರಿಸಿದ ಪೃಥ್ವಿಯು ಗೋಳಿಟ್ಟಿತು. ಬಾಣ ತಗುಲಿದ ಸ್ಥಳದಲ್ಲಿ ಪೃಥ್ವಿಗೆ ಒಂದು ರಂಧ್ರವುಂಟಾಗಿ ಅಲ್ಲಿ ರಸಾತಳದಿಂದ ಒಮ್ಮೆಲೇ ನೀರು ಹೊರಚಿಮ್ಮಿತು. ಅಲ್ಲಿ 'ವ್ರಣ'ವೆಂಬ ಬಾವಿಯು ನಿರ್ಮಾಣಗೊಂಡಿತು. ಸುತ್ತುಮುತ್ತಲಿನ ಜಲಾಶಯಗಳ ನೀರು ಬತ್ತಿಹೋಯಿತು. ಈ ರೀತಿ ಆ 'ಮರುಕಾಂತಾರ' ಪ್ರದೇಶವನ್ನು ಬರಡು ಮಾಡಿದನಂತರ —

> ವರಂ ತಸ್ಮೈ ದದೌ ವಿದ್ವಾನ್ಮರವೇಽಮರವಿಕ್ರಮಃ ॥ ೪೧ ॥
> ಪಶವ್ಯಶ್ಚಾಲ್ಪರೋಗಶ್ಚ ಫಲಮೂಲರಸಾಯುತಃ ॥
> ಬಹುಸ್ನೇಹೋ ಬಹುಕ್ಷೀರಃ ಸುಗಂಧಿರ್ವಿವಿಧೌಷಧಿಃ ॥ ೪೨ ॥
> ಏವಮೇತೈಶ್ಚ ಸಂಯುಕ್ತೋ ಬಹುಭಿಃ ಸಂಯುತೋ ಮರುಃ ॥
> ರಾಮಸ್ಯ ವರದಾನಾಚ್ಚ ಶಿವಃ ಪಂಥಾ ಬಭೂವ ಹ ॥ ೪೩ ॥

ದೇವಸಮನಾದ, ಪರಾಕ್ರಮಿಯಾದ, ದಶರಥಪುತ್ರನಾದ, ಜ್ಞಾನಿಯಾದ ಶ್ರೀರಾಮನು ಆ ಮರುಪ್ರದೇಶಕ್ಕೆ ಈ ರೀತಿ ವರವನ್ನು ಕೊಟ್ಟನು : "ಪಶುಗಳಿಗೆ ಹಿತಕರವಾಗಬೇಕು, ಅಲ್ಲಿ ರೋಗರುಜಿನಗಳು ಕಡಿಮೆಯಾಗಿರಬೇಕು ; ಫಲ, ಮೂಲಗಳು, ರಸಗಳು, ವಿಪುಲಸ್ನಿಗ್ಧತೆಯಿದ್ದ ಸಂಗತಿಗಳು, ಹಾಲು, ಹೈನು, ಸುಗಂಧ ಮತ್ತು ನಾನಾ ಪ್ರಕಾರದ ಔಷಧಿಗಳಿಂದ ಈ ದೇಶವು ಸಮೃದ್ಧವಾಗಲಿ !"

ಶ್ರೀರಾಮನಿಂದ ಈ ವರವನ್ನು ಪಡೆದನಂತರ ಈ ಮರುಪ್ರದೇಶವು ಮೇಲೆ ತಿಳಿಸಿದ ಗುಣಗಳಿಂದ ಸಂಪನ್ನವಾಯಿತು. ಶ್ರೀರಾಮನ ಈ ವರದಿಂದ ಆ ಪ್ರದೇಶವು ಶುಭಕಾರಕವಾಯಿತು.

ಅಯಾಚಿತ ವರ.

## ೪೯. ವಿಶ್ವಕರ್ಮ > ನಲ (ವಾನರ) ಯುದ್ಧಕಾಂಡ / ೨೨

ಸಾಗರರಾಜನು ಶ್ರೀರಾಮನಿಗೆ ವಿಶ್ವಕರ್ಮನ ಪುತ್ರನಾದ 'ನಲ'ವಾನರನ ಸಾಮರ್ಥ್ಯವನ್ನು ಅರುಹುತ್ತಿದ್ದಾನೆ.

ಶ್ರೀರಾಮನು ಮರುಪ್ರದೇಶಕ್ಕೆ ವರವನ್ನು ಕೊಟ್ಟ ಕಾರಣ ಸಂತೋಷಗೊಂಡ ಸಾಗರನು, ಶ್ರೀರಾಮನಿಗೆ ಈ ರೀತಿ ಹೇಳುತ್ತಾನೆ :

> ಅಯಂ ಸೌಮ್ಯ ನಲೋ ನಾಮ ತನಯೋ ವಿಶ್ವಕರ್ಮಣಃ ।
> ಪಿತ್ರಾ ದತ್ತವರಃ ಶ್ರೀಮಾನ್ಪ್ರತಿಮೋ ವಿಶ್ವಕರ್ಮಣಃ ॥ ೪೫ ॥

"ಹೇ ವಿನಯಸಂಪನ್ನ ಶ್ರೀರಾಮನೇ, ಈ ನಲನೆಂಬ ವಾನರನು ವಿಶ್ವಕರ್ಮನ ಪುತ್ರನಾಗಿದ್ದಾನೆ. ನಿನ್ನಲ್ಲಿ

ಈತನು ಶ್ರದ್ಧೆಯನ್ನಿಟ್ಟುಕೊಂಡಿದ್ದಾನೆ. ಈ ನಲನಲ್ಲಿ ಇಷ್ಟವಸ್ತುವನ್ನು ನಿರ್ಮಿಸುವ ಶಕ್ತಿ ಇದೆ. ವಿಶ್ವಕರ್ಮನು ಈ ಪ್ರಕಾರದ ವರವನ್ನು ಈತನಿಗೆ ಕೊಟ್ಟಿದ್ದಾನೆ."

"ಅತ್ಯಂತ ಉತ್ಸಾಹವುಳ್ಳ ಈ ವಾನರನು ನನ್ನ ಮೇಲೆ ಸೇತುವೆಯನ್ನು ಕಟ್ಟಲಿ ! ನಲನು ತನ್ನ ಪಿತನಂತೆ ಕುಶಲನಿದ್ದ ಕಾರಣ ಆತನು ನಿರ್ಮಿಸಿದ ಸೇತುವೆಗೆ ನಾನು ಆಧಾರಪ್ರಾಯನಾಗುವೆ" ಎಂದು ಹೇಳಿ ಸಾಗರ ರಾಜನು ಅದೃಶ್ಯನಾದನು. ನಲನು ವಾನರರ ಸಹಾಯದಿಂದ ಸೇತುವೆಯನ್ನು ನಿರ್ಮಿಸಲಾರಂಭಿಸಿದನು.

"ನನ್ನ ಪಿತನು ನನ್ನ ತಾಯಿಗೆ ಕೊಟ್ಟ ವರದಿಂದ ನಾನು ನನ್ನ ತಂದೆಯಂತೆ ಶಿಲ್ಪವಿದ್ಯೆಯಲ್ಲಿ ಪ್ರವೀಣನಾಗಿದ್ದೇನೆ" ಎಂದು ನಲನು ಸ್ವತಃ ಶ್ರೀರಾಮನಿಗೆ ಹೇಳುತ್ತಾನೆ.

ಇಲ್ಲಿ ವರವನ್ನು ಕೊಡಲು ಇದ್ದ ಕಾರಣವು ಸ್ಪಷ್ಟವಿಲ್ಲ. ಇದು 'ಅಯಾಚಿತ' ವರವಿರಬೇಕು.

ಅನಿಶ್ಚಿತ.

## ೫೦. ವಿಶ್ವಕರ್ಮ > (ನಲ ವಾನರನ) ತಾಯಿ ಯುದ್ಧಕಾಂಡ / ೨೨

ನಲ ವಾನರನು ಶ್ರೀರಾಮನಿಗೆ ತನ್ನ ಸ್ವಂತದ ಬಗ್ಗೆ ಹೇಳುತ್ತಿದ್ದಾನೆ :

"ಮಹಾಸಾಗರನು ನನ್ನ ಬಗ್ಗೆ ನುಡಿದದ್ದು ನಿಜವಿದೆ. ನನ್ನ ತಂದೆಯ ಸಾಮರ್ಥ್ಯವು ನನ್ನಲ್ಲಿರುವದರಿಂದ ನಾನು ಈ ವಿಸ್ತೀರ್ಣವಾದ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟುವೆನು. ಈ ಪ್ರಪಂಚದಲ್ಲಿ 'ದಂಡ' ಮಾರ್ಗದಿಂದಲೇ ಪುರುಷನು ತನ್ನ ಕಾರ್ಯವನ್ನು ಸಾಧಿಸಬಹುದು ಎಂದು ನನಗೆ ಅನ್ನಿಸುತ್ತದೆ. ಈ ಕೃತಘ್ನನಿರ ದವನ ಬಗ್ಗೆ ಸಾಮ, ದಾನ ಮತ್ತು ಕ್ಷಮೆ ಇವುಗಳ ಪ್ರಯೋಗವು ನಿರರ್ಥಕ ; ಸಾಗರನೆಂದರೆ ಪ್ರಚಂಡ ಜಲರಾಶಿ ; ಇಂಥ ಮಹಾಸಾಗರಕ್ಕೆ ಈಗ ದಂಡದ ಭಯವೊದಗಿದೆ. ತನ್ನ ಮೇಲೆ ಕಟ್ಟಲ್ಪಡಲಿರುವ ಸೇತುವೆ ಯನ್ನು ಕಾಣುವ ತವಕ ಆತನಿಗೆ ಉಂಟಾಗಿದೆ. ಹೀಗಿರುವದರಿಂದಲೇ ಸೇತುವೆಯನ್ನು ಕಟ್ಟಲು ಅವಕಾಶವನ್ನು ಕೊಡಲು ಸಿದ್ಧನಾಗಿದ್ದಾನೆ."

> ಮಮ ಮಾತುರ್ವರೋ ದತ್ತೋ ಮಂದರೇ ವಿಶ್ವಕರ್ಮಣಾ ।
> ಮಯಾ ತು ಸದೃಶಃ ಪುತ್ರಸ್ತವ ದೇವಿ ಭವಿಷ್ಯತಿ ॥ ೫೧ ॥

"ಹೇ ದೇವಿಯೆ, ನಿನಗಾಗಲಿರುವ ಪುತ್ರನು ನನ್ನಂತೆಯೇ ಆಗುವನು" ಎಂದು ವಿಶ್ವಕರ್ಮನು ಮಂದರ ವೆಂಬ ಪರ್ವತದ ಮೇಲೆ ನನ್ನ ಮಾತೆಗೆ ವರವನ್ನು ಕೊಟ್ಟಿದ್ದನು.

"ನಾನು ಆತನ ಸ್ವಂತ ಮಗನಿದ್ದು ಶಿಲ್ಪವಿದ್ಯೆಯಲ್ಲಿ ಆತನಷ್ಟೇ ನಿಪುಣನಿದ್ದೇನೆ. ನೀವು ಕೇಳದೇ ಇದ್ದರೆ ನಾನಾಗಿ ನನ್ನ ಗುಣಗಳನ್ನು ನಿಮ್ಮ ಮುಂದೆ ಹೇಳಲಾರೆನು. ನಾನು ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಲು ಕ್ಷಮತೆಯುಳ್ಳವನಿದ್ದೇನೆ."

ಮಾತೆಯ ಹೆಸರಿನ ಉಲ್ಲೇಖವು ಇರದೇ ಇದ್ದರೂ ಅವಳು ಬಹುಶಃ ಘೃತಾಚಿ ಎಂಬ ಅಪ್ಸರೆ ಯಾಗಿರಬೇಕು.

ಅಯಾಚಿತ.

## ೫೧. ಇಂದ್ರ > ಜಾಂಬವಾನ ಯುದ್ಧಕಾಂಡ / ೨೭

ರಾವಣನ ಅಮಾತ್ಯನಾದ ಸಾರಣನು ಶ್ರೀರಾಮನ ಬೆಂಬಲಕ್ಕಿದ್ದ ವೀರಸೇನಾಪತಿಗಳ ಶಕ್ತಿಸಾಮರ್ಥ್ಯದ ಬಗ್ಗೆ ರಾವಣನಿಗೆ ಅರುಹುತ್ತಿದ್ದಾನೆ.

ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿ ಶ್ರೀರಾಮನು ವಾನರರ ಸೈನ್ಯದೊಡನೆ ಲಂಕೆಗೆ ಬಂದನು. ಆಗ ಆತನ ಸೈನ್ಯಬಲವನ್ನು ನಿರೀಕ್ಷಿಸಲೆಂದು ರಾವಣನು, ಶುಕ, ಸಾರಣರೆಂಬ ತನ್ನ ಅಮಾತ್ಯರನ್ನು ಕಳುಹಿಸಿ ದನು. ಶ್ರೀರಾಮನನ್ನು ಕಂಡು ಅವರು ತುಂಬ ಭಯಗೊಂಡರು. ಅವರು ರಾವಣನ ಗುಪ್ತಚಾರರಿದ್ದ ಬಗ್ಗೆ ವಿಭೀಷಣನು ಶ್ರೀರಾಮನಿಗೆ ತಿಳಿಸಿದನು. ಶ್ರೀರಾಮನು ಆ ಶುಕ, ಸಾರಣರಿಗೆ 'ನಿಮ್ಮ ನಿರೀಕ್ಷಣಾಕಾರ್ಯವು ಪೂರ್ತಿಗೊಂಡಿದ್ದರೆ ನಿರ್ಭಯರಾಗಿ ಮರಳಿ ಹೋಗಿರಿ' ಎಂದು ಹೇಳಿದನು. ಸೀತೆಯನ್ನು ಅಪಹರಿಸಿಕೊಂಡು

ಹೋದ ರಾವಣನಿಗೆ ಮರುದಿನ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಲು ಹೇಳಿಕಳುಹಿಸಿದನು. ಸಾರಣನು, ವಾನರವೀರರ, ಸೇನಾಪತಿಗಳ ವರ್ಣನೆಯನ್ನು ರಾವಣನ ಮುಂದೆ ಮಾಡುತ್ತಿದ್ದಾನೆ. ಜಾಂಬವಂತನ ಬಗ್ಗೆ ಈ ರೀತಿ ಕಥನ ಮಾಡುತ್ತಿದ್ದಾನೆ :

"ಋಕ್ಷವಾನ ಪರ್ವತದ ಮೇಲೆ ವಾಸವಿದ್ದ 'ಧೂಮ್ರ' ಎಂಬ ಸೇನಾನಾಯಕ ಋಕ್ಷರ ಅಧಿಪತಿ ಯಾಗಿದ್ದನು. ಆತನ ತಮ್ಮನು ರೂಪದಲ್ಲಿ ಅಣ್ಣನನ್ನೇ ಹೋಲುತ್ತಿದ್ದರೂ, ಪರಾಕ್ರಮದಲ್ಲಿ ಅಣ್ಣನಿಗೆ ಮಿಗಿಲಾಗಿದವನಿದ್ದನು. ಆ ತಮ್ಮನ ಹೆಸರು 'ಜಾಂಬವಾನ'. ಈತನು ಸ್ವಭಾವದಿಂದ ಶಾಂತನಾಗಿದ್ದನು. ಅಣ್ಣನ ಮಾತಿನಂತೆ ವರ್ತಿಸುತ್ತಿದ್ದನು.

> ಏತೇನ ಸಾಹ್ಯಂ ತು ಮಹತ್ಕೃತಂ ಶಕ್ರಸ್ಯ ಧೀಮತಾ ।
> ದೇವಾಸುರೇ ಜಾಂಬವತಾ ಲಬ್ಧಾಶ್ಚ ಬಹವೋ ವರಾಃ ॥ ೧೨ ॥

'ಸುರಾಸುರರಲ್ಲಿ ಯುದ್ಧವು ನಡೆದಾಗ ಈ ಬುದ್ಧಿವಂತನಾದ ಜಾಂಬವಂತನು ಇಂದ್ರನಿಗೆ ಸಹಾಯ ಮಾಡಿ ಅನೇಕ ವರಗಳನ್ನು ಪಡೆದುಕೊಂಡಿದ್ದಾನೆ.'

ಅನೇಕ ವರಗಳನ್ನು ಪಡೆದುಕೊಂಡ ಉಲ್ಲೇಖಮಾತ್ರವಿದೆ. ಪ್ರತ್ಯಕ್ಷದಲ್ಲಿ ಯಾವ ವರಗಳು ದೊರೆತಿದ್ದ ವೆಂಬುದು ತಿಳಿದುಬರುವದಿಲ್ಲ.

ಅನಿಶ್ಚಿತ.

## ೫೨. ಬ್ರಹ್ಮದೇವ > ಮೇಘನಾದ (ಇಂದ್ರಜಿತ) — ಯುದ್ಧಕಾಂಡ / ೪೪

ವಾನರರು ಹಾಗೂ ರಕ್ಕಸರ ನಡುವೆ ಕಾಳಗ ಸಾಗಿತ್ತು. ಅಂಗದನು ಇಂದ್ರಜಿತನನ್ನು ತೀರ ಬಳಲಿಸಿದ್ದನು. ಅವನ ಸಾರಥಿ ಹಾಗೂ ಕುದುರೆಗಳು ಕೊಲ್ಲಲ್ಪಟ್ಟರು. ಆಗ ಇಂದ್ರಜಿತ ತುಂಬ ಕೆರಳಿದನು. ಈ ಸಂದರ್ಭದಲ್ಲಿ ಬ್ರಹ್ಮದೇವನಿತ್ತ ವರದ ಬಗೆಗೆ ಈ ಬಗೆಯ ಉಲ್ಲೇಖ ಬಂದಿದೆ.

> ಸೋಽನ್ತರ್ಧಾಗತಃ ಪಾಪೋ ರಾವಣೇ ರಣಕರ್ಷಿತಃ ।
> ಬ್ರಹ್ಮದತ್ತವರೋ ವೀರೋ ರಾವಣಿಃ ಕ್ರೋಧಮೂರ್ಚ್ಛಿತಃ ॥ ೩೪ ॥

'ಕಾಳಗದಲ್ಲಿ ತುಂಬ ಬಸವಳಿದುಹೋದ ಕಾರಣ ಕೋಪದುಂಬಿದವನೂ, ಬ್ರಹ್ಮದೇವನಿಂದ ವರವನ್ನು ಪಡೆದವನೂ ಆದ ಆ ಪಾಪಿ ಇಂದ್ರಜಿತ ಕಾಣೆಯಾದನು.'

ಮಾಯೆಯಿಂದ ಕಾಣೆಯಾದ ಇಂದ್ರಜಿತನು ಶ್ರೀರಾಮಲಕ್ಷ್ಮಣರನ್ನು ನಾಗಪಾಶದಿಂದ ಅಭಿಮಂತ್ರಿಸಿದ ಶರಬಂಧದಿಂದ ಬಂಧಿಸಿಬಿಟ್ಟನು.

**ಯುದ್ಧಕಾಂಡ / ೪೬**

ವಿಭೀಷಣನು ಮಾಯೆಯಿಂದ ಅಡಗಿ ಕುಳಿತ ಮೇಘನಾದನನ್ನು ಮಾಯೆಯಿಂದಲೇ ಕಂಡುಹಿಡಿದನು.

> ದದರ್ಶಾನ್ತರ್ಹಿತಂ ವೀರ ವರದಾನಾದ್ ವಿಭೀಷಣಃ । ೧೦

ವರದಾನದ ಪ್ರಭಾವದಿಂದ ಇಂದ್ರಜಿತನು ಅಡಗಿಕೊಂಡಿದ್ದನು.

**ಯುದ್ಧಕಾಂಡ / ೫೧**

ಗರುಡನು ಶ್ರೀರಾಮಲಕ್ಷ್ಮಣರನ್ನು ಕಟ್ಟಿಹಾಕಿದ ನಾಗಪಾಶವನ್ನು ಕತ್ತರಿಸಿ ಚೆಲ್ಲಿ ಅವರನ್ನು ಬಿಡುಗಡೆ ಮಾಡಿದನು. ಆಗ ವಾನರರು ಪ್ರಚಂಡವಾದ ಗರ್ಜನೆಯೊಂದಿಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅವರ ಈ ಗರ್ಜನೆಯನ್ನು ಆಲಿಸಿದ ರಾವಣ ಮಾತ್ರ ಚಿಂತೆಗೀಡಾದನು. ತನ್ನ ಹೆದರಿಕೆಯನ್ನು ವ್ಯಕ್ತಪಡಿಸುವಾಗ ಅವನು ಇಂದ್ರಜಿತನಿಗೆ ದೊರೆತ ವರದ ಬಗೆಗೆ ಹೀಗೆಂದು ಉಲ್ಲೇಖಿಸುತ್ತಾನೆ :

> ಘೋರೈರ್ದತ್ತವರೈರ್ಬದ್ಧೌ ಶರೈರಾಶೀವಿಷೋಪಮೈಃ ।
> ಅಮೋಘೈಃ ಸೂರ್ಯಸಂಕಾಶೈಃ ಪ್ರಮಥ್ಯೇನ್ದ್ರಜಿತಾ ಯುಧಿ ॥ ೧೫ ॥

'ಚಿರಕಾಲ ಘೋರ ತಪಸ್ಸನ್ನಾಚರಿಸಿ (ಇಂದ್ರಜಿತ) ಮೇಘನಾದನಿಗೆ ದೊರೆತ ವರರೂಪಿಯಾದ ಹಾಲಿನಂತಿದ್ದ (ನಂಜುಳ್ಳ) ಉಜ್ವಲ, ಘೋರವಾದ ಬಾಣಗಳಿಂದ ಯಾರನ್ನು ಜರ್ಜರಿತರನ್ನಾಗಿಸುವಂತೆ ಕಟ್ಟಿಹಾಕಲಾಯಿತೋ ಅಂತಹ ನನ್ನ ಹಗೆಗಳು ಬಿಡುಗಡೆಹೊಂದಿರುವ ಕಾರಣ ಇನ್ನು ನನ್ನ ಸೇನೆಯ ಅವಸ್ಥೆಯೇನೂ ಚೆನ್ನಾಗಿ ಉಳಿಯದು.'

ಈ ವರವನ್ನಿತ್ತವರಾರೆಂಬುದು ಖಚಿತಗೊಂಡಿಲ್ಲ. ಇಂದ್ರಜಿತನು ಬ್ರಹ್ಮದೇವನಿಗೆ ಕೇಳಿದ ವರದಲ್ಲಿ ರಥದ ಉಲ್ಲೇಖವಿದ್ದರೂ ಬಾಣಗಳದಿಲ್ಲ. ಮಾಹೇಶ್ವರಿ ಯಜ್ಞದ ತರುವಾಯ ಅವನಿಗೆ ಬಿಲ್ಲುಬಾಣಗಳು ವರವಾಗಿ ದೊರೆತ ಉಲ್ಲೇಖವು ಯುದ್ಧಕಾಂಡ / ೭ ರಲ್ಲಿದೆ.

ನೋಡಿ : ? > ಮೇಘನಾದ, ವರ ಕ್ರ. ४೭.

ಯುದ್ಧಕಾಂಡ / ೫೯

ಪ್ರಹಸ್ತ ಮರಣವನ್ನಪ್ಪುತ್ತಲೇ ರಾವಣ ತಾನಾಗಿಯೇ ಯುದ್ಧ ಭೂಮಿಗೆ ಹೊರಟನು. ವಿಭೀಷಣನು ಶ್ರೀರಾಮನಿಗೆ ರಾವಣನ ಜೊತೆಗೆ ಬಂದ ರಾಕ್ಷಸರನ್ನು ಕುರಿತು ಹೇಳುತ್ತಿರುವಾಗ ಮೇಘನಾದನ ವರಪ್ರಾಪ್ತಿಯ ಬಗೆಗೆ ಈ ಬಗೆಯ ಉಲ್ಲೇಖ ಕಂಡುಬರುತ್ತದೆ —

ಕರೀವ ಭಾತ್ಯುಗ್ರವಿವೃತ್ತದಂಷ್ಟ್ರಃ ಸ ಇಂದ್ರಜಿನ್ನಾಮ ವರಪ್ರಧಾನಃ ॥ ೧೫ ॥

ಆನೆಯ ಕೋರೆಗಳಂತೆ ಮುಂಚಾಚಿದ ಉಗ್ರವಾದ ಹಲ್ಲುಗಳುಳ್ಳ ಆ ಇಂದ್ರಜಿತ ವರವನ್ನು ಪಡೆದು ಬಲವಂತನಾಗಿದ್ದಾನೆ :

ಯುದ್ಧಕಾಂಡ / ೭೨

ಲಕ್ಷ್ಮಣ ಅತಿಕಾಯನನ್ನು ಕೊಲ್ಲುತ್ತಾನೆ. ಶೋಕಾಕುಲನೂ, ಉದ್ವಿಗ್ನನೂ ಆದ ಕಾರಣ ಹೀಗೆಂದು ಉದ್ಗರಿಸಿದ್ದಾನೆ.

ತೌ ಭ್ರಾತರೌ ತದಾ ಬದ್ಧೌ ಘೋರೈರ್ದತ್ತವರ್ೈಃ ಶರೈಃ ।
ಯನ್ನ ಶಕ್ಯಂ ಸುರೈಃ ಸರ್ವೈರಸುರೈರ್ವಾ ಮಹಾಬಲೈಃ ॥ ೬ ॥

"ಬಲ ಹಾಗೂ ವೀರ್ಯಗಳ ಬಗೆಗೆ ಹೆಸರಾದ ನನ್ನ ಮಗ ಇಂದ್ರಜಿತನು ತನಗೆ ವರವಾಗಿ ದೊರೆತ ಘೋರ ಬಾಣಗಳಿಂದ ಆ ಸೋದರರನ್ನು ಬಂಧಿಸಿಟ್ಟಿದ್ದನು. ದೇವತೆಗಳು, ಮಹಾಬಲಾಢ್ಯರಾದ ಅಸುರರು (ಯಕ್ಷ, ಗಂಧರ್ವ, ಪನ್ನಗರು) ಕೂಡ ಈ ಬಂಧನವನ್ನು ಬಿಡಿಸುವಂತಿರಲಿಲ್ಲ." (ಆದರೆ ಶ್ರೀರಾಮಲಕ್ಷ್ಮಣರು ಬಾಣಗಳ ಬಂಧನದಿಂದ ಬಿಡಿಸಿಕೊಂಡುದು ತಮ್ಮ ಪ್ರಭಾವದಿಂದಾಗಿಯೋ, ಮಾಯೆಯಿಂದಾಗಿಯೋ ಅಥವಾ ಮೋಹನದಿಂದಾಗಿಯೋ, ಎಂಬುದು ನನಗೆ ಅರ್ಥವಾಗುತ್ತಿಲ್ಲ.)

ಯುದ್ಧಕಾಂಡ / ೭೩

ಶ್ರೀರಾಮನು ಇಂದ್ರಜಿತನಿಗೆ ದೊರೆತ ಬ್ರಹ್ಮಾಸ್ತ್ರದ ಬಗೆಗಿನ ಭಯವನ್ನು ಲಕ್ಷ್ಮಣನೆದುರು ವ್ಯಕ್ತಪಡಿಸಿದ್ದಾನೆ.

ಇಂದ್ರಜಿತನು ರಾವಣನೆದುರು, 'ಶ್ರೀರಾಮಲಕ್ಷ್ಮಣರನ್ನು ನನ್ನ ಬಾಣಗಳಿಂದ ಇಂದು ಛಿನ್ನವಿಚ್ಛಿನ್ನವಾಗಿ ಮಾಡಿಬಿಡುವೆ' ಎಂದು ಪ್ರತಿಜ್ಞೆಗೈದನು. ಇಂದ್ರಜಿತನ ಬಾಣಗಳಿಗೆ ಸಿಕ್ಕು ವಾನರರು ನುಗ್ಗುನುರಿಯಾದರು. ಅವನು ಹಲವು ಜನ ವಾನರರನ್ನು ಗುರಿಯಿಕ್ಕಿದನು.

ಸುಗ್ರೀವಮೃಷಭಂ ಚೈವ ಸೋಽಂಗದಂ ದ್ವಿವಿದಂ ತಥಾ ॥ ४೮ ॥
ಘೋರೈರ್ದತ್ತವರೈಸ್ತೀಕ್ಷ್ಣೈರಿಷ್ಮಾಹಾನಕರೋತ್ತದಾ । ४೯ ।

ಅವನು ತನಗೆ ವರವಾಗಿ ದೊರೆತ ಹರಿತಾದ ಘೋರ ಬಾಣಗಳಿಂದ ಸುಗ್ರೀವ, ಋಷಭ, ಅಂಗದ ಹಾಗೂ ದ್ವಿವಿದರನ್ನೂ ಕೂಡ ಹಣ್ಣುಗಾಯಿ ನೀರುಗಾಯಿಗೊಳಿಸಿದನು. ಶ್ರೀರಾಮಲಕ್ಷ್ಮಣರ ಮೇಲೂ ಬಾಣಗಳನ್ನು ಮಳೆಗರೆದನು. ಆಗ ಶ್ರೀರಾಮನು ಲಕ್ಷ್ಮಣನಿಗೆ ಇಂತೆಂದನು :

ಸ್ವಯಮ್ಭುವಾ ದತ್ತವರೋ ಮಹಾತ್ಮಾ ಸಮಾಹಿತೋಽನ್ತರ್ಹಿತಭೀಮಕಾಯಃ ।
ಕಥಂ ತು ಶಕ್ಯೋ ಯುಧಿ ನಷ್ಟದೇಹೋ ನಿಹನ್ತುಮದ್ಯೇಂದ್ರಜಿದುದ್ಯತಾಸ್ತ್ರಃ ॥ ೬೯ ॥

"ರಾಕ್ಷಸರ ಅಧಿಪತಿಯೂ, ದೇವರಾಜನ ಶತ್ರುವೂ ಆದ ಈತ ಮತ್ತೆ ತನ್ನ ಬ್ರಹ್ಮಾಸ್ತ್ರದ ನೆರವಿನಿಂದ ವಾನರಸೇನೆಯನ್ನು ಮಣ್ಣುಮುಕ್ಕಿಸುತ್ತಲಿದ್ದು ತನ್ನ ಹರಿತಾದ ಬಾಣಗಳಿಂದ ನಮ್ಮನ್ನು ತೀರಿಸುತ್ತಲಿದ್ದಾನೆ. ಬ್ರಹ್ಮದೇವನು ಈ ಮಹಾತ್ಮನಿಗೆ ವರವಿತ್ತಿರುವನು. ಈತ ತನ್ನ ಪ್ರಚಂಡವಾದ ದೇಹವನ್ನು ಕಾಣದಂತೆ ಗುಟ್ಟಾಗಿಸಿ ಬಲು ಎಚ್ಚರದಿಂದ ಹೋರಾಡುತ್ತಲಿರುವನು. ಹೀಗಾಗಿ, ಅಸ್ತ್ರಗಳನ್ನು ಬಳಸಲು ಸಿದ್ಧನಾದ ಹಾಗೂ ಅದೃಶ್ಯನಾದ ಈ ಇಂದ್ರಜಿತನನ್ನು ಯುದ್ಧದಲ್ಲಿ ಕೊಲ್ಲುವುದಾದರೂ ಹೇಗೆ ?"

**ಯುದ್ಧಕಾಂಡ / ೮೦**

ಇಂದ್ರಜಿತನು ಶ್ರೀರಾಮಲಕ್ಷ್ಮಣರನ್ನು ಕೊಲ್ಲಲು ಪ್ರತಿಜ್ಞೆಗೈದಿದ್ದನು. ಅವನು ಅವರ ಮೇಲೆ ಕಲ್ಲುಗಳ ಮಳೆಗರೆತದಂತೆ ಬಾಣಗಳನ್ನು ಮಳೆಗರೆದನು. ಈ ಸಂದರ್ಭದಲ್ಲಿ ಮುಂದಿನ ಉಲ್ಲೇಖವಿದೆ —

ಸ ರಾಮಂ ಸೂರ್ಯಸಂಕಾಶೈಃ ಶರೈರ್ದತ್ತವರೈರ್ಭೃಶಮ್ ।
ವಿವ್ಯಾಧ ಸಮರೇ ಕ್ರುದ್ಧಃ ಸರ್ವಗಾತ್ರೇಷು ರಾವಣಿಃ ॥ ೨೮ ॥

ಕೆರಳಿದ ಆ ರಾವಣನ ಮಗನು ತನಗೆ ವರವಾಗಿ ದೊರೆತ ಸೂರ್ಯನಂತಹ ತೇಜಸ್ಸಿನ ಬಾಣಗಳಿಂದ ಶ್ರೀರಾಮನ ಅವಯವಗಳನ್ನು ಮುಚ್ಚಿಹಾಕಿದನು.

**ಯುದ್ಧಕಾಂಡ / ೮೫**

'ಇಂದ್ರಜಿತನು ಸೀತೆಯನ್ನು ಕೊಂದನು' ಎಂದು ಹನುಮಂತನು ಹೇಳುತ್ತಲೇ ಶ್ರೀರಾಮ ಎಚ್ಚರತಪ್ಪಿ ಬಿದ್ದುಬಿಟ್ಟನು. ಲಕ್ಷ್ಮಣ ಈ ವಾರ್ತೆಯನ್ನು ನಂಬಲು ಸಿದ್ಧನಿರಲಿಲ್ಲ. ವಾನರರ ಶೌರ್ಯಕ್ಕೆ ತಡೆಯೊಡ್ಡಲೆಂದು ಇಂದ್ರಜಿತನು ಮಾಯೆಯನ್ನವಲಂಬಿಸಿರಲು ಸಾಕೆಂದು ಅವನಿಗನ್ನಿಸಿತು. ಲಕ್ಷ್ಮಣ ಹಾಗೂ ವಿಭೀಷಣರು ಶ್ರೀರಾಮನನ್ನು ಬಗೆಬಗೆಯಾಗಿ ಸಂತಯಿಸಿದರು. ನಿಕುಂಭಿನಿಗೆ ಹೋಮವನ್ನು ಮಾಡಲೆಂದು ದೇವಾಲಯಕ್ಕೆ ಹೋದ ಇಂದ್ರಜಿತನ ಮೇಲೆ ಎರಗುವಂತೆ ಲಕ್ಷ್ಮಣನನ್ನು ಕೂಡಲೇ ಕಳಿಸಿಕೊಡಬೇಕೆಂದು ವಿಭೀಷಣನು ಶ್ರೀರಾಮನನ್ನು ಕೋರಿದನು. ಏಕೆಂದರೆ,

ತೇನ ವೀರೇಣ ತಪಸಾ ವರದಾನಾತ್ ಸ್ವಯಮ್ಭುವಃ ।
ಅಸ್ತ್ರಂ ಬ್ರಹ್ಮಶಿರಃ ಪ್ರಾಪ್ತಂ ಕಾಮಗಾಶ್ಚ ತುರಂಗಮಾಃ ॥ ೧೨ ॥

ಆ ವೀರನು ತಪಶ್ಚರ್ಯೆಯಿಂದ ಬ್ರಹ್ಮದೇವನನ್ನು (ಸಂತುಷ್ಟಗೊಳಿಸಿ), ಅವನಿಂದ ಬ್ರಹ್ಮಶಿರವೆಂಬ ಅಸ್ತ್ರವನ್ನು ಹಾಗೂ ಮನೋವೇಗದ ಕುದುರೆಯನ್ನು ವರದಾನವಾಗಿ ಪಡೆದುಕೊಂಡನು.

ಇಂದ್ರಜಿತನ ಹೋಮವು ಪೂರ್ತಿಯಾದರೆ ಅವನು ಎಲ್ಲರನ್ನೂ ಕೊಂದುಬಿಡಲಿದ್ದನು. ಅವರೆಲ್ಲರಿಗೆ ಈ ಹೆದರಿಕೆಯಿತ್ತು, ಇಂದ್ರಜಿತನಿಗೆ ಬ್ರಹ್ಮದೇವನಿಂದ ಬ್ರಹ್ಮಾಸ್ತ್ರ ಹಾಗೂ ಇಷ್ಟಪಟ್ಟತ್ತ ಗಮನವನ್ನು ಕೈಕೊಳ್ಳಬಹುದಾದ ಕುದುರೆಗಳು ದೊರೆತುದು ವಿಭೀಷಣನಿಗೆ ತಿಳಿದಿತ್ತು. ಆದುದರಿಂದ ಅವನು ಇಂದ್ರಜಿತನಿಗೆ ದೊರೆತ ಈ ವರಗಳನ್ನು ಕುರಿತು ಶ್ರೀರಾಮನಿಗೆ ಹೀಗೆಂದನು —

ನಿಕುಮ್ಭಿಲಾಮಸಂಪ್ರಾಪ್ತಮಕೃತಾಗ್ನಿಂ ಚ ಯೋ ರಿಪುಃ ।
ತ್ವಾಮಾತತಾಯಿನಂ ಹನ್ಯಾದಿನ್ದ್ರಶತ್ರೋ ಸ ತೇ ವಧಃ ॥ ೧೪ ॥
ವರೋ ದತ್ತೋ ಮಹಾಬಾಹೋ ಸರ್ವಲೋಕೇಶ್ವರೇಣ ವೈ ।
ಇತ್ಯೇವಂ ವಿಹಿತೋ ರಾಜನ್ವಧಸ್ತಸ್ಯೈಷ ಧೀಮತಃ ॥ ೧೫ ॥

" 'ಎಲೈ ಇಂದ್ರಜಿತನೇ ! ನಿಕುಂಭಿಲೆಯಲ್ಲಿ ಹೋಗಿ ನೀನು ಹವನವನ್ನು ಕೈಗೊಳ್ಳುವ ಮುನ್ನ ಯಾವ ಹಗೆಯು ಶಸ್ತ್ರವನ್ನು ಹಿಡಿದಿರುವ ನಿನ್ನೊಂದಿಗೆ ಕಾಳಗಕ್ಕಿಳಿಯುವನೋ ಅವನಿಂದ ನಿನ್ನ ಕೊಲೆಯಾಗಲಿದೆ' ಎಂದು ಸರ್ವಲೋಕಾಧಿಪತಿಯಾದ ಬ್ರಹ್ಮನು ಅವನಿಗೆ ವರವಿತ್ತನು. ಬುದ್ಧಿವಂತನಾದ ಇಂದ್ರಜಿತನ ಸಾವು ಈ ಬಗೆಯಾಗಿ ಆಗಲೆಂದು ಬ್ರಹ್ಮದೇವನು ನಿರ್ಧರಿಸಿದ್ದಾನೆ."

ವಧೆ ಒಂದು ವರಕ್ಕೆ ಸಂಗತಿಯೆನ್ನಿಸದು. ತನ್ನ ವಧೆಯಾಗಲೆಂದು ಯಾರೂ ವರವನ್ನು ಕೇಳಿಕೊಳ್ಳಲಾರರು. ಅಲ್ಲದೆ ಪ್ರಸನ್ನನಾದ ದೇವತೆ ಕೂಡ 'ಇಂಥಿಂಥ ಬಗೆಯಲ್ಲಿ ನಿನಗೆ ಸಾವು ಬಂದೀತು' ಎಂಬುದಾಗಿ ಅಭದ್ರವಾದ ನುಡಿಗಳನ್ನು ಆಡಲಾರನು. ಅಂದಬಳಿಕ ಈ ವರವನ್ನು ಅರ್ಥೈಸುವುದು ಹೇಗೆಂಬ ಪ್ರಶ್ನೆ ಹುಟ್ಟಿಕೊಳ್ಳುವುದು ಸ್ವಾಭಾವಿಕ. ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ, ಅದರ ಸೀಮೆಯಲ್ಲಿಯೇ ಕೊಲೆಯಾದೀತೇ ಹೊರತು ಉಳಿದಲ್ಲಲ್ಲ. ವಿಶಿಷ್ಟವಾದ ಒಂದು ಬಾಣಕ್ಕೆ ಹೊರತಾಗಿ ಅಮರತ್ವವೇ ಸರಿ — ಎಂಬುದಾಗಿ ಈ ವರವನ್ನು ಅರ್ಥೈಸಬಹುದು. ಬ್ರಹ್ಮದೇವನು ಸುಂದೋಪಸುಂದರಿಗೆ ಇದೇ ಬಗೆಯ ಒಂದು ವರವನ್ನಿತ್ತಿದ್ದನು.

ಮೇಲಿನ ಸಂದರ್ಭದಲ್ಲಿ ಯಾಚಿತ-ಅಯಾಚಿತವೆಂಬ ಪದಗಳು ಸರಿಹೊಂದವು. ಇಂದ್ರನ ಬಿಡುಗಡೆಯನ್ನು ಕುರಿತು ಬ್ರಹ್ಮದೇವ ಹಾಗೂ ಮೇಘನಾದರಲ್ಲಿ ನಡೆದ ಮಾತುಗಳು ಎಂದಿನ ಬಳಕೆಯ ಮಾತುಗಳಾಗಿದ್ದು ಕೊಡುಕೊಳ್ಳುವಿಕೆಯಿಂದ ಕೂಡಿರುದಾಗಿವೆ. ಇಂದ್ರನ ಬಿಡುಗಡೆಗೆ ಬದಲಾಗಿ ನಿನಗೇನು ಬೇಕು ಹೇಳೆಂದು ಬ್ರಹ್ಮ ತಾನಾಗಿಯೇ ಮೇಘನಾದನನ್ನು ಕೇಳಿ ಅವನಿಗೆ ಅಂಥ ಆಯ್ಕೆಯನ್ನು ಒದಗಿಸಿದ್ದಾನೆ. ಆಗ ಮೇಘನಾದ ಪೂರ್ತಿ ಅಮರತ್ವ ತನಗೆ ಬೇಕೆನ್ನುತ್ತಾನೆ. ಆದರೆ ಭೂಮಿಯ ಮೇಲಿರುವ ಅದಾವ ಪ್ರಾಣಿಗೂ ಇಡಿಯಾದ ಅಮರತ್ವ ಸಾಧ್ಯವಿಲ್ಲೆಂಬುದು ತಿಳಿಯುತ್ತಲೇ ಮೇಘನಾದನು ಸೀಮಿತ ಸ್ವರೂಪದ ಅಮರತ್ವ ಹಾಗೂ ವಿಶಿಷ್ಟವಾದ ಸನ್ನಿವೇಶದಲ್ಲಿ ಸಾವನ್ನು ಕೇಳುವ ತನ್ನ ಇನ್ನೊಂದು ಬೇಡಿಕೆಯನ್ನು ಮುಂದಿರಿಸಿದನು. ಈ ರೀತಿಯಾಗಿ ಅವನು ಬ್ರಹ್ಮದೇವನನ್ನು ಇಕ್ಕಟ್ಟಿನಲ್ಲಿ ಸಿಲುಕಿಸಿ ತಾನು ಬಯಸಿದ ವರವನ್ನು ಅವನಿಂದ ಪಡೆದುಕೊಂಡನು.

ತಪಶ್ಚರ್ಯೆಯ ಮೂಲಕ ದೇವತೆಗಳನ್ನು ಪ್ರಸನ್ನಗೊಳಿಸಿ ವರ ಕೇಳುವ ಎಂದಿನ ಹಾದಿ ಮೇಘನಾದನಿಗೆ ರುಚಿಸದು. ತನ್ನ ಸಾಮರ್ಥ್ಯದಿಂದ ವರವನ್ನು ಪಡೆದೇನೆಂಬ ಜ್ವಾಜ್ವಲ್ಯವಾದ ಹಮ್ಮು ಆತನದು. ಇಲ್ಲಿ, 'ಮದಾ ಯತ್ತಂ ತು ಪೌರುಷಮ್' ಎಂದೆನ್ನುವ ಕರ್ಣನನ್ನು ನೆನಪಿಸಿಕೊಳ್ಳಬಹುದು.

ಉತ್ತರಕಾಂಡ / ೩೦

ಮೇಘನಾದನಿಗೆ 'ಇಂದ್ರಜಿತ'ನೆಂಬ ಹೆಸರು ಬಂದುದು ಹೇಗೆ, ಇಂದ್ರನ ಬಿಡುಗಡೆಗಾಗಿ ಬ್ರಹ್ಮದೇವನು ಆತನಿಗೆ ಅದಾವ ವರವನ್ನು ಕೊಡಮಾಡಿದನೆಂಬುದನ್ನು ಕುರಿತು ಅಗಸ್ತ್ಯ ಮುನಿಯು ಶ್ರೀರಾಮನಿಗೆ ಹೇಳುತ್ತಲಿದ್ದಾನೆ :

"ಇಂದ್ರನನ್ನು ಕಾಳಗದಲ್ಲಿ ಸೋಲಿಸಿ ಮೇಘನಾದನು ಅವನನ್ನು ಲಂಕೆಗೆ ಕರೆದೊಯ್ದನು. ಆಗ ದೇವತೆಗಳೆಲ್ಲ ಬ್ರಹ್ಮದೇವನ ಮುಂದಾಳುತನದಲ್ಲಿ ಲಂಕೆಗೆ ಬಂದರು. ರಾವಣ ತನ್ನ ಮಕ್ಕಳು ಹಾಗೂ ಸೋದರರನ್ನೊಡಗೂಡಿ ಇದ್ದನು. ಬ್ರಹ್ಮದೇವ ಅವರನ್ನೆಲ್ಲ ಕಂಡು ಮೆತ್ತನೆಯ ಮಾತುಗಳಲ್ಲಿ ರಾವಣನಿಗೆ ಹೀಗೆಂದನು : 'ವತ್ಸನಾದ ರಾವಣನೇ ! ನಿನ್ನ ಮಗನ ಶೌರ್ಯವನ್ನು ಕಾಳಗದಲ್ಲಿ ಕಂಡು ಸಂತುಷ್ಟನಾಗಿದ್ದೇನೆ. ಈತ ನಿನ್ನನ್ನು ಸರಿಗಟ್ಟಲಿದ್ದಾನೆ. ನಿನ್ನ ಬಲದಿಂದಲೇ ಮೂರು ಲೋಕಗಳನ್ನು ಗೆದ್ದುಕೊಂಡು ನೀನು ನಿನ್ನ ಪ್ರತಿಜ್ಞೆಯನ್ನು ಈಡೇರಿಸಿರುವೆ. ನಿನ್ನ ಮಕ್ಕಳನ್ನೊಳಗೊಂಡು ನಿಮ್ಮೆಲ್ಲರ ಮೇಲೂ ನಾನು ಪ್ರಸನ್ನನಾಗಿದ್ದೇನೆ.

ಅಯಂ ಚ ಪುತ್ರೋಽತಿಬಲಸ್ತವ ರಾವಣ ವೀರ್ಯವಾನ್ ।
ಜಗತೀಂದ್ರಜಿದಿತ್ಯೇವ ಪರಿಖ್ಯಾತೋ ಭವಿಷ್ಯತಿ ॥ ೫ ॥

"ಈ ನಿನ್ನ ವೀರ್ಯವಂತ, ಬಲು ಬಲಾಢ್ಯನಾದ ಮಗ ವಿಶ್ವದಲ್ಲೆಲ್ಲ 'ಇಂದ್ರಜಿತ'ನೆಂದು ಹೆಸರುವಾಸಿಯಾಗುವನು. ಈತನ ನೆರವಿನಿಂದಲೇ ರಾವಣನು ದೇವತೆಗಳನ್ನು ಮೆಟ್ಟಿಹಾಕಿದನು. ಅಂಥ ಈ ರಾಕ್ಷಸ ಅಜಂಕ್ಯನಾಗುವನು." ಇಷ್ಟು ಮಾತುಗಳನ್ನಾಡಿ ಅವನು ಮಹೇಂದ್ರನನ್ನು ಬಿಟ್ಟುಕೊಡುವಂತೆ ಮೇಘನಾದನನ್ನು ಕೇಳಿಕೊಂಡನು. ಅಲ್ಲದೆ, ಮಹೇಂದ್ರನ ಬಿಡುಗಡೆಗೆ ಬದಲಾಗಿ ಆತ ನಿರೀಕ್ಷಿಸುವುದೇನೆಂದು ಕೇಳಿದನು. ಮೇಘನಾದ ಬ್ರಹ್ಮದೇವನಿಗೆ ಹೀಗೆಂದನು :

ಅಮರತ್ವಮಹಂ ದೇವ ವೃಣೇ ಯದ್ಯೇಷ ಮುಚ್ಯತೇ ॥ ೮ ॥

"ಎಲೈ ದೇವನೇ ! ಇವನನ್ನು ಬಿಟ್ಟುಕೊಡಬೇಕೆಂದಿದ್ದರೆ ನಾನು ನಿನ್ನಿಂದ ಅಮರತ್ವದ ವರವನ್ನು ಕೇಳಿಯೇನು." ಅದಕ್ಕೆ ಬ್ರಹ್ಮದೇವನೆಂದುದು—

ನಾಸ್ತಿ ಸರ್ವಾಮರತ್ವಂ ಹಿ ಕಸ್ಯಚಿತ್ಪ್ರಾಣಿನೋ ಭುವಿ ॥ ೯ ॥

"ಭೂತಲದ ಮೇಲಿನ ಯಾವುದೇ ಪ್ರಾಣಿಗೆ (ಹಕ್ಕಿಗಳು, ಚತುಷ್ಪಾದಗಳು, ಹಾಗೂ ಬೇರೆ ಮಹಾತೇಜಸ್ವಿಗಳಾದ ಭೂತಗಳು) ಸಂಪೂರ್ಣವಾದ ಅಮರತ್ವ ದೊರಕದು." ಆಗ, ಬ್ರಹ್ಮದೇವನ ಮಾತಿಗೆ ಮೇಘನಾದ ಇಂತೆಂದನು —

ಶ್ರೂಯತಾಂ ಯಾ ಭವೇತ್ಸಿದ್ಧಿಃ ಶತಕ್ರತುವಿಮೋಕ್ಷಣೇ ॥ ೧೧ ॥
ಮಮೇಷ್ಟಂ ನಿತ್ಯಶೋ ಹವ್ಯೈರ್ಮಂತ್ರೈಃ ಸಂಪೂಜ್ಯ ಪಾವಕಮ್ ।
ಸಂಗ್ರಾಮಮವತರ್ತುಂ ಚ ಶತ್ರುನಿರ್ಜಯಕಾಂಕ್ಷಿಣಃ ॥ ೧೨ ॥
ಅಶ್ವಯುಕ್ತೋ ರಥೋ ಮಹ್ಯಮುತ್ತಿಷ್ಠೇತ್ತು ವಿಭಾವಸೋಃ ।
ತತ್ಸ್ಥಸ್ಯಾಮರತಾ ಸ್ಯಾನ್ಮೇ ಏಷ ಮೇ ನಿಶ್ಚಿತೋ ವರಃ ॥ ೧೩ ॥
ತಸ್ಮಿನ್ಯದ್ಯಸಮಾಪ್ತೇ ಚ ಜಪ್ಯಹೋಮೇ ವಿಭಾವಸೌ ।
ಯುಧ್ಯೇಯಂ ದೇವ ಸಂಗ್ರಾಮೇ ತದಾ ಮೇ ಸ್ಯಾದ್ವಿನಾಶನಮ್ ॥ ೧೪ ॥

"ಹೀಗಾಗಲು ಸಾಧ್ಯವಿಲ್ಲದಿದ್ದರೆ ಇಂದ್ರನ ಬಿಡುಗಡೆಗಾಗಿ ನನಗೆ ಬೇಕಿದ್ದ ಬೇರೆ ವರ ಯಾವುದೆಂಬುದನ್ನು ಹೇಳುತ್ತೇನೆ, ಕೇಳಿ. ನಾನಂತೂ ಹಗೆಗಳ ಸೋಲನ್ನು ಬಯಸುವವನು. ಕಾಳಗಕ್ಕೆ ಹೋಗುವ ಮುನ್ನ ದಿನಾಲು ಮಂತ್ರ, ಹವನದ್ರವ್ಯಗಳೊಂದಿಗೆ ಅಗ್ನಿಯನ್ನು ಪೂಜಿಸಲು ಇಷ್ಟಪಡುವವನು. ಆದುದರಿಂದ ಕಾಳಗಕ್ಕೆ ಹೋಗುವಾಗ ದಿನಾಲು ಕುದುರೆಗಳನ್ನು ಹೂಡಿದ ಅಗ್ನಿಯ ರಥ ನನಗಾಗಿ ಸಿದ್ಧವಾಗಿರತಕ್ಕದ್ದು, ರಥದಲ್ಲಿರುವಷ್ಟು ಕಾಲ ನಾನು ಅಮರನಾಗಿರತಕ್ಕದ್ದೆಂಬ ವರವನ್ನು ನನಗಾಗಿ ತೀರ್ಮಾನಿಸಿದ್ದೇನೆ. ಅಗ್ನಿಯನ್ನು ಕುರಿತಾದ ಜಪ ಹಾಗೂ ಹೋಮ ಪೂರ್ತಿಗೊಳ್ಳದೆ ದೇವ-ಸಂಗ್ರಾಮದಲ್ಲಿ ಪಾಲ್ಗೊಂಡೆನಾದರೆ ಆಗಬಹುದಾದ ನನ್ನ ನಾಶವನ್ನು ಒಪ್ಪಿಕೊಳ್ಳುತ್ತೇನೆ." ಮತ್ತೆ ಅವನು ಹೀಗೂ ಅಂದನು—

ಸರ್ವೋ ಹಿ ತಪಸಾ ದೇವ ವೃಣೋತ್ಯಮರತಾಂ ಪುಮಾನ್ ।
ವಿಕ್ರಮೇಣ ಮಯಾ ತ್ವೇತದಮರತ್ವಂ ಪ್ರವರ್ತಿತಮ್ ॥ ೧೫ ॥

"ಎಲೈ ದೇವನೇ ! ಯಾವ ಪುರುಷನೇ ಆಗಲಿ ತಪಸ್ಸಿನ ನೆರವಿನಿಂದ ಅಮರತ್ವಕ್ಕಾಗಿ ಕೇಳಿಕೊಳ್ಳುತ್ತಿರುತ್ತಾನೆ. ನಾನಾದರೋ ನನ್ನ ಪರಾಕ್ರಮದಿಂದ ಅಮರತ್ವವನ್ನು ಗಳಿಸಿಕೊಳ್ಳುತ್ತಿರುವೆ."

ಬ್ರಹ್ಮದೇವನು 'ತಥಾಸ್ತು' ಎಂದೆನ್ನುತ್ತಲೆ ಮೇಘನಾದನು ಇಂದ್ರನನ್ನು ಬಿಡುಗಡೆ ಮಾಡಿದನು. ದೇವತೆಗಳೆಲ್ಲ ಸ್ವರ್ಗಕ್ಕೆ ಹೊರಟುಹೋದರು.

ಯಾಚಿತವಾದುದು.

## ೫೩. ಬ್ರಹ್ಮದೇವ (?) > ಬೇರೆ ರಾಕ್ಷಸರು — ಯುದ್ಧಕಾಂಡ / ೬೧

ವಿಭೀಷಣನು ಶ್ರೀರಾಮನಿಗೆ ಕುಂಭಕರ್ಣನ ವಿಷಯವನ್ನು ಹೇಳುತ್ತಿದ್ದಾನೆ.

ವಾನರಸೇನೆಯು ಸುದೃಢಕಾಯನಾದ, ಮೇಘವರ್ಣದ ಕಾಂತಿಯುಳ್ಳ ಕುಂಭಕರ್ಣನನ್ನು ಹಾಗೂ ಆತನು ಧರಿಸಿದ ಸುವರ್ಣಾಲಂಕಾರಗಳನ್ನೂ ಕಿರಿಟವನ್ನೂ ಕಂಡು ಭಯಗೊಂಡಿತು. ಈತನು ಯಾರು ? ಎಂಬುದನ್ನು ಅರಿತುಕೊಳ್ಳಲು ಉತ್ಸುಕತೆ ಶ್ರೀರಾಮನಲ್ಲಿ ಹುಟ್ಟಿತು. ಆಗ ವಿಭೀಷಣನನ್ನು ಕೇಳಿದಾಗ ಆತನು ಇಂತೆಂದನು :

"ಇವನು ಯಮ ಮತ್ತು ಇಂದ್ರನನ್ನು ಯುದ್ಧದಲ್ಲಿ ಪರಾಭವಗೊಳಿಸಿದ ವಿಶ್ರವಸನ ಪ್ರಭಾವಶಾಲಿಯಾದ ಪುತ್ರ, ಕುಂಭಕರ್ಣನು ; ಘನತೆಯಲ್ಲಿ ಈತನನ್ನು ಮೀರಿಸಬಲ್ಲ ರಾಕ್ಷಸರಿಲ್ಲ. ಸಾವಿರಾರು ದೇವತೆಗಳನ್ನು, ದಾನವರನ್ನು, ಯಕ್ಷ, ಭುಜಂಗ, ರಾಕ್ಷಸ, ಗಂಧರ್ವ, ವಿದ್ಯಾಧರ, ಪನ್ನಗ ಇವರನ್ನು ಯುದ್ಧದಲ್ಲಿ ಥಳಿಸಿದ್ದಾನೆ. ಉಗ್ರವಾದ ಕಣ್ಣುಗಳುಳ್ಳ ಈತನು ಕೈಯಲ್ಲಿ ಶೂಲವನ್ನು ಹಿಡಿದುಕೊಂಡಿರುತ್ತಾನೆ. ಈ ಪರಿಯ ಬಲಾಢ್ಯ ಕುಂಭಕರ್ಣನನ್ನು ವಧಿಸುವದು ದೇವತೆಗಳಿಂದಲೂ ಸಾಧ್ಯವಾಗಿಲ್ಲ."

> ಪ್ರಕೃತ್ಯಾ ಹ್ಯೇಷ ತೇಜಸ್ವೀ ಕುಂಭಕರ್ಣೋ ಮಹಾಬಲಃ ।
> ಅನ್ಯೇಷಾಂ ರಾಕ್ಷಸೇಂದ್ರಾಣಾಂ ವರದಾನಕೃತಂ ಬಲಮ್ ॥ ೧೨ ॥ *

ಈ ಮಹಾವೀರನಾದ ಕುಂಭಕರ್ಣನು ಹುಟ್ಟಿನಿಂದಲೇ ರಾಕ್ಷಸಾಧಿಪತಿಗಳಿಗಿಂತ ಹೆಚ್ಚು ತೇಜಸ್ಸುಳ್ಳವನಾಗಿದ್ದಾನೆ ; ವರಗಳನ್ನು ಪಡೆದನಂತರ ಇನ್ನಷ್ಟು ಬಲಗೊಂಡಿದ್ದಾನೆ.

ಇವನಿಗೆ ವರ ಕೊಟ್ಟವರು ಯಾರು ? ವರಗಳ ಸ್ವರೂಪವೇನಿತ್ತು ಎಂಬುದು ಸ್ಪಷ್ಟವಿಲ್ಲ. ವರದಾನದ ಉಲ್ಲೇಖ ಮಾತ್ರ ಬಂದಿದೆ.

ಅನಿಶ್ಚಿತ.

## ೫೪. ಬ್ರಹ್ಮದೇವ > ಅತಿಕಾಯ (ಹಾಗೂ ಬೇರೆ ರಾಕ್ಷಸರು) ಯುದ್ಧಕಾಂಡ / ೬೯

ಕುಂಭಕರ್ಣನ ವಧೆಯಾದನಂತರ ರಾವಣನು ಶೋಕಾರ್ತನಾಗಿ ರೋದಿಸಹತ್ತಿದನು. ಆಗ 'ತ್ರಿಶಿರಾ' ಎಂಬಾತನು ಆತನನ್ನು ಸಂತೈಸಲು ಈ ರೀತಿ ನುಡಿದನು :

"ಹೇ ರಾಜನೇ, ನಿನ್ನಂಥ ಶೂರಪುರುಷರು ರೋದಿಸುವದು ಸರಿಯಲ್ಲ ; ನಿನ್ನ ಬಳಿ ಬ್ರಹ್ಮನಿಂದ ಕೊಡಲ್ಪಟ್ಟ ಶಕ್ತಿ, ಕವಚ, ಧನುಸ್ಸು, ಬಾಣ, ರಥ ಇವೆಲ್ಲ ಇವೆ. ಈ ಮೊದಲು ನೀನು ಅನೇಕ ಸಲ ದೇವ ದಾನವರನ್ನು ಈ ಅಸ್ತ್ರಗಳಿಂದ ಛಿನ್ನವಿಚ್ಛಿನ್ನಗೊಳಿಸಿರುವೆ. ಶ್ರೀರಾಮನಿಗೆ ತಕ್ಕ ಶಾಸ್ತಿಯನ್ನು ಮಾಡುವದು ನಿನ್ನ ಕರ್ತವ್ಯವಾಗಿದೆ" ಎಂದು ನುಡಿದು, ತ್ರಿಶಿರಾ ಈತನು "ನೀನು ಸುಮ್ಮನಿದ್ದು ನೋಡುತ್ತಿರು ; ಇಂದು ನನ್ನಿಂದ ಯುದ್ಧದಲ್ಲಿ ಶ್ರೀರಾಮನು ಹತನಾಗಿ ರಣರಂಗದಲ್ಲಿ ಬಿದ್ದಿರುವುದನ್ನು ನೀನು ನೋಡುವೆ" ಎಂಬ ಪ್ರತಿಜ್ಞೆಯನ್ನು ರಾವಣನೆದುರು ಮಾಡಿದನು.

ತ್ರಿಶಿರಾ ಈತನ ಪ್ರತಿಜ್ಞೆಯನ್ನು ಕೇಳಿ, ದೇವಾಂತಕ, ನರಾಂತಕ ಮತ್ತು ಅತಿಕಾಯರೆಂಬ ಮಹಾಶೂರರಾದ ರಾವಣನ ಪುತ್ರರು ಯುದ್ಧಕ್ಕೆ ಸಿದ್ಧರಾದರು. ಅವರೆಲ್ಲರೂ ಮಹಾಮಾಯಾವಿಗಳಾಗಿದ್ದು, ಯುದ್ಧದಲ್ಲಿ ಹಿಮ್ಮೆಟ್ಟದ ಕಡುಗಲಿಗಳಾಗಿದ್ದರು. ಅಂತರಿಕ್ಷದಲ್ಲಿ ಸಂಚರಿಸುವ ಬಲಾಢ್ಯರಾದ ದೇವತೆಗಳ ದರ್ಪವನ್ನು ಇಳಿಸಿದ ಕೀರ್ತಿಯನ್ನು ಹೊಂದಿದವರಾಗಿದ್ದರು.

> ದೇವೈರಪಿ ಸಗಂಧರ್ವೈಃ ಸಕಿನ್ನರಮಹೋರಗೈಃ ।
> ಸರ್ವೇಽಸ್ತ್ರವಿದುಷೋ ವೀರಾಃ ಸರ್ವೇ ಯುದ್ಧವಿಶಾರದಾಃ ।
> ಸರ್ವೇ ಪ್ರವರವಿಜ್ಞಾನಾಃ ಸರ್ವೇ ಲಬ್ಧವರಾಸ್ತಥಾ ॥ ೧೩ ॥

"ಈ ಮೂವರೂ ದೇವ, ಗಂಧರ್ವ, ಕಿನ್ನರ ಹಾಗೂ ಮಹೋರಗ ಇವರೊಡನೆ ನಡೆದ ಕಾಳಗದಲ್ಲಿ ಎಂದೂ ಪರಾಭವವನ್ನು ಪಡೆದಿರಲಿಲ್ಲವೆಂಬ ವಾರ್ತೆ ಎಲ್ಲರಿಗೂ ಗೊತ್ತಿತ್ತು. ಎಲ್ಲರೂ ಅಸ್ತ್ರಗಳನ್ನು ಬಲ್ಲವರಿದ್ದು ಯುದ್ಧನಿಪುಣರಿದ್ದರು. ಈ ಮೂವರೂ ಮಹಾಜ್ಞಾನಿಗಳಾಗಿದ್ದರು ; ಮತ್ತು ಎಲ್ಲರಿಗೂ ವರಗಳು ದೊರೆತಿದ್ದವು." "

ಈ ವರಗಳನ್ನು ಯಾರು ಕೊಟ್ಟರು ? ಯಾಕೆ ಕೊಟ್ಟರು ? ಅವುಗಳ ಸ್ವರೂಪ ಯಾವುದು ? ಎಂಬ ಯಾವ ಸಂಗತಿಯೂ ಸ್ಪಷ್ಟವಿಲ್ಲ. ಕೇವಲ 'ವರಗಳು ದೊರೆತಿದ್ದವು' ಎಂಬ ಉಲ್ಲೇಖ ಮಾತ್ರ ಇದೆ.

ಅನಿಶ್ಚಿತ.

---

* ಈ ಶ್ಲೋಕದ ಅರ್ಥವನ್ನು ಕುರಿತು ತುಂಬ ಮತಭಿನ್ನತೆ ಇರುವುದು ಕಂಡುಬಂದಿದೆ.

೧. 'ಮಹಾಬಲಾಢ್ಯನಾದ ಈ ಕುಂಭಕರ್ಣ ಸ್ವಭಾವದಿಂದಲೇ ಬೇರೆ ರಾಕ್ಷಸಾಧಿಪತಿಗಳಿಗಿಂತ ಹೆಚ್ಚು ತೇಜಸ್ವಿಯಾದವನು. ಈತನ ಬಲ ವರದಾನದಿಂದಾಗಿ ಪ್ರಾಪ್ತವಾದುದು.' —ಚಿ! ಕಾಶೀನಾಥ ಶಾಸ್ತ್ರೀ ಲೇಲೇ

— ಈ ಅರ್ಥವನ್ನು ಒಪ್ಪಿಕೊಳ್ಳುವುದಾದರೆ ಕುಂಭಕರ್ಣನಿಗೆ ವರ ದೊರೆತಿದ್ದು, ಸ್ವಾಭಾವಿಕವಾಗಿಯೇ ಆತನಲ್ಲಿದ್ದ ಬಲ ಈ ವರದಿಂದಾಗಿ ಇನ್ನಷ್ಟು ಹೆಚ್ಚಿತು, ಎಂದಾಗುತ್ತದೆ.

೨. 'ಕುಮ್ಭಕರ್ಣ ಸ್ವಭಾವಸೇ ತೇಜಸ್ವೀ ಔರ್ ಮಹಾಬಲವಾನ್ ಹೈ. ಅನ್ಯ ರಾಕ್ಷಸಪತಿಯೋಂಕೇ ಪಾಸ್ ಜೋ ಬಲ್ ಹೈ ವಹ ವರದಾನ್ ಸೇ ಪ್ರಾಪ್ತ್ ಹುಆ ಹೈ.' —ಗೀತಾ ಪ್ರೆಸ್, ಹಿಂದಿಯ ಅನುವಾದ.

೩. ಡಾ! ಪ್ರ. ನ. ಜೋಶಿಯವರು ಹಿಂದಿಯಿಂದ ಇದನ್ನೇ ಮರಾಠಿಗೆ ಅನುವಾದಿಸಿದ್ದಾರೆ. ಅಲ್ಲದೆ 'ಕುಂಭಕರ್ಣನದು ಹಾಗಲ್ಲ' ಎಂದು ಸಂಸ್ಕೃತ ಶ್ಲೋಕದ ಆಧಾರವಿಲ್ಲದ ಸಂಗತಿಯನ್ನು ಸೇರ್ಪಡಿಸಿದ್ದಾರೆ.

— ಹಿಂದಿಯ ಹಾಗೂ ಡಾ! ಜೋಶಿಯವರ ಅನುವಾದಗಳಿಂದ ತಿಳಿದುಬರುವ ಸಂಗತಿಯೆಂದರೆ ವರ ದೊರೆತುದು ಕುಂಭಕರ್ಣನಿಗಲ್ಲ, ಬೇರೆ ರಾಕ್ಷಸಾಧಿಪತಿಗಳಿಗೆ, ಎನ್ನುವುದು.

**ಯುದ್ಧಕಾಂಡ / ೭೧**

ರಣಭೂಮಿಯಲ್ಲಿ ವಾಲೀಪುತ್ರನಾದ ಅಂಗದನು ನರಾಂತಕನನ್ನು ಮತ್ತು ಹನುಮಂತನು ದೇವಾಂತಕನನ್ನು ವಧಿಸಿದರು. ತನ್ನ ಪ್ರಚಂಡ ಸೈನ್ಯದ ದುರಂತವನ್ನು ಕಂಡು, ಇಂದ್ರಸಮರಾದ ಬಂಧುಬಾಂಧವರ ವಧೆಯಾದುದನ್ನು ಕಂಡು ಅತಿಕಾಯನು ಬಹಳೇ ರೋಷಗೊಂಡನು.

ಚುಕೋಪ ಚ ಮಹಾತೇಜಾ ಬ್ರಹ್ಮದತ್ತವರೋ ಯುಧಿ ।
ಅತಿಕಾಯೋಽದ್ರಿಸಂಕಾಶೋ ದೇವದಾನವದರ್ಪಹಾ ॥ ೩ ॥

ಈ ಅತಿಕಾಯನು ಬ್ರಹ್ಮದೇವನಿಂದ ವರವನ್ನು ಪಡೆದಿದ್ದನು. ಪರ್ವತದಷ್ಟು ವಿಶಾಲ ಶರೀರವುಳ್ಳವನಾಗಿದ್ದ ಆತನು ದೇವದಾನವರ ಗರ್ವವನ್ನು ಭಂಗಗೊಳಿಸುವವನಾಗಿದ್ದನು.

ಇಲ್ಲಿಯೂ ಬ್ರಹ್ಮದೇವನು ಅತಿಕಾಯನಿಗೆ ಯಾವ ಬಗೆಯ ವರವನ್ನು ಕೊಟ್ಟನೆಂಬುದರ ಮಾಹಿತಿ ಇಲ್ಲ. ವರವನ್ನು ಕೊಟ್ಟ ಉಲ್ಲೇಖ ಮಾತ್ರ ಬಂದಿದೆ.

ಈ ಅತಿಕಾಯನನ್ನು ಕಂಡ ಕ್ಷಣವೇ ವಾನರರು ಹೆದರಿಕೊಂಡರು ; ಅವರ ಜಂಘಾಬಲವೇ ಉಡುಗಿತು. ಅವರು ಶ್ರೀರಾಮನಿಗೆ ಶರಣುಹೋದರು. ಈ ಅತಿಕಾಯನನ್ನು ಕಂಡ ಶ್ರೀರಾಮನಿಗೂ ವಿಸ್ಮಯವೆನಿಸಿತು. ಶ್ರೀರಾಮನು ಈತನ ಬಗ್ಗೆ ವಿಭೀಷಣನನ್ನು ಕೇಳಿದನು. ಆಗ ವಿಭೀಷಣನು : "ಈತನು ಶಕ್ತಿಬಲದಲ್ಲಿ ರಾವಣನಿಗೆ ಸರಿಸಮಾನನಾದ 'ಅತಿಕಾಯ' ಹೆಸರಿನ ಅವನ ಪುತ್ರನಾಗಿದ್ದಾನೆ. ಈತನು ಅಸ್ತ್ರಪಾರಂಗತರಲ್ಲಿ ಶ್ರೇಷ್ಠನಾಗಿದ್ದಾನೆ. ಶಕ್ತಿಬಲದಲ್ಲಿ ಖ್ಯಾತನಿದ್ದಾನೆ. ಈತನು ಯುದ್ಧನಿಪುಣನಿದ್ದಾನೆ.

ಏತೇನಾರಾಧಿತೋ ಬ್ರಹ್ಮಾ ತಪಸಾ ಭಾವಿತಾತ್ಮನಾ ।
ಅಸ್ತ್ರಾಣಿ ಚಾಪ್ಯವಾಪ್ತಾನಿ ರಿಪವಶ್ಚ ಪರಾಜಿತಾಃ ॥ ೩೧ ॥
ಸುರಾಸುರೈರವಧ್ಯತ್ವಂ ದತ್ತಮಸ್ಮೈ ಸ್ವಯಂಭುವಾ ।
ಏತಚ್ಚ ಕವಚಂ ದಿವ್ಯಂ ರಥಶ್ಚ ರವಿಭಾಸ್ವರಃ ॥ ೩೨ ॥

"ತಪಃಪ್ರಭಾವದಿಂದ ಅಂತಃಕರಣವನ್ನು ನಿರ್ಮಲಗೊಳಿಸಿಕೊಂಡ ಈ ರಾವಣಪುತ್ರನು, ಬ್ರಹ್ಮದೇವನನ್ನು ಆರಾಧಿಸಿ, ಅನೇಕ ಅಸ್ತ್ರಗಳನ್ನು ಪಡೆದಿದ್ದಾನೆ ; ಮತ್ತು ಅನೇಕ ಶತ್ರುಗಳನ್ನು ಪರಾಜಯಗೊಳಿಸಿದ್ದಾನೆ. ಬ್ರಹ್ಮದೇವನು 'ನಿನ್ನನ್ನು ವಧಿಸುವದು ದೇವದೈತ್ಯರಿಂದಾಗದು' ಎಂಬ ವರವನ್ನು ಈತನಿಗೆ ಕೊಟ್ಟಿದ್ದಾನೆ. ದಿವ್ಯಕವಚವನ್ನೂ ಸೂರ್ಯನಂತೆ ತೇಜಸ್ಸುಳ್ಳ ರಥವನ್ನೂ ಕೊಟ್ಟಿದ್ದಾನೆ" ಎಂದನು.

ಲಕ್ಷ್ಮಣ ಮತ್ತು ಅತಿಕಾಯ ಇವರ ಕಾಳಗದಲ್ಲಿ ಲಕ್ಷ್ಮಣನ ಬಾಣಗಳ ಸುರಿಮಳೆಯಿಂದ ಅತಿಕಾಯನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಆಗ ವಾಯುವು ಲಕ್ಷ್ಮಣನಿಗೆ ಇಂತೆಂದನು :

ಬ್ರಹ್ಮದತ್ತವರೋ ಹ್ಯೇಷ ಅವಧ್ಯಕವಚಾವೃತಃ ।
ಬ್ರಾಹ್ಮೇಣಾಸ್ತ್ರೇಣ ಭಿಂಧ್ಯೇನಮೇಷ ವಧ್ಯೋ ಹಿ ನಾನ್ಯಥಾ ॥ ೧೦೨ ॥
ಅವಧ್ಯ ಏಷ ಹ್ಯನ್ಯೇಷಾಮಸ್ತ್ರಾಣಾಂ ಕವಚೀ ಬಲೀ ॥ ೧೦೩ ॥

"ಅಭೇದ್ಯವಾದ ಕವಚವನ್ನು ತೊಟ್ಟಿರುವ ಈ ಅತಿಕಾಯನು ಬ್ರಹ್ಮದೇವನಿಂದ ವರವನ್ನು ಪಡೆದುಕೊಂಡಿದ್ದಾನೆ. ಅದಕ್ಕಾಗಿ ನೀನು ಬ್ರಹ್ಮಾಸ್ತ್ರದಿಂದ ಅವನನ್ನು ವಧಿಸು ಇನ್ನು ಬೇರೆ ಅಸ್ತ್ರಗಳಿಂದ ಈತನ ವಧೆಯಾಗುವಂತಿಲ್ಲ. ಕವಚವನ್ನು ಧರಿಸಿದ ಈ ಬಲಾಢ್ಯನಾದ ಅತಿಕಾಯನು ಬೇರೆ ಅಸ್ತ್ರಗಳಿಗೆ ಅವಧ್ಯನು."

ಲಕ್ಷ್ಮಣನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿದ ಬಾಣವನ್ನು ಅತಿಕಾಯನ ಮೇಲೆ ಬಿಟ್ಟು ಆತನನ್ನು ವಧಿಸಿದನು.

ಇದು ಯಾಚಿತ ವರವಿದ್ದು ಆತನಿಗೆ ದೊರೆತ ದಿವ್ಯಕವಚ ಮತ್ತು ತೇಜಸ್ಸುಳ್ಳ ರಥ ಇವು ಅನುಗ್ರಹ ರೂಪವಾಗಿವೆ.

ಯಾಚಿತ.

ಅನುಗ್ರಹ.

## ೫೫. ಇಂದ್ರ > ಶ್ರೀರಾಮ

ಯುದ್ಧಕಾಂಡ / ೧೦೨

ಶ್ರೀರಾಮರಾವಣರ ಯುದ್ಧಪ್ರಸಂಗದಲ್ಲಿ ರಾವಣನು ರಥಾರೂಢನಾಗಿದ್ದನು. ಶ್ರೀರಾಮನು ಭೂಮಿಯ ಮೇಲೆ ನಿಂತು ರಾವಣನತ್ತ ಬಾಣಗಳನ್ನು ಬಿಡುತ್ತಿದ್ದನು. ದೇವ, ಗಂಧರ್ವ, ಕಿನ್ನರರು ಇದನ್ನು ಅವಲೋಕಿಸಿ ಇಂದ್ರನಿಗೆ : "ಭೂಮಿಯ ಮೇಲೆ ನಿಂತು ಯುದ್ಧಮಾಡುವ ಶ್ರೀರಾಮ ಮತ್ತು ರಥಾರೂಢನಾಗಿದ್ದ ರಾಕ್ಷಸ ಇವರಲ್ಲಿಯ ಯುದ್ಧವು ಸರಿಸಮಾನವಲ್ಲ" ಎಂದರು. ಆಗ ಇಂದ್ರನು ತನ್ನ ಸಾರಥಿಯಾದ 'ಮಾತಲಿ'ಗೆ "ನನ್ನ ರಥವನ್ನು ತೆಗೆದುಕೊಂಡು ಭೂಮಿಯ ಮೇಲೆ ರಘುವಂಶದ ಶ್ರೇಷ್ಠ ಶ್ರೀರಾಮನಿದ್ದಲ್ಲಿಗೆ ಕೂಡಲೇ ನೀನು ಹೋಗು ! ಆತನನ್ನು ಬರಮಾಡಿಕೊಂಡು ದೇವತೆಗಳ ಹಿತವನ್ನು ಸಾಧಿಸು !" ಎಂದನು.

'ಮಾತಲಿ' ಸಾರಥಿಯು ಇಂದ್ರನ ಸುಸಜ್ಜಿತ ವಿಜಯಶಾಲಿಯಾದ ರಥವನ್ನು ರಣರಂಗಕ್ಕೆ ತಂದು ಶ್ರೀರಾಮನಿಗೆ ಕೈಗಳನ್ನು ಮುಗಿದು ಇಂತೆಂದನು :

ಸಹಸ್ರಾಕ್ಷೇಣ ಕಾಕುತ್ಸ್ಥ ರಥೋಽಯಂ ವಿಜಯಾಯ ತೇ ।
ದತ್ತಸ್ತವ ಮಹಾಸತ್ತ್ವ ಶ್ರೀಮಂಶತ್ರುನಿಬರ್ಹಣ ॥ ೧೪ ॥
ಇದಮೈಂದ್ರಂ ಮಹಚ್ಚಾಪಂ ಕವಚಂ ಚಾಗ್ನಿಸಂನಿಭಮ್ ।
ಶರಾಶ್ಚಾದಿತ್ಯಸಂಕಾಶಾಃ ಶಕ್ತಿಶ್ಚ ವಿಮಲಾ ಶಿವಾ ॥ ೧೫ ॥

"ಹೇ, ಮಹಾಸತ್ವಶಾಲಿಯೇ, ಕಾಕುತ್ಸ್ಥಕುಲೋತ್ಪನ್ನನೇ, ಶತ್ರುಸಂಹಾರಕನೇ, ಇಂದ್ರನು ನಿನಗೆ ಜಯವಾಗಲಿ ಎಂದು ಈ ರಥವನ್ನು ಕಳುಹಿದ್ದಾನೆ. ಈ ಪ್ರಚಂಡ ಧನುಸ್ಸನ್ನು, ಅಗ್ನಿಯಂತೆ ಹೊಳೆಯುತ್ತಿರುವ ಕವಚವನ್ನು, ಸೂರ್ಯಕಿರಣಗಳಂತೆ ತೇಜಸ್ಸುಳ್ಳ ಬಾಣಗಳನ್ನು ಮತ್ತು ಶುಭಕಾರಕವಾದ ನಿರ್ಮಲಶಕ್ತಿಯನ್ನು ನಿನಗಾಗಿ ಕಳುಹಿದ್ದಾನೆ. ನೀನು ಈ ರಥವನ್ನೇರು ! ನಾನು ನಿನ್ನ ಸಾರಥಿಯಾಗುತ್ತೇನೆ. ನೀನು ಈ ರಾಕ್ಷಸನಾದ ರಾವಣನನ್ನು ವಧಿಸು !"

ಶ್ರೀರಾಮನು ಇಂದ್ರನಿಂದ ದೊರೆತ ಎಲ್ಲ ಸಾಮಗ್ರಿಗಳನ್ನು ಸ್ವೀಕರಿಸಿ ರಥಾರೂಢನಾದನು.

ಇದಕ್ಕೆ ವರವೆನ್ನಬೇಕೋ ? ಅಥವಾ ಯುದ್ಧಕ್ಕಾಗಿ ದೊರೆತ ಸಹಾಯವೆನ್ನಬಹುದೋ ? ವರವಿದ್ದರೆ 'ಅಯಾಚಿತ'ವೆಂದೆನ್ನಬೇಕಾಗುತ್ತದೆ. ರಥ, ಧನುಸ್ಸು, ಕವಚ, ಬಾಣ ಮತ್ತು ಶಕ್ತಿ ಇವೆಲ್ಲವೂ ಅನುಗ್ರಹ ರೂಪವಾಗಿವೆ.

ಅಯಾಚಿತ.

ಅನುಗ್ರಹ.

ಯುದ್ಧಕಾಂಡ / ೧೨೦

ರಾವಣನ ವಧೆಯಾದನಂತರ ಮತ್ತು ಸೀತೆಯು ಅಗ್ನಿದಿವ್ಯವನ್ನು ಮಾಡಿದ ನಂತರ ಸಂತೋಷಗೊಂಡ ಇಂದ್ರನು ಶ್ರೀರಾಮನಿಗೆ ಆತನ ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವ ವಚನವನ್ನು ಕೊಟ್ಟು, ವರವನ್ನು ಬೇಡಲು ಹೇಳಿದನು. ಆಗ ಶ್ರೀರಾಮನು ಆನಂದದಿಂದ ಹೀಗೆಂದನು :

ಯದಿ ಪ್ರೀತಿಃ ಸಮುತ್ಪನ್ನಾ ಮಯಿ ತೇ ವಿಬುಧೇಶ್ವರ ।
ವಕ್ಷ್ಯಾಮಿ ಕುರು ಮೇ ಸತ್ಯಂ ವಚನಂ ವದತಾಂ ವರ ॥ ೪ ॥
ಮಮ ಹೇತೋಃ ಪರಾಕ್ರಾಂತಾ ಯೇ ಗತಾ ಯಮಸಾದನಮ್ ।
ತೇ ಸರ್ವೇ ಜೀವಿತಂ ಪ್ರಾಪ್ಯ ಸಮುತ್ತಿಷ್ಠಂತು ವಾನರಾಃ ॥ ೫ ॥
ಮತ್ಕೃತೇ ವಿಪ್ರಯುಕ್ತಾ ಯೇ ಪುತ್ರೈರ್ದಾರೈಶ್ಚ ವಾನರಾಃ ।
ತಾನ್ಪ್ರೀತಮನಸಃ ಸರ್ವಾನ್ದ್ರಷ್ಟುಮಿಚ್ಛಾಮಿ ಮಾನದ ॥ ೬ ॥
ವಿಕ್ರಾಂತಾಶ್ಚಾಪಿ ಶೂರಾಶ್ಚ ನ ಮೃತ್ಯುಂ ಗಣಯಂತಿ ಚ ।
ಕೃತಯತ್ನಾ ವಿಪನ್ನಾಶ್ಚ ಜೀವಯೈತಾನ್ಪುರಂದರ ॥ ೭ ॥
ಮತ್ಪ್ರಿಯೇಷ್ವಭಿರಕ್ತಾಶ್ಚ ನ ಮೃತ್ಯುಂ ಗಣಯಂತಿ ಯೇ ।
ತ್ವತ್ಪ್ರಸಾದಾತ್ಸಮೇಯುಸ್ತೇ ವರಮೇತಮಹಂ ವೃಣೇ ॥ ೮ ॥

ನೀರುಜೋ ನಿರ್ವ್ರಣಾಂಶ್ಚೈವ ಸಂಪನ್ನಬಲಪೌರುಷಾನ್ ।
ಗೋಲಾಂಗೂಲಾಂಸ್ತಥರ್ಕ್ಷಾಂಶ್ಚ ದ್ರಷ್ಟುಮಿಚ್ಛಾಮಿ ಮಾನದ ॥ ೯ ॥
ಅಕಾಲೇ ಚಾಪಿ ಪುಷ್ಪಾಣಿ ಮೂಲಾನಿ ಚ ಫಲಾನಿ ಚ ।
ನದ್ಯಶ್ಚ ವಿಮಲಾಸ್ತತ್ರ ತಿಷ್ಠೇಯುರ್ಯತ್ರ ವಾನರಾಃ ॥ ೧೦ ॥

"ಹೇ ದೇವತೆಗಳ ರಾಜನಾದ ಇಂದ್ರನೇ, ನೀನು ನಿಜವಾಗಿ ನನ್ನ ಮೇಲೆ ಪ್ರಸನ್ನಗೊಂಡಿದ್ದರೆ ನನ್ನ ಕೇಳಿಕೆಯನ್ನು ನಿಜಗೊಳಿಸಬೇಕು ! ನನಗಾಗಿ ಯುದ್ಧದಲ್ಲಿ ಪರಾಕ್ರಮವನ್ನು ಮಾಡಿ ಮಡಿದ ವಾನರರೆಲ್ಲರೂ ಪುನಃ ಜೀವಿತರಾಗಲಿ. ಹೇ ಮಾನ್ಯವರನೇ, ನನಗಾಗಿ ಯಾವ ವಾನರರು ತಮ್ಮ ಹೆಂಡತಿಮಕ್ಕಳನ್ನು ಅಗಲಿರುವರೋ ಅವರೆಲ್ಲರೂ ಪ್ರಸನ್ನಚಿತ್ತರಾಗಬೇಕೆಂಬ ಇಚ್ಛೆ ನನ್ನದಾಗಿದೆ. ಹೇ ಪುರಂದರನೇ, ಪರಾಕ್ರಮಿಗಳಾದ, ವೀರರಾದ, ಮೃತ್ಯುವಿನ ಭಯವನ್ನರಿಯದ ಈ ವಾನರರು ಯುದ್ಧದಲ್ಲಿ ಶ್ರಮಿಸಿ ಮರಣವನ್ನಪ್ಪಿದ್ದಾರೆ ; ಇವರನ್ನು ನೀನು ಸಜೀವಗೊಳಿಸು ! ನನಗೆ ಇಷ್ಟವಿದ್ದುದನ್ನು ಮಾಡಲು ಆತುರರಾಗಿದ್ದ ಮತ್ತು ಮರಣವನ್ನಪ್ಪಿದ ಈ ವಾನರರು ನಿನ್ನ ಕೃಪೆಯಿಂದ ಸ್ವಬಾಂಧವರನ್ನು ಕಾಣುವಂತೆ ಆಗಲಿ. ಈ ಬಗೆಯ ವರವನ್ನು ಬೇಡುತ್ತಿದ್ದೇನೆ. ಹೇ ಸನ್ಮಾನ್ಯನೇ, ಗೋಲಾಂಗೂಲ ಮತ್ತು ಋಕ್ಷ ಇವರಿಗೆ ಯಾವ ಪೀಡೆಯೂ ಆಗಕೂಡದು. ಇವರಿಗೆ ಯಾವ ವ್ರಣಗಳೂ ಆಗಬಾರದು. ಇವರೆಲ್ಲರೂ ಬಲ ಮತ್ತು ಪರಾಕ್ರಮಗಳಿಂದ ಸಂಪನ್ನರಾಗಿರುವದನ್ನು ಕಾಣಬೇಕೆಂಬ ಆಸೆ ನನ್ನದಿದೆ. ವಾನರರು ವಾಸವಾಗಿದ್ದ ಪ್ರದೇಶದಲ್ಲಿ ಸದಾವಕಾಲದಲ್ಲಿ ಹೂ, ಹಣ್ಣು, ಕಂದಮೂಲಗಳು ವಿಪುಲವಾಗಿರಬೇಕು. ನಿರ್ಮಲ ಜಲದ ನದಿಗಳು ಹರಿಯುತ್ತಿರಬೇಕು."

ಶ್ರೀರಾಮನ ಮಾತು ಕೇಳಿ ಇಂದ್ರ ಹೀಗೆಂದನು :

ಮಹಾನಯಂ ವರಸ್ತಾತ ಯಸ್ತ್ವಯೋಕ್ತೋ ರಘೂತ್ತಮ ।
ದ್ವಿರ್ಮಯಾ ನೋಕ್ತಪೂರ್ವಂ ಚ ತಸ್ಮಾದೇತದ್ ಭವಿಷ್ಯತಿ ॥ ೧೨ ॥

"ರಘೋತ್ತಮನೇ, ನೀನು ಇಚ್ಛಿಸುವ ವರವು ಬಹು ದೊಡ್ಡದಾಗಿದೆ. ಹೀಗಿದ್ದರೂ ನಾನು ಮಾತು ಕೊಟ್ಟಿರುವದರಿಂದ ಅದನ್ನು ನಿರಾಕರಿಸಲಾರೆನು. ನಿನ್ನ ಇಷ್ಟಾರ್ಥವು ಪೂರ್ತಿಗೊಳ್ಳುವುದು" ಎಂದನು.

ಸಮುತ್ತಿಷ್ಠನ್ತು ತೇ ಸರ್ವೇ ಹತಾ ಯೇ ಯುದ್ಧೇ ರಾಕ್ಷಸೈಃ ।
ಋಕ್ಷಾಶ್ಚ ಸಹ ಗೋಪುಚ್ಛೈರ್ನಿಕೃತ್ತಾಸತವಾಹವಃ ॥ ೧೩ ॥
ನೀರುಜೋ ನಿರ್ವ್ರಣಾಶ್ಚೈವ ಸಮ್ಪನ್ನಬಲಪೌರುಷಾಃ ।
ಸಮುತ್ಥಾಸ್ಯನ್ತಿ ಹರಯಃ ಸುಪ್ತಾ ನಿದ್ರಾಕ್ಷಯೇ ಯಥಾ ॥ ೧೪ ॥

"ಯುದ್ಧದಲ್ಲಿ ಕೊಲ್ಲಲ್ಪಟ್ಟ, ರಾಕ್ಷಸರಿಂದ ತಲೆ, ತೋಳು ಮುಂತಾದವುಗಳಿಂದ ಕತ್ತರಿಸಲ್ಪಟ್ಟ ವಾನರರು, ಕರಡಿಗಳು ಹಾಗೂ ಮುಶಾ ಮಂಗಗಳೆಲ್ಲ ಜೀವ ತಳೆದಾರು. ನಿದ್ರೆಯಿಂದ ಎಚ್ಚತ್ತವರಂತೆ ಅವರೆಲ್ಲ ಆರೋಗ್ಯವಂತರೂ, ಗಾಯಗಳಿಲ್ಲದವರೂ ಅಲ್ಲದೆ ಬಲಸಂಪನ್ನರಾಗಿಯೂ ಎದ್ದು ಕುಳಿತಾರು."

"ವರಮೇತಮಹಂ ವೃಣೇ" — "ಈ ವರವನ್ನು ನಾನು ಬೇಡುತ್ತಿದ್ದೇನೆ" ಎಂದು ಶ್ರೀರಾಮನು ನುಡಿದಿದ್ದರೂ ಈ ವರವು 'ಅಯಾಚಿತ'ವಾಗಿದೆ. ಇಂದ್ರನೇ ಶ್ರೀರಾಮನಿಗೆ ಈ ವರವನ್ನು ಬೇಡಲು ಹೇಳಿದ್ದನು.

ಅಯಾಚಿತ.

## ೫೬. ಭರದ್ವಾಜ > ಶ್ರೀರಾಮ ಯುದ್ಧಕಾಂಡ / ೧೨೪

ವನವಾಸದ ಹದಿನಾಲ್ಕು ವರ್ಷಗಳನ್ನು ಕಳೆದನಂತರ ಶ್ರೀರಾಮನು ಭರದ್ವಾಜ ಋಷಿಯ ಆಶ್ರಮಕ್ಕೆ ಬಂದು ಅವನನ್ನು ವಂದಿಸಿದನು. ಅಯೋಧ್ಯೆಯ ಕ್ಷೇಮಕುಶಲವನ್ನು ವಿಚಾರಿಸಿಕೊಂಡನು. ಮುನಿಯು ಸಂತೋಷದಿಂದ ಎಲ್ಲ ವೃತ್ತಾಂತವನ್ನೂ ಚಿತ್ರಿಸಿ ಹೇಳಿದನು. ಆಜ್ಞಾಧಾರಿಯಾದ ಭರತನು ಶ್ರೀರಾಮನ ಪಾದುಕೆಗಳನ್ನು ಪೂಜಿಸುತ್ತ, ಅಯೋಧ್ಯೆಯನ್ನು ಸರಿಯಾಗಿ ಪರಿಪಾಲಿಸುತ್ತಿದ್ದಾನೆಂದು ತಿಳಿಸಿದನು. ತಪಸ್ಸಿನ ಸಾಮರ್ಥ್ಯದಿಂದ ವನವಾಸದಲ್ಲಿ ನಡೆದ ಎಲ್ಲ ಸಂಗತಿಗಳನ್ನು ಭರದ್ವಾಜ ಮುನಿಯು ಅರಿತಿದ್ದನು. ದೇವತೆ

ಗಳಿಂದ ಶ್ರೀರಾಮನಿಗೆ ವರಗಳು ದೊರೆತ ಸಂಗತಿಯು ಜ್ಞಾತವಿತ್ತು. ಶ್ರೀರಾಮನ ಪರಾಕ್ರಮ ಮತ್ತು ಚಾರಿತ್ರ್ಯಪೂರ್ಣ ವರ್ತನೆಯಿಂದ ಸಂತೋಷಗೊಂಡ ಮುನಿಯು ಇಂತೆಂದನು :

ಅಹಮಪ್ಯತ್ರ ತೇ ದದ್ಮಿ ವರಂ ಶಸ್ತ್ರಭೃತಾಂ ವರ । ೧೭

"ಹೇ ಶಸ್ತ್ರಧಾರಿಗಳಲ್ಲಿಯ ಶ್ರೇಷ್ಠನೇ, ನಾನು ಸಹ ನಿನಗೆ ವರವನ್ನು ಕೊಡುತ್ತೇನೆ. ನೀನು ಅದನ್ನು ಸ್ವೀಕರಿಸಿ ಅನಂತರ ಅಯೋಧ್ಯೆಯತ್ತ ಹೋಗು !"

ಶ್ರೀರಾಮನು ಭರದ್ವಾಜ ಮುನಿಯ ಹೇಳಿಕೆಯನ್ನು ತಲೆಬಾಗಿ ಮನ್ನಿಸಿ ಮುದದಿಂದ ವರವನ್ನು ಬೇಡಿಕೊಂಡನು :

ಅಕಾಲಫಲಿನೋ ವೃಕ್ಷಾಃ ಸರ್ವೇ ಚಾಪಿ ಮಧುಸ್ರವಾಃ ।<br>
ಫಲಾನ್ಯಮೃತಗಂಧೀನಿ ಬಹೂನಿ ವಿವಿಧಾನಿ ಚ ॥ ೧೯ ॥<br>
ಭವಂತು ಮಾರ್ಗೇ ಭಗವನ್ನಯೋಧ್ಯಾಂ ಪ್ರತಿಗಚ್ಛತಃ ॥ ೨೦ ॥

"ಹೇ ಭಗವನ್, ಅಯೋಧ್ಯೆಯ ದಾರಿಯ ಇಕ್ಕೆಲಗಳಲ್ಲಿ ಎಲ್ಲ ಗಿಡಮರಗಳು ಯೋಗ್ಯ ಕಾಲವಿರದಿದ್ದರೂ ಜೇನಿನಷ್ಟು ಸವಿಯಾದ ಮಧುರಫಲಗಳಿಂದ ತುಂಬಿರಲಿ ; ಅಮೃತದಂಥ ರುಚಿಯಾದ ಸುವಾಸನಾಯುಕ್ತ ಫಲಗಳು ಸದಾಕಾಲವೂ ಲಭಿಸಲಿ !"

ಶ್ರೀರಾಮನ ಇಚ್ಛೆಯನ್ನರಿತು ಮುನಿಯು 'ತಥಾಸ್ತು' ಎಂದನು. ಎಲ್ಲ ಮರಗಿಡಗಳೂ ಚಿಗುರು, ಹೂ-ಹಣ್ಣುಗಳ ಭಾರದಿಂದ ತಲೆಬಾಗುವಂತಾದವು.

ಅಯಾಚಿತ.

### ೫೭. ದೇವರ್ಷಿಗಳು, ಋಷಿಗಳು > ಶ್ರೀರಾಮ ಯುದ್ಧಕಾಂಡ / ೧೨೬

ಹನುಮಂತನು ಭರತನಿಗೆ ಶ್ರೀರಾಮ, ಲಕ್ಷ್ಮಣ, ಸೀತೆಯರ ವನವಾಸದ ವೃತ್ತಾಂತವನ್ನು ಹೇಳಿದನು. ಅದರಲ್ಲಿ ದೇವರ್ಷಿಗಳು ಹಾಗೂ ಬೇರೆ ಋಷಿಗಳು ಇವರಿಗೆ ಇತ್ತ ವರಗಳ ಬಗೆಗೆ ಈ ರೀತಿ ಹೇಳಿದ್ದಾನೆ :

ತೈಶ್ಚ ದತ್ತವರಃ ಶ್ರೀಮಾನೃಷಿಭಿಶ್ಚ ಸಮಾಗತೈಃ ।<br>
ಸುರರ್ಷಿಭಿಶ್ಚ ಕಕುತ್ಸ್ಥೋ ವರಾನ್ಲೇಭೇ ಪರಂತಪಃ ॥ ೫೨ ॥<br>
ಸ ತು ದತ್ತವರಃ ಪ್ರೀತ್ಯಾ ವಾನರೈಶ್ಚ ಸಮಾಗತೈಃ ।<br>
ಪುಷ್ಪಕೇಣ ವಿಮಾನೇನ ಕಿಷ್ಕಿಂಧಾಮಭ್ಯುಪಾಗಮತ್ ॥ ೫೩ ॥

ಅಲ್ಲಿಗೆ ಬಂದ ದೇವರ್ಷಿಗಳು ಹಾಗೂ (ಬೇರೆ) ಋಷಿಗಳು ಶ್ರೀರಾಮನಿಗೆ ವರಗಳನ್ನು ನೀಡಿದ್ದಾರೆ. ಅದರಿಂದಾಗಿ ಅವನು ಕೃತಾರ್ಥನಾದನು. ವರಗಳನ್ನು ಪಡೆದ ತರುವಾಯ ಶ್ರೀರಾಮನು ವಾನರರೊಡನೆ ಪುಷ್ಪಕ ವಿಮಾನವನ್ನೇರಿ ಕಿಷ್ಕಿಂಧೆಗೆ ಬಂದು ತಲುಪಿದನು.

ಅಯಾಚಿತ.

### ೫೮. ಬ್ರಹ್ಮದೇವ > ವೈಶ್ರವಣ ಉತ್ತರಕಾಂಡ / ೩

ಶ್ರೀರಾಮನು ರಾವಣನ ಕುಲ, ಆತನ ಜನ್ಮವೃತ್ತಾಂತ, ಆತನಿಗೆ ದೊರೆತ ವರಗಳ ಬಗ್ಗೆ ತಿಳಿದುಕೊಳ್ಳುವ ಇಚ್ಛೆಯನ್ನು ವ್ಯಕ್ತಪಡಿಸಿದ್ದರಿಂದ, ಅಗಸ್ತ್ಯಮುನಿಯು ಶ್ರೀರಾಮನಿಗೆ ಅವುಗಳನ್ನು ವಿವರಿಸುತ್ತಿದ್ದಾನೆ.

ವೈಶ್ರವಣನು ಒಂದು ತಪೋವನದಲ್ಲಿ ವಾಸವಾಗಿದ್ದನು. ಧರ್ಮವೇ ಅಂತಿಮ ಗುರಿ ಎಂದು ಬಗೆದ ಆತನು ಶ್ರೇಷ್ಠವೆನಿಸುವ ಧರ್ಮವನ್ನು ಪಾಲಿಸಬೇಕೆಂಬ ಉತ್ಕಟ ಇಚ್ಛೆಯನ್ನು ಹೊಂದಿದವನಾಗಿದ್ದನು. ಜಿತೇಂದ್ರಿಯನಾಗಿದ್ದು ಆತನು ವಿವಿಧ ಯಮ-ನಿಯಮಗಳನ್ನು ಕೂಲಂಕಷವಾಗಿ ಅನುಸರಿಸುತ್ತಿದ್ದನು. ಈ ರೀತಿಯಾಗಿ ಒಂದು ಸಾವಿರ ವರ್ಷಗಳವರೆಗೆ ಉಗ್ರತಪಸ್ಸನ್ನು ಕೈಗೊಂಡನು. ಆತನ ತಪಸ್ಸಿನಿಂದ ಪ್ರಸನ್ನನಾದ ಬ್ರಹ್ಮದೇವನು ಇಂದ್ರಾದಿ ದೇವತೆಗಳನ್ನೊಳಗೊಂಡು ಈ ಮುನಿಯ ಆಶ್ರಮಕ್ಕೆ ಬಂದನು. ಮತ್ತು —

ಪರಿತುಷ್ಟೋಽಸ್ಮಿ ತೇ ವತ್ಸ ಕರ್ಮಣಾನೇನ ಸುವ್ರತ ॥ ೧೪ ॥
ವರಂ ವೃಣೀಷ್ವ ಭದ್ರಂ ತೇ ವರಾರ್ಹಸ್ತ್ವಂ ಮಹಾಮತೇ । ೧೫

"ವತ್ಸನೇ, ಸದಾಚಾರಸಂಪನ್ನನೇ, ಈ ನಿನ್ನ ಆಚರಣೆಯಿಂದ ನಾನು ಪ್ರಸನ್ನನಾಗಿದ್ದೇನೆ. ಹೇ ಮಹಾಮತಿಯೇ, ನೀನು ವರವನ್ನು ಪಡೆಯಲು ಅರ್ಹನಾಗಿರುವೆ ; ಈಗ ವರವನ್ನು ಕೇಳು ! ನಿನಗೆ ಶುಭವಾಗಲಿ." ಈ ರೀತಿ ಆಡಿದ ಬ್ರಹ್ಮದೇವನ ಮಾತುಗಳನ್ನು ಕೇಳಿ ವೈಶ್ರವಣನು ಹೀಗೆ ಉತ್ತರಿಸಿದನು :

ಭಗವಂಲ್ಲೋಕಪಾಲತ್ವಮಿಚ್ಛೇಯಂ ಲೋಕರಕ್ಷಣಮ್ । ೧೬

"ಭಗವಂತನೇ, ಲೋಕರಕ್ಷಣವು ಯಾವುದರಿಂದ ಸಾಧ್ಯವೋ ಅಂತಹ ಲೋಕಪಾಲಕ ಸ್ಥಾನವು ನನಗೆ ಪ್ರಾಪ್ತವಾಗಬೇಕು ! ಎಂಬ ಇಚ್ಛೆ ನನ್ನದಾಗಿದೆ" ಎಂದನು. ಆಗ ಬ್ರಹ್ಮದೇವನು ಸಂತೋಷಗೊಂಡು ಹೀಗೆ ಮಾತನಾಡಿದನು :

ಅಹಂ ವೈ ಲೋಕಪಾಲಾನಾಂ ಚತುರ್ಥಂ ಸ್ರಷ್ಟುಮುದ್ಯತಃ ॥ ೧೬ ॥
ಯಮೇಂದ್ರವರುಣಾನಾಂ ಚ ಪದಂ ಯತ್ತವ ಚೇಪ್ಸಿತಮ್ ।
ತದ್ಗಚ್ಛ ಬತ ಧರ್ಮಜ್ಞ ನಿಧೀಶತ್ವಮವಾಪ್ನುಹಿ ॥ ೧೮ ॥
ಶಕ್ರಾಂಬುಪಯಮಾನಾಂ ಚ ಚತುರ್ಥಸ್ತ್ವಂ ಭವಿಷ್ಯಸಿ ।
ಏತಚ್ಚ ಪುಷ್ಪಕಂ ನಾಮ ವಿಮಾನಂ ಸೂರ್ಯಸಂನಿಭಮ್ ॥ ೧೯ ॥
ಪ್ರತಿಗೃಹ್ಣೀಷ್ವ ಯಾನಾರ್ಥಂ ತ್ರಿದಶೈಃ ಸಮತಾಂ ವ್ರಜ ।
ಸ್ವಸ್ತಿ ತೇಽಸ್ತು..... ॥ ೨೦ ॥
ಕೃತಕೃತ್ಯಾ ವಯಂ ತಾತ ದತ್ವಾ ತವ ವರದ್ವಯಮ್ । ೨೧

"ನಾಲ್ಕನೆಯ ಲೋಕಪಾಲನೊಬ್ಬನನ್ನು ನೇಮಿಸಲು ಉದ್ಯುಕ್ತನಾಗಿದ್ದೇನೆ. ಯಮ, ಇಂದ್ರ, ವರುಣಾದಿಗಳಿಗೆ ಪ್ರಾಪ್ತವಾದಂತೆ ನಿನಗೆ ಲೋಕಪಾಲನಾಗುವ ಸಂಧಿಯು ಒದಗಿದೆ. ನಿನ್ನ ಬೇರೆ ಇಚ್ಛೆ ಆಕಾಂಕ್ಷೆಗಳು ಕೂಡ ಸಿದ್ಧಿಸುವವು. ಹೇ ಧರ್ಮವನ್ನರಿತವನೇ, ನೀನು ಹೊರಡು ! ನಿನಗೆ 'ನಿಧಿಶತ್ವ'ವು ದೊರೆಯಲಿದೆ. ಇಂದ್ರ, ವರುಣಾದಿಗಳಂತೆ ನೀನು ನಾಲ್ಕನೆಯ ಲೋಕಪಾಲನಾಗುವೆ ! ಸೂರ್ಯನಂತೆ ಥಳಥಳಿಸುವ ಈ ಪುಷ್ಪಕವಿಮಾನದಲ್ಲಿ ಪ್ರಯಾಣಮಾಡು ! ನೀನು ದೇವತೆಗಳಿಗೆ ಸರಿಸಮಾನನಾಗುವೆ ! ನಿನಗೆ ಶುಭವಾಗಲಿ !" ಎಂದನು.

ವೈಶ್ರವಣನು ಬ್ರಹ್ಮನ ಬಳಿ ವರವನ್ನು ಬೇಡಿರಲಿಲ್ಲ. ಬ್ರಹ್ಮದೇವನು ಪ್ರಸನ್ನನಾಗಿ ವರವನ್ನು ಬೇಡಿಕೊಳ್ಳಲು ತಿಳಿಸಿದಾಗ, ವೈಶ್ರವಣನು ತನ್ನ ಇಷ್ಟಾರ್ಥವನ್ನು ವ್ಯಕ್ತಮಾಡಿದ ಕಾರಣ ಇದು 'ಅಯಾಚಿತ' ವರವೆನಿಸುತ್ತದೆ. 'ನಿಧಿಶತ್ವ' ಮತ್ತು ಪುಷ್ಪಕವಿಮಾನ ಇವು ದೊರೆಯಬೇಕೆಂದು ಆತನು ವ್ಯಕ್ತಪಡಿಸದೇ ಇದ್ದರೂ ಬ್ರಹ್ಮದೇವನು ಅವುಗಳನ್ನು ತಾನಾಗಿಯೇ ಕರುಣಿಸಿದನು. ಹೀಗಿರುವದರಿಂದ ಈ ವರವು 'ಅಯಾಚಿತ'ವಾಗಿದೆ. •ಪುಷ್ಪಕವಿಮಾನದ ಪ್ರಾಪ್ತಿಯು ವರವಾಗಿರದೆ ಅನುಗ್ರಹವಾಗಿದೆ.

ಅಯಾಚಿತ.

ಅನುಗ್ರಹ.

**೫೯. ಶಂಕರ > ಸುಕೇಶ** **ಉತ್ತರಕಾಂಡ / ೪**

ಶ್ರೀರಾಮನು ವಿಚಾರಿಸಿದ ಕಾರಣ ಅಗಸ್ತ್ಯಮುನಿಯು, ರಾಕ್ಷಸರು ಹೇಗೆ ನಿರ್ಮಿತರಾದರು ಎಂಬುದನ್ನು ವಿವರಿಸುತ್ತಾನೆ. ಪ್ರಜಾಪತಿಯು ಮೊಟ್ಟಮೊದಲು ಜಲವನ್ನು ನಿರ್ಮಿಸಿದನು ; ಮತ್ತು ಅದನ್ನು ರಕ್ಷಿಸಲೋಸುಗ ಪ್ರಾಣಿಗಳನ್ನು ಸೃಷ್ಟಿಸಿದನು. ಹಸಿವೆ, ಬಾಯಾರಿಕೆ ಮತ್ತು ಭಯ ಇವುಗಳಿಂದ ಪ್ರಾಣಿಗಳು ಸಂಕಟಕ್ಕೆ ಒಳಗಾದಾಗ 'ನಾವು ಯಾವ ರೀತಿ ವರ್ತಿಸಬೇಕು ?' ಎಂದು ಪ್ರಜಾಪತಿಯನ್ನು ಪ್ರಶ್ನಿಸಿಯಾಯಿತು. ಆಗ ಪ್ರಜಾಪತಿಯು ಅವರಿಗೆ 'ನೀವು ಉದಕದ ರಕ್ಷಣೆಯನ್ನು ಮಾಡಿರಿ !" ಎಂದು ಹೇಳಿದನು. 'ರಕ್ಷಾಮಃ' ಎಂದು ಉತ್ತರಿಸಿದವರು ರಾಕ್ಷಸರಾದರು : 'ಯಕ್ಷಾಮಃ' ಎಂದವರು ಯಕ್ಷರಾದರು.

ಹೇತಿ ಮತ್ತು ಪ್ರಹೇತಿ ಎಂಬ ರಾಕ್ಷಸಾಧಿಪತಿಗಳಿದ್ದರು. ಧರ್ಮನಿಷ್ಠನಿದ್ದ ಪ್ರಹೇತಿಯು ತಪೋವನಕ್ಕೆ ಹೋದನು. 'ಹೇತಿ'ಯು ಕಾಲನ ತಂಗಿಯಾದ 'ಮಾಯಾ' ಇವಳನ್ನು ವಿವಾಹವಾದನು. ಈ ದಂಪತಿಗಳ ಪುತ್ರನೆಂದರೆ 'ವಿದ್ಯುತ್ಕೇಶ'. ಈ ವಿದ್ಯುತ್ಕೇಶನು ಯೌವನಸಂಪನ್ನನಾದನಂತರ ಈತನ ವಿವಾಹವನ್ನು 'ಸಂಧ್ಯಾ'ಳ ಕನ್ಯೆಯಾದ 'ಸಾಲಕಟಂಕಟಾ' ಇವಳೊಡನೆ ಮಾಡಿದರು. ಈ ವಿದ್ಯುತ್ಕೇಶ ರಾಕ್ಷಸನು ಅವಳೊಡನೆ ಇಂದ್ರನಂತೆ ಸರಸವಾಡುತ್ತಿದ್ದನು. ಅವಳು ಗರ್ಭವತಿಯಾದನಂತರ ಯಥಾಕಾಲ ಮಂದಾರ ಪರ್ವತದ ಮೇಲೆ ಪ್ರಸೂತಳಾದಳು ; ಮತ್ತು ಆ ಕಂದನನ್ನು ಅಲ್ಲಿಯೇ ಬಿಟ್ಟು ಪುನಃ ತನ್ನ ಪತಿಯೊಡನೆ ಸರಸಸಲ್ಲಾಪ ರತಿಗಳಲ್ಲಿ ಕಳೆಯಹತ್ತಿದಳು. ಆಗ ಆಕಾಶಮಾರ್ಗದಿಂದ ಉಮೆಯೊಡನೆ ಸಂಚರಿಸುತ್ತಿದ್ದ ಶಂಕರನಿಗೆ ಈ ತ್ಯಜಿಸಲ್ಪಟ್ಟ ಬಾಲಕನ ಅಳುವ ಧ್ವನಿಯು ಕೇಳಿಬಂದಿತು. ಪಾರ್ವತಿಗೂ ಕನಿಕರವೆನಿಸಿತು. ಅವಳು ಶಂಕರನನ್ನು ಪ್ರಾರ್ಥಿಸಿದಳು. ಆಗ —

ತಂ ರಾಕ್ಷಸಾತ್ಮಜಂ ಚಕ್ರೇ ಮಾತರೇವ ವಯಃಸಮಮ್ ।
ಅಮರಂ ಚೈವ ತಂ ಕೃತ್ವಾ ಮಹಾದೇವೋಽಕ್ಷರೋಽವ್ಯಯಃ ॥ ೨೯ ॥

"ಸ್ವಂತದ ಗೌರವಕ್ಕೆ ಕುಂದನ್ನು ಬರಗೊಡದ, ಅವಿನಾಶಿಯಾದ ಮಹಾದೇವನು ಆ ರಾಕ್ಷಸಪುತ್ರನಿಗೆ ಅಮರತ್ವವನ್ನು ಕೊಟ್ಟನು ; ತತ್‌ಕ್ಷಣ ಆ ಎಳೆಯ ಮಗುವಿನ ಪ್ರಾಯವು ತಾಯಿಯಷ್ಟೇ ಆಗುವಂತೆ ಮಾಡಿದನು." ಅದಲ್ಲದೇ ಪಾರ್ವತಿಯನ್ನು ಸಂತೋಷಗೊಳಿಸಲು ಆತನಿಗೆ ಆಕಾಶದಲ್ಲಿ ಸಂಚರಿಸುವ ನಗರವನ್ನು ಕೊಟ್ಟನು. ಈ ರೀತಿ ತ್ಯಜಿಸಲ್ಪಟ್ಟ ಕಂದನೆಂದರೆ ರಾಕ್ಷಸಪುತ್ರನಾದ ಸುಕೇಶನು.

ಆಕಾಶದಲ್ಲಿ ಸಂಚರಿಸುವ ನಗರವು ಮಹಾದೇವನ ಅನುಗ್ರಹವಿದ್ದು ಅದು ವರಸ್ವರೂಪವಲ್ಲ.

**ಉತ್ತರಕಾಂಡ / ೫**

ಸುಕೇಶಂ ಧಾರ್ಮಿಕಂ ದೃಷ್ಟ್ವಾ ವರಲಬ್ಧಂ ಚ ರಾಕ್ಷಸಮ್ ।
ಗ್ರಾಮಣೀರ್ನಾಮ ಗಂಧರ್ವೋ ವಿಶ್ವಾವಸುಸಮಪ್ರಭಃ ॥ ೧ ॥

"ಸುಕೇಶ ರಾಕ್ಷಸನಿಗೆ ವರವು ದೊರೆತಿದೆ ಹಾಗೂ ಆತನು ಧರ್ಮನಿಷ್ಠನಿದ್ದಾನೆ" ಎಂಬುದನ್ನು ಅವಲೋಕಿಸಿ, ವಿಶ್ವಾವಸುವಿನ ಹಾಗೆ ಪ್ರಭೆಯುಳ್ಳ 'ಗ್ರಾಮಣಿ' ಎಂಬ ಗಂಧರ್ವನು ತನ್ನ ಸುಂದರ ಕನ್ಯೆಯಾದ ದೇವವತಿಯನ್ನು ಆತನಿಗೆ ಧಾರೆಯೆರೆದುಕೊಟ್ಟನು.

ವರದಾನಕೃತೈಶ್ವರ್ಯಂ ಸಾ ತಂ ಪ್ರಾಪ್ಯ ಪತಿಂ ಪ್ರಿಯಮ್ ॥ ೩ ॥
ಆಸೀದ್ ದೇವವತೀ ತುಷ್ಟಾ ಧನಂ ಪ್ರಾಪ್ಯೇವ ನಿರ್ಧನಃ । ೪

ವರದಾನವೆಂಬ ಐಶ್ವರ್ಯವು ಪ್ರಾಪ್ತವಾದಂಥ ಪ್ರಿಯ ಪತಿಯನ್ನು ಪಡೆದುಕೊಂಡನಂತರ ದೇವವತಿಯು, ಧನಿಕನಾಗಿ ಸಂತೋಷಗೊಳ್ಳುವ ಮೊದಲು ದರಿದ್ರನಿದ್ದ ಪುರುಷನಂತೆ ಅತ್ಯಂತ ಆನಂದಭರಿತಳಾದಳು.

**ಉತ್ತರಕಾಂಡ / ೬**

ಸುಕೇಶನ ಮಕ್ಕಳಿಂದಾಗಿ ತಮಗಾಗುವ ತಾಪತ್ರಯಗಳಿಂದ ರಕ್ಷಿಸೆಂದು ದೇವತೆಗಳು ವಿಷ್ಣುವನ್ನು ಮೊರೆ ಹೊಕ್ಕರು. ಅವರೆಂದುದು :

ಸುಕೇಶತನಯೈರ್ದೇವ ತ್ರಿಭಿಸ್ತ್ರೇತಾಗ್ನಿಸಂನಿಭೈಃ ।
ಆಕ್ರಮ್ಯ ವರದಾನೇನ ಸ್ಥಾನಾನ್ಯಪಹೃತಾನಿ ನಃ ॥ ೧೪ ॥

"ಸುಕೇಶನ ಮಕ್ಕಳು ಮೂರು ಬಗೆಯ ಅಗ್ನಿಯಂತೆ ದಾಹಕರು. ವರದಾನದ ಸಾಮರ್ಥ್ಯದಿಂದಾಗಿ ಅವರು ನಮ್ಮನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿದ್ದಾರೆ."

ವಿಷ್ಣುವು ಅವರಿಗೆ ಅಭಯವಿತ್ತು ಹೀಗೆಂದನು :

'ಸುಕೇಶಂ ರಾಕ್ಷಸಂ ಜಾನೇ ಈಶಾನವರದರ್ಪಿತಮ್ । ೨೦

"ನಾನು ಆ ಸುಕೇಶ ರಾಕ್ಷಸನನ್ನು ಬಲ್ಲೆ. ಶಂಕರನಿಂದ ವರ ದೊರೆತ ಕಾರಣ ಆತ ಗರ್ವೋನ್ನತನಾಗಿದ್ದಾನೆ."

'ಅಯಾಚಿತ' ವರ.

ಬ್ರಹ್ಮದೇವ > ಮಾಲ್ಯವಾನ, ಸುಮಾಲೀ, ಮಾಲೀ, ವರ ಕ್ರ. ೬೧ ನೋಡಿ.

## ೬೦. ಉಮಾ > ರಾಕ್ಷಸಿ ಉತ್ತರಕಾಂಡ / ೪

ನೋಡಿ : ಶಂಕರ > ಸುಕೇಶ, ವರ ಕ್ರ. ೫೯.

ಉಮಯಾಪಿ ವರೋ ದತ್ತೋ ರಾಕ್ಷಸೀನಾಂ ನೃಪಾತ್ಮಜ ॥ ೩೦ ॥
ಸದ್ಯೋಪಲಬ್ಧಿರ್ಗರ್ಭಸ್ಯ ಪ್ರಸೂತಿಃ ಸದ್ಯ ಏವ ಚ ।
ಸದ್ಯ ಏವ ವಯಃಪ್ರಾಪ್ತಿ ಮಾತುರೇವ ವಯಃಸಮಮ್ ॥ ೩೧ ॥

"ಹೇ ರಾಜಪುತ್ರನೇ, ಸಮಾಗಮವಾಗುತ್ತಲೇ ಗರ್ಭಧಾರಣೆ, ಗರ್ಭದಾರಣೆಯಾದ ಕ್ಷಣವೇ ಪ್ರಸೂತಿ, ಮಗು ಜನಿಸಿದೊಡನೆ ಅದು ಕೂಡಲೇ ಮಾತೆಯ ವಯಸ್ಸಿನಷ್ಟು ಪ್ರಾಯಕ್ಕೆ ಬರುವದು" ಎಂಬ ವರವನ್ನು ಉಮೆಯು ಈ ರಾಕ್ಷಸಿಯರಿಗೆ ಕೊಟ್ಟಳು.

ರಾಕ್ಷಸಿಯರಿಗೆ ವರವನ್ನು ಏಕೆ ಕೊಡಲಾಯಿತು ಎಂಬುದರ ಸ್ಪಷ್ಟ ಉಲ್ಲೇಖವಿಲ್ಲ.

'ಅಯಾಚಿತ' ವರ.

## ೬೧. ಬ್ರಹ್ಮದೇವ > ಮಾಲ್ಯವಾನ, ಸುಮಾಲಿ, ಮಾಲಿ ಉತ್ತರಕಾಂಡ / ೫

ಶ್ರೀರಾಮನು ಕೇಳಿದ ಕಾರಣ ಅಗಸ್ತ್ಯಮುನಿಯು ರಾಕ್ಷಸರ ಉತ್ಪತ್ತಿ, ಸುಕೇಶನ ಪುತ್ರ ಹಾಗೂ ಆತನ ಸಂತತಿಯ ಬಗ್ಗೆ ವಿವರಿಸುತ್ತಾನೆ.

ದೇವವತಿಯಿಂದ ಸುಕೇಶನಿಗೆ ಮಾಲ್ಯವಾನ, ಸುಮಾಲಿ ಹಾಗೂ ಮಾಲಿ ಎಂಬ ಮೂರು ತೇಜಸ್ಸುಳ್ಳ ಮಕ್ಕಳಾದರು.[1] ತಪೋಬಲದಿಂದ ತಮ್ಮ ತಂದೆಗೆ ವರಪ್ರಾಪ್ತಿಯಾಗಿ ಐಶ್ವರ್ಯ ಒದಗಿದ್ದನ್ನು ಕಂಡ ಈ ಮೂವರೂ ಸಹೋದರರು ಮೇರುಪರ್ವತದ ಮೇಲೆ ಘೋರ ತಪಸ್ಸಿಗಾರಂಭಿಸಿದರು.

ಅವರ ತಪಸ್ಸಿನಿಂದ ಬ್ರಹ್ಮದೇವನು ಪ್ರಸನ್ನನಾದನು ಮತ್ತು 'ವರದೋಽಸ್ಮಿತ್ಯಭಾಷತ'[2] — 'ನಾನು ನಿಮಗೆ ವರ ಕೊಡಲಿರುವೆನು' ಎಂದನು.

ಆಗ ಅವರು ಬ್ರಹ್ಮದೇವನಿಗೆ ಕರಗಳನ್ನು ಜೋಡಿಸಿ —

ತಪಸಾಽಽರಾಧಿತೋ ದೇವ ಯದಿ ನೋ ದಿಶಸೇ ವರಮ್ ॥ ೧೪ ॥
ಅಜೇಯಾಃ ಶತ್ರುಹಂತಾರಸ್ತಥೈವ ಚಿರಜೀವಿನಃ ।
ಪ್ರಭವಿಷ್ಣ್ವೋ ಭವಾಮೇತಿ ಪರಸ್ಪರಮನುವ್ರತಾಃ ॥ ೧೫ ॥
ಏವಂ ಭವಿಷ್ಯಥೇತ್ಯುಕ್ತ್ವಾ ಸುಕೇಶತನಯಾನ್ವಿಭುಃ । ೧೬

"ಹೇ ಬ್ರಹ್ಮದೇವನೇ, ಪ್ರಸನ್ನನಾದ ನೀನು ನಮಗೆ ವರಗಳನ್ನು ಕೊಡುವುದಿದ್ದರೆ ನಮಗೆ ಯಾರಿಂದಲೂ ಸೋಲು ಬರಬಾರದು ; ನಾವು ಶತ್ರುಘಾತಕರಾಗಿರಬೇಕು ; ಚಿರಂಜೀವಿಗಳಾಗಿರಬೇಕು ; ಒಡೆಯರಾಗಿರಬೇಕು ; ಮತ್ತು ಪರಸ್ಪರರಲ್ಲಿ ಪ್ರೀತಿಯುಳ್ಳವರಾಗಿರಬೇಕು ! ಎಂಬ ವರಗಳನ್ನು ಕರುಣಿಸು" ಎಂದರು. ಆಗ ಬ್ರಹ್ಮದೇವನು ಸುಕೇಶಪುತ್ರರಿಗೆ 'ತಥಾಸ್ತು' ಎಂದನು.

ವರಂ ಲಬ್ಧ್ವಾ ತು ತೇ ಸರ್ವೇ ರಾಮ ರಾತ್ರಿಂಚರಾಸ್ತದಾ ।
ಸುರಾಸುರಾನ್ಪ್ರಬಾಧಂತೇ ವರದಾನಸುನಿರ್ಭಯಾಃ ॥ ೧೭ ॥

1. ವರಪ್ರಾಪ್ತಿಂ ಪಿತುಸ್ತೇ ತು ಜ್ಞಾತ್ವೈಶ್ವರ್ಯಂ ತಪೋಬಲಾತ್ ॥ ೯ ॥
2. ಬ್ರಹ್ಮಾಣಾಂ ವರದಂ ಜ್ಞಾತ್ವಾ ಸೇಂದ್ರೈರ್ದೇವಗಣೈರ್ವೃತಮ್ ॥ ೧೩ ॥

ಈ ರೀತಿ ಬ್ರಹ್ಮದೇವನಿಂದ ವರವನ್ನು ಪಡೆದು ನಿರ್ಭಯರಾಗಿದ್ದ ಆ ನಿಶಾಚರರು ದೇವತೆಗಳನ್ನೂ, ಅಸುರರನ್ನೂ ಪೀಡಿಸಹತ್ತಿದರು. 'ಸುವೇಲ'ವೆಂಬ ಪರ್ವತದ ಶಿಖರದ ಮೇಲೆ ವಿಶ್ವಕರ್ಮನಿಂದ ಮಹೇಶ್ವರನಂತಹ ಒಂದು ಗೃಹವನ್ನು ತಮಗಾಗಿ ರಚಿಸಿಕೊಂಡರು.

ವರದಾನಾದಪಿ ಗರ್ವಿತಾ ಭೃಶಂ ಕ್ರತುಕ್ರಿಯಾಣಾಂ ಪ್ರಶಮಂಕರಾಃ ಸದಾ ॥ ೪೭ ॥

'ವರ ದೊರೆತುದರಿಂದ ಅವರು ತುಂಬ ಜಂಬವನ್ನು ತಳೆದಿದ್ದರು. ಹೀಗಾಗಿ ಅವರು ಯಾವಾಗಲೂ ಯಜ್ಞಾದಿಕ್ರಿಯೆಗಳನ್ನು ನಾಶಪಡಿಸುತ್ತಿದ್ದರು.'

ಬ್ರಹ್ಮದೇವನು ಸಂತುಷ್ಟನಾಗಿ ತಾನಾಗಿ ವರವನ್ನು ಕೊಟ್ಟಿದ್ದರೂ ವರದ ಉದ್ದೇಶವನ್ನಿಟ್ಟುಕೊಂಡು ತಪಸ್ಸನ್ನಾಚರಿಸಿದ್ದರಿಂದ ಇದು 'ಯಾಚಿತ' ವರವಾಗಿದೆ ಎಂದು ತಿಳಿದುಕೊಳ್ಳಬೇಕು.

ಯಾಚಿತ.

ಉತ್ತರಕಾಂಡ / ೬

ಸುಕೇಶನ ಪುತ್ರರು ದೇವತೆಗಳನ್ನು ಮತ್ತು ತಪೋಧನ ಋಷಿಗಳನ್ನು ವಧಿಸಲು ಹವಣಿಸಿದಾಗ ದೇವತೆಗಳು ಮತ್ತು ಋಷಿಗಳು ಮಹೇಶ್ವರನ ಬಳಿಗೆ ಶರಣುಹೋಗಿ ಈ ರೀತಿ ನುಡಿದರು —

ಸುಕೇಶಪುತ್ರೈರ್ಭಗವನ್ಪಿತಾಮಹವರೋದ್ಧತೈಃ ।
ಪ್ರಜಾಧ್ಯಕ್ಷ ಪ್ರಜಾಃ ಸರ್ವಾ ಬಾಧ್ಯಂತೇ ರಿಪುಬಾಧನೈಃ ॥ ೪ ॥

"ಭಗವಂತನೇ, ಹೇ ಪ್ರಜಾಪತಿಯೇ, ಬ್ರಹ್ಮದೇವನ ವರದಿಂದ ಕೊಬ್ಬಿರ ಈ ಸುಕೇಶಪುತ್ರರು ಎಲ್ಲ ಪ್ರಜೆಗಳನ್ನು ಹಿಂಸಿಸುತ್ತಿದ್ದಾರೆ."

"ಅವರು ನಮ್ಮ ಆಶ್ರಮಗಳನ್ನು ಹಾಳುಮಾಡಿದ್ದಾರೆ. ದೇವತೆಗಳನ್ನು ಸ್ವರ್ಗದಿಂದ ಹೊರಗಟ್ಟಿ ಇವರು ದೇವತೆಗಳಂತೆ ಅಲ್ಲಿ ಕ್ರೀಡಾಸಕ್ತರಾಗಿದ್ದಾರೆ. ತಾವು ಈಗ ಕಠೋರ ರೂಪವನ್ನು ತಾಳಿ ಆ ದೇವಕಂಟಕರನ್ನು ನಿರ್ಮೂಲಗೊಳಿಸಬೇಕು."

ಶಂಕರನು ದೇವತೆಗಳ ಈ ಪ್ರಾರ್ಥನೆಯನ್ನು ಆಲಿಸಿದನು. ಹೀಗಿದ್ದರೂ ಸುಕೇಶನ ಬಗ್ಗೆ ಆತನ ಕೃಪಾದೃಷ್ಟಿಯಿದ್ದುದರಿಂದ, ಆತನು "ಇವರನ್ನು ವಧಿಸುವದು ನನಗೆ ಅಸಾಧ್ಯ. ನಾನು ವಧಿಸಲಾರೆನು ; ಆದರೆ ಅವರ ವಧೆಯ ಒಂದು ಉಪಾಯವನ್ನು ನಿಮಗೆ ಸೂಚಿಸುವೆನು" ಎಂದು ಸಲಹೆಯಿತ್ತನು. ಆಗ ಆ ದೇವತೆಗಳು ವಿಷ್ಣುವಿಗೆ ಶರಣುಹೋಗಿ ಇಂತೆಂದರು :

ಸುಕೇಶತನಯೈರ್ದೇವ ತ್ರಿಭಿಸ್ತ್ರೇತಾಗ್ನಿಸಂನಿಭೈಃ ।
ಆಕ್ರಮ್ಯ ವರದಾನೇನ ಸ್ಥಾನಾನ್ಯಪಹೃತಾನಿ ನಃ ॥ ೧೪ ॥

"ಹೇ ದೇವನೇ, ಅಗ್ನಿಹೋತ್ರಾದಿ ಶ್ರೌತಕರ್ಮಸಂಬಂಧದಲ್ಲಿ ಅಗ್ನಿಯಂತೆ ಪ್ರಖರರಿದ್ದ ಆ ಸುಕೇಶಪುತ್ರರು ಪಡೆದ ವರದಾನದಿಂದ ನಮ್ಮ ಸ್ಥಾನಗಳನ್ನು ಅಪಹರಿಸಿಕೊಂಡಿದ್ದಾರೆ. ನೀವು ಮದೋನ್ಮತ್ತರಾದ ಈ ರಾಕ್ಷಸರನ್ನು ಕೊಂದು ನಮ್ಮ ಭಯವನ್ನು ಹೋಗಲಾಡಿಸಬೇಕು." ಆಗ ದೇವತೆಗಳಿಗೆ ಅಭಯವನ್ನಿತ್ತು ವಿಷ್ಣುವು ಇಂತೆಂದು ನುಡಿದನು : "ಇನ್ನು ಯೋಚಿಸಬೇಡಿರಿ ; ನಾನು ಅವರನ್ನು ವಧಿಸುತ್ತೇನೆ."

ದೇವತೆಗಳ ಈ ಚಟುವಟಿಕೆಗಳು ಗಮನಕ್ಕೆ ಬಂದ ತಕ್ಷಣವೇ 'ಮಾಲ್ಯವಾನ' ರಾಕ್ಷಸನು ತನ್ನ ಸಹೋದರರಿಗೆ ಹೀಗೆಂದನು : "ದೇವತೆಗಳು ಹಾಗೂ ಋಷಿಗಳು ಸೇರಿಕೊಂಡು ಶಿವನ ಬಳಿ ಹೋಗಿ ಈ ರೀತಿ ಹೇಳಿದ್ದಾರೆ :

ಸುಕೇಶತನಯಾ ದೇವ ವರದಾನಬಲೋದ್ಧತಾಃ ।
ಬಾಧಂತೇಽಸ್ಮಾನ್ಸಮುದ್‌ದೃಪ್ತಾ ಘೋರರೂಪಾಃ ಪದೇ ಪದೇ ॥ ೨೫

"ವರದಾನದಿಂದ ಮದವೇರಿದ ಸುಕೇಶಪುತ್ರರು ತುಂಬಾ ಅಹಂಕಾರಿಗಳಾಗಿದ್ದಾರೆ. ಸತತವಾಗಿ ನಮ್ಮನ್ನೆಲ್ಲ ಪೀಡಿಸುತ್ತಿದ್ದಾರೆ—ಎಂದು ಶಿವನಿಗೆ ತಿಳಿಸಿದ್ದಾರೆ. ಅಲ್ಲದೆ, ಶಂಕರನು ಸುಕೇಶಪುತ್ರರನ್ನು ವಧಿಸಬೇಕೆಂದು

ಅವರು ಪ್ರಾರ್ಥಿಸಿಕೊಂಡಾಗ, ತಾನು ವಧೆ ಮಾಡುವದಿಲ್ಲವೆಂದು ಅವನು ಹೇಳಿದ್ದಾನೆ. ಅಲ್ಲದೆ ವಧಿಸುವ ಉಪಾಯವನ್ನು ಅವರಿಗೆ ತಿಳಿಸಿದ್ದಾನೆ."

ಸುಮಾಲೀ ವರಲಬ್ಧಾಂಸ್ತು ಜ್ಞಾತ್ವಾ ಚೈತಾನ್ನಿಶಾಚರಾನ್ ।
ಉದತಿಷ್ಠದ್ಭಯಂ ತ್ಯಕ್ತ್ವಾ ಸಾನುಗಃ ಸ ರಸಾತಲಾತ್ ॥ ೧ ॥

ಬ್ರಹ್ಮದೇವನು ನಿಶಾಚರರಿಗೆ ವರವನ್ನು ಕೊಟ್ಟ ಸಂಗತಿಯನ್ನು ಕೇಳಿ ಸುಮಾಲಿಯು ನಿರ್ಭಯನಾಗಿ ತನ್ನ ಅನುಚರರೊಂದಿಗೆ ರಸಾತಳದಿಂದ ಹೊರಬಿದ್ದನು.

## ೬೨. ಬ್ರಹ್ಮದೇವ > ವಿಭೀಷಣ ಉತ್ತರಕಾಂಡ / ೧೦

ರಾವಣ ಹಾಗೂ ಆತನ ಸಹೋದರರು ಕೈಗೊಂಡ ತಪಸ್ಸಿನ ಬಗ್ಗೆ, ಪಡೆದ ವರಗಳ ಬಗ್ಗೆ ಅಗಸ್ತ್ಯ ಮುನಿಯು ಶ್ರೀರಾಮನಿಗೆ ಹೇಳುತ್ತಿದ್ದಾನೆ :

ರಾವಣ ಮತ್ತು ಆತನ ಸಹೋದರರು ಜಿತೇಂದ್ರಿಯರಾಗಿದ್ದುಕೊಂಡು ಅನೇಕ ತರಹದ ಧರ್ಮವಿಧಿಗಳನ್ನು ಆಚರಿಸಿದರು. ವಿಭೀಷಣನು ಒಂಟಿಗಾಲಿನಲ್ಲಿ ಎದ್ದುನಿಂತು ಐದು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಧರ್ಮಾತ್ಮನಾದ ವಿಭೀಷಣನು ಶಿರ ಮತ್ತು ಬಾಹುಗಳೆರಡನ್ನೂ ಮೇಲೆ ಆಕಾಶದತ್ತ ಎತ್ತರಿಸಿ ಇನ್ನೂ ಐದುಸಾವಿರ ವರ್ಷಗಳ ಪರ್ಯಂತ ವೇದಾಧ್ಯಯನದಲ್ಲಿ ತೊಡಗಿ ಸೂರ್ಯನ ತಪಸ್ಸನ್ನಾಚರಿಸಿದನು. ವಿಭೀಷಣನ ತಪಸ್ಸಿನಿಂದ ಪ್ರಸನ್ನನಾದ ಬ್ರಹ್ಮದೇವನು —

ಪರಿತುಷ್ಟೋಽಸ್ಮಿ ಧರ್ಮಾತ್ಮನ್ವರಂ ವರಯ ಸುವ್ರತ ॥ ೨೮ ॥

"ನಿನ್ನ ಬಗ್ಗೆ ನನಗೆ ಸಂತೋಷವಾಗಿದೆ. ಹೇ ಸದಾಚರಣಸಂಪನ್ನ ಧರ್ಮನಿಷ್ಠನೇ, ನೀನು ವರವನ್ನು ಕೇಳು !" ಎಂದನು. ಆಗ ವಿಭೀಷಣನು ಕರಣಗಳೆರಡನ್ನೂ ಜೋಡಿಸಿ, "ಪ್ರತ್ಯಕ್ಷದಲ್ಲಿ ಜಗದೀಶನೇ ಪ್ರಸನ್ನನಾಗಿರುವದರಿಂದ ನಾನು ಕೃತಾರ್ಥನಾದೆ" ಎಂದನು.

ಪ್ರೀತೇನ ಯದಿ ದಾತವ್ಯೋ ವರೋ ಮೇ ಶೃಣು ಸುವ್ರತ ।
ಪರಮಾಪದ್ಗತಸ್ಯಾಪಿ ಧರ್ಮೇ ಮಮ ಮತಿರ್ಭವೇತ್ ॥ ೩೦ ॥
ಅಶಿಕ್ಷಿತಂ ಚ ಬ್ರಹ್ಮಾಸ್ತ್ರಂ ಭಗವನ್ಪ್ರತಿಭಾತು ಮೇ ।
ಯಾ ಯಾ ಮೇ ಜಾಯತೇ ಬುದ್ಧಿರ್ಯೇಷು ಯೇಷ್ವಾಶ್ರಮೇಷು ಚ ॥ ೩೧ ॥
ಸಾ ಸಾ ಭವತು ಧರ್ಮಿಷ್ಠಾ ತಂ ತಂ ಧರ್ಮಂ ಚ ಪಾಲಯೇ ।
ಏಷ ಮೇ ಪರಮೋದಾರೋ ವರಃ ಪರಮಕೋ ಮತಃ ॥ ೩೨ ॥
ನ ಹಿ ಧರ್ಮಾಭಿರಕ್ತಾನಾಂ ಲೋಕೇ ಕಿಂಚನ ದುರ್ಲಭಮ್ । ೩೩

"ಹೇ ಸುವ್ರತರೇ, ನೀವು ಪ್ರಸನ್ನರಾಗಿ ನನಗೆ ವರವನ್ನು ಕೊಡುವಿರಾದರೆ ನನ್ನ ಮಾತುಗಳನ್ನು ಆಲಿಸಿರಿ ! ನಾನು ಎಷ್ಟೇ ಸಂಕಟದಲ್ಲಿ ಸಿಲುಕಿದ್ದರೂ ನನ್ನ ಒಲವು ಧರ್ಮದತ್ತ ಇರಬೇಕು. ಭಗವಂತನೇ, ಬ್ರಹ್ಮಾಸ್ತ್ರದ ಪ್ರತಿಭೆಯು ನನಗೆ ಉಪದೇಶವಿರದೇ ದೊರೆಯಬೇಕು ! ನಾನು ಯಾವ ಆಶ್ರಮದಲ್ಲಿ ಇದ್ದರೂ ನನ್ನಲ್ಲಿ ಧರ್ಮಬುದ್ಧಿ ಇರಬೇಕು ! ನಾನು ಧರ್ಮವನ್ನಾಚರಿಸುತ್ತ ಇರಬೇಕು ! ಹೇ ಪರಮ ಉದಾರನೇ, ಇಂಥ ವರವು ನನಗೆ ಅತ್ಯಂತ ಪ್ರಿಯವೆನಿಸುವದು."

ಧರ್ಮನಿಷ್ಠರಾದವರಿಗೆ ಈ ಜಗತ್ತಿನಲ್ಲಿ ಯಾವ ಸಂಗತಿಯೂ ದುರ್ಲಭವಾಗಿರುವದಿಲ್ಲ ಎಂಬುದನ್ನು ಅರಿತ ವಿಭೀಷಣನ ಭಾಷಣವನ್ನು ಕೇಳಿ ಬ್ರಹ್ಮದೇವನು ಹೀಗೆಂದನು —

ಯಸ್ಮಾದ್ರಾಕ್ಷಸಯೋನೌ ತೇ ಜಾತಸ್ಯಾಮಿತ್ರನಾಶನ ॥ ೩೪ ॥
ನಾಧರ್ಮೇ ಜಾಯತೇ ಬುದ್ಧಿರಮರತ್ವಂ ದದಾಮಿ ತೇ । ೩೫

"ರಾಕ್ಷಸರ ಕುಲದಲ್ಲಿ ಜನ್ಮ ಪಡೆದಿದ್ದರೂ ನಿನ್ನ ಮತಿಯು ಅಧರ್ಮದತ್ತ ಹೋಗುತ್ತಿಲ್ಲವಾದ್ದರಿಂದ ನಿನಗೆ ಅಮರತ್ವವು ಪ್ರಾಪ್ತವಾಗುವದು" ಎಂದು ಬ್ರಹ್ಮದೇವನು ವರವನ್ನಿತ್ತನು.

ರಾವಣನು ಬ್ರಹ್ಮದೇವನಿಂದ ಸಂಪೂರ್ಣವಾದ ಅಮರತ್ವ ಬೇಕೆಂದು ಕೇಳಿದನು. ಆಗ ಬ್ರಹ್ಮದೇವ,

ನಾಸ್ತಿ ಸರ್ವಾಮರತ್ವಂ ತೇ...

ಅದು ನಿನಗೆ ಸಿಕ್ಕಲಾರದೆಂದನು. ಆದರೆ, ವಿಭೀಷಣನು ಅಮರತ್ವವನ್ನು ಬಯಸದೇ ಇದ್ದಾಗಲೂ (ಯಾಚಿಸದಿದ್ದಾಗಲೂ) ಅವನಿಗೆ ಚಿರಂಜೀವಿತ್ವವನ್ನು ದಯಪಾಲಿಸಲಾಯಿತು.

ಪ್ರಸನ್ನನಾದ ಬ್ರಹ್ಮದೇವನು ವಿಭೀಷಣನಿಗೆ ವರವನ್ನು ಬೇಡಿಕೊಳ್ಳಲು ಹೇಳಿದ ಕಾರಣ, ಅವನು ಬೇಡಿಕೊಂಡ ವರವು ಯಾಚಿತವಾಗಿಲ್ಲ. ತಪಸ್ಸಿನಿಂದ ಪ್ರಸನ್ನಗೊಳಿಸಿಕೊಂಡಿರುವದರಿಂದ ವರದ ಅಪೇಕ್ಷೆ ಇರಬಹುದು ಎಂದು ಭಾವಿಸಿದರೂ ಬ್ರಹ್ಮದೇವನು ಅಮರತ್ವದ ವರವನ್ನು ತಾನಾಗಿ ಕೊಟ್ಟ, ಕಾರಣ ಈ ವರವು 'ಅಯಾಚಿತ'ವಾಗಿದೆ.

ಅಯಾಚಿತ.

## ೬೩. ಬ್ರಹ್ಮದೇವ > ಕುಂಭಕರ್ಣ ಉತ್ತರಕಾಂಡ / ೧೦

ಅಗಸ್ತ್ಯ ಮುನಿಯು ಶ್ರೀರಾಮನಿಗೆ ರಾವಣ ಮತ್ತು ಆತನ ಸಹೋದರರು ಆಚರಿಸಿದ ತಪಸ್ಸು ಹಾಗೂ ಪಡೆದ ವರಗಳ ಬಗ್ಗೆ ಹೇಳುತ್ತಿದ್ದಾನೆ—

ಬ್ರಹ್ಮದೇವನು ರಾವಣ ಹಾಗೂ ವಿಭೀಷಣ ಇವರ ತಪಸ್ಸಿನಿಂದ ಸಂತುಷ್ಟನಾಗಿ ಅವರಿಗೆ ವರಗಳನ್ನು ಕೊಟ್ಟನಂತರ

... ಕುಂಭಕರ್ಣಾಯ ವರಂ ದಾತುಮವಸ್ಥಿತಮ್ । ೩೫
ನ ತಾವತ್ ಕುಂಭಕರ್ಣಾಯ ಪ್ರದಾತವ್ಯೋ ವರಸ್ತ್ವಯಾ ॥ ೩೬ ॥

ಬ್ರಹ್ಮದೇವನು ಕುಂಭಕರ್ಣನಿಗೆ ಸಹ ವರ ಕೊಡಲು ಸಿದ್ಧನಾದಾಗ ದೇವತೆಗಳೆಲ್ಲರೂ ಕೈಮುಗಿದು ಈ ರೀತಿ ಅವನನ್ನು ಪ್ರಾರ್ಥಿಸಿಕೊಂಡರು : "ನೀವು ಕುಂಭಕರ್ಣನಿಗಾದರೂ ಈ ರೀತಿಯ ವರವನ್ನು ಕೊಡಬೇಡಿರಿ ! ಈ ದುರ್ಬುದ್ಧಿಯವನು ಜನರನ್ನು ಯಾವ ರೀತಿ ಪೀಡಿಸುತ್ತಾನೆ ಎಂಬುದು ನಿಮಗೆ ತಿಳಿದ ವಿಷಯ.

ಅನೇನ ಭಕ್ಷಿತಾ ಬ್ರಹ್ಮನ್ನೃಪಯೋ ಮಾನುಷಾಸ್ತಥಾ ।
ಅಲಬ್ಧವರಪೂರ್ವೇಣ ಯತ್ ಕೃತಂ ರಾಕ್ಷಸೇನ ತು ॥ ೩೮ ॥
ಯದ್ಯೇಷ ವರಲಬ್ಧಃ ಸ್ಯಾದ್ ಭಕ್ಷಯೇದ್ ಭುವನತ್ರಯಮ್ ।
ವರವ್ಯಾಜೇನ ಮೋಹೋಽಸ್ಮೈ ದೀಯತಾಮಮಿತಪ್ರಭ ॥ ೩೯ ॥

"ಇವನು ಏಳು ಅಪ್ಸರೆಯರನ್ನೂ, ಮಹೇಂದ್ರನ ಹತ್ತು ಸೇವಕರನ್ನೂ, ಅನೇಕ ಮಾನವರನ್ನೂ ಮತ್ತು ಋಷಿಗಳನ್ನೂ ತಿಂದುಹಾಕಿದ್ದಾನೆ. ವರ ಪಡೆದನಂತರ ಈತನು ತ್ರೈಲೋಕ್ಯವನ್ನೇ ಭಕ್ಷಿಸಬಹುದು. ನೀವು ವರವನ್ನು ಕೊಡುವ ಆಸೆ ಹುಟ್ಟಿಸಿ ಆತನನ್ನು ಮೋಹವಶಮಾಡಿರಿ ! ಅಂದರೆ ಅದು ಜನರ ಹಿತದ್ದಾಗಿ ಆಗುವದು ; ಅಲ್ಲದೆ, ಕುಂಭಕರ್ಣನ ಪ್ರಾರ್ಥನೆಯನ್ನು ಮನ್ನಿಸಿದಂತೆ ಸಹ ಆಗುವದು." ದೇವತೆಗಳ ಈ ಕೋರಿಕೆಯನ್ನು ಕೇಳಿ ಬ್ರಹ್ಮದೇವನು, ಸರಸ್ವತಿಯನ್ನು ಸ್ಮರಿಸಿದನು. ಆಗ ಸರಸ್ವತಿಯು ಅಲ್ಲಿ ಬಂದು ನಿಂತಳು. 'ಯಾವ ಕಾರ್ಯವಾಗಬೇಕಿದೆ?' ಎಂದು ಪ್ರಶ್ನಿಸಿದಳು. ಆಗ ಬ್ರಹ್ಮದೇವನು ದೇವತೆಗಳ ಇಚ್ಛೆಯಂತೆ ಮಾಡಬೇಕೆಂದು ಹೇಳಿದನು. ಸರಸ್ವತಿಯು ಒಪ್ಪಿಕೊಂಡಳು. ಆಗ ಬ್ರಹ್ಮದೇವನು ಕುಂಭಕರ್ಣನಿಗೆ—

ಕುಂಭಕರ್ಣ ಮಹಾಬಾಹೋ ವರಂ ವರಯ ಯೋ ಮತಃ ॥ ೪೪ ॥

"ಹೇ ಮಹಾಪರಾಕ್ರಮಿ ಕುಂಭಕರ್ಣನೇ, ನಿನಗೆ ಇಷ್ಟವಿದ್ದ ವರವನ್ನು ಬೇಡು !" ಎಂದನು.

ಸ್ವಪ್ತುಂ ವರ್ಷಾಣ್ಯನೇಕಾನಿ ದೇವದೇವ ಮಮೇಪ್ಸಿತಮ್ । ೪೫

"ಹೇ ದೇವಾಧಿದೇವನೇ, ನಾನು ಬಹುವರ್ಷಪರ್ಯಂತ ನಿದ್ರಿಸುತ್ತಿರಬೇಕೆಂಬ ಇಚ್ಛೆ ನನ್ನದಾಗಿದೆ" ಎಂದನು. ಬ್ರಹ್ಮದೇವನು 'ತಥಾಸ್ತು' ಎಂದು ಹೇಳಿ ಹೊರಟುಹೋದನು. ಸರಸ್ವತಿಯು ದೇವತೆಗಳಿಗೆ

ಇಷ್ಟವಿದ್ದ ಮಾತುಗಳನ್ನು ಕುಂಭಕರ್ಣನಿಂದ ನುಡಿಸಿ ಅವನನ್ನು ಬಿಟ್ಟುಹೋದಳು. ಕುಂಭಕರ್ಣನಿಗೆ ಪ್ರಜ್ಞೆ ಬಂದನಂತರ ತಾನು ಈ ವಿಚಿತ್ರ ವರವನ್ನು ಬೇಡಿಕೊಂಡೆನೆಂಬ ಕಾರಣ ತುಂಬ ದುಃಖಕ್ಕೆ ಒಳಗಾದನು.

ಏವಂ ಲಬ್ಧವರಾಃ ಸರ್ವೇ ಭ್ರಾತರೋ ದೀಪ್ತತೇಜಸಃ । ೪೯

ಈ ರೀತಿಯಲ್ಲಿ, ತೇಜಸ್ವಿಗಳಾದ ಆ ಸೋದರರೆಲ್ಲರಿಗೆ ವರಗಳು ಪ್ರಾಪ್ತವಾದವು.

ಉತ್ತರಕಾಂಡ / ೧೧

ಸುಮಾಲೀ ವರಲಬ್ಧಾಂಸ್ತು ಜ್ಞಾತ್ವಾ ಚೈತಾನ್ ನಿಶಾಚರಾನ್ । ೧

ರಾಕ್ಷಸರಿಗೆ ವರ ದೊರೆತುದನ್ನು ಕೇಳಿ ಸುಮಾಲಿ ನಿರ್ಭಯನಾಗಿ ನಿಶಾಚರರೊಡನೆ ರಸಾತಳದಿಂದ ಮೇಲೆದ್ದುಬಂದನು.

ಇದು 'ಅಯಾಚಿತ' ವರ.

### ೬೪. ಶಂಕರ > ರಾವಣ

ಉತ್ತರಕಾಂಡ / ೧೬

ಅಗಸ್ತ್ಯಮುನಿಯು ದಶಾನನನಿಗೆ ರಾವಣನೆಂಬ ಹೆಸರು ಹೇಗೆ ಬಂದಿತು ? ಶಂಕರನು ಅವನಿಗೆ ಯಾವ ವರಗಳನ್ನು ಕೊಟ್ಟನು ? ಎಂಬ ಬಗ್ಗೆ ಶ್ರೀರಾಮನಿಗೆ ವಿವರಿಸುತ್ತಾನೆ :

"ಶಂಕರನ ಬಗ್ಗೆ ಅತ್ಯಂತ ಪೂಜ್ಯಭಾವನೆಯನ್ನು ಹೊಂದಿದ್ದ ನಂದಿಯ ಎದುರು ರಾವಣನು ಉದ್ಧಾಮನಾಗಿ ವರ್ತಿಸಿದ್ದನು ; ಉದ್ಧಟತನದಿಂದ ಮಾತನಾಡಿದ್ದನು. ಆಗ ನಂದಿಯು ಅವನಿಗೆ ಶಾಪವನ್ನು ಕೊಟ್ಟನು. ರಾವಣನು ನಂದಿಯ ಮಾತುಗಳತ್ತ ಗಮನವೀಯದೇ, ಶಂಕರಪಾರ್ವತಿಯರು ಕ್ರೀಡೆಯಲ್ಲಿ ತೊಡಗಿದ್ದ ಪರ್ವತವನ್ನೇರಿಹೋಗಲು ಅಪೇಕ್ಷಿಸಿದನು. ಆಗ ಪುಷ್ಪಕವಿಮಾನದ ಗತಿಯು ಕುಂಠಿತವಾಯಿತು. ಹೀಗಾಗಿ ರಾವಣನು ರೊಚ್ಚಿಗೆದ್ದು ಆ ಪರ್ವತವನ್ನು ಕಿತ್ತು ಎಸೆಯಲು ಯತ್ನಿಸಿದನು. ಶಂಕರನು ತನ್ನ ಪಾದದ ಹೆಬ್ಬೆರಳಿನಿಂದ ಆ ಪರ್ವತವನ್ನು ಕೆಳಕ್ಕೆ ಅದುಮಿದನು. ಆಗ ರಾವಣನ ಕೈಗಳೆರಡೂ ಅದರಡಿಯಲ್ಲಿ ಸಿಲುಕಿಕೊಂಡವು. ರಾವಣನು ಕ್ರೋಧಗೊಂಡು ಗರ್ಜಿಸಹತ್ತಿದನು. ರಾವಣನ ಅಮಾತ್ಯರು ಆತನಿಗೆ ಶಂಕರನನ್ನು ಒಲಿಸಿಕೊಳ್ಳುವಂತೆ ಸಲಹೆಯಿತ್ತರು. ಆಗ ರಾವಣನು ಹಲವಾರು ರೀತಿಯಲ್ಲಿ ಶಿವನನ್ನು ಸ್ತುತಿಸಿ ಆತನಿಗೆ ಶರಣುಹೋದನು. ತನ್ನ ಕೈಗಳೆರಡೂ ಅದುಮಿಕೊಂಡಿದ್ದ ಸ್ಥಿತಿಯಲ್ಲಿದ್ದ ರಾವಣನು ಒಂದು ಸಹಸ್ರ ವರ್ಷಗಳವರೆಗೆ ಶಿವನನ್ನು ಸ್ತುತಿಸಿದನಂತರ ಆತನ ಕೈಗಳು ಬಿಡುಗಡೆಹೊಂದಿದವು. ಶಿವನು ಸಂತೋಷಗೊಂಡನು. ರಾವಣನ ಎರಡೂ ಕೈಗಳು ಪರ್ವತದಡಿಯಲ್ಲಿ ಸಿಲುಕಿಕೊಂಡಾಗ ಆತನ ಅತಿಭಯಂಕರ ಆಕ್ರೋಶದಿಂದ ತ್ರೈಲೋಕ್ಯವೆಲ್ಲ ರಾವಿತವಾಯಿತು (ನಿನಾದಿಸಿತು). ಈ ಕಾರಣ ಶಂಕರನು 'ಇನ್ನುಮುಂದೆ ನೀನು ರಾವಣನೆಂದು ಖ್ಯಾತಿಪಡೆಯುವೆ' ಎಂದು ಹೇಳಿದನು. ಅಲ್ಲದೆ 'ಇನ್ನು ನೀನು ನಿನ್ನ ಸ್ಥಾನಕ್ಕೆ ಮರಳು' ಎಂದು ಅಪ್ಪಣೆಯಿತ್ತನು. ಆಗ ರಾವಣನು ಶಂಕರನಿಗೆ —

ಪ್ರೀತೋ ಯದಿ ಮಹಾದೇವ ವರಂ ಮೇ ದೇಹಿ ಯಾಚತಃ ॥ ೪೦ ॥

"ಹೇ ಮಹಾದೇವನೇ, ನೀನು ಪ್ರಸನ್ನನಾಗಿದ್ದರೆ ಯಾಚಕನಾದ ನನಗೆ ಒಂದು ವರವನ್ನು ಕರುಣಿಸು ! ದೇವ, ಗಂಧರ್ವ, ದಾನವ, ರಾಕ್ಷಸ, ಗುಹ್ಯಕ, ನಾಗ ಮತ್ತು ಇನ್ನಿತರ ಬಲಾಢ್ಯ ಪ್ರಾಣಿಗಳಿಂದ ನನಗೆ ಯಾವ ಭಯವೂ ಇರುವದಿಲ್ಲ ಎಂಬ ವರವನ್ನು ಪಡೆದಿದ್ದೇನೆ. ಹೇ ದೇವನೇ, ಮನುಷ್ಯರಂಥ ಕ್ಷುದ್ರ ಜೀವಿಗಳ ಪರಿವೆ ನನಗೆ ಇರುವದಿಲ್ಲ. ಬ್ರಹ್ಮದೇವನಿಂದ ದೀರ್ಘ ಆಯುಸ್ಸನ್ನು ಕೇಳಿ ಪಡೆದುಕೊಂಡಿದ್ದೇನೆ. ಆದರೆ —

ವಾಂಛಿತಂ ಚಾಯುಷಃ ಶೇಷಂ ಶಸ್ತ್ರಂ ತ್ವಂ ಚ ಪ್ರಯಚ್ಛ ಮೇ । ೪೩

"ನಾನು ಇನ್ನು ಮಿಕ್ಕಿ ಉಳಿದ ನನ್ನ ಆಯುಸ್ಸನ್ನು ಪೂರ್ಣ ಉಪಭೋಗಿಸಬೇಕು ; ಶಾಪಾದಿಗಳ ಮೂಲಕ ಅದು ಕಡಿಮೆಯಾಗಬಾರದು ಎಂಬ ಇಚ್ಛೆಯು ನನ್ನದಾಗಿದೆ. ಈ ರೀತಿಯ ಅವಶಿಷ್ಟ ಆಯುಸ್ಸನ್ನು ಮತ್ತು ಶಸ್ತ್ರವನ್ನು ನನಗೆ ಕೊಡು !"

ಶಂಕರನು ರಾವಣನ ಈ ಬಗೆಯ ಯಾಚನೆಯನ್ನು ಒಪ್ಪಿಕೊಂಡು ಅವನಿಗೆ 'ಚಂದ್ರಹಾಸ'ವೆಂಬ ಖಡ್ಗವನ್ನು ಕೊಟ್ಟನು. ಆತನ ಕೋರಿಕೆಯ ಆಯುಸ್ಸನ್ನೂ ಕೊಟ್ಟನು. ಶಂಕರನು ಮುಂದೆ ಈ ರೀತಿ ನುಡಿದನು : "ನೀನು ಈ ಶಸ್ತ್ರವನ್ನು ಅವಮಾನಿಸಬೇಡ ! ನಿನ್ನಿಂದ ಅವಮಾನ ನಡೆದರೆ ಈ ದೇದೀಪ್ಯಮಾನ ಖಡ್ಗವು ನನ್ನತ್ತ ಮರಳಿ ನನ್ನ ಕೈಸೇರುವದೆಂಬುದರಲ್ಲಿ ಸಂಶಯವಿಲ್ಲ."

ಯಾಚಿತ.

ಅನುಗ್ರಹ (ಚಂದ್ರಹಾಸ ಖಡ್ಗ).

**೬೫. ಇಂದ್ರ > ಮಯೂರ** ಉತ್ತರಕಾಂಡ / ೧೮

ಅಗಸ್ತ್ಯಮುನಿಯು ಶ್ರೀರಾಮನಿಗೆ ಮರುತ್ತರಾಜನ ಯಾಗದ ವೃತ್ತಾಂತವನ್ನು ಹೇಳುತ್ತಿದ್ದಾನೆ :

ಮರುತ್ತರಾಜನು ಉಶೀರಬೀಜ ಎಂಬ ದೇಶದಲ್ಲಿ ದೇವತೆಗಳ ಸಹಿತ ಯಾಗವನ್ನು ಕೈಗೊಂಡಿದ್ದನು. ಬೃಹಸ್ಪತಿಯ ಸಹೋದರನಾದ, ಧರ್ಮವಿದನಾದ ಸಂವರ್ತ ಎಂಬಾತನು ಆತನ ಪುರೋಹಿತನಾಗಿದ್ದನು. ರಾವಣನು ಈ ಯಜ್ಞವು ಇಲ್ಲಿ ನಡೆದಿದೆ ಎಂಬುದನ್ನು ಅರಿತಿದ್ದಾನೆ ಎಂಬ ಸಂಗತಿಯು ಈ ಯಜ್ಞ ಮಾಡುವವರಿಗೆ ತಿಳಿದುಬಂದಿತು. ಆಗ ರಾವಣನು ಇಲ್ಲಿಗೆ ಬಂದು ಹಲ್ಲೆ ನಡೆಯಿಸಬಹುದು ಎಂಬ ಭೀತಿಯನ್ನು ತಾಳಿ ದೇವತೆಗಳೆಲ್ಲರೂ ಒಬ್ಬೊಬ್ಬರಾಗಿ ತಿರ್ಯಗ್‌ಯೋನಿಯನ್ನು (ಪ್ರಾಣಿ-ಪಕ್ಷಿಗಳ ರೂಪ) ಪ್ರವೇಶಿಸಿದರು. ಇಂದ್ರನು ನವಿಲಿನ ರೂಪ ತಾಳಿದನು. ಧರ್ಮರಾಜ ಯಮನು ಕಾಗೆಯಾದನು ; ವರುಣನು ಹಂಸರೂಪವನ್ನು ಸ್ವೀಕರಿಸಿದನು. ಧನಾಧ್ಯಕ್ಷನಾದ ಕುಬೇರನು ಓತಿಕೇತನಾದನು. ಇನ್ನಿತರ ದೇವತಾದಿಗಳು ಅನ್ಯ ಪಶುಪಕ್ಷಿಗಳ ರೂಪವನ್ನು ತಾಳಿದರು. ರಾವಣನು ಆ ಯಜ್ಞಮಂಟಪವನ್ನು ಪ್ರವೇಶಿಸಿ ಮರುತ್ತರಾಜನನ್ನು ಯುದ್ಧಕ್ಕೆ ಆಹ್ವಾನಿಸಿದನು. ಮರುತ್ತರಾಜನು ಅಂಜಿಕೆಯಿಲ್ಲದೆ 'ಯಾರು ನೀನು ?' ಎಂದು ರಾವಣನನ್ನು ಪ್ರಶ್ನಿಸಿದನು. ರಾವಣನು ಆಗ ತನ್ನ ಪೌರುಷವನ್ನು ತಾನೇ ಬಣ್ಣಿಸಿಕೊಂಡನು. ಅದನ್ನು ಕೇಳಿ ಮರುತ್ತರಾಜನು ಯುದ್ಧಕ್ಕೆ ಸಜ್ಜಾದನು. ಆದರೆ ಆತನ ಪುರೋಹಿತರು ಆತನನ್ನು ತಡೆದರು. 'ಈ ಮಾಹೇಶ್ವರಯಾಗವು ಮುಗಿಯುವವರೆಗೆ ದೀಕ್ಷೆಯನ್ನು ತೆಗೆದುಕೊಂಡವನಿಗೆ ಯುದ್ಧಮಾಡುವ ಅಧಿಕಾರವಿರುವದಿಲ್ಲ. ಈಗ ಪ್ರಹಾರ ಮಾಡುವದು ಸರಿಯಲ್ಲ ; ಮಾಡಿದಲ್ಲಿ ಕುಲದ ನಾಶವಾಗುವದು ; ಅಲ್ಲದೆ, ಈ ಯುದ್ಧದಲ್ಲಿ ವಿಜಯದ ಸಾಧ್ಯತೆ ಕಡಿಮೆ ; ಏಕೆಂದರೆ ಯಾರಿಂದಲೂ ರಾವಣನಿಗೆ ಸೋಲು ಬರುವಂತಿಲ್ಲ' ಎಂದರು.

ಮರುತ್ತರಾಜನು ಪುರೋಹಿತರ ಸೂಚನೆಯ ಪ್ರಕಾರ ಯುದ್ಧದ ವಿಚಾರವನ್ನು ಬಿಟ್ಟುಕೊಟ್ಟನು. ಶುಕರಾಕ್ಷಸನು ರಾವಣನಿಗೆ ಜಯವಾಯಿತೆಂದು ಘೋಷಿಸಿದನು. ರಾವಣನು ಯಜ್ಞಕ್ಕಾಗಿ ಬಂದ ಮಹರ್ಷಿಗಳನ್ನು ಭಕ್ಷಿಸಿ ಪುನಃ ಪೃಥ್ವಿಯ ಮೇಲೆ ಸಂಚರಿಸಹತ್ತಿದನು. ಅವನು ಹೊರಟುಹೋದನಂತರ ದೇವತೆಗಳು ತಮ್ಮ ತಮ್ಮ ನಿಜರೂಪಗಳನ್ನು ಪಡೆದರು. ಆ ಎಲ್ಲ ಪಕ್ಷಿ-ಪ್ರಾಣಿಗಳಿಗೆ ವರವನ್ನಿತ್ತರು.

> ಹರ್ಷಾತ್ತದಾಽಬ್ರವೀದಿಂದ್ರೋ ಮಯೂರಂ ನೀಲಬರ್ಹಿಣಮ್ ।
> ಪ್ರೀತೋಽಸ್ಮಿ ತವ ಧರ್ಮಜ್ಞ ಭುಜಂಗಾದ್ಧಿ ನ ತೇ ಭಯಮ್ ॥ ೨೨ ॥
> ಇದಂ ನೇತ್ರಸಹಸ್ರಂ ತು ಯತ್ತದ್‌ಬರ್ಹೇ ಭವಿಷ್ಯತಿ ।
> ವರ್ಷಮಾಣೇ ಮಯಿ ಮುದಂ ಪ್ರಾಪ್ಸ್ಯಸೇ ಪ್ರೀತಿಲಕ್ಷಣಾಮ್ ॥ ೨೩ ॥
> ಏವಮಿಂದ್ರೋ ವರಂ ಪ್ರಾದಾನ್ಮಯೂರಸ್ಯ ಸುರೇಶ್ವರಃ ॥ ೨೪ ॥

ಇಂದ್ರನು ಆನಂದದಿಂದ ನೀಲವರ್ಣದ ಗರಿಗಳುಳ್ಳ ನವಿಲಿಗೆ ಇಂತೆಂದನು :

"ಹೇ ಧರ್ಮಜ್ಞನೇ, ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ಸರ್ಪಗಳ ಭಯವು ನಿನಗೆ ಇರಲಾರದು. ನನ್ನ ಸಾವಿರ ಕಣ್ಣುಗಳು ನಿನ್ನ ಗರಿಗಳ ಮೇಲೆ ಸ್ಥಾಪಿತವಾಗುವವು. ನಾನು ಮಳೆಗರೆಯುತ್ತಿದ್ದಾಗ ನಿನಗೆ ಪ್ರೇಮಸೂಚಕ ಆನಂದವು ಆಗುವದು." ಈ ರೀತಿ ದೇವೇಂದ್ರನು ಮಯೂರಪಕ್ಷಿಗೆ ವರವನ್ನು ಕೊಟ್ಟನು.

ಈ ಮೊದಲು ನವಿಲಿನ ಗರಿಗಳು ಕೇವಲ ನೀಲವರ್ಣದವಿದ್ದವು. ಈ ವರದಿಂದ ಅವುಗಳ ಮೇಲೆ ನೇತ್ರಗಳು ಮೂಡಿದವು.

ಅಯಾಚಿತ.

### ೬೬. ಯಮ > ಕಾಗೆ

ಉತ್ತರಕಾಂಡ / ೧೮

ಅಗಸ್ತ್ಯಮುನಿಯು ಶ್ರೀರಾಮನಿಗೆ ಮರುತ್ತರಾಜನ ಯಾಗದ ವಿಷಯದ ಬಗ್ಗೆ ಹೇಳುತ್ತಿದ್ದಾನೆ.
ನೋಡಿ : ಇಂದ್ರ > ಮಯೂರ, ವರ ಕ್ರ. ೬೫.

ಧರ್ಮರಾಜೋಽಬ್ರವೀದ್ರಾಮ ಪ್ರಾಗ್ವಂಶೇ ವಾಯಸಂ ಪ್ರತಿ ।
ಪಕ್ಷಿಂಸ್ತವಾಸ್ಮಿ ಸುಪ್ರೀತಃ ಪ್ರೀತಸ್ಯ ವಚನಂ ಶೃಣು ॥ ೨೬ ॥
ಯಥಾನ್ಯೇ ವಿವಿಧೈಃ ರೋಗೈಃ ಪೀಡ್ಯಂತೇ ಪ್ರಾಣಿನೋ ಮಯಾ ।
ತೇ ನ ತೇ ಪ್ರಭವಿಷ್ಯಂತಿ ಮಯಿ ಪ್ರೀತೇ ನ ಸಂಶಯಃ ॥ ೨೭ ॥
ಮೃತ್ಯುತಸ್ತೇ ಭಯಂ ನಾಸ್ತಿ ವರಾನ್ಮಮ ವಿಹಂಗಮ ।
ಯಾವತ್ತ್ವಾಂ ನ ವಧಿಷ್ಯಂತಿ ನರಾಸ್ತಾವದ್ಭವಿಷ್ಯಸಿ ॥ ೨೮ ॥
ಯೇ ಚ ಮದ್ವಿಷಯಸ್ಥಾವೈ ಮಾನವಾಃ ಕ್ಷುಧಯಾರ್ದಿತಾಃ ।
ತ್ವಯಿ ಭುಕ್ತೇ ಸುತೃಪ್ತಾಸ್ತೇ ಭವಿಷ್ಯಂತಿ ಸಬಾಂಧವಾಃ ॥ ೨೯ ॥

ಯಮಧರ್ಮರಾಯನು ಪ್ರಾಗ್ವಂಶವನ್ನಾಶ್ರಯಿಸಿ ಕುಳಿತ ಕಾಗೆಯನ್ನು ಕುರಿತು ಹೀಗೆಂದನು : "ಹೇ ಪಕ್ಷಿಯೇ, ನಾನು ನಿನ್ನಮೇಲೆ ಪ್ರಸನ್ನನಾಗಿದ್ದೇನೆ. ಪ್ರಸನ್ನನಾದ ನನ್ನ ಮಾತುಗಳನ್ನು ಆಲಿಸು ! ಇನ್ನಿತರ ಪ್ರಾಣಿಗಳನ್ನು ಹಲವು ವ್ಯಾಧಿಗಳಿಂದ ಪೀಡಿಸುತ್ತಿರುತ್ತೇನೆ ; ಆದರೆ ನಾನು ನಿನ್ನ ಮೇಲೆ ಸಂತೋಷಹೊಂದಿದ ಕಾರಣ ನಿನಗೆ ರೋಗದ ಪೀಡೆಯೇ ಇರಲಾರದು. ಎಲ್ಲಿಯವರೆಗೆ ಮನುಷ್ಯರಿಂದ ಇಲ್ಲವೇ ಇತರ ಪ್ರಾಣಿಗಳಿಂದ ನಿನ್ನ ಹತ್ಯೆಯಾಗುವದಿಲ್ಲವೋ ಅವರೆಗೆ ನೀನು ಬದುಕಿರುವೆ. ನಿನಗೆ ಆಹಾರಭೋಜನಾದಿಗಳು ದೊರೆತಾಗ, ಯಮಲೋಕದಲ್ಲಿ ಹಸಿವೆಬಾಯಾರಿಕೆಗಳಿಂದ ಬಳಲುತ್ತಿರುವವರು, ತಮ್ಮ ಸ್ವಬಾಂಧವರೊಂದಿಗೆ ತೃಪ್ತಿಯನ್ನು ಹೊಂದುವರು."

ಅಯಾಚಿತ.

### ೬೭. ವರುಣ > ಹಂಸ

ಉತ್ತರಕಾಂಡ / ೧೮

ಅಗಸ್ತ್ಯಮುನಿಯು ಶ್ರೀರಾಮನಿಗೆ ಮರುತ್ತರಾಜನ ಯಾಗದ ವೃತ್ತಾಂತವನ್ನು ಹೇಳುತ್ತಿದ್ದಾನೆ.
ನೋಡಿ : ಚಂದ್ರ > ಮಯೂರ, ವರ ಕ್ರ. ೬೫.

ವರುಣಸ್ತ್ವಬ್ರವೀದ್ಧಂಸಂ ಗಂಗಾತೋಯವಿಚಾರಿಣಮ್ ।
ಶ್ರೂಯತಾಂ ಪ್ರೀತಿಸಂಯುಕ್ತಂ ವಚಃ ಪತ್ರರಥೇಶ್ವರ ॥ ೩೦ ॥
ವರ್ಣೋ ಮನೋರಮಃ ಸೌಮ್ಯಶ್ಚಂದ್ರಮಂಡಲಸಂನಿಭಃ ।
ಭವಿಷ್ಯತಿ ತವೋದಗ್ರಃ ಶುದ್ಧಫೇನಸಮಪ್ರಭಃ ॥ ೩೧ ॥
ಮಚ್ಛರೀರಂ ಸಮಾಸಾದ್ಯ ಕಾಂತೋ ನಿತ್ಯಂ ಭವಿಷ್ಯಸಿ ।
ಪ್ರಾಪ್ಸ್ಯಸೇ ಚಾತುಲಾಂ ಪ್ರೀತಿಮೇತನ್ಮೇ ಪ್ರೀತಿಲಕ್ಷಣಮ್ ॥ ೩೨ ॥

ವರುಣನು ಗಂಗೋದಕದಲ್ಲಿ ವಿಹರಿಸುತ್ತಿದ್ದ ಪಕ್ಷಿರಾಜನಾದ ಹಂಸಕ್ಕೆ ಇಂತೆಂದನು : "ನನ್ನ ಪ್ರಿಯ ಭಾಷಣವನ್ನು ಆಲಿಸು ! ಶುಭ್ರನೊರೆಯಂತೆ ಪ್ರಭೆಯುಳ್ಳ, ಚಂದ್ರಮಂಡಲದಂತೆ ಕಾಂತಿಯುಳ್ಳ ಹಾಗೂ ಮನೋಹರಸೌಮ್ಯವಾದ ಉತ್ತಮ ವರ್ಣವು ನಿನ್ನ ಶರೀರದ ಕಾಂತಿಯಾಗಲಿ ! ನನ್ನ ರೂಪವಿದ್ದ ಜಲಾಶಯದಲ್ಲಿ ಯಾವಾಗಲೂ ಮನೋಹರನಾಗಿ ಕಂಗೊಳಿಸುತ್ತಿರು ! ನೀನು ನನ್ನ ಪ್ರೀತಿಯ ಕುರುಹಾಗಿ ಸದಾಕಾಲವೂ ಆನಂದದಲ್ಲಿರು."

ಈ ಮೊದಲು ಹಂಸಪಕ್ಷಿಯ ವರ್ಣವು ಬಿಳಿಯದಾಗಿರಲಿಲ್ಲ. ಆ ಪಕ್ಷಿಯ ರೆಕ್ಕೆಗಳ ತುದಿಗಳು ನೀಲವರ್ಣದವಿದ್ದವು ಮತ್ತು ಎದೆಯ ಭಾಗವು ಎಳಸಾದ ಹುಲ್ಲಿನ ವರ್ಣದ್ದಾಗಿರುತ್ತಿತ್ತು.

ಅಯಾಚಿತ.

### ೬೮. ವೈಶ್ರವಣ > ಕೃಕಲಾಸ (ಓತಿಕೇತ) ಉತ್ತರಕಾಂಡ / ೧೮

ಅಗಸ್ತ್ಯಮುನಿಯು ಶ್ರೀರಾಮನಿಗೆ ಮರುತ್ತರಾಜನ ಯಾಗದ ಬಗ್ಗೆ ಹೇಳುತ್ತಾನೆ.
ನೋಡಿ : ಇಂದ್ರ > ಮಯೂರ, ವರ ಕ್ರ. ೬೫.

> ಅಥಾಬ್ರವೀದ್ವೈಶ್ರವಣಃ ಕೃಕಲಾಸಂ ಗಿರೌ ಸ್ಥಿತಮ್ ।
> ಹೈರಣ್ಯಂ ಸಂಪ್ರಯಚ್ಛಾಮಿ ವರ್ಣಂ ಪ್ರೀತಸ್ತವಾಪ್ಯಹಮ್ ॥ ೩೪ ॥
> ಸದ್ರವ್ಯಂ ಚ ಶಿರೋ ನಿತ್ಯಂ ಭವಿಷ್ಯತಿ ತವಾಕ್ಷಯಮ್ ।
> ಏಷ ಕಾಂಚನಕೋ ವರ್ಣೋ ಮತ್ಪ್ರೀತ್ಯಾ ತೇ ಭವಿಷ್ಯತಿ ॥ ೩೫ ॥

ವೈಶ್ರವಣನು ಪರ್ವತದ ಮೇಲೆ ನೆಲೆಸಿದ್ದ ಕೃಕಲಾಸ(ಓತಿಕೇತ)ಕ್ಕೆ ಇಂತೆಂದನು : "ನಾನು ನಿನಗೆ ಪ್ರಸನ್ನನಾಗಿದ್ದೇನೆ. ನಿನಗೆ ಹೊನ್ನಿನ ವರ್ಣವನ್ನು ದಯಪಾಲಿಸುತ್ತೇನೆ. ಆದರಿಂದ ನಿನ್ನ ಶಿರದ ಭಾಗವು ಯಾವಾಗಲೂ ಸುವರ್ಣವಾಗಿ ಉಳಿಯುವದು. ಸ್ವಲ್ಪದರಲ್ಲಿ ಹೇಳಬೇಕೆಂದರೆ ನಿನ್ನ ವರ್ಣವು ನನ್ನ ಪ್ರೀತಿಯ ದ್ಯೋತಕವಾಗುವದು."

ಅಯಾಚಿತ.

### ೬೯. ಬ್ರಹ್ಮದೇವ > ನಿವಾತಕವಚ ಯುದ್ಧಕಾಂಡ / ೨೩

ಅಗಸ್ತ್ಯಮುನಿಯು ಶ್ರೀರಾಮನಿಗೆ ರಾವಣನ ಪರಾಕ್ರಮವನ್ನು ಕುರಿತು ಬಣ್ಣಿಸುತ್ತಿದ್ದಾನೆ.

ರಾವಣನು ಯಮನನ್ನು ಸೋಲಿಸಿದನಂತರ ಮಾರೀಚ ಪ್ರಭೃತಿರಾಕ್ಷಸರೊಂದಿಗೆ ಪುಷ್ಪಕವಿಮಾನದಿಂದ ಸಾಗರವನನ್ನು ಪ್ರವೇಶಿಸಿ ಪಾತಾಳಕ್ಕೆ ಹೋದನು. ಆತನು ವಾಸುಕಿಯಿಂದ ರಕ್ಷಿಸಲ್ಪಡುತ್ತಿದ್ದ 'ಭೋಗವತಿ' ಎಂಬ ಪಟ್ಟಣಕ್ಕೆ ಹೋಗಿ ನಾಗಜನರನ್ನು ಗೆದ್ದುಕೊಂಡನು. ಅಲ್ಲಿಂದ ಮುಂದೆ ಅವನು ಮಣಿಮಯಿ ಎಂಬ ನಗರಕ್ಕೆ ಹೋದನು.

> ನಿವಾತಕವಚಾಸ್ತತ್ರ ದೈತ್ಯಾ ಲಬ್ಧವರಾ ವಸನ್ । ೬

ಬ್ರಹ್ಮದೇವನಿಂದ ವರವನ್ನು ಪಡೆದ ನಿವಾತಕವಚರೆಂಬ ದೈತ್ಯರು ಅಲ್ಲಿ ವಾಸವಿದ್ದರು.

ರಾವಣನು ಅವರನ್ನು ಯುದ್ಧಕ್ಕೆ ಆಹ್ವಾನಿಸಿದನು. ಯುದ್ಧವು ಒಂದು ವರ್ಷದವರೆಗೆ ನಡೆಯಿತು ; ಆದರೆ ಯಾವ ಪಕ್ಷಕ್ಕೂ ಜಯ ಸಿಗಲಿಲ್ಲ. ಆಗ ಬ್ರಹ್ಮದೇವನು ವಿಮಾನಾರೂಢನಾಗಿ ಅಲ್ಲಿಗೆ ಬಂದು —

> ನ ಹ್ಯಯಂ ರಾವಣೋ ಯುದ್ಧೇ ಶಕ್ಯೋ ಜೇತುಂ ಸುರಾಸುರೈಃ ।
> ನ ಭವಂತಃ ಕ್ಷಯಂ ನೇತುಮಪಿ ಸಾಮರದಾನವೈಃ ॥ ೧೨ ॥

"ಈ ರಾವಣನನನ್ನು ಯುದ್ಧದಲ್ಲಿ ಸೋಲಿಸುವದು ದೇವ-ದೈತ್ಯರಿಗೆ ಸಾಧ್ಯವಿಲ್ಲ. ಆತನು ನಿಮ್ಮನ್ನು ಸೋಲಿಸವದು ಕಠಿಣವಾಗಿದೆ. ಈ ವರದಿಂದಾಗಿ ನೀವಿಬ್ಬರೂ ಸಮಾನವಾದ ಬಲವುಳ್ಳವರಾಗಿರುವಿರಿ. ಹೀಗಿರುವದರಿಂದ ನೀವು ರಾವಣನೊಡನೆ ಸ್ನೇಹವನ್ನು ಬೆಳೆಸಿರಿ" ಎಂದು ನಿವಾತಕವಚರಿಗೆ ಉಪದೇಶಿಸಿದನು. ಈ ಪ್ರಕಾರ ರಾವಣ ಮತ್ತು ನಿವಾತಕವಚರು ಮಿತ್ರರಾದರು.

ಇಲ್ಲಿ ವರದ ಸ್ವರೂಪವು ಸ್ಪಷ್ಟವಾಗಿಲ್ಲ. ವರ ದೊರೆತ ಉಲ್ಲೇಖ ಮಾತ್ರ ಬಂದಿದೆ.

ಅನಿಶ್ಚಿತ.

### ೭೦. ಮಹೇಶ್ವರ > ಮೇಘನಾದ (ಇಂದ್ರಜಿತು) ಉತ್ತರಕಾಂಡ / ೨೫

ಅಗಸ್ತ್ಯಮುನಿಯು ಶ್ರೀರಾಮನಿಗೆ, ಮಹೇಶ್ವರನಿಂದ ಮೇಘನಾದನಿಗೆ ದೊರೆತ ವರದ ಸಮಾಚಾರವನ್ನು ಹೇಳುತ್ತಿದ್ದಾನೆ :

"ಲಂಕೆಯ ಸಮೀಪದಲ್ಲಿ 'ನಿಕುಂಭಿಲಾ' ಹೆಸರಿನ ಒಂದು ಉತ್ತಮವಾದ ಉದ್ಯಾನವಿದೆ. ಒಂದು ಸಲ ರಾವಣನು ತನ್ನ ಅನುಯಾಯಿಗಳೊಂದಿಗೆ ಅಲ್ಲಿಗೆ ತಲುಪಿದಾಗ ಆತನಿಗೆ ಒಂದು ಯಜ್ಞವು ಸಾಂಗವಾಗು

ತ್ತಿರುವದು ಕಂಡಿತು. ಕೃಷ್ಣಾಜಿನವನ್ನು ತೊಟ್ಟು ಕಮಂಡಲ ಮತ್ತು ದಂಡವನ್ನು ಉದ್ಧರಿಸಿದ ಆತನ ಪುತ್ರನಾದ ಮೇಘನಾದನು ಅಲ್ಲಿ ದೃಷ್ಟಿಗೆ ಬಿದ್ದನು. ಆಗ ರಾವಣನು ಆತನ ಬಳಿ ಹೋಗಿ ಅಪ್ಪಿಕೊಂಡು ಇಂತೆಂದನು "ವತ್ಸನೇ, ನೀನು ಇಲ್ಲಿ ಏನು ಮಾಡುತ್ತಿರುವೆ ಎಂಬುದನ್ನು ನನಗೆ ನಿಜವಾಗಿ ಹೇಳು !"

"ಆಗ ಮೇಘನಾದನು ಯಜ್ಞವು ಸಫಲಗೊಳ್ಳಬೇಕೆಂದು ದ್ವಿಜಶ್ರೇಷ್ಠನಾದ 'ಉಶನಾ' ಎಂಬ ತಪಸ್ವಿಯು ರಾವಣನಿಗೆ : 'ರಾಜನೇ, ನಾನು ನಿನಗೆ ನಿಜಸಂಗತಿಯನ್ನು ಅರುಹುವೆ ; ನೀನು ಅದನ್ನು ಕೇಳು ! ನಿನ್ನ ಪುತ್ರನು ಅಗ್ನಿಷ್ಟೋಮ, ಅಶ್ವಮೇಧ, ಬಹುಸುವರ್ಣಕ ಯಜ್ಞ, ರಾಜಸೂಯ, ಗೋಮೇಧ, ವೈಷ್ಣವ ಹಾಗೂ ಮಾಹೇಶ್ವರ ಎಂಬ ಏಳು ಯಜ್ಞಗಳನ್ನು ಪೂರ್ತಿಗೊಳಿಸಿದ್ದಾನೆ."

ಮಾಹೇಶ್ವರೇ ಪ್ರವೃತ್ತೇ ತು ಯಜ್ಞೇ ಪುಂಭಿಃ ಸುದುರ್ಲಭೇ ।
ವರಾಂಸ್ತೇ ಲಬ್ಧವಾನ್ಪುತ್ರಃ ಸಾಕ್ಷಾತ್ಪಶುಪತೇರಿಹ ॥ ೯ ॥
ಕಾಮಗಂ ಸ್ಯಂದನಂ ದಿವ್ಯಮಂತರಿಕ್ಷಚರಂ ಧ್ರುವಮ್ ।
ಮಾಯಾಂ ಚ ತಾಮಸೀಂ ನಾಮ ಯಯಾ ಸಂಪದ್ಯತೇ ತಮಃ ॥ ೧೦ ॥
ಏತಯಾ ಕಿಲ ಸಂಗ್ರಾಮೇ ಮಾಯಯಾ ರಾಕ್ಷಸೇಶ್ವರ ।
ಪ್ರಯುಕ್ತಯಾ ಗತಿಃ ಶಕ್ಯಾ ನ ಹಿ ಜ್ಞಾತುಂ ಸುರಾಸುರೈಃ ॥ ೧೧ ॥
ಅಕ್ಷಯಾವಿಷುಧೀ ಬಾಣೈಶ್ಚಾಪಂ ಚಾಪಿ ಸುದುರ್ಜಯಮ್ ।
ಅಸ್ತ್ರಂ ಚ ಬಲವದ್ರಾಜಂಛತ್ರುವಿಧ್ವಂಸನಂ ರಣೇ ॥ ೧೨ ॥
ಏತಾನ್ಸರ್ವಾನ್ವರಾಂಲ್ಲಬ್ಧ್ವಾ ಪುತ್ರಸ್ತೇಽಯಂ ದಶಾನನ ।
ಅದ್ಯ ಯಜ್ಞಸಮಾಪ್ತೌ ಚ ತ್ವಾಂ ದಿದೃಕ್ಷನ್ಸ್ಥಿತೋ ಹ್ಯಹಮ್ ॥ ೧೩ ॥

"ಅತಿಕಠಿಣವಾದ ಮಾಹೇಶ್ವರ ಯಜ್ಞವು ನಡೆದಾಗ ನಿನ್ನ ಪುತ್ರನು ಸಾಕ್ಷಾತ್ ಪಶುಪತಿಯಿಂದ ವರಗಳನ್ನು ಪಡೆದುಕೊಂಡಿದ್ದಾನೆ. ಇಚ್ಛೆಯಂತೆ ಚಲಿಸುವ, ಅಂತರಿಕ್ಷದಲ್ಲಿ ಸಹ ಹೋಗಬಲ್ಲ ದಿವ್ಯರಥವನ್ನು ಪಡೆದಿದ್ದಾನೆ. ಅಲ್ಲದೇ ಪಶುಪತಿಯು ಅಂಧಕಾರವನ್ನು ನಿರ್ಮಿಸಬಲ್ಲ ತಾಮಸೀ ಮಾಯಾವಿದ್ಯೆಯನ್ನು ಇವನಿಗೆ ದಾನವಾಗಿ ಕೊಟ್ಟು ಈ ರೀತಿ ನುಡಿದಿದ್ದಾನೆ : 'ಹೇ ರಾಕ್ಷಸಾಧಿಪತಿಯೇ, ಸಂಗ್ರಾಮದಲ್ಲಿ ಈ ಮಾಯಾವಿದ್ಯೆಯನ್ನು ಬಳಸಿದರೆ ನಿನ್ನ ಚಲನವಲನವು ದೇವ-ದೈತ್ಯರಿಗೂ ಕಾಣಿಸಲಾರದು. ಸದಾಕಾಲವೂ ತುಂಬಿರುವ ಬತ್ತಳಿಕೆ, ಪರಾಜಯವೆಂಬುದನ್ನು ಕಾಣದ ಈ ಧನುಸ್ಸು ಮತ್ತು ರಣರಂಗದಲ್ಲಿ ಶತ್ರುವನ್ನು ಧ್ವಂಸಗೊಳಿಸುವ ಒಂದು ಪ್ರಚಂಡ ಅಸ್ತ್ರ — ಇವೆಲ್ಲವೂ ನಿನಗೆ ವರದಾನವಾಗಿ ದೊರೆತಿವೆ" ಎಂದನು.

"ಈಗ ಮೇಘನಾದನು ನಿನ್ನ ಆಗಮನಕ್ಕಾಗಿ ಕಾಯುತ್ತಿದ್ದಾನೆ. ನನ್ನ ಉದ್ದೇಶವೂ ಇದೇ ಆಗಿದೆ" ಎಂದು ಉಶನಾ ತಪಸ್ವಿಯು ರಾವಣನಿಗೆ ತಿಳಿಸಿದನು.

ಮೇಘನಾದನ ಕಾಯಕವು ರಾವಣನಿಗೆ ಅಷ್ಟೊಂದು ಹಿಡಿಸಲಿಲ್ಲ. ಏಕೆಂದರೆ ಯಜ್ಞ ಮಾಡುವಾಗ ಇಂದ್ರಪ್ರಭೃತಿ ಶತ್ರುಗಳನ್ನು ದ್ರವ್ಯರೂಪದಿಂದ ಪೂಜಿಸಿದಂತಾಯಿತು ! ಆದರೂ ಆದದ್ದು ಆಗಿಹೋಯಿತು ಎಂದು ರಾವಣನು ತನ್ನಷ್ಟಕ್ಕೆ ಸಮಾಧಾನವನ್ನು ಮಾಡಿಕೊಂಡನು.

ಸ ರಾಮಂ ಸೂರ್ಯಸಂಕಾಶೈಃ ಶರೈರ್ದತ್ತವರೈರ್ಭೃಶಮ್ ।
ವಿವ್ಯಾಧ ಸಮರೇ ಕ್ರುದ್ಧಃ ಸರ್ವಗಾತ್ರೇಷು ರಾವಣಿಃ ॥ ೨೮ ॥

ಕೆರಳಿದ ಮೇಘನಾದನು ತನಗೆ ವರದಾನವಾಗಿ ದೊರೆತ ಸೂರ್ಯಸನ್ನಿಭ ಬಾಣಗಳಿಂದ ಶ್ರೀರಾಮನ ಮೈಮೇಲೆ ಗಾಯಗಳನ್ನು ಮಾಡಿದನು.

ಯಾಚಿತ.

ಅನುಗ್ರಹ (ದಿವ್ಯ ರಥ, ಬಾಣಗಳು, ಅಕ್ಷಯವಾದ ಬತ್ತಳಿಕೆ, ಬಿಲ್ಲುಗಳು, ಮುಂತಾದ ಮೂರ್ತರೂಪದ ವಸ್ತುಗಳು).

## ೭೧. ಸೂರ್ಯ > ಮೇರು

ಉತ್ತರಕಾಂಡ / ೩೫

ಶ್ರೀರಾಮನು ಪ್ರಶ್ನಿಸಿದ್ದರಿಂದ ಅಗಸ್ತ್ಯಮುನಿಯು ಹನುಮಂತನ ಬಾಲ್ಯಾವಸ್ಥೆಯ ವೃತ್ತಾಂತವನ್ನು ಅರುಹುತ್ತಿದ್ದಾನೆ.

ಹನುಮಂತನ ಬಲವು ರಾವಣ, ವಾಲಿಯರ ಸಾಮರ್ಥ್ಯಕ್ಕಿಂತ ಮಿಗಿಲಾದದ್ದು ಎಂಬ ವಿಶ್ವಾಸ ಶ್ರೀರಾಮನದಾಗಿತ್ತು. ಅಷ್ಟೇ ಅಲ್ಲದೆ, ಹನುಮಂತನಲ್ಲಿ ಅನೇಕ ಸದ್ಗುಣಗಳು ಸೇರಿಕೊಂಡಿದ್ದವು. ಅವನು ಶೌರ್ಯ, ದಕ್ಷತೆ, ಬುದ್ಧಿವಂತಿಕೆ, ರಾಜನೀತಿ, ರಾಜಕೀಯ ಕೃತ್ಯಗಳನ್ನು ಸಾಧ್ಯಗೊಳಿಸಿಕೊಳ್ಳುವ ನೈಪುಣ್ಯ, ಪರಾಕ್ರಮ, ಪ್ರಭಾವ ಇತ್ಯಾದಿ ಗುಣಗಳ ಖಣಿಯಾಗಿದ್ದನು. ಶ್ರೀರಾಮನಿಗೆ ಹನುಮಾನನ ಬಗ್ಗೆ ವಿಲಕ್ಷಣವಾದ ಆದರ ಭಾವವು ಇದ್ದುದರಿಂದ ಆತನ ಬಾಲ್ಯವನ್ನು ಅರಿತುಕೊಳ್ಳುವ ತವಕ ಶ್ರೀರಾಮನಿಗೆ ಉಂಟಾಗಿತ್ತು.

ಅಗಸ್ತ್ಯಮುನಿಯು ಶ್ರೀರಾಮನಿಗೆ ಹೇಳುತ್ತಾನೆ : "ಹೇ ರಘುವಂಶತಿಲಕೋತ್ತಮನೇ, ಬಲ, ವೇಗ ಮತ್ತು ಮತಿ ಇವುಗಳಲ್ಲಿ ಹನುಮಾನನಿಗೆ ಸರಿಸಮಾನರು ಯಾರೊಬ್ಬರೂ ಇಲ್ಲ. 'ಹನುಮಾನನು ಬಲಶಾಲಿಯಿದ್ದರೂ ತನ್ನ ಸ್ವ-ಬಲವನ್ನು ಅರಿಯಲಾರನು' ಎಂಬ ಶಾಪವು ಆತನಿಗಿತ್ತು. ಹನುಮಾನನ ಬಾಲ್ಯದಲ್ಲಿಯ ಪರಾಕ್ರಮ ಅತುಲನೀಯವಾಗಿದೆ."

ಸೂರ್ಯದತ್ತವರಸ್ವರ್ಣಃ ಸುಮೇರುರ್ನಾಮ ಪರ್ವತಃ । ೧೯

ಹನುಮಂತನ ಪಿತನಾದ ಕೇಸರಿಯು ಸೂರ್ಯನ ವರದಿಂದ ಸುವರ್ಣರೂಪವನ್ನು ಪಡೆದ ಸುಮೇರು ಪರ್ವತದಲ್ಲಿ ತನ್ನ ಪತ್ನಿಯಾದ ಅಂಜನಿಯೊಡನೆ ವಾಸವಿದ್ದನು. ಒಮ್ಮೆ ಅಂಜನಿಯು ಹಣ್ಣುಹಂಪಲುಗಳನ್ನು ತರಲು ವನಕ್ಕೆ ಹೋದ ಸಮಯದಲ್ಲಿ ಹಸಿವೆಯಿಂದ ವ್ಯಾಕುಲನಾದ ಹನುಮಾನನು ಆದೇ ಉದಯಿಸುತ್ತಿದ್ದ ಸೂರ್ಯನನ್ನು ಹಣ್ಣೆಂದು ಭಾವಿಸಿ ಅದನ್ನು ಹಿಡಿಯಲೆಂದು ಆಕಾಶದತ್ತ ನೆಗೆದನು. ಆತನ ವೇಗವನ್ನು ಅವಲೋಕಿಸಿದ ದೇವತೆಗಳು ಆಶ್ಚರ್ಯಭರಿತರಾದರು.

ಸೂರ್ಯನು ಮೇರುಪರ್ವತಕ್ಕೆ ವರವನ್ನು ಏಕೆ ಕೊಟ್ಟಿದ್ದನೆಂಬುದರ ಬಗೆಗೆ ಸರಿಯಾದ ಮಾಹಿತಿ ಇಲ್ಲ. ವರ ದೊರೆತ ಉಲ್ಲೇಖ ಮಾತ್ರ ಇದೆ.

ಅನಿಶ್ಚಿತ.

### ೭.೨. ಇಂದ್ರ > ಹನುಮಾನ — ಉತ್ತರಕಾಂಡ / ೩೬

ಅಗಸ್ತ್ಯಮುನಿಯು ಅನೇಕ ದೇವತೆಗಳಿಂದ ಹಲವಾರು ವರಗಳು ಹನುಮಾನನಿಗೆ ದೊರತ ವಿಷಯದ ಬಗ್ಗೆ ಶ್ರೀರಾಮನಿಗೆ ವಿವರಿಸುತ್ತಾನೆ.

ಹನುಮಂತನು ಅತಿವೇಗದಿಂದ ಆಕಾಶದತ್ತ ನೆಗೆದು ಸೂರ್ಯನ ಸಮೀಪ ಬರುತ್ತಿರುವದನ್ನು ಕಂಡು ರಾಹುವಿಗೆ ಬಲು ಸಿಟ್ಟುಬಂದಿತು. ಆತನು ಇಂದ್ರನ ಬಳಿ ಹೋಗಿ ಇಂತೆಂದನು : "ನನ್ನ ಹಸಿವೆಯನ್ನು ನೀಗಿಸಲು ನನಗೆ ಅರ್ಪಿಸಿದ ಸೂರ್ಯಚಂದ್ರರನ್ನು ನೀನು ಮತ್ತೆ ಬೇರೆಯವರಿಗೆ ಕೊಡಲಿರುವ ಅರ್ಥವೇನು ? ನಾನು ಈ ಅಮಾವಾಸ್ಯೆಯ ದಿನದಂದು ಸೂರ್ಯನನ್ನು ನುಂಗುವ ಉದ್ದೇಶದಿಂದ ಬಂದಿರುವಾಗ ಈ ಬೇರೆ ರಾಹುವು ಆತನನ್ನು ಮುತ್ತಿಕೊಂಡಿದ್ದಾನೆ." ರಾಹುವಿನ ಈ ಮಾತುಗಳನ್ನು ಕೇಳಿ ಇಂದ್ರನು ಗೊಂದಲ ಕ್ಕೀಡಾದನು. ಆತನು ರಾಹುವನ್ನು ಕರೆದುಕೊಂಡು ಸೂರ್ಯನತ್ತ ನಡೆದನು. ರಾಹುವನ್ನು ಕಂಡ ಕ್ಷಣವೇ ಹನುಮಾನನು ಸೂರ್ಯನನ್ನು ಬಿಟ್ಟು ರಾಹುವಿನ ಬೆನ್ನುಹತ್ತಿದನು. ಆಗ ಭಯಗೊಂಡ ರಾಹುವು ಇಂದ್ರನ ನೆರವನ್ನು ಕೋರಿದನು. ಕೋಪಗೊಂಡ ಇಂದ್ರನು ಹನುಮಾನನ ಮೇಲೆ ವಜ್ರಪ್ರಹಾರ ಮಾಡಿದನು. ಹನುಮಾನನ ಗದ್ದಕ್ಕೆ ಪೆಟ್ಟುತಗಲಿ ಆತನು ಪರ್ವತದ ಮೇಲೆ ಪ್ರಜ್ಞೆತಪ್ಪಿ ಬಿದ್ದನು. ವಜ್ರಾಯುಧದ ಏಟಿನಿಂದ ನರಳುತ್ತಿರುವ ತನ್ನ ಮಗನನ್ನು ಕಂಡು ವಾಯುವಿಗೆ ಇಂದ್ರನ ಮೇಲೆ ಕೋಪವುಂಟಾಯಿತು. ವಾಯುವು ಜಗತ್ತಿನಲ್ಲಿ ತನ್ನ ಸಂಚಾರವನ್ನೇ ನಿಲ್ಲಿಸಿಬಿಟ್ಟನು. ತನ್ನ ಪುತ್ರನನ್ನು ಎತ್ತಿಕೊಂಡು ಒಂದು ಗುಹೆಯಲ್ಲಿ ಕುಳಿತನು. ಈ ರೀತಿ ವಾಯುವು ಕ್ರೋಧಿತನಾದ ಕಾರಣ ಜಗತ್ತಿನ ಎಲ್ಲ ಪ್ರಾಣಿಮಾತ್ರರ ಉಸಿರಾಟವು ಕಠಿಣವಾಗಿ ಬದುಕಿರುವದೇ ಕಷ್ಟಸಾಧ್ಯವಾಯಿತು. ಆಗ ಗಂಧರ್ವ, ದೇವ, ಅಸುರ ಹಾಗೂ ಮಾನವರು ಬ್ರಹ್ಮದೇವನತ್ತ ಧಾವಿಸಿದರು : ತಮ್ಮ ದುರವಸ್ಥೆಯನ್ನು ಆತನ ಮುಂದೆ ತೋಡಿಕೊಂಡು ಸಂಕಟನಿವಾರಣೆ ಯನ್ನು ಮಾಡಬೇಕೆಂದು ಪ್ರಾರ್ಥಿಸಿದರು. ಬ್ರಹ್ಮದೇವನು ಎಲ್ಲವನ್ನೂ ತಿಳಿದುಕೊಂಡು ಅವರೊಡನೆ ವಾಯುವಿದ್ದಲ್ಲಿಗೆ ತೆರಳಿದನು. ಪ್ರಜ್ಞೆತಪ್ಪಿದ ಪುತ್ರನನ್ನು ತೊಡೆಯ ಮೇಲೆ ಇರಿಸಿಕೊಂಡು ಕುಳಿತ ವಾಯುವನ್ನು

ಕಂತು ಎಲ್ಲರಿಗೂ ಕನಿಕರವುಂಟಾಯಿತು. ಬ್ರಹ್ಮದೇವನ ದರ್ಶನವಾದೊಡನೆ ವಾಯುವು ಸಾಷ್ಟಾಂಗ ನಮಸ್ಕಾರ ಹಾಕಿದನು. ಬ್ರಹ್ಮದೇವನು ಹನುಮಾನನ ಮೈಮೇಲೆ ಕೈ ಆಡಿಸಿದ ತಕ್ಷಣ ಆತನು ಚೇತರಿಸಿಕೊಂಡನು. ಆಗ ವಾಯುವು ತನ್ನ ಸಂಚಾರವನ್ನು ಪುನಃ ಪ್ರಾರಂಭಿಸಿದನು. ಎಲ್ಲ ಪ್ರಜೆಗಳಿಗೂ ಆನಂದವಾಯಿತು.

ವಾಯುವಿನ ಹಿತವನ್ನು ಕೋರುವ ಬ್ರಹ್ಮದೇವನು ದೇವತೆಗಳಿಗೆ ಈ ರೀತಿ ನುಡಿದನು : "ಹೇ ಇಂದ್ರ, ಅಗ್ನಿ, ವರುಣ ದೇವತೆಗಳಿರಾ, ಹೇ ಶಿವ, ಕುಬೇರ, ಪ್ರಭೃತಿ ದೇವತೆಗಳಿರಾ, ನೀವು ಎಲ್ಲವನ್ನೂ ಅರಿತಿರುವಿರಿ. ಆದರೂ ನಾನು ನಿಮಗೆ ಒಂದು ಹಿತದ ಮಾತನ್ನು ಹೇಳಬಯಸುತ್ತೇನೆ. ಈ ಬಾಲಕನಿಂದ ನಿಮ್ಮ ಒಂದು ಕಾರ್ಯವನ್ನು ಮಾಡಿಸಿಕೊಳ್ಳುವದಿದೆ. ಆದ್ದರಿಂದ ಈ ವಾಯುವಿಗೆ ಸಂತೋಷವೆನಿಸುವಂತೆ ನೀವು ಹನುಮಾನನಿಗೆ ವರಗಳನ್ನು ಕರುಣಿಸಿರಿ !"

> ತತಃ ಸಹಸ್ರನಯನಃ ಪ್ರೀತಿಯುಕ್ತಃ ಶುಭಾನನಃ ।
> ಕುಶೇಶಯಮಯೀಂ ಮಾಲಾಮುತ್ಕ್ಷಿಪ್ಯೇದಂ ವಚೋಽಬ್ರವೀತ್ ॥ ೧೦ ॥
> ಮತ್ಕರೋತ್ಸೃಷ್ಟವಜ್ರೇಣ ಹನುರಸ್ಯ ಯಥಾ ಹತಃ ।
> ನಾಮ್ನಾ ವೈ ಕಪಿಶಾರ್ದೂಲೋ ಭವಿತಾ ಹನುಮಾನಿತಿ ॥ ೧೧ ॥
> ಅಹಮಸ್ಯ ಪ್ರದಾಸ್ಯಾಮಿ ಪರಮಂ ವರಮದ್ಭುತಮ್ ।
> ಇತಃಪ್ರಭೃತಿ ವಜ್ರಸ್ಯ ಮಮಾವಧ್ಯೋ ಭವಿಷ್ಯತಿ ॥ ೧೨ ॥

ಇದನ್ನು ಕೇಳಿ ಸಂತೋಷಗೊಂಡು, ಶುಭಕರನಾದ, ಸಹಸ್ರನೇತ್ರ ಇಂದ್ರನು ತನ್ನ ಸುವರ್ಣಕಮಲದ ಮಾಲೆಯನ್ನು ತೆಗೆದು ಹನುಮಾನನಿಗೆ ತೊಡಿಸಿ ಈ ರೀತಿ ನುಡಿದನು : "ನನ್ನ ವಜ್ರಾಯುಧದಿಂದ ಈತನ ಗದ್ದವು ಭಗ್ನವಾಗಿದೆ. ಇಂದಿನಿಂದ ಈ ಕಪಿಶ್ರೇಷ್ಠನು ಹನುಮಾನನೆಂಬ ಹೆಸರಿನಿಂದ ಖ್ಯಾತಿಗೊಳ್ಳುವನು. ನಾನು ಒಂದು ಅದ್ಭುತ ವರವನ್ನು ಈತನಿಗೆ ಕೊಡುವೆನು. ಇನ್ನುಮೇಲೆ ನನ್ನ ವಜ್ರಾಯುಧದಿಂದ ಈತನ ವಧೆಯಾಗಲಾರದು."

ಅಯಾಚಿತ.

ಅನುಗ್ರಹ (ಮಾಲೆ).

## ೭೩. ಸೂರ್ಯ > ಹನುಮಾನ ಉತ್ತರಕಾಂಡ / ೩೬

ಅನೇಕ ದೇವತೆಗಳಿಂದ ಹನುಮಂತನಿಗೆ ಹಲವು ವರಗಳು ಪ್ರಾಪ್ತವಾದವು. ಈ ವರಗಳನ್ನು ಕುರಿತು ಅಗಸ್ತ್ಯಮುನಿಯು ಶ್ರೀರಾಮನಿಗೆ ತಿಳಿಸುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ಮಾರ್ತಂಡಸ್ತ್ವಬ್ರವೀತ್ತತ್ರ ಭಗವಾಂಸ್ತಿಮಿರಾಪಹಃ ।
> ತೇಜಸೋಽಸ್ಯ ಮದೀಯಸ್ಯ ದದಾಮಿ ಶತಿಕಾಂ ಕಲಾಮ್ ॥ ೧೩ ॥
> ಯದಾ ಚ ಶಾಸ್ತ್ರಾಣ್ಯಧ್ಯೇತುಂ ಶಕ್ತಿರಸ್ಯ ಭವಿಷ್ಯತಿ ।
> ತದಾಸ್ಯ ಶಾಸ್ತ್ರಂ ದಾಸ್ಯಾಮಿ ಯೇನ ವಾಗ್ಮೀ ಭವಿಷ್ಯತಿ ॥
> ನ ಚಾಸ್ಯ ಭವಿತಾ ಕಶ್ಚಿತ್ಸದೃಶಃ ಶಾಸ್ತ್ರದರ್ಶನೇ ॥ ೧೪ ॥

ಭಗವಾನ್ ಸೂರ್ಯನು ಹನುಮಾನನಿಗೆ ಇಂತೆಂದನು : "ನಾನು ನನ್ನ ತೇಜಸ್ಸಿನ ನೂರನೆಯ ಒಂದು ಅಂಶವನ್ನು ನಿನಗೆ ಕೊಡುತ್ತೇನೆ. ನೀನು ಶಾಸ್ತ್ರಾಧ್ಯಯನಮಾಡುವ ಸಮಯ ಒದಗಿದಾಗ ನಾನು ಸಕಲಶಾಸ್ತ್ರಗಳನ್ನೂ ನಿನಗೆ ಅರ್ಪಿಸುವೆ ; ನೀನು ಅದರಿಂದ ಖ್ಯಾತ ಭಾಷಣಕಾರನಾಗುವೆ ; ನಿನಗೆ ಸರಿಸಮಾನರು ಯಾರೂ ಇರಲಾರರು."

ಅಯಾಚಿತ. .

### ೭೪. ವರುಣ > ಹನುಮಾನ — ಉತ್ತರಕಾಂಡ / ೩೬

ಹನುಮಾನನು ಅನೇಕ ದೇವತೆಗಳಿಂದ ಹಲವು ವರಗಳನ್ನು ಪಡೆದುಕೊಂಡನು. ಅವುಗಳ ಬಗ್ಗೆ ಅಗಸ್ತ್ಯಮುನಿಯು ಶ್ರೀರಾಮನಿಗೆ ವಿವರಿಸುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ್, ವರ ಕ್ರ. ೭೨.

> ವರುಣಶ್ಚ ವರಂ ಪ್ರಾದಾನ್ನಾಸ್ಯ ಮೃತ್ಯುರ್ಭವಿಷ್ಯತಿ ।
> ವರ್ಷಾಯುತಶತೇನಾಪಿ ಮತ್ಪಾಶಾದುದಕಾದಪಿ ॥ ೧೫ ॥

ವರುಣನು, "ಹತ್ತು ಹತ್ತು ಸಾವಿರ ವರ್ಷಗಳ ಆವರ್ತನಗಳು ನೂರುಸಲ ಕಳೆದುಹೋದರೂ ನನ್ನ ಪಾಶದಿಂದ ಅಥವಾ ನೀರಿನಿಂದ ಹನುಮಾನನ ಮೃತ್ಯುವಾಗಲಾರದು" ಎಂದು ವರವನ್ನು ಕೊಟ್ಟನು.

ಅಯಾಚಿತ.

### ೭೫. ಯಮ > ಹನುಮಾನ — ಉತ್ತರಕಾಂಡ / ೩೬

ಅನೇಕ ದೇವತೆಗಳಿಂದ ಹನುಮಾನನಿಗೆ ಹಲವು ವರಗಳು ದೊರೆತವು. ಅವುಗಳನ್ನು ಕುರಿತು ಅಗಸ್ತ್ಯಮುನಿಯು ಶ್ರೀರಾಮನಿಗೆ ತಿಳಿಸುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ಯಮೋ ದಂಡಾದವಧ್ಯತ್ವಮರೋಗತ್ವಂ ಚ ದತ್ತವಾನ್ ।
> ವರಂ ದದಾಮಿ ಸಂತುಷ್ಟ ಅವಿಷಾದಂ ಚ ಸಂಯುಗೇ ॥ ೧೬ ॥

ಯಮನು ಹನುಮಾನನಿಗೆ ಒಳ್ಳೆಯ ಆರೋಗ್ಯ ಹಾಗೂ ಯಮದಂಡದಿಂದ ಸಹ ಮರಣವು ಬಾರದೆಂಬ ವರವನ್ನಿತ್ತನು. ಸಂಗ್ರಾಮದಲ್ಲಿ ಈತನಿಗೆ ದಣಿವು ಆಗಲಾರದು ! ಎಂದೂ ನುಡಿದನು.

ಅಯಾಚಿತ.

### ೭೬. ಕುಬೇರ > ಹನುಮಾನ — ಉತ್ತರಕಾಂಡ / ೩೬

ಹಲವು ದೇವತೆಗಳಿಂದ ಹನುಮಾನನಿಗೆ ಅನೇಕ ವರಗಳು ದೊರೆತವೆಂಬ ಬಗ್ಗೆ ಅಗಸ್ತ್ಯಮುನಿಯು ಶ್ರೀರಾಮನಿಗೆ ಹೇಳುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ಗದೇಯಂ ಮಾಮಿಕಾ ನೈನಂ ಸಂಯುಗೇಷು ವಧಿಷ್ಯತಿ ।
> ಇತ್ಯೇವಂ ಧನದಃ ಪ್ರಾಹ ತದಾ ಹ್ಯೇಕಾಕ್ಷಿಪಿಂಗಲಃ ॥ ೧೭ ॥

ಏಕಾಕ್ಷಿಪಿಂಗಲ ಕುಬೇರನು "ಈ ನನ್ನ ಗದೆಯಿಂದ ಕಾಳಗದಲ್ಲಿ ಹನುಮಾನನ ವಧೆಯಾಗಲಾರದು !" ಎಂಬ ವರವನ್ನು ಕೊಟ್ಟನು.

ಅಯಾಚಿತ.

### ೭೭. ಶಂಕರ > ಹನುಮಾನ — ಉತ್ತರಕಾಂಡ / ೩೬

ಹಲವು ದೇವತೆಗಳಿಂದ ಹನುಮಾನನು ಹಲವು ವರಗಳನ್ನು ಪಡೆದನು. ಅವುಗಳ ಬಗ್ಗೆ ಅಗಸ್ತ್ಯಮುನಿಯು ಶ್ರೀರಾಮನಿಗೆ ಹೇಳುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ಮತ್ತೋ ಮದಾಯುಧಾನಾಂ ಚ ಅವಧ್ಯೋಽಯಂ ಭವಿಷ್ಯತಿ ।
> ಇತ್ಯೇವಂ ಶಂಕರೇಣಾಪಿ ದತ್ತೋಽಸ್ಯ ಪರಮೋ ವರಃ ॥ ೧೮ ॥

ಶಂಕರನು "ನನ್ನಿಂದ ಅಥವಾ ನನ್ನ ಆಯುಧಗಳಿಂದ ಈತನ ವಧೆಯಾಗಲಾರದು" ಎಂಬ ಸರ್ವೋತ್ತಮ ವರವನ್ನು ಹನುಮಾನನಿಗೆ ಕೊಟ್ಟನು.

ಅಯಾಚಿತ.

## ೭೮. ವಿಶ್ವಕರ್ಮ > ಹನುಮಾನ — ಉತ್ತರಕಾಂಡ / ೩೬

ಅಗಸ್ತ್ಯಮುನಿಯು ಶ್ರೀರಾಮನಿಗೆ ದೇವತೆಗಳಿಂದ ಹನುಮಾನನಿಗೆ ದೊರೆತ ವರಗಳ ಬಗ್ಗೆ ವಿವರಿಸಿ ಹೇಳುತ್ತಿದ್ದಾನೆ.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ವಿಶ್ವಕರ್ಮಾ ಚ ದೃಷ್ಟ್ವೇಮಂ ಬಾಲಸೂರ್ಯೋಪಮಂ ಶಿಶುಮ್ ।
> ಶಿಲ್ಪಿನಾಂ ಪ್ರವರಃ ಪ್ರಾದಾದ್ವರಮಸ್ಯ ಮಹಾಮತಿಃ ॥ ೧೯ ॥
> ಮತ್ಕೃತಾನಿ ಚ ಶಸ್ತ್ರಾಣಿ ಯಾನಿ ದಿವ್ಯಾನಿ ತಾನಿ ಚ ।
> ತೈರವಧ್ಯತ್ವಮಾಪನ್ನಶ್ಚಿರಜೀವೀ ಭವಿಷ್ಯತಿ ॥ ೨೦ ॥

ಬಾಲರವಿಯಂತೆ ಅರುಣಕಾಂತಿಯುಳ್ಳ ಆ ಕಂದನನ್ನು ಕಂಡು ಶಿಲ್ಪಿಶ್ರೇಷ್ಠನಾದ ಮಹಾಮತಿ ವಿಶ್ವಕರ್ಮನು, "ನನ್ನಿಂದ ಸೃಷ್ಟಿಸಲ್ಪಟ್ಟ ಯಾವ ದಿವ್ಯಶಸ್ತ್ರಗಳಿಂದಲೂ ಈ ಹನುಮಾನನ ವಧೆಯಾಗದೆ ಈತನು ಚಿರಂಜೀವಿಯಾಗುವನು" ಎಂಬ ವರವನ್ನು ಕೊಟ್ಟನು.

ಅಯಾಚಿತ.

## ೭೯. ಬ್ರಹ್ಮದೇವ > ಹನುಮಾನ — ಉತ್ತರಕಾಂಡ / ೩೬

ಅನೇಕ ದೇವತೆಗಳಿಂದ ಬಹುವಿಧವಾದ ವರಗಳು ಹನುಮಾನನಿಗೆ ದೊರೆತವೆಂಬ ಬಗ್ಗೆ ಅಗಸ್ತ್ಯ ಮುನಿಯು ಶ್ರೀರಾಮನಿಗೆ ತಿಳಿಸುತ್ತಿದ್ದನು.

ನೋಡಿ : ಇಂದ್ರ > ಹನುಮಾನ, ವರ ಕ್ರ. ೭೨.

> ದೀರ್ಘಾಯುಶ್ಚ ಮಹಾತ್ಮಾ ಚ ಬ್ರಹ್ಮಾ ತಂ ಪ್ರಾಬ್ರವೀದ್ವಚಃ ।
> ಸರ್ವೇಷಾಂ ಬ್ರಹ್ಮದಂಡಾನಾಮವಧ್ಯೋಽಯಂ ಭವಿಷ್ಯತಿ ॥ ೨೧ ॥

ದೀರ್ಘಾಯುವಿದ್ದ ಮಹಾತ್ಮನಾದ ಬ್ರಹ್ಮದೇವನು ವಾಯುವಿಗೆ ಇಂತೆಂದನು : "ಈ ನಿನ್ನ ಮಗನಾದ ಹನುಮಾನನು ಶತ್ರುಗಳಿಗೆ ಅತಿಭಯಂಕರನೆನಿಸುವನು ; ಮಿತ್ರರ ಭಯನಿವಾರಕನು ; ಇಷ್ಟವಿದ್ದ ರೂಪವನ್ನು ಪಡೆಯುವಂಥವನು ; ಸ್ವೇಚ್ಛೆಯಿಂದ ವರ್ತಿಸುವವನು ; ಇಷ್ಟವಿದ್ದ ಕಡೆಗೆ ಸಂಚರಿಸುವ ಕ್ಷಮತೆಯುಳ್ಳವನೂ ಆಗಿ ಕೀರ್ತಿಹೊಂದುವನು. ಈ ನಿನ್ನ ವಾನರಶ್ರೇಷ್ಠ ಪುತ್ರನ ವೇಗವು ಕುಂಠಿತವಾಗಲಾರದು. ಕಾಳಗದಲ್ಲಿ ಈತನು ರಾವಣನಿಗೆ ಭಯ, ಪೀಡೆ ಹುಟ್ಟಿಸುವಂಥ ಕಾರ್ಯಗಳನ್ನು ಎಸಗುವನು. ಈ ಕಾಯಕಗಳಿಂದ ಶ್ರೀರಾಮನಿಗೆ ಆನಂದ, ರೋಮಾಂಚನವಾಗುವದು." ಬ್ರಹ್ಮದೇವನ ಈ ನುಡಿಗಳು ಆಶೀರ್ವಾದರೂಪ ವಾಗಿವೆ.

ಅಯಾಚಿತ.

## ೮೦. ಶ್ರೀರಾಮ > ಹನುಮಾನ — ಉತ್ತರಕಾಂಡ / ೪೦

ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ಹನುಮಂತ, ಸುಗ್ರೀವ, ವಿಭೀಷಣ, ಮೊದಲಾದವರೆಲ್ಲ ಬಂದಿದ್ದರು. ಅವನಿಂದ ಬೀಳ್ಕೊಳ್ಳುವಾಗ ಹನುಮಂತನು ತನ್ನಿಚ್ಛೆಯನ್ನು ಹೀಗೆ ವ್ಯಕ್ತಪಡಿಸಿದ್ದಾನೆ —

> ಸ್ನೇಹೋ ಮೇ ಪರಮೋ ರಾಜಂಸ್ತ್ವಯಿ ತಿಷ್ಠತು ನಿತ್ಯದಾ ।
> ಭಕ್ತಿಶ್ಚ ನಿಯತಾ ವೀರ ಭಾವೋ ನಾನ್ಯತ್ರ ಗಚ್ಛತು ॥ ೧೬ ॥

ಯಾವದ್ ರಾಮಕಥಾ ವೀರ ಚರಿಷ್ಯತಿ ಮಹೀತಲೇ ।
ತಾವಚ್ಛರೀರೇ ವತ್ಸ್ಯಂತು ಪ್ರಾಣಾ ಮಮ ನ ಸಂಶಯಃ ॥ ೧೭ ॥
ಯಚ್ಚೈತಚ್ಚರಿತಂ ದಿವ್ಯಂ ಕಥಾ ತೇ ರಘುನಂದನ ।
ತನ್ಮಮಾಪ್ಸರಸೋ ರಾಮ ಶ್ರಾವಯೇಯುರ್ನರರ್ಷಭ ॥ ೧೮ ॥

"ನಿನ್ನ-ನನ್ನ ನಡುವಣ ಸ್ನೇಹ ಉಳಿದುಕೊಳ್ಳುವಂತಾಗಲಿ. ನಿನ್ನ ಬಗೆಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಭಾವ ವಿರಲಿ. ನಿನ್ನ ಹೊರತು ನನ್ನ ಮನಸ್ಸು ಇನ್ನೆತ್ತಲೂ ಒಲೆಯದಂತಾಗಲಿ. ಈ ಭೂಮಿಯ ಮೇಲೆ ಶ್ರೀರಾಮನ ಕಥೆಯನ್ನು ಹಾಡಿಕೊಳ್ಳಲಾಗುವವರೆಗೂ ನನ್ನೀ ದೇಹದಲ್ಲಿ ಪ್ರಾಣವಿರಲಿ. ಅಪ್ಸರೆಯರಿಂದ ನಿನ್ನ ಚರಿತ್ರೆ... ಆಲಿಸುತ್ತಲಿರುವ ಭಾಗ್ಯ ನನಗೊದಗಲಿ." ಹನುಮಂತನ ಕೋರಿಕೆಯನ್ನು ಆಲಿಸಿ ಶ್ರೀರಾಮ ಇಂತೆಂದನು.

ಏವಮೇತತ್ ಕಪಿಶ್ರೇಷ್ಠ ಭವಿತಾ ನಾತ್ರ ಸಂಶಯಃ ।
ಚರಿಷ್ಯತಿ ಕಥಾ ಯಾವದೇಷಾ ಲೋಕೇ ಚ ಮಾಮಿಕಾ ॥ ೨೧ ॥
ತಾವತ್ ತೇ ಭವಿತಾ ಕೀರ್ತಿಃ ಶರೀರೇಽಪ್ಯಸವಸ್ತಥಾ ।
ಲೋಕಾ ಹಿ ಯಾವತ್ಸ್ಥಾಸ್ಯಂತಿ ತಾವತ್ ಸ್ಥಾಸ್ಯಂತಿ ಮೇ ಕಥಾಃ ॥ ೨೨ ॥

"ಎಲೈ ಕಪಿಶ್ರೇಷ್ಠನೇ ! ಎಲ್ಲವೂ (ನಿನ್ನಿಚ್ಛೆಯಂತೆಯೇ) ನಿಸ್ಸಂದೇಹವಾಗಿಯೂ ನಡೆಯಲಿದೆ. ಈ ಜಗತ್ತಿನಲ್ಲಿ ನನ್ನ ಕಥೆ ಇರುವವರೆಗೂ ನಿನ್ನ ಕೀರ್ತಿ ಉಳಿದೀತು ! ನಿನ್ನ ಪ್ರಾಣ ನಿನ್ನ ದೇಹದಲ್ಲಿ ಉಳಿದೀತು. ಲೋಕಗಳಿರುವವರೆಗೂ ನನ್ನ ಕಥೆ ಅಸ್ತಿತ್ವದಲ್ಲುಳಿದೀತು."

ವರ ಎಂಬ ಪದವನ್ನು ಬಳಸಿದ್ದರೂ ಹನುಮಂತನ ಇಚ್ಛೆ ವರವನ್ನು ಕೇಳುವುದಾಗಿದ್ದು ಶ್ರೀರಾಮನ ಮಾತು ವರದಾನದಂತಿದೆ.

ಯಾಚಿತ.

ಈ ಸನ್ನಿವೇಶದಲ್ಲಿ ಶ್ರೀರಾಮನು ಸಂತುಷ್ಟನಾಗಿ,

.....ಹಾರಂ ಚಂದ್ರಾಭಂ ಮುಚ್ಯ ಕಂಠಾತ್ ಸ ರಾಘವಃ ।
ವೈಡೂರ್ಯತರಲಂ ಕಂಠೇ ಬಬಂಧ ಚ ಹನೂಮತಃ ॥ ೨೫ ॥

ಶ್ರೀರಾಮನು ತನ್ನ ಕೊರಳಲ್ಲಿದ್ದ ಚಂದ್ರನಂತೆ ತೇಜಸ್ವಿಯಾದ ವೈಢೂರ್ಯ ಮಣಿಗಳ ಹಾರವನ್ನು ಹನುಮಂತನ ಕೊರಳಿಗೆ ಹಾಕಿದನು.

ಅನುಗ್ರಹ (ಹಾರ).

ಸೋಽಪಿ ಗಂಧವಹಃ ಪುತ್ರಂ ಪ್ರಗೃಹ್ಯ ಗೃಹಮಾನಯತ್ ।
ಅಂಜನಾಯಾಸ್ಸಮಾಖ್ಯಾಯ ವರದತ್ತಂ ವಿನಿರ್ಗತಃ ॥ ೨೭ ॥

ಗಂಧವಾಹಕನಾದ ವಾಯುವು ಅಂಜನಿಯ ಮನೆಗೆ ಬಂದು ದೇವತೆಗಳಿತ್ತ ವರಗಳ ಬಗೆಗೆ ಹೇಳಿ, ಮಗುವನ್ನು ಅವಳಿಗೊಪ್ಪಿಸಿ ಹೊರಟುಹೋದನು.

ಪ್ರಾಪ್ಯ ರಾಮ ವರಾನೇಷ ವರದಾನಬಲಾನ್ವಿತಃ । ೨೮

ಹೀಗೆ, ಹನುಮಂತನು ಹಲವಾರು ವರಗಳನ್ನು ಪಡೆದು ವರಗಳಿಂದ ಹುಟ್ಟುವ ಶಕ್ತಿಗಳಿಂದ ಸಂಪನ್ನನಾಗಿದ್ದಾನೆ.

## ೮೧. ಶ್ರೀರಾಮ > ಸೀತಾ — ಉತ್ತರಕಾಂಡ / ೪೬

ಸೀತೆಯು ಗರ್ಭವತಿಯಾಗಿದ್ದಾಗ ಒಮ್ಮೆ ಶ್ರೀರಾಮನು —

"ಪ್ರಸವಿಸುವ ಸಮಯವು ಈಗ ಸಮೀಪಿಸುತ್ತಿದೆ. ನಿನ್ನ ಬಯಕೆ ಏನಾದರೂ ಇದ್ದರೆ ಹೇಳು !" ಎಂದನು. ಆಗ ಸಂತೋಷಗೊಂಡ ಸೀತೆಯು, "ಹೇ ರಾಘವನೇ, ಪವಿತ್ರವಾದ ತಪೋವನಗಳನ್ನು ಅವಲೋಕಿಸುವ ಹಾಗೂ ಫಲಮೂಲಗಳನ್ನು ಭಕ್ಷಿಸಿ, ಗಂಗಾತೀರದಲ್ಲಿ ವಾಸವಿದ್ದ ಮಹಾತೇಜಸ್ವೀ ಋಷಿಗಳ ಸಾನ್ನಿಧ್ಯದಲ್ಲಿ ಇರುವ ಬಯಕೆ ನನಗಾಗಿದೆ. ಅಲ್ಲಿ ಒಂದು ರಾತ್ರಿಯನ್ನಾದರೂ ಕಳೆಯಬೇಕೆಂಬ ಆಸೆ ನನ್ನದಾಗಿದೆ" ಎಂದಳು.

ಶ್ರೀರಾಮನು "ನಾಳೆಯ ದಿನ ಖಚಿತವಾಗಿ ನೀನು ಅಲ್ಲಿಗೆ ಹೋಗುವೆ !" ಎಂದು ಸೀತೆಗೆ ಆಶ್ವಾಸನೆಯ ನ್ನಿತ್ತನು.

ಶ್ರೀರಾಮನು ಲೋಕಾಪವಾದವನ್ನು ಕೇಳಿಕೊಂಡು ಸೀತೆಯನ್ನು ತ್ಯಾಗಮಾಡುವದೆಂದು ನಿಶ್ಚಯಿಸಿದನು. ತನ್ನ ನಿರ್ಧಾರವನ್ನು ಸೋದರರಿಗೆ ಸ್ಪಷ್ಟಪಡಿಸಿದನು. ಸೀತೆಯನ್ನು ವನದಲ್ಲಿ ಬಿಟ್ಟುಬರುವ ದುಸ್ತರಕಾರ್ಯ ವನ್ನು ಲಕ್ಷ್ಮಣನಿಗೆ ಒಪ್ಪಿಸಿದನು. ರಾಜಾಜ್ಞೆ ಎಂದು ಬಗೆದು ಲಕ್ಷ್ಮಣನು ಅದನ್ನು ಅತಿಕಷ್ಟದಿಂದ ಸ್ವೀಕರಿಸಿ ದನು. ಸುಮಂತ್ರನು ರಥವನ್ನು ಸಿದ್ಧಗೊಳಿಸಿದಾಗ ಲಕ್ಷ್ಮಣನು ಅರಮನೆಯಲ್ಲಿದ್ದ ಸೀತೆಯನ್ನು ಸಮೀಪಿಸಿ ಹೀಗೆಂದನು :

ತ್ವಯಾ ಕಿಲೈಷ ನೃಪತಿರ್ವರಂ ವೈ ಯಾಚಿತಃ ಪ್ರಭುಃ ।
ನೃಪೇಣ ಚ ಪ್ರತಿಜ್ಞಾತಮಾಜ್ಞಪ್ತಶ್ಚಾಶ್ರಮಂ ಪ್ರತಿ ॥ ೭ ॥
ಗಂಗಾತೀರೇ ಮಯಾ ದೇವಿ ಋಷೀಣಾಮಾಶ್ರಮಾಂಶುಭಾನ್ ।
ಶೀಘ್ರಂ ಗತ್ವಾ ತು ವೈದೇಹಿ ಶಾಸನಾತ್ಪಾರ್ಥಿವಸ್ಯ ನಃ ॥ ೮ ॥

"ಋಷಿಗಳ ಆಶ್ರಮದತ್ತ ಹೋಗಬೇಕೆಂದು ನೀನು ರಾಜನ ಬಳಿ ವರವನ್ನು ಬೇಡಿಕೊಂಡಿರುವೆ ; ಅದನ್ನು ಒಪ್ಪಿಕೊಂಡು ರಾಜನು ನನಗೆ ಅಪ್ಪಣೆ ಮಾಡಿದ್ದಾನೆ. ಹೇ ವೈದೇಹಿ, ರಾಜನ ಆಜ್ಞೆಯ ಮೇರೆಗೆ ಗಂಗಾತೀರದ ಅರಣ್ಯಗಳಲ್ಲಿ ಋಷಿಗಳಿರುವ ಶುಭ ಆಶ್ರಮಗಳಿಗೆ ನಿನ್ನನ್ನು ತಲುಪಿಸುತ್ತೇನೆ."

ಶ್ರೀರಾಮನು ಕೇಳಿದ ಕಾರಣ ಸೀತೆಯು ತನ್ನ ಬಯಕೆಯನ್ನು ಪ್ರಕಟಿಸಿದಳು. ಆದಕಾರಣ ಇದು 'ಅಯಾಚಿತ' ವರವಾಗಿದೆ.

ಇಲ್ಲಿ ವರವೆಂಬ ಶಬ್ದವನ್ನು ಬಳಸಿದ್ದರೂ ಅದು ಸೀತೆಯ ಇಚ್ಛೆಯನ್ನು ಗೇಲಿಮಾಡಿದಂತಿದೆ ; ಅವಳಿಗೆ ಮೋಸಮಾಡಿದಂತಿದೆ. ಸೀತೆಯ ದೃಷ್ಟಿಯಿಂದ ಇದು ವರವಾಗಿರದೆ ಶಾಪವೇ ಆಗಿ ಪರಿಣಮಿಸಿದೆ.

ಅಯಾಚಿತ.

### ೮೨. ದೇವತೆಗಳು > ನಿಮಿರಾಜ — ಉತ್ತರಕಾಂಡ / ೫೭

ಶ್ರೀರಾಮನು ಲಕ್ಷ್ಮಣನಿಗೆ ನಿಮಿರಾಜನ ಕಥೆಯನ್ನು ಹೇಳುತ್ತಿದ್ದಾನೆ.

ನೋಡಿ : ವಸಿಷ್ಠ > ನಿಮಿರಾಜ, ಶಾಪ ಕ್ರ. ೪೯

ನಿಮಿರಾಜನು ವಸಿಷ್ಠನ ಶಾಪದಿಂದ ಅಚೇತನಗೊಂಡನು. ಆಗ ನಿಮಿರಾಜನು ಕೈಕೊಂಡ ಧರ್ಮದೀಕ್ಷೆ ಯನ್ನು ಮುಂದುವರೆಸಿ ಅಲ್ಲಿ ಸೇರಿದ ಋಷಿಗಳು ಆ ಯಾಗವನ್ನು ನಡೆಯಿಸಿದರು. ಅಲ್ಲದೆ ರಾಜನ ಕಳೇಬರವನ್ನು ರಕ್ಷಿಸಿದರು. ಯಜ್ಞವು ಪೂರ್ತಿಗೊಂಡನಂತರ ಭೃಗುಮುನಿಯು ಇಂತೆಂದನು :

ಆನಯಿಷ್ಯಾಮಿ ತೇ ಚೇತಸ್ತುಷ್ಟೋಽಸ್ಮಿ ತವ ಪಾರ್ಥಿವ ॥ ೧೨ ॥

"ರಾಜನೇ, ನಾನು ನಿನ್ನಲ್ಲಿ ಸಂತುಷ್ಟನಾಗಿದ್ದೇನೆ. ಆದಕಾರಣ ನಿನ್ನ ದೇಹದಲ್ಲಿ ಚೈತನ್ಯವನ್ನುಂಟು ಮಾಡುವೆನು."

ಸುಪ್ರೀತಾಶ್ಚ ಸುರಾಃ ಸರ್ವೇ ನಿಮೇಶ್ಚೇತಸ್ತದಾಬ್ರುವನ್ ।
ವರಂ ವರಯ ರಾಜರ್ಷೇ ಕ್ವ ತೇ ಚೇತೋ ನಿರೂಪ್ಯತಾಮ್ ॥ ೧೩ ॥
ಏವಮುಕ್ತಃ ಸುರೈಃ ಸರ್ವೈರ್ನಿಮೇಶ್ಚೇತಸ್ತದಾಬ್ರವೀತ್ ।
ನೇತ್ರೇಷು ಸರ್ವಭೂತಾನಾಂ ವಸೇಯಂ ಸುರಸತ್ತಮಾಃ ॥ ೧೪ ॥
ತ್ವತ್ಕೃತೇ ಚ ನಿಮಿಷ್ಯಂತಿ ಚಕ್ಷೂಂಷಿ ಪೃಥಿವೀಪತೇ ।
ವಾಯುಭೂತೇನ ಚರತಾ ವಿಶ್ರಾಮಾರ್ಥಂ ಮುಹುರ್ಮುಹುಃ ॥ ೧೬ ॥

ಅನಂತರ ದೇವತೆಗಳೆಲ್ಲರೂ ಸುಪ್ರಸನ್ನರಾಗಿ ಈ ರೀತಿ ಉದ್ಗರಿಸಿದರು : "ಹೇ ರಾಜರ್ಷಿಯೇ, ನೀನು ವರವನ್ನು ಬೇಡು ! ನಿನ್ನ ಚೇತನಾಪ್ರತೀಕವು ಎಲ್ಲಿರುವದೆಂಬುದನ್ನು ತಿಳಿಸು." ದೇವತೆಗಳೆಲ್ಲರೂ ಈ ರೀತಿ ಕೇಳಿದಾಗ ನಿಮಿರಾಜನ ಜೀವಾತ್ಮನು ಈ ರೀತಿ ನುಡಿದನು : "ಹೇ ಶ್ರೇಷ್ಠದೇವತೆಗಳಿರಾ, ಸಕಲಪ್ರಾಣಿಮಾತ್ರರ

ನೇತ್ರಗಳಲ್ಲಿ ನಾನು ವಾಸವಿರುವೆ." ಇದನ್ನು ಕೇಳಿ ದೇವತೆಗಳೆಲ್ಲರೂ "ಎಲ್ಲ ಪ್ರಾಣಿಗಳ ನೇತ್ರಗಳಲ್ಲಿ ನೀನು ವಾಯುರೂಪವಾಗಿ ಸಂಚರಿಸುವೆ ! ಮತ್ತು ಈ ರೀತಿ ವಾಯುರೂಪವನ್ನು ಹೊಂದಿ ಸಂಚರಿಸುವ ನಿನಗೆ ಆಗಾಗ ವಿಶ್ರಾಂತಿ ಸಿಗಬೇಕೆಂದು ಎಲ್ಲ ಪ್ರಾಣಿಮಾತ್ರರ ಕಣ್ಣುಗಳೂ ಸತತ ಎವೆಯಿಕ್ಕುತ್ತಿರುವುವು."

ಈ ರೀತಿ ನುಡಿದು ದೇವತೆಗಳು ಮರಳಿದರು. ನಿಮಿರಾಜನಿಗೆ ಪುತ್ರನಾಗಬೇಕೆಂದು ಋಷಿಗಳು ಆತನ ಚೇತನವಿಲ್ಲದ ದೇಹವನ್ನು 'ಅರಣಿ' ಎಂದು ಪ್ರಯೋಜಿಸಿ ಮಂತ್ರಸಹಿತವಾಗಿ ಹೋಮಪೂರ್ವಕವಾಗಿ, ತಮ್ಮ ಬಲದಿಂದ ಅದನ್ನು ಉಜ್ಜಿದರು. ಹೀಗೆ ಅರಣಿಯ ಮಂಥನವು ನಡೆದಾಗ ಒಬ್ಬ ಮಹಾಪುರುಷನು ಪ್ರಕಟನಾದನು. ಹೀಗೆ ಮಂಥನಕ್ರಿಯೆಯಿಂದ ಈತನು ಉದ್ಭವಿಸಿದ್ದರಿಂದ ಆತನಿಗೆ 'ಮಿಥಿ' ಎಂಬ ಹೆಸರು ಬಂದಿತು.

ಇದು 'ಅಯಾಚಿತ' ವರವಾಗಿದ್ದು ದೇಹವನ್ನು ತ್ಯಜಿಸಿದ ಜೀವಾತ್ಮಕ್ಕೆ ಈ ವರವು ದೊರೆತಿದೆ.

**ಅಯಾಚಿತ.**

## ೮೩. ಶ್ರೀರಾಮ > ಶ್ವಾನ — ಉತ್ತರಕಾಂಡ / ಪ್ರಕ್ಷಿಪ್ತ ೨

**ನೋಡಿ : ಶ್ವಾನ > ಭಿಕ್ಷು, ಶಾಪ ಕ್ರ. ಪ್ರಕ್ಷಿಪ್ತ ೨.** **ಸರ್ಗ ೫೯ ಹಾಗೂ ೬೦ಗಳಲ್ಲಿ**

ಒಬ್ಬ ಭಿಕ್ಷುಕನು ತನ್ನನ್ನು ಸುಮ್ಮನೆ ಹೊಡೆದನೆಂದು ಒಂದು ನಾಯಿಯು ಶ್ರೀರಾಮನ ಬಳಿ ದೂರು ಸಲ್ಲಿಸಿತು. ಭಿಕ್ಷುಕನು ಆ ಆಪಾದನೆಯನ್ನು ಒಪ್ಪಿಕೊಂಡನು. ತಾನು ಶಿಕ್ಷೆಯನ್ನು ಅನುಭವಿಸಲು ಸಿದ್ಧನೆಂದನು. ಶ್ರೀರಾಮನು ಶಿಕ್ಷೆಯನ್ನು ಕುರಿತು ಅಮಾತ್ಯರನ್ನು ವಿಚಾರಿಸಿದನು. ಅವರು ಅದನ್ನುಸುರಲು ತಾವು ಅಸಮರ್ಥರೆಂದರು. ಆಗ ಆ ನಾಯಿ ತಾನಾಗಿಯೇ ಹೀಗೆಂದಿತು—"ನೀವು ಅಪ್ಪಣೆಯಿತ್ತರೆ ನಾನು ಮಾತನಾಡ ಬಯಸುತ್ತೇನೆ." ಶ್ರೀರಾಮನು ಅಪ್ಪಣೆಯಿತ್ತನು. ಆ ನಾಯಿ ಹೀಗೆಂದಿತು :

> ಯದಿ ತುಷ್ಟೋಽಸಿ ಮೇ ರಾಮ ಯದಿ ದೇಯೋ ವರೋ ಮಮ ॥ ೩೭ ॥
> ಪ್ರತಿಜ್ಞಾತಂ ತ್ವಯಾ ವೀರ ಕಿಂ ಕರೋಮೀತಿ ವಿಶ್ರುತಮ್ ।
> ಪ್ರಯಚ್ಛ ಬ್ರಾಹ್ಮಣಾಸ್ಯಾಸ್ಯ ಕೌಲವತ್ಯಂ ನರಾಧಿಪ ॥ ೩೮ ॥
> ಕಾಲಞ್ಜರೇ ಮಹಾರಾಜ ಕೌಲಪತ್ಯಂ ಪ್ರದೀಯತಾಮ್ ॥ ೩೯ ॥

"ನೀವು ನನ್ನ ಮೇಲೆ ಪ್ರಸನ್ನರಾಗಿದ್ದರೆ, ನನಗೆ ವರವನ್ನೀಯಬಯಸುವಿಯಾದರೆ ನನ್ನೀ ಕೋರಿಕೆಯನ್ನು ಮನ್ನಿಸಬೇಕು. ಎಲೈ ವೀರನೇ ! ನಿನ್ನಾವ ಬಯಕೆಯನ್ನು ಈಡೇರಿಸಲಿ ? ಎಂದು ನನ್ನನ್ನು ಕೇಳಿ ನನ್ನಿಚ್ಛೆಯನ್ನು ಪೂರ್ತಿಗೊಳಿಸಲು ನೀನು ಒಪ್ಪಿಕೊಂಡಿರುವೆ. ಹೀಗಾಗಿ, ಈ ಭಿಕ್ಷುಕನಿಗೆ ಕಾಲಂಜರ ಪರ್ವತದ ಮೇಲಿನ ಕುಲಪತಿಯ ಅಧಿಕಾರವನ್ನು ನೀಡಬೇಕು ; ಧರ್ಮಕ್ಕೆ ಸಂಬಂಧಪಟ್ಟ ಆಧಿಪತ್ಯವನ್ನು ನೀಡಬೇಕು." ಶ್ರೀರಾಮನು ನಾಯಿಯ ಕೇಳಿಕೆಯಂತೆ ಅಪ್ಪಣೆ ಮಾಡಿದನು. ಶಿಕ್ಷೆಯನ್ನು ವಿಧಿಸುವ ಬದಲು ವರವನ್ನೇ ಇತ್ತನೆಂದುಕೊಂಡನು. ಅವನು ಹಾಗೆಂದು ಆಡಿಯೂ ತೋರಿಸಿದನು.

> ವರೋಽಯಂ ದತ್ತ ಏತಸ್ಯ ನಾಯಂ ಶಾಪೋ ಮಹಾದ್ಯುತೇ । ೪೧

'ಈತನಿಗೆ ವರವನ್ನೇ ನೀಡಲಾಗಿದೆ, ಶಾಪವನ್ನಲ್ಲ.'

ವಾಸ್ತವವಾಗಿ ವರವಲ್ಲದಿದ್ದರೂ ಬೇರೆ ಬಗೆಯದಾಗಿ ಕಾಣುವ ವರ.

ಯಾಚಿತ.

## ೮೪. ರುದ್ರ > ಮಧುದೈತ್ಯ — ಉತ್ತರಕಾಂಡ / ೬೧

ಶ್ರೀರಾಮನು ಚ್ಯವನ, ಭಾರ್ಗವ ಮುಂತಾದ ಋಷಿಗಳನ್ನು ಅತಿ ಆದರದಿಂದ ಬರಮಾಡಿಕೊಂಡನು ; ಮತ್ತು ಆಗಮನದ ಉದ್ದೇಶವನ್ನು ಕೇಳಿದನು. ಆಗ ಅವರು ಶ್ರೀರಾಮನಿಗೆ ಲವಣಾಸುರನಿಂದ ತಮಗೆ ಆಗುತ್ತಿದ್ದ ಪೀಡೆ ಮತ್ತು ಅವುಗಳ ಕಾರಣಗಳನ್ನು ವಿವರಿಸಿ, ತಮ್ಮ ರಕ್ಷಣೆಯನ್ನು ಮಾಡಬೇಕೆಂದು ಪ್ರಾರ್ಥಿಸಿದರು.

ಕೃತಯುಗದಲ್ಲಿ ದಿತಿಕುಲದಲ್ಲಿ 'ಮಧು' ಎಂಬ ಹೆಸರಿನ ಒಬ್ಬ ಮಹಾದೈತ್ಯನಾಗಿಹೋದನು. ಆತನು ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿದ್ದರಿಂದ ಮತ್ತು ದಯಾಳುವಾಗಿದ್ದರಿಂದ ಅವನಿಗೆ ದೇವತೆಗಳು ಮಿತ್ರರಾದರು.

ಸ ಮಧುರ್ವೀರ್ಯಸಂಪನ್ನೋ ಧರ್ಮಂ ಚ ಸುಸಮಾಹಿತಃ ।
ಬಹುಮಾನಾಚ್ಚ ರುದ್ರೇಣ ದತ್ತಸ್ತಸ್ಯಾದ್ಭುತೋ ವರಃ ॥ ೫ ॥
ಶೂಲಂ ಶೂಲಾದ್ವಿನಿಷ್ಕೃಷ್ಯ ಮಹಾವೀರ್ಯಂ ಮಹಾಪ್ರಭಮ್ ।
ದದೌ ಮಹಾತ್ಮಾ ಸುಪ್ರೀತೋ ವಾಕ್ಯಂ ಚೈತದುವಾಚ ಹ ॥ ೬ ॥
ತ್ವಯಾ ಯಮತುಲೋ ಧರ್ಮೋ ಮತ್ಪ್ರಸಾದಕರಃ ಕೃತಃ ।
ಪ್ರೀತ್ಯಾ ಪರಮಯಾ ಯುಕ್ತೋ ದದಾಮ್ಯಾಯುಧಮುತ್ತಮಮ್ ॥ ೭ ॥
ಯಾವತ್ಸುರೈಶ್ಚ ವಿಪ್ರೈಶ್ಚ ವಿರುದ್ಧ್ಯೇರ್ಮಹಾಸುರ ।
ತಾವಚ್ಛೂಲಂ ತವೇದಂ ಸ್ಯಾದನ್ಯಥಾ ನಾಶಮೇಷ್ಯತಿ ॥ ೮ ॥
ಯಶ್ಚ ತ್ವಾಮಭಿಯುಂಜೀತ ಯುದ್ಧಾಯ ವಿಗತಜ್ವರಃ ।
ತಂ ಶೂಲೋ ಭಸ್ಮಸಾತ್ಕೃತ್ವಾ ಪುನರೇಷ್ಯತಿ ತೇ ಕರಮ್ ॥ ೯ ॥

ಮಧುದೈತ್ಯನು ಪರಮವೀರನೂ, ಬುದ್ಧಿವಂತನೂ, ಧರ್ಮನಿಷ್ಠನೂ ಆಗಿದ್ದರಿಂದ ಆತನನ್ನು ಬಹುಮಾನಿಸಲೆಂದು ರುದ್ರನು ಅವನಿಗೆ ಅದ್ಭುತ ವರವನ್ನು ಕೊಟ್ಟನು. ರುದ್ರನು ತನ್ನ ಶೂಲದಿಂದ ಇನ್ನೊಂದು ಪ್ರಚಂಡ ಶಕ್ತಿಯುಳ್ಳ ಶೂಲವನ್ನು ಹೊರತೆಗೆದು ಮಧುದೈತ್ಯನಿಗೆ ಅರ್ಪಿಸಿದನು. ನಂತರ ರುದ್ರನು ಸಂತೋಷದಿಂದ ನುಡಿದದ್ದೇನೆಂದರೆ, "ನಾನು ಪ್ರಸನ್ನಗೊಳ್ಳುವಂತಹ ಕಾಯಕವನ್ನು ನೀನು ಮಾಡಿರುವೆ ; ಅದಕ್ಕಾಗಿ ಸಂತೋಷದಿಂದ ಈ ಆಯುಧವನ್ನು ನಿನಗೆ ಅರ್ಪಿಸುತ್ತೇನೆ. ಆದರೆ ಹೇ ಮಹಾ ಅಸುರನೇ, ನೀನು ದೇವತೆಗಳು ಹಾಗೂ ಬ್ರಾಹ್ಮಣರೊಡನೆ ವಿರೋಧವನ್ನು ಮಾಡಿದ ಕ್ಷಣವೇ ಈ ಶೂಲವು ಇಲ್ಲದಂತಾಗುವುದು. ನಿರ್ಭಯತೆಯಿಂದ ಯಾರಾದರೂ ನಿನ್ನನ್ನು ಯುದ್ಧಕ್ಕೆ ಆಹ್ವಾನಿಸಿದರೆ ಈ ಶೂಲವು ಅವರನ್ನು ಸುಟ್ಟುಹಾಕಿ ಮರಳಿ ನಿನ್ನ ಕೈಸೇರುವದು."

ಏವಂ ರುದ್ರಾದ್ವರಂ ಲಬ್ಧ್ವಾ ಭೂಯ ಏವ ಮಹಾಸುರಃ ।
ಪ್ರಣಿಪತ್ಯ ಮಹಾದೇವಂ ವಾಕ್ಯಮೇತದುವಾಚ ಹ ॥ ೧೦ ॥
ಭಗವನ್ಮಮ ವಂಶಸ್ಯ ಶೂಲಮೇತದನುತ್ತಮಮ್ ।
ಭವೇತ್ತು ಸತತಂ ದೇವ ಸುರಾಣಾಮೀಶ್ವರೋ ಹ್ಯಸಿ ॥ ೧೧ ॥

ರುದ್ರನಿಂದ ವರವನ್ನು ಪಡೆದನಂತರ ಮಧುದೈತ್ಯನು ಮಹಾದೇವನಿಗೆ ವಂದಿಸಿ ಈ ರೀತಿ ನುಡಿದನು : "ಹೇ ಭಗವಂತನೇ, ನೀವು ದೇವತೆಗಳ ಒಡೆಯರಾಗಿರುವಿರಿ ; ಆದ್ದರಿಂದ ಈ ಶೂಲವು ನನ್ನ ವಂಶದಲ್ಲಿಯೇ ಇರಬೇಕು."

ಪ್ರತ್ಯುವಾಚ ಮಹಾದೇವೋ ನೈತದೇವಂ ಭವಿಷ್ಯತಿ ॥ ೧೨ ॥
ಮಾ ಭೂತ್ತೇ ವಿಫಲಾ ವಾಣೀ ಮತ್ಪ್ರಸಾದಕೃತಾ ಶುಭಾ ।
ಭವತಃ ಪುತ್ರಮೇಕಂ ತು ಶೂಲಮೇತದ್ಗಮಿಷ್ಯತಿ ॥ ೧೩ ॥
ಯಾವತ್ಕರಸ್ಥಃ ಶೂಲೋಽಯಂ ಭವಿಷ್ಯತಿ ಸುತಸ್ಯ ತೇ ।
ಅವಧ್ಯಃ ಸರ್ವಭೂತಾನಾಂ ಶೂಲಹಸ್ತೋ ಭವಿಷ್ಯತಿ ॥ ೧೪ ॥

ಸುರಶ್ರೇಷ್ಠ ಶಂಕರನು ಆ ಮಧುದೈತ್ಯನಿಗೆ — "ಈ ರೀತಿ ನಿನ್ನ ಇಚ್ಛೆಯಂತೆ ಆಗಲಾರದು ! ಹೀಗಿದ್ದರೂ ನಾನು ಪ್ರಸನ್ನಗೊಂಡಿರುವದರಿಂದ ನಿನ್ನ ಶುಭೇಚ್ಛೆಯನ್ನು ವ್ಯರ್ಥಗೊಳಿಸಲಾರೆನು. ನಿನ್ನ ಒಬ್ಬ ಪುತ್ರನ ಬಳಿ ಈ ಶೂಲವು ಉಳಿಯುವದು. ನಿನ್ನ ಪುತ್ರನ ಕೈಯಲ್ಲಿ ಶೂಲವಿರುವವರೆಗೆ ಯಾರೂ ನಿನ್ನ ಶೂಲಪಾಣಿ ಯಾದ ಪುತ್ರನನ್ನು ವಧಿಸಲಾರರು !" ಎಂದು ತಿಳಿಸಿದನು.

ಮಧುದೈತ್ಯನು ಇಹಲೋಕವನ್ನು ಬಿಟ್ಟು ವರುಣಲೋಕಕ್ಕೆ ತೆರಳುವಾಗ ಆ ಶೂಲವನ್ನು ಲವಣನೆಂಬ ಆತನ ಮಗನಿಗೆ ಕೊಟ್ಟನು. ಆ ಶೂಲದ ಅದ್ಭುತಪ್ರಭಾವದಿಂದ ಲವಣನು ಮೂರು ಲೋಕದವರಿಗೂ, ಅದರಲ್ಲೂ ವಿಶೇಷವಾಗಿ ತಪಸ್ಸನ್ನು ಆಚರಿಸುವವರನ್ನು ಪೀಡಿಸಹತ್ತಿದನು. ಶತ್ರುಘ್ನನು ಲವಣಾಸುರನನ್ನು

ವಧಿಸಿದನಂತರ ಆ ಶೂಲವು ಮರಳಿ ರುದ್ರನ ಬಳಿಗೆ ಹೋಯಿತು.

ಇದು 'ಅಯಾಚಿತ' ವರವಾಗಿದೆ. ಈ ಶೂಲವು ರುದ್ರನಿಂದ ಮಧುದೈತ್ಯನಿಗೆ ಅನುಗ್ರಹರೂಪವಾಗಿ ದೊರೆಯಿತು. ವಾಲ್ಮೀಕಿಯು 'ವರ' ಎಂಬ ಶಬ್ದವನ್ನು ಬಳಸಿದ್ದಾನೆ. ತನ್ನ ತಂದೆಯ ಪುಣ್ಯದಿಂದ ಲವಣನಿಗೆ ಶೂಲವು ದೊರಕಿತ್ತು. ಆದರೆ ಲವಣನ ದುಷ್ಟ ವರ್ತನೆಯಿಂದ ಅದು ಅವನ ಬಳಿ ಉಳಿಯಲಿಲ್ಲ. ಹೀಗಿರುವದರಿಂದ ಇದು ಲವಣನಿಗೆ ದೊರೆತ ವರವಲ್ಲ. ಕೇವಲ ತಂದೆಯಿಂದ ದೊರೆತ ವಾರಸು ಎಂದೆನ್ನಬಹುದು ಅಷ್ಟೆ.

ಅಯಾಚಿತ.

**೮೫. ವಸಿಷ್ಠ > ಕಲ್ಮಾಷಪಾದ (ಸೌದಾಸರಾಜ)** **ಉತ್ತರಕಾಂಡ / ೬೫**

ಶ್ರೀರಾಮನು ಶತ್ರುಘ್ನನಿಗೆ ಅಭಿಷೇಕ ಮಾಡಿ ಲವಣಾಸುರನ ವಧೆಗೆಂದು ಕಳುಹಿಸಿದನು. ಶತ್ರುಘ್ನನು ವಾಲ್ಮೀಕಿಯ ಆಶ್ರಮದಲ್ಲಿ ಒಂದು ರಾತ್ರಿಯನ್ನು ಕಳೆದನು. ಅಲ್ಲಿಯೇ ಹತ್ತಿರದಲ್ಲಿ ಸಂಗ್ರಹಿಸಿಟ್ಟ ಯಜ್ಞಸಾಮಗ್ರಿಗಳನ್ನು ನೋಡಿ ಶತ್ರುಘ್ನನು ವಾಲ್ಮೀಕಿಯನ್ನು ಕೇಳಿದಾಗ, ಆತನು ಸೌದಾಸರಾಜನ ಕಥೆಯನ್ನು ನಿರೂಪಿಸಿದನು.

ನೋಡಿ : ವಸಿಷ್ಠ > ಸೌದಸ, ಶಾಪ ಕ್ರ. ೫೫.

ಸೌದಾಸ > ವಸಿಷ್ಠ, ಶಾಪ ಕ್ರ. ೫೬.

ಸೌದಾಸರಾಜನು ಕಲ್ಮಾಷಪಾದನಾಗಿ ಪರಿವರ್ತಿತನಾದನಂತರ ಪತ್ನಿಯನ್ನೊಡಗೂಡಿ ವಸಿಷ್ಠನನ್ನು ಆಗಾಗ ವಂದಿಸಿ, ಅವನಿಗೆ ಬ್ರಾಹ್ಮಣವೇಷವನ್ನು ತಾಳಿದ ಮಾಯಾವೀ ರಾಕ್ಷಸನು ಆಡಿದ ನುಡಿಗಳನ್ನು ವಿವರಿಸಿದನು. ಆಗ ವಸಿಷ್ಠನಿಗೆ ಮಾಯಾವೀ ರಾಕ್ಷಸನಿಂದ ನಡೆದ ಅನರ್ಥವು ತಿಳಿಯಿತು. ಆಗ ಆತನು ಸೌದಾಸರಾಜನಿಗೆ —

ಮಯಾ ರೋಷಪರೀತೇನ ಯದಿದಂ ವ್ಯಾಹೃತಂ ವಚಃ ।
ನೈತಚ್ಛಕ್ಯಂ ವೃಥಾ ಕರ್ತುಂ ಪ್ರದಾಸ್ಯಾಮಿ ಚ ತೇ ವರಮ್ ॥ ೩೫ ॥
ಕಾಲೋ ದ್ವಾದಶವರ್ಷಾಣಿ ಶಾಪಸ್ಯಾಂತೋ ಭವಿಷ್ಯತಿ ।
ಮತ್ಪ್ರಸಾದಾಚ್ಚ ರಾಜೇಂದ್ರ ಅತೀತಂ ನ ಸ್ಮರಿಷ್ಯಸಿ ॥ ೩೬ ॥

"ನಾನು ಕೋಪಗೊಂಡು ಆಡಿದ ನುಡಿಯು ಎಂದಿಗೂ ಸುಳ್ಳಾಗಲಾರದು. ಈಗ ನಾನು ನಿನಗೆ ಒಂದು ವರವನ್ನು ಕೊಡುತ್ತೇನೆ. ಹನ್ನೆರಡು ವರ್ಷಗಳು ಕಳೆದನಂತರ ಈ ಶಾಪವು ಇಲ್ಲವಾದೀತು. ಹೇ ರಾಜನೇ, ನನ್ನ ಪ್ರಸಾದದಿಂದ ನಿನಗೆ ಪೂರ್ವದ ಸ್ಮರಣೆ ಉಳಿಯಲಾರದು !" ಎಂದನು.

ಶಾಪದ ಅವಧಿಯು ಮುಗಿದನಂತರ ರಾಜನಿಗೆ ಪುನಃ ರಾಜ್ಯವು ದೊರಕಿತು. ಆತನು ಪ್ರಜೆಗಳನ್ನು ಯಥಾಯೋಗ್ಯವಾಗಿ ಪರಿಪಾಲಿಸಿದನು.

ಈ ವರವು ಇನ್ನಿತರ ವರಗಳಿಗಿಂತ ಬೇರೆ ರೀತಿಯದಾಗಿದೆ. ಶಾಪವಿಮೋಚನೆಗಾಗಿ ವರವನ್ನು ಕೊಡಲಾಗಿದೆ. ಕಲ್ಮಾಷಪಾದನು ಮೇಲಿಂದಮೇಲೆ ಪ್ರಾರ್ಥಿಸಿದ ಕಾರಣದಿಂದ ಈ ವರವು ದೊರೆತಿರುವದರಿಂದ ಇದು 'ಯಾಚಿತ' ವರವಾಗಿದೆ.

ಯಾಚಿತ.

**೮೬. ದೇವತೆಗಳು > ಶತ್ರುಘ್ನ** **ಉತ್ತರಕಾಂಡ / ೭೦**

ಶತ್ರುಘ್ನನು ಲವಣಾಸುರನನ್ನು ವಧಿಸಿದ್ದರಿಂದ ಮೂರೂ ಲೋಕಗಳಲ್ಲಿದ್ದ ಭಯವು ಇಲ್ಲದಾಯಿತು. ದೇವತೆಗಳು, ಋಷಿ, ಗಂಧರ್ವ, ಪನ್ನಗ, ಅಪ್ಸರೆಯರು ಶತ್ರುಘ್ನನಿಗೆ ಜಯಜಯಕಾರ ಹೇಳಿದರು. ಇಂದ್ರ, ಅಗ್ನಿ, ಮೊದಲಾದ ದೇವತೆಗಳು ಶತ್ರುಘ್ನನಿಗೆ ಈ ರೀತಿ ಮಾತನಾಡಿದರು : "ವತ್ಸ, ನಿನಗೆ ಜಯವು ಲಭಿಸಿತು. ಲವಣಾಸುರನ ವಧೆಯೆಂದರೆ ನಿನ್ನಿಂದ ನಡೆದ ಒಂದು ಶುಭಕರ ಘಟನೆಯಾಗಿದೆ. ಹೇ ಸದಾಚಾರಸಂಪನ್ನ ಪುರುಷಶ್ರೇಷ್ಠನೇ, ನೀನು ಈಗ ವರವನ್ನು ಬೇಡು ! ನಾವೆಲ್ಲರೂ ನಿನಗೆ ವಿಜಯವನ್ನು ಕೋರಲೆಂದು

ಇಲ್ಲಿಗೆ ಆಗಮಿಸಿದ್ದೇವೆ. ನಮ್ಮ ದರ್ಶನವು ವ್ಯರ್ಥವಾಗಲಾರದು !"

ದೇವತೆಗಳಾಡಿದ ಮಾತುಗಳನ್ನು ಕೇಳಿ ಶತ್ರುಘ್ನನು ಕೈಜೋಡಿಸಿ ಹೀಗೆಂದನು :

ಇಯಂ ಮಧುಪುರೀ ರಮ್ಯಾ ಮಧುರಾ ದೇವನಿರ್ಮಿತಾ ।
ನಿವೇಶಂ ಪ್ರಾಪ್ನುಯಾಚ್ಛೀಘ್ರಮೇಷ ಮೇಽಸ್ತು ವರಃ ಪರಃ ॥ ೫ ॥

"ಮಧುದೈತ್ಯನ ಈ ಮಧುರಾನಗರವೆಂದರೆ ದೇವನಿರ್ಮಿತ ಮನೋಹರ ನಗರವಾಗಿದೆ. ಇದು ಕೂಡಲೇ ನನ್ನ ನಿವಾಸದ ರಾಜಧಾನಿಯಾಗಲಿ, ಎಂಬ ವರವು ಬೇಕು !" ಆಗ ದೇವತೆಗಳು "ಈ ನಗರವು ರಮಣೀಯವಾಗಿರುವದರೊಂದಿಗೆ ಶೂರಸೇನೆಯ ಸ್ಥಾನವೂ ಆಗುವದು" ಎಂಬ ವರವನ್ನು ಕೊಟ್ಟರು.

ದೇವತೆಗಳು ಹೇಳಿದ್ದರಿಂದ ವರವನ್ನು ಬೇಡಲಾಗಿದೆ.

ಅಯಾಚಿತ.

## ೮೭. ದೇವತೆಗಳು > ಬ್ರಹ್ಮಹತ್ಯೆ ಉತ್ತರಕಾಂಡ / ೮೬

ಲಕ್ಷ್ಮಣನು ಶ್ರೀರಾಮನಿಗೆ ವೃತ್ರಾಸುರನ ವಧೆಯ ವೃತ್ತಾಂತವನ್ನು ವಿವರಿಸುತ್ತಿದ್ದಾನೆ. ವೃತ್ರಾಸುರನು ತಪೋಬಲದಿಂದ ಸಮಸ್ತಲೋಕಗಳನ್ನೂ ತನ್ನ ವಶಮಾಡಿಕೊಂಡ ಕಾರಣ ಇಂದ್ರಾದಿ ದೇವತೆಗಳಿಗೆ ಅಪಾರ ದುಃಖವಾಯಿತು. ಅವರೆಲ್ಲರೂ ವಿಷ್ಣುವಿನ ಬಳಿಗೆ ಹೋಗಿ ವೃತ್ರಾಸುರನನ್ನು ಸಂಹರಿಸಿ ದೇವತೆಗಳನ್ನು ರಕ್ಷಿಸಬೇಕೆಂದು ವಿನಂತಿಸಿದರು. ವಿಷ್ಣು ಹಾಗೂ ವೃತ್ರಾಸುರ ಇವರಲ್ಲಿ ಪ್ರೇಮವಿಶ್ವಾಸಗಳು ಮೊದಲಿನಿಂದಲೂ ಇದ್ದ ಕಾರಣ ವಿಷ್ಣು ಆ ಅಸುರನ ವಧೆಮಾಡುವದನ್ನು ನಿರಾಕರಿಸಿದನು. ಆದರೆ ಇಂದ್ರನು ಆತನ ವಧೆಮಾಡಲು ಸಿದ್ಧನಾದರೆ ತನ್ನ ಮೂರನೆ ಒಂದು ಭಾಗದಷ್ಟು ತೇಜಸ್ಸನ್ನು ಇಂದ್ರನಿಗೆ ಕೊಡುವದಾಗಿ ಒಪ್ಪಿದನು. ಆಗ ಇಂದ್ರನು ತನ್ನ ವಜ್ರಾಯುಧವನ್ನು ವೃತ್ರಾಸುರನ ತಲೆಗೆ ಹೊಡೆದನು. ವೃತ್ರಾಸುರನ ತಲೆಯು ಭೂಮಿಗೆ ಬೀಳುತ್ತಿರುವಾಗ ಈ ಜಗತ್ತೆಲ್ಲ ತೊಂದರೆಗೀಡಾಯಿತು. ವೃತ್ರಾಸುರನ ವಧೆ ಅನುಚಿತವಾಯಿತೆಂದು ತಿಳಿದು ಇಂದ್ರನು ತ್ರೈಲೋಕ್ಯವನ್ನು ಸಂಚರಿಸಿದನು. ಬ್ರಹ್ಮಹತ್ಯೆಯು ಆತನನ್ನು ಬೆನ್ನಟ್ಟಿತು. ಕೊನೆಗೆ ಬ್ರಹ್ಮಹತ್ಯೆಯು ಇಂದ್ರನಿಗೆ ತಟ್ಟಿತು. ಇಂದ್ರನಿಗೆ ಅತೀವ ದುಃಖವಾಯಿತು. ದೇವತೆಗಳೆಲ್ಲರೂ ಪುನಃ ವಿಷ್ಣುವಿನ ಬಳಿಗೆ ಹೋದರು. ಅವರು ವಿಷ್ಣುವಿಗೆ ನುಡಿದದ್ದೇನಂದರೆ : "ನೀವೇ ನಿಮ್ಮ ತೇಜಸ್ಸನ್ನು ಕೊಟ್ಟು ಇಂದ್ರನಿಂದ ವೃತ್ರಾಸುರನ ವಧೆಯಾಗುವಂತೆ ಮಾಡಿ ನಮ್ಮ ರಕ್ಷಣೆಯನ್ನು ಮಾಡಿರುವಿರಿ. ಈಗ ಬ್ರಹ್ಮಹತ್ಯೆಯು ಇಂದ್ರನ ಬೆನ್ನುಹತ್ತಿ ಆತನಿಗೆ ಕಷ್ಟವನ್ನು ಕೊಡುತ್ತಿದೆ. ಆದ್ದರಿಂದ ಈ ಬ್ರಹ್ಮಹತ್ಯೆಯಿಂದ ಇಂದ್ರನ ಬಿಡುಗಡೆಯಾಗುವಂತೆ ಒಂದು ಉಪಾಯವನ್ನು ಮಾಡಿರಿ !" ಎಂದರು. ಆಗ ವಿಷ್ಣುವು ಇಂದ್ರನಿಂದ ಒಂದು ವಿಷ್ಣುಯಾಗವು ನಡೆಯುವಂತೆ ಮಾಡಲು ಹೇಳಿದನು. ಹೀಗಾದಲ್ಲಿ ಇಂದ್ರನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು ಎಂಬ ಆಶ್ವಾಸನೆಯನ್ನು ಸಹ ಕೊಟ್ಟನು.

ಇಂದ್ರನು ವಿಷ್ಣುಯಾಗವನ್ನೂ ಮತ್ತು ವಿಷ್ಣುವನ್ನು ಉದ್ದೇಶಿಸಿ ಅಶ್ವಮೇಧವನ್ನೂ ಪೂರ್ತಿಗೊಳಿಸಿದನು. ಯಜ್ಞ ಸಮಾಪ್ತಿಯಾಗುತ್ತಲೇ ಬ್ರಹ್ಮಹತ್ಯೆಯು ದೇವತೆಗಳ ಬಳಿಗೆ ಹೋಗಿ ಹೀಗೆ ನುಡಿಯಿತು : "ನೀವು ನನಗೆ ಎಲ್ಲಿ ವಾಸಸ್ಥಾನವನ್ನು ಕೊಡಲಿರುವಿರಿ ?" ಆಗ ದೇವತೆಗಳು ಬ್ರಹ್ಮಹತ್ಯೆಗೆ ನಾಲ್ಕು ಭಾಗಗಳಾಗಲು ತಿಳಿಸಿದರು. ಬ್ರಹ್ಮಹತ್ಯೆಯ ಇರುವಿಕೆಯು ಬಲು ಕ್ಲೇಶಕರವಾದದ್ದು ; ಇಂಥ ಬ್ರಹ್ಮಹತ್ಯೆಯು ಇಂದ್ರನನ್ನು ಬಿಟ್ಟು ಬೇರೆ ವಸತಿಸ್ಥಾನವನ್ನು ಬೇಡಿಕೊಂಡಿತು. ಆಗ ಬ್ರಹ್ಮಹತ್ಯೆಯು ದೇವತೆಗಳಿಗೆ ಹೀಗೆಂದಿತು :

ಏಕೇನಾಂಶೇನ ವತ್ಸ್ಯಾಮಿ ಪೂರ್ಣೋದಾಸು ನದೀಷು ವೈ ।
ಚತುರೋ ವಾರ್ಷಿಕಾನ್ಮಾಸಾನ್ದರ್ಪಘ್ನೀ ಕಾಮಚಾರಿಣೀ ॥ ೧೩ ॥
ಭೂಮ್ಯಾಮಹಂ ಸರ್ವಕಾಲಮೇಕೇನಾಂಶೇನ ಸರ್ವದಾ ।
ವಸಿಷ್ಯಾಮಿ ನ ಸಂದೇಹಃ ಸತ್ಯೇನೈತದ್ ಬ್ರವೀಮಿ ವಃ ॥ ೧೪ ॥
ಯೋಽಯಮಂಶಸ್ತೃತೀಯೋ ಮೇ ಸ್ತ್ರೀಷು ಯೌವನಶಾಲಿಷು ।
ತ್ರಿರಾತ್ರಂ ದರ್ಪಪೂರ್ಣಾಸು ವಸಿಷ್ಯೇ ದರ್ಪಘಾತಿನೀ ॥ ೧೫ ॥

ಹಂತಾರೋ ಬ್ರಾಹ್ಮಣಾನ್ಯೇ ತು ಮೃಷಾಪೂರ್ವಮದೂಷಕಾನ್ ।
ತಾಂಶ್ಚತುರ್ಥೇನ ಭಾಗೇನ ಸಂಶ್ರಯಿಷ್ಯೇ ಸುರರ್ಷಭಾಃ ॥ ೧೬ ॥
ಪ್ರತ್ಯೂಚುಸ್ತಾಂ ತತೋ ದೇವಾ ಯಥಾ ವದಸಿ ದುರ್ವಸೇ ।
ತಥಾ ಭವತು ತತ್ಸರ್ವಂ ಸಾಧಯಸ್ವ ಯದೀಪ್ಸಿತಮ್ ॥ ೧೭ ॥

"ಏರಿಗಿದ್ದ ಗರ್ವವನ್ನು ಅಡಗಿಸುವ, ಸ್ವೇಚ್ಛಾವರ್ತಿ ಬ್ರಹ್ಮಹತ್ಯೆಯಾದ ನಾನು, ಮಳೆಗಾಲದ ನಾಲ್ಕು ತಿಂಗಳವರೆಗೆ ತುಂಬಿ ಹರಿಯುವ ನದಿಗಳಲ್ಲಿ ವಾಸವಾಗಿರುವೆನು. ನನ್ನ ಕಾಲುಭಾಗವು ಸದಾಕಾಲವೂ ಭೂಮಿಯಲ್ಲಿ 'ಊಷರ' ರೂಪದಿಂದ ಇರುವದು. ಇದು ನನ್ನ ಸತ್ಯವಚನವಾಗಿದೆ. ಇನ್ನು ಮೂರನೆಯ ಕಾಲುಭಾಗವು ವಿಷಯವಾಸನಾಯುಕ್ತ ತರುಣ ಸ್ತ್ರೀಯರಲ್ಲಿ, ಪ್ರತಿಮಾಸದ ಮೂರು ದಿನಗಳ ಕಾಲ ವಾಸವಿರುವದು. ನಾನು ಈ ಕಾಲದಲ್ಲಿ ಅವರಿಗೆ ಸಮಾಗಮಸುಖ ಇಲ್ಲದಂತೆ ಮಾಡುವೆನು. ಸುರಶ್ರೇಷ್ಠರೇ, ನನ್ನ ಇನ್ನುಳಿದ ಕಾಲುಭಾಗವು ನಿರಪರಾಧಿಗಳಾದ ಬ್ರಾಹ್ಮಣರ ಮೇಲೆ ವೃಥಾ ಆರೋಪವನ್ನು ಮಾಡುವವರಲ್ಲಿ ಇಲ್ಲವೆ ಅವರ ಹತ್ಯೆಗೆ ಕಾರಣೀಭೂತರಾದವರಲ್ಲಿ ಉಳಿಯುವದು."

ಆಗ ದೇವತೆಗಳು "ಎಲೈ ದುರ್ವಾಸ ಬ್ರಹ್ಮಹತ್ಯೆಯೇ, ನಿನ್ನ ಇಚ್ಛೆಯಂತಾಗಲಿ ! ನಿನ್ನ ಇಚ್ಛೆಯಿದ್ದಂತೆ ನೀನು ವಾಸವಿರು !" ಎಂದು ನುಡಿದರು. ಇಂದ್ರನ ಮೇಲಿದ್ದ ಬ್ರಹ್ಮಹತ್ಯೆಯ ಪಾತಕವು ತೊಲಗಿದ್ದರಿಂದ ದೇವತೆಗಳು ನಿಶ್ಚಿಂತರಾದರು.

ಇಲ್ಲಿ ವರವೆಂಬ ಪದವನ್ನು ಬಳಸಲಾಗಿಲ್ಲ.

ಯಾಚಿತ.

ನೋಡಿ : ಮಹಾಭಾರತದ ವರದಾನ, ವರ - ೧೯೬, ಬ್ರಹ್ಮದೇವ > ಬ್ರಹ್ಮಹತ್ಯೆ, ಪುಟ - ೨೦೭ ರಿಂದ ೨೦೯.

ಮಹಾಭಾರತದಲ್ಲಿ ಬ್ರಹ್ಮದೇವನು ಈ ವರವನ್ನು ಕೊಟ್ಟದ್ದು ಅಗ್ನಿ, ವನಸ್ಪತಿ, ಅಪ್ಸರೆಯರು ಹಾಗೂ ಜಲ ಇವರುಗಳು ತಲಾ ಒಂದರಲ್ಲಿ ನಾಲ್ಕನೆಯ ಪಾಲನ್ನು ಸ್ವೀಕರಿಸಿದ್ದಾರೆ.

### ೮೮. ಶಂಕರ, ಪಾರ್ವತಿ > ಇಲರಾಜ ಉತ್ತರಕಾಂಡ / ೮೭

ಶ್ರೀರಾಮನು ಇಲರಾಜನ ಕಥೆಯನ್ನು ಲಕ್ಷ್ಮಣನಿಗೆ ಹೇಳುತ್ತಿದ್ದಾನೆ.

ಕರ್ದಮ ಪ್ರಜಾಪತಿಯ ಪುತ್ರನಾದ 'ಇಲ' ಎಂಬಾತನು ಧಾರ್ಮಿಕವೃತ್ತಿಯವನಿದ್ದು ಬಾಹ್ಲೀಕ ದೇಶದ ರಾಜನಾಗಿದ್ದನು. ಆತನು ತುಂಬಾ ಶೂರನಾಗಿದ್ದು ಇಡೀ ಪೃಥ್ವಿಯನ್ನೇ ಪಾದಾಕ್ರಾಂತ ಮಾಡಿದ್ದನು. ಆತನು ತನ್ನ ರಾಜ್ಯವನ್ನು ಸ್ವಂತ ಮಗನಂತಹ ಪ್ರೀತಿಯಿಂದ ಕಾಪಾಡುತ್ತಿದ್ದನು. ಒಮ್ಮೆ ಆತನು ಬೇಟೆಗೆಂದು ರಥ, ತುರಗ, ಸೈನ್ಯ, ಸೇವಕರೊಂದಿಗೆ ಕಾಡಿಗೆ ಹೋದನು. ಹತ್ತು ಸಾವಿರ ಮೃಗಗಳ ಬೇಟೆ ಮಾಡಿದರೂ ಆತನಿಗೆ ತೃಪ್ತಿಯಾಗಲಿಲ್ಲ. ಈ ರಾಜನು ಕಾರ್ತಿಕೇಯನ ಜನ್ಮಸ್ಥಳದತ್ತ ನಡೆದಾಗ, ಅಲ್ಲಿ ಶಂಕರನು ಪಾರ್ವತಿಯೊಡನೆ ಸರಸಸಲ್ಲಾಪಗಳಲ್ಲಿ ತೊಡಗಿದ್ದನ್ನು ಕಂಡನು. ಆ ಉಪವನವನ್ನು ಪ್ರವೇಶಿಸುವ ಯಾವ ಪುಲ್ಲಿಂಗ ಪ್ರಾಣಿಯೂ ಅಲ್ಲಿ ಸೇರಿದೊಡನೆಯೇ ಸ್ತ್ರೀರೂಪದ್ದಾಗುತ್ತಿತ್ತು. ಇದು ಆ ಉಪವನದ ವೈಶಿಷ್ಟ್ಯವಾಗಿತ್ತು. ಪಾರ್ವತಿಯೊಡನೆ ಸರಸವಾಡುತ್ತಿದ್ದ ಶಂಕರನು ಸಹ ಸ್ತ್ರೀರೂಪವನ್ನು ಧರಿಸಿದ್ದನು. ಇಲರಾಜನು ಅಲ್ಲಿ ತಲುಪುತ್ತಲೇ ಸೈನ್ಯ, ಸೇವಕರೊಂದಿಗೆ ಆತನಿಗೂ ಸ್ತ್ರೀರೂಪವು ಬಂದಿತು. ತನಗುಂಟಾದ ಸ್ತ್ರೀರೂಪವನ್ನು ಕಂಡು ರಾಜನಿಗೆ ಅತಿಶಯ ದುಃಖವುಂಟಾಯಿತು. ಹೀಗಾಗಲು ಶಂಕರನ ಪ್ರಭಾವವಿರಬೇಕೆಂಬುದನ್ನು ಅರಿತಾಗ ಭಯಗೊಂಡನು. ಸೈನ್ಯ, ಸೇವಕರ ಸಮೇತ ಆತನು ಶಂಕರನಿಗೆ ಶರಣಾದನು. ಆಗ ಪಾರ್ವತೀಪರಮೇಶ್ವರನು ಅವನಿಗೆ ವರವನ್ನು ಕೊಡಬಯಸಿದನು. ಶಿವನು ನಕ್ಕು ರಾಜನಿಗೆ ಇಂತೆಂದನು :

ಪುರುಷತ್ವಮೃತೇ ಸೌಮ್ಯ ವರಂ ವರಯ ಸುವ್ರತ । ೨೦
ಸ್ತ್ರೀಭೂತೋಽಸೌ ನ ಜಗ್ರಾಹ ವರಮನ್ಯಂ ಸುರೋತ್ತಮಾತ್ । ೨೧

"ಹೇ ಸೌಮ್ಯನೇ, ಸದಾಚಾರಸಂಪನ್ನನೇ, ಪುರುಷತ್ವ ಒಂದನ್ನುಳಿದು ನಿನಗೆ ಇಷ್ಟವಿದ್ದ ಬೇರೆ ವರವನ್ನು ಕೇಳು!" ಎಂದನು. ರಾಜನಿಗೆ ಪುರುಷತ್ವವೇ ಬೇಕಿತ್ತು. ಅದನ್ನು ಶಂಕರನು ಕೊಡಲು ಒಪ್ಪಲಿಲ್ಲವಾದ್ದರಿಂದ ಆತನಿಗೆ ದುಃಖವೆನಿಸಿ ಶಂಕರನ ಬಳಿ ಯಾವ ವರವನ್ನೂ ಯಾಚಿಸಲಿಲ್ಲ. ಅನಂತರ ಆತನು ದೇವಿಯಾದ ಪಾರ್ವತಿಗೆ ಶರಣುಹೋದನು ಮತ್ತು ಪ್ರಾರ್ಥಿಸಿ ಹೀಗೆಂದನು :

ಈಶೇ ವರಾಣಾಂ ವರದೇ ಲೋಕಾನಾಮಸಿ ಭಾಮಿನೀ ॥ ೨೨ ॥
ಅಮೋಘದರ್ಶನೇ ದೇವಿ ಭಜ ಸೌಮ್ಯೇನ ಚಕ್ಷುಷಾ । ೨೩

"ಹೇ ವರಾಧಿಷ್ಠಾತ್ರಿಯೇ, ಹೇ ವರವನ್ನು ಕೊಡುವ ದೇವಿಯೇ, ತ್ರೈಲೋಕ್ಯದಲ್ಲಿ ಸ್ತ್ರೀ ಎಂದರೆ ನೀನಾಗಿರುವೆ. ಹೇ ದೇವಿಯೇ, ನಿನ್ನ ದರ್ಶನವು ವ್ಯರ್ಥವಾಗಲಾರದು. ಆ ಕಾರಣ ನೀನು ನನ್ನ ಮೇಲೆ ಕೃಪಾದೃಷ್ಟಿಯವಳಾಗು !"

ಪಾರ್ವತಿಯು ರಾಜನ ಹೃದಯದಾಸೆಯನ್ನು ಅರಿತು ಈ ರೀತಿ ನುಡಿದಳು :

ಅರ್ಧಸ್ಯ ದೇವೋ ವರದೋ ವರಾರ್ಧಸ್ಯ ತವ ಹ್ಯಹಮ್ ॥ ೨೪ ॥
ತಸ್ಮಾದರ್ಧಂ ಗೃಹಾಣ ತ್ವಂ ಸ್ತ್ರೀಪುಂಸೋರ್ಯಾವದಿಚ್ಛಸಿ । ೨೫

"ಎಲೈ ರಾಜನೇ ! ನೀನು ಪುರುಷತ್ವವನ್ನು ಪಡೆಯಲೋಸುಗ ನನ್ನಿಂದ ವರವನ್ನು ಕೇಳುತ್ತಲಿರುವೆ. ಅದರಲ್ಲಿ ಅರ್ಧವನ್ನೀವ ಸಾಮರ್ಥ್ಯ ಶ್ರೀ ಮಹಾದೇವನ ಬಳಿಯಿದೆ. ನಾನು ಅರ್ಧವನ್ನು ಮಾತ್ರ ತರಬಲ್ಲೆ. ನಿನಗೆ ಇಡಿಯ ಬಾಳನ್ನು ಹೆಣ್ಣಾಗಿ ಕಳೆಯಬೇಕಿದೆ. ಅದರಲ್ಲಿ ಅರ್ಧದಷ್ಟು ಕಾಲಾವಧಿಯ ಗಂಡಸುತನವನ್ನು ನಿನಗೆ ಕರುಣಿಸಬಲ್ಲೆ. ನಿನಗದು ಯಾವ ಬಗೆಯಲ್ಲಿ ಬೇಕು ? ನೀನು ಅದೆಷ್ಟು ಕಾಲ ಹೆಣ್ಣಾಗಿಯೂ, ಅದೆಷ್ಟು ಕಾಲ ಗಂಡಾಗಿಯೂ ಇರಬಯಸುವೆ ? — ಎಂಬುದನ್ನು ಹೇಳು.

ಇಲರಾಜನು ದೇವಿಯ ಈ ಅನುಪಮ ಅದ್ಭುತ ವರವನ್ನು ಕೇಳಿ ಸಂತೋಷಗೊಂಡು—

ಯದಿ ದೇವಿ ಪ್ರಸನ್ನಾ ಮೇ ರೂಪೇಣಾಪ್ರತಿಮಾ ಭುವಿ ॥ ೨೬ ॥
ಮಾಸಂ ಸ್ತ್ರೀತ್ವಮುಪಾಸಿತ್ವಾ ಮಾಸಂ ಸ್ಯಾಂ ಪುರುಷಃ ಪುನಃ । ೨೭

"ಹೇ ದೇವಿಯೇ, ನೀನು ನನ್ನ ಮೇಲೆ ಪ್ರಸನ್ನಳಾಗಿದ್ದರೆ ಮತ್ತು ಪೃಥ್ವಿಯಲ್ಲಿ ನೀನು ಅಪ್ರತಿಮ ರೂಪವತಿಯಾಗಿದ್ದಲ್ಲಿ, ನಾನು ನಿನ್ನಂತೆ ಒಂದು ತಿಂಗಳು ಸ್ತ್ರೀಯಾಗಿದ್ದು ಪುನಃ ಒಂದು ತಿಂಗಳು ಪುರುಷನಾಗಬೇಕು ! ಎಂಬ ವರವನ್ನು ಕರುಣಿಸು" ಎಂದನು.

ಇಲರಾಜನ ಇಚ್ಛೆಯನ್ನರಿತು ಪಾರ್ವತಿಯು ಹೀಗೆಂದು ನುಡಿದಳು :

ಪ್ರತ್ಯುವಾಚ ಶುಭಂ ವಾಕ್ಯಮೇವಮೇವ ಭವಿಷ್ಯತಿ ।
ರಾಜನ್ಪುರುಷಭೂತಸ್ತ್ವಂ ಸ್ತ್ರೀಭಾವಂ ನ ಸ್ಮರಿಷ್ಯಸಿ ॥ ೨೮ ॥
ಸ್ತ್ರೀಭೂತಶ್ಚ ಪರಂ ಮಾಸಂ ನ ಸ್ಮರಿಷ್ಯಸಿ ಪೌರುಷಮ್ । ೨೯

"ನಿನ್ನ ಇಚ್ಛೆಯಿದ್ದಂತೆ ನಡೆಯುವುದು ! ರಾಜನೇ, ನೀನು ಪುರುಷನಾಗಿದ್ದಾಗ ಸ್ತ್ರೀತ್ವದ ಸ್ಮರಣೆಯು ನಿನಗೆ ಉಳಿಯಲಾರದು ! ಸ್ತ್ರೀಯಾದನಂತರ ಪೌರುಷದ ಸ್ಮರಣೆಯು ಇರಲಾರದು !"

ಈ ರೀತಿ ಕರ್ದಮನ ಮಗನಾದ ಇಲರಾಜನು ಒಂದು ತಿಂಗಳು ಪುರುಷನಾಗಿದ್ದು ಮರುತಿಂಗಳು 'ಇಲ' ಎಂಬ ತ್ರೈಲೋಕ್ಯಸುಂದರಿಯಾಗುತ್ತಿದ್ದನು.

ಉತ್ತರಕಾಂಡ / ೯೦

ಇಲನಿಗೆ ಉಂಟಾದ ದುಃಸ್ಥಿತಿಯನ್ನು ಶಂಕರನ ಹೊರತಾಗಿ ಯಾರೂ ನಿವಾರಿಸಲಾರರು ಎಂದು ಕರ್ದಮನ ನಂಬಿಕೆಯಿತ್ತು. ಶಂಕರನಿಗೆ ಪ್ರಿಯವಿದ್ದ ಅಶ್ವಮೇಧಯಜ್ಞವನ್ನು ಕೈಕೊಂಡು ಬ್ರಹ್ಮಹತ್ಯೆಯ ಪಾತಕವನ್ನು ಸಹ ಕಳೆದುಕೊಳ್ಳಬಹುದು. ಈ ಕಾರಣದಿಂದ ಕರ್ದಮನು ಇಲರಾಜನಿಗೋಸ್ಕರ ಅಶ್ವಮೇಧಯಜ್ಞವನ್ನು ಮಾಡಬೇಕೆಂದು ನುಡಿದನು. ಆಗ ಸಂವರ್ತಪ್ರಮುಖ ರಾಜರ್ಷಿಯ ಶಿಷ್ಯನಾದ ಮರುತ್ತನು ರಾಜನ ಸಲುವಾಗಿ

ರುದ್ರನನ್ನು ಆರಾಧಿಸಲೆಂದು ಅಶ್ವಮೇಧಯಜ್ಞವನ್ನು ಮಾಡಿದನು. ಯಜ್ಞಪೂರ್ತಿಯನಂತರ ಸಂತೋಷಗೊಂಡ ಉಮಾಪತಿ ಶಂಕರನು, "ನಿಮ್ಮ ಭಕ್ತಿಯುಕ್ತ ಯಜ್ಞದಿಂದ ನಾನು ಪ್ರಸನ್ನನಾಗಿದ್ದೇನೆ. ಇಲರಾಜನಿಗೆ ಪ್ರಿಯವಿರುವ ಯಾವುದನ್ನು ಮಾಡಲಿ ?" ಎಂದನು. ಆಗ ಯಜ್ಞಕ್ಕಾಗಿ ನೆರೆದಿದ್ದ ಎಲ್ಲ ದ್ವಿಜರು "ಇಲರಾಜನಿಗೆ ಪುರುಷತ್ವವು ಪ್ರಾಪ್ತವಾಗಬೇಕು" ಎಂದು ಶಂಕರನನ್ನು ಪ್ರಾರ್ಥಿಸಿದರು.

ತತಃ ಪ್ರೀತೋ ಮಹಾದೇವಃ ಪುರುಷತ್ವಂ ದದೌ ಪುನಃ ॥ ೧೯ ॥
ಇಲಾಯೈ ಸುಮಹಾತೇಜಾ ದತ್ವಾ ಚಾಂತರಧೀಯತ । ೨೦

ಮಹಾದೇವನು ಪ್ರಸನ್ನನಾಗಿ ಇಲನಿಗೆ ಪುರುಷತ್ವವನ್ನು ಮರಳಿ ಕೊಟ್ಟನು.

ಇನ್ನಿತರ ವರಗಳಿಗಿಂತ ಈ ವರವು ಭಿನ್ನವಾಗಿದ್ದು, ವೈಶಿಷ್ಟ್ಯಪೂರ್ಣವಾಗಿದೆ. ಪಾರ್ವತಿಯು ಇಲರಾಜನಿಗೆ ಕೊಟ್ಟ ವರವು ರಾಮಾಯಣದಲ್ಲಿ ಉಲ್ಲೇಖಿತವಾಗಿರುವ ಒಂದೇ ಅರ್ಧವರವಾಗಿದೆ.

ಶಂಕರನು ಇಲನಿಗೆ ಕೊಡಬಯಸಿದ ವರವು ಅಯಾಚಿತವಿದ್ದು ಅಸ್ವೀಕೃತವಾಗಿದೆ. ಪಾರ್ವತಿಯು ಕೊಟ್ಟ ವರವು ಯಾಚಿತವಿದ್ದರೂ ಅದರ ವಿಸ್ಮರಣೆಯ ಭಾಗವು ಅಯಾಚಿತವಾಗಿದೆ. ಇಲನು ತನಗೆ ಸ್ತ್ರೀತ್ವ ಬಂದಾಗ ಪುರುಷತ್ವದ ಮತ್ತು ಪುರುಷತ್ವ ಬಂದಾಗ ಸ್ತ್ರೀತ್ವದ ವಿಸ್ಮೃತಿಯಾಗಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿರದಿದ್ದರೂ ಪಾರ್ವತಿಯು ಅದನ್ನು ಕರುಣಿಸಿದ್ದಾಳೆ.

**ಅಯಾಚಿತ. ಅಸ್ವೀಕೃತ** (ಶಂಕರ > ಇಲ).

**ಯಾಚಿತ** (ಪಾರ್ವತಿ > ಇಲ).

**ಅಯಾಚಿತ** (ಪಾರ್ವತಿ > ಇಲ, ಈ ವರದ ಮರೆವಿನ ಭಾಗ).

## ೮೯. ಶ್ರೀರಾಮ > ಪ್ರಜಾಜನರು — ಉತ್ತರಕಾಂಡ / ೧೦೭

ಲಕ್ಷ್ಮಣನ ಆತ್ಮಸಮರ್ಪಣೆಯನಂತರ ಶ್ರೀರಾಮನು ಬಹಳ ಶೋಕಾಕುಲನಾದನು. ಪುರೋಹಿತರು, ಮಂತ್ರಿಗಳು ಹಾಗೂ ಪುರವಾಸಿಗಳನ್ನು ಉದ್ದೇಶಿಸಿ ಆತನು ನುಡಿದದ್ದೇನೆಂದರೆ : "ಧರ್ಮಾಸಕ್ತನಾದ ವೀರ ಭರತನಿಗೆ ಇಂದು ಅಯೋಧ್ಯಾಪತಿಯನ್ನಾಗಿ ರಾಜ್ಯಾಭಿಷೇಕವನ್ನು ಮಾಡಿ ಅನಂತರ ಅರಣ್ಯಕ್ಕೆ ಹೋಗುವೆನು. ಲಕ್ಷ್ಮಣನು ಹಿಡಿದ ಮಾರ್ಗವನ್ನೇ ಹಿಡಿಯುವೆನು." ಶ್ರೀರಾಮನ ಈ ನಿರ್ಣಯವನ್ನು ಕೇಳಿದ ಪ್ರಜೆಗಳೆಲ್ಲರೂ ದುಃಖಪರವಶರಾದರು. ಪ್ರಜೆಗಳ ಚೇತನವೇ ಅಳಿದುಹೋಯಿತು. ಭರತನಿಗೂ ಅತ್ಯಂತ ಅಸ್ವಸ್ಥತೆ ಉಂಟಾಯಿತು. ಆತನು ಶ್ರೀರಾಮನಿಗೆ "ನನಗೆ ರಾಜ್ಯಾಭಿಲಾಷೆ ಅಥವಾ ಸ್ವರ್ಗದ ಅಭಿಲಾಷೆ ಇರುವುದಿಲ್ಲ. ಕುಶ-ಲವ ಇವರಿಗೆ ರಾಜ್ಯಾಭಿಷೇಕವನ್ನು ಮಾಡಬೇಕು ; ಕೂಡಲೇ ದೂತರಿಂದ ಹೇಳಿಕಳುಹಿಸಿ ಶತ್ರುಘ್ನನಿಗೆ ನಿಮ್ಮ ಗಮನದ ವಾರ್ತೆಯನ್ನು ತಿಳಿಸಿರಿ !" ಎಂದನು. ವಸಿಷ್ಠಮುನಿಯು ಮುಖವನ್ನು ಮೇಲೆತ್ತಿದ "ವತ್ಸ ರಾಮನೇ, ಭೂಮಿಯಲ್ಲಿರುವ ಈ ಪ್ರಜೆಗಳನ್ನು ರಕ್ಷಿಸು ! ಪ್ರಜೆಗಳ ಇಷ್ಟದಂತೆ ವರ್ತಿಸು ! ಅವರ ಇಚ್ಛೆಯನ್ನು ಅಲ್ಲಗಳೆಯಬೇಡ !" ಎಂದನು. ಆಗ ಶ್ರೀರಾಮನು ಪ್ರಜೆಗಳಿಗೆ "ನಾನು ಯಾವ ರೀತಿ ವರ್ತಿಸಲಿ ?" ಎಂದು ಪ್ರಶ್ನಿಸಿದನು. ಅದಕ್ಕೆ ಪ್ರಜೆಗಳು —

ಗಚ್ಛಂತಮನುಗಚ್ಛಾಮೋ ಯತ್ರ ರಾಮ ಗಮಿಷ್ಯಸಿ ॥ ೧೨ ॥
ಪೌರೇಷು ಯದಿ ತೇ ಪ್ರೀತಿರ್ಯದಿ ಸ್ನೇಹೋ ಹ್ಯನುತ್ತಮಃ ।
ಸಪುತ್ರದಾರಾಃ ಕಾಕುತ್ಸ್ಥ ಸಮಂ ಗಚ್ಛಾಮ ಸತ್ಪಥಮ್ ॥ ೧೩ ॥
ತಪೋವನಂ ವಾ ದುರ್ಗಂ ವಾ ನದೀಮಂಭೋನಿಧಿಂ ತಥಾ ।
ವಯಂ ತೇ ಯದಿ ನ ತ್ಯಾಜ್ಯಾಃ ಸರ್ವಾನ್ನೋ ನಯ ಈಶ್ವರ ॥ ೧೪ ॥
ಏಷಾ ನಃ ಪರಮಾ ಪ್ರೀತಿರೇಷ ನಃ ಪರಮೋ ವರಃ ।
ಹೃದ್ಗತಾ ನಃ ಸದಾ ಪ್ರೀತಿಸ್ತವಾನುಗಮನೇ ನೃಪ ॥ ೧೫ ॥

"ರಾಜನೇ, ನೀನು ಹೋದತ್ತ ನಾವೆಲ್ಲರೂ ನಿನ್ನನ್ನು ಹಿಂಬಾಲಿಸುವೆವು. ಪ್ರಜೆಗಳ ಮೇಲೆ ನಿನ್ನ ಪ್ರೀತಿ ಇದ್ದಲ್ಲಿ, ಅವರಲ್ಲಿ ದೃಢಸ್ನೇಹವಿದ್ದಲ್ಲಿ, ನಮ್ಮನ್ನು ಬಿಟ್ಟುಕೊಡಬಾರದೆಂದು ಅನಿಸುತ್ತಿದ್ದಲ್ಲಿ,

ಸ್ವರ್ಗ, ತಪೋವನ, ದುರ್ಗಮಾರಣ್ಯ, ನದಿ ಮತ್ತು ಸಾಗರ ಎಂದು ನೀನು ಎತ್ತ ಸಾಗುವಿಯೋ ಅಲ್ಲಿಗೆ ನಾವೆಲ್ಲರೂ ಮಡದಿಮಕ್ಕಳೊಂದಿಗೆ ನಿನ್ನನ್ನು ಹಿಂಬಾಲಿಸುವೆವು. ಹೇ ಈಶ್ವರನೇ, ನೀನು ನಮ್ಮೆಲ್ಲರನ್ನು ಜೊತೆಗೆ ಕರೆದುಕೊಂಡು ಹೋಗು ! ಇದರಿಂದ ನಮಗೆ ಹಿಡಿಸಲಾರದಷ್ಟು ಆನಂದವಾಗುವದು. ಇದು ನಮಗೆ ಬೇಕಾದ ಮುಖ್ಯ ವರವಾಗಿದೆ. ನಿನ್ನ ಜೊತೆಗೆ ಬರಲು ಸದಾಕಾಲವೂ ನಮಗೆ ಆನಂದವಾಗುತ್ತದೆ" ಎಂದು ಹೇಳಿದರು.

ಪ್ರಜೆಗಳ ಮನೋರಥವನ್ನು ಅರಿತುಕೊಂಡು ಶ್ರೀರಾಮನು ಆ ದಿನವೇ ಕುಶ-ಲವರಿಗೆ ರಾಜ್ಯಾಭಿಷೇಕವನ್ನು ಪೂರೈಸಿದನು.

ಶತ್ರುಘ್ನನಲ್ಲಿಗೆ ದೂತರನ್ನು ಕಳುಹಿದನು.

ಯ. ಚಿತ.

## ಭಾಗ : ನಾಲ್ಕು

# ಆಣೆಗಳು, ಸತ್ಯಕ್ರಿಯೆಗಳು

### ೧. ತ್ರಿಶಂಕುವಿನ ಆಣೆ

ತ್ರಿಶಂಕು ಒಬ್ಬ ರಾಜನಾಗಿದ್ದನು. ಸತ್ಯನಿಷ್ಠನು. ತನ್ನೆಲ್ಲ ಇಂದ್ರಿಯಗಳನ್ನು ಹಿಡಿತದಲ್ಲಿ ಇರಿಸಿಕೊಂಡವನು. ಸದೇಹನಾಗಿ ಸ್ವರ್ಗವನ್ನೇರುವ ಬಯಕೆ ಆತನದಾಗಿತ್ತು. ಅದಕ್ಕಾಗಿ ಒಂದು ಯಜ್ಞವನ್ನು ಹೂಡಬೇಕೆಂದಿದ್ದನು. ವಸಿಷ್ಠರು ಇಕ್ಷ್ವಾಕು ಕುಲಕ್ಕೆ ಗೌರವಪಾತ್ರರಾದ ಗುರುಗಳು. ಅವರು ತನ್ನ ಈ ಯಜ್ಞದ ಪೌರೋಹಿತ್ಯವನ್ನು ವಹಿಸಿಕೊಳ್ಳಬೇಕೆಂದು ತ್ರಿಶಂಕು ಆಶಿಸಿದ್ದನು. ಆದರೆ ವಸಿಷ್ಠರು ಅವನ ಈ ಕೋರಿಕೆಯನ್ನು ಮನ್ನಿಸಲಿಲ್ಲ.

ಆಗ ತ್ರಿಶಂಕುವು ವಸಿಷ್ಠರ ಮಕ್ಕಳನ್ನು ಮೊರೆಹೊಕ್ಕನು. ಅವರೂ ಅದಕ್ಕೊಪ್ಪಿಕೊಳ್ಳಲಿಲ್ಲ. ಅವನ ಮಾತು ಅವರಿಗೆ ಇಷ್ಟವಾಗಲಿಲ್ಲ. ತಮ್ಮ ತಂದೆ ತಳ್ಳಿಹಾಕಿದ ಸಂಗತಿಯನ್ನು ಕೈಕೊಳ್ಳಲು ಅವರು ಸುತರಾಂ ಒಪ್ಪುವಂತಿರಲಿಲ್ಲ. "ನಾವು ನಮ್ಮ ತಂದೆಯನ್ನು ಅವಮಾನಕ್ಕೀಡುಮಾಡೆವು. ಬಂದ ದಾರಿಗೆ ಸುಂಕವಿಲ್ಲೆಂದು ತೆಪ್ಪಗೆ ಇಲ್ಲಿಂದ ಕಾಲ್ತೆಗೆ" ಎಂದರು. ಅವನೂ ಅಷ್ಟಕ್ಕೇ ಜಗ್ಗಲಿಲ್ಲ. ಪರಿಪರಿಯಾಗಿ ಬೇಡಿಕೊಂಡನು. ಕೊನೆಗೆ, "ಗುರುಗಳಾಗಲಿ ಇಲ್ಲವೆ ಅವರ ಮಕ್ಕಳಾದ ನೀವಾಗಲಿ ಪೌರೋಹಿತ್ಯವನ್ನು ಒಪ್ಪಿಕೊಳ್ಳದಿದ್ದರೆ ನಾನು ಇನ್ನೊಬ್ಬ ಗುರುವನ್ನು ಕಂಡುಕೊಳ್ಳಬೇಕಾದೀತು" ಎಂದು ಬೆದರಿಸಿದನು. ಅವನ ಈ ಮಾತನ್ನು ಆಲಿಸಿ ಅವರೆಲ್ಲ ಕೆರಳಿ ಕೆಂಡವಾದರು. ಚಂಡಾಲನಾಗೆಂದು ಅವನನ್ನು ಶಪಿಸಿದರು. ಅವರ ಶಾಪದ ಪರಿಣಾಮದಿಂದಾಗಿ ಅವನು ತಕ್ಷಣ ಚಂಡಾಲನಾಗಿಬಿಟ್ಟನು.

ನಿರುಪಾಯನಾದ ತ್ರಿಶಂಕುವು ಅಂದಗೇಡಿಯಾದ ತನ್ನ ದೇಹವನ್ನು ಹೊತ್ತು ವಿಶ್ವಾಮಿತ್ರನನ್ನು ಮೊರೆ ಹೊಕ್ಕನು. ನಡೆದ ಸಂಗತಿಗಳೆಲ್ಲವನ್ನೂ ಅವನಿಗೆ ಅರುಹಿದನು. "ದಯವಿಟ್ಟು ನನ್ನ ಈ ಯಜ್ಞದ ಪೌರೋಹಿತ್ಯ ವನ್ನು ವಹಿಸಿಕೊಂಡು ಅದು ಸಾಂಗವಾಗಿ ನೆರವೇರುವಂತೆ ಮಾಡಿ" ಎಂದು ಬೇಡಿಕೊಂಡನು.

> ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ॥ ೧೯ ॥
> ಕೃಚ್ಛ್ರೇಷ್ವಪಿ ಗತಃ ಸೌಮ್ಯ ಕ್ಷತ್ರಧರ್ಮೇಣ ತೇ ಶಪೇ । ೨೦

"ಕಷ್ಟದಲ್ಲಾಗಲಿ ಇಲ್ಲವೆ ಬಿಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿರುವಾಗಲೇ ಆಗಲಿ, ನಾನೆಂದಿಗೂ ಸುಳ್ಳು ಹೇಳಿದವನಲ್ಲವಲ್ಲದೆ ಮುಂದೆಂದಿಗೂ ಹಾಗೆ ಮಾಡೆನೆಂಬ ಸಂಗತಿಯನ್ನು ನನ್ನ ಕ್ಷಾತ್ರಧರ್ಮದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

### ೨. ಕೈಕೇಯಿಯ ಬಯಕೆಯನ್ನು ಈಡೇರಿಸಲು ದಶರಥನ ಆಣೆ — ಅಯೋಧ್ಯಾಕಾಂಡ / ೧೦

ಶ್ರೀರಾಮನಿಗೆ ಯುವರಾಜನೆಂದು ಪಟ್ಟಾಭಿಷೇಕವನ್ನು ನಡೆಯಲಿರುವ ಸುವಾರ್ತೆಯನ್ನು ಕೈಕೇಯಿಗೆ ಅರುಹಲೋಸುಗ ದಶರಥನು ಅವಳ ಅಂತಃಪುರಕ್ಕೆ ಬಂದನು. ಆಗ ಅವಳು ಅಲ್ಲಿರದೆ ಕ್ರೋಧಾಗಾರದಲ್ಲಿರುವ ಳೆಂದು ತಿಳಿದುಬಂದಿತು. ಅವನ ಮನದಲ್ಲಿ ಹಲವು ಬಗೆಯ ಸಂದೇಹಗಳು ತಲೆದೋರಿದವು. ಅವಳ ಕೋಪದ ಕಾರಣ ತಿಳಿಯದಂತಾಯಿತು. ಅವನು ಕ್ರೋಧಾಗಾರವನ್ನು ಹೊಕ್ಕು ನೋಡಿದರೆ ಅವಳು ನೆಲದ ಮೇಲೆ ಬಿದ್ದು ಉರುಳಾಡುತ್ತಿದ್ದುದು ಕಂಡಿತು. ಅವನಿಗೂ ಬಲು ಕೆಡಕೆನಿಸಿತು. ಅವಳೆಡೆಗೆ ಎದುರಾಗಿ ಅಂಥದೇನು ನಡೆಯಿತು, ಅವಳಿಗೇನು ಬೇಕು ಎಂದೆಲ್ಲ ಕೇಳಿದನು. ಅವಳ ಬಯಕೆಯನ್ನು ತಾನು ಈಡೇರಿಸುವು ದಾಗಿ ಅವಳಿಗೆ ಮಾತುಕೊಟ್ಟನು. ಅವಳು ತನ್ನ ಮಾತನ್ನು ನಂಬಲು ಶುರುಮಾಡಿದುದನ್ನು ಕಂಡು ಅವನು ಹೀಗೆಂದನು—

ಕರಿಷ್ಯಾಮಿ ತ್ವ ಪ್ರೀತಿಂ ಸುಕೃತೇನಾಪಿ ತೇ ಶಪೇ । ೩೬
ತತ್ತ್ವಂ ಮೇ ಬ್ರೂಹಿ ಕೈಕೇಯಿ ಯತಸ್ತೇ ಭಯಮಾಗತಮ್ ।
ತತ್ತೇ ವ್ಯಪನಯಿಷ್ಯಾಮಿ.... ॥ ೩೭ ॥

"ನಿನ್ನ ಬಯಕೆಯನ್ನು ಈಡೇರಿಸುವೆನೆಂದು ನನ್ನ ಸುಕೃತದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಕೈಕೇಯೀ, ನೀನು ಹೆದರಿದುದೇಕೆ, ದುಃಖಿಸುವುದೇಕೆ, ಎಂಬುದನ್ನು ನನಗೆ ಹೇಳು, ತಕ್ಷಣ ಅವುಗಳನ್ನು ನಿವಾರಿಸುವೆನು."

ಅಯೋಧ್ಯಾಕಾಂಡ / ೧೧

ತೇನಾಜಯ್ಯೇನ ಮುಖ್ಯೇನ ರಾಘವೇಣ ಮಹಾತ್ಮನಾ ।
ಶಪೇ ತೇ ಜೀವನಾರ್ಹೇಣ ಬ್ರೂಹಿ ಯನ್ಮನಸೇಪ್ಸಿತಮ್ ॥ ೬ ॥
ಯಂ ಮುಹೂರ್ತಮಪಶ್ಯಂಸ್ತು ನ ಜೀವೇ ತಮಹಂ ಧ್ರುವಮ್ ।
ತೇನ ರಾಮೇಣ ಕೈಕೇಯಿ ಶಪೇ ತೇ ವಚನಕ್ರಿಯಾಮ್ ॥ ೭ ॥
ಆತ್ಮನಾ ಚಾತ್ಮಜೈಶ್ಚಾನ್ಯೈರ್ವೃಣೇ ಯಂ ಮನುಜರ್ಷಭಮ್ ।
ತೇನ ರಾಮೇಣ ಕೈಕೇಯಿ ಶಪೇ ತೇ ವಚನಕ್ರಿಯಾಮ್ ॥ ೮ ॥

"ಶ್ರೀರಾಮನನ್ನುಳಿದು ನಿನ್ನಷ್ಟು ಬೇಕಿದ್ದವರು ನನಗೆ ಇನ್ನಾರೂ ಇಲ್ಲ. ನಿನ್ನ ಮನದಿಚ್ಛೆಯನ್ನು ಪೂರ್ತಿಗೊಳಿಸುವೆನೆಂದು ರಘುಕುಲದ (ಒಬ್ಬ) ಮುಖ್ಯಸ್ಥನೂ, ಶತ್ರುಗಳಿಗೆ ಅಜಿಂಕ್ಯನೆನ್ನಿಸಿದವನೂ ಅಲ್ಲದೆ ನನ್ನ ಬಾಳಿನ ಒಂದು ಸಾಧನೆಯೆನ್ನಿಸಿದವನೂ, ಮಹಾತ್ಮನೂ ಆದ ಶ್ರೀರಾಮನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನನ್ನ ಕಣ್ಣಿಂದ ಅರೆಕ್ಷಣ ಅತ್ತಿತ್ತ ಹೋದನಾದರೂ ನಾನು ಕಳವಳಕ್ಕೀಡಾಗುವಂತೆ ಮಾಡುವ ಆ ಶ್ರೀರಾಮನ ಮೇಲೆ ಆಣೆಯಿಟ್ಟು ನಿನ್ನ ಮನದ ಬಯಕೆಯನ್ನು ಈಡೇರಿಸುವೆನು. ನನಗೆ ಶ್ರೀರಾಮ ಎಲ್ಲರಿಗಿಂತಲೂ ಹೆಚ್ಚು ಬೇಕಿದ್ದವನು ಎಂಬ ಸಂಗತಿಯನ್ನು ಗಮನದಲ್ಲಿರಿಸಿಕೊಂಡು ನಿನ್ನ ಇಚ್ಛೆಯೇನೆಂಬುದನ್ನು ಹೇಳು. ಆ ನಿನ್ನ ಇಚ್ಛೆಯನ್ನು ತಪ್ಪ ಈಡೇರಿಸುವೆನೆಂದು ಶ್ರೀರಾಮನ ಮೇಲೆ ಆಣೆಯಿಟ್ಟು ಹೇಳುತ್ತೇನೆ."

ದಶರಥನು ಆಣೆಯಿಟ್ಟು ಹೇಳುವ ಈ ಮಾತುಗಳನ್ನು ದಯವಿಟ್ಟು ಆಲಿಸಬೇಕೆಂದು ಕೈಕೇಯಿಯು ದೇವೇಂದ್ರ, ದೇವತೆಗಳು ಹಾಗೂ ಗಂಧರ್ವಾದಿಗಳನ್ನು ಕೇಳಿಕೊಂಡಳು.

## ೩. ಶ್ರೀರಾಮನ ವನವಾಸಕ್ಕಾಗಿ ಕೈಕೇಯಿಯ ಆಣೆ

ಅಯೋಧ್ಯಾಕಾಂಡ / ೧೨

ಕೈಕೇಯಿ ಬೇಡಿದ ವರವನ್ನು ಕೇಳಿ ದಶರಥನಿಗೆ ತುಂಬ ಕೆಡಕೆನಿಸಿತು. ಅವನು ಚಿಂತೆಗೀಡಾಗಿ ಕೈಕೇಯಿಗೆ ಕಠೋರವಾದ ಮಾತುಗಳನ್ನು ಆಡಿದನು. ಅವಳಿಗೆ ತಿಳಿಹೇಳಲು ಯತ್ನಿಸಿದನು. ಹಲವು ಬಗೆಯಾಗಿ ಅವಳ ಮನರಮಿಸಲು ಹವಣಿಸಿದುದಲ್ಲದೆ ಅವಳ ಕಾಲುಗಳಿಗೂ ಬಿದ್ದನು. ಇಷ್ಟಾಗಿಯೂ ಅವಳು ತನ್ನ ಹಟವನ್ನು ಬಿಟ್ಟುಕೊಡಲಿಲ್ಲ. ಅವಳು ದಶರಥನಿಗೆ ಹೀಗೆಂದಳು —

ಭರತೇನಾತ್ಮನಾ ಚಾಹಂ ಶಪೇ ತೇ ಮನುಜಾಧಿಪ ।
ಯಥಾ ನಾನ್ಯೇನ ತುಷ್ಯೇಯಮೃತೇ ರಾಮವಿವಾಸನಾತ್ ॥ ೪೯ ॥

"ಶ್ರೀರಾಮನನ್ನು ಈ ನಾಡಿನಿಂದ ಹೊರಗೆ ಕಳಿಸುವ ವರವೊಂದನ್ನು ಬಿಟ್ಟು ಇನ್ನಾವುದರಿಂದಲೂ ನನಗೆ ನೆಮ್ಮದಿ ದೊರಕಲಾರದೆಂದು ನನ್ನ ಹಾಗೂ ಭರತನ ಮೇಲೆ ಆಣೆಯಿಟ್ಟು ನಿಮಗೆ ಹೇಳುತ್ತೇನೆ."

ಅಯೋಧ್ಯಾಕಾಂಡ / ೩೪

ಕೈಕೇಯಿ ಕೇಳಿದ ವರದಿಂದಾಗಿ ದಶರಥ ತುಂಬ ಚಿಂತೆಗೀಡಾದನು.

ಸ ದೇವ್ಯಾ ವ್ಯವಸಾಯಂ ಚ ಘೋರಂ ಚ ಶಪಥಂ ಕೃತಮ್ । ೩೪

ಕೈಕೇಯಿಯ ಗಟ್ಟಿಯಾದ ನಿರ್ಧಾರ ಹಾಗೆ ಆಣೆಯನ್ನು ಕೇಳಿ ದಶರಥನ ಬಾಯಿಯಿಂದ "ಏ ರಾಮ !" ಎಂಬ ಉದ್ಗಾರ ಹೊರಟಿತು. ಅವನು ನಿಟ್ಟುಸಿರು ಬಿಟ್ಟು ಎಚ್ಚರತಪ್ಪಿ ನೆಲಕ್ಕುರುಳಿದನು.

## ೪. ಸತ್ಯ, ದಾನ, ಯಜ್ಞ, ಬಿಲ್ಲುಗಳ ಬಗೆಗೆ ಲಕ್ಷ್ಮಣನ ಆಣೆ

**ಅಯೋಧ್ಯಾಕಾಂಡ / ೨೧**

ಶ್ರೀರಾಮನು ದಶರಥನ ಅಪ್ಪಣೆಯ ಮೇರೆಗೆ ಕಾಡಿಗೆ ತೆರಳುವುದು ಲಕ್ಷ್ಮಣನಿಗೆ ಬೇಕಾಗಿರಲಿಲ್ಲ. ಕೈಕೇಯಿಯ ಮಾತು ಕೇಳಿ ದಶರಥನು ಶ್ರೀರಾಮನಿಗೆ ನ್ಯಾಯವಾಗಿ ಸಲ್ಲಬೇಕಿದ್ದ ಹಕ್ಕುಗಳನ್ನು ನಿರಾಕರಿಸಿದ ಕಾರಣ ಲಕ್ಷ್ಮಣನು ತನ್ನ ತಂದೆಯ ಮೇಲೆ ಸಿಟ್ಟಿಗೆದ್ದಿದ್ದನು. ಯಾರ ವಿರೋಧವನ್ನೂ ಲೆಕ್ಕಿಸದೆ ಶ್ರೀರಾಮನು ರಾಜ್ಯವನ್ನು ಪಡೆದುಕೊಳ್ಳತಕ್ಕದ್ದು . ಎದುರಾಳಿಗಳನ್ನು ಸದೆಬಡಿಯಲು ತಾನು ಸಿದ್ಧನು ; ದಶರಥನನ್ನು ಸೆರೆಯಲ್ಲಿರಿಸಿಯಾಗಲಿ, ಅಗತ್ಯ ಕಂಡರೆ ಅವನನ್ನು ಕೊಂದುಬಿಟ್ಟಾಗಿಯಾಗಲಿ ರಾಜ್ಯವನ್ನು ವಶಪಡಿಸಿಕೊಳ್ಳಲು ಹಿಂಜರಿಯತಕ್ಕದ್ದಲ್ಲ ; ಹೀಗೆ ಮಾಡುವಲ್ಲಿ ಅಂಥ ತಪ್ಪೇನೂ ಇಲ್ಲವೆಂಬ ಭಾವನೆ ಲಕ್ಷ್ಮಣನದಾಗಿತ್ತು. ಶ್ರೀರಾಮನನ್ನು ದೂರಕ್ಕೆ ತಳ್ಳಿ ಭರತನಿಗೆ ರಾಜ್ಯವನ್ನು ಒಪ್ಪಿಸುವ ಸಾಮರ್ಥ್ಯ ದಶರಥನಲ್ಲಿರಲಿಲ್ಲ. ಲಕ್ಷ್ಮಣ ಕೌಸಲ್ಯೆಗೆ ಹೀಗೆನ್ನುತ್ತಾನೆ —

ಅನುರಕ್ತೋಽಸ್ಮಿ ಭಾವೇನ ಭ್ರಾತರಂ ದೇವಿ ತತ್ತ್ವತಃ ।
ಸತ್ಯೇನ ಧನುಷಾ ಚೈವ ದತ್ತೇನೇಷ್ಟೇನ ತೇ ಶಪೇ ॥ ೧೬ ॥

"ಅಮ್ಮ ! ನನಗೆ ನನ್ನ ಅಣ್ಣನ ಮೇಲೆ ತುಂಬ ಪ್ರೀತಿಯಿದೆ ಅಂತ ಸತ್ಯ, ಬಿಲ್ಲು, ದಾನ ಹಾಗೂ ಯಜ್ಞ, ಮುಂತಾದವುಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇದಲ್ಲದೆ, ಶ್ರೀರಾಮನು ಬೆಂಕಿಗೆ ಹಾರಿಕೊಳ್ಳುವವನಿದ್ದರೆ ಇಲ್ಲವೆ ದಟ್ಟವಾದ ಕಾಡಿಗೆ ಹೊರಟುಹೋಗುವವನಿದ್ದರೆ ಅಲ್ಲೆಲ್ಲ ಮೊದಲ ಹೆಜ್ಜೆ ನನ್ನದಿದ್ದೀತು. ಕೈಕೇಯಿಯ ಮಾತು ಕೇಳಿ ಮಹಾರಾಜರು ಬುದ್ಧಿಗೇಡಿಗಳಾಗಿ ನಡೆದುಕೊಂಡರೆ ಅವರನ್ನು ಕೊಂದುಹಾಕಲೂ ಕೂಡ ಹಿಂಜರಿದವನಲ್ಲ ನಾನು" ಎಂದೂ ನುಡಿದನು.

## ೫. ಕಾಡಿಗೆ ತೆರಳುವ ಬಗೆಗೆ ಶ್ರೀರಾಮನ ಆಣೆ

**ಅಯೋಧ್ಯಾಕಾಂಡ / ೨೧**

ಶ್ರೀರಾಮನ ವಿರಹ ಕೌಸಲ್ಯೆಗೆ ಸಹಿಸಲಸಾಧ್ಯವೆನಿಸಿತ್ತು. ಅವನು ಕಾಡಿಗೆ ತೆರಳದಿರಲೆಂದು ಹಲವು ಬಗೆಯಾಗಿ ಅವಳು ಅವನ ಮನವೊಲಿಸಲು ಯತ್ನಿಸಿದಳು. ಹೊತ್ತು ಬಂದರೆ ಅವನು ಬಿಕ್ಕೆ ಬೇಡಿಯಾದರಾಗಲಿ ಇಲ್ಲವೆ ಕೈಕೇಯಿಯ ದಾಸನಾಗಿಯಾಗಲಿ ಅಯೋಧ್ಯೆಯಲ್ಲಿಯೇ ಇರತಕ್ಕದ್ದು. ಅಂದರೆ ಅವನು ಯಾವಾಗಲೂ ತನ್ನ ಕಣ್ಣೆದುರಿನಲ್ಲಿ ಇರಲು ಅನುಕೂಲವೆಂದು ಅವಳು ಭಾವಿಸಿದ್ದಳು. ಆದರೆ ಶ್ರೀರಾಮನ ನಿರ್ಧಾರ ಮಾತ್ರ ಬಲು ಗಟ್ಟಿಮುಟ್ಟಾಗಿತ್ತು. ಅವನು ಅವಳಿಗೆ ಹೀಗೆಂದನು —

"ಅಮ್ಮ, ನಾನು ಕಾಡಿಗೆ ಹೊರಟಿದ್ದೇನೆ. ನನ್ನನ್ನು ತಡೆಯಬೇಡ.

ಅನುಮನ್ಯಸ್ವ ಮಾಂ ದೇವಿ ಗಮಿಷ್ಯಂತಮಿತೋ ವನಮ್ ।
ಶಾಪಿತಾಸಿ ಮಮ ಪ್ರಾಣೈಃ ಕುರು ಸ್ವಸ್ತ್ಯಯನಾನಿ ಮೇ ॥ ೪೭ ॥
ತೀರ್ಣಪ್ರತಿಜ್ಞಶ್ಚ ವನಾತ್ ಪುನರೇಷ್ಯಾಮ್ಯಹಂ ಪುರೀಮ್ ॥ ೪೮ ॥

"ನಾನು ಕಾಡಿಗೆ ಹೊರಟಿದ್ದೇನೆ. ನನಗೆ ಅಪ್ಪಣೆ ಕೊಡು. ಸ್ವಸ್ತಿವಾಚನವನ್ನು ಹೇಳು. ವ್ರತ ಪೂರ್ತಿಗೊಳ್ಳುತ್ತಲೆ ಕಾಡಿನಿಂದ ಅಯೋಧ್ಯೆಗೆ ಮರಳಿ ಬರುವೆನೆಂದು ನನ್ನ ಜೀವದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

**ಅಯೋಧ್ಯಾಕಾಂಡ / ೧೦೯**

ಶ್ರೀರಾಮನು ವನವಾಸವನ್ನು ತೊರೆದು ಅಯೋಧ್ಯೆಗೆ ಹಿಂತಿರುಗಿ ರಾಜ್ಯಾಡಳಿತೆಯನ್ನು ವಹಿಸಿಕೊಳ್ಳಬೇಕೆಂದು ಜಾಬಾಲಿಯು ಉಪದೇಶಿಸಿದನು. ಆಗ ಶ್ರೀರಾಮನು ಅವನಿಗೆ ಧರ್ಮಾಧರ್ಮಗಳ ಸೂಕ್ಷ್ಮವನ್ನು ವಿವರಿಸಿದನು —

ಸೋಽಹಂ ಪಿತ್ರ್ಯನಿರ್ದೇಶಂ ತು ಕಿಮರ್ಥಂ ನಾನುಪಾಲಯೇ ।
ಸತ್ಯಪ್ರತಿಶ್ರವಃ ಸತ್ಯಂ ಸತ್ಯೇನ ಸಮಯೀಕೃತಮ್ ॥ ೧೬ ॥
ನೈವ ಲೋಭಾನ್ನ ಮೋಹಾದ್ ವಾ ನ ಚಾಜ್ಞಾನಾತ್ ತಮೋಽನ್ವಿತಃ ।
ಸೇತುಂ ಸತ್ಯಸ್ಯ ಭೇತ್ಸ್ಯಾಮಿ ಗುರೋಃ ಸತ್ಯಪ್ರತಿಶ್ರವಃ ॥ ೧೭ ॥

"ನಾನು ಸತ್ಯಪ್ರತಿಜ್ಞನು. ತಂದೆಯ ಮಾತನ್ನು ನಡೆಸಿಕೊಡುವುದಾಗಿ ಆಣೆ ಕೈಕೊಂಡವನು. ಅಂದಬಳಿಕ ನಾನವನ ಅಪ್ಪಣೆಯನ್ನೇಕೆ ಪಾಲಿಸಕೂಡದು ? ಮೊದಲಿಗೆ ಸತ್ಯಪಾಲನೆಯ ಪಣ ತೊಟ್ಟು, ಈಗ ಲೋಭ, ಮೋಹ, ಆಸೆಗಳಿಗೆ ಮರುಳಾಗಿ ಹೆತ್ತವನ ಅಪ್ಪಣೆಯನ್ನು ಮುರಿಯಲಾರೆ."

## ೬. ಶ್ರೀರಾಮನು ಸತ್ಯ ಹಾಗೂ ಸುಕೃತಗಳ ಮೇಲಿಟ್ಟ ಆಣೆ ಅಯೋಧ್ಯಾಕಾಂಡ / ೩೪

ಶ್ರೀರಾಮ, ಲಕ್ಷ್ಮಣ ಹಾಗೂ ಸೀತೆ ಕಾಡಿಗೆ ಹೊರಡುವ ಮುನ್ನ ದಶರಥನನ್ನು ಕಾಣಲು ಬಂದರು. ಅವರನ್ನು ಕಂಡು ದಶರಥನ ದುಃಖ ಕಟ್ಟೊಡೆಯಿತು. ಬವಳಿಬಂದು ಬಿದ್ದನು. ಶ್ರೀರಾಮನನ್ನಗಲಿ ತಾನು ಇರಲಾರೆನೆಂದುಕೊಂಡನು. ಕೈಕೇಯಿಯಾದರೋ ಅವನನ್ನು ಮಾತಿನ ಕಟ್ಟಿಗೆ ಸಿಲುಕಿಸಿದ್ದಳು. ಅವನು ತೀರ ಬಿಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದನು. ಅವನು ಶ್ರೀರಾಮನಿಗೆ, "ನೀನು ಯಾರಿಂದಲೂ ಎಸಗಲಾಗದ ಕೆಲಸ ವನ್ನು ಕೈಕೊಂಡಿರುವಿ.

> ತ್ವಯಾ ಹಿ ಮತ್ಪ್ರಿಯಾರ್ಥಂ ತು ವನಮೇವಮುಪಾಶ್ರಿತಮ್ ॥ ೩೫ ॥
> ನ ಚೈತನ್ಮೇ ಪ್ರಿಯಂ ಪುತ್ರ ಶಪೇ ಸತ್ಯೇನ ರಾಘವ । ೩೬

"ನನ್ನ ಮಾತನ್ನು ನಡೆಸಿಕೊಡಲೆಂದೇ ಇಂದು ನೀನು ಕಾಡಿಗೆ ಹೊರಟಿರುವಿ. ಆದರೆ ಇದೀಗ ನಡೆದುದೇನೂ ನಾನು ಇಷ್ಟಪಟ್ಟುದಲ್ಲ ಎಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನೀನು ಕಾಡಿಗೆ ಹೋಗುವುದು ನನಗೆ ಒಪ್ಪಿಗೆಯಿಲ್ಲ. ಕೈಕೇಯಿ ಅಂದರೆ ಬೂದಿ ಮುಚ್ಚಿದ ಕೆಂಡ. ಅವಳು ತನ್ನ ದುರುಳ, ಕ್ರೂರ ಉದ್ದೇಶವನ್ನು ಮರೆಮಾಚಿ ನಾನು ಪಣ ತೊಡುವಂತೆ ಮಾಡಿದ್ದಾಳೆ."

ದಶರಥನ ಮನ ರಮಿಸಲೆಂದು ಶ್ರೀರಾಮನು ಹೀಗೆನ್ನುತ್ತಾನೆ —

> ನ ಹಿ ಮೇ ಕಾಂಕ್ಷಿತಂ ರಾಜ್ಯಂ ಸುಖಮಾತ್ಮನಿ ವಾ ಪ್ರಿಯಮ್ ।
> ಯಥಾನಿದೇಶಂ ಕರ್ತುಂ ವೈ ತವೈವ ರಘುನಂದನ ॥ ೪೫ ॥

"ನನಗೆ ಸುಖ ದೊರಕಲೆಂದಾಗಲಿ ಇಲ್ಲವೆ ನಮ್ಮವರ ಹಿತವನ್ನು ಕಾಪಾಡಿಕೊಳ್ಳಲೆಂದಾಗಲಿ ನಾನು ರಾಜ್ಯವನ್ನು ಬಯಸಿದವನಲ್ಲ. ನಾನು ರಾಜ್ಯವನ್ನು ಒಪ್ಪಿದ್ದುದೇ ಆದರೆ ಕೇವಲ ನಿಮ್ಮಿಚ್ಛೆಯನ್ನು ಮನ್ನಿಸಲೆಂದೇ.

> ನೈವಾಹಂ ರಾಜ್ಯಮಿಚ್ಛಾಮಿ ನ ಸುಖಂ ನ ಚ ಮೇದಿನೀಮ್ ।
> ನೈವ ಸರ್ವಾನಿಮಾನ್ ಕಾಮಾನ್ ನ ಸ್ವರ್ಗಂ ನ ಚ ಜೀವಿತುಮ್ ॥ ೪೮ ॥
> ತ್ವಾಮಹಂ ಸತ್ಯಮಿಚ್ಛಾಮಿ ನಾನೃತಂ ಪುರುಷರ್ಷಭ ।
> ಪ್ರತ್ಯಕ್ಷಂ ತವ ಸತ್ಯೇನ ಸುಕೃತೇನ ಚ ತೇ ಶಪೇ ॥ ೪೯ ॥

"ರಾಜ್ಯ, ಸುಖ, ಪೃಥ್ವಿ, ಉಪಭೋಗ, ಸ್ವರ್ಗ, ಬದುಕು ಮುಂತಾದುವೇನನ್ನೂ ನಾನು ಆಶಿಸಿದವನಲ್ಲ. ಅಯ್ಯಾ ಪುರುಷರ್ಷಭನೆ ! ನನ್ನ ಮನದಲ್ಲಿ ಆಸೆಯೆಂಬುದೇನಾದರೂ ಇದ್ದರೆ ನೀವು ಸತ್ಯವಾದಿಗಳಾಗ ಬೇಕೆಂಬುದು ಮಾತ್ರ. ನಿಮ್ಮ ಮಾತುಗಳು ಸುಳ್ಳಾಗಕೂಡದು. ನಾನೀ ಮಾತನ್ನು ಸತ್ಯ ಹಾಗೂ ಸುಕೃತಗಳ ಮೇಲೆ ಆಣೆಯಿಟ್ಟು ನಿಮ್ಮೆದುರು ಹೇಳುತ್ತಿದ್ದೇನೆ."

ಇನ್ನೊಂದು ರಾತ್ರಿಯಾದರೂ ಇದ್ದು ಹೋಗೆಂದು ದಶರಥನು ಶ್ರೀರಾಮನನ್ನು ಕೇಳಿಕೊಂಡನು. ಆದರೆ ಶ್ರೀರಾಮನು ತನ್ನ ನಿರ್ಧಾರವನ್ನು ಸಡಿಲಿಸದೆ ಕಾಡಿನ ದಾರಿಯನ್ನು ಹಿಡಿದನು.

## ೭. ಅಯೋಧ್ಯೆಯಲ್ಲಿ ವಾಸಿಸೆವೆಂದು ಮಹಿಳೆಯರ ಆಣೆ ಅಯೋಧ್ಯಾಕಾಂಡ / ೪೮

ಶ್ರೀರಾಮನನ್ನು ಕಾಡಿಗೆ ಅಟ್ಟಲೆಂದು ಕೈಕೇಯಿ ಕೇಳಿದ ವರದಿಂದಾಗಿ ಅಯೋಧ್ಯೆಯ ಮಹಿಳೆಯರು ತುಂಬ ಕೆರಳಿಬಿಟ್ಟರು. ರಾಜ್ಯದ ದುರಾಶೆಯಿಂದಾಗಿ ಕೈಕೇಯಿ ತನ್ನ ಗಂಡ ಹಾಗೂ ಮಗನನ್ನೇ ತ್ಯಜಿಸಿ ಬಿಟ್ಟಳು. ಅಂಥವಳು ತನ್ನ ಹಟಕ್ಕಾಗಿ ಏನನ್ನೂ ಮಾಡಬಲ್ಲಳು. ತಮ್ಮಂತಹ ಸಾಮಾನ್ಯರು ಬಾಳಿ ಬದುಕು

ವುದು ಕೂಡ ಅವಳಿಂದಾಗಿ ಅಸಾಧ್ಯವಾಗಿ ಅವರೆಲ್ಲರಿಗೆ ಕಂಡಿತು. ಅವರು ತಮ್ಮ ನಿರ್ಧಾರವನ್ನು ಹೀಗೆ ವ್ಯಕ್ತಪಡಿಸಿದರು —

ಕೈಕೇಯ್ಯಾ ನ ವಯಂ ರಾಜ್ಯೇ ಭೃತಕಾ ಹಿ ವಸೇಮಹಿ ।
ಜೀವಂತ್ಯಾ ಜಾತು ಜೀವಂತ್ಯಃ ಪುತ್ರೈರಪಿ ಶಪಾಮಹೇ ॥ ೨೬ ॥

"ಕೈಕೇಯಿ ಬದುಕಿರುವವರೆಗೂ ಅವಳ ರಾಜ್ಯದಲ್ಲಿ ನಾವು ವಾಸಿಸೆವೆಂದು ನಮ್ಮ ಗಂಡುಮಕ್ಕಳ ಮೇಲೆ ಆಣೆಯಿಟ್ಟು ಹೇಳುತ್ತೇವೆ. ನಮ್ಮ ಹೊಟ್ಟೆಯ ಪಾಡಿನ ಏರ್ಪಾಡುಗಳೆಲ್ಲ ಆಗುವಂತಿದ್ದರೂ ನಾವಿಲ್ಲಿ ಇರಲಾರೆವು."

## ೮. ಗವಿಯ ಆಣೆ

ಅಯೋಧ್ಯಾಕಾಂಡ / ೫೧

ಕಾಡಿಗೆ ಹೊರಟ ಶ್ರೀರಾಮ, ಲಕ್ಷ್ಮಣ, ಸೀತೆಯರು ಉಳಿದುಕೊಳ್ಳಲೆಂದು ಗವಿರಾಜನಲ್ಲಿಗೆ ಬಂದರು. ಲಕ್ಷ್ಮಣನು ಶ್ರೀರಾಮನ ರಕ್ಷಣೆಗೆಂದು ಇರುಳಿಡೀ ಎಚ್ಚರವಿರಲು ಬಯಸಿದನು. ಗವಿಗೆ ಈ ಯೋಚನೆ ಎಳ್ಳಷ್ಟೂ ಹಿಡಿಸಲಿಲ್ಲ. ಸಿಡಿದೆದ್ದ ಅವನು ಲಕ್ಷ್ಮಣನಿಗೆ, "ನಿನಗಾಗಿ ಹಾಸಿಗೆ ಸಿದ್ಧವಾಗಿದೆ. ಹಾಯಾಗಿ ನಿದ್ದೆ ಹೋಗು. ನೀವೆಲ್ಲ ಸುಖದಲ್ಲಿ ಬೆಳೆದವರು. ಬವಣೆಗಳೆಂದರೇನು ಎಂಬುದನ್ನು ಅರಿಯದವರು. ನಾವಾದರೋ ಬವಣೆಗಳಲ್ಲಿಯೇ ಬಾಳನ್ನು ಸವೆಸುವವರು. ಶ್ರೀರಾಮನನ್ನು ಕಾಪಾಡುವ ಹೊಣೆ ನಮ್ಮದು. ಚಿಂತಿಸಬೇಡ" ಎಂದೆನ್ನುತ್ತ ಹೀಗೆಂದು ಆಣೆ ಮಾಡಿದನು —

ನ ಹಿ ರಾಮಾತ್ ಪ್ರಿಯತಮೋ ಮಮಾಸ್ತೇ ಭುವಿ ಕಶ್ಚನ ।
ಬ್ರವೀಮ್ಯೇವ ಚ ತೇ ಸತ್ಯಂ ಸತ್ಯೇನೈವ ಚ ತೇ ಶಪೇ ॥ ೪ ॥

"ಈ ಭೂತಲದ ಮೇಲೆ ಶ್ರೀರಾಮನನ್ನುಳಿದು ನನಗೆ ಇನ್ನಾರೂ ಹೆಚ್ಚಿಗೆ ಪ್ರಿಯರಲ್ಲವೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

## ೯. ಭರತನ ಆಣೆಗಳಿಂದಾಗಿ ಕೌಸಲ್ಯೆಗಾದ ದುಃಖ

ಅಯೋಧ್ಯಾಕಾಂಡ / ೭೫

ತಾನು ದಶರಥನಿಂದ ಬಲು ಉಪಾಯವಾಗಿ ವರಗಳನ್ನು ಪಡೆದುಕೊಂಡುದು ಭರತನ ಹಿತವನ್ನು ಗಮನದಲ್ಲಿರಿಸಿಕೊಂಡೇ ಎಂದು ಕೈಕೇಯಿಯು ಕೊಚ್ಚಿಕೊಳ್ಳಲು ಭರತ ತೀರ ಕಳವಳಕ್ಕೀಡಾದನು. ಆ ದುರುಳವಾರ್ತೆ ಕಿವಿಗೆ ಬೀಳುತ್ತಲೇ ಅವನು ಎಚ್ಚರದಪ್ಪಿ ನೆಲಕ್ಕುರುಳಿದನು. ಎಚ್ಚರ ತಳೆದೆದ್ದ ಬಳಿಕ ಅವನು ಅವಳನ್ನು ಬಲು ಕಠೋರವಾದ ನುಡಿಗಳಲ್ಲಿ ಹೀಯಾಳಿಸಿದನು. ದಶರಥನ ಸಾವು ಹಾಗೂ ಕೌಸಲ್ಯೆಯ ಮಗನನ್ನಗಲಿದ ಬವಣೆಗಳಿಂದ್ದಾಗಿ ಅವನು ತುಂಬ ದುಃಖಿತನಾದನು. ತನ್ನ ಹೆತ್ತಮ್ಮನಿಂದಾಗಿಯೇ ತಮ್ಮ ಮನೆತನ ಹಾಳಾಗುವ ಅಪಾಯಕ್ಕೆ ಈಡಾದುದನ್ನು ಕಂಡು ಕೊರಗಹತ್ತಿದನು. ತಾನು ರಾಜ್ಯವನ್ನು ಸ್ವೀಕರಿಸದಿರುವ ನಿರ್ಧಾರವನ್ನಂತೂ ಕೈಕೊಂಡೇ ಇದ್ದನು. ಆದರೆ ಇಷ್ಟರಿಂದಲೇ ಅವನಿಗೆ ನೆಮ್ಮದಿಯಿರಲಿಲ್ಲ. ಕಾಡಿಗೆ ಹೋಗಿ ಶ್ರೀರಾಮನನ್ನು ಕಂಡು ಅವನನ್ನು ಅಯೋಧ್ಯೆಗೆ ಮರಳಿ ಕರೆತಂದು ಪಟ್ಟದ ಮೇಲೆ ಕುಳ್ಳಿರಿಸಬೇಕೆಂದು ಕಾತರಿಸಿದನು. ಭರತನೇ ಶ್ರೀರಾಮ ನಾರುಬಟ್ಟೆಯನ್ನುಟ್ಟು ಕಾಡಿಗೆ ತೆರಳುವಂತೆ ಮಾಡಲು ಹೊಣೆಗಾರನೆಂದು ಕೌಸಲ್ಯೆ ಅವನ ಮೇಲೆ ಕೂಗಾಡಿದ್ದಳು. ತಾನು ಅಯೋಧ್ಯೆಯಲ್ಲಿಲ್ಲದ ಕಾಲಕ್ಕೆ ಅಲ್ಲಿ ನಡೆದ ಘಟನೆಗಳು ತನಗೆ ಗೊತ್ತಿರಲಿಲ್ಲವೆಂದು ವಿನಯದಿಂದಲೇ ಅವಳಿಗೆ ಹೇಳಿದನು. ಅಲ್ಲದೆ, ಕೈಕೇಯಿ ತಾನು ನಡೆದುಕೊಂಡ ಬಗೆಯಿಂದಾಗಿ ಎವೆಷ್ಟು ಪಾಪಗಳಿಗೀಡಾಗಲಿರುವಳೆಂಬುದನ್ನು ಕೌಸಲ್ಯೆಗೆ ವಿವರಿಸಿದನು —

ತದಾ ತಂ ಶಪಥೈಃ ಕಷ್ಟೈಃ ಶಪಮಾನಮಚೇತನಮ್ ।
ಭರತಂ ಶೋಕಸಂತಪ್ತಂ ಕೌಸಲ್ಯಾ ವಾಕ್ಯಮಬ್ರವೀತ್ ॥ ೬೦ ॥
ಮಮ ದುಃಖಮಿದಂ ಪುತ್ರ ಭೂಯಃ ಸಮುಪಜಾಯತೇ ।
ಶಪಥೈಃ ಶಪಮಾನೋ ಹಿ ಪ್ರಾಣಾನುಪರುಣತ್ಸಿ ಮೇ ॥ ೬೧ ॥

ದಿಷ್ಟ್ಯಾ ನ ಚಲಿತೋ ಧರ್ಮಾದಾತ್ಮಾ ತೇ ಸಹಲಕ್ಷಣಃ ।
ವತ್ಸ ಸತ್ಯಪ್ರತಿಜ್ಞೋ ಹಿ ಸತಾಂ ಲೋಕಾನವಾಪ್ಸ್ಯಸಿ ॥ ೬೨ ॥

ತಾನು ನಿರಪರಾಧಿಯೆಂದು ಸಿದ್ಧಪಡಿಸಿ ತೋರಿಸಲೆಂದು ಭರತನು ಹಲವು ಆಣೆಗಳನ್ನು ಮಾಡಿ ಹೇಳಿದನು. ದುಃಖಾವೇಗದಿಂದ ಎಚ್ಚರದಪ್ಪಿ ನೆಲಕ್ಕುರುಳಿದನು. ಅವನ ಈ ಅವಸ್ಥೆಯನ್ನು ಕಂಡು ಕೌಸಲ್ಯೆ ಅವನಿಗೆ ಹೀಗೆಂದಳು - "ಮಗು, ನಿನ್ನಾಣೆಗಳಿಂದ ನನ್ನನ್ನು ಪೀಡಿಸುತ್ತಿರುವೆ. (ನನ್ನ ದುಗುಡ ಕಡಿಮೆಯಾಗುವ ಬದಲು) ಹೆಚ್ಚುತ್ತಲಿದೆ. ಲಕ್ಷಣಗಳಿಂದ ಸಂಪನ್ನನಾದ ನೀನು ಧರ್ಮಭ್ರಷ್ಟನಾಗಿಲ್ಲ ಎನ್ನುವ ಸಂಗತಿ ನಿಜಕ್ಕೂ ಸಂತೋಷವನ್ನುಂಟುಮಾಡುವಂಥದು. ನೀನು ಸತ್ಯಪ್ರತಿಜ್ಞನೆನ್ನಿಸು ಹಾಗೂ ನಿನಗೆ ಉತ್ತಮ ಲೋಕ ದೊರಕುವಂತಾಗಲಿ."

## ೧೦. ಶ್ರೀರಾಮನು ತನ್ನ ಬಿಲ್ಲಿನ ಮೇಲೆ ಆಣೆಯಿಟ್ಟುದು ಅಯೋಧ್ಯಾಕಾಂಡ / ೯೭

ಶ್ರೀರಾಮ, ಲಕ್ಷ್ಮಣ ಹಾಗೂ ಸೀತೆ ಚಿತ್ರಕೂಟ ಪರ್ವತದ ಮೇಲೆ ವಾಸವಾಗಿದ್ದ ಸಮಯ. ಬಲು ದೊಡ್ಡ ಸೇನೆಯೊಂದಿಗೆ ಭರತ ತಮ್ಮತ್ತ ಬರುತ್ತಿರುವುದು ಲಕ್ಷ್ಮಣನಿಗೆ ಕಂಡಿತು. ಭರತ ಇಷ್ಟೊಂದು ಸೇನೆಯೊಂದಿಗೆ ತಮ್ಮನ್ನು ಸದೆಬಡಿಯಲೆಂದೇ ಬರುತ್ತಿರುವನೆಂದು ಲಕ್ಷ್ಮಣನು ಭಾವಿಸಿದನು. ಅವನು ತಮ್ಮ ಹಗೆ, ಅವನನ್ನು ಕೊಂದುಬಿಡಬೇಕೆಂದೂ ಶ್ರೀರಾಮನಿಗೆ ಹೇಳಿದನು. ಆದರೆ ಭರತನನ್ನು ತಪ್ಪು ತಿಳಿಯಬಾರದೆಂದೂ ಅವನು ಬರುತ್ತಿರುವ ಉದ್ದೇಶವನ್ನು ಸಂದೇಹಿಸಬಾರದೆಂದೂ ಶ್ರೀರಾಮನು ಹೇಳಿ ಲಕ್ಷ್ಮಣನು ಸಿಟ್ಟಿಗೇಳಕೂಡದೆಂದನು. "ಭರತನನ್ನು ಕೊಂದು ರಾಜ್ಯವನ್ನು ಪಡೆಯುವುದು ನನಗೆ ಬೇಕಿಲ್ಲ. ಅದರಿಂದಾಗಿ ಹೆತ್ತ ತಂದೆಯ ಅಪ್ಪಣೆಯನ್ನು ಮೀರಿದಂತಾಗುವುದು. ಅಲ್ಲದೆ ಜನನಿಂದೆಗೂ ಗುರಿಯಾಗುವೆನು. ಬಂಧು-ಬಳಗದವರನ್ನು ಕೊನೆಗೊಳಿಸಿ ದೊರಕಬಹುದಾದ ರಾಜ್ಯ ಎಂದರೆ ವಿಷದಿಂದ ಕೂಡಿದ ಊಟವೇ ಸರಿ. ಅದೆಂದಿಗೂ ನನಗೆ ಬೇಡ" ಎಂದನು. ರಾಜ್ಯವನ್ನು ಸ್ವೀಕರಿಸುವ ಸಂದರ್ಭದಲ್ಲಿ ಹೀಗೆಂದನು —

ಧರ್ಮಮರ್ಥಂ ಚ ಕಾಮಂ ಚ ಪೃಥಿವೀಂ ಚಾಪಿ ಲಕ್ಷ್ಮಣ ।
ಇಚ್ಛಾಮಿ ಭವತಾಮರ್ಥೇ ಏತತ್ ಪ್ರತಿಶೃಣೋಮಿ ತೇ ॥ ೫ ॥
ಭ್ರಾತೄಣಾಂ ಸಂಗ್ರಹಾರ್ಥಂ ಚ ಸುಖಾರ್ಥಂ ಚಾಪಿ ಲಕ್ಷ್ಮಣ ।
ರಾಜ್ಯಮಪ್ಯಹಮಿಚ್ಛಾಮಿ ಸತ್ಯೇನಾಯುಧಮಾಲಭೇ ॥ ೬ ॥
ಯದ್ ವಿನಾ ಭರತಂ ತ್ವಾಂ ಚ ಶತ್ರುಘ್ನಂ ವಾಪಿ ಮಾನದ ।
ಭವೇನ್ಮಮ ಸುಖಂ ಕಿಂಚಿದ್ ಭಸ್ಮ ತತ್ ಕುರುತಾಂ ಶಿಖೀ ॥ ೮ ॥

"ಎಲೈ ಲಕ್ಷ್ಮಣ ! ನಾನು ಧರ್ಮ, ಅರ್ಥ, ಕಾಮ ಹಾಗೂ ರಾಜ್ಯಗಳನ್ನು ಬಯಸುವುದು ನಿಮಗಾಗಿಯೇ ಎಂದು ಪಣ ಮಾಡಿ ಹೇಳಬಯಸುತ್ತೇನೆ. ನಾನು ರಾಜ್ಯಕ್ಕಾಗಿ ಇಚ್ಛೆಪಡುವುದು ನನ್ನ ಬಂಧು-ಬಳಗದವರೆಲ್ಲರ ಒಕ್ಕಟ್ಟು ಹಾಗೂ ನೆಮ್ಮದಿಗಳಿಗಾಗಿಯೆಂದೇ. ನನ್ನ ಬಿಲ್ಲನ್ನು ಸ್ಪರ್ಶಿಸಿಯೇ ನಾನು ಈ ಆಣೆಯ ಮಾತನ್ನು ಆಡುತ್ತಿರುವೆ. ಎಲೈ ಮಾನಿಯೇ ! ಭರತ, ನೀನು ಹಾಗೂ ಶತ್ರುಘ್ನನನ್ನುಳಿದು ನನಗೆ ಎಳ್ಳಷ್ಟು ಸುಖ ಸಿಗುವಂತಿದ್ದರೂ ಅಗ್ನಿದೇವನು ಅದನ್ನು ಸುಟ್ಟು ಬೂದಿಯನ್ನಾಗಿ ಮಾಡಲಿ !"

ಇಲ್ಲಿ ಶ್ರೀರಾಮನು ಆಣೆಯೊಂದಿಗೆ ಪಣವನ್ನೂ ತೊಟ್ಟಿದ್ದಾನೆ.

## ೧೧. ಶ್ರೀರಾಮನು ಭರತನಿಗೆ ತನ್ನನ್ನು ಹಾಗೂ ಸೀತೆಯನ್ನು ಕುರಿತು ಹಾಕಿದ ಆಣೆ

ಅಯೋಧ್ಯಾಕಾಂಡ / ೧೧೨

ಶ್ರೀರಾಮನು ಮರಳಿ ಅಯೋಧ್ಯೆಗೆ ಬಂದು ರಾಜ್ಯವನ್ನು ಸ್ವೀಕರಿಸಬೇಕೆಂದು ಭರತನು ಅವನಿಗೆ ಪರಿಪರಿಯಾಗಿ ಹೇಳಿದನು. ಆದರೆ ಶ್ರೀರಾಮನು ತನ್ನ ನಿರ್ಧಾರದಿಂದ ಕಿಂಚಿತ್ತೂ ವಿಚಲಿತನಾಗಲಿಲ್ಲ. ಬದಲು ತಾನೀಗ ರಾಜ್ಯವನ್ನು ಸ್ವೀಕರಿಸುವುದೆಂದರೆ ತಂದೆಯ ಆಣೆಯನ್ನು ಮೀರಿದಂತಾಗುವುದೆಂದು ಭರತ

ನನ್ನು ಮನಗಾಣಿಸಿದನು. ಕೊನೆಗೆ ನಿರುಪಾಯನಾಗಿ ಭರತನು ಶ್ರೀರಾಮನ ಪಾದುಕೆಗಳನ್ನು ಕೇಳಿ ಪಡೆದು ಅವನಿಲ್ಲದ ಸಮಯದಲ್ಲಿ ತಾನು ಜಟಾಧಾರಿಯಾಗಿ ನಾರುಬಟ್ಟೆಗಳನ್ನು ತೊಟ್ಟು ರಾಜ್ಯಾಡಳಿತವನ್ನು ಸಾಗಿಸುವುದಾಗಿ ಒಪ್ಪಿಕೊಂಡನು. ಹದಿನಾಲ್ಕು ವರ್ಷಗಳ ತರುವಾಯ ಶ್ರೀರಾಮನು ಅಯೋಧ್ಯೆಗೆ ಹಿಂತಿರುಗದಿದ್ದರೆ ಮಾತ್ರ ತಾನು ಬೆಂಕಿಗೆ ಹಾರಿಕೊಳ್ಳುವುದಾಗಿ ಹೇಳಿದನು. ಭರತ ಹಾಗೂ ಶತ್ರುಘ್ನರನ್ನು ಬೀಳ್ಕೊಡುವಾಗ ಶ್ರೀರಾಮನು ಮಮತೆಯಿಂದ ಅವನನ್ನು ಬಿಗಿದಪ್ಪಿ ಹೀಗೆಂದನು—

ಮಾತರಂ ರಕ್ಷ ಕೈಕೇಯೀಂ ಮಾ ರೋಷಂ ಕುರು ತಾಂ ಪ್ರತಿ ॥ ೨೭ ॥
ಮಯಾ ಚ ಸೀತಯಾ ಚೈವ ಶಪ್ತೋಽಸಿ ರಘುನಂದನ । ೨೮

"ನಿನಗೆ ನನ್ನ ಹಾಗೂ ಸೀತೆಯ ಆಣೆಯಿದೆ. ಕೈಕೇಯಿಯ ಮೇಲೆ ಕೋಪಿಸಿಕೊಳ್ಳಬೇಡ. ಅವಳನ್ನು ಕಾಪಾಡು."

## ೧೨. ಶ್ರೀರಾಮನು ಲಕ್ಷ್ಮಣನಿಗೆ ತನ್ನ ಪಾದಗಳ ಆಣೆ ಹಾಕಿದುದು ಅರಣ್ಯಕಾಂಡ / ೨೪

ಖರ ರಾಕ್ಷಸನ ಸೇನೆಯೊಂದಿಗೆ ಘನಘೋರವಾದ ಕಾಳಗ ಸಾಗಿತ್ತು. ಖರನು ಶ್ರೀರಾಮನ ಆಶ್ರಮದತ್ತ ಬರತೊಡಗಿದನು. ಶ್ರೀರಾಮನಿಗೆ ಹಲವು ಬಗೆಯ ಉತ್ಪಾತಗಳು ಕಂಡುಬರಹತ್ತಿದವು. ಅವುಗಳಿಂದ ಪ್ರಜೆಗಳಿಗೆ ಉಂಟಾಗಬಹುದಾದ ಕೇಡನ್ನು ನೆನೆದು ಶ್ರೀರಾಮನು ಕಳವಳಕ್ಕೀಡಾದನು. ನೆತ್ತರವನ್ನು ಮಳೆಗರೆಯುವಂತಹ ಮೋಡಗಳು ಮುಗಿಲಲ್ಲಿ ಕಲೆತಿದ್ದವು. ಜಯವನ್ನು ಸೂಚಿಸುವ ಕೆಲವು ಶುಭಶಕುನಗಳೂ ಆದುವು. ಏನೇ ಆದರೂ ಸೀತೆಯನ್ನು ಕಾಪಾಡಲೆಂದು ಶ್ರೀರಾಮನು ಅವಳನ್ನು ದಟ್ಟವಾದ ಕಾಡಿನ ಒಂದು ಗುಹೆಗೆ ಕರೆದೊಯ್ಯುವಂತೆ ಲಕ್ಷ್ಮಣನಿಗೆ ಹೇಳಿದನು. ಅವನು ತನ್ನ ಅಪ್ಪಣೆಯನ್ನು ಶೀಘ್ರವಾಗಿ ಪಾಲಿಸಲೆಂದು ಶ್ರೀರಾಮನು ಹೀಗೆನ್ನುತ್ತಾನೆ —

ಪ್ರತಿಕೂಲಿತುಮಿಚ್ಛಾಮಿ ನ ಹಿ ವಾಕ್ಯಮಿದಂ ತ್ವಯಾ ।
ಶಾಪಿತೋ ಮಮ ಪಾದಾಭ್ಯಾಂ ಗಮ್ಯತಾಂ ವತ್ಸ ಮಾ ಚಿರಮ್ ॥ ೧೩ ॥

"ನೀನು ನನ್ನ ಮಾತಿಗೆ ಎದುರಾಗಿ ನಡೆದುಕೊಳ್ಳಕೂಡದೆಂದು ಆಶಿಸುತ್ತೇನೆ. ನಿನಗೆ ನನ್ನ ಪಾದಗಳ ಆಣೆ. ಹೋಗು, ಸೀತೆಯನ್ನು ಕರೆದೊಯ್ಯು. ತಡ ಮಾಡಬೇಡ."

ಲಕ್ಷ್ಮಣನು ಆ ರಾಕ್ಷಸರನ್ನೆಲ್ಲ ಸದೆಬಡಿಯಲು ಸಮರ್ಥನಾಗಿದ್ದನೆಂಬ ಬಗೆಗೆ ಶ್ರೀರಾಮನಿಗೆ ಸಂದೇಹವಿರಲಿಲ್ಲ. ಆದರೂ ಅವರನ್ನೆಲ್ಲ ಕೊಲ್ಲುವ ಹೊಣೆಯನ್ನು ತಾನು ಹೊತ್ತನು. ಲಕ್ಷ್ಮಣನಿಗೆ ಮರು ಮಾತನಾಡಲು ಅವಕಾಶವನ್ನೇ ನೀಡಲಿಲ್ಲ.

## ೧೩. ಸುಗ್ರೀವನೊಂದಿಗೆ ಗೆಳೆತನ ಬೆಳೆಸಲು ಕೋರಿಕೆ ಅರಣ್ಯಕಾಂಡ / ೭೨

ಕಬಂಧನು ಶ್ರೀರಾಮ-ಲಕ್ಷ್ಮಣರಿಗೆ ತನ್ನ ಬಾಳ ಕಥೆಯನ್ನು ಅರುಹಿ ತಾನು ಹೊಂದಿದ ಶಾಪ ಹಾಗೂ ಅದರಿಂದ ಬಿಡುಗಡೆಹೊಂದುವ ಹಂಚಿಕೆಯ ಬಗೆಗೂ ಹೇಳಿದನು. ಆಮೇಲೆ ತನ್ನನ್ನು ಆ ಶಾಪದಿಂದ ಬಿಡುಗಡೆ ಮಾಡಿಸಬೇಕೆಂದು ಕೇಳಿಕೊಂಡನು. ಅವರಿಂದ ಶ್ರೀರಾಮನ ದುಗುಡ, ಸೀತೆಯ ಅಪಹರಣಗಳನ್ನು ಕುರಿತು ಅರಿತುಕೊಂಡನು. ತನಗೆ ಸೀತೆ ಎಲ್ಲಿರುವಳೆಂಬ ಬಗೆಗೆ ಗೊತ್ತಿಲ್ಲವೆಂದೂ ತನ್ನನ್ನು ಸುಡುವಾಗ ತಾನೊಬ್ಬನ ಹೆಸರನ್ನು ಹೇಳುವೆನೆಂದೂ ಅವನಿಂದಾಗಿ ಸೀತೆಯನ್ನು ಕಂಡುಹಿಡಿವಲ್ಲಿ ನೆರವಾದೀತೆಂದೂ ಅವರಿಗೆ ಅಂದನು. ಕಬಂಧನಾಗಿರುವವರೆಗೂ ಆ ವ್ಯಕ್ತಿಯ ಹೆಸರನ್ನು ಹೇಳುವ ಸಾಮರ್ಥ್ಯ ಅವನಲ್ಲಿರಲಿಲ್ಲವಂತೆ. ಅವನಿಚ್ಛೆಯ ಮೇರೆಗೆ ಶ್ರೀರಾಮನು ಅವನಿಗೆ ಬೆಂಕಿಯಿಕ್ಕಿದನು. ಆಗ ಹೊಗೆಯಿಂದ ಒಬ್ಬ ದಿವ್ಯ ಪುರುಷ ಮೇಲೆದ್ದು ಬಂದನು. ಬಂದವನು ಸೀತೆಯನ್ನು ಹುಡುಕುವಲ್ಲಿ ಸುಗ್ರೀವ ನೆರವಾಗುವನೆಂದನು. ಅವನೊಂದಿಗೆ ಸ್ನೇಹವನ್ನು ಬೆಳೆಸುವಂತೆ ಸಲಹೆಯನ್ನಿತ್ತನು. ಅಲ್ಲದೆ, ಸುಗ್ರೀವನ ಒಳ್ಳೆಯತನ, ಒಳ್ಳೆಯ ನಡತೆ ಹಾಗೂ ಅವನು ಸಿಕ್ಕಿಹಾಕಿಕೊಂಡಿರುವ ಪರಿಸ್ಥಿತಿಯ ಗಾಂಭೀರ್ಯದ ಬಗೆಗೂ ವಿವರಗಳನ್ನು ನೀಡಿದನು.

ಕೃತಾರ್ಥೋ ವಾಽಕೃತಾರ್ಥೋ ವಾ ತವ ಕೃತ್ಯಂ ಕರಿಷ್ಯತಿ ।
ಸ ಋಕ್ಷರಜಸಃ ಪುತ್ರಃ ಪಂಪಾಮಟತಿ ಶಂಕಿತಃ ॥ ೨೦ ॥
ಭಾಸ್ಕರಸ್ಯೌರಸಃ ಪುತ್ರೋ ವಾಲಿನಾ ಕೃತಕಿಲ್ಬಿಷಃ ।
ಸಂನಿಧಾಯಾಯುಧಂ ಕ್ಷಿಪ್ರಮೃಷ್ಯಮೂಕಾಲಯಂ ಕಪಿಮ್ ॥ ೨೧ ॥
ಕುರು ಸಂಘವ ಸತ್ಯೇನ ವಯಸ್ಯಂ ವನಚಾರಿಣಮ್ । ೨೨

"ಸುಗ್ರೀವನ ಬಯಕೆ ಈಡೇರಲಿ ಇಲ್ಲವೆ ಈಡೇರದಿರಲಿ, ಆತ ನಿನ್ನ ಕೆಲಸವನ್ನು ಖಂಡಿತ ಮಾಡು ವನು. ಅವನು (ಋಕ್ಷರಜನ ಕ್ಷೇತ್ರಜನು ಹಾಗೂ) ಸೂರ್ಯನ ಔರಸ ಮಗನು. ವಾಲಿಗೆ ಹೆದರಿ ಪಂಪಾ ಸರೋವರದ ಬಳಿ ಸುತ್ತುತ್ತಿರುತ್ತಾನೆ. ಅವನು ವಾಲಿಯ ತಪ್ಪುಗಾರನಾದ್ದರಿಂದ ಅವನಿಗೆ ಹೆದರಿ ಕೊಂಡಿದ್ದಾನೆ. ಎಲೈ ರಘುನಂದನನೇ ! ಬೆಂಕಿಯ ಪಕ್ಕದಲ್ಲಿ ನಿನ್ನ ಶಸ್ತ್ರಗಳನ್ನಿರಿಸಿ ಸತ್ಯದ ಮೇಲೆ ಆಣೆಯಿಟ್ಟು ಋಷ್ಯಮೂಕದ ನಿವಾಸಿಯಾದ, ವನಚರನಾದ, ಶಾಖಾಮೃಗನಾದ ಸುಗ್ರೀವನೊಂದಿಗೆ ಗೆಳೆತನವನ್ನು ಬೆಳೆಸು."

ಸುಗ್ರೀವನಿಗೆ ರಾಕ್ಷಸರು, ಅವರ ವಾಸಸ್ಥಳಗಳೆಲ್ಲ ತಿಳಿದಿದ್ದರಿಂದ ಅವನೊಂದಿಗಿನ ಗೆಳೆತನ ಬಲು ಉಪಯುಕ್ತವೆನ್ನಿಸೀತು ಎಂದೂ ಹೇಳಿದನು.

## ೧೪. ಶ್ರೀರಾಮನು ಗೆಳೆತನಕ್ಕಾಗಿ ಸತ್ಯದ ಮೇಲೆ ಆಣೆಯಿಟ್ಟುದು ಕಿಷ್ಕಿಂಧಾಕಾಂಡ / ೭

ಶ್ರೀರಾಮನು ಅಗ್ನಿಸಾಕ್ಷಿಯಾಗಿ ಸುಗ್ರೀವನೊಂದಿಗೆ ಗೆಳೆತನವನ್ನು ಮಾಡಿಕೊಂಡನು. ವಾಲಿಯನ್ನು ಕೊಂದು ಸುಗ್ರೀವನಿಗೆ ರಾಜ್ಯ ಹಾಗೂ ಮಡದಿಯನ್ನು ಮರಳಿ ದೊರಕಿಸಿಕೊಡುವುದಾಗಿ ಭರವಸೆಯನ್ನಿತ್ತನು. ಸುಗ್ರೀವನು ತನ್ನನ್ನು ನಂಬುವಂತಾಗಲೆಂದು ಶ್ರೀರಾಮನು ಹೀಗೆಂದನು —

ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ।
ಏತತ್ತೇ ಪ್ರತಿಜಾನಾಮಿ ಸತ್ಯೇನೈವ ಶಪಾಮ್ಯಹಮ್ ॥ ೨೨ ॥

"ಹಿಂದೆಂದಿಗೂ ನಾನು ಸುಳ್ಳು ಹೇಳಲಿಲ್ಲ, ಮುಂದೆಂದಿಗೂ ಹಾಗೆ ಮಾಡೆನು. ನಾನಾಡಿದುದನ್ನು ಮಾಡಿ ಪೂರ್ತಿಗೊಳಿಸುವೆನೆಂದು ಸತ್ಯದ ಮೇಲೆ ಆಣೆಯಿಟ್ಟು ಪಣ ತೊಡುವೆನು." ಶ್ರೀರಾಮನ ಈ ಮಾತುಗಳನ್ನು ಕೇಳಿ ಸುಗ್ರೀವ ಹಾಗೂ ಅವನ ವಾನರರು, ಮಂತ್ರಿಗಳಿಗೆಲ್ಲ ತುಂಬ ಸಂತೋಷವಾಯಿತು.

ಇಲ್ಲಿ ಪಣಕ್ಕೆ ಆಣೆಯ ಬೆಂಬಲ ದೊರೆತಿದೆ.

## ೧೫. ಗೆಳೆತನದ ಬಗೆಗೆ ಸುಗ್ರೀವನು ಸತ್ಯದ ಮೇಲೆ ಆಣೆಯಿಟ್ಟುದು ಕಿಷ್ಕಿಂಧಾಕಾಂಡ / ೮

ಹನುಮಂತನು ಮಧ್ಯಸ್ಥನಾಗಿ ನಿಂತು ಶ್ರೀರಾಮ ಹಾಗೂ ಸುಗ್ರೀವರಲ್ಲಿ ಅಗ್ನಿಸಾಕ್ಷಿಯಾಗಿ ಗೆಳೆತನ ಉಂಟಾಗುವಂತೆ ಮಾಡಿದನು. ಸುಗ್ರೀವ ರಾಜ್ಯ ಹಾಗೂ ಮಡದಿಯನ್ನು ಕಳೆದುಕೊಂಡಿದ್ದನು. ಶ್ರೀರಾಮ ನಾದರೋ ತನ್ನ ಹೆತ್ತವನ ಅಪ್ಪಣೆಯ ಮೇರೆಗೆ ರಾಜ್ಯವನ್ನು ತೊರೆದು ಕಾಡಿನಲ್ಲಿರಲು ಬಂದವನು. ಅವನ ಹೆಂಡತಿಯನ್ನು ಯಾರೋ ಎತ್ತಿಕೊಂಡುಹೋಗಿದ್ದರು. ಹೀಗಾಗಿ ಇವರೀರ್ವರೂ ಸಮದುಃಖಿ ಗಳಾಗಿದ್ದರು. ವಾಲಿಯನ್ನು ಕೊಂದು ಸುಗ್ರೀವನಿಗೆ ರಾಜ್ಯ ಹಾಗೂ ಮಡದಿಯನ್ನು ಮರಳಿ ದೊರಕಿಸಿ ಕೊಡುವೆನೆಂದು ಶ್ರೀರಾಮನು ಭರವಸೆಯಿತ್ತನು. ಶ್ರೀರಾಮನಿಂದ ಪ್ರಭಾವಿತನಾದ ಸುಗ್ರೀವ ಅವನಿಗೆ ಹೀಗೆಂದನು —

ರಾಮ ಶೋಕಾಭಿಭೂತೋಽಹಂ ಶೋಕಾರ್ತಾನಾಂ ಭವಾನ್ ಗತಿಃ ।
ವಯಸ್ಯ ಇತಿ ಕೃತ್ವಾ ಹಿ ತ್ವಯ್ಯಹಂ ಪರಿದೇವಯೇ ॥ ೨೬ ॥
ತ್ವಂ ಹಿ ಪಾಣಿಪ್ರದಾನೇನ ವಯಸ್ಯೋ ಮೇಽಗ್ನಿಸಾಕ್ಷಿಕಮ್ ।
ಕೃತಃ ಪ್ರಾಣೈರ್ಬಹುಮತಃ ಸತ್ಯೇನ ಚ ಶಪಾಮ್ಯಹಮ್ ॥ ೨೭ ॥

"ನಾನು ಶೋಕತಪ್ತನು. ನೀವಲ್ಲದೆ ನನಗೆ ಬೇರಾವ ಗತಿಯಿಲ್ಲ. ಅಗ್ನಿಸಾಕ್ಷಿಯಾಗಿ ನಿಮ್ಮ ಕೈಮೇಲೆ

ಕೈಯಿರಿಸಿ ಗೆಳೆತನಕ್ಕೆ ಒಪ್ಪಿದ್ದೇನೆ. ಹೀಗಾಗಿ ನೀವು ನನಗೆ ನನ್ನ ಜೀವಕ್ಕಿಂತಲೂ ಹೆಚ್ಚು ಪ್ರಿಯರೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

## ೧೬. ವಾಲಿಯು ಸುಗ್ರೀವನಿಗೆ ತನ್ನ ಪಾದಗಳ ಆಣೆ ಹಾಕುವುದು ಕಿಷ್ಕಿಂಧಾಕಾಂಡ / ೯

ಸುಗ್ರೀವನು ಶ್ರೀರಾಮನೆದುರು ತನ್ನ ಅಣ್ಣನ ಶೌರ್ಯವನ್ನು ಕುರಿತು ಮನಸಾರೆ ಬಣ್ಣಿಸಿದನು. ತಮ್ಮಿರ್ವರಲ್ಲಿ ಹಗೆತನ ಹುಟ್ಟಿಕೊಂಡುದು ಹೇಗೆಂಬುದನ್ನು ಹೇಳಿದನು —

"ಒಂದು ಸಲ ಮಾಯಾವಿ ಎಂಬ ಒಬ್ಬ ರಾಕ್ಷಸ ಗರ್ಜಿಸುತ್ತ ಕಿಷ್ಕಿಂಧೆಯತ್ತ ನುಗ್ಗಿಬರತೊಡಗಿದನು. ಒಂದು ಹೆಣ್ಣಿಗಾಗಿ ಅವನಲ್ಲೂ, ವಾಲಿಯಲ್ಲೂ ಹಗೆತನ ಉಂಟಾಗಿತ್ತು. ಅವನ ಗರ್ಜನೆಯನ್ನು ಕೇಳಿ ವಾಲಿ ತನ್ನ ಅರಮನೆಯಿಂದ ಹೊರಬಂದನು. ಬಂದವನೇ ರಾಕ್ಷಸನನ್ನು ಬೆನ್ನಟ್ಟಿಕೊಂಡು ಹೋದನು. ಅಂದು ನಾನೂ ಅಣ್ಣನಿಗೆ ಬೆಂಗಾವಲಾಗಿ ಹೋಗಿದ್ದೆ. ನಮ್ಮಿಬ್ಬರನ್ನು ಕಂಡು ಆ ರಾಕ್ಷಸ ಒಂದು ಬಿಲವನ್ನು ಹೊಕ್ಕನು. ಇದನ್ನು ಕಂಡು ವಾಲಿ ತುಂಬ ಕೆರಳಿಬಿಟ್ಟನು. ತಾನೂ ಆ ಬಿಲವನ್ನು ಹೊಕ್ಕು ಅವನನ್ನು ಕೊಲ್ಲುವೆನೆಂದನು. ನಾನೂ ತನ್ನನ್ನು ಹಿಂಬಾಲಿಸಬೇಕೆಂದನು —

ಇಹ ತಿಷ್ಠಾದ್ಯ ಸುಗ್ರೀವ ಬಿಲದ್ವಾರಿ ಸಮಾಹಿತಃ ।
ಯಾವದತ್ರ ಪ್ರವಿಶ್ಯಾಹಂ ನಿಹನ್ಮಿ ಸಮರೇ ರಿಪುಮ್ ॥ ೧೩ ॥
ಶಾಪಯಿತ್ವಾ ಚ ಮಾಂ ಪದ್ಭ್ಯಾಂ ಪ್ರವಿವೇಶ ಬಿಲಂ ತತಃ ॥ ೧೪ ॥

"ಎಲವೋ ಸುಗ್ರೀವನೇ ! ನಿನಗೆ ನನ್ನ ಪಾದಗಳಾಣೆ. ನಾನು ಆ ರಾಕ್ಷಸನನ್ನು ಕೊಂದು ಹಿಂತಿರುಗಿ ಬರುವವರೆಗೂ ನೀನು ಈ ಬಿಲದ ಬಾಯಿಯ ಬಳಿಯೇ ಕಾವಲು ಕಾಯುತ್ತಿರು" ಎಂದು ನುಡಿದವನೇ ಅವನೊಬ್ಬನೇ ಆ ಬಿಲವನ್ನು ಹೊಕ್ಕನು.

## ೧೭. ತಾರೆಗೆ ವಾಲಿಯ ಜೀವದಾಣೆ ಕಿಷ್ಕಿಂಧಾಕಾಂಡ / ೧೬

ಶ್ರೀರಾಮನ ಬೆಂಬಲವನ್ನು ಪಡೆದು ಸುಗ್ರೀವನು ತನ್ನ ಮೇಲೇರಿಬರುತ್ತಿರುವುದನ್ನು ಕಂಡು ವಾಲಿ ಕಾಳಗಕ್ಕೆ ಸನ್ನದ್ಧನಾದನು. ಅವನ ಹೆಂಡತಿ ತಾರೆಯು ಸುಗ್ರೀವನ ಮೇಲೆ ಕೈಯೆತ್ತದಿರಲು ಅವನಿಗೆ ಹೇಳಿದಳು. ಶ್ರೀರಾಮನ ಎದುರು ಕಾಳಗಕ್ಕೆ ನಿಲ್ಲುವುದೆಂದರೆ ಸಾವು ಖಂಡಿತ ಎಂದು ಅವಳು ಅರಿತಿದ್ದಳು. ಹೀಗಾಗಿ ಅವನು ಶ್ರೀರಾಮ-ಸುಗ್ರೀವರೊಡನೆ ಒಪ್ಪಂದವನ್ನು ಮಾಡಿಕೊಳ್ಳುವುದು ಒಳ್ಳೆಯದೆಂದು ಸಲಹೆಯನ್ನಿತ್ತಳು. ಆದರೆ ವಾಲಿ ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಕೊನೆಗೆ ಅವಳು ಹಾಗೂ ಬೇರೆ ಹೆಂಗಳೆಯರು ಅವನನ್ನು ಹಿಂಬಾಲಿಸಿದರು. ವಾಲಿಗೆ ತನ್ನ ಕಲಿತನದ ಹೆಮ್ಮೆ. ಸುಗ್ರೀವನನ್ನು ಓಡಿಸಿಬಿಡುವ ಕೆಚ್ಚಿತ್ತು. ಹೀಗಾಗಿ ಅವನು ತಾರೆಗೆ, "ನೀನು ಉಳಿದೆಲ್ಲ ಹೆಂಗಳೆಯರೊಂದಿಗೆ ಹಿಂತಿರುಗಿ ಹೋಗು. ಹೆದರಬೇಡ" ಎಂದನು.

ಪ್ರತಿಯೋತ್ಸ್ಯಾಮ್ಯಹಂ ಗತ್ವಾ ಸುಗ್ರೀವಂ ಜಹಿ ಸಂಭ್ರಮಮ್ ।
ದರ್ಪಂ ಚಾಸ್ಯ ವಿನೇಷ್ಯಾಮಿ ನ ಚ ಪ್ರಾಣೈರ್ವಿಯೋಕ್ಷ್ಯತೇ ॥ ೭ ॥
ನ ಮೇ ಗರ್ವಿತಮಾಯಸ್ತಂ ಸಹಿಷ್ಯತಿ ದುರಾತ್ಮವಾನ್ ।
ಕೃತಂ ತಾರೇ ಸಹಾಯತ್ವಂ ದರ್ಶಿತಂ ಸೌಹೃದಂ ಮಯಿ ॥ ೯ ॥
ಶಾಪಿತಾಸಿ ಮಮ ಪ್ರಾಣೈರ್ನಿವರ್ತಸ್ವ ಜನೇನ ಚ । ೧೦

"ನಾನು ಸುಗ್ರೀವನೊಂದಿಗೆ ಕಾದು ಅವನ ಸೊಕ್ಕನ್ನು ಮುರಿಯುವೆನು. ಅವನನ್ನು ಕೊಲ್ಲುವುದಿಲ್ಲ. ಸುಗ್ರೀವ ನನ್ನ ಕಾಳಗದ ಬಯಕೆ, ಹೆಮ್ಮೆ ಹಾಗೂ ಕಲಿತನಗಳನ್ನು ತಾಳಲಾರ. ನಿನ್ನ ಬುದ್ಧಿವಂತಿಕೆ, ಸಹಕಾರ್ಯಗಳಲ್ಲದೆ ಬಲವನ್ನೂ ಬಲ್ಲೆ. ನೀನು ಹಿಂತಿರುಗಿ ಹೋಗಬೇಕೆಂದು ನನ್ನ ಜೀವದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

## ೧೪. ಹನುಮಂತ ಸೀತೆಯೆದುರು ಆಹಾರದ ಮೇಲಿಟ್ಟ ಆಣೆ ಸುಂದರಕಾಂಡ / ೩೭

ಹನುಮಂತನು ಅಶೋಕ ವನದಲ್ಲಿ ಸೀತೆಯನ್ನು ಕಂಡನು. ತಾನು ಶ್ರೀರಾಮನ ದೂತನೆಂದು ಅವಳಿಗೆ ಹೇಳಿದನು. ಅವಳಿಗೆ ತನ್ನ ಪರಿಚಯವನ್ನು ಮನಗಾಣಿಸಲೆಂದು ಶ್ರೀರಾಮನಿಂದ ತಂದ ಮುದ್ರೆಯನ್ನು ಅವಳಿಗಿತ್ತನು. ಮುದ್ರಿಕೆಯನ್ನು ಕಂಡು ಅವಳು ಸಂತಸಪಟ್ಟಳು. ಹನುಮಂತನನ್ನು ನಂಬಿದಳು. ಅವಳು ಅವನನ್ನು ಶ್ರೀರಾಮ-ಲಕ್ಷ್ಮಣರ ಬಗೆಗೆ ಹಲವಾರು ಪ್ರಶ್ನೆ ಕೇಳಿ ಅವರ ಕುಶಲವಾರ್ತೆಗಳನ್ನು ಅರಿತಳು. ತನ್ನ ಬವಣೆಯನ್ನು ಅವನೆದುರು ತೋಡಿಕೊಂಡಳು. ಅವನು ಅವಳ ಮನರಮಿಸಲು ಯತ್ನಿಸಿದನು. ಅವಳನ್ನಗಲಿ ಶ್ರೀರಾಮ ತುಂಬ ದುಃಖಿತನಾಗಿರುವನೆಂದನು. ಆದಷ್ಟು ಶೀಘ್ರ ಅವಳ ಬಿಡುಗಡೆಯಾಗಲಿದೆ ಎಂದು ಭರವಸೆಯನ್ನಿತ್ತನು. ಅಲ್ಲಿಯ ತನಕ ಅವಳು ತಾಳಿಕೊಳ್ಳಬೇಕು ಎಂದನು.

ಮಂದರೇಣ ಚ ತೇ ದೇವಿ ಶಪೇ ಮೂಲಫಲೇನ ಚ ।
ಮಲಯೇನ ಚ ವಿಂಧ್ಯೇನ ಮೇರುಣಾ ದರ್ದುರೇಣ ಚ ॥ ೩೮ ॥
ಯಥಾ ಸುನಯನಂ ವಲ್ಗು ಬಿಂಬೋಷ್ಠಂ ಚಾರುಕುಂಡಲಮ್ ।
ಮುಖಂ ದ್ರಕ್ಷ್ಯಸಿ ರಾಮಸ್ಯ ಪೂರ್ಣಚಂದ್ರಮಿವೋದಿತಮ್ ॥ ೩೯ ॥

"ದೇವಿ ! ಮಂದರದಂತಹ ಪರ್ವತಗಳು ನಮ್ಮ ವಾಸಸ್ಥಾನ. ಹಣ್ಣು-ಬೇರುಗಳೇ ನಮ್ಮ ಆಹಾರ. ಮಂದರದಂತೆಯೇ ಮಲಯ, ವಿಂಧ್ಯ, ಮೇರು, ದರ್ದುರ, ಮುಂತಾದ ಪರ್ವತಗಳೂ ಕೂಡ ನಮಗೆ ಆದರಣೀಯವಾದವುಗಳು. ಚೆಂದದ ಕಣ್ಣುಳ್ಳವ, ತೊಂಡೆಹಣ್ಣಿನಂತಹ ಕೆಂಪನೆಯ ತುಟಿಗಳುಳ್ಳವ, ಕುಂಡಲಗಳಿಂದ ಶೋಭಿಸುವವ ಹಾಗೂ ಹುಣ್ಣಿಮೆಯ ಚಂದಿರನಂತೆ ಆಹ್ಲಾದಕರ ಮೋರೆಯವನಾದ ಶ್ರೀರಾಮನು ಶೀಘ್ರದಲ್ಲಿ ನಿನಗೆ ದರ್ಶನವೀಯಲಿರುವನೆಂದು ಈ ಪರ್ವತಗಳು ಹಾಗೂ ನಮ್ಮ ಹೊಟ್ಟೆ ಹೊರೆವ ಸಾಧನಗಳ ಮೇಲೆ ಆಣೆ ಮಾಡಿ ಹೇಳುತ್ತೇನೆ."

## ೧೫. ಹನುಮಂತನು ಸೀತೆಯೆದುರು ಸತ್ಯದ ಮೇಲಿಟ್ಟ ಆಣೆ ಸುಂದರಕಾಂಡ / ೪೦

ಹನುಮಂತನು ತನ್ನನ್ನು ಭೆಟ್ಟಿಯಾದುದನ್ನು ಶ್ರೀರಾಮನಿಗೆ ಮನಗಾಣಿಸಲೆಂದು ಸೀತೆ ಒಂದು ಗುಟ್ಟಿನ ಸಂಗತಿಯನ್ನು ಅವನಿಗೆ ಹೇಳಿಕೊಡುತ್ತಾಳೆ. ಅದು ಶ್ರೀರಾಮ-ಸೀತೆಯರ ಬಾಳಿನಲ್ಲಿ ನಡೆದ ಒಂದು ಕಾಗೆಯ ಪ್ರಸಂಗ. ಇದಲ್ಲದೆ ಶ್ರೀರಾಮನಿಗೆ ನೀಡಲೆಂದು ಅವನ ಗುರುತಿನ ಚೂಡಾಮಣಿಯನ್ನು ಹನುಮಂತನಿಗೆ ಇತ್ತಳು. ಆದಷ್ಟು ಬೇಗ ತನ್ನನ್ನು ಅಲ್ಲಿಂದ ಬಿಡುಗಡೆಗೊಳಿಸುವಂತೆ ಶ್ರೀರಾಮನಿಗೆ ಹೇಳಬೇಕೆಂದು ಹನುಮಂತನಿಗೆ ಮತ್ತೆ ಮತ್ತೆ ನುಡಿದಳು. ಅದಕ್ಕವನು ಹೀಗೆಂದನು —

ತ್ವಚ್ಛೋಕವಿಮುಖೋ ರಾಮೋ ದೇವಿ ಸತ್ಯೇನ ತೇ ಶಪೇ ।
ರಾಮೇ ಶೋಕಾಭಿಭೂತೇ ತು ಲಕ್ಷ್ಮಣಃ ಪರಿತಪ್ಯತೇ ॥ ೧೩ ॥
ದೃಷ್ಟಾ ಕಥಂಚಿದ್ ಭವತೀ ನ ಕಾಲಃ ಪರಿದೇವಿತುಮ್ ।
ಇಮಂ ಮುಹೂರ್ತಂ ದುಃಖಾನಾಮಂತಂ ದ್ರಕ್ಷ್ಯಸಿ ಭಾಮಿನಿ ॥ ೧೪ ॥

"ದೇವಿ ! ನಿನ್ನಿಂದ ಅಗಲಿದ ಶ್ರೀರಾಮ ದುಃಖಿತನಾಗಿದ್ದಾನೆ. ಕಾರ್ಯದ ಬಗೆಗೆ ಉದಾಸೀನ ತಳೆದಿದ್ದಾನೆ. ಅಣ್ಣನ ಈ ಅವಸ್ಥೆಯಿಂದಾಗಿ ಲಕ್ಷ್ಮಣನಿಗೂ ತೀರ ದುಃಖ. ಸತ್ಯದ ಮೇಲೆ ಆಣೆಯಿಟ್ಟು ನಾನೀ ಮಾತನ್ನು ಹೇಳುತ್ತಲಿದ್ದೇನೆ. ಈಗ ನಿನ್ನ ದರ್ಶನವಾದ್ದರಿಂದ ಚಿಂತೆಗೆ ಕಾರಣವಿಲ್ಲ. ಅಮ್ಮ ! ಈ ಮುಹೂರ್ತದಿಂದಾಗಿ ನಿನ್ನೆಲ್ಲ ಬವಣೆಗಳು ಕೊನೆಗೊಳ್ಳುವುದನ್ನು (ಶೀಘ್ರದಲ್ಲಿಯೇ) ಕಾಣಲಿರುವೆ."

ಸುಂದರಕಾಂಡ / ೬೭

ಲಂಕೆಯಿಂದ ಮರಳಿ ಬಂದ ಬಳಿಕ ಹನುಮಂತನು ಶ್ರೀರಾಮನೆದುರು ತನ್ನ ಪಯಣವನ್ನು ಕುರಿತು ಬಣ್ಣಿಸುವಾಗ ಇದೇ ಆಣೆಯನ್ನು ಮತ್ತೆ ಆಡಿ ತೋರಿಸುತ್ತಾನೆ. ಒಂದು ಪದದ ವ್ಯತ್ಯಾಸ ಮಾತ್ರ ಇದೆ. (ನೋಡಿ : ಶ್ಲೋಕ ೨೫, ೨೬ ಹಾಗೂ ೨೭)

## ೨೦. ಸೀತೆ ಅಗ್ನಿಯನ್ನು ಕೋರಿದುದು
ಸುಂದರಕಾಂಡ / ೫೩

ತನ್ನ ಒಡ್ಡೋಲಗಕ್ಕೆ ಬಂದ ಹನುಮಂತನನ್ನು ಕಂಡು ರಾವಣ ಸಂದೇಹಕ್ಕೆ ಈಡಾದನು. ಅವನಿಗೆ ಹಿಂದೊಮ್ಮೆ ನಂದೀಶ್ವರನಿತ್ತ ಶಾಪ ನೆನಪಿಗೆ ಬಂದಿತು. ಹೀಗಾಗಿ ಅವನನ್ನು ಕೊಲ್ಲಲು ನಿರ್ಧರಿಸಿದನು. ಆದರೆ ಹನುಮಂತ ತಾನು ಸುಗ್ರೀವನ ದೂತನೆಂದು ಗುರುತು ಹೇಳಿದ್ದನು. ಅವನನ್ನು ಕೊಲ್ಲುವುದು ತಪ್ಪೆಂದು ವಿಭೀಷಣನು ರಾವಣನ ಗಮನಕ್ಕೆ ತಂದುಕೊಡುತ್ತಾನೆ. ಅಲ್ಲದೆ ಅವನು ಆ ಯೋಚನೆಯನ್ನು ಕೈಬಿಡುವಂತೆಯೂ ಮಾಡುತ್ತಾನೆ. ಆಗ ರಾವಣನು ಹನುಮಂತನ ಬಾಲಕ್ಕೆ ಬೆಂಕಿಯಿಕ್ಕಿ ಅವನನ್ನು ಊರಲ್ಲೆಲ್ಲ ಮೆರೆಯಿಸಬೇಕೆಂದು ತನ್ನ ರಾಕ್ಷಸರಿಗೆ ಅಪ್ಪಣೆ ಮಾಡುತ್ತಾನೆ. ರಾಕ್ಷಸರು ಹನುಮಂತನ ಬಾಲಕ್ಕೆ ಬಟ್ಟೆಯ ಚಿಂದಿಗಳನ್ನು ಸುತ್ತಿ, ಎಣ್ಣೆ ಸುರಿದು ಅದಕ್ಕೆ ಉರಿ ಹಚ್ಚುತ್ತಾರೆ. ರಾಕ್ಷಸರನ್ನು ಮೆಟ್ಟಿನಿಲ್ಲುವುದು ಹನುಮಂತನಿಗೇನೂ ಕಷ್ಟದ್ದಾಗಿರಲಿಲ್ಲ. ಆದರೆ ಬಂದ ಕೆಲಸವನ್ನು ಗಮನದಲ್ಲಿರಿಸಿಕೊಂಡು ಅವನು ತೆಪ್ಪಗಿದ್ದನು. ಅವನಿಗೆ ಲಂಕೆಯನ್ನು ಹತ್ತಿರದಿಂದ ನೋಡುವುದಿತ್ತು. ಅನಾಯಾಸವಾಗಿಯೇ ಅದೂ ನೆರವೇರುವಂತಾಯಿತು. ಬಾಲಕ್ಕೆ ಬೆಂಕಿಯಿಕ್ಕಿದ್ದರಿಂದ ಹನುಮಂತನಿಗೇನೂ ಸುಟ್ಟು ಗಾಯವಾಗಲಿಲ್ಲ. ಆದರೆ ಲಂಕೆ ಮಾತ್ರ ಸುಟ್ಟು ಹೋಯಿತು. ರಾಕ್ಷಸರು ಹನುಮಂತನಿಗಾದ ವಾರ್ತೆಯನ್ನು ಸೀತೆಗೆ ಅರುಹಿದರು. ಅವಳು ಬಲುದುಃಖಿತಳಾದಳು. ಹನುಮಂತನೇ ನಿಜವಾಗಿಯೂ ಶ್ರೀರಾಮನ ದೂತನಾಗಿದ್ದನೆಂಬ ಬಗೆಗೆ ಅವಳಿಗೆ ಮನದಟ್ಟಾಗಿತ್ತು. ಅವಳು ಆ ಮಹಾಕಪಿಗೆ ಒಳ್ಳೆಯದಾಗಲೆಂದು ಅಗ್ನಿಯನ್ನು ಹೀಗೆ ಕೋರಿದಳು —

> ಯದ್ಯಸ್ತಿ ಪತಿಶುಶ್ರೂಷಾ ಯದ್ಯಸ್ತಿ ಚರಿತಂ ತಪಃ ।
> ಯದಿ ವಾ ತ್ವೇಕಪತ್ನೀತ್ವಂ ಶೀತೋ ಭವ ಹನೂಮತಃ ॥ ೨೭ ॥

"ನಾನು ಗಂಡನ ಶುಶ್ರೂಷೆಯನ್ನು ಗೈದದ್ದಿದ್ದರೆ, ತಪಸ್ಸನ್ನೇನಾದರೂ ಗೈದದ್ದಿದ್ದರೆ ಇಲ್ಲವೆ ನನ್ನಲ್ಲಿ ಪಾತಿವ್ರತ್ಯ ಎಂಬುದಿದ್ದರೆ, ಎಲೆ ಅಗ್ನಿಯೇ, ನೀನು ಹನುಮಂತನಿಗಾಗಿ ತಂಪಾಗು."

ಗೋರಖಪುರದ ಪ್ರತಿಯಲ್ಲಿ ಇನ್ನೂ ಹೆಚ್ಚಿನ ಮೂರು ಶ್ಲೋಕಗಳಿವೆ. ಅವು ಹೀಗೆ —

> ಯದಿ ಕಿಂಚಿದನುಕ್ರೋಶಸ್ತಸ್ಯ ಮಯ್ಯಸ್ತಿ ಧೀಮತಃ ।
> ಯದಿ ವಾ ಭಾಗ್ಯಶೇಷೋ ಮೇ ಶೀತೋ ಭವ ಹನೂಮತಃ ॥
> ಯದಿ ಮಾಂ ವೃತ್ತಸಂಪನ್ನಾಂ ತತ್ಸಮಾಗಮಲಾಲಸಾಮ್ ।
> ಸ ವಿಜಾನಾತಿ ಧರ್ಮಾತ್ಮಾ ಶೀತೋ ಭವ ಹನೂಮತಃ ॥
> ಯದಿ ಮಾಂ ತಾರಯೇದಾರ್ಯಃ ಸುಗ್ರೀವಃ ಸತ್ಯಸಂಗರಃ ।
> ಅಸ್ಮಾದ್ದುಃಖಾಂಬುಸಂರೋಧಾಚ್ಛೀತೋ ಭವ ಹನೂಮತಃ ॥

"ಶ್ರೀರಾಮನಂತಹ ಬುದ್ಧಿವಂತನ ಮನದಲ್ಲಿ ನನ್ನ ಬಗೆಗೆ ತುಸುವಾದರೂ ಕುರುಣೆಯೆಂಬುದಿದ್ದರೆ, ನಾನು ಅದೃಷ್ಟವಂತೆಯಾಗಿದ್ದರೆ ನೀನು ಹನುಮಂತನಿಗೆ ತಂಪಾಗು. ನಾನು ಸದಾಚಾರಿಯಾಗಿದ್ದು ತನ್ನ ಸಾನ್ನಿಧ್ಯದಲ್ಲಿರಲು ತವಕಿಸಿದವಳೆಂದು ಶ್ರೀರಾಮ ಬಗೆದಿದ್ದರೆ, ಎಲೆ ಅಗ್ನಿದೇವತೆಯೇ, ಹನುಮಂತನಿಗೆ ನೀನು ತಂಪಾಗು. ಸತ್ಯಸಂಧನಾದ ಸುಗ್ರೀವ ನನ್ನನ್ನೀ ದುಃಖಸಾಗರದಿಂದ ಬಿಡುಗಡೆಗೊಳಿಸಲು ಸಮರ್ಥನಿರುವುದಾದರೆ, ಎಲೆ ಅಗ್ನಿಯೇ, ನೀನು ಹನುಮಂತನಿಗೆ ತಂಪಾಗು."

ಇಲ್ಲಿ 'ಆಣೆ'ಯೆಂಬ ಪದವನ್ನು ಬಳಸಿದ್ದರೂ ಸೀತೆ ತನ್ನ ಪಾತಿವ್ರತ್ಯ, ಪ್ರೀತಿಗಳನ್ನು ಆಣೆಗಳಾಗಿಯೇ ಆಡಿ ತೋರಿಸಿದ್ದಾಳೆ.

ಆಣೆಯೊಂದಿಗೆ ಸತ್ಯಕ್ರಿಯೆಯೂ ಇಲ್ಲಿದೆ. ತನ್ನ ಪಾತಿವ್ರತ್ಯವನ್ನು ಪಣಕ್ಕೊಡ್ಡಿದ್ದಾಳೆ.

## ೨೧. ರಾವಣನ ವಧೆಗಾಗಿ ಶ್ರೀರಾಮನ ಆಣೆ
ಸುಂದರಕಾಂಡ / ೧೯

ಶ್ರೀರಾಮನು ವಿಭೀಷಣನಿಗೆ ಆಣೆಯಿಟ್ಟು ಹೇಳುತ್ತಿದ್ದಾನೆ.

ವಿಭೀಷಣನು ಶರಣುಬರುತ್ತಲೆ ಶ್ರೀರಾಮನು ಅವನಿಗೆ ಅಭಯವನ್ನಿತ್ತನು. ರಾಕ್ಷಸರ ನಿಜವಾದ ಸಾಮರ್ಥ್ಯ, ಕೊರತೆಗಳ ಬಗೆಗೆ ತನಗೆ ಹೇಳೆಂದನು. ಬ್ರಹ್ಮದೇವನ ವರದಿಂದಾಗಿ ರಾವಣನು ಅವಧ್ಯನಾದುದು,

ಕುಂಭಕರ್ಣನ ಮೆಟ್ಟಲಾಗದ ಸಾಮರ್ಥ್ಯ ಹಾಗೂ ಇಂದ್ರಜಿತನ ಯುದ್ಧನೈಪುಣ್ಯಗಳನ್ನು ಕುರಿತು ವಿಭೀಷಣನು ವಿವರವಾಗಿ ಹೇಳಿದನು. ಶ್ರೀರಾಮನು ಆ ಮಾತಿಗೆ ಸಂತುಷ್ಟನಾಗಿ ಯೋಚಿಸುತ್ತ ಹೀಗೆಂದನು—"ನೀನು ಹೇಳಿರುದೆಲ್ಲ ನನಗೆ ಅರ್ಥವಾಯಿತು."

ಅಹಂ ಹತ್ವಾ ದಶಗ್ರೀವಂ ಸಪ್ರಹಸ್ತಂ ಸಹಾತ್ಮಜಮ್ ।
ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತಚ್ಛೃಣೋತು ಮೇ ॥ ೧೯ ॥
ರಸಾತಲಂ ವಾ ಪ್ರವಿಶೇತ್ಪಾತಾಲಂ ವಾಪಿ ರಾವಣಃ ।
ಪಿತಾಮಹಸಕಾಶಂ ವಾ ನ ಮೇ ಜೀವನ್ವಿಮೋಕ್ಷ್ಯತೇ ॥ ೨೦ ॥
ಅಹತ್ವಾ ರಾವಣಂ ಸಂಖ್ಯೇ ಸಪುತ್ರಜನಬಾಂಧವಮ್ ।
ಅಯೋಧ್ಯಾಂ ನ ಪ್ರವೇಕ್ಷ್ಯಾಮಿ ತ್ರಿಭಿಸ್ತೈರ್ಭ್ರಾತೃಭಿಃ ಶಪೇ ॥ ೨೧ ॥

"ಪ್ರಹಸ್ತ ಹಾಗೂ ಗಂಡುಮಕ್ಕಳ ಜೊತೆಗೇನೆ ರಾವಣನನನ್ನು ಕೊಂದು ನಿನ್ನನ್ನು ರಾಜನನ್ನಾಗಿ ಮಾಡುವೆನು. ನನ್ನೀ ನಿಜವಾದ ಮಾತನ್ನು ಕಿವಿಗೊಟ್ಟು ಕೇಳು. ರಾವಣ ರಸಾತಳಕ್ಕೆ ಹೋಗಲಿ, ಪಾತಾಳವನ್ನೇ ಪ್ರವೇಶಿಸಲಿ ಇಲ್ಲವೆ ಬ್ರಹ್ಮದೇವನ ಬಳಿಗೇನೆ ಹೋಗಲಿ, ಅವನು ನನ್ನಿಂದ ಜೀವ ಉಳಿಸಿಕೊಂಡು ಪಾರಾಗಲಾರ. ಈ ಯುದ್ಧದಲ್ಲಿ ರಾವಣನನ್ನು ಅವನ ಗಂಡುಮಕ್ಕಳು ಹಾಗೂ ಬಂಧುಬಾಂಧವರೊಡನೆ ಕೊಂದುಹಾಕದೆ ನಾನು ಅಯೋಧ್ಯೆಯನ್ನು ಪ್ರವೇಶಿಸೆನೆಂದು ಆ ಮೂವರು ಸೋದರರ ಮೇಲೆ ಆಣೆಯಿಟ್ಟು ಹೇಳುತ್ತೇನೆ."

ಇದನ್ನು ಕೇಳಿ ವಿಭೀಷಣನು ಶ್ರೀರಾಮನನ್ನು ವಂದಿಸಿದನು. ರಾಕ್ಷಸರನ್ನು ಕೊಲ್ಲಲು ಹಾಗೂ ಲಂಕೆಯ ಮೇಲೆ ದಾಳಿಯಿಡಲು ನೆರವಾಗಲು ಒಪ್ಪಿಕೊಂಡನು. ಅದರಿಂದಾಗಿ ಶ್ರೀರಾಮನು ಸಂತಸಪಟ್ಟನು. ಕಡಲ ನೀರನ್ನು ತಂದು ವಿಭೀಷಣನಿಗೆ ರಾಕ್ಷಸರ ರಾಜನೆಂದು ಪಟ್ಟಾಭಿಷೇಕ ಮಾಡೆಂದು ಲಕ್ಷ್ಮಣನಿಗೆ ಹೇಳಿದನು.

## ೨೨. ತನ್ನ ಶುದ್ಧಶೀಲದ ಬಗೆಗೆ ಸೀತೆಯ ಆಣೆ

ಯುದ್ಧಕಾಂಡ / ೧೧೫

ಸೀತೆ ದೀರ್ಘಕಾಲ ಲಂಕೆಯಲ್ಲಿದ್ದಳು. ಹೀಗಾಗಿ ಅವಳ ಶೀಲದ ಶುದ್ಧತೆಯ ಪ್ರಶ್ನೆ ತಲೆದೋರುವಂತಾಯಿತು. ಅವಳು ಶುದ್ಧಳಾಗಿದ್ದುದು ನಿಜ. ಈ ಸಮಸ್ಯೆಯಿಂದಾಗಿ ಶ್ರೀರಾಮನ ಮನಸ್ಸು ಕಲಕಿದಂತಾಯಿತು. ಅವನಿಗೆ ಅವಳನ್ನು ಸ್ವೀಕರಿಸುವುದು ಕಷ್ಟದ್ದಾಗಿ ಕಂಡಿತು. ಅವನು ಅವಳಿಗೆ, "ನಾನು ವಾನರರ ನೆರವಿನಿಂದ ಕಡಲನ್ನು ದಾಟಿ ಲಂಕೆಗೆ ಬಂದು, ರಾವಣನನ್ನು ಕೊಂದು ನಿನ್ನನ್ನು ಅವನ ಕಪಿಮುಷ್ಟಿಯಿಂದ ಬಿಡಿಸಿದುದು ನೀನು ನನಗೆ ಮರಳಿ ದೊರಕಲೆಂದಲ್ಲ —

ರಕ್ಷತಾ ತು ಮಯಾ ವೃತ್ತಮಪವಾದಂ ಚ ಸರ್ವತಃ ।
ಪ್ರಖ್ಯಾತಸ್ಯಾತ್ಮವಂಶಸ್ಯ ನ್ಯಂಗಂ ಚ ಪರಿಮಾರ್ಜತಾ ॥ ೧೬ ॥

"ಸದಾಚಾರದ ಸಂರಕ್ಷಣೆಗಾಗಿ ಹಾಗೂ ಜನರ ಅಪವಾದನೆಗಳನ್ನು ನಿವಾರಿಸಿ ಹೆಸರಾದ ನಮ್ಮ ಕುಲಕ್ಕೆ ಅಂಟಿದ ಕಲಂಕವನ್ನು ತೊಡೆದುಹಾಕಲೆಂದು.

"ನಿನ್ನ ಶೀಲದ ಬಗೆಗೆ ನನ್ನಲ್ಲಿ ಸಂದೇಹವಿದ್ದ ಕಾರಣ ನಿನ್ನನ್ನು ಸ್ವೀಕರಿಸಲಾರೆ. ನೀನು ಮನಬಂದಲ್ಲಿಗೆ ಹೋಗು...

ನ ಹಿ ತ್ವಾಂ ರಾವಣೋ ದೃಷ್ಟ್ವಾ ದಿವ್ಯರೂಪಾಂ ಮನೋರಮಾಮ್ ।
ಮರ್ಷಯೇತ್ ಚಿರಂ ಸೀತೇ ಸ್ವಗೃಹೇ ಪರ್ಯವಸ್ಥಿತಾಮ್ ॥ ೨೪ ॥

"ರಾವಣ ನಿನ್ನತ್ತ ಕೆಟ್ಟಗಣ್ಣಿನಿಂದ ನೋಡುತ್ತಿದ್ದನು. ನಿನ್ನನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಇಲ್ಲಿಗೆ ಕರೆತಂದನು. ನಿನ್ನಂತಹ ಅಂದವತಿಯನ್ನು ಕಂಡು ರಾವಣ ನಿರ್ಲಿಪ್ತನಾಗಿರಲು ಸಾಧ್ಯವಿಲ್ಲ."

ಯುದ್ಧಕಾಂಡ / ೧೧೬

ಶ್ರೀರಾಮನ ಈ ಕಠೋರವಾದ ಮಾತುಗಳನ್ನು ಕೇಳಿ ಸೀತೆಗೆ ಬಲು ಕಡಕೆನಿಸಿತು. ಅವಳ ಕಣ್ಣುಗಳಿಂದ

ನೀರು ಕೋಡಿಯಾಗಿ ಹರಿಯಿತು. ಅವಳು ಇಷ್ಟೊಂದು ಕಠೋರವಾದ ಮಾತುಗಳನ್ನು ಹಿಂದೆಂದಿಗೂ ಕೇಳಿರಲಿಲ್ಲ. ಅವಳು ಹೀಗೆಂದಳು —

> ನ ತಥಾಸ್ಮಿ ಮಹಾಬಾಹೋ ಯಥಾ ಮಾಮವಗಚ್ಛಸಿ ।
> ಪ್ರತ್ಯಯಂ ಗಚ್ಛ ಮೇ ಸ್ವೇನ ಚಾರಿತ್ರೇಣೈವ ತೇ ಶಪೇ ॥ ೬ ॥

"ಎಲೈ ವೀರಪುರುಷನೆ ! ನಿನ್ನಂಥವನು ನನಗೆ ಹೀಗೆನ್ನುವುದು ಸರಿಯಲ್ಲ. ನೀನು ತಿಳಿದುಕೊಂಡಂತೆ ನಾನಿಲ್ಲವೆಂದು ನನ್ನ ಶುದ್ಧವಾದ ಶೀಲದ ಮೇಲೆ ಆಣೆಯಿಟ್ಟು ಹೇಳುತ್ತೇನೆ."

> ಯದಹಂ ಗಾತ್ರಸಂಸ್ಪರ್ಶಂ ಗತಾಸ್ಮಿ ವಿವಶಾ ಪ್ರಭೋ ।
> ಕಾಮಕಾರೋ ನ ಮೇ ತತ್ರ ದೈವಂ ತತ್ರಾಪರಾಧ್ಯತಿ ॥ ೮ ॥

"ರಾವಣನ ಮೈಸ್ಪರ್ಶ ನನಗಾದುದು ನನ್ನ ಅಸಹಾಯಕತೆಯಿಂದಾಗಿ (ಬೇಕಾಗಿಯಲ್ಲ). ನನಗೆ ಬೇಕಾಗಿ ನಾನವನ ಮೈ ಮುಟ್ಟಲಿಲ್ಲ. (ಇಷ್ಟೊಂದು ಕಾಲ ಒಟ್ಟಿಗೆ ಬಾಳಿಯೂ ನೀನು ನನ್ನನ್ನು ಹೀಗೆಂದೇ ತಿಳಿಯುವುದಾದಲ್ಲಿ) ಅವನು ನನ್ನ ಮೈ ಮುಟ್ಟಿದುದೆಂದರೆ ನನ್ನ ದುರದೃಷ್ಟವೇ ಸರಿ."

## ೨೩. ಲಕ್ಷ್ಮಣನಿಗೆ ಶ್ರೀರಾಮನ ಪಾದಗಳ ಆಣೆ ಉತ್ತರಕಾಂಡ / ೪೫

ಸೀತೆಯು ಅಗ್ನಿದಿವ್ಯವನ್ನು ಕೈಕೊಂಡು ತನ್ನ ಶೀಲಶುದ್ಧತೆಯನ್ನು ಸಿದ್ಧಪಡಿಸಿ ತೋರಿಸಿದಳು. ಅವಳು ಶುದ್ಧಳೂ, ಪೂರ್ತಿ ತಪ್ಪುರಹಿತಳೂ ಆಗಿರುವುದನ್ನು ಶ್ರೀರಾಮನು ಮನಗಂಡನು. ಜನರ ಮನದ ಸಂದೇಹ ಮಾತ್ರ ಪೂರ್ತಿ ನಶಿಸಿರಲಿಲ್ಲ. ಅವನನ್ನು ಹಾಗೂ ಸೀತೆಯನ್ನು ಕುರಿತು ಗುಜುಗುಜು ಮಾತುಗಳು ಸಾಗಿಯೇ ಇದ್ದವು. ಅವನು ಅವುಗಳನ್ನು ಸಹಿಸುವಂತಿರಲಿಲ್ಲ. ತನ್ನ ರಾಜಕರ್ತವ್ಯದಲ್ಲಿ ಜನನಿಂದೆಯ ಸ್ಥಾನ ಹಿರಿದೆಂದು ಭಾವಿಸಿದ್ದನು. ಅದನ್ನವನು ಕಡೆಗಣಿಸುವಂತಿರಲಿಲ್ಲ. ಪ್ರಪಂಚದಲ್ಲಿ ಯಾವ ಪ್ರಾಣಿ ನಿಂದೆಗೊಳಗಾಗುವುದೋ ಅದು ಸತ್ತು ಕೂಡ ಜನನಿಂದೆಯಿರುವಷ್ಟು ಕಾಲ ನರಕದಲ್ಲಿಯೇ ತೊಳಲಾಡಬೇಕಾದೀತೆಂಬ ಶ್ರದ್ಧೆ ಅವನದಾಗಿತ್ತು. ಮಡದಿಯೆಂಬ ಕಾರಣಕ್ಕಾಗಿ ಅವನಿಗೆ ಅವಳ ಮೇಲೆ ಒಲುಮೆಯಿತ್ತಾದರೂ ಅವಳು ಅರಮನೆಯಲ್ಲಿ ವಾಸವಾಗಿರುವುದು ಜನನಿಂದೆಯ ಮಾತಾಗಿತ್ತು. ಹೀಗಾಗಿ ಅವಳನ್ನು ತೊರೆದುಬಿಡುವುದು ಅವನಿಗೆ ತನ್ನ ಕರ್ತವ್ಯವಾಗಿ ತೋರಿತು. ಬಸುರಿಯಾಗಿದ್ದರೂ ಅವಳನ್ನು ಬಿಟ್ಟುಬರಲು ತೀರ್ಮಾನಿಸಿದನು. ತನ್ನ ಇಚ್ಛೆ ಹಾಗೂ ನಡತೆಗಳು ಪ್ರಜೆಗಳಿಗೂ, ಬಂಧುಬಳಗದವರಿಗೂ ಹಿಡಿಸವೆಂಬುದನ್ನು ಗುರುತಿಸಿ ಅವನು ಸೀತೆಯನ್ನು ನಾಡಿನ ಗಡಿಯಾಚೆಗೆ ಗಂಗೆಯ ದಡದಲ್ಲಿರುವ ವಾಲ್ಮೀಕಿಯ ಆಶ್ರಮದ ಬಳಿಗೆ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಕಠೋರವಾದ ಅಪ್ಪಣೆಯನ್ನಿತ್ತನು. ಅವಳ ಸಂದರ್ಭದ ಯಾವುದೇ ಮನವೊಲಿಕೆಯ ಮಾತುಗಳಿಗೆ ಕಿವಿಗೊಡಲು ಆತ ಸುತರಾಂ ಸಿದ್ಧನಿರಲಿಲ್ಲ. ತನ್ನ ತೀರ್ಮಾನಕ್ಕೆ ಯಾರೂ ಅಡ್ಡಗಲ್ಲು ಹಾಕದಿರಲೆಂದು ಅವನು ಈ ರೀತಿ ಆಣೆಮಾಡಿದನು —

> ಶಾಪಿತಾ ಹಿ ಮಯಾ ಯೂಯಂ ಪಾದಾಭ್ಯಾಂ ಜೀವಿತೇನ ಚ ।
> ಯೇ ಮಾಂ ವಾಕ್ಯಾಂತರೇ ಬ್ರೂಯುರನುನೇತುಂ ಕಥಂಚನ ॥ ೨೧ ॥
> ಅಹಿತಾ ನಾಮ ತೇ ನಿತ್ಯಂ ಮದಭೀಷ್ಟವಿಘಾತನಾತ್ ।

"ನಾನು ನಿಮಗೆ ನನ್ನ ಪಾದಗಳು ಹಾಗೂ ಜೀವದ ಆಣೆ ಹಾಕಿದ್ದೇನೆ. ಯಾರಾದರೂ ನನ್ನನ್ನು ನನ್ನ ಮಾತಿಗೆದುರಾಗಿ ಮನಗಾಣಿಸಲು, ತಿಳಿಹೇಳಲು ಯಾವುದೇ ಬಗೆಯಾಗಿ ಯತ್ನಿಸಿದಲ್ಲಿ, ನನಗಿಷ್ಟವಾದ ಸಂಗತಿಗಳಿಗೆ ಪೆಟ್ಟು ತಗಲುವಂತಾಗಿ ಅಂಥವರೆಲ್ಲ ಯಾವಾಗಲೂ ನನ್ನ ಹಗೆಗಳೆಂದೇ ತಿಳಿಯಲಾದಾರು."

ಈ ಆಣೆಯು ಲಕ್ಷ್ಮಣನನ್ನು ಹಿಡಿದು ಉಳಿದೆಲ್ಲರನ್ನೂ ನಿರುತ್ತರರನ್ನಾಗಿ ಮಾಡಿಬಿಟ್ಟಿತು. ತನ್ನಪ್ಪಣೆಯನ್ನು ಮೀರಿ ಯಾರೂ ಒಂದಕ್ಷರವನ್ನೂ ಆಡದಂತೆ ಮಾಡಿಬಿಟ್ಟನು.

## ೨೪. ಸೀತೆಯು ಲಕ್ಷ್ಮಣನಿಗೆ ಶ್ರೀರಾಮನ ಮೇಲೆ ಆಣೆ ಹಾಕಿದ್ದು ಉತ್ತರಕಾಂಡ / ೪೭

ಶ್ರೀರಾಮನ ಆಣತಿಯ ಮೇರೆಗೆ ಲಕ್ಷ್ಮಣನು ಸೀತೆಯನ್ನು ವಾಲ್ಮೀಕಿಯ ಆಶ್ರಮವಿದ್ದ ಕಾಡಿಗೆ ಕರೆತಂದನು. ಅವನು ತುಂಬ ದುಃಖಿತನಾಗಿದ್ದನು. ಅವನು ಎಂದಿನಂತಿರಲಿಲ್ಲ, ಮಾತನಾಡುತ್ತಿರಲಿಲ್ಲ. ಅವನ ಕಣ್ಣಾಲಿಗಳು ತುಂಬಿಬಂದಿದ್ದವು. ಸೀತೆ ಇವೆಲ್ಲ ಸಂಗತಿಗಳನ್ನು ಗಮನಿಸದಿರಲಿಲ್ಲ. ಅವಳಿಗೂ ದಿಗಿಲಾಗಿತ್ತು. ಲಕ್ಷ್ಮಣ ತನ್ನೊಡನೆ ಮಾತನಾಡಬಯಸುತ್ತಾನೆ, ಏನನ್ನೋ ಹೇಳಬಯಸುತ್ತಾನಾದರೂ ಮುಜುಗರಪಟ್ಟುಕೊಳ್ಳುತ್ತಿದ್ದಾನೆ ಎಂಬುದನ್ನೂ ಅವಳು ಗುರುತಿಸಿದಳು. ಅವಳು ಅವನಿಗೆ ಹೀಗೆಂದಳು : "ಎಲ್ಲರೂ ಕುಶಲರಾಗಿರುವಷ್ಟೆ ? ನೀನು ಇಷ್ಟೇಕೆ ತೊಂದರೆ ಮಾಡಿಕೊಳ್ಳುತ್ತಿರುವೆ ?" ಅವನು ಮನಬಿಚ್ಚಿ ಮಾತನಾಡಲೆಂದು ಅವಳು ಮುಂದೆಂದಳು —

> ಶಾಪಿತೋಽಸಿ ನರೇಂದ್ರೇಣಾಂ ಯತ್ತ್ವಂ ಸಂತಾಪಮಾಗತಃ ।
> ತದ್ ಬ್ರೂಯಾಃ ಸನಿಧೌ ಮಹ್ಯಮಹಮಾಜ್ಞಾಪಯಾಮಿ ತೇ ॥ ೯ ॥

"ಮಹಾರಾಜರಾಣೆ (ಶ್ರೀರಾಮನ) ನಿನಗೆ, ನಿನ್ನ ಮನದಲ್ಲಿ ಸಾಗಿರುವ ಆಲ್ಲೋಲಕಲ್ಲೋಲವನ್ನು ನನ್ನೆದುರು ವಿಶದಪಡಿಸೆಂದು ನಿನಗೆ ಅಪ್ಪಣೆ ಮಾಡುತ್ತಿದ್ದೇನೆ."

## ೨೫. ಸೀತೆಯ ಆಣೆ ಹಾಗೂ ವಾಲ್ಮೀಕಿಯ ಸತ್ಯಕ್ರಿಯೆ ಉತ್ತರಕಾಂಡ / ೯೫

ಶ್ರೀರಾಮನ ಅಶ್ವಮೇಧಯಜ್ಞ ಸಾಗಿತ್ತು. ವಾಲ್ಮೀಕಿಯು ಲವಕುಶರಿಗೆ ರಾಮಾಯಣವನ್ನು ಹಾಡಲು ಹೇಳಿದನು. ಹಲವು ಜನ ಋಷಿಗಳು, ರಾಜರುಗಳು, ದೇವತೆಗಳೆದುರು ಅವರಿಬ್ಬರು ರಾಮಾಯಣವನ್ನು ಹಾಡಲು ಆರಂಭಿಸಿದರು. ಮೊದಲ ಇಪ್ಪತ್ತು ಸರ್ಗಗಳ ಗಾಯನ ಸುಸ್ವರದಲ್ಲಿ ತಾಲಬದ್ಧವಾಗಿ ನಡೆಯಿತು. ಅದನ್ನಾಲಿಸಿ ಶ್ರೀರಾಮನಲ್ಲದೆ ನೆರೆದ ಜನಸಭೆ ಕೂಡ ಸೋಜಿಗಪಟ್ಟಿತು. ಅವರು ಬಯಸಿದಷ್ಟು ದ್ರವ್ಯವನ್ನು ಕೊಡಲು ಶ್ರೀರಾಮನು ಆಜ್ಞಾಪಿಸಿದನು. ಆದರೆ ಅವರಿಬ್ಬರೂ ಅದನ್ನು ಸ್ವೀಕರಿಸಲು ಒಪ್ಪಲಿಲ್ಲ. "ಈ ಕಾವ್ಯವನ್ನು ಹೇಗೆ ಪಡೆದಿರಿ ? ಅದರ ಕವಿ ಯಾರು ? ಅವನಿರುವುದೆಲ್ಲಿ ? ಕಾವ್ಯದಲ್ಲಿ ಶ್ಲೋಕಗಳೆಷ್ಟು ?" ಎಂದೆಲ್ಲ ಶ್ರೀರಾಮನು ಅವರನ್ನು ಕೇಳಿದನು. ಅದಕ್ಕೆ ಅವರು, "ನಿನ್ನ ಇಡಿಯ ಚರಿತ್ರೆಯನ್ನು ಬಣ್ಣಿಸಲಾದ ಈ ಕಾವ್ಯವನ್ನು ಬರೆದವರು ವಾಲ್ಮೀಕಿ ಮುನಿಗಳು. ಸದ್ಯಕ್ಕೆ ಅವರು ಯಜ್ಞಭೂಮಿಗೆ ಬಂದಿದ್ದಾರೆ. ಈ ಹೊತ್ತಿಗೆಯಲ್ಲಿ ಉತ್ತರಕಾಂಡವನ್ನೊಳಗೊಂಡು ಒಟ್ಟು ಏಳು ಕಾಂಡಗಳಿವೆ. ಐದು ನೂರು ಸರ್ಗಗಳು, ಇಪ್ಪತ್ನಾಲ್ಕು ಸಾವಿರ ಶ್ಲೋಕಗಳು ಇದ್ದು ಇವುಗಳಲ್ಲಿ ಇಡಿಯ ಶ್ರೀರಾಮಚರಿತ್ರೆ ಮೂಡಿಬಂದಿದೆ" ಎಂದರು. ಶ್ರೀರಾಮನು ಇಡಿಯ ರಾಮಾಯಣವನ್ನೇ ಆಲಿಸಬಯಸುತ್ತಲೇ ಅವರು ಅದನ್ನು ಹಾಡಿದರು. ಲವಕುಶರು ಸೀತೆಯ ಮಕ್ಕಳೆಂದರಿತ ಶ್ರೀರಾಮನು ದೂತರಿಂದ ವಾಲ್ಮೀಕಿ ಮುನಿಗೆ ಬರಹೇಳಿಕಳಿಸಿದನು.

> ಯದಿ ಶುದ್ಧಸಮಾಚಾರಾ ಯದಿ ವಾ ವೀತಕಲ್ಮಷಾ ।
> ಕರೋತ್ವಿಹಾತ್ಮನಃ ಶುದ್ಧಿಮನುಮಾನ್ಯ ಮಹಾಮುನಿಮ್ ॥ ೪ ॥

"ಸೀತೆಯ ನಡತೆ ಸ್ವಾಭಾವಿಕವಾಗಿಯೇ ಶುದ್ಧವಾಗಿರಬಹುದು ಇಲ್ಲವೆ ಆಶ್ರಮದಲ್ಲಿ ವಾಸಮಾಡಿದ್ದರಿಂದಾಗಿ ಅವಳು ದೋಷಮುಕ್ತಳಾಗಿದ್ದರೆ ಮಹರ್ಷಿಗಳ ಒಪ್ಪಿಗೆಯನ್ನು ಪಡೆದು ಅವಳು ತನ್ನ ಶುದ್ಧತೆಯ ಬಗೆಗೆ ಆಣೆಮಾಡಿ ಹೇಳಲಿ."

ವಾಲ್ಮೀಕಿ ಮುನಿ ಹಾಗೂ ಸೀತೆಯ ಅಭಿಪ್ರಾಯಗಳನ್ನು ಅರಿತು ಶ್ರೀರಾಮನು ಅವರಿಗೆ ಹೀಗೆ ಹೇಳಿಕಳುಹಿಸಿದನು —

> ಶ್ವಃ ಪ್ರಭಾತೇ ತು ಶಪಥಂ ಮೈಥಿಲೀ ಜನಕಾತ್ಮಜಾ ।
> ಕರೋತು ಪರಿಷನ್ಮಧ್ಯೇ ಶೋಧನಾರ್ಥಂ ಮಮೈವ ಚ ॥ ೭ ॥

"ಜನಕನ ಕನ್ಯೆ ಮೈಥಿಲಿಯು ಬೆಳಗಿನ ಜಾವದ ಹೊತ್ತಿಗೆ ನೆರೆದ ಸಭೆಯೆದುರು ತನ್ನ ಹಾಗೂ ನನ್ನ ಮೇಲಿನ ಅಪಾದನೆಯನ್ನು ನಿವಾರಿಸಲೆಂದು ಆಣೆ ಮಾಡಲಿ.

ಭಗವಂತಃ ಸುಶಿಷ್ಯಾ ವೈ ಸಾನುಗಾಶ್ಚ ನರಾಧಿಪಾಃ ।
ಪಶ್ಯಂತು ಸೀತಾಶಪಥಂ ಯಶ್ಚೈವಾನ್ಯೋऽಪಿ ಕಾಂಕ್ಷತೇ ॥ ೧೩ ॥

"ಈ ಆಣೆಯನ್ನು ಆಲಿಸಲು ಗುರುಜನರು, ರಾಜರುಗಳು, ಶಿಷ್ಯರ ಗುಂಪುಗಳಲ್ಲದೆ ಯಾರು ಬೇಕಾದವರೂ ಬರಬಹುದು. ಇದು ಎಲ್ಲರಿಗಾಗಿಯೂ ತೆರೆದಿರುವಂಥದು."

ಪತಿಯೇ ಸ್ತ್ರೀಗೆ ಪರಮೇಶ್ವರನಾದ ಕಾರಣ ಶ್ರೀರಾಮ ಹೇಳಿದಂತೆ ಸೀತೆ ನಡೆದುಕೊಳ್ಳುವಳೆಂದು ವಾಲ್ಮೀಕಿಯು ಭರವಸೆಯಿತ್ತನು.

ಉತ್ತರಕಾಂಡ / ೯೬

ಶ್ರೀರಾಮನ ಕರೆಗೆ ಓಗೊಟ್ಟು ಸೀತೆಯ ಆಣೆಯ ವಿಧಿಯನ್ನು ಕಾಣಲೆಂದು ಹಲವು ಜನ ಕೂಡಿತ್ತು.

ಜ್ಞಾನನಿಷ್ಠಾ: ಕರ್ಮನಿಷ್ಠಾ ಯೋಗನಿಷ್ಠಾಸ್ತಥಾಪರೇ ।
ಸೀತಾಶಪಥವೀಕ್ಷಾರ್ಥಂ ಸರ್ವ ಏವ ಸಮಾಗತಾಃ ॥ ೯ ॥

'ಜ್ಞಾನನಿಷ್ಠರೂ, ಕರ್ಮನಿಷ್ಠರೂ ಹಾಗೂ ಯೋಗನಿಷ್ಠರಲ್ಲದೆ ಬೇರೆಯವರೂ ನೆರೆದಿದ್ದರು.'

ನಿಗದಿಪಡಿಸಿದ ತಿಥಿಯಂದು ವಾಲ್ಮೀಕಿ ಮುನಿಯು ಸೀತೆಯನ್ನು ಜನಸಮೂಹದೆದುರು ಸರಿಯಾದ ವೇಳೆಗೆ ಕರೆತಂದನು. ಅವನು ಶ್ರೀರಾಮನಿಗೆ ಇಂತೆಂದನು—"ಎಲೈ ದಶರಥನೇ, ಜನರ ಅಪವಾದಗಳಿಗೆ ಹೆದರಿ ನೀನು ಯಾವಳನ್ನು ನನ್ನಾಶ್ರಮದ ಬಳಿಗೆ ತೊರೆದುಹೋದೆಯೋ ಅವಳೇ ಧರ್ಮದಿಂದ ನಡೆದುಕೊಳ್ಳುವವಳಾದ, ಪತಿವ್ರತೆಯಾದ ಈ ಸೀತೆ. ಜನರ ಅಪಾದನೆಗಳಿಗೆ ಹೆದರಿಕೊಳ್ಳುವ ನಿನ್ನನ್ನು ಮನಗಾಣಿಸಲು ಅವಳು ಸಿದ್ಧಳು. ಅವಳಿಗೆ ಅಪ್ಪಣೆಯನ್ನು ನೀಡು. ಜಾನಕಿಯ ಈ ಅವಳಿಮಕ್ಕಳಿಬ್ಬರೂ ನಿನ್ನ ಅಜೇಂಕ್ಯರೆನ್ನಿಸಿದ ಗಂಡುಮಕ್ಕಳು. ನನ್ನೀ ನುಡಿ ನಿಜವಾದುದು. ನಾನೆಂದಿಗೂ ಸುಳ್ಳಾಡಿದವನಲ್ಲ. ಇವರು ನಿನ್ನ ಮಕ್ಕಳು. ರಾಘವನೇ, ಸೀತೆ ಶುದ್ಧಳೆಂಬ ಸಂಗತಿಯು ನನ್ನ ಐದು ಜ್ಞಾನೇಂದ್ರಿಯಗಳು ಹಾಗೂ ಆರನೆಯದಾದ ಮನಸ್ಸುಗಳಿಂದಾಗಿ ನನಗೆ ಮನದಟ್ಟಾದಬಳಿಕವೇ ನಾನಿವಳನ್ನು ಸ್ವೀಕರಿಸಿದುದು. ಇವಳ ನಡತೆ ಶುದ್ಧವಾದುದು. ಇವಳು ಪಾಪರಹಿತಳು. ಪತಿಯೇ ಇವಳಿಗೆ ಪರಮೇಶ್ವರನು.

ಬಹುವರ್ಷಸಹಸ್ರಾಣಿ ತಪಶ್ಚರ್ಯಾ ಮಯಾ ಕೃತಾ ।
ನೋಪಶ್ನೀಯಾಂ ಫಲಂ ತಸ್ಯಾ ದುಷ್ಟೇಯಂ ಯದಿ ಮೈಥಿಲೀ ॥ ೨೦ ॥
ಮನಸಾ ಕರ್ಮಣಾ ವಾಚಾ ಭೂತಪೂರ್ವಂ ನ ಕಿಲ್ಬಿಷಮ್ ।
ತಸ್ಯಾಹಂ ಫಲಮಶ್ನಾಮಿ ಅಪಾಪಾ ಮೈಥಿಲೀ ಯದಿ ॥ ೨೧ ॥

"ಈ ಮೈಥಿಲಿ ತಪ್ಪುಗಾರಳಾಗಿದ್ದರೆ ಹಲವಾರು ವರ್ಷಗಳ ಕಾಲ ನಾನು ಕೈಕೊಂಡ ತಪಶ್ಚರ್ಯೆಯ ಫಲ ನನಗೆ ದೊರಕದಿರಲಿ! ಮೈಥಿಲಿ ಪಾಪರಹಿತಳಾಗಿದ್ದರೆ ಮಾತ್ರ ಇಂದಿನವರೆಗೆ ಮೈ-ಮಾತು-ಮನಗಳ ಪಾತಕಗಳನ್ನು ನಾನೆಸಗದಿದ್ದುದರ ಫಲ ನನಗೆ ದೊರಕುವಂತಾಗಲಿ.

"ಜನನಿಂದೆಗೆ ಹೆದರಿಕೊಳ್ಳುವ ನಿನ್ನನ್ನು ಇವಳು ಮನಗಾಣಿಸುವಳೆಂದು ವಾಲ್ಮೀಕಿ ಶ್ರೀರಾಮನಿಗೆ ಹೇಳಿದನು. ಇವಳ ಅಂತಃಕರಣ ಶುದ್ಧವಾದುದು, ಎಂದು ನನಗೆ ನನ್ನ ದಿವ್ಯಜ್ಞಾನದಿಂದ ತಿಳಿದುಬಂದಿದೆ. ನಿನಗೆ ಕೂಡ ಈ ಸಂಗತಿ ತಿಳಿಯದುದೇನಲ್ಲ. ಆದರೂ ನೀನು ಜನನಿಂದೆಗೆ ಹೆದರಿ, ನಿನ್ನ ಮನಸ್ಸು ಕಲಕಿಹೋದ ಕಾರಣ ಇವಳನ್ನು ಬಿಟ್ಟುಕೊಟ್ಟಿರುವೆ."

ಇಲ್ಲಿ ವಾಲ್ಮೀಕಿಯ ಸತ್ಯಕ್ರಿಯೆ ಹಾಗೂ ಸೀತೆಯ ಆಣೆ ಇವೆ. ಸೀತೆಯ ಶುದ್ಧಶೀಲವನ್ನು ಮನಗಾಣಿಸಲೆಂದು ವಾಲ್ಮೀಕಿ ಸಾವಿರ ವರ್ಷಗಳ ತನ್ನ ತಪಶ್ಚರ್ಯೆಯನ್ನು ಪಣಕ್ಕೊಡ್ಡಿರುವನು.

## ೨೬. ಸೀತೆಯ ಸತ್ಯಕ್ರಿಯೆ

ಉತ್ತರಕಾಂಡ / ೯೭

ವಾಲ್ಮೀಕಿಯು ಆಣೆಯಿಟ್ಟು ಹೇಳಿದ ಕಾರಣ ಶ್ರೀರಾಮನೂ ಕೂಡ ಸೀತೆಯ ಶುದ್ಧತೆಯನ್ನು ಒಪ್ಪಿಕೊಂಡನು. ಅವನು ಹೀಗೆಂದನು —

ಪ್ರತ್ಯಯಶ್ಚ ಪುರಾ ವೃತ್ತೋ ವೈದೇಹ್ಯಾಃ ಸುರಸನ್ನಿಧೌ ।
ಶಪಥಕೃತಸ್ತತ್ರ ತೇನ ವೇಶ್ಮ ಪ್ರವೇಶಿತಾ ॥ ೩ ॥
ಲೋಕಾಪವಾದೋ ಬಲವಾನ್ ಯೇನ ತ್ಯಕ್ತಾ ಹಿ ಮೈಥಿಲೀ ।
ಸೇಯಂ ಲೋಕಭಯಾದ್ ಬ್ರಹ್ಮನ್ನಪಾಪೇತ್ಯಭಿಜಾನತಾ ।
ಪರಿತ್ಯಕ್ತಾ ಮಯಾ ಸೀತಾ ತದ್ ಭವಾನ್ ಕ್ಷಂತುಮರ್ಹತಿ ॥ ೪ ॥

"ಹಿಂದಕ್ಕೆ ದೇವತೆಗಳ ಸನ್ನಿಧಿಯಲ್ಲಿ ಸೀತೆಯ ಆಣೆಯಾಗಿ ಮನದಟ್ಟಾದುದರಿಂದಲೇ ನಾನು ಅವಳಿಗೆ ಮನೆಗೆ ಬರಲು ಅಪ್ಪಣೆಯನ್ನಿತ್ತೆ. ಆದರೆ ಜನಾಪವಾದ ಬಲು ಕಷ್ಟದ್ದು. ಹೀಗಾಗಿ ಮೈಥಿಲಿಯನ್ನು ತೊರೆದೆ. ಈ ಅಪರಾಧಕ್ಕಾಗಿ ನೀವು ನನ್ನನ್ನು ಕ್ಷಮಿಸಿ.

"ಅವಳಿಗಳಾದ ಲವ-ಕುಶರು ನನ್ನ ಮಕ್ಕಳೆಂಬುದನ್ನೂ ಬಲ್ಲೆ. ಜಗತ್ತಿನಲ್ಲಿ ಶುದ್ಧಳೆನಿಸಿದ ಸೀತೆಯ ಬಗೆಗೆ ನನ್ನಲ್ಲಿ ಪ್ರೇಮವಿರಲಿ." ಸೀತೆಯ ಆಣೆಯ ಕಾಲಕ್ಕೆ ಅಲ್ಲಿ ನೆರೆದಿದ್ದ ದೇವತೆ ಮುಂತಾದವರೆಲ್ಲರೂ ಸೋಜಿಗಬಟ್ಟರು.

ಸೀತೆ ಕಾವಿಬಟ್ಟೆಯನ್ನು ಉಟ್ಟಿದ್ದಳು. ನೆರೆದಿದ್ದ ಜನಸಮೂಹದತ್ತ ಕಣ್ಣುಹಾಯಿಸಿ ಅವಳು ಹೀಗೆಂದಳು —

ಯಥಾऽಹಂ ರಾಘವಾದನ್ಯಂ ಮನಸಾಪಿ ನ ಚಿಂತಯೇ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥ ೧೪ ॥
ಮನಸಾ ಕರ್ಮಣಾ ವಾಚಾ ಯಥಾ ರಾಮಂ ಸಮರ್ಚಯೇ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥ ೧೫ ॥
ಯಥೈತತ್ಸತ್ಯಮುಕ್ತಂ ಮೇ ವೇದ್ಮಿ ರಾಮಾತ್ಪರಂ ನ ಚ ।
ತಥಾ ಮೇ ಮಾಧವೀದೇವೀ ವಿವರಂ ದಾತುಮರ್ಹತಿ ॥ ೧೬ ॥

"ರಘೂತ್ತಮನಾದ ಶ್ರೀರಾಮನಲ್ಲದೆ ಬೇರಾವ ಗಂಡಸನ್ನಾದರೂ ನನ್ನ ಮನದಲ್ಲಿ ತಾರದಿದ್ದೆನಾದರೆ ವಿಷ್ಣುವಿನ ಮಡದಿಯಾದ ಈ ಭೂದೇವಿಯು ನನಗೆ ವಿವರವನ್ನು ಒದಗಿಸಿಯಾಳು. ಮೈ-ಮನ-ಮಾತಿನಿಂದ ನಾನು ಶ್ರೀರಾಮನನ್ನು ಆರಾಧಿಸುತ್ತೇನಾದರೆ ವಿಷ್ಣುವಿನ ಮಡದಿಯಾದ ಈ ಭೂದೇವಿಯು ನನಗಾಗಿ ಬಾಗಿಲನ್ನು ಒದಗಿಸಿಯಾಳು. ಶ್ರೀರಾಮನಲ್ಲದೆ ನಾನು ಇನ್ನಾವ ಗಂಡಸನನ್ನೂ ಅರಿಯೆ. ನನ್ನೀ ಹೇಳಿಕೆ ನಿಜವಿದ್ದರೆ ವಿಷ್ಣುವಿನ ಮಡದಿಯಾದ ಈ ಭೂಮಿಯು ಒಳಪ್ರವೇಶಿಸಲು ನನಗೆ ದಾರಿಯನ್ನು ಒದಗಿಸಲಿ."

ತಥಾ ಶಪಂತ್ಯಾಂ ವೈದೇಹ್ಯಾಂ ಪ್ರಾದುರಾಸೀತ್ ತದದ್ಭುತಮ್ ।
ಭೂತಲಾದುತ್ಥಿತಂ ದಿವ್ಯಂ ಸಿಂಹಾಸನಮನುತ್ತಮಮ್ ॥ ೧೭ ॥

ಸೀತೆಯು ಆಣೆಯನ್ನು ಉಚ್ಚರಿಸುತ್ತಲೇ ನೆಲದಿಂದ ಒಂದು ದಿವ್ಯವಾದ ಸಿಂಹಾಸನವು ಮೇಲೆದ್ದಿತು. ಭೂದೇವಿಯು ಅದರ ಮೇಲೆ ವಿರಾಜಮಾನಳಾಗಿದ್ದಳು.

ಭೂದೇವಿಯು ತನ್ನೆರಡೂ ಕೈಗಳಿಂದ ಸೀತೆಯನ್ನು ಎತ್ತಿಕೊಂಡಳು. ಅವಳನ್ನು ಅಭಿವಂದಿಸಿ ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡಳು. ಸಿಂಹಾಸನದ ಮೇಲೆ ಆಸೀನಳಾದ ಸೀತೆ ರಸಾತಳವನ್ನು ಪ್ರವೇಶಿಸುತ್ತಿರುವಂತೆಯೇ ಅವಳ ಮೇಲೆ ದಿವ್ಯವಾದ ಹೂಗಳನ್ನು ಮಳೆಗರೆಯಲಾಯಿತು, ಕಲೆತವರ ಬಾಯಿಂದ ಧನ್ಯತೆಯ ಉದ್ಗಾರಗಳು ಹೊರಬಂದವು.

ಸೀತೆಯ ಸತ್ಯಕ್ರಿಯೆಯು ಆಣೆಯಿಂದ ಕೂಡಿರುದು.

## ೨೭. ಭರತನ ಆಣೆ

ಉತ್ತರಕಾಂಡ / ೧೦೭

ಕಾಲನು ಶ್ರೀರಾಮನನ್ನು ಕಾಣಲು ಬಂದಾಗ ಅವರಿಬ್ಬರ ಮಾತುಗಳನ್ನು ಕೇಳಿದವನಾಗಲಿ, ಅವರನ್ನು ಕಂಡವನಾಗಲಿ ಕೊಲ್ಲಲ್ಪಡುವನೆಂದು ಶ್ರೀರಾಮನು ಕಾಲನೆದುರು ಪಣತೊಟ್ಟಿದ್ದನು (ಉತ್ತರಕಾಂಡ ೧೦೩/ ೧೪). ದುರ್ವಾಸನ ಬಲವಂತಕ್ಕೆ ಮಣಿದು ಲಕ್ಷ್ಮಣನು ಈ ಪಣವನ್ನು ಮುರಿಯಬೇಕಾಯಿತು. ಅದರಿಂದಾಗಿ ಶ್ರೀರಾಮನು ಲಕ್ಷ್ಮಣನನ್ನು ತೊರೆದುಬಿಡಬೇಕಾಗಿಬಂದಿತು. ಲಕ್ಷ್ಮಣನೆಂದರೆ ಶ್ರೀರಾಮನ ಹೊರಬದಿಯ

ಜೀವವೇ ಎನ್ನಿಸಿದ್ದನು. ಹೀಗಾಗಿ ಶ್ರೀರಾಮನಿಗೆ ಬಲು ದುಃಖವಾಯಿತು. ಅವನು ಲಕ್ಷ್ಮಣನನ್ನಗಲಿ ಇರಲಾರದವನಾಗಿದ್ದನು. ಭರತನನ್ನು ಗದ್ದುಗೆಯೇರಿಸಿ ಶ್ರೀರಾಮನು ಲಕ್ಷ್ಮಣನನ್ನು ಹಿಂಬಾಲಿಸಲು ತೀರ್ಮಾನಿಸಿದನು. ಈ ಸಂಗತಿಯಿಂದಾಗಿ ಅಯೋಧ್ಯೆ ದುಃಖದಲ್ಲಿ ಮುಳುಗಿತು. ಈ ತೀರ್ಮಾನ ಕಿವಿಗೆ ಬೀಳುತ್ತಲೂ ಭರತ ಎಚ್ಚರದಪ್ಪಿ ನೆಲಕ್ಕುರುಳಿದನು. ಎಚ್ಚರ ತಿಳಿದೆದ್ದ ಬಳಿಕ ಅವನು ಶ್ರೀರಾಮನಿಗೆಂದನು —

ಸತ್ಯೇನಾಹಂ ಶಪೇ ರಾಜನ್ ಸ್ವರ್ಗಭೋಗೇನ ಚೈವ ಹಿ ।
ನ ಕಾಮಯೇ ಯಥಾ ರಾಜ್ಯಂ ತ್ವಾಂ ವಿನಾ ರಘುನಂದನ ॥ ೬ ॥
ಇಮೌ ಕುಶೀಲವೌ ರಾಜನ್ನಭಿಷಿಂಚ ನರಾಧಿಪ । ೭

"ನೀನಲ್ಲದೆ ನನಗೆ ರಾಜ್ಯ, ಸ್ವರ್ಗಗಳು ಬೇಡವೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಕುಶ-ಲವರಿಗೆ ಪಟ್ಟಾಭಿಷೇಕ ನಡೆಯಲಿ."

## ಭಾಗ : ಐದು

# ಪ್ರತಿಜ್ಞೆಗಳು

### ೧. ಕೈಕೇಯಿಗಿತ್ತ ವರಗಳ ಬಗೆಗೆ ದಶರಥನ ಪ್ರತಿಜ್ಞೆ. ಬಾಲಕಾಂಡ / ೧

ನಾರದನು ವಾಲ್ಮೀಕಿಗೆ ಹೇಳಿದ ರಾಮಕಥೆಯಲ್ಲಿ ಬರುವ 'ಪ್ರತಿಜ್ಞಾಮನುಪಾಲಯನ್......೧೨೪' ಎಂಬ ಈ ಉಲ್ಲೇಖವು, ದಶರಥನು ಕೈಕೇಯಿಗಿತ್ತ ವರಗಳ ಸಂದರ್ಭದ್ದು.

ಅಯೋಧ್ಯಾಕಾಂಡ / ೧೧

ಹಿಂದೆ ತಾನು ಕೈಕೇಯಿಗಿತ್ತ ವರವನ್ನು ಪೂರ್ತಿಗೊಳಿಸುವ ನೈತಿಕ ಹೊಣೆ ಖಂಡಿತವಾಗಿಯೂ ದಶರಥನ ಮೇಲಿತ್ತು. ಆದರೆ ಕೈಕೇಯಿಯು ದಶರಥನಿಗೆ,

ಪ್ರತಿಜ್ಞಾಂ ಪ್ರತಿಜಾನೀಷ್ವ ಯದಿ ತ್ವಂ ಕರ್ತುಮಿಚ್ಛಸಿ ।
ಅಥ ತೇ ವ್ಯಾಹರಿಷ್ಯಾಮಿ ಯಥಾಭಿಪ್ರಾರ್ಥಿತಂ ಮಯಾ ॥ ೩ ॥

"ನನ್ನದೊಂದು ಬಯಕೆಯಿದೆ. ನೀನು ಅದನ್ನು ಪೂರ್ತಿಗೊಳಿಸುವೆನೆಂದು ಪ್ರತಿಜ್ಞೆಯನ್ನು ಮಾಡದ ಹೊರತು ಅದನ್ನು ಕುರಿತು ಹೇಳಲಾರೆ" ಎಂದು ನಿರ್ಧಾರದಿಂದ ಹೇಳುತ್ತಾಳೆ.

ತೇನಾಜಯ್ಯೇನ ಮುಖ್ಯೇನ ರಾಘವೇಣ ಮಹಾತ್ಮನಾ ।
ಶಪೇ ತೇ ಜೀವನಾರ್ಹೇಣ ಬ್ರೂಹಿ ಯನ್ಮನಸೇಪ್ಸಿತಮ್ ॥ ೬ ॥

ಕೈಕೇಯಿಯು ಹೀಗೆನ್ನುತ್ತಲೇ ದಶರಥನು ಶ್ರೀರಾಮನ ಮೇಲೆ ಆಣೆಯಿಟ್ಟು ಅವಳೆದುರು ತನ್ನಿಚ್ಛೆಯನ್ನು ವ್ಯಕ್ತಪಡಿಸಿದನು :

ಯಂ ಮುಹೂರ್ತಮಪಶ್ಯಂಸ್ತು ನ ಜೀವೇ ತಮಹಂ ಧ್ರುವಮ್ ।
ತೇನ ರಾಮೇಣ ಕೈಕೇಯಿ ಶಪೇ ತೇ ವಚನಕ್ರಿಯಾಮ್ ॥ ೭ ॥

"ಶ್ರೀರಾಮನನ್ನು ಅರೆಕ್ಷಣ ಕಾಣದಿದ್ದರೂ ಬದುಕುಳಿಯಲಾರೆ. ಅಂಥವನ ಮೇಲೆ ಆಣೆಯಿಟ್ಟು ನೀನು ಬಯಸಿದುದನ್ನು ಈಡೇರಿಸುವೆ"ನೆಂದು ದಶರಥನು ಪ್ರತಿಜ್ಞೆಯನ್ನು ಮಾಡಿದನು.

ಇಷ್ಟರಿಂದಲೇ ಕೈಕೇಯಿಗೆ ಸಮಾಧಾನವಾಗಲಿಲ್ಲ. ಚಂದ್ರ, ಸೂರ್ಯ ಮೊದಲಾದವರೆಲ್ಲ ಈ ಪ್ರತಿಜ್ಞೆಯನ್ನು ಕೇಳಿಕೊಳ್ಳಲೆಂದು ಕರೆ ನೀಡಿದ ಅವರನ್ನು ಸಾಕ್ಷಿಯಾಗಿರಿಸಿ ಅವಳು ತನ್ನ ಮನದಿಚ್ಛೆಯನ್ನು ಆಡಿತೋರಿಸಿದಳು. ಅವಳು ಕೇಳಿದ ವರಗಳ ಸ್ವರೂಪವನ್ನು ಅರಿತು ದಶರಥ ತುಂಬ ದುಃಖಿತನಾದನು. ಅವಳ ಮಾತು ಕೇಳಿ ಅವನು ಕೆರಳಿ ಕೆಂಡವಾದನು. ಅವನು ಅವಳಿಗೆ ಕಠೋರವಾದ ಮಾತುಗಳನ್ನು ಆಡಹತ್ತಿದನು. ತುಸು ಹೊತ್ತಿನಲ್ಲಿಯೇ ಎಚ್ಚರತಪ್ಪಿ ಬಿದ್ದನು. ಇದಾವುದರಿಂದಲೂ ಕೈಕೇಯಿಯ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ. ಬದಲು ಅವಳು ಅವನೆದುರು ಇನ್ನಷ್ಟು ಕಠೋರವಾದ ಮಾತುಗಳನ್ನು ಆಡಿದಳು.

...ಪ್ರತಿಶ್ರುತ್ಯ ಧರ್ಮೇಣ ನ ಚೇದ್ ದಾಸ್ಯಸಿ ಮೇ ವರಮ್ । ೫೧

"ಧರ್ಮವನ್ನು ಸ್ಮರಿಸಿ ಪ್ರತಿಜ್ಞೆಯನ್ನು ಮಾಡಿಯೂ ನೀನು ವರವನ್ನು ನೀಡದೆ ಹೋದೆಯಾದರೆ ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವೆನು" ಎಂದು ಅವಳು ಬೆದರಿಕೆಯನ್ನು ಒಡ್ಡಿದಳು. ದಶರಥನ ಕಠೋರವಾದ ನುಡಿಗಳತ್ತ ಅಲಕ್ಷ್ಯತೋರಿ ಅವಳು ತನ್ನ ಹಟವನ್ನೇ ಮುಂದುವರಿಸಿದಳು. ಅವಳ ಹಟವನ್ನು ಬಿಡಿಸಲೆಂದು ಅವನು ಅವಳ ಮನವೊಲಿಸಲು ಹೆಣಗಿದನು. ಅವಳ ಕಾಲುಗಳಿಗೂ ಬಿದ್ದನು. ಆದರೂ ಅವಳ ನಿರ್ಧಾರ ಕದಲಲಿಲ್ಲ. ಕಾಮಮೋಹಿತನಾದ ಅವನು ತನ್ನ ಪ್ರತಿಜ್ಞೆಯಿಂದ ಬಂಧಿತನಾದನು.

**ಅಯೋಧ್ಯಾಕಾಂಡ / ೧೨**

ಹಿಂದಿನವರು ಪ್ರತಿಜ್ಞಾಪಾಲನಕ್ಕಾಗಿ ಅದೆಂತಹ ತ್ಯಾಗಗಳನ್ನು ಮಾಡಿದರೆಂಬುದನ್ನು ಅವಳು ದಶರಥನಿಗೆ ಹೇಳುತ್ತಾಳೆ —

ಶೈಬ್ಯಃ ಶ್ಯೇನಕಪೋತೀಯೇ ಸ್ವಮಾಂಸಂ ಪಕ್ಷಿಣೇ ದದೌ ।
ಅಲರ್ಕಶ್ಚಕ್ಷುಷೀ ದತ್ತ್ವಾ ಜಗಾಮ ಗತಿಮುತ್ತಮಾಮ್ ॥ ೪೩ ॥
ಸಾಗರಃ ಸಮಯಂ ಕೃತ್ವಾ ನ ವೇಲಾಮತಿವರ್ತತೇ ।
ಸಮಯಂ ಮಾನೃತಂ ಕಾರ್ಷೀಃ ಪೂರ್ವವೃತ್ತಮನುಸ್ಮರನ್ ॥ ೪೪ ॥

"ಶೈಬ್ಯನು ಪಾರಿವಾಳದ ಜೀವವನ್ನು ಕಾಪಾಡಲೆಂದು ತನ್ನ ದೇಹದ ಮಾಂಸವನ್ನು ನೀಡಿ ತನ್ನ ಪಣವನ್ನು ಪೂರ್ತಿಗೊಳಿಸಿದನು. ಅಲರ್ಕನು ಒಬ್ಬ ಕುರುಡುಬ್ರಾಹ್ಮಣನಿಗೆ ತನ್ನ ಕಣ್ಣುಗಳನ್ನು ದಾನವಾಗಿ ನೀಡಿದನು. ಕಡಲು ತಡಿಯನ್ನು ಮೀರೆನೆಂಬ ತನ್ನ ಪ್ರತಿಜ್ಞೆಯನ್ನು (ಇಂದಿಗೂ) ಪಾಲಿಸುತ್ತಲಿದೆ. ಹಿಂದಿನ ಕಾಲದ ಹಿರಿಯರು ತಮ್ಮ ಪ್ರತಿಜ್ಞೆಗಳು ಸುಳ್ಳಾಗದಿರಲೆಂದು ಏನೆಲ್ಲ ಮಾಡಿದರು (ಎಂಬುದು ಗಮನದಲ್ಲಿರಲಿ.)"

**ಅಯೋಧ್ಯಾಕಾಂಡ / ೧೪**

ವರವನ್ನು ಕೊಡುವೆನೆಂದು ಪ್ರತಿಜ್ಞೆಗೈದು ಕೂಡ ಈಗ ಪಶ್ಚಾತ್ತಾಪಕ್ಕೆ ಈಡಾದ ದಶರಥನನ್ನು ಅವಳು ಹೀಗೆ ಕೆಣಕುತ್ತಾಳೆ —

ಸಮಯಂ ಚ ಮಮಾರ್ಯೇಮಂ ಯದಿ ತ್ವಂ ನ ಕರಿಷ್ಯಸಿ ।
ಅಗ್ರತಸ್ತೇ ಪರಿತ್ಯಕ್ತಾ ಪರಿತ್ಯಕ್ಷ್ಯಾಮಿ ಜೀವಿತಮ್ ॥ ೧೦ ॥

"ಎಲೈ ಆರ್ಯನೆ ! ನೀನು ನನಗಾಗಿ ಕೈಕೊಂಡ ಪ್ರತಿಜ್ಞೆಯನ್ನು ಪಾಲಿಸದಿದ್ದರೆ ಅಲಕ್ಷ್ಯಕ್ಕೀಡಾದ ನಾನು ನಿನ್ನೆದುರು ಜೀವ ಬಿಡುವೆ" ಎಂದು ಮತ್ತೆ ನಿರ್ಧಾರದಿಂದ ಹೇಳಿದಳು. ಹೀಗೆ ಕೈಕೇಯಿ ಪ್ರತಿಜ್ಞೆಯನ್ನು ಪೂರ್ತಿಗೊಳಿಸುವಂತೆ ದಶರಥನ ಮೇಲೆ ಒತ್ತಾಯ ಹೇರಿದಳು. ಅವನು ಅಸಹಾಯನಾದನು.

**ಅಯೋಧ್ಯಾಕಾಂಡ / ೩೮**

ಸೀತೆ, ಲಕ್ಷ್ಮಣರು ಶ್ರೀರಾಮನೊಂದಿಗೆ ಕಾಡಿಗೆ ಹೊರಟು ನಿಂತರು. ಸೀತೆ ವಸ್ತ್ರ ಒಡವೆಗಳನ್ನು ತೆಗೆದಿರಿಸಿ ನಾರುಬಟ್ಟೆಯನ್ನು ತೊಡಬೇಕೆಂದು ಕೈಕೇಯಿ ಹಟಹಿಡಿದಳು. ಆಗ ದಶರಥನ ಕೋಪ ಕೈಮೀರಿತು. ಸೀತೆ ಕಾಡಿಗೆ ಹೋಗುವುದು ತನ್ನ ವರಕ್ಕೆ ಸಂಬಂಧಿಸಿದುದಲ್ಲ ಎಂದವನು ಖಡಾಖಂಡಿತವಾಗಿ ಕೈಕೇಯಿಗೆ ಹೇಳಿಬಿಟ್ಟನು.

...ನೇಯಂ ಪ್ರತಿಜ್ಞಾ ಮಮ ದತ್ತ ಪೂರ್ವಾ । ೬

"ತಾನು ಹಿಂದೆ ಹೀಗೆಂದು ಪ್ರತಿಜ್ಞೆಯನ್ನು ಮಾಡಲಿಲ್ಲ" ಎಂಬುದನ್ನು ಅವಳ ಗಮನಕ್ಕೆ ತಂದುಕೊಟ್ಟನು. ಅವಳಿಗೆ ಹೀಗೆಂದನು —

ಯಥಾಸುಖಂ ಗಚ್ಛತು ರಾಜಪುತ್ರೀ ವನಂ ಸಮಗ್ರಾ ಸಹ ಸರ್ವರತ್ನೈಃ । ೬

"ಸೀತೆ ತಾನು ಬಯಸಿದಂತೆ ಒಡವೆಗಳನ್ನು ತೊಟ್ಟು ಹೋಗಲಿ."

ಕೈಕೇಯಿ ಕೇಳಿ ಪಡೆದ ವರಗಳು ಕೇವಲ ಶ್ರೀರಾಮನಿಗೆ ಸಂಬಂಧಿಸಿದವುಗಳಾಗಿದ್ದು ಸೀತೆ ಆ ಕಟ್ಟುಪಾಡುಗಳಿಗೆ ಒಳಗಾದವಳಲ್ಲ, ಎಂದು ವಸಿಷ್ಠರೂ ಹೇಳಿದ್ದಾರೆ.

ಅಜೀವನಾರ್ಹೇಣ ಮಯಾ ನೃಶಂಸಾ ಕೃತಾ ಪ್ರತಿಜ್ಞಾ ನಿಯಮೇನ ತಾವತ್ ।
...ತನ್ಮಾ ದಹೇದ್ ವೇಣುಮಿವಾತ್ಮಪುಷ್ಪಮ್ ॥ ೭ ॥

ಪ್ರತಿಜ್ಞೆಯನ್ನು ಕೈಕೊಂಡ ಬಗೆಗಿನ ಪಶ್ಚಾತ್ತಾಪವು, 'ನಾನು ಬದುಕಿರಲು ಅರ್ಹನಲ್ಲ. ವಚನಬದ್ಧನಾಗಿ ಜೀವವನ್ನೇ ಕಿತ್ತುಕೊಳ್ಳುವ ಈ ಪ್ರತಿಜ್ಞೆಯನ್ನು ಕೈಕೊಂಡೆ... ಬಿದಿರ ಹೂವು ಅದರ ಮೆಳೆಯನ್ನೇ ಒಣಗಿಸಿ ಬಿಡುವಂತೆ ನನ್ನ ಪ್ರತಿಜ್ಞೆಯು ನನ್ನನ್ನೇ ಸುಟ್ಟು ಬೂದಿಯನ್ನಾಗಿ ಮಾಡುತ್ತಿದೆ' ಎಂಬ ಮಾತುಗಳಲ್ಲಿ ವ್ಯಕ್ತ ಗೊಂಡಿದೆ. ಸುಮಂತನೂ ಪ್ರತಿಜ್ಞೆಗೈದ ಕಾರಣ ದಶರಥ ತುಂಬ ಕಳವಳಕ್ಕೀಡಾದನೆಂದು ಹೇಳಲಾಗಿದೆ. (ಅಯೋಧ್ಯಾ. ೩೬ / ೧)

ದಶರಥನು ಕೈಕೇಯಿಗೆ ತಾನಿತ್ತ ವರಗಳ ಮಿತಿಯನ್ನು ಕುರಿತು ಹೇಳುತ್ತಾನೆ. ಅವಳ ನಡತೆಯನ್ನು ಸುಡುಸುಡುವ ಮಾತುಗಳಲ್ಲಿ ನಿಂದಿಸಿದ್ದಾನೆ. ಅವನೆಂದುದು -

ಪ್ರತಿಜ್ಞಾತಂ ಮಯಾ ತಾವತ್ ತ್ವಯೋಕ್ತಂ ದೇವಿ ಶೃಣ್ವತಾ । ೧೧

(ಶ್ರೀರಾಮನು ಯುವರಾಜ್ಯಪಟ್ಟಾಭಿಷೇಕಕ್ಕಾಗಿ ಇಲ್ಲಿಗೆ ಬರುವಾಗ) "ಆಗ ನೀನಾಡಿದುದರ ಮಟ್ಟಿಗೆ ಮಾತ್ರ ನಾನು ಪ್ರತಿಜ್ಞೆಗೈದಿದ್ದೇನೆ. ಇದರಾಚೆಗೆ ನೀನು ಸೀತೆಗೆ ನಾರುಬಟ್ಟೆಗಳನ್ನುಡಹೇಳಿದೆಯಾದರೆ ನೀನು ನರಕಕ್ಕೆ ಹೋಗುವಿ !"

ಅಯೋಧ್ಯಾಕಾಂಡ / ೫೮

ಸುಮಂತ್ರನು ಶ್ರೀರಾಮ, ಸೀತೆ, ಲಕ್ಷ್ಮಣರನ್ನು ಕಾಡಿಗೆ ತಲುಪಿಸಿ ಹಿಂತಿರುಗಿ ಬಂದನು. ಶ್ರೀರಾಮನ ಸಂದೇಶವನ್ನು ಆಲಿಸಲು ದಶರಥ ತುಂಬ ಕಾತರಿಸಿದ್ದನು. ಸುಮಂತ್ರನು ಅವನಿಗೆ ಅದನ್ನು ಅರುಹಿದನು. ಲಕ್ಷ್ಮಣನ ಕೋಪ ಹಾಗೂ ಆ ಮಾತುಗಳಲ್ಲಿ ದಶರಥನ ಪ್ರತಿಜ್ಞೆಯನ್ನು ಕುರಿತಾದ ಅಂಶವನ್ನೂ ಅವನ ಕಿವಿಗೆ ಹಾಕುತ್ತಾನೆ. ಅವನಂದುದು - "ಮಹಾರಾಜರು ಯಾವ ಕಾರಣದಿಂದಾಗಿ ಶ್ರೀರಾಮನನ್ನು ನಾಡಿನಿಂದ ಹೊರಕ್ಕಟ್ಟಿದರು ?"

ರಾಜ್ಞಾ ತು ಖಲು ಕೈಕೇಯ್ಯಾ ಲಘುಚಾಶ್ರುತ್ಯ ಶಾಸನಮ್ ।
ಕೃತಂ ಕಾರ್ಯಮಕಾರ್ಯಂ ವಾ ವಯಂ ಯೇನಾಭಿಪೀಡಿತಾಃ ॥ ೨೭ ॥

ಮಹಾರಾಜರು ಕೈಕೇಯಿಯ ಮಾತು ಕೇಳಿ ಅವಳಿಗೆ ಕೊಡಮಾಡಿದ ವರಗಳನ್ನು ಪೂರ್ತಿಗೊಳಿಸಲು ಪ್ರತಿಜ್ಞೆಯನ್ನು ಕೈಕೊಂಡರು. ಅವರ ಈ ಕೃತ್ಯ ಸರಿಯೋ, ತಪ್ಪೋ ಏನಿದ್ದರೂ ಅದರಿಂದಾಗಿ ನಮಗಂತೂ ತೊಂದರೆಯಾಗುತ್ತಿದೆ.

ಕೈಕೇಯಿಯು ಹಿಂದಕ್ಕೆ ತಾನು ಕೇಳಿದ ವರಗಳನ್ನು ಈಗ ಪೂರ್ತಿಗೊಳಿಸುವಂತೆ ದಶರಥನಿಂದ ಪ್ರತಿಜ್ಞೆ ಮಾಡಿಸಿದರೂ, ಅದನ್ನಾಲಿಸಲು ದೇವತೆಗಳಿಗೆ ಕರೆ ನೀಡಿದ್ದರೂ ಅದು ಫಲ ನೀಡಿದುದು ಶ್ರೀರಾಮನು ಕಾಡಿಗೆ ಹೋದನೆಂದೇ. ವರಗಳನ್ನು ಪಡೆಯುವ ಇಲ್ಲವೆ ಪ್ರತಿಜ್ಞೆಯನ್ನು ಕೈಕೊಳ್ಳುವ, ಅದನ್ನು ಪೂರ್ತಿ ಗೊಳಿಸುವ ಶ್ರೇಯಸ್ಸು ಕೈಕೇಯಿಗಾಗಲಿ ಇಲ್ಲವೆ ದಶರಥನಿಗಾಗಲಿ ಸಲ್ಲಲಾಗದ ಸಂಗತಿಗಳು. ವರವಿತ್ತು ಹಾಗೂ ಪ್ರತಿಜ್ಞೆಗೈದು ಕೂಡ ಶ್ರೀರಾಮನು ಕಾಡಿಗೆ ಹೋಗಲು ನಿರಾಕರಿಸಿ ರಾಜ್ಯದ ಮೇಲಿನ ತನ್ನ ಹಕ್ಕನ್ನು ಬಿಟ್ಟುಕೊಡಲು ಒಪ್ಪದಿದ್ದರೆ ದಶರಥನ ಈ ಪ್ರತಿಜ್ಞೆ ಅದೆಂದಿಗೂ ಸಫಲವಾಗುತ್ತಿರಲೇಯಿಲ್ಲ.

## ೨. ದಂಡಕಾರಣ್ಯದಲ್ಲಿ ಋಷಿಗಳನ್ನು ಕಾಪಾಡುವ ಬಗೆಗೆ ಶ್ರೀರಾಮನ ಪ್ರತಿಜ್ಞೆ

ಬಾಲಕಾಂಡ / ೧

ದಂಡಕಾರಣ್ಯದಲ್ಲಿ ತಪಸ್ವಿಗಳಾದ ಮುನಿಗಳನ್ನು ಪೀಡಿಸುವ ರಾಕ್ಷಸರನ್ನು ಕೊಲ್ಲಲೆಂದು ಕೈಕೊಳ್ಳಲಾದ ಪ್ರತಿಜ್ಞೆ ಹೀಗಿತ್ತು —

ಪ್ರತಿಜ್ಞಾತಶ್ಚ ರಾಮೇಣ ವಧಃ ಸಂಯತಿ ರಕ್ಷಸಾಮ್ । ೪೫

ಅರಣ್ಯಕಾಂಡ / ೬

ರಾಕ್ಷಸರು ದಂಡಕಾರಣ್ಯದಲ್ಲಿ ವಾಸವಾಗಿದ್ದ ಮುನಿಗಳನ್ನು ಪೀಡಿಸುತ್ತಿದ್ದರು. ಅವರನ್ನು ತಿಂದುಹಾಕು ತ್ತಿದ್ದರು. ಹೀಗಾಗಿ ಮುನಿಗಳಿಗೆ ಜೀವ ಹಿಡಿದುಕೊಂಡು ಬಾಳುವುದೇ ಕಷ್ಟದ ಸಂಗತಿಯಾಗಿತ್ತು. ಶ್ರೀರಾಮನು

ದಂಡಕಾರಣ್ಯಕ್ಕೆ ಆಗಮಿಸುತ್ತಲೇ ಅವರೆಲ್ಲ ಅವನಿಗೆ ತಮ್ಮ ಪೀಡೆಗಳನ್ನು ಅರುಹಿ ರಕ್ಕಸರಿಂದ ತಮ್ಮನ್ನು ಕಾಪಾಡುವಂತೆ ಬೇಡಿಕೊಂಡರು. ಅದಕ್ಕೆ ಶ್ರೀರಾಮನು ಅವರಿಗೆ ಈ ರೀತಿ ಭರವಸೆ ನೀಡಿದನು —

ತಪಸ್ವಿನಾಂ ರಣೇ ಶತ್ರೂನ್ ಹಂತುಮಿಚ್ಛಾಮಿ ರಾಕ್ಷಸಾನ್ ।
ಪಶ್ಯಂತು ವೀರ್ಯಮೃಷಯಃ ಸಭ್ರಾತುರ್ಮೇ ತಪೋಧನಾಃ ॥ ೨೫ ॥

"ತಪಸ್ವಿಗಳೊಂದಿಗೆ ಹಗೆತನ ಮಾಡುವ ರಕ್ಕಸರನ್ನು ಯುದ್ಧದಲ್ಲಿ ಕೊಂದುಹಾಕುವೆನು. ನನ್ನ ಸೋದರನೊಂದಿಗೆ ನನ್ನ ಕಲಿತನವನ್ನು ಕಂಡೀರಂತೆ."

ಇಲ್ಲಿ ಶ್ರೀರಾಮನ ಖಚಿತವಾದ ಪ್ರತಿಜ್ಞೆ ಇಲ್ಲದಿದ್ದರೂ ಅವನಿತ್ತ ಭರವಸೆ ಅದೇ ಬಗೆಯದು.

ಅರಣ್ಯಕಾಂಡ / ೯

ಶ್ರೀರಾಮನು ರಾಕ್ಷಸರನ್ನು ಕೊಲ್ಲುವುದು ಸೀತೆಗೆ ಸರಿಕಾಣಲಿಲ್ಲ. ಒಂದೆಂದರೆ, ರಾಕ್ಷಸರು ನೇರವಾಗಿ ಅವನನ್ನೇನೂ ಪೀಡಿಸಿರಲಿಲ್ಲ. ಎರಡನೆಯದಾಗಿ, ತಾವು ಮೂವರೂ ಕಾಡಿಗೆ ಬಂದುದು ಒಂದು ವ್ರತಾಚರಣೆಗಾಗಿ. ಹೀಗಾಗಿ ತಮ್ಮನ್ನು ಕಾಪಾಡಿಕೊಳ್ಳುವುದಕ್ಕಾಗಿ ಅಲ್ಲದೆ ಬೇರಾವ ಕಾರಣಕ್ಕೂ ಆಯುಧಗಳನ್ನು ಬಳಸುವುದು ಸರಿಯಲ್ಲದ ಸಂಗತಿಯಾಗಿತ್ತು. ಋಷಿ-ಮುನಿಗಳ ರಕ್ಷಣೆಗಾಗಿ ಆಯುಧಗಳನ್ನೆತ್ತಿಕೊಳ್ಳುವುದು ವ್ರತಸ್ಥರಾದವರ ಕರ್ತವ್ಯವೇ ಆದುದೆಂದು ಶ್ರೀರಾಮನು ಸೀತೆಯನ್ನು ಮನಗಾಣಿಸಲು ಯತ್ನಿಸಿದನು. ಅವನಿತ್ತ ಭರವಸೆಗಳು ಅವಳಿಗೆ ಪ್ರತಿಜ್ಞೆಗಳಾಗಿಯೇ ಕಂಡವು. ಅವಳೆಂದುದು —

ಪ್ರತಿಜ್ಞಾತಸ್ತ್ವಯಾ ವೀರ ದಂಡಕಾರಣ್ಯವಾಸಿನಾಮ್ ।
ಋಷೀಣಾಂ ರಕ್ಷಣಾರ್ಥಾಯ ವಧಃ ಸಂಯತಿ ರಕ್ಷಸಾಮ್ ॥ ೧೦ ॥

"ದಂಡಕಾರಣ್ಯದಲ್ಲಿ ಇರುವ ಋಷಿಗಳನ್ನು ಕಾಪಾಡಲೆಂದು ನೀನು ರಾಕ್ಷಸರನ್ನು ಕೊಲ್ಲಲು ಪ್ರತಿಜ್ಞೆಯನ್ನು ಕೈಕೊಂಡೆ."

ಅರಣ್ಯಕಾಂಡ / ೧೦

ಶ್ರೀರಾಮನು ತನ್ನ ಭರವಸೆಯನ್ನು ಇನ್ನೊಮ್ಮೆ ಉಚ್ಚರಿಸುವಾಗ ಪ್ರತಿಜ್ಞೆ ಪದವನ್ನು ಬಳಸಿದ್ದಾನೆ.

ಋಷೀಣಾಂ ದಂಡಕಾರಣ್ಯೇ ಸಂಶ್ರುತಂ ಜನಕಾತ್ಮಜೇ ।
ಸಂಶ್ರುತ್ಯ ಚ ನ ಶಕ್ಷ್ಯಾಮಿ ಜೀವಮಾನಃ ಪ್ರತಿಶ್ರವಮ್ ॥ ೧೭ ॥
ಮುನೀನಾಮನ್ಯಥಾ ಕರ್ತುಂ ಸತ್ಯಮಿಷ್ಟಂ ಹಿ ಮೇ ಸದಾ ।
ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಮ್ ॥ ೧೮ ॥
ನ ತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ । ೧೯

"ದಂಡಕಾರಣ್ಯದಲ್ಲಿರುವ ಋಷಿಗಳ ಕೋರಿಕೆಯನ್ನು ಮನ್ನಿಸಿ ಅವರನ್ನು ಕಾಪಾಡಲು ಪ್ರತಿಜ್ಞೆಯನ್ನು ಕೈಕೊಂಡೆನು. ನನ್ನಲ್ಲಿ ಜೀವ ಇರುವವರೆಗೆ ಅದನ್ನು ಮುರಿಯೆನು. ಸತ್ಯಪಾಲನೆ ನನಗೆ ಯಾವಾಗಲೂ ಪ್ರಿಯವಾದುದು. ಒಂದು ವೇಳೆ ಜೀವ ಬಿಟ್ಟೇನು, ನಿನ್ನನ್ನು, ಲಕ್ಷ್ಮಣನನ್ನು ಬಿಟ್ಟುಕೊಟ್ಟೇನು, ಆದರೆ ಋಷಿಗಳೆದುರು ಗೈದ ಪ್ರತಿಜ್ಞೆಯನ್ನು ಅದೆಂದಿಗೂ ಬಿಟ್ಟುಕೊಡಲಾರೆನು."

## ೩. ವಾಲಿಯ ವಧೆಗಾಗಿ ಶ್ರೀರಾಮನ ಪ್ರತಿಜ್ಞೆ

ಕಿಷ್ಕಿಂಧಾಕಾಂಡ / ೧

ಸುಗ್ರೀವನ ಮಡದಿಯನ್ನು ಅವನಣ್ಣ ವಾಲಿಯು ಕದ್ದೊಯ್ದಿದ್ದನು. ಶ್ರೀರಾಮನ ಮಡದಿ ಸೀತೆಯನ್ನು ಕದ್ದೊಯ್ದವನು ರಾವಣ. ಹೀಗಾಗಿ ಅವರಿಬ್ಬರೂ ಸಮದುಃಖಿಗಳಾಗಿದ್ದರು. ತಮ್ಮ ಹೆಂಡಂದಿರು ಬಿಡುಗಡೆ ಹೊಂದಲೆಂಬ ತಳಮಳ ಅವರಿಬ್ಬರಲ್ಲೂ ಇತ್ತು. ಹನುಮಂತನ ಮಧ್ಯಸ್ಥಿಕೆಯಿಂದಾಗಿ ಅವರಿಬ್ಬರ ಭೆಟ್ಟಿ ನಡೆಯಿತು. ಆಗ ಅವರಿಬ್ಬರೂ ತಮ್ಮ ಬವಣೆಗಳನ್ನು ತೋಡಿಕೊಂಡು ಒಬ್ಬರಿಗೊಬ್ಬರು ನೆರವಾಗುವ

ಬಗೆಗೆ ಪ್ರತಿಜ್ಞೆಗಳನ್ನು ಮಾಡಿದರು. ಅಗ್ನಿಸಾಕ್ಷಿಯಾಗಿ ಅವರಿಬ್ಬರೂ ಗೆಳೆಯರಾದರು. ತನ್ನ ಮಡದಿ ಹಾಗೂ ರಾಜ್ಯ ಮರಳಿ ತನಗೆ ದಕ್ಕುವಂತೆ ನೆರವಾಗಲು ಸುಗ್ರೀವನು ಶ್ರೀರಾಮನನನ್ನು ಬೇಡಿಕೊಂಡನು. ಹೀಗಾಗಿ ಶ್ರೀರಾಮನು ವಾಲಿಯನ್ನು ಕೊಲ್ಲಲು ಪ್ರತಿಜ್ಞೆಗೈದನು.

ಪ್ರತಿಜ್ಞಾತಂ ಚ ರಾಮೇಣ ತದಾ ವಾಲಿವಧಂ ಪ್ರತಿ । ೬೨

**ಕಿಷ್ಕಿಂಧಾಕಾಂಡ / ೫**

ಸುಗ್ರೀವನು ಶ್ರೀರಾಮನೆದುರು ತನ್ನ ಬವಣೆಯನ್ನು ತೋಡಿಕೊಂಡನು. ಅದಕ್ಕೆ ಶ್ರೀರಾಮ ಭರವಸೆಯನ್ನೀಯುತ್ತ ಹೀಗೆಂದನು —

ವಾಲೀನಂ ತಂ ವಧಿಷ್ಯಾಮಿ ತವ ಭಾರ್ಯಾಪಹಾರಿಣಮ್ ।
ಅಮೋಘಾಃ ಸೂರ್ಯಸಂಕಾಶಾ ಮಮೇಮೇ ನಿಶಿತಾಃ ಶರಾಃ ॥ ೨೫ ॥

"ನಿನ್ನ ಮಡದಿಯನ್ನು ಕದ್ದೊಯ್ದ ವಾಲಿಯನ್ನು (ತಪ್ಪದೆ) ಕೊಲ್ಲುವೆ. ನನ್ನ ಬತ್ತಳಿಕೆಯಲ್ಲಿರುವ ಸೂರ್ಯಕಿರಣಗಳಂತೆ ತೇಜಸ್ವಿನವಾದ ಬಾಣಗಳು ಅದೆಂದಿಗೂ ಹುಸಿಹೋಗವು."

**ಕಿಷ್ಕಿಂಧಾಕಾಂಡ / ೭**

ಶ್ರೀರಾಮನು ಸುಗ್ರೀವನಿಗೆ ಹೀಗೆಂದನು —

ಮಯಾ ಚ ಯದಿದಂ ವಾಕ್ಯಮಭಿಮಾನಾತ್ ಸಮೀರಿತಮ್ ।
ತತ್ತ್ವಯಾ ಹರಿಶಾರ್ದೂಲ ತತ್ತ್ವಮಿತ್ಯುಪಧಾರ್ಯತಾಮ್ ॥ ೨೧ ॥
ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ।
ಏತತ್ತೇ ಪ್ರತಿಜಾನಾಮಿ ಸತ್ಯೇನೈವ ಶಪಾಮ್ಯಹಮ್ ॥ ೨೨ ॥

"ನಾನು ವಾಲಿಯನ್ನು ಕೊಲ್ಲುವೆನೆಂದು ಹೆಮ್ಮೆಯಿಂದ ಹೇಳಿದ್ದುದು ನಿಜವೇ. ನಾನೆಂದಿಗೂ ಸುಳ್ಳಾಡಿದವನಲ್ಲ, ಮುಂದೆಂದಿಗೂ ಆಡೆನು. ನಾನಾಡಿದುದನ್ನು ಪೂರ್ತಿಗೊಳಿಸಲೆಂದು ಪ್ರತಿಜ್ಞೆ ಮಾಡುತ್ತಿದ್ದು ನಿನ್ನಲ್ಲಿ ನಂಬಿಕೆಯನ್ನು ಹುಟ್ಟಿಸಲೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ."

**ಕಿಷ್ಕಿಂಧಾಕಾಂಡ / ೧೪**

ಶ್ರೀರಾಮ ವಾಲಿಯನ್ನು ಕೊಲ್ಲುವೆನೆಂದು ಪ್ರತಿಜ್ಞೆಗೈದಿದ್ದನಷ್ಟೇ, ಸುಗ್ರೀವ ಅದನ್ನವನಿಗೆ ನೆನಪು ಮಾಡಿ ಕೊಡುತ್ತಿದ್ದಾನೆ —

ಪ್ರತಿಜ್ಞಾ ಯಾ ಕೃತಾ ವೀರ ತ್ವಯಾ ವಾಲಿವಧೇ ಪುರಾ । ೭
ಸಫಲಾಂ ಕುರುತಾಂ ಕ್ಷಿಪ್ರಮ್...... । ೭

"ನೀನು ಹಿಂದಕ್ಕೆ ವಾಲಿಯ ವಧೆಗಾಗಿ ಕೈಕೊಂಡ ಪ್ರತಿಜ್ಞೆಯನ್ನು ಕೂಡಲೇ ಪೂರ್ತಿಗೊಳಿಸು" ಎಂದನು. ಅದಕ್ಕೆ ಶ್ರೀರಾಮ, "ವಾಲಿ ನನಗೆ ಕಂಡಾದರೂ ಕಾಣಲಿ, ತತ್ಕ್ಷಣ ಅವನನ್ನು ಕಾಡಿನ ಧೂಳಿನೊಂದಿಗೆ ಒಂದುಗೂಡಿಸಿಬಿಡುವೆ" ಎಂದನು.

ಅನೃತಂ ನೋಕ್ತಪೂರ್ವಂ ಮೇ ಚಿರಂ ಕೃಚ್ಛ್ರೇಽಪಿ ತಿಷ್ಠತಾ ॥ ೧೪ ॥
ಧರ್ಮಲೋಭಪರೀತೇನ ನ ಚ ವಕ್ಷ್ಯೇ ಕಥಂಚನ ।
ಸಫಲಾಂ ಚ ಕರಿಷ್ಯಾಮಿ ಪ್ರತಿಜ್ಞಾಂ ಜಹಿ ಸಂಭ್ರಮಮ್ ॥ ೧೫ ॥

"ಹಲವು ಸಂಕಟಗಳು ಬಂದೆರಗಿದಾಗಲೂ ಹಿಂದೆಂದಿಗೂ ನಾನು ಸುಳ್ಳಾಡಿದವನಲ್ಲ. ನನ್ನಲ್ಲಿ ಧರ್ಮದ ಬಗೆಗೆ ಗೌರವವಿದ್ದ ಕಾರಣ ಮುಂದೆಂದಿಗೂ ಸುಳ್ಳಾಡೆನು. ನಾನು ನನ್ನ ಪ್ರತಿಜ್ಞೆಯನ್ನು ಫಲಕಾರಿಯಾಗಿ ಮಾಡುವವನೇ. ನೀನು ನಿನ್ನ ಮನದಲ್ಲಿರುವ ಹೆದರಿಕೆ ಹಾಗೂ ಗೊಂದಲವನ್ನು ಬಿಟ್ಟುಕೊಡು."

ಕಿಷ್ಕಿಂಧಾಕಾಂಡ / ೧೮

ಪ್ರತಿಜ್ಞಾ ಚ ಮಯಾ ದತ್ತಾ ತದಾ ವಾನರಸಂನಿಧೌ ।
ಪ್ರತಿಜ್ಞಾ ಚ ಕಥಂ ಶಕ್ಯಾ ಮದ್ವಿಧೇನಾನವೇಕ್ಷಿತುಮ್ ॥ ೨೭ ॥

"ಸುಗ್ರೀವನಿಗೆ ಅವನ ಮಡದಿ ಹಾಗೂ ರಾಜ್ಯವನ್ನು ಮರಳಿ ದೊರಕಿಸಿ ಕೊಡುವುದಾಗಿ ವಾನರರೆದುರು ಪಣ ತೊಟ್ಟಿದ್ದೇನೆ. ಅದನ್ನು ಕೈಬಿಡುವುದು ನನ್ನಂಥವನಿಂದ ಹೇಗೆ ಸಾಧ್ಯ ?" ಎಂಬುದಾಗಿ ಶ್ರೀರಾಮನು ವಾಲಿಗೆ ಮರುಪ್ರಶ್ನೆ ಹಾಕುತ್ತಾನೆ.

ಕಿಷ್ಕಿಂಧಾಕಾಂಡ / ೨೦

ವಾಲಿಯ ಕೊಲೆಯಾದ ಬಳಿಕ ತಾರೆ ಗೈದ ವಿಲಾಪದಲ್ಲಿ ಈ ಪ್ರತಿಜ್ಞೆಯ ಉಲ್ಲೇಖವಿದೆ —

ಅನೃಣ್ಯಂ ತು ಗತಂ ತಸ್ಯ ಸುಗ್ರೀವಸ್ಯ ಪ್ರತಿಶ್ರವೇ ॥ ೨೧ ॥

"ಶ್ರೀರಾಮನು ಸುಗ್ರೀವನೆದುರು ನಿಮ್ಮನ್ನು ಕೊಲೆ ಮಾಡುವೆನೆಂದು ಕೈಕೊಂಡ ಪ್ರತಿಜ್ಞೆಯಿಂದ ಈಗ ಬಿಡುಗಡೆ ಹೊಂದಿದನು."

ಕಿಷ್ಕಿಂಧಾಕಾಂಡ / ೨೪

ಶ್ರೀರಾಮನು ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ್ದರಿಂದ ಸುಗ್ರೀವನಿಗೆ ಸಮಾಧಾನವಾಯಿತು. ಅವನು ಹೀಗೆಂದನು —

ಯಥಾ ಪ್ರತಿಜ್ಞಾತಮಿದಂ ನರೇಂದ್ರ ಕೃತಂ ತ್ವಯಾ ದೃಷ್ಟಫಲಂ ಚ ಕರ್ಮ । ೪

ಅವನಂದುದು - "ನರೇಂದ್ರನೇ ! ನೀನು ನಿನ್ನ ಪ್ರತಿಜ್ಞೆಗನುಸರಿಸಿ ಕೆಲಸವನ್ನು ಮಾಡಿ ತೋರಿಸಿರುವೆ."

ಸುಂದರಕಾಂಡ / ೩೫

ಶ್ರೀರಾಮನು ವಾಲಿಯ ವಧೆಗಾಗಿ ಕೈಕೊಂಡ ಪ್ರತಿಜ್ಞೆಯ ಬಗೆಗೆ ಹನುಮಂತ ಸೀತೆಗೆ ಹೇಳುತ್ತಾನೆ :

ಸಮಯಂ ವಾಲಿನಂ ಹಂತುಂ ತವ ಚಾನ್ವೇಷಣಂ ಪ್ರತಿ ॥ ೫೦ ॥

(ಶ್ರೀರಾಮ-ಸುಗ್ರೀವರಲ್ಲಿ ಗೆಳೆತನ ಉಂಟಾದ ಬಳಿಕ) "ಅವನು ವಾಲಿಯನ್ನು ಕೊಲ್ಲಲು ಹಾಗೂ ನಿನ್ನನ್ನು ಕಂಡುಹಿಡಿಯಲು ಪ್ರತಿಜ್ಞೆಯನ್ನು ಮಾಡಿದ್ದಾನೆ."

ಯುದ್ಧಕಾಂಡ / ೧೨೩

ಶ್ರೀರಾಮನು ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಹೊರಟಿದ್ದಾನೆ. ದಾರಿಯಲ್ಲಿ ಋಷ್ಯಮೂಕ ಪರ್ವತ ಕಾಣುತ್ತಲೆ,

ಸಮಯಶ್ಚ ಕೃತಃ ಸೀತೇ ವಧಾರ್ಥಂ ವಾಲಿನೋ ಮಯಾ । ४೦

"ಇಲ್ಲಿ ನಾನು ವಾಲಿಯ ವಧೆಗಾಗಿ ಪ್ರತಿಜ್ಞೆಯನ್ನು ಕೈಗೊಂಡೆ" ಎಂದು ಸೀತೆಗೆ ಹೇಳಿದನು.

## ೪. ವಿಶ್ವಾಮಿತ್ರನ ಇಚ್ಛೆಯನ್ನು ಈಡೇರಿಸಲು ದಶರಥನ ಪ್ರತಿಜ್ಞೆ ಬಾಲಕಾಂಡ / ೧೯

ಸುಬಾಹು ಹಾಗೂ ಮಾರೀಚರೆಂಬ ರಕ್ಕಸರು ವಿಶ್ವಾಮಿತ್ರನ ಯಜ್ಞಕ್ಕೆ ವಿಘ್ನಗಳನ್ನು ತಂದೊಡ್ಡುತ್ತಿದ್ದರು. ಯಜ್ಞಗಳು ಪೂರ್ತಿಯಾಗುತ್ತಿರಲಿಲ್ಲ. ಹೀಗಾಗಿ ವಿಶ್ವಾಮಿತ್ರನು ಶ್ರೀರಾಮನ ನೆರವನ್ನು ಪಡೆಯಲೆಂದು ದಶರಥನಲ್ಲಿಗೆ ಬಂದನು. ರಾಜನು ಅವನನ್ನು ಯಥೋಚಿತವಾಗಿ ಸ್ವಾಗತಿಸಿ ಅವನನ್ನು ತುಂಬ ಹೊಗಳಿದನು.

ಅವನಂಥ ಋಷಿಗಳು ಬರುವುದು ತನ್ನ ಅದೃಷ್ಟವೆಂದೂ, ಬಂದವನು ದೇವತೆಗಳಂತೆ ಪೂಜನೀಯನೆಂದೂ, ಅವನ ಬಯಕೆಯನ್ನು ಖಂಡಿತ ಈಡೇರಿಸಲಾಗುವುದೆಂದೂ ಭರವಸೆಯನ್ನಿತ್ತನು. ಇಲ್ಲಿ ಪ್ರತಿಜ್ಞೆ ಎಂಬ ಪದವನ್ನು ನಿಖರವಾಗಿ ಬಳಸದಿದ್ದರೂ ನೀತಲಾದ ಭರವಸೆ ಪ್ರತಿಜ್ಞೆಗೆ ಸಮನಾದುದು. ವಿಶ್ವಾಮಿತ್ರನೂ ಅದನ್ನು ಹಾಗೆಂದೇ ಬಗೆದಿದ್ದಾನೆ. ಅವನೆಂದುದು —

ಯತ್ ತು ಮೇ ಹೃದ್ಗತಂ ವಾಕ್ಯಂ ತಸ್ಯ ಕಾರ್ಯಸ್ಯ ನಿಶ್ಚಯಮ್ ।
ಕುರುಷ್ವ ರಾಜಶಾರ್ದೂಲ ಭವ ಸತ್ಯಪ್ರತಿಶ್ರವಃ ॥ ೩ ॥

"ನೀನಂದುದು ಸರಿಯೇ. ನನ್ನಿಚ್ಛೆಯನ್ನು ಅರುಹುತ್ತೇನೆ. ಅದನ್ನು ಪೂರ್ತಿಗೊಳಿಸು. ನೀನು ನನ್ನ ಕೆಲಸಕ್ಕಾಗಿ ಮಾಡಿದ ಪ್ರತಿಜ್ಞೆ ನಿಜವಾಗಲಿ."

ಬಾಲಕಾಂಡ / ೨೦

"ರಾಕ್ಷಸರು ಮತ್ತೆ ಮತ್ತೆ ನನ್ನ ಯಜ್ಞಗಳಿಗೆ ಅಡೆತಡೆಗಳನ್ನು ತಂದೊಡ್ಡುತ್ತಲಿದ್ದಾರೆ. ಯಜ್ಞ ಪೂರ್ತಿಗೊಳ್ಳುತ್ತಿಲ್ಲ. ಈ ಅರಿಷ್ಟವನ್ನು ನಿವಾರಿಸಲೆಂದು ನಿನ್ನ ಮಗ ಶ್ರೀರಾಮನನ್ನು ನನಗೊಪ್ಪಿಸು." ವಿಶ್ವಾಮಿತ್ರನ ಈ ಮಾತುಗಳಿಂದ ದಶರಥ ಕಳವಳಗೊಂಡನು. ಎಚ್ಚರದಪ್ಪಿದನು. ರಾಕ್ಷಸರ ಪರಾಕ್ರಮ ಯಮನಂಥದಾದ್ದರಿಂದ ರಾಜ ಹೆದರಿಬಿಟ್ಟನು.

ಬಾಲಂ ಮೇ ತನಯಂ ಬ್ರಹ್ಮನ್ ನೈವ ದಾಸ್ಯಾಮಿ ಪುತ್ರಕಮ್ । ೨॥

ಅವನು ವಿಶ್ವಾಮಿತ್ರನ ಇಚ್ಛೆಯನ್ನು ನಿರಾಕರಿಸಿದನು.

ಬಾಲಕಾಂಡ / ೨೧

ಶ್ರೀರಾಮನ ಬದಲು ತಾನೇ ಹೋಗಿ ರಾಕ್ಷಸರನ್ನು ಸದೆಬಡಿಯಲು ದಶರಥ ಸಿದ್ಧನಾಗಿದ್ದನು. ದಶರಥನ ಮಾತಿನಿಂದ ವಿಶ್ವಾಮಿತ್ರ ಕೆರಳಿಬಿಟ್ಟನು. ಅವನು ಹೀಗೆಂದನು —

ಪೂರ್ವಮರ್ಥಂ ಪ್ರತಿಶ್ರುತ್ಯ ಪ್ರತಿಜ್ಞಾಂ ಹಾತುಮಿಚ್ಛಸಿ ।
ರಾಘವಾಣಾಮಯುಕ್ತೋऽಯಂ ಕುಲಸ್ಯಾಸ್ಯ ವಿಪರ್ಯಯಃ ॥ ೨ ॥
ಯದೀದಂ ತೇ ಕ್ಷಮಂ ರಾಜನ್ ಗಮಿಷ್ಯಾಮಿ ಯಥಾಗತಮ್ ।
ಮಿಥ್ಯಾಪ್ರತಿಜ್ಞಃ ಕಾಕುತ್ಸ್ಥ ಸುಖೀ ಭವ ಸಹೃದ್ವೃತಃ ॥ ೩ ॥

"ನೀನು ನನ್ನಿಚ್ಛೆಯನ್ನು ಈಡೇರಿಸುವುದಾಗಿ ಮೊದಲು ಪ್ರತಿಜ್ಞೆ ಮಾಡಿದೆ. ನನ್ನಿಚ್ಛೆ ಏನೆಂಬುದನ್ನು ಹೇಳಿದ ಬಳಿಕ ಮಾತ್ರ ಅದನ್ನು ಮುರಿಯಲು ಯತ್ನಿಸುತ್ತಿರುವೆ. ನಿನ್ನೀ ನಡತೆ ಕುಲಕ್ಕೆ ಘಾತಕವಾದುದಲ್ಲದೆ ರಘುವಂಶಕ್ಕೆ ಶೋಭಿಸುವಂಥದಲ್ಲ. ಇದೇ ನಿನ್ನ ಕೊನೆಯ ತೀರ್ಮಾನವಾಗಿದ್ದರೆ ಬಂದ ಹಾಗೆ ಮರಳಿ ಹೋಗುವೆ. ಪ್ರತಿಜ್ಞೆಯನ್ನು ಮುರಿದು ನಿನಗೆ ಹಿತದವರೆನ್ನಿಸಿದ ಗೆಳೆಯರೊಂದಿಗೆ ಮೈಮರೆತು ಇರು."

ವಸಿಷ್ಠನಿಗೆ ವಿಶ್ವಾಮಿತ್ರನ ಸಾಮರ್ಥ್ಯ ಚೆನ್ನಾಗಿ ಗೊತ್ತಿತ್ತು. ಅವನ ಕೋಪದ ದಾರುಣ ಪರಿಣಾಮವನ್ನೂ ಅರಿತಿದ್ದನು. ಹೀಗಾಗಿ ಅವನು ದಶರಥನಿಗೆ ತಿಳಿಹೇಳುವ ಧ್ವನಿಯಲ್ಲಿ ಹೀಗೆಂದನು - "ವಿಶ್ವಾಮಿತ್ರ ರಾಕ್ಷಸರನ್ನು ಸದೆಬಡಿಯಲು ಸಮರ್ಥನು. ಅವನೀಗ ವ್ರತಸ್ಥನಾಗಿರುವ ಕಾರಣ ಅವರ ಮೇಲೆ ಶಸ್ತ್ರಗಳನ್ನು ಎತ್ತಲಾರನು. ಅವನಿಲ್ಲಿಗೆ ಬಂದುದು ಇಷ್ಟಕ್ಕಾಗಿ ಮಾತ್ರವಲ್ಲ. ಅವನ ಒಳ ಉದ್ದೇಶ ಬೇರೆಯೇ ಆಗಿದೆ. ಶ್ರೀರಾಮನು ಶಸ್ತ್ರಸಂಪನ್ನನಾಗಲೆಂಬುದು ಅವನಿಚ್ಛೆ.

ತ್ರಿಷು ಲೋಕೇಷು ವಿಖ್ಯಾತೋ ಧರ್ಮಾತ್ಮಾ ಇತಿ ರಾಘವಃ ।
ಸ್ವಧರ್ಮಂ ಪ್ರತಿಪದ್ಯಸ್ವ ನಾಧರ್ಮಂ ವೋಢುಮರ್ಹಸಿ ॥ ೭ ॥
ಪ್ರತಿಶ್ರುತ್ಯ ಕರಿಷ್ಯೇತಿ ಉಕ್ತಂ ವಾಕ್ಯಮಕುರ್ವತಃ ।
ಇಷ್ಟಾಪೂರ್ತವಧೋ ಭೂಯಾತ್ ತಸ್ಮಾತ್ ರಾಮಂ ವಿಸರ್ಜಯ ॥ ೮ ॥

"ನೀನು ಮುನಿಯ ಇಚ್ಛೆಯನ್ನು ಈಡೇರಿಸುವೆನೆಂದು ಪ್ರತಿಜ್ಞೆಗೈದಿರುವೆ. ಮೂರೂ ಲೋಕಗಳಲ್ಲಿ

'ಧರ್ಮಾತ್ಮ'ನೆನ್ನಿಸಿರುವೆ. ಆ ಹೆಸರಿಗೆ ಪೆಟ್ಟಾಗದಂತೆ ನೋಡಿಕೊಳ್ಳಬೇಕು. ಪ್ರತಿಜ್ಞೆಯನ್ನು ಕೈಕೊಂಡು ಅದನ್ನು ಪಾಲಿಸದಿದ್ದರೆ ಯಜ್ಞಗಳನ್ನು ಮಾಡಿ ಗಳಿಸಿದ ಪುಣ್ಯ ಹಾಳಾಗುತ್ತದೆ. ಹೀಗಾಗಿ ಅವನೊಡನೆ ಶ್ರೀರಾಮನನ್ನು ಕಳಿಸುವುದು ಒಳ್ಳೆಯದು."

ವಾಲ್ಮೀಕಿ ರಾಮಾಯಣದಲ್ಲಿ ದಶರಥನು ಕೈಕೊಂಡ ಪ್ರತಿಜ್ಞೆಗಳು ಎರಡು ಮಾತ್ರ—ಹಿಂದಕ್ಕೆ ಕೈಕೇಯಿಗೆ ಕೊಡಮಾಡಿದ ವರಗಳು ಹಾಗೂ ವಿಶ್ವಾಮಿತ್ರನ ಇಚ್ಛೆಯನ್ನು ಈಡೇರಿಸುವ ಸಂದರ್ಭಗಳವು. ಆದರೆ ಇವು ಉಳಿದವರ ಪ್ರತಿಜ್ಞೆಗಳಿಗಿಂತ ತೀರ ಬೇರೆ ತರನಾದವುಗಳು. ಕೆಚ್ಚು ಹಾಗೂ ದೃಢನಿರ್ಧಾರಗಳಿಂದ ವಿಚಾರ ಪೂರ್ವಕವಾಗಿ ಪ್ರತಿಜ್ಞೆಗಳನ್ನು ಉಚ್ಚರಿಸಲಾಗುತ್ತದೆ. ಹೀಗಾಗಿ ಅವುಗಳನ್ನು ಕೈಕೊಂಡವರಿಗೆ ಪಶ್ಚಾತ್ತಾಪವನ್ನು ಹೊಂದುವ ವೇಳೆ ಬಾರದು. ದಶರಥನಿಗಾದರೆ ಅವೆರಡೂ ಪ್ರತಿಜ್ಞೆಗಳ ಫಲವಾಗಿ ಪಶ್ಚಾತ್ತಾಪಪಡುವ ಹೊತ್ತು ಬಂದಿತು. ಕೈಕೇಯಿ ತನ್ನ ಬುದ್ಧಿಚಾತುರ್ಯದಿಂದ ಅವನನ್ನು ಮಾತುಗಳಲ್ಲಿ ಸಿಕ್ಕಿಸಿ ಅವನಿಂದ ಪ್ರತಿಜ್ಞೆಯನ್ನು ಮಾಡಿಸಿದಳು. ಆದರಿಂದಾಗಿ ಅವನು ಅಸಹಾಯಕನಾದನು, ಎಂದೇನೋ ಈ ಸಂದರ್ಭದಲ್ಲಿ ಅವನನ್ನು ಸಮರ್ಥಿಸಿಕೊಳ್ಳಬಹುದು. ಆದರೆ ವಿಶ್ವಾಮಿತ್ರ ಬಯಸಿದ್ದೇನು ? -ಎಂಬುದನ್ನರಿಯದೆ ಅದನ್ನು ಪೂರ್ತಿಗೊಳಿಸುವೆನೆಂದು ಪ್ರತಿಜ್ಞೆ ಮಾಡುವ ಅಗತ್ಯವೇನಿತ್ತು ? ಕೈಕೇಯಿ ಹಾಗೂ ವಿಶ್ವಾಮಿತ್ರರ ಇಚ್ಛೆಗಳನ್ನು, ಅವುಗಳ ಸ್ವರೂಪಗಳನ್ನರಿತ ತರುವಾಯವೇ 'ನನ್ನ ಕೈಲಾದಷ್ಟನ್ನು ಮಾಡುವೆನು' ಎಂದು ನುಡಿದಿದ್ದರೆ ಅವನು ಪಶ್ಚಾತ್ತಾಪಕ್ಕೆ ಗುರಿಯಾಗಬೇಕಿರಲಿಲ್ಲ. ಅವನು ಅಂತಹ ಗಟ್ಟಿತನವನ್ನು ತೋರಿಸಲಿಲ್ಲ. ಎರಡೂ ಪ್ರತಿಜ್ಞೆಗಳನ್ನು ಉಚ್ಚರಿಸುವ ಅವಸರ ಅವನಿಗಾಗಿತ್ತೆಂದು ಕಾಣುತ್ತದೆ. ಕೈಕೇಯಿಯ ವರಗಳನ್ನು ಈಡೇರಿಸ ಲೆಂದು ಪ್ರತಿಜ್ಞೆಗೈಯುವಾಗ ತನ್ನ ಮುದ್ದುಮಗ ಶ್ರೀರಾಮನ ಯುವರಾಜಪಟ್ಟಾಭಿಷೇಕದ ಒಲುಸುಖಕರವಾದ ವಾರ್ತೆಯನ್ನು ತನ್ನ ಮುದ್ದಿನ ಮಡದಿ ಕೈಕೇಯಿಗೆ ಹೇಳುವ ಅವಸರ ಅವನಿಗಾಗಿತ್ತೆಂದು ಕಾಣುತ್ತದೆ. ಇದೇ ರೀತಿಯಾಗಿ ವಿಶ್ವಾಮಿತ್ರನನ್ನು ಕುರಿತಾದ ತುಂಬುಗೌರವಭಾವನೆಯಿಂದಾಗಿ ಅವನಿಚ್ಛೆಯ ಪೂರ್ತಿಗಾಗಿ ಪ್ರತಿಜ್ಞೆ ಮಾಡುವ ಮುನ್ನ ಅದನ್ನರಿತುಕೊಳ್ಳಬೇಕೆಂದು ಅವನಿಗೆ ಅನ್ನಿಸಿರಲಿಕ್ಕಿಲ್ಲ. ಕಾರಣಗಳು ಏನಿದ್ದರೂ ಎರಡೂ ಪ್ರತಿಜ್ಞೆಗಳನ್ನು ಬಹಳಷ್ಟು ವಿಚಾರಪೂರ್ವಕವಾಗಿ ಹಾಗೂ ನಿಶ್ಚಯಬುದ್ಧಿಯಿಂದ ಕೈಕೊಳ್ಳಲಿಲ್ಲ ಎನ್ನುವುದು ಮಾತ್ರ ವಾಸ್ತವ ಸಂಗತಿಯಾಗಿದೆ.

## ೫. ವಿಶ್ವಾಮಿತ್ರನ ಪ್ರತಿಜ್ಞೆ (೧) ಬಾಲಕಾಂಡ / ೧೯

ಶ್ರೀರಾಮನ ಶೂರತನದ ಬಗೆಗೆ ವಿಶ್ವಾಮಿತ್ರನಿಗೆ ಎಳ್ಳಷ್ಟೂ ಸಂದೇಹ ಇರಲಿಲ್ಲ. ಹೀಗಾಗಿಯೇ ರಕ್ಕಸರನ್ನು ಸದೆಬಡಿಯಲೆಂದು ಅವನು ದಶರಥನಿಂದ ಅವನ ನೆರವನ್ನು ಕೇಳಿದನು. ದಶರಥ ಚಿಂತೆಗೀಡಾದುದನ್ನು ಕಂಡು ಅವನೆಂದ —

ಅಹಂ ತೇ ಪ್ರತಿಜಾನಾಮಿ ಹತೌ ತೌ ವಿದ್ಧಿ ರಾಕ್ಷಸೌ ।
ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್ ॥ ೧೪ ॥
ವಸಿಷ್ಠೋಽಪಿ ಮಹಾತೇಜಾ ಯೇ ಚೇಮೇ ತಪಸಿ ಸ್ಥಿತಾಃ । ೧೫

"ಈ ರಕ್ಕಸರಿಬ್ಬರೂ ಶ್ರೀರಾಮನ ಕೈಯಿಂದ ಖಂಡಿತ ಕೊಲ್ಲಲ್ಪಡುವರೆಂದು ನನಗೆ ಗೊತ್ತು. ಅವನ ಕಲಿತನವನ್ನು ಬಲ್ಲೆ. ವಸಿಷ್ಠರಂತಹ ತೇಜಸ್ವಿ ಋಷಿಗಳೂ ಬಲ್ಲರು, ತಪಸ್ವಿಗಳೂ ಬಲ್ಲರು."

## ೬. ವಿಶ್ವಾಮಿತ್ರನ ಪ್ರತಿಜ್ಞೆ (೨) ಬಾಲಕಾಂಡ / ೫೬

ವಸಿಷ್ಠರ ಬ್ರಹ್ಮದಂಡಮಾತ್ರದಿಂದಲೇ ತನ್ನೆಲ್ಲ ಅಸ್ತ್ರಗಳು ಹಾಳಾದುದನ್ನು ಕಂಡು ವಿಶ್ವಾಮಿತ್ರನು ತನ್ನ ಕ್ಷಾತ್ರಬಲವನ್ನು ಧಿಕ್ಕರಿಸಿದನು. ಬ್ರಹ್ಮತೇಜಸ್ಸು ಕ್ಷಾತ್ರತೇಜಸ್ಸಿಗಿಂತ ಶ್ರೇಷ್ಠವೆಂಬುದನ್ನು ಮನಗಂಡನು. ಹೀಗಾಗಿ ಅವನು,

ತಪೋ ಮಹತ್ಸಮಾಸ್ಥಾಸ್ಯೇ ಯದ್ವೈ ಬ್ರಹ್ಮತ್ವಕಾರಣಮ್ ॥ ೨೪ ॥

ಬ್ರಾಹ್ಮಣ್ಯದ ಪ್ರಾಪ್ತಿಗಾಗಿ ಅವನು ದೊಡ್ಡ ತಪಸ್ಸನ್ನಾಚರಿಸಲು ನಿರ್ಧರಿಸಿದನು. ಇಲ್ಲಿ 'ಪ್ರತಿಜ್ಞೆ'ಯೆಂಬ ಪದವನ್ನು ಬಳಸಿರದಿದ್ದರೂ ಈ ಮಾತುಗಳು ಪ್ರತಿಜ್ಞೆಯನ್ನೇ ಹೋಲುತ್ತವೆ.

ಬಾಲಕಾಂಡ / ೬೪

ವಿಶ್ವಾಮಿತ್ರನು ಬ್ರಾಹ್ಮಣ್ಯದ ಪ್ರಾಪ್ತಿಗಾಗಿ ಕಠೋರತಪಸ್ಸನ್ನು ಆರಂಭಿಸಿದನು. ತನ್ನ ತಪಸ್ಸನ್ನು ಕುರಿತು ಅವನೆನ್ನುವುದು —

ತಾವದ್ ಯಾವದ್ಧಿ ಮೇ ಪ್ರಾಪ್ತಂ ಬ್ರಾಹ್ಮಣ್ಯಂ ತಪಸಾರ್ಜಿತಮ್ ।
ಅನುಚ್ಛ್ವಸನ್ನ ಭುಂಜಾನಸ್ತಿಷ್ಠೇಯಂ ಶಾಶ್ವತೀಃ ಸಮಾಃ ॥ ೨೯ ॥
ನ ಹಿ ಮೇ ತಪ್ಯಮಾನಸ್ಯ ಕ್ಷಯಂ ಯಾಸ್ಯಂತಿ ಮೂರ್ತಯಃ ।
ಏವಂ ವರ್ಷಸಹಸ್ರಸ್ಯ ದೀಕ್ಷಾಂ ಸ ಮುನಿಪುಂಗವಃ । ೩೦

ವಿಶ್ವಾಮಿತ್ರನು ತನ್ನ ತಪಸ್ಸನ್ನು ಭಂಗಗೊಳಿಸಲೆಂದು ಬಂದ ರಂಭೆಯನ್ನು ನೋಡಿ ಕೆರಳಿ ಶಪಿಸಿದನು. ಆದರಿಂದಾಗಿ ಅವನ ತಪಸ್ಸು ಕ್ಷೀಣಿಸಿತು. ಅವನು ದುಃಖಿತನಾದನು. ತನ್ನ ಇಂದ್ರಿಯಗಳನ್ನು ಸಂಯಮದಲ್ಲಿ ಇರಿಸಿಕೊಳ್ಳಲು ನಿರ್ಧರಿಸಿದನು. "ಬ್ರಾಹ್ಮಣ್ಯ ದೊರಕುವವರೆಗೂ ನಾನು ತಪಸ್ಸನ್ನು ಮಾಡುವವನೇ. ಅದಕ್ಕಾಗಿ ಅದೆಷ್ಟೇ ವರ್ಷಗಳು ಹಿಡಿಯಲಿ, ಅನ್ನೋದಕ ಹಾಗೂ ಉಸಿರಾಟಗಳಿಲ್ಲದೆ ನಾನಿರುವೆ. ಹೀಗಿದ್ದೂ ನನ್ನ ಅವಯವಗಳು ನಾಶಹೊಂದವು" ಎಂದನು. ಶತಾನಂದನು ವಿಶ್ವಾಮಿತ್ರನ ಈ ಮಾತುಗಳ ಬಗೆಗೆ ಶ್ರೀರಾಮನಿಗೆ ಹೀಗೆಂದನು —

ಚಕಾರಾಪ್ರತಿಮಾಂ ಲೋಕೇ ಪ್ರತಿಜ್ಞಾಂ ರಘುನಂದನ ॥ ೨೦ ॥

"ಪ್ರಪಂಚದಲ್ಲಿ ಈ ಪ್ರತಿಜ್ಞೆ ಅತುಲನೀಯವಾದುದು."

## ೭. ಗಂಗೆಯನ್ನು ಪೃಥ್ವಿಗೆ ತರುವ ಬಗೆಗಿನ ಪ್ರತಿಜ್ಞೆ

ಬಾಲಕಾಂಡ / ೪೪

ಕಪಿಲೆಯ ಕೋಪದಿಂದಾಗಿ ಒಂದೇ ಕಾಲಕ್ಕೆ ಸಗರನ ಅರವತ್ತುಸಾವಿರ ಜನ ಗಂಡುಮಕ್ಕಳು ಸುಟ್ಟು ಬೂದಿಯಾದರು. ಪಿತೃಗಳನ್ನು ಉದ್ಧರಿಸಲು ಗಂಗೆಯನ್ನು ಭೂಮಿಗೆ ಕರೆತರುವುದು ಅಗತ್ಯದ್ದಾಗಿತ್ತು. ಸಗರನ ಮೊಮ್ಮಗನಾದ ಅಂಶುಮಾನ್ ಇವನು ಗಂಗೆಯನ್ನು ಕರೆತರಲು ಪ್ರತಿಜ್ಞೆಯನ್ನು ಕೈಕೊಂಡಿದ್ದನು. ಆದರೆ,

ಗಂಗಾಂ ಪ್ರಾರ್ಥಯತಾ ನೇತುಂ ಪ್ರತಿಜ್ಞಾ ನಾಪವರ್ಜಿತಾ । ೯

ಅವನಿಂದ ಅದನ್ನು ಪೂರ್ತಿಗೊಳಿಸಲು ಆಗಲಿಲ್ಲ.

ಗಂಗೆಯನ್ನು ಭೂಮಿಗೆ ಕರೆತರುವ ಬಗೆಗೆ ಭಗೀರಥನ ಯತ್ನ ಕೈಗೂಡಿದ ಉಲ್ಲೇಖ ಹೀಗಿದೆ —

ಸಾ ತ್ವಯಾ ಸಮತಿಕ್ರಾಂತಾ ಪ್ರತಿಜ್ಞಾ ಪುರುಷರ್ಷಭ । ೧೨

"ಎಲೈ ಪುರುಷಶ್ರೇಷ್ಠನೇ, ನೀನು ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದೆ."

## ೮. ತ್ರಿಶಂಕುನನ್ನು ಸ್ವರ್ಗಕ್ಕೆ ಕಳಿಸಲು ವಿಶ್ವಾಮಿತ್ರನ ಪ್ರತಿಜ್ಞೆ

ಬಾಲಕಾಂಡ / ೬೦

ತ್ರಿಶಂಕುವು ಸದೇಹನಾಗಿ ಹೋಗಲೆಂದು ಯಜ್ಞವನ್ನು ಹೂಡಿದನು. ವಸಿಷ್ಠನು ಯಜ್ಞದ ಪುರೋಹಿತನಾಗಲು ನಿರಾಕರಿಸಿದನು. ಅಲ್ಲದೆ ಶಾಪವಿತ್ತನು. ಆದರಿಂದಾಗಿ ಅವನಿಗೆ ಚಾಂಡಾಲತ್ವ ಬಂದಿತು. ಅವನಿಗೆ ವಿಶ್ವಾಮಿತ್ರನ ಸಹಾನುಭೂತಿ ದೊರಕಿತು. ವಿಶ್ವಾಮಿತ್ರನು ಅವನ ಯಜ್ಞವನ್ನು ಪೂರ್ತಿಗೊಳಿಸಿ ಅವನನ್ನು ಸ್ವರ್ಗಕ್ಕೆ ಕಳಿಸಿದನು. ಇಂದ್ರನು ಅವನನ್ನು ಸ್ವರ್ಗದಲ್ಲಿ ಬರಗೊಡದೆ ಭೂಮಿಗೆ ತಳ್ಳಿದನು. ಆಗ ತ್ರಿಶಂಕುವು ವಿಶ್ವಾಮಿತ್ರನನ್ನು ಉದ್ದೇಶಿಸಿ "ತ್ರಾಹಿ ಮಾಮ್, ತ್ರಾಹಿ ಮಾಮ್" ಎಂದು ಬೇಡಿಕೊಂಡನು. ವಿಶ್ವಾಮಿತ್ರನು ಅವನನ್ನು ಆಕಾಶದಲ್ಲಿ ಹಿಡಿದಿಟ್ಟನು.

ವಿಶ್ವಾಮಿತ್ರನು ಹೊಸ ವಿಶ್ವವನ್ನು ನಿರ್ಮಿಸುತ್ತಲೇ ದೇವತೆಗಳೆಲ್ಲ ಹೆದರಿ ಕಂಗಾಲಾದರು. ಅವರು ಅವನನ್ನು ಭೇಟಿಯಾದರು. ಗುರುವಿನ ಶಾಪದಿಂದಾಗಿ ಚಾಂಡಾಲತ್ವ ಬಂದವನನ್ನು ಹೇಗೆ ಸ್ವರ್ಗದಲ್ಲಿ (ಸದೇಹನಾಗಿ) ಬರಗೊಡಲು ಸಾಧ್ಯವಿಲ್ಲ ಎಂಬುದನ್ನು ಮನಗಾಣಿಸಲು ಯತ್ನಿಸಿದರು. ಆಗ ವಿಶ್ವಾಮಿತ್ರನು ಅವರಿಗೆ ಖಡಾಖಂಡಿತವಾಗಿ ಹೀಗೆಂದನು —

> ಸಶರೀರಸ್ಯ ಭದ್ರಂ ವಸ್ತ್ರಿಶಂಕೋರಸ್ಯ ಭೂಪತೇಃ ।
> ಆರೋಹಣಾಂ ಪ್ರತಿಜ್ಞಾತಂ ನಾನೃತಂ ಕರ್ತುಮುತ್ಸಹೇ ॥ ೨೭ ॥
> ಸ್ವರ್ಗೋಽಸ್ತು ಸಶರೀರಸ್ಯ ತ್ರಿಶಂಕೋರಸ್ಯ ಶಾಶ್ವತಃ । ೨೮

"ತ್ರಿಶಂಕುವನ್ನು ಸದೇಹನಾಗಿ ಸ್ವರ್ಗಕ್ಕೆ ಕಳಿಸುವೆನೆಂಬ ನನ್ನ ಪ್ರತಿಜ್ಞೆಯನ್ನು ಸುಳ್ಳಾಗಲು ಬಿಡಲಾರೆ. ತ್ರಿಶಂಕುವಿಗೆ ಸದಾಕಾಲ ಸ್ವರ್ಗಸುಖ ಸಿಕ್ಕಲೇಬೇಕು."

## ೯. ಸೀತೆಯ ಬಗೆಗೆ ಜನಕನ ಪ್ರತಿಜ್ಞೆ

ಬಾಲಕಾಂಡ / ೬೬

ಅದ್ವಿತೀಯ ಅಂದಗಾತಿಯಾದ ಸೀತೆಗೆ ಸರಿಯಾದ ಗಂಡ ದೊರಕಬೇಕೆನ್ನುವುದು ಜನಕನ ಆಸೆಯಾಗಿತ್ತು. ಹೀಗಾಗಿ ಅವಳು ವೀರ್ಯಶುಲ್ಕಳೆಂದು ಅವನು ಪ್ರತಿಜ್ಞೆಗೈದನು. ಕಲಿತನವನ್ನು ಒರೆಗೆಹಚ್ಚಲೆಂದು ಬಲು ಬಿಕ್ಕಟ್ಟಿನ ಪಣವೊಡ್ಡಿದನು. ಅದನ್ನು ಪೂರ್ತಿಗೊಳಿಸುವವನೊಡನೆ ಸೀತೆಯನ್ನು ಮದುವೆ ಮಾಡಿಕೊಡಲು ನಿರ್ಧರಿಸಿದನು. ಶ್ರೀರಾಮಲಕ್ಷ್ಮಣರೊಡನೆ ಬಂದ ವಿಶ್ವಾಮಿತ್ರನಿಗೆ ಅವನೆಂದುದು —

> ವರಯಾಮಾಸುರಾಗತ್ಯ ರಾಜಾನೋ ಮುನಿಪುಂಗವ ।
> ತೇಷಾಂ ವರಯತಾಂ ಕನ್ಯಾಂ ಸರ್ವೇಷಾಂ ಪೃಥಿವೀಕ್ಷಿತಾಮ್ ॥ ೧೭ ॥
> ವೀರ್ಯಶುಲ್ಕೇತಿ ಭಗವನ್ ನ ದದಾಮಿ ಸುತಾಮಹಮ್ । ೧೭

"ಹಲವರು ಪೃಥ್ವೀಪತಿಗಳು ನನ್ನ ಮಗಳಿಗಾಗಿ ಬೇಡಿಕೆಯನ್ನು ಮುಂದಿಟ್ಟರು. 'ನನ್ನ ಮಗಳು ವೀರ್ಯ ಶುಲ್ಕ'ಳೆಂದು ಅವರಿಗೆ ಹೇಳಿದೆ. ಈವರೆಗೆ ಅವಳನ್ನು ಯಾರಿಗಾದರೂ ಕೊಟ್ಟು ಮದುವೆ ಮಾಡಿಲ್ಲ."

ಬಾಲಕಾಂಡ / ೬೭

ಜನಕನು ವಿಶ್ವಾಮಿತ್ರನಿಗೆ ಹೀಗೆಂದನು —

> ಮಮ ಸತ್ಯಾ ಪ್ರತಿಜ್ಞಾ ಸಾ ವೀರ್ಯಶುಲ್ಕೇತಿ ಕೌಶಿಕ । ೨೩

"ಎಲೈ ಕೌಶಿಕನೆ ! ನನ್ನ ಮಗಳು ವೀರ್ಯಶುಲ್ಕಳೆಂದು ನಾನು ಪ್ರತಿಜ್ಞೆಮಾಡಿದ್ದೇನೆ. ಶ್ರೀರಾಮನು ಶಿವನ ಬಿಲ್ಲನ್ನು ಮುರಿದು ತನ್ನ ಸಾಮರ್ಥ್ಯವನ್ನು ಸಿದ್ಧಪಡಿಸಿದ್ದರಿಂದ ಇಂದು ನನ್ನ ಪ್ರತಿಜ್ಞೆ ಪೂರ್ತಿಗೊಂಡಿತು."

ಬಾಲಕಾಂಡ / ೬೮

ಶ್ರೀರಾಮನು ಸೀತೆಯನ್ನು ತನ್ನ ಮಡದಿಯನ್ನಾಗಿ ಸ್ವೀಕರಿಸಬೇಕೆಂದು ಜನಕನು ದಶರಥನಿಗೆ ದೂತರ ಕೈಲಿ ಸಂದೇಶವನ್ನು ಕಳಿಸಿದನು. ಅವನಂದುದು —

> ಪೂರ್ವಂ ಪ್ರತಿಜ್ಞಾ ವಿದಿತಾ ವೀರ್ಯಶುಲ್ಕಾ ಮಮಾತ್ಮಜಾ । ೭

"ನನ್ನ ಮಗಳು ವೀರ್ಯಶುಲ್ಕಳೆಂಬ ಸಂಗತಿ ನಿಮಗೆ ತಿಳಿದಿರಲು ಸಾಕು. ಶ್ರೀರಾಮನು ಶಿವಧನುಸ್ಸನ್ನು ಮುರಿದು ನಾನೊಡ್ಡಿದ ಪಣವನ್ನು ಗೆದ್ದುಕೊಂಡಿದ್ದಾನೆ. ಹೀಗಾಗಿ ಅವನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಲು ಇಚ್ಛಿಸುತ್ತೇನೆ. ಹೀಗಾಗಿ ನಿಮಗೀ ಕೋರಿಕೆ —

> ಪ್ರತಿಜ್ಞಾಂ ತರ್ತುಮಿಚ್ಛಾಮಿ ತದನುಜ್ಞಾತುಮರ್ಹಸಿ ॥ ೧೦ ॥
> ಪ್ರತಿಜ್ಞಾಂ ಮಮ ರಾಜೇಂದ್ರ ನಿವರ್ತಯಿತುಮರ್ಹಸಿ । ೧೨

"ನೀವು ಬಯಸಿದರೆ ಮಾತ್ರ ನನ್ನಿಚ್ಛೆ ಈಡೇರಲಿದೆ. ಹೀಗಾಗಿ ಒಪ್ಪಿಕೊಳ್ಳಬೇಕು. ನೀವಿಲ್ಲಿಗೆ ಶೀಘ್ರವಾಗಿ ಆಗಮಿಸಿ ನನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಬೇಕು."

## ೧೦. ಪರಶುರಾಮನ ಪ್ರತಿಜ್ಞೆ

**ಬಾಲಕಾಂಡ / ೭೫**

ಶ್ರೀರಾಮ-ಸೀತೆಯರ ಮದುವೆ ನೆರವೇರಿತು. ದಶರಥನು ಜನಕನಿಂದ ಬೀಳ್ಕೊಂಡು ಮಗ-ಸೊಸೆ ಹಾಗೂ ಪಾರುಪತ್ಯದವರೊಡನೆ ಹೊರಟನು. ಆಗಲೆ ಭೃಗುಕುಲದಲ್ಲಿ ಹುಟ್ಟಿದವನಾದ ಪರಶುರಾಮ ವೈಷ್ಣವ ಧನುಸ್ಸನ್ನು ಹಿಡಿದುಕೊಂಡು ಎದುರಾದನು. ಶ್ರೀರಾಮನು ಶಿವಧನುಸ್ಸನ್ನು ಮುರಿದ ಶೂರಕೃತ್ಯದ ಬಗೆಗೆ ಅವನು ಕೇಳಿದ್ದನು. ವೈಷ್ಣವಧನುಸ್ಸು ಕೂಡ ಅಂತಹುದೇ ಆದ ಒಂದು ಅದ್ಭುತವಾದ ಧನುಸ್ಸೆನಿಸಿತ್ತು. ಪರಶುರಾಮನು ಶ್ರೀರಾಮನಿಗೆ ಅವೆರಡೂ ಬಿಲ್ಲುಗಳ ಪೂರ್ವಾಪರಗಳನ್ನು ಹೇಳಿದನು. ಆಮೇಲೆ ಅವನು ತನ್ನ ಬಿಲ್ಲಿಗೆ ಶ್ರೀರಾಮನು ಬಾಣವಿಟ್ಟು ಹೆದೆಯೇರಿಸಿ ತನ್ನ ಕಲಿತನವನ್ನು ಮೆರೆಯಬೇಕೆಂದು ಸವಾಲೆಸೆದನು. ಪರಶುರಾಮನ ಆಗಮನವು ದಶರಥನಿಗೆ ಅರಿಷ್ಟವಾಗಿ ಕಂಡಿತು. ಅವನು ವಿನಯದಿಂದ, ಶ್ರೀರಾಮ ಮುಂತಾದವರಿಗೆ ಅಭಯವನ್ನೀಯಬೇಕೆಂದು ಪರಶುರಾಮನನ್ನು ಕೋರಿದನು. ಕಶ್ಯಪನಿಗೆ ನೆಲವನ್ನು ದಾನವಾಗಿ ಕೊಡುವಾಗ ಅವನು ಹೀಗೆಂದನು —

ಸಹಸ್ರಾಕ್ಷೇ ಪ್ರತಿಜ್ಞಾಯ ಶಸ್ತ್ರಂ ಪ್ರಕ್ಷಿಪ್ತವಾನಸಿ ॥ ೭ ॥

'ಶಸ್ತ್ರಗಳನ್ನು ಬಿಟ್ಟುಕೊಡುವೆನೆಂದು ಇಂದ್ರನೆದುರು ಕೈಕೊಂಡ ಪ್ರತಿಜ್ಞೆಯನ್ನು' ನೆನಪು ಮಾಡಿಕೊಟ್ಟನು.

**ಬಾಲಕಾಂಡ / ೭೬**

ಪರಶುರಾಮ ತನ್ನ ಪ್ರತಿಜ್ಞೆಯನ್ನು ಕುರಿತು ಹೀಗೆನ್ನುತ್ತಾನೆ : "ಕಶ್ಯಪನಿಗೆ ಪೃಥ್ವಿಯನ್ನು ದಾನವಾಗಿ ಕೊಡುವಾಗ ನಾನು ಅವನ ರಾಜ್ಯದಲ್ಲಿ ವಾಸಿಸಕೂಡದೆಂದು ಕಟ್ಟಪ್ಪಣೆ ಮಾಡಿದ್ದನು. ನಾನು ಅದನ್ನೊಪ್ಪಿದೆ. (ಅಂದಿನಿಂದ) ಇರುಳು ಹೊತ್ತು ನಾನು ಪೃಥ್ವಿಯ ಮೇಲೆ ಉಳಿದುಕೊಳ್ಳುತ್ತಿಲ್ಲ. ಏಕೆಂದರೆ,

ತದಾಪ್ರಭೃತಿ ಕಾಕುತ್ಸ್ಥ ಕೃತಾ ಮೇ ಕಾಶ್ಯಪಸ್ಯ ಹ । ೧೪

"(ಇರುಳಲ್ಲಿ ಪೃಥ್ವಿಯ ಮೇಲೆ ವಾಸಿಸದ) ನನ್ನ ಪ್ರತಿಜ್ಞೆ ಎಲ್ಲರಿಗೂ ಗೊತ್ತು."

## ೧೧. ಕಾಡಿಗೆ ಹೋಗುವ ಬಗೆಗೆ ಶ್ರೀರಾಮನ ಪ್ರತಿಜ್ಞೆ

**ಅಯೋಧ್ಯಾಕಾಂಡ / ೧೮**

ಶ್ರೀರಾಮ ದಶರಥನ ಅರಮನೆಗೆ ಬಂದನು. ದಶರಥನ ಶೋಕಾಕುಲ ಹಾಗೂ ದಯನೀಯ ಅವಸ್ಥೆಯನ್ನು ಕಂಡನು. ಅವನಿಗೆ ಕಾರಣ ತಿಳಿದಿರಲಿಲ್ಲ. ಬಲು ಕೆಡಕೆನಿಸಿತು. ಮಹಾರಾಜರಿಗೆ ಏನಾಗಿದೆಯೆಂಬುದನ್ನು ಸ್ಫುಟವಾಗಿ ತನಗೆ ಹೇಳೆಂದು ಕೈಕೇಯಿಯನ್ನು ಕೇಳಿದನು. ಆಗ ಅವಳು ದಶರಥನು ನೀಡಲು ಹೊರಟ ವರಗಳು ಹಾಗೂ ಅವುಗಳನ್ನು ಪಾಲಿಸುವ ಬಗೆಗಿನ ಪ್ರತಿಜ್ಞೆಗಳನ್ನು ಕುರಿತು ಅವನಿಗೆ ಹೇಳಿದಳು. ಮಹಾರಾಜರ ಪ್ರತಿಜ್ಞೆಯನ್ನು ಪೂರ್ತಿಗೊಳಿಸುವ ಹೊಣೆ ಅವನದೆಂದಳು. ಅದಕ್ಕೆ ಶ್ರೀರಾಮ ಅವಳಿಗೆ ಹೀಗೆಂದನು —

ತದ್ ಬ್ರೂಹಿ ವಚನಂ ದೇವಿ ರಾಜ್ಞೋ ಯದಭಿಕಾಂಕ್ಷಿತಮ್ ।
ಕರಿಷ್ಯೇ ಪ್ರತಿಜಾನೇ ಚ ರಾಮೋ ದ್ವಿರ್ನಾಭಿಭಾಷತೇ ॥ ೩೦ ॥

"ಮಹಾರಾಜರ ಇಚ್ಛೆ ಏನೆಂಬುದನ್ನು ಹೇಳು. ಅದೇನಿದ್ದರೂ ಅದನ್ನು ಪೂರ್ತಿಗೊಳಿಸುವ ಹೊಣೆ ನನ್ನದು."

**ಅಯೋಧ್ಯಾಕಾಂಡ / ೧೯**

ತಾನು ಕೇಳಿದ ವರಗಳು, ಅವುಗಳನ್ನು ನೀಡುವಲ್ಲಿ ದಶರಥ ಕೈಕೊಂಡ ಪ್ರತಿಜ್ಞೆಗಳ ಬಗೆಗೆ ಕೈಕೇಯಿಯು ಶ್ರೀರಾಮನಿಗೆ ಹೇಳಿ ತಡಮಾಡದೆ ಅವುಗಳನ್ನು ಪಾಲಿಸೆಂದಳು. ತನ್ನ ಬಲತಾಯಿಯ ಮಾತು ಕಿವಿಗೆ ಬೀಳುತ್ತಲೇ ಶ್ರೀರಾಮನೆಂದ —

ಏವಮಸ್ತು ಗಮಿಷ್ಯಾಮಿ ವನಂ ವಸ್ತುಮಹಂ ತ್ವಿತಃ ।
ಜಯತ್ರೀರಧರೋ ರಾಜ್ಞಃ ಪ್ರತಿಜ್ಞಾಮನುಪಾಲಯನ್ ॥ ೨ ॥

**ಅಯೋಧ್ಯಾಕಾಂಡ / ೨೧**

ಶ್ರೀರಾಮನು, "ಆಗಲಿ, ಮಹಾರಾಜರ ಇಚ್ಛೆಯನ್ನು ಪೂರ್ತಿಗೊಳಿಸಲೆಂದು ಜಡೆ ಬಿಟ್ಟು, ನಾರುಬಟ್ಟೆ ತೊಟ್ಟು ಕಾಡಿಗೆ ಹೋಗುವೆನು" ಎಂದನು. ಅವನ ಈ ಮಾತೆಂದರೆ ಒಂದು ಬಗೆಯ ಪ್ರತಿಜ್ಞೆಯೇ ಆಗಿದೆ.

ಲಕ್ಷ್ಮಣನೊಡನೆ ಮಾತನಾಡುತ್ತ ಶ್ರೀರಾಮನು ಈ ಪ್ರತಿಜ್ಞೆಯ ಬಗೆಗೆ ಹೀಗೆನ್ನುತ್ತಾನೆ —

ಸಂಶ್ರುತ್ಯ ಚ ಪಿತುರ್ವಾಕ್ಯಂ ಮಾತುರ್ವಾ ಬ್ರಾಹ್ಮಣಸ್ಯ ವಾ ।
ನ ಕರ್ತವ್ಯಂ ವೃಥಾ ವೀರ ಧರ್ಮಮಾಶ್ರಿತ್ಯ ತಿಷ್ಠತಾ ॥ ೪೨ ॥

"ಧರ್ಮದ ಬಗೆಗೆ ಗೌರವ ಇರುವವನು ತಾಯಿ, ತಂದೆ ಹಾಗೂ ಬ್ರಾಹ್ಮಣರ ಅಪ್ಪಣೆಯನ್ನು ಪಾಲಿಸುವೆನೆಂದು ಪ್ರತಿಜ್ಞೆಗೈದು ಅದು ಸುಳ್ಳೆನಿಸುವಂತೆ ನಡೆದುಕೊಳ್ಳುವುದು ಸರಿಯಲ್ಲ. ರಾಜನು (ತಂದೆಯು) ಮಾಡಿದ ಅಪ್ಪಣೆ ಕೋಪ, ಸಂತೋಷ ಇಲ್ಲವೆ ಕಾಮದಿಂದ ಪ್ರೇರಿತಗೊಂಡುದಾದರೂ ಅದನ್ನು ಪಾಲಿಸುವುದು ಮಗನ ಧರ್ಮವೆನ್ನಿಸಿದೆ. ನಾನು (ಇದೇ ಭಾವನೆಯಿಂದಲೇ) ತಂದೆಯ ಅಪ್ಪಣೆಯನ್ನು ಪಾಲಿಸಲಿದ್ದೇನೆ."

ನ ತೇನ ಶಕ್ನೋಮಿ ಪಿತುಃ ಪ್ರತಿಜ್ಞಾಮಿಮಾಂ ನ ಕರ್ತುಂ ಸಕಲಾಂ ಯಥಾವತ್ । ೬೦

"ಹೀಗಾಗಿ ತಂದೆಯ ಅಪ್ಪಣೆಯನ್ನು ಸರಿಯಾಗಿ ಹಾಗೂ ಇಡಿಯಾಗಿ ಪಾಲಿಸುವುದರಿಂದ ವಿಚಲಿತನಾಗಲಾರೆ."

**ಅಯೋಧ್ಯಾಕಾಂಡ / ೨೬**

ದಶರಥನು ಕೈಕೇಯಿಗಿತ್ತ ವರಗಳ ಬಗೆಗೆ ಶ್ರೀರಾಮನು ಸೀತೆಗೆ ಹೇಳುತ್ತಾನೆ. ಕಾಡಿಗೆ ಹೋಗುವ ತನ್ನ ನಿರ್ಧಾರವನ್ನೂ ಅವಳಿಗೆ ಹೇಳುತ್ತಾನೆ —

ಅಹಂ ಚಾಪಿ ಪ್ರತಿಜ್ಞಾಂ ತಾಂ ಗುರೋಃ ಸಮನುಪಾಲಯನ್ ।
ವನಮದ್ಯೈವ ಯಾಸ್ಯಾಮಿ ಸ್ಥಿರೀಭವ ಮನಸ್ವಿನಿ ॥ ೨೮ ॥

"ಏ ಮನಸ್ವಿನಿಯೇ ! ತಂದೆಯ ಅಪ್ಪಣೆಯನ್ನು ಪಾಲಿಸಲೆಂದು ನಾನಿಂದು ಕಾಡಿಗೆ ಹೊರಟಿದ್ದೇನೆ. ಮನಸ್ಸು ಗಟ್ಟಿಮಾಡಿಕೊಂಡು (ನೀನಿಲ್ಲಿಯೇ) ಇರು."

**ಅಯೋಧ್ಯಾಕಾಂಡ / ೩೪**

ಕಾಡಿಗೆ ಹೋಗುವ ಮುನ್ನ ದಶರಥನಿಂದ ಬೀಳ್ಕೊಡಲೆಂದು ಬಂದಾಗ ಶ್ರೀರಾಮ ತನ್ನ ಪ್ರತಿಜ್ಞೆಯನ್ನು ಕುರಿತು ಉಲ್ಲೇಖಿಸುತ್ತಾನೆ. ಅವನು ದಶರಥನಿಗೆ ಹೀಗೆನ್ನುತ್ತಾನೆ —

ನವ ಪಂಚ ಚ ವರ್ಷಾಣಿ ವನವಾಸೇ ವಿಹೃತ್ಯ ತೇ ।
ಪುನಃ ಪಾದೌ ಗ್ರಹೀಷ್ಯಾಮಿ ಪ್ರತಿಜ್ಞಾಂತೇ ನರಾಧಿಪ ॥ ೨೯ ॥

"ಓ ನರೇಂದ್ರನೇ ! ಹದಿನಾಲ್ಕು ವರ್ಷಗಳ ಕಾಲ ಕಾಡಿನಲ್ಲಿ ಕಳೆವ ನನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ ತರುವಾಯ ನಿಮ್ಮ ಪಾದಯುಗ್ಮಗಳನ್ನು ನಮಸ್ಕರಿಸಲೆಂದು ಹಿಂತಿರುಗಿ ಬರುವೆನು."

....ಸತ್ಯಂ ವ್ರತಮಸ್ತು ತೇ ತಯಾ ॥ ೫೮ ॥

"ನನಗೆ ಯಾವುದೇ ಬಗೆಯ ಆಸೆಯಿಲ್ಲ. ನಾನು ಅದಾವುದೇ ಬಗೆಯ ಉಪಭೋಗಗಳನ್ನು ಸ್ವೀಕರಿಸಲಾರೆ. ನಿಮ್ಮ ಪ್ರತಿಜ್ಞೆ ಪೂರ್ತಿಯಾಗಲೆಂಬ ಒಂದೇ ಒಂದು ಆಸೆ ನನ್ನದು" ಎಂದೂ ಅವನೆಂದನು.

**ಅಯೋಧ್ಯಾಕಾಂಡ / ೪೫**

ಶ್ರೀರಾಮನು ಕಾಡಿಗೆ ಹೊರಟನು. ಪ್ರಜೆಗಳು ಅವನನ್ನು ಹಿಂಬಾಲಿಸಿದರು. ಹಿಂತಿರುಗುವಂತೆ ಬೇಡಿಕೊಳ್ಳ ಹತ್ತಿದರು. ಆದರೆ ಅವನು ಅವರ ಮಾತುಗಳತ್ತ ಗಮನ ನೀಡದೆ ಮುಂದಕ್ಕೆ ಹೆಜ್ಜೆಯಿಕ್ಕುತ್ತಲಿದ್ದನು. ಅದಕ್ಕೆ ಕಾರಣ —

ಕುರ್ವಾಣಾಃ ಪಿತರಂ ಸತ್ಯಂ ...... ॥ ೪ ॥

ಎಂಬುದು. ಅವನು ತಂದೆಯ ಪ್ರತಿಜ್ಞೆಯನ್ನು (ಸತ್ಯಂ ಈ ಪದವನ್ನು ಪ್ರತಿಜ್ಞೆ ಎಂಬರ್ಥದಲ್ಲಿ ಬಳಸಲಾಗಿದೆ) ಪಾಲಿಸಬಯಸಿದ್ದನು.

**ಅಯೋಧ್ಯಾಕಾಂಡ / ೫೫**

ಯಮುನೆಯನ್ನು ದಾಟಲು ಅನುಕೂಲವಾಗಲೆಂದು ಸೀತೆ ಹರಕೆಹೊತ್ತಳು. ಅದರಲ್ಲಿ ಪ್ರತಿಜ್ಞೆಯ ಉಲ್ಲೇಖ ಹೀಗಿದೆ —

ಸ್ವಸ್ತಿ ದೇವಿ ತರಾಮಿ ತ್ವಾಂ ಪಾರಯೇನ್ಮೇ ಪತಿರ್ವ್ರತಮ್ ॥ ೧೯ ॥

"ನನ್ನ ಗಂಡ ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಲು ಇಚ್ಛಿಸಿದ್ದಾನೆ. ಹೀಗಾಗಿ ನಿನ್ನನ್ನು ದಾಟುವಾಗ ನಮ್ಮನ್ನು ಕಾಪಾಡು."

**ಅಯೋಧ್ಯಾಕಾಂಡ / ೮೮**

ಶ್ರೀರಾಮನನ್ನು ಕಾಣಲೆಂದು ಭರತ ಕಾಡಿಗೆ ಹೊರಟನು. ದಾರಿಯಲ್ಲಿ ಬೇಡರ ರಾಜ (ನಿಷಾದ) ಗುಹ ಎಂಬವನಲ್ಲಿ ಕೆಲಕಾಲ ಉಳಿದುಕೊಂಡನು. ಅಲ್ಲಿ ಶ್ರೀರಾಮನ ಹುಲ್ಲುಹಾಸಿಗೆ ಕಂಡು ಅವನಿಗೆ ದುಃಖವನ್ನು ತಡೆದುಕೊಳ್ಳದಂತಾಯಿತು. ಶ್ರೀರಾಮನ ವನವಾಸ ಸಾಗಿರುವಷ್ಟು ಕಾಲ ತಾನೂ ಹುಲ್ಲು ಹಾಸಿಗೆಯ ಮೇಲೆ ಮಲಗಿಕೊಳ್ಳಲು ಅವನು ನಿರ್ಧರಿಸಿದನು. ಅಲ್ಲದೆ ನಾರುಬಟ್ಟೆಗಳನ್ನು ತೊಡಲು, ಹಣ್ಣುಹಂಪಲುಗಳನ್ನು ಸೇವಿಸಿ ಕಾಲಕಳೆಯಲು ತೀರ್ಮಾನಿಸಿದನು. ಇದಕ್ಕೆ ಕಾರಣ ಏನೆಂದರೆ,

ತತ್ ಪ್ರತಿ ಶ್ರುತಮಾರ್ಯಸ್ಯ ನೈವ ಮಿಥ್ಯಾ ಭವಿಷ್ಯತಿ ॥ ೨೬ ॥

ಶ್ರೀರಾಮನ ಪ್ರತಿಜ್ಞೆ ಸುಳ್ಳಾಗದಿರಲಿ—ಎಂಬುದು.

**ಅಯೋಧ್ಯಾಕಾಂಡ / ೯೭**

ಲಕ್ಷ್ಮಣನು ಸೇನೆಯೊಂದಿಗೆ ಬರುತ್ತಿರುವ ಭರತನನ್ನು ಕಂಡನು. ಅವನು ಸಂದೇಹಕ್ಕೊಳಗಾದನು. ಶ್ರೀರಾಮನೆದುರು ಅವನು ಅದನ್ನು ಆಡಿ ತೋರಿಸಿದನು. ಶ್ರೀರಾಮನು ಅವನನ್ನು ಸಮಾಧಾನಪಡಿಸಲೆಂದು ತನ್ನ ಪ್ರತಿಜ್ಞೆಯ ಬಗೆಗೆ ಹೀಗೆ ಹೇಳಿದನು —

ಪಿತುಃ ಸತ್ಯಂ ಪ್ರತಿಶ್ರುತ್ಯ ಹತ್ವಾ ಭರತಮಾಹವೇ ।
ಕಿಂ ಕರಿಷ್ಯಾಮಿ ರಾಜ್ಯೇನ ಸಾಪವಾದೇನ ಲಕ್ಷ್ಮಣ ॥ ೬ ॥

"ಎಲೋ ಲಕ್ಷ್ಮಣ ! ಬಲಾಢ್ಯನಾದ ಭರತ ತಾನಾಗಿಯೇ ಉತ್ಸಾಹದಿಂದ ಇತ್ತ ಬರುತ್ತಿದ್ದಾನೆ. ನಾನಂತೂ ತಂದೆಯ ಪ್ರತಿಜ್ಞೆಯನ್ನು ಪರಿಪಾಲಿಸಲು ಪಣತೊಟ್ಟವನು. ಹೀಗಿರುವಲ್ಲಿ ಭರತನನ್ನು ಕೊಂದು ಅವನ ರಾಜ್ಯವನ್ನು ಕಬಳಿಸಿದೆನಾದರೆ ಜನರ ನಿಂದೆಗೆ ಗುರಿಯಾಗುವೆನು." ಇಷ್ಟನ್ನು ನುಡಿದಾದಬಳಿಕ ಶ್ರೀರಾಮನು ಯುವರಾಜಪಟ್ಟಾಭಿಷೇಕಕ್ಕೆ ತಾನು ಒಪ್ಪಿಕೊಂಡುದೇಕೆ ಎಂಬುದನ್ನು ಅವನಿಗೆ ಅರುಹುತ್ತಾನೆ:

ಧರ್ಮಮರ್ಥಂ ಚ ಕಾಮಂ ಚ ಪೃಥಿವೀಂ ಚಾಪಿ ಲಕ್ಷ್ಮಣ ।
ಇಚ್ಛಾಮಿ ಭವತಾಮರ್ಥೇ ಏತತ್ ಪ್ರತಿಶೃಣೋಮಿ ತೇ ॥ ೫ ॥

ಭ್ರಾತೃಣಾಂ ಸಂಗ್ರಹಾರ್ಥಂ ಚ ಸುಖಾರ್ಥಂ ಚಾಪಿ ಲಕ್ಷ್ಮಣ ।
ರಾಜ್ಯಮಪ್ಯಹಮಿಚ್ಛಾಮಿ ಸತ್ಯೇನಾಯುಧಮಾಲಭೇ ॥ ೬ ॥

"ನಾನು ಧರ್ಮ, ಅರ್ಥ, ಕಾಮ ಹಾಗೂ ಪೃಥ್ವಿಯ ರಾಜ್ಯಗಳನ್ನೆಲ್ಲ ಬಯಸುವುದು ನಿಮ್ಮೆಲ್ಲರಿಗಾಗಿ ಎಂದು ಪ್ರತಿಜ್ಞೆಮಾಡಿ ನಿನಗೆ ಹೇಳುತ್ತೇನೆ. ನಾನು ರಾಜ್ಯವನ್ನು ಬಯಸುವುದು ಸೋದರರ ಸುಖ ಹಾಗೂ ರಕ್ಷಣೆಗಳಿಗಾಗಿಯೇ. ಬಿಲ್ಲನ್ನು ಕೈಯಿಂದ ಸ್ಪರ್ಶಿಸಿ ನಾನೀ ಸತ್ಯವನ್ನು ಹೇಳುತ್ತಿದ್ದೇನೆ."

**ಅಯೋಧ್ಯಾಕಾಂಡ / ೧೦೬**

ಶ್ರೀರಾಮನು ಅಯೋಧ್ಯೆಗೆ ಹಿಂತಿರುಗಿ ಬರಬೇಕೆಂದು ಭರತನು ಹಲವು ಬಗೆಯಾಗಿ ಅವನನ್ನು ಬೇಡಿಕೊಂಡನು. ಶ್ರೀರಾಮನು ಮಾತ್ರ ಬಲು ನಿರ್ಧಾರದಿಂದ ಅವನ ಈ ಕೋರಿಕೆಯನ್ನು ಒಪ್ಪಿಕೊಳ್ಳಲಿಲ್ಲ. ಆಗ ಅಲ್ಲಿದ್ದವರೆಲ್ಲ,

ನ ಯಾತ್ಯಯೋಧ್ಯಾಮಿತಿ ದುಃಖಿತೋ ಭವತ್ ।
ಸ್ಥಿರಪ್ರತಿಜ್ಞಮವೇಕ್ಷ್ಯ ಹರ್ಷಿತಃ ॥ ೩೪ ॥

ದುಃಖಿತರಾದಂತೆಯೇ ಪ್ರತಿಜ್ಞೆಯನ್ನು ಪಾಲಿಸಬೇಕೆನ್ನುವ ಶ್ರೀರಾಮನ ನಿರ್ಧಾರವನ್ನು ಕಂಡು ಸಂತುಷ್ಟರೂ ಆದರು.

**ಅಯೋಧ್ಯಾಕಾಂಡ / ೧೦೭**

ಶ್ರೀರಾಮನು ಭರತನಿಗೆ ತಿಳಿಹೇಳಿ ಹಿಂದಕ್ಕೆ ನಡೆದುಹೋದ ಘಟನೆಯ ಬಗೆಗೆ ಅವನಿಗೆ ಹೇಳಿದನು :

ಪುರಾ ಭ್ರಾತಃ ಪಿತಾ ನಃ ಸ ಮಾತರಂ ತೇ ಸಮುದ್ವಹನ್ ।
ಮಾತಾಮಹೇ ಸಮಾಶ್ರೌಷೀದ್ ರಾಜ್ಯಶುಲ್ಕಮನುತ್ತಮಮ್ ॥ ೩ ॥
ಸೋಽಹಂ ವನಮಿದಂ ಪ್ರಾಪ್ತೋ ನಿರ್ಜನಂ ಲಕ್ಷ್ಮಣಾನ್ವಿತಃ ।
ಸೀತಯಾ ಚಾಪ್ರತಿದ್ವಂದ್ವಃ ಸತ್ಯವಾದೇ ಸ್ಥಿತಃ ಪಿತುಃ ॥ ೮ ॥
ಭವಾನಪಿ ತಥೇತ್ಯೇವ ಪಿತರಂ ಸತ್ಯವಾದಿನಮ್ ।
ಕರ್ತುಮರ್ಹಸಿ ರಾಜೇಂದ್ರ ಕ್ಷಿಪ್ರಮೇವಾಭಿಷಿಂಚನಾತ್ ॥ ೯ ॥

"ನಮ್ಮ ತಂದೆಯು ನಿನ್ನ ತಾಯಿಯೊಂದಿಗೆ ಮದುವೆಯಾಗುವ ಮುನ್ನ ನಿನ್ನ ಅಜ್ಜನ (ತಾಯಿಯ ತಂದೆಯ) ಷರತ್ತನ್ನು ಒಪ್ಪಿಕೊಂಡಿದ್ದನು. ಅವಳ ಹೊಟ್ಟೆಯಿಂದ ಹುಟ್ಟಿಬರುವ ಮಗನೇ ರಾಜನಾಗಬೇಕೆಂಬುದೇ ಆ ಷರತ್ತಾಗಿತ್ತು. ಈ ಷರತ್ತನ್ನನುಸರಿಸಿಯೇ ಈಗ ಕೈಕೇಯಿ ವರಗಳನ್ನು ಕೇಳಿ ಪಡೆದಿದ್ದಾಳೆ. ಆ ಪ್ರಕಾರ ನಾನಿಲ್ಲಿಗೆ ಬಂದು ಅವರಿಬ್ಬರ ಆಜ್ಞೆಗಳನ್ನು ಪಾಲಿಸುತ್ತಲಿದ್ದೇನೆ. ನೀನೂ ಕೂಡ ರಾಜ್ಯವನ್ನು ಸ್ವೀಕರಿಸಿ ಅವರ ಅಪ್ಪಣೆಗಳನ್ನು ಪಾಲಿಸು" ಎಂದನು.

**ಅಯೋಧ್ಯಾಕಾಂಡ / ೧೦೯**

ಶ್ರೀರಾಮನು ಭರತನೊಂದಿಗೆ ಅಯೋಧ್ಯೆಗೆ ಹಿಂತಿರುಗಿ ರಾಜ್ಯವನ್ನು ಸ್ವೀಕರಿಸಬೇಕೆಂದು ಜಾಬಾಲಿಯು ಅವನಿಗೆ ಹೇಳಿದನು. ಈ ಮಾತು ಶ್ರೀರಾಮನಿಗೆ ಹಿಡಿಸಲೂ ಇಲ್ಲ, ಮನದಟ್ಟಾಗಲೂ ಇಲ್ಲ. ಪ್ರತಿಜ್ಞೆಯನ್ನು ಪಾಲಿಸುವ ಬಗೆಗೆ ನಿಷ್ಠಾವಂತನಾದ ಶ್ರೀರಾಮನು ಅವನಿಗೆ ಪ್ರತಿಪ್ರಶ್ನೆಯನ್ನು ಕೇಳುತ್ತಾನೆ —

ಕಸ್ಯ ಯಾಸ್ಯಾಮ್ಯಹಂ ವೃತ್ತಂ ಕೇನ ವಾ ಸ್ವರ್ಗಮಾಪ್ನುಯಾಮ್ ।
ಅನಯಾ ವರ್ತಮಾನೋಽಹಂ ವೃತ್ತ್ಯಾ ಹೀನಪ್ರತಿಜ್ಞಯಾ ॥ ೮ ॥

"ಕೈಕೊಂಡ ಪ್ರತಿಜ್ಞೆಯನ್ನು ಪಾಲಿಸದಿರುವಲ್ಲಿ (ನಿಮ್ಮ ಹೇಳಿಕೆಯಂತೆ) ನಡೆದುಕೊಂಡೆನಾದರೆ ಸ್ವರ್ಗಲೋಕವನ್ನು ಹೇಗೆ ಪಡೆದೇನು ? ನೀವು ನನಗೆ ಹೇಳುತ್ತಿರುವ ಬಗೆಯಾಗಿ ನಾನು ನಡೆದುಕೊಳ್ಳಬೇಕೆಂದು ಬಯಸುತ್ತಿರುವಿರಿ. ನಾನು ಆಚರಿಸಬೇಕಿದ್ದ ಈ ಉಪದೇಶ ಯಾರದು ?

ಸೋಽಹಂ ಪಿತುರ್ನಿರ್ದೇಶಂ ತು ಕಿಮರ್ಥಂ ನಾನುಪಾಲಯೇ ।
ಸತ್ಯಪ್ರತಿಶ್ರವಃ ಸತ್ಯಂ ಸತ್ಯೇನ ಸಮಯೀಕೃತಮ್ ॥ ೧೬ ॥
ನೈವ ಲೋಭಾನ್ನ ಮೋಹಾದ್ ನ ವಾಜ್ಞಾನಾತ್ ತಮೋಽನ್ವಿತಃ ।
ಸೇತುಂ ಸತ್ಯಸ್ಯ ಭೇತ್ಸ್ಯಾಮಿ ಗುರೋಃ ಸತ್ಯಪ್ರತಿಶ್ರವಃ ॥ ೧೭ ॥

"ನಾನು ಸತ್ಯಪ್ರತಿಜ್ಞನು. ಪಿತನ ಪ್ರತಿಜ್ಞೆಯನ್ನು ಪಾಲಿಸುವ ವ್ರತವನ್ನು ಸತ್ಯದ ಮೇಲೆ ಆಣೆಯಿಟ್ಟು ಸ್ವೀಕರಿಸಿದ್ದೇನೆ. ಅಂದಬಳಿಕ ನಾನು ಈ ಪ್ರತಿಜ್ಞೆಯನ್ನೇಕೆ ಪಾಲಿಸಬಾರದು ? ಲೋಭ, ಮೋಹ ಇಲ್ಲವೆ ಅಜ್ಞಾನಗಳಿಂದಾಗಿ ವಿವೇಕಭ್ರಷ್ಟನಾಗಿ ನಾನು ಈ ಮೊದಲೇ ಕೈಕೊಂಡ ಪ್ರತಿಜ್ಞೆಯನ್ನು ಮುರಿದು ಸತ್ಯದ ಗೌರವದ ಗಡಿಯನ್ನು ಮೀರಲಾರೆ.

ಅಸತ್ಯಸಂಧಸ್ಯ ಸತಶ್ಚಲಸ್ಯಾಸ್ಥಿರಚೇತಸಃ ।
ನೈವ ದೇವಾ ನ ಪಿತರಃ ಪ್ರತೀಚ್ಛಂತೀತಿ ನಃ ಶ್ರುತಮ್ ॥ ೧೮ ॥

"ತನ್ನ ಪ್ರತಿಜ್ಞೆಯನ್ನು ಸುಳ್ಳಾಗಿಸಿ ಧರ್ಮಭ್ರಷ್ಟರಾಗುವ, ಚಂಚಲಮನೋಧರ್ಮದ ಮನುಷ್ಯನು ನೀಡಿದ ಹವ್ಯಕವ್ಯಗಳನ್ನು ದೇವನಾಗಲಿ ಇಲ್ಲವೆ ಪಿತೃಗಳೇ ಆಗಲಿ, ಸ್ವೀಕರಿಸಲಾರರು.

ಕಥಂ ಹ್ಯಹಂ ಪ್ರತಿಜ್ಞಾಯ ವನವಾಸಮಿಮಂ ಗುರೋಃ ।
ಭರತಸ್ಯ ಕರಿಷ್ಯಾಮಿ ವಚೋ ಹಿತ್ವಾ ಗುರೋರ್ವಚಃ ॥ ೨೪ ॥
ಸ್ಥಿರಾ ಮಯಾ ಪ್ರತಿಜ್ಞಾತಾ ಪ್ರತಿಜ್ಞಾ ಗುರುಸನ್ನಿಧೌ ॥ ೨೫

"ನಾನು ನನ್ನ ತಂದೆಯೆದುರಿನಲ್ಲಿಯೇ ಕಾಡಿನಲ್ಲಿ ವಾಸಿಸುವೆನೆಂದು ಪ್ರತಿಜ್ಞೆಯನ್ನು ಗೈದಿದ್ದೇನೆ. ಹೀಗಿರುವಲ್ಲಿ ಭರತನ ಮಾತು ಕೇಳಿ ಅದನ್ನು ಹೇಗೆ ಮುರಿಯಲಿ ? ಗುರುವಿನ ಸನ್ನಿಧಿಯಲ್ಲಿ ಗೈದ ಪ್ರತಿಜ್ಞೆಯನ್ನು ತಪ್ಪಿಸಲಾಗದು."

ಅಯೋಧ್ಯಾಕಾಂಡ / ೧೧೨

ಶ್ರೀರಾಮ ಭರತನಿಗೆ ಕೊನೆಯದಾಗಿ ಹೇಳುತ್ತಾನೆ —

ಲಕ್ಷ್ಮೀಶ್ಚಂದ್ರಾದಪೇಯಾದ್ ವಾ ಹಿಮವಾನ್ ವಾ ಹಿಮಂ ತ್ಯಜೇತ್ ।
ಅತೀಯಾತ್ ಸಾಗರೋ ವೇಲಾಂ ನ ಪ್ರತಿಜ್ಞಾಮಹಂ ಪಿತುಃ ॥ ೧೮ ॥

"ಚಂದ್ರನ ತೇಜಸ್ಸು ಅವನಿಂದ ಬೇರ್ಪಟ್ಟೀತು, ಹಿಮವಂತನು ತನ್ನ ಮೇಲಿನ ಹಿಮವನ್ನೇ ತೊರೆದಾನು, ಇಲ್ಲವೆ ಕಡಲು ತನ್ನ ತಡಿಯನ್ನೇ ಮೀರೀತು, ಆದರೆ ನಾನು ಮಾತ್ರ ಪಿತನ ಪ್ರತಿಜ್ಞೆಯನ್ನು ಮುರಿಯಲಾರೆ."

ಅಯೋಧ್ಯಾಕಾಂಡ / ೧೧೩

ಭರತನು ಪ್ರತಿಜ್ಞೆಯನ್ನು ಪಾಲಿಸುವ ಬಗೆಗಿನ ಶ್ರೀರಾಮನ ದೃಢನಿರ್ಧಾರದ ಬಗೆಗೆ ಭರದ್ವಾಜನೆದುರು ಆಡಿ ತೋರಿಸಿದ್ದಾನೆ. ಅವನೆಂದುದು ಹೀಗೆ —

ಪಿತುಃ ಪ್ರತಿಜ್ಞಾಂ ತಾಮೇವ ಪಾಲಯಿಷ್ಯಾಮಿ ತತ್ತ್ವತಃ ।
ಚತುರ್ದಶ ಹಿ ವರ್ಷಾಣಿ ಯಾ ಪ್ರತಿಜ್ಞಾ ಪಿತುರ್ಮಮ ॥ ೧೦ ॥

"ನಾನು ಹದಿನಾಲ್ಕು ವರ್ಷ ಕಾಡಿನಲ್ಲಿ ವಾಸವಾಗಿರುವ ಬಗೆಗೆ ನನ್ನ ಪಿತನು ಪ್ರತಿಜ್ಞೆಯನ್ನು ಕೈಕೊಂಡನು. ನಾನದನ್ನು ಅಕ್ಷರಶಃ ಪಾಲಿಸುವೆನೆಂದು ಶ್ರೀರಾಮನು ವಸಿಷ್ಠರಿಗೆ ಹೇಳಿದನು."

ಅರಣ್ಯಕಾಂಡ / ೬೧

ಸೀತೆಯ ಅಪಹರಣದಿಂದಾಗಿ ಶ್ರೀರಾಮ ತೀರ ಕಳವಳಕ್ಕೀಡಾದನು. ಅವನು ಲಕ್ಷ್ಮಣನಿಗೆ ಹೀಗೆಂದನು — "ಕಾಂಚನಮೃಗವನ್ನು ಗುರಿಯಿಕ್ಕಿ ಕೊಲ್ಲೆಂದು ಹೋಗುವಾಗ ಅವಳು ಒಂಟಿಯಾಗಿ ಉಳಿಯದಂತೆ ನೋಡಿಕೊಳ್ಳಲು ನಿನಗೆ ಹೇಳಿದ್ದೆ. ಆದರೆ ನೀನು ಅವಳೊಬ್ಬಳನ್ನೇ ಬಿಟ್ಟು ನನ್ನನ್ನು ಹುಡುಕಲು ಬಂದೆ.

ಅದರಿಂದಾಗಿಯೇ ಇದೆಲ್ಲ ಅನರ್ಥ ಉಂಟಾದುದು. ಸೀತೆಯಿಲ್ಲದೆ ಬದುಕಲಾರೆ. ನಾನು ಸ್ವರ್ಗಕ್ಕೆ ಹೋಗುವುದು ಖಂಡಿತ. ಅಲ್ಲಿ ನನ್ನನ್ನು ಕಂಡು ತಂದೆ ಸ್ವಾಭಾವಿಕವಾಗಿಯೇ ಹೀಗೆನ್ನುವನು —

> ಕಥಂ ಪ್ರತಿಜ್ಞಾಂ ಸಂಶ್ರುತ್ಯ ಮಯಾ ತ್ವಮಭಿಯೋಜಿತಃ ॥ ೭॥
> ಅಪೂರಯಿತ್ವಾ ತಂ ಕಾಲಂ ಮತ್ಸಕಾಶಮಿಹಾಗತಃ । ೮

"ನಾನು ನಿನಗೆ ಕಾಡಿನಲ್ಲಿರಲು ಹೋಗೆಂದಾಗ ನೀನು ಆ ಮಾತನ್ನು ಪಾಲಿಸುವುದಾಗಿ ಪ್ರತಿಜ್ಞೆಮಾಡಿ ಒಪ್ಪಿಕೊಂಡಿದ್ದೆ. ಹೀಗಿರುವಲ್ಲಿ ಆ ಅವಧಿ ಮುಗಿವ ಮುನ್ನವೇ (ಪ್ರತಿಜ್ಞೆಯನ್ನು ಪೂರ್ತಿಗೊಳಿಸದೆ) ನನ್ನ ಬಳಿಗೇಕೆ ಬಂದೆ ?"

## ೧೨. ಲಕ್ಷ್ಮಣನ ಪ್ರತಿಜ್ಞೆ — ಅಯೋಧ್ಯಾಕಾಂಡ / ೨೩

ದಶರಥನ ಅಪ್ಪಣೆಯೆಂದು ಶ್ರೀರಾಮನು ವನವಾಸವನ್ನು ಒಪ್ಪಿಕೊಳ್ಳುವುದು ಲಕ್ಷ್ಮಣನಿಗೆ ಬೇಡವಾಗಿತ್ತು. ಅವನು ಆವೇಶದಿಂದ ಕೂಡಿದ ಮಾತುಗಳಲ್ಲಿ ದಶರಥನ ಈ ತೀರ್ಮಾನದ ಬಗೆಗೆ ತನ್ನ ನಿಷೇಧವನ್ನು ವ್ಯಕ್ತಪಡಿಸಿದ್ದಾನೆ. ಅವನು, "ತಂದೆಯ ಅಪ್ಪಣೆಯ ಮೇರೆಗೆ ಕಾಡಿಗೆ ತೆರಳದಿದ್ದರೆ ಪ್ರಜೆಗಳ ಮನಗಳಲ್ಲಿ ಸಂದೇಹ ಹುಟ್ಟಿಕೊಂಡೀತು, ಧರ್ಮವನ್ನು ಉಲ್ಲಂಘಿಸಿದ್ದರಿಂದ ವಿನಾಶ ತಪ್ಪದೆಂದು ನಿನಗೆ ಅನ್ನಿಸುವುದೆಲ್ಲ ಬರಿ ಭ್ರಮೆ. ಅಪ್ಪನ ಅಪ್ಪಣೆಯಿಂದಾಗಿ ನಿನ್ನ ಬುದ್ಧಿ ಇಕ್ಕಟ್ಟಿಗೆ ಸಿಕ್ಕಿಕೊಂಡಿದೆ ಅಷ್ಟೆ. ಕೈಕೇಯಿಯ ಮಾತು ಕೇಳಿ ದಶರಥನು ಕೈಕೊಂಡ ತೀರ್ಮಾನ ಅಧರ್ಮದ್ದೂ, ನಿಂದ್ಯವೂ ಆಗಿದೆ. ಆತ ಮೋಸಗಾರ. ಪ್ರಜೆಗಳನ್ನು ಎದುರಿಸಿ ರಾಜ್ಯವನ್ನಾಳುವುದು ಕಷ್ಟವೆಂದು ನೀನು ಭಾವಿಸಿದ್ದರೆ —

> ಪ್ರತಿಜಾನೇ ಚ ತೇ ವೀರ ಮಾ ಭವಂ ವೀರ ಲೋಕಭಾಕ್ ।
> ರಾಜ್ಯಂ ಚ ತವ ರಕ್ಷೇಯಮಹಂ ವೇಲೇವ ಸಾಗರಮ್ ॥ ೨೮ ॥

"ದಡದಿಂದಾಗಿಯೇ ಕಡಲು ಕಾಪಾಡಲ್ಪಡುವಂತೆಯೇ ನಾನು ನಿನ್ನನ್ನು ಹಾಗೂ ರಾಜ್ಯವನ್ನು ಕಾಪಾಡುವೆನು. ನನ್ನ ಕತ್ತಿಯೆಂದರೆ ಕೇವಲ ನನ್ನ ಸೊಂಟದ ಒಡವೆಯೆಂದು ತಿಳಿಯದಿರು."

## ೧೩. ಶ್ರೀರಾಮನನ್ನು ಕೊಲ್ಲಲು ತ್ರಿಶಿರನ ಪ್ರತಿಜ್ಞೆ — ಅರಣ್ಯಕಾಂಡ / ೨೭

ಶ್ರೀರಾಮನು ಖರ ಎಂಬ ರಾಕ್ಷಸನ ಶೂರರೂ, ಅಜಿಂಕ್ಯರೂ ಎನ್ನಿಸಿದ ಯೋದ್ಧರನ್ನು ಕೊಲೆಗೈದನು. ಅದರಿಂದಾಗಿ ಕೆರಳಿದ ಖರನು ಶ್ರೀರಾಮನೊಡನೆ ಕಾಳಗಕ್ಕೆ ಇಳಿದನು. ತ್ರಿಶಿರ ರಾಕ್ಷಸನಿಗೆ ತನ್ನ ಸಾಮರ್ಥ್ಯದ ಬಗೆಗೆ ಎಲ್ಲಿಲ್ಲದ ಹೆಮ್ಮೆಯಿತ್ತು. ಅವನು ಖರನಿಗೆ ಹೀಗೆಂದನು —

> ಪ್ರತಿಜಾನಾಮಿ ತೇ ಸತ್ಯಮಾಯುಧಂ ಚಾಹಮಾಲಭೇ ।
> ಯಥಾ ರಾಮಂ ವಧಿಷ್ಯಾಮಿ ವಧಾರ್ಹಂ ಸರ್ವರಕ್ಷಸಾಮ್ ॥ ೩ ॥
> ಅಹಂ ವಾಸ್ಯ ರಣೇ ಮೃತ್ಯುರೇಷ ವಾ ಸಮರೇ ಮಮ ।
> ವಿನಿವರ್ತ್ಯ ರಣೋತ್ಸಾಹಂ ಮುಹೂರ್ತಂ ಪ್ರಾಶ್ನಿಕೋ ಭವ ॥ ೪ ॥
> ಪ್ರಹೃಷ್ಟೋ ವಾ ಹತೇ ರಾಮೇ ಜನಸ್ಥಾನಂ ಪ್ರಯಾಸ್ಯಸಿ ।
> ಮಯಿ ವಾ ನಿಹತೇ ರಾಮಂ ಸಂಯುಗಾಯ ಪ್ರಯಾಸ್ಯಸಿ ॥ ೫ ॥

"ನೀವು ಕಾಳಗಕ್ಕೆ ಇಳಿಯದೆ ನನ್ನಂತಹ ಸೇವಕನಿಗೆ ಅವಕಾಶವನ್ನು ನೀಡಬೇಕು. ಆದಷ್ಟು ಬೇಗ ಹಗೆಯನ್ನು ಕೊಂದುಬಿಡುವೆನು. ನಿಮ್ಮೆದುರಿನಲ್ಲೇ ಆಯುಧವನ್ನು ಸ್ಪರ್ಶಿಸಿ ನಾನೊಂದು ಪ್ರತಿಜ್ಞೆಯನ್ನು ಕೈಕೊಳ್ಳಲಿದ್ದೇನೆ. ಅದೆಂದರೆ, ರಾಕ್ಷಸರನ್ನು ಸಂಹರಿಸುತ್ತಿರುವ ಶ್ರೀರಾಮನನ್ನು ನಾನು ಕೊಲ್ಲುವೆನು. ಕಾಳಗದಲ್ಲಿ ಶ್ರೀರಾಮನಾದರೂ ಸಾಯಬೇಕು ಇಲ್ಲವೆ ನಾನು. ನನ್ನ ಕೈಲಿ ಶ್ರೀರಾಮ ಹತನಾದರೆ ನೀವು ಸಂತೋಷದಿಂದ ಜನಸ್ಥಾನಕ್ಕೆ ಹೋಗಿ. ನಾನು ಸತ್ತನಾದರೆ ನೀವೆಲ್ಲ ರೊಚ್ಚಿನಿಂದ ಅವನ ಮೇಲೆರಗಿ."

## ೧೪. ತನ್ನ ನಾಶಕ್ಕಾಗಿ ಸೀತೆಯ ಪ್ರತಿಜ್ಞೆ (೧) ಅರಣ್ಯಕಾಂಡ / ೪೫

ಸೀತೆಯ ಬಲವಂತದಿಂದಾಗಿ ಶ್ರೀರಾಮ ಚಿನ್ನದ ಜಿಂಕೆಯನ್ನು ಬೆನ್ನಟ್ಟಿದನು. ಹೊರಡುವ ಮುನ್ನ ಅವನು ಸೀತೆಯನ್ನು ಕಾಪಾಡುವಂತೆ, ಅವಳೊಬ್ಬಳನ್ನೇ ಬಿಟ್ಟು ಎಲ್ಲಿಗೂ ಹೋಗದಂತೆ ಲಕ್ಷ್ಮಣನಿಗೆ ಹೇಳಿದನು. ಅವನ ಅಪ್ಪಣೆಯಂತೆ ಲಕ್ಷ್ಮಣ ಅಲ್ಲಿಯೇ ಉಳಿದನು. ಬಹಳ ಹೊತ್ತಾದರೂ ಶ್ರೀರಾಮ ಬಾರದಿದ್ದ ಕಾರಣ ಸೀತೆ ಗಾಬರಿಯಾದಳು. ಅವನನ್ನು ಹುಡುಕುವಂತೆ ಲಕ್ಷ್ಮಣನಿಗೆ ಹೇಳಿದಳು. ಆದರೆ ಅವನು ಅಲ್ಲಿಂದ ಕದಲಲಿಲ್ಲ. ಶ್ರೀರಾಮನಿಗಾಗಿ ಚಿಂತಿಸುವ ಕಾರಣವಿಲ್ಲ, ಅವನ ಜೀವಕ್ಕೆ ಅದಾವ ಅಪಾಯವೂ ಇಲ್ಲವೆಂದು ಅವಳಿಗೆ ತಿಳಿಹೇಳಲು ಯತ್ನಿಸಿದನು. ಲಕ್ಷ್ಮಣ ಅಲ್ಲಿಂದ ಕದಲದೇ ಇದ್ದುದನ್ನು ಕಂಡು ಸೀತೆ ರೊಚ್ಚಿಗೆದ್ದಳು. ಅವನ ಮೇಲೆ ಕೂಗಾಡಿದಳು. ಸಲ್ಲದ ಅಪಾದನೆಗಳನ್ನು ಹೊರಿಸಿದಳು. ಆತ ಅಲ್ಲಿಂದ ಹೋಗದಿದ್ದರೆ ತಾನು ಜೀವ ಕೊಡುವುದಾಗಿ ಬೆದರಿಕೆ ಹಾಕಿದಳು. ಸೀತೆಯ ಮಾತುಗಳು ಪ್ರತಿಜ್ಞೆಗಳಂತಿವೆ. ಅವಳೆಂದುದು —

ಗೋದಾವರೀಂ ಪ್ರವೇಕ್ಷ್ಯಾಮಿ ಹೀನಾ ರಾಮೇಣ ಲಕ್ಷ್ಮಣ ।
ಆಬಂಧಿಷ್ಯೇಽಥವಾ ತ್ಯಕ್ಷ್ಯೇ ವಿಷಮೇ ದೇಹಮಾತ್ಮನಃ ॥ ೩೬ ॥
ಪಿಬಾಮಿ ವಾ ವಿಷಂ ತೀಕ್ಷ್ಣಂ ಪ್ರವೇಕ್ಷ್ಯಾಮಿ ಹುತಾಶನಮ್ ।
ನ ತ್ವಹಂ ರಾಘವಾದನ್ಯಂ ಕದಾಪಿ ಪುರುಷಂ ಸ್ಪೃಶೇ ॥ ೩೭ ॥

"ಶ್ರೀರಾಮನ ಭೆಟ್ಟಿಯಾಗದಿದ್ದರೆ ಗೋದಾವರಿಗೆ ಹಾರಿಕೊಳ್ಳುವೆ ; ಕೊರಳಿಗೆ ಉರುಳು ಹಾಕಿಕೊಂಡು ಜೀವ ಕೊಡುವೆ ; ದುರ್ಗಮವಾದ ಬಂಡೆಯಿಂದ ಕೆಳಕ್ಕೆ ಧುಮುಕುವೆ ; ಭಯಂಕರವಾದ ನಂಜನ್ನು ಕುಡಿದು ಬಿಡುವೆ ಅಥವಾ ಬೆಂಕಿಗೆ ಹಾರಿಕೊಳ್ಳುವೆ. ಏನಿದ್ದರೂ ಪರಪುರುಷ ನನ್ನನ್ನು ಸ್ಪರ್ಶಿಸದಂತೆ ನೋಡಿಕೊಳ್ಳುವೆ."

## ೧೫. ತನ್ನ ನಾಶಕ್ಕಾಗಿ ಸೀತೆಯ ಪ್ರತಿಜ್ಞೆ (೨) ಸುಂದರಕಾಂಡ / ೩೮

ಸೀತೆಯು ಹನುಮಂತನ ಕೈಲಿ ಶ್ರೀರಾಮನಿಗೆ ಸಂದೇಶವನ್ನು ಹೇಳಿಕಳಿಸಿದಳು. ಅದರಲ್ಲಿ, ತನ್ನ ಆಯುಸ್ಸು ಇನ್ನು ಕೆಲವೇ ದಿನಗಳದಿದ್ದು ಸಾಧ್ಯವಿದ್ದಷ್ಟು ಬೇಗ ಬಂದು ತನ್ನನ್ನು ರಾವಣನ ಸೆರೆಯಿಂದ ಬಿಡಿಸಬೇಕೆಂದು ಕಳಕಳಿಯಿಂದ ಕೇಳಿಕೊಂಡಿದ್ದಳು.

ಜೀವಿತಂ ಧಾರಯಿಷ್ಯಾಮಿ ಮಾಸಂ ದಶರಥಾತ್ಮಜ ॥ ೬೭ ॥
ಊರ್ಧ್ವಂ ಮಾಸಾನ್ನ ಜೀವೇಯಂ ಸತ್ಯೇನಾಹಂ ಬ್ರವೀಮಿ ತೇ । ೬೫

"ದಶರಥನ ಹೊಟ್ಟೆಯಲ್ಲಿ ಹುಟ್ಟಿಬಂದವನೇ ! ನನ್ನ ಆಯುಷ್ಯದ ಬಚ್ಚಿ ಉಳಿದಿರುವಷ್ಟು (ಕೊಂಚ) ಕಾಲ ಮಾತ್ರ ನಾನು ಬದುಕಲಿದ್ದೇನೆ. ಇನ್ನು ಎರಡು ತಿಂಗಳುಗಳ ತರುವಾಯ ನಾನು ಜೀವದಿಂದ ಇರಲಾರೆ. ಸತ್ಯಪ್ರತಿಜ್ಞೆಮಾಡಿ ಈ ಮಾತನ್ನು ಹೇಳುತ್ತಲಿದ್ದೇನೆ."

ಮೇಲ್ಗಡೆಯಲ್ಲಿ ಉಲ್ಲೇಖಿಸಲಾದ ಸೀತೆಯ ಎರಡೂ ಪ್ರತಿಜ್ಞೆಗಳು ಅವಳ ಬಾಳಿನಂತೆಯೇ ಅವಳ ಶೀಲದೊಂದಿಗೂ ತಳುಕುಹಾಕಿಕೊಂಡವುಗಳು.

ಸೀತೆ ಆತ್ಮಹತ್ಯೆಯ ಬಗೆಗೆ ಯೋಚಿಸಿದವಳಾದರೂ (ಸುಂದರಕಾಂಡ/೨೫) ಅಲ್ಲಿ ಪ್ರತಿಜ್ಞೆಯಿಲ್ಲ.

## ೧೬. ಶ್ರೀರಾಮ–ಸುಗ್ರೀವರಲ್ಲಿ ಗೆಳೆತನಕ್ಕಾಗಿ ಪ್ರತಿಜ್ಞೆ ಕಿಷ್ಕಿಂಧಾಕಾಂಡ / ೫

ಶ್ರೀರಾಮ ಹಾಗೂ ಸುಗ್ರೀವರಿಬ್ಬರೂ ರಾಜ್ಯಪದಕ್ಕೆ ವಂಚಿತರು. ಶ್ರೀರಾಮನಿಗೆ ಅದರಿಂದಾಗಿ ದುಃಖ ವಿರಲಿಲ್ಲ. ಇಷ್ಟೇ ಅಲ್ಲದೆ ಯುವರಾಜಪಟ್ಟಾಭಿಷೇಕಕ್ಕೆ ತಾನು ಒಪ್ಪಿಕೊಂಡುದೇಕೆ ಎಂಬ ಬಗೆಗೂ ನಿಖರವಾಗಿ ಹೇಳಿದ್ದಾನೆ (ಅಯೋಧ್ಯಾಕಾಂಡ-೯೭/೫). ಅವರಿಬ್ಬರ ಮಡದಿಯರನ್ನು ಅಪಹರಿಸಲಾಗಿತ್ತು. ಹೀಗಾಗಿ ಅವರಿಬ್ಬರ ಬವಣೆ ಒಂದೇ ಬಗೆಯದಾಗಿತ್ತು. ಶ್ರೀರಾಮ-ಲಕ್ಷ್ಮಣ ಹಾಗೂ ಸುಗ್ರೀವರಲ್ಲಿ ಭೆಟ್ಟಿ ನಡೆಯ ಬೇಕು, ಗೆಳೆತನ ಕುದುರಬೇಕು ಹಾಗೂ ಅವರು ಒಬ್ಬರಿಗೊಬ್ಬರು ನೆರವಾಗುವಂತಾಗಬೇಕೆಂಬುದು

ಹನುಮಂತನ ಆಸೆಯಾಗಿತ್ತು. ಅವನ ಯತ್ನಗಳಿಂದಾಗಿಯೇ ಅವರಲ್ಲಿ ಗೆಳೆತನ ಬೆಳೆಯಿತು. ಸುಗ್ರೀವನ ರಾಜ್ಯ ಹಾಗೂ ಮಡದಿಯನ್ನು ಅಪಹರಿಸಿದ ವಾಲಿಯನ್ನು ತಾನು ಕೊಂದು ಮರಳಿ ದೊರಕಿಸಿಕೊಡುವುದಾಗಿ ಶ್ರೀರಾಮನು ಪ್ರತಿಜ್ಞೆಯನ್ನು ಮಾಡಿದನು. ಸುಗ್ರೀವನು ಸೀತೆಯನ್ನು ಹುಡುಕುವಲ್ಲಿ ನೆರವಾಗುವೆನೆಂದು ಶ್ರೀರಾಮನಿಗೆ ಮಾತುಕೊಟ್ಟನು. ಈ ರೀತಿ ಪರಸ್ಪರರಿಗೆ ನೆರವಾಗುವುದಾಗಿ ಹೇಳಿ ಅವರಿಬ್ಬರೂ ಬಿಗಿದಪ್ಪಿ ಕೊಂಡರು.

ದೀಪ್ಯಮಾನಂ ತತೋ ವಹ್ನಿಂ ಪುಷ್ಪೈರಭ್ಯರ್ಚ್ಯ ಸತ್ಕೃತಮ್ ॥ ೧೪ ॥
ತಯೋರ್ಮಧ್ಯೇ ತು ಸುಪ್ರೀತೋ ನಿದಧೌ ಸುಸಮಾಹಿತಃ ।
ತತೋಽಗ್ನಿಂ ದೀಪ್ಯಮಾನಂ ತೌ ಚಕ್ರತುಶ್ಚ ಪ್ರದಕ್ಷಿಣಮ್ ॥ ೧೫ ॥
ಸುಗ್ರೀವೋ ರಾಘವಶ್ಚೈವ ವಯಸ್ಯತ್ವಮುಪಾಗತೌ । ೧೬

ಹನುಮಂತನು ಅಗ್ನಿಯನ್ನು ಪ್ರಜ್ವಲಿತಗೊಳಿಸಿ ಹೂವುಗಳಿಂದ ಅದನ್ನು ಪೂಜಿಸಿದನು. ಅಗ್ನಿಯ ಸಾಕ್ಷಿಯಾಗಿ ಶ್ರೀರಾಮ-ಸುಗ್ರೀವರು ಸ್ನೇಹಿತರಾದರು. ಅವರಿಬ್ಬರೂ ಅಗ್ನಿಗೆ ಪ್ರದಕ್ಷಿಣೆಯನ್ನು ಹಾಕಿದರು.

ಸುಗ್ರೀವನು ತಮ್ಮೀ ಗೆಳೆತನವನ್ನು ಕುರಿತು ಹೀಗೆಂದಿದ್ದಾನೆ —

ಸೋಽಹಂ ಸಭಾಜ್ಯೋ ಬಂಧೂನಾಂ ಸುಹೃದಾಂ ಚೈವ ರಾಘವ ।
ಯಸ್ಮಾಗ್ನಿಸಾಕ್ಷಿಕಂ ಮಿತ್ರಂ ಲಬ್ಧಂ ರಾಘವವಂಶಜಮ್ ॥ ೪ ॥

"ಎಲೈ ರಾಘವನೇ ! ನಿನ್ನಂತಹ ರಘುಕುಲದಲ್ಲಿ ಹುಟ್ಟಿದವನು ಅಗ್ನಿಸಾಕ್ಷಿಯಾಗಿ ನನಗೆ ಗೆಳೆಯನಾಗಿ ದೊರೆತುದರಿಂದ ನಾನು ನನ್ನ ಬಂಧುಬಳಗದವರ ಹಾಗೂ ಸಹೃದರ.ಗೌರವಕ್ಕೆ ಪಾತ್ರನೆನ್ನಿಸಿದೆನು.

ತ್ವಂ ಹಿ ಪಾಣಿಪ್ರದಾನೇನ ವಯಸ್ಯೋ ಮೇಽಗ್ನಿಸಾಕ್ಷಿಕಮ್ । ೨೬

"ಅಗ್ನಿಸಾಕ್ಷಿಯಾಗಿ ನಿನ್ನ ಕೈಯಲ್ಲಿ ನನ್ನ ಕೈ ನೀಡಿ ಗೆಳೆತನವನ್ನು ಸ್ವೀಕರಿಸಿದೆ"ನೆಂದು ಸುಗ್ರೀವನು ಶ್ರೀರಾಮನಿಗೆ ಹೇಳಿದನು.

## ೧೭೭. ಸೀತೆಯನ್ನು ಹುಡುಕಲು ಸುಗ್ರೀವನ ಪ್ರತಿಜ್ಞೆ ಕಿಷ್ಕಿಂಧಾಕಾಂಡ / ೭

ಶ್ರೀರಾಮನು ದೈನ್ಯದಿಂದ ತನ್ನ ಬವಣೆಯನ್ನು ಸುಗ್ರೀವನೆದುರು ತೋಡಿಕೊಂಡನು. ಅದನ್ನಾಲಿಸಿ ಸುಗ್ರೀವನ ಕಣ್ಣುಗಳು ಹನಿಗೂಡಿದವು. ಆಗ ಅವನು ಸತ್ಯವನ್ನು ಸ್ಮರಿಸಿ ಸೀತೆಯನ್ನು ಕಂಡುಹಿಡಿಯುವಲ್ಲಿ ಶ್ರೀರಾಮನಿಗೆ ನೆರವು ನೀಡುವುದಾಗಿ ಪ್ರತಿಜ್ಞೆಯನ್ನು ಕೈಕೊಂಡನು. ಅವನೆಂದುದು —

ನ ಜಾನೇ ನಿಲಯಂ ತಸ್ಯ ಸರ್ವಥಾ ಪಾಪರಕ್ಷಸಃ ।
ಸಾಮರ್ಥ್ಯಂ ವಿಕ್ರಮಂ ವಾಽಪಿ ದೌಷ್ಕುಲೇಯಸ್ಯ ವಾ ಕುಲಮ್ ॥ ೨ ॥
ಸತ್ಯಂ ತು ಪ್ರತಿಜಾನಾಮಿ ತ್ಯಜ ಶೋಕಮರಿಂದಮ ।
ಕರಿಷ್ಯಾಮಿ ತಥಾ ಯತ್ನಂ ಪ್ರಾಪ್ಸ್ಯಸಿ ಮೈಥಿಲೀಮ್ ॥ ೩ ॥

"ನೀಚಕುಲದಲ್ಲಿ ಹುಟ್ಟಿದ ಆ ಪಾಪಿರಾಕ್ಷಸ ಎಲ್ಲಿ ಗುಟ್ಟಾಗಿ ವಾಸಿಸುವನು, ಅವನ ಸಾಮರ್ಥ್ಯ ಎಂಥದು, ವಂಶ ಯಾವುದು ಎಂಬ ಬಗೆಗೆ ನನಗೆ ಅಷ್ಟಾಗಿ ತಿಳಿದಿಲ್ಲ. ಹೀಗಿದ್ದೂ ನನ್ನ ಯತ್ನಗಳಿಂದಾಗಿ ನಿನಗೆ ಮೈಥಿಲಿ ದೊರಕುವಳೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ."

ಹನುಮಂತನು ಸುಗ್ರೀವನಿಗೆ ಅವನ ಪ್ರತಿಜ್ಞೆಯನ್ನು ನೆನಪು ಮಾಡಿಕೊಡುತ್ತ ಹೀಗೆನ್ನುತ್ತಾನೆ —

ಮಿತ್ರಾರ್ಥಮಭಿನೀತಾರ್ಥಂ ಯಥಾವತ್ ಕರ್ತುಮರ್ಹತಿ ॥ ೧೨ ॥

"ನೀನು ಗೆಳೆಯನಿಗಾಗಿ (ಸೀತೆಯನ್ನು ಹುಡುಕುವುದಾಗಿ) ಕೈಕೊಂಡ ಪ್ರತಿಜ್ಞೆಯನ್ನು ಸರಿಯಾಗಿ ಪೂರ್ತಿಗೊಳಿಸುವಂತಾಗಲಿ."

ವಶೇ ದಾಶರಥಿಃ ಕರ್ತುಂ ತ್ವತ್ಪ್ರತಿಜ್ಞಾಮವೇಕ್ಷತೇ ॥ ೨೨ ॥

"ಶ್ರೀರಾಮನು ತನ್ನ (ಕರ್ತೃತ್ವದಿಂದ) ಬಾಣಗಳಿಂದ ಯಾರನ್ನಾದರೂ ವಶಪಡಿಸಿಕೊಳ್ಳಬಲ್ಲನಾದರೂ ಅವನ ಕೆಲಸವನ್ನು ಪೂರ್ತಿಗೊಳಿಸಲು ಪ್ರತಿಜ್ಞೆಯನ್ನು ಮಾಡಿದ ನೀನು ನೆರವಾಗುವಿಯೆಂದು ಕಾಯ್ದಿದ್ದಾನೆ."

ಕಿಷ್ಕಿಂಧಾಕಾಂಡ / ೩೦

ಸೀತೆಯನ್ನು ಹುಡುಕಲೆಂದು ನೀಡಲಾದ ಗಡುವು ಮುಗಿಯಬಂದರೂ ಸುಗ್ರೀವ ತೆಪ್ಪಗಿದ್ದನು. ಆಗ ಶ್ರೀರಾಮನು ಲಕ್ಷ್ಮಣನಿಗೆ ಹೀಗೆಂದನು —

ಕೃತಾರ್ಥಃ ಸಮಯಂ ಕೃತ್ವಾ ದುರ್ಮತಿರ್ನಾವಬುಧ್ಯತೇ ॥ ೬೯ ॥

ತನ್ನ ಕೆಲಸ ಮುಗಿದ ಕಾರಣ ದುರ್ಬುದ್ಧಿಯ ಈ ವಾನರ ತನ್ನ ಪ್ರತಿಜ್ಞೆಯನ್ನು ಮರೆತಿದ್ದಾನೆ. ಹೀಗಾಗಿ -

ಸ ಕಿಷ್ಕಿಂಧಾಂ ಪ್ರವಿಶ್ಯ ತ್ವಂ ಬ್ರೂಹಿ ವಾನರಪುಂಗವಮ್ ।
ಮೂರ್ಖಂ ಗ್ರಾಮ್ಯಸುಖೇ ಸಕ್ತಂ ಸುಗ್ರೀವಂ ವಚನಾನ್ಮಮ ॥ ೭೦ ॥

"ಎಲೈ ಲಕ್ಷ್ಮಣನೇ ! ಕಿಷ್ಕಿಂಧೆಗೆ ಹೋಗಿ ಭೋಗಾಸಕ್ತನಾದ ಆ ಮೂರ್ಖ ವಾನರರಾಜ ಸುಗ್ರೀವನಿಗೆ ನಾನಂದುದನ್ನು ಹೇಳು."

ಶ್ರೀರಾಮನು ಲಕ್ಷ್ಮಣನ ಕೈಲಿ ಸುಗ್ರೀವನಿಗೆ ಹೇಳಿಕಳಿಸಿದ ಸಂದೇಶದಲ್ಲಿ ಆತನು ಪ್ರತಿಜ್ಞೆಯನ್ನು ಮರೆತುದರ ಬಗೆಗೆ ಮತ್ತೆ ಹೇಳಿದ್ದಾನೆ :

ಸಮಯಂ ನಾಭಿಜಾನಾತಿ ಕೃತಾರ್ಥಃ ಪ್ಲವಗೇಶ್ವರಃ । ೭೭
ವರ್ಷಾಃ ಸಮಯಕಾಲಂ ತು ಪ್ರತಿಜ್ಞಾಯ ಹರೀಶ್ವರಃ ।
ವ್ಯತೀತಾಂಶ್ಚತುರೋ ಮಾಸಾನ್ ವಿಹರನ್ ನಾವಬುಧ್ಯತೇ ॥ ೭೮ ॥

"ತನ್ನ ಕೆಲಸ ಆದದ್ದರಿಂದ ವಾನರರಾಜ ಸುಗ್ರೀವ ತನ್ನ ಪ್ರತಿಜ್ಞೆಯನ್ನು ಮರೆತಿದ್ದಾನೆ. ಮಳೆಗಾಲ ಮುಗಿಯುತ್ತಲೂ ಸೀತೆಯನ್ನು ಹುಡುಕುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದನು. ಆದರೆ ಅವನು ಸುಖ ಭೋಗಗಳಲ್ಲಿ ಮುಳುಗಿದ್ದುದರಿಂದ ನಾಲ್ಕು ತಿಂಗಳುಗಳು ಅದಾವಾಗಲೋ ಮುಗಿದುಹೋಗಿವೆ. ಅವನಿಗೆ ಈ ಬಗೆಗೆ ಎಚ್ಚರವೇ ಇಲ್ಲ."

ಶ್ರೀರಾಮನು ತನ್ನ ಸಂದೇಶದಲ್ಲಿ ಸುಗ್ರೀವನಿಗೆ ಹೀಗೆಂದು ಎಚ್ಚರ ನೀಡಿದ್ದಾನೆ —

ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ । ೮೧

"ಪ್ರಾಮಾಣಿಕನಾಗಿ ನಿನ್ನ ಪ್ರತಿಜ್ಞೆಯನ್ನು ಪಾಲಿಸು. ವಾಲಿಯ ದಾರಿಯನ್ನು ಹಿಡಿಯಬೇಡ.

ಕುರುಷ್ವ ಸತ್ಯಂ ಮಮ ವಾನರೇಶ್ವರ ಪ್ರತಿಶ್ರುತಂ ಧರ್ಮಮವೇಕ್ಷ್ಯ ಶಾಶ್ವತಮ್ ।
ಮಾ ವಾಲಿನಂ ಪ್ರೇತಗತೋ ಯಮಕ್ಷಯೇ ತ್ವಮದ್ಯ ಪಶ್ಯೇರ್ಮಮ ಚೋದಿತಃ ಶರೈಃ ॥ ೮೪ ॥

"ಎಲೈ ವಾನರೇಶ್ವರನೇ ! ಸನಾತನಧರ್ಮವನ್ನು ಪಾಲಿಸು, ನೀನು ಕೈಕೊಂಡ ಪ್ರತಿಜ್ಞೆಯನ್ನು ಪೂರ್ತಿಗೊಳಿಸು. ಇಲ್ಲದೆಹೋದರೆ ಇಂದೇ ನನ್ನ ಬಾಣಗಳಿಗೆ ತುತ್ತಾಗಿ ವಾಲಿಯನ್ನು ಕಾಣಲು ಯಮಲೋಕಕ್ಕೆ ಹೋಗುವಿಯಂತೆ."

ಕಿಷ್ಕಿಂಧಾಕಾಂಡ / ೩೧

ಸುಗ್ರೀವನ ನಡತೆ ಲಕ್ಷ್ಮಣನನ್ನೂ ಕೆರಳಿಸಿತ್ತು. ಅವನು ಈ ಬಗೆಗೆ ಶ್ರೀರಾಮನಿಗೆ ಹೀಗೆಂದು ಹೇಳುತ್ತಾನೆ :

ನ ವಾನರಃ ಸ್ಥಾಸ್ಯತಿ ಸಾಧುವೃತ್ತೇ ನ ಮನ್ಯತೇ ಕರ್ಮಫಲಾನುಷಂಗಾನ್ ।
ನ ಭೋಕ್ಷ್ಯತೇ ವಾನರರಾಜ್ಯಲಕ್ಷ್ಮೀಂ ತಥಾಹಿ ನಾತಿಕ್ರಮತೇಽಸ್ಯ ಬುದ್ಧಿಃ ॥ ೨ ॥

"ಸುಗ್ರೀವ (ಹೇಳಿಕೇಳಿ ಒಬ್ಬ) ವಾನರ. ಆತ ಶ್ರೇಷ್ಠ ಪುರುಷರ ಆಚರಣೆಯ ದಾರಿಯಲ್ಲಿ ನಡೆಯಲಾರ. ಅವನು ಅಗ್ನಿಸಾಕ್ಷಿಯಾಗಿ (ನಿನ್ನೊಂದಿಗೆ) ಗೆಳೆತನವನ್ನು ಮಾಡಿಕೊಂಡನು. ಅದರ ಪುಣ್ಯದಿಂದಾಗಿಯೇ ವಾನರರ ರಾಜ್ಯಲಕ್ಷ್ಮಿಯ ಉಪಭೋಗವನ್ನು ಪಡೆಯುತ್ತಲಿದ್ದಾನೆ. ಅವನು ಗೆಳೆತನವನ್ನು ಸರಿಯಾಗಿ ನಿಭಾಯಿಸುತ್ತಿಲ್ಲ. ಹೀಗಾಗಿ (ಇನ್ನುಮುಂದೆ ಹೆಚ್ಚುಕಾಲ) ಅವನು ರಾಜವೈಭವ ಹಾಗೂ ಅದರ ಸುಖವನ್ನು ಅನುಭವಿಸಲಾರ."

**ಕಿಷ್ಕಿಂಧಾಕಾಂಡ / ೩೧**

ಶ್ರೀರಾಮ-ಲಕ್ಷ್ಮಣರು ಸತ್ಯಸಂಧರಾಗಿದ್ದು ಲಕ್ಷ್ಮಣ ತುಂಬ ಕೆರಳಿಬಿಟ್ಟ ಬಗೆಗೆ ಸುಗ್ರೀವನ ಮಂತ್ರಿಗಳು ಅವನಿಗೆ ಹೇಳಿದರು. ಅಲ್ಲದೆ,

ಯಥಾ ಹಿ ರಾಮೋ ಧರ್ಮಾತ್ಮಾ ತತ್ಕುರುಷ್ವ ಸಮಾಹಿತಃ ।
ರಾಜಂಸ್ತಿಷ್ಠ ಸ್ವಸಮಯೇ ಭವ ಸತ್ಯಪರಿಶ್ರವಃ ॥ ೫೧ ॥

"ನೀವು ಶ್ರೀರಾಮನ ಹೇಳಿಕೆಯಂತೆ ತಪ್ಪದೆ ನಡೆದುಕೊಳ್ಳಬೇಕು. ಅವನಿಗೆ ಕೊಟ್ಟ ಮಾತಿನಂತೆ ನಡೆದುಕೊಳ್ಳಿ, ಸತ್ಯಪ್ರತಿಜ್ಞರೆನ್ನಿಸಿಕೊಳ್ಳಿ" ಎಂದು ಅವರೆಂದರು.

**ಕಿಷ್ಕಿಂಧಾಕಾಂಡ / ೩೪**

ಲಕ್ಷ್ಮಣನು ಸುಗ್ರೀವನಿಗೆ ಪ್ರತಿಜ್ಞೆಯ ಪಾವಿತ್ರ್ಯ, ಶ್ರೇಷ್ಠತೆ ಹಾಗೂ ಪರಿಣಾಮಗಳನ್ನು ಕುರಿತು ಸವಿಸ್ತರವಾಗಿ ಹೇಳಿದ್ದಾನೆ :

ಯಸ್ತು ರಾಜಾ ಸ್ಥಿತೋಽಧರ್ಮೇ ಮಿತ್ರಾಣಾಮುಪಕಾರಿಣಾಮ್ ।
ಮಿಥ್ಯಾ ಪ್ರತಿಜ್ಞಾಂ ಕುರುತೇ ಕೋ ನೃಶಂಸತರಸ್ತತಃ ॥ ೮ ॥
ಶತಮಶ್ವಾನೃತೇ ಹಂತಿ ಸಹಸ್ರಂ ತು ಗವಾನೃತೇ ।
ಆತ್ಮಾನಂ ಸ್ವಜನಂ ಹಂತಿ ಪುರುಷಃ ಪುರುಷಾನೃತೇ ॥ ೯ ॥
ಪೂರ್ವಂ ಕೃತಾರ್ಥೋ ಮಿತ್ರಾಣಾಂ ನ ತತ್ಪ್ರತಿ ಕರೋತಿ ಯಃ ।
ಕೃತಘ್ನಃ ಸರ್ವಭೂತಾನಾಂ ಸ ವಧ್ಯಃ ಪ್ಲವಗೇಶ್ವರ ॥ ೧೦ ॥
ಅನಾರ್ಯಸ್ತ್ವಂ ಕೃತಘ್ನಶ್ಚ ಮಿಥ್ಯಾವಾದೀ ಚ ವಾನರ ।
ಪೂರ್ವಂ ಕೃತಾರ್ಥೋ ರಾಮಸ್ಯ ನ ತತ್ಪ್ರತಿಕರೋಷಿ ಯತ್ ॥ ೧೨ ॥
ಸ ತ್ವಂ ಗ್ರಾಮ್ಯೇಷು ಭೋಗೇಷು ಸಕ್ತೋ ಮಿಥ್ಯಾ ಪ್ರತಿಶ್ರವಃ ।
ನ ತ್ವಾಂ ರಾಮೋ ವಿಜಾನೀತೇ ಸರ್ಪಂ ಮಂಡುಕರಾವಿಣಮ್ ॥ ೧೫ ॥

"ಓ ವಾನರೇಶ್ವರನೇ ! ಯಾವ ರಾಜನು ತನ್ನ ಮೇಲೆ ಉಪಕಾರವನ್ನು ಮಾಡಿದ ಗೆಳೆಯನೆದುರು ಕೈಕೊಂಡ ಪ್ರತಿಜ್ಞೆಯನ್ನು, ಅಧರ್ಮದಿಂದ ಸುಳ್ಳುಗೈಯುವನೋ ಅವನಿಗಿಂತ ಹೆಚ್ಚಿನ ಕ್ರೂರರು ಇನ್ನಾರಾದರೂ ಇರಲು ಸಾಧ್ಯವೇ ? ಕುದುರೆ -ದಾನಕ್ಕಾಗಿ ಪ್ರತಿಜ್ಞೆಗೈದು ಅದನ್ನು ಪೂರ್ತಿಗೊಳಿಸದಿದ್ದರೆ ಅಶ್ವಾನೃತ (ಎಂಬ) ಪಾಪ ತಗಲುತ್ತದೆ. ಆದರಿಂದಾಗಿ ಒಂದು ನೂರು ಕುದುರೆಗಳನ್ನು ಕೊಂದ ಪಾಪಕ್ಕೆ ಒಡೆಯನಾಗಬೇಕಾಗುತ್ತದೆ. ಗೋದಾನಕ್ಕಾಗಿ ಮಾಡಿದ ಪ್ರತಿಜ್ಞೆಯನ್ನು ಪೂರ್ತಿಗೊಳಿಸದಿದ್ದರೆ ಒಂದು ಸಾವಿರ ಗೋವುಗಳನ್ನು ಕೊಂದಷ್ಟು ಪಾಪ ತಟ್ಟುತ್ತದೆ. ಇದೇ ರೀತಿಯಾಗಿ ಬೇರೊಬ್ಬರ ಕೆಲಸವನ್ನು ಮಾಡಿಕೊಡುವುದಾಗಿ ಒಪ್ಪಿಕೊಂಡು ಆ ಪ್ರತಿಜ್ಞೆಯನ್ನು ಮುರಿಯುವವನು ಆತ್ಮಘಾತಕಿ ಎನ್ನಿಸುವನಲ್ಲದೆ ತನ್ನವರ ಕೊಲೆಪಾತಕಿಯಾದ ಪಾಪಿ ಎನ್ನಿಸುತ್ತಾನೆ. ಅಂದಬಳಿಕ ಶ್ರೀರಾಮನಂತಹ (ಶ್ರೇಷ್ಠ) ಪುರುಷನೆದುರು ಕೈಕೊಂಡ ಪ್ರತಿಜ್ಞೆಯನ್ನು ಪೂರ್ತಿಗೊಳಿಸದವನ ಪಾಪಗಳಿಗೆ ಮಿತಿಯೆಂಬುದೇ ಇಲ್ಲ. ಯಾವನು ತನ್ನ ಗೆಳೆತನದಿಂದ ತನ್ನ ಕೆಲಸಗಳನ್ನು ಮಾಡಿಸಿಕೊಂಡು ತಾನು ಮಾತ್ರ ಅವರಿಗಾಗಿ ಏನನ್ನೂ ಮಾಡುವುದಿಲ್ಲವೋ ಅಂತಹ ಕೃತಘ್ನನು ಎಲ್ಲ ಪ್ರಾಣಿಗಳಿಂದಲೂ ವಧ್ಯನೆನ್ನಿಸಿದ್ದಾನೆ. ನೀನು ಅನಾರ್ಯ, ಕೃತಘ್ನ ಹಾಗೂ ಸುಳ್ಳುಗಾರ. ಶ್ರೀರಾಮನ ನೆರವಿನಿಂದ ಮೊದಲಿಗೆ ನಿನ್ನ ಕೆಲಸವನ್ನು ಪೂರೈಸಿಕೊಂಡೆ. ಈಗ ಅವನಿಗೆ ನೆರವು ನೀಡಲೇಬೇಕಾದ ಕ್ಷಣಕ್ಕೆ ಮಾತ್ರ ನೀನೇನೂ ಮಾಡಲು ಒಲ್ಲೆ. ಸೀತೆಯನ್ನು ಕಂಡುಹಿಡಿಯುವುದು ನಿಜವಾಗಿಯೂ ನಿನ್ನ ಕರ್ತವ್ಯ. ಆದರೆ ನೀನು ಮಾತ್ರ ನಿನ್ನ ಪ್ರತಿಜ್ಞೆಯನ್ನು ಸುಳ್ಳಾಗಿಸಿ ಹೀನಬಗೆಯ ಭೋಗಗಳಲ್ಲಿ ಮೈಮರೆತಿರುವೆ. ನೀನು ಕಪ್ಪೆಯಂತೆ ಸದ್ದುಮಾಡುವ (ನಂಜಿನ) ಹಾವು." ಇಷ್ಟನ್ನು ಹೇಳಿ ಲಕ್ಷ್ಮಣನು ಅವನಿಗೆ, "ಸಮಯೇ ತಿಷ್ಠ ಸುಗ್ರೀವ" ...... ॥ ೧೮ ॥ ಎಂದು ಖಡಾಖಂಡಿತವಾಗಿ ಎಚ್ಚರಿಕೆಯನ್ನು ನೀಡಿದ್ದಾನೆ.

ಸುಂದರಕಾಂಡ / ೫೧

ಶ್ರೀರಾಮನು ಸುಗ್ರೀವನಿಗೆ ಅವನ ರಾಜ್ಯವನ್ನು ಮರಳಿ ದೊರಕಿಸಿಕೊಡುವುದಾಗಿ ಪ್ರತಿಜ್ಞೆಯನ್ನು ಕೈಕೊಂಡಿದ್ದು ಸುಗ್ರೀವನು ಸೀತೆಯನ್ನು ಕಂಡುಹಿಡಿಯುವಲ್ಲಿ ಶ್ರೀರಾಮನಿಗೆ ನೆರವು ನೀಡುವುದಾಗಿ ಪ್ರತಿಜ್ಞೆಗೈದುದಾಗಿಯೂ ಹನುಮಂತನು ರಾವಣನಿಗೆ ಹೇಳುತ್ತಾನೆ —

ತಸ್ಯ ತೇನ ಪ್ರತಿಜ್ಞಾತಂ ಸೀತಾಯಾಃ ಪರಿಮಾರ್ಗಣಮ್ । ೯

ಸುಂದರಕಾಂಡ / ೧೨೬

ಹನುಮಂತ ಸುಗ್ರೀವನ ಪ್ರತಿಜ್ಞೆಯನ್ನು ಕುರಿತು ಭರತನಿಗೆ ಹೇಳುತ್ತಾನೆ —

ಸುಗ್ರೀವಃ ಸ್ವಾಮಿತೋ ರಾಜ್ಯೇ ಸಹಿತಃ ಸರ್ವವಾನರೈಃ ।
ರಾಮಾಯ ಪ್ರತಿಜಾನೀತೇ ರಾಜಪುತ್ರ್ಯಾಸ್ತು ಮಾರ್ಗಣಮ್ ॥ ೩೯ ॥

ಶ್ರೀರಾಮನು ವಾನರರೆಲ್ಲರೊಂದಿಗೆ ಸುಗ್ರೀವನನ್ನು ಪಟ್ಟಕ್ಕೇರಿಸಿದ ತರುವಾಯ ಅವನು ಸೀತೆಯನ್ನು ಹುಡುಕಲು ನೆರವಾಗುವೆನೆಂದು ಶ್ರೀರಾಮನೆದುರು ಪ್ರತಿಜ್ಞೆಮಾಡಿದನು.

## ೧೮. ಕಿಷ್ಕಿಂಧೆಗೆ ಹಿಂತಿರುಗೆನೆಂದು ಅಂಗದನ ಪ್ರತಿಜ್ಞೆ

ಕಿಷ್ಕಿಂಧಾಕಾಂಡ / ೫೫

ಸುಗ್ರೀವನು ದಕ್ಷಿಣದತ್ತ ಸೀತೆಯನ್ನು ಹುಡುಕುವ ಕೆಲಸವನ್ನು ವಾನರರಿಗೆ ಒಪ್ಪಿಸಿದನು. ಅವರಲ್ಲಿ ಅಂಗದ ಹಾಗೂ ಹನುಮಂತರಿದ್ದರು. ಕೆಲಸ ಕೈಗೂಡದ್ದರಿಂದ ಅಂಗದನಲ್ಲಿ ತನ್ನ ಕೊಲೆಯಾಗುವ ಹೆದರಿಕೆ ಹುಟ್ಟಿಕೊಂಡಿತು. ಅದನ್ನವನು ಬೇರೆ ವಾನರರೆದುರು ಆಡಿಯೂ ತೋರಿಸಿದನು. ಅಲ್ಲದೆ ಸುಗ್ರೀವ ಬಲು ಕಠೋರನಿದ್ದು ತನ್ನೊಂದಿಗೆ ಹಗೆ ಸಾಧಿಸುವನೆಂಬ ಶಂಕೆಯಿಂದಾಗಿ ಅವನು ಹೆದರಿಹೋಗಿದ್ದನು. ವಾನರರೊಂದಿಗೆ ಚರ್ಚಿಸಿ ಪ್ರಾಯೋಪವೇಶನವನ್ನು ಕೈಕೊಳ್ಳಲು ತೀರ್ಮಾನಿಸಿದನು. ಅಂಗದನ ಈ ಮಾತುಗಳಿಂದಾಗಿ ವಾನರರಲ್ಲಿ ಎರಡು ಬಣಗಳು ಉಂಟಾದವು. ಸುಗ್ರೀವನ ಕೈಗೆ ಸಿಕ್ಕುಬಿದ್ದು ಜೀವತೊರೆದುಬಿಡುವುದು ಹೆಚ್ಚು ಶ್ರೇಯಸ್ಕರವಾಗಿ ಕಂಡಿತು. ಅವನು ಹೀಗೆಂದನು —

ಅಹಂ ವಃ ಪ್ರತಿಜಾನಾಮಿ ನ ಗಮಿಷ್ಯಾಮ್ಯಹಂ ಪುರೀಮ್ ।
ಇಹೈವ ಪ್ರಾಯಮಾಸಿಷ್ಯೇ ಶ್ರೇಯೋ ಮರಣಮೇವ ಮೇ ॥ ೧೨ ॥

"ನಾನು ಕಿಷ್ಕಿಂಧೆಗೆ ಮರಳಲಾರೆನೆಂದು ಪ್ರತಿಜ್ಞೆಗೈದು ಸಾರುತ್ತೇನೆ. ಸಾವು ಬರುವವರೆಗೆ ಇಲ್ಲಿಯೇ ಉಪವಾಸ ಬಿದ್ದು ಬದುಕನ್ನು ಮುಗಿಸಿಬಿಡುವುದೇ ನನಗೆ ಶ್ರೇಯಸ್ಕರವಾಗಿ ಕಾಣುತ್ತದೆ."

## ೧೯. ಸುಷೇಣ ವಾನರನ ಪ್ರತಿಜ್ಞೆ

ಕಿಷ್ಕಿಂಧಾಕಾಂಡ / ೬೫

ವಾನರರೆಲ್ಲರೂ ಕಡಲ ತಡಿಗೆ ಬಂದು ತಲುಪಿದರು. ಅವರ ಹರಹನ್ನು ಕಂಡು ಅದನ್ನು ದಾಟಿ ಲಂಕೆಯನ್ನು ತಲುಪುವುದು ಹೇಗೆಂಬ ಚಿಂತೆ ಅವರೆಲ್ಲರನ್ನು ಕಾಡಿತು. ವಾನರರು ಹಾರಬಲ್ಲವರಾಗಿದ್ದರೂ ಒಂದು ನೂರು ಯೋಜನಗಳ ಅಂತರವನ್ನು ನೆಗೆದು ಹಾರುವಂತಿರಲಿಲ್ಲ. ಸುಗ್ರೀವನು ಸೀತೆಯನ್ನು ಹುಡುಕುವುದಾಗಿ ಶ್ರೀರಾಮನೆದುರು ಕೈಕೊಂಡ ಪ್ರತಿಜ್ಞೆ ಕೈಗೂಡುವಂತಾಗಲೆಂದು ಅವರೆಲ್ಲ ಆಸೆಪಟ್ಟಿದ್ದರು. ವಾನರರು ಅದೆಷ್ಟು ದೂರಕ್ಕೆ ನೆಗೆಯಬಲ್ಲರೆಂಬುದನ್ನು ಕಂಡುಕೊಳ್ಳಬೇಕೆಂದು ಅಂಗದ ಇಷ್ಟಪಟ್ಟನು. ಅವರನ್ನು ಹಾಗೆಂದು ಕೇಳಿದನು. ಅದಕ್ಕೆ ಸುಷೇಣ ವಾನರ ಹೀಗೆಂದನು —

ಅಶೀತಿಂ ಪ್ರತಿಜಾನೇಽಹಂ ಯೋಜನಾನಾಂ ಪರಾಕ್ರಮೇ । ೯

"ಒಂದೇ ನೆಗೆತದಲ್ಲಿ ಎಂಬತ್ತು ಯೋಜನಗಳನ್ನು ಹಾರಬಲ್ಲೆನೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ."

## ೨೦. ಹಾರಾಟದಲ್ಲಿ ವಿಶ್ರಾಂತಿಯನ್ನು ಪಡೆಯೆನೆಂದು ಹನುಮಂತನ ಪ್ರತಿಜ್ಞೆ

**ಸುಂದರಕಾಂಡ / ೧**

ಕಡಲನ್ನು ಹಾರಿ ಲಂಕೆಯಲ್ಲಿ ಸೀತೆಯನ್ನು ಕಂಡುಹಿಡಿಯುವ ಕಷ್ಟದ ಕೆಲಸವನ್ನು ಹನುಮಂತನಿಗೆ ಒಪ್ಪಿಸಲಾಯಿತು. ಅವನು ಆ ಸವಾಲನ್ನು ಒಪ್ಪಿಕೊಂಡನು. ಹನುಮಂತನು ಇಕ್ಷ್ವಾಕುವಂಶದ ಶ್ರೀರಾಮನಿಗೆ ನೆರವಾಗಲಿದ್ದನು. ಶ್ರೀರಾಮನ ಪೂರ್ವಜರು ಕಡಲಿಗೆ ನೆರವು ನೀಡಿದವರು. ಈ ಉಪಕಾರವನ್ನು ನೆನೆದು ಕಡಲು ಹನುಮಂತನೊಂದಿಗೆ ಎಲ್ಲ ಬಗೆಯಲ್ಲೂ ಸಹಕರಿಸಲು ಸಿದ್ಧವಾಗಿತ್ತು. ಹಿಂದಕ್ಕೆ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ ಚೆಲ್ಲಲು ಟೊಂಕ ಕಟ್ಟಿದ್ದನು. ಆಗ ಹನುಮಂತನ ತಂದೆಯಾದ ವಾಯುವು ಮೈನಾಕ ಪರ್ವತವನ್ನು ಈ ಕಡಲಲ್ಲಿ ಅಡಗಿಸಿ ಇಟ್ಟಿದ್ದನು. ಹೀಗಾಗಿ ಅದು ಹನುಮಂತನೊಂದಿಗೆ ಅಪ್ರತ್ಯಕ್ಷವಾಗಿ ನಂಟುಳ್ಳದ್ದಾಗಿತ್ತು. ಹಾರಾಟದ ಕಾಲಕ್ಕೆ ಹನುಮಂತನಿಗೆ ತುಸು ವಿಶ್ರಾಂತಿ ದೊರೆಯಲೆಂದು ಕಡಲು ಆ ಪರ್ವತಕ್ಕೆ ಮೇಲೆದ್ದು ಬರಹೇಳಿತ್ತು. ಅದಕ್ಕೆ ಹನುಮಂತ ಹೀಗೆಂದ—"ನಿನ್ನ ಆತಿಥ್ಯವಂತೂ ನನಗೆ ಸಿಕ್ಕೇ ಇದೆ (ಎಂದು ತಿಳಿ). ಸಧ್ಯಕ್ಕೆ ನಾನೊಂದು ತುಂಬ ಮಹತ್ತರವಾದ ಕೆಲಸಕ್ಕೆ ಹೊರಟಿರುವ ಕಾರಣ ನಿನ್ನ ಕೋರಿಕೆಯನ್ನು ಮನ್ನಿಸಲಾರೆ."

## ೨೧. ಮೊಸಳೆಯ ಬಾಯನ್ನು ಹೊಗುವುದಾಗಿ ಹನುಮಂತನ ಪ್ರತಿಜ್ಞೆ **ಸುಂದರಕಾಂಡ / ೧**

ಮಧ್ಯದಲ್ಲೆಲ್ಲೂ ನಿಲ್ಲದೆ ನೂರು ಯೋಜನಗಳನ್ನು ತಾನು ಹಾರುವುದಾಗಿ ಹನುಮಂತನು ಪ್ರತಿಜ್ಞೆಯನ್ನು ಮಾಡಿದ್ದನು. ಅವನ ಈ ಹಾರಾಟದ ಸಾಮರ್ಥ್ಯವನ್ನು ಪರೀಕ್ಷೆಗೊಡ್ಡಲೆಂದು ದೇವೇತಗಳು, ಗಂಧರ್ವರೆಲ್ಲ ಅವನಿಗೆ ತಡೆಯೊಡ್ಡುವಂತೆ ಮೊಸಳೆಯನ್ನು ಕೇಳಿಕೊಂಡರು. ಅದು ಹನುಮಂತನನ್ನು ತಡೆಗಟ್ಟಿ ಹೀಗೆಂದಿತು — "ನೀನು ನನ್ನ ಆಹಾರ. ನನ್ನ ಬಾಯಿಗೆ ಬಾ." ಅದು ತನ್ನ ದವಡೆಗಳನ್ನು ತೆರೆಯಿತು. ಹನುಮಂತ ಅದಕ್ಕೆ ತನ್ನ ಆಗಬೇಕಿದ್ದ ಕೆಲಸದ ಅಗತ್ಯ ಹಾಗೂ ಶೀಘ್ರತೆಗಳನ್ನು ತಿಳಿಹೇಳಿದನು. ಅವನೆಂದುದು —

> ...ಮೈಥಿಲೀಂ ದೃಷ್ಟ್ವಾ ರಾಮಂ ಚಾಕ್ಲಿಷ್ಟಕಾರಿಣಮ್ ।
> ಆಗಮಿಷ್ಯಾಮಿ ತೇ ವಕ್ತ್ರಂ ಸತ್ಯಂ ಪ್ರತಿಶೃಣೋಮಿ ತೇ ॥ ೧೫೫ ॥

"ನೀನಂತೂ ನನ್ನನ್ನು ತಿನ್ನಲು ಇಚ್ಛಿಸುತ್ತಿರುವೆ. ಅಂದಬಳಿಕ ನನ್ನದೊಂದು ಪ್ರತಿಜ್ಞೆಯಿದೆ. ಸೀತೆಯ ದರ್ಶವಾಗುತ್ತಲೇ ಶ್ರೀರಾಮನನ್ನು ಕಂಡು ನಾನಾಗಿಯೇ ನಿನ್ನ ಬಳಿಗೆ ಬರುವೆ. ಬಂದವನೇ ನಿನ್ನ ಬಾಯನ್ನು ಪ್ರವೇಶಿಸುವೆ—ಎಂಬುದೇ ಆ ಪ್ರತಿಜ್ಞೆ."

**ಸುಂದರಕಾಂಡ / ೫೮**

ಹನುಮಂತ ಲಂಕೆಯಿಂದ ಮರಳಿ ಬಂದನು. ಜಾಂಬವಂತ ಮೊದಲಾದವರಿಗೆ ಲಂಕೆಯ ಪಯಣವನ್ನು ಬಣ್ಣಿಸಿ ಹೇಳಿದನು. ಆಗ ಇದೇ ಪ್ರತಿಜ್ಞೆಯನ್ನು ಇನ್ನೊಮ್ಮೆ ಉಚ್ಚರಿಸಿದ್ದಾನೆ —

> ಅಥವಾ ಮೈಥಿಲೀಂ ದೃಷ್ಟ್ವಾ ರಾಮಂ ಚಾಕ್ಲಿಷ್ಟಕಾರಿಣಮ್ ॥ ೨೭ ॥
> ಆಗಮಿಷ್ಯಾಮಿ ತೇ ವಕ್ತ್ರಂ ಸತ್ಯಂ ಪ್ರತಿಶ್ರುಣೋಮಿ ತೇ । ೨೮

"ಮಿಥಿಲ ನರೇಶನ ಕನ್ಯೆ ಹಾಗೂ ಮಹತ್ತರ ಕಾರ್ಯವನ್ನು ಕೈಕೊಂಡಿರುವ ಶ್ರೀರಾಮರ ದರ್ಶನಗಳನ್ನು ಪಡೆದು ನಿನ್ನ ಬಾಯನ್ನು ಹೊಗುವೆನೆಂದು ಸತ್ಯಪ್ರತಿಜ್ಞೆಯಿಂದ ಹೇಳುತ್ತೇನೆ."

## ೨೨. ಶ್ರೀರಾಮನಿಗೆ ನೆರವಾಗುವುದಾಗಿ ಹನುಮಂತನ ಪ್ರತಿಜ್ಞೆ **ಸುಂದರಕಾಂಡ / ೩೯**

ಹನುಮಂತ ಸೀತೆಯನ್ನು ಭೆಟ್ಟಿಯಾದನು. ಈ ಸಂಗತಿಯನ್ನು ಶ್ರೀರಾಮನಿಗೆ ಮನಗಾಣಿಸಲೆಂದು ಸೀತೆಯು ಹನುಮಂತನ ಕೈಲಿ ಒಂದು ಮಣಿಯನ್ನು ಕಳಿಸಿಕೊಟ್ಟಳು. ಶ್ರೀರಾಮ ಆ ಮಣಿಯನ್ನು ಗುರುತಿಸುತ್ತಿದ್ದನಾದಕಾರಣ ಸಂದೇಹಕ್ಕೆ ಎಡೆಯಿರಲಿಲ್ಲ. ಹನುಮಂತನನ್ನು ಬೀಳ್ಕೊಡುವಾಗ ಅವಳು ಅವನಿಗೆ

ಹೀಗೆಂದಳು —

ಹನೂಮನ್ ಯತ್ನಮಾಸ್ಥಾಯ ದುಃಖಕ್ಷಯಕರೋ ಭವ ।
ಸ ತಥೇತಿ ಪ್ರತಿಜ್ಞಾಯ ಮಾರುತಿರ್ಭೀಮವಿಕ್ರಮಃ ॥ ೫ ॥

ಶ್ರೀರಾಮನು ಕೈಗೆತ್ತಿಕೊಂಡ ಕೆಲಸವನ್ನು ಪೂರ್ತಿಗೊಳಿಸುವಲ್ಲಿ ಅವನಿಗೆ ನೆರವಾಗೆಂದು ಸೀತೆ ಹನುಮಂತನಿಗೆ ಹೇಳಿದಳು. ಆಗ ಎಲ್ಲವನ್ನೂ ಅವಳ ಮನದಂತೆಯೇ ಮಾಡುವೆನೆಂದು ಹೇಳಿ ಅವನು ಪ್ರತಿಜ್ಞೆಗೈದನು.

## ೨೩. ರಾವಣನ ವಧೆಗಾಗಿ ಶ್ರೀರಾಮನ ಪ್ರತಿಜ್ಞೆ ಸುಂದರಕಾಂಡ / ೫೧

ಹನುಮಂತ ರಾವಣನಿಗೆ ಹೀಗೆಂದನು : "ಇಡಿಯ ಲಂಕೆಯನ್ನು ಹಾಳುಮಾಡಲು ನಾನೊಬ್ಬನೇ ಸಾಕು. ಆದರೆ ಹಾಗೆ ಮಾಡಲು ನನಗೆ ಶ್ರೀರಾಮನ ಅಪ್ಪಣೆಯಿಲ್ಲ. ಅವನು ಸೀತೆಯನ್ನು ಕಂಡುಹಿಡಿಯಲು ಮಾತ್ರ ನನಗೆ ಹೇಳಿದ್ದಾನೆ. ಅಲ್ಲದೆ,

ರಾಮೇಣ ಹಿ ಪ್ರತಿಜ್ಞಾತಂ ಹರ್ಯೃಕ್ಷಗಣಸಂನಿಧೌ ।
ಉತ್ಸಾದನಮಮಿತ್ರಾಣಾಂ ಸೀತಾಯೈಸ್ತು ಪ್ರಧರ್ಷಿತಾ ॥ ೩೨ ॥

"ಸೀತೆಯೊಡನೆ ತಪ್ಪಾಗಿ ನಡೆದುಕೊಂಡವನನ್ನು ಹೊಸೆದುಹಾಕುವುದೆಂದು ವಾನರರು ಹಾಗೂ ಕರಡಿಗಳ ಮೇಳದಲ್ಲಿ ಪ್ರತಿಜ್ಞೆಗೈಯಲಾಗಿದೆ."

ಯುದ್ಧಕಾಂಡ / ೧೯

ವಿಭೀಷಣ ಶ್ರೀರಾಮನನ್ನು ಮೊರೆಹೊಕ್ಕನು. ಶ್ರೀರಾಮನು ಅವನಿಗೆ ಅಭಯವನ್ನಿತ್ತನು. ಅವನಿಂದ ಲಂಕೆಯ ಪರಿಸ್ಥಿತಿ ತಿಳಿಯುತ್ತಲೇ ಶ್ರೀರಾಮನು ಅವನಿಗೆ ಆಣೆಮಾಡಿ ಹೀಗೆಂದನು —

ಅಹಂ ಹತ್ವಾ ದಶಗ್ರೀವಂ ಸಪ್ರಹಸ್ತಂ ಸಹಾತ್ಮಜಮ್ ।
ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತಚ್ಛೃಣೋತು ಮೇ ॥ ೧೯ ॥
ಅಹತ್ವಾ ರಾವಣಂ ಸಂಖ್ಯೇ ಸಪುತ್ರಜನಬಾಂಧವಮ್ ।
ಅಯೋಧ್ಯಾಂ ನ ಪ್ರವೇಕ್ಷ್ಯಾಮಿ ತ್ರಿಭಿಸ್ತೈರ್ಭ್ರಾತೃಭಿಃ ಶಪೇ ॥ ೨೧ ॥

"ಪ್ರಹಸ್ತನು ಹಾಗೂ ಪುತ್ರನ ನೆರವಿನಿಂದ ರಾವಣನನ್ನು ಕೊಲ್ಲುವೆನು. ಲಂಕೆಯ ಸಿಂಹಾಸನದ ಮೇಲೆ ನಿನಗೆ ಪಟ್ಟಾಭಿಷೇಕ ನಡೆಯಲಿದೆ. ನನ್ನೀ ನಿಜವಾದ ಮಾತನ್ನು ಆಲಿಸು. ರಾವಣನನ್ನು ಅವನ ಗಂಡುಮಕ್ಕಳು. ಸೇವಕರೆಲ್ಲರನ್ನೊಡಗೂಡಿ ಕೊಂದುಹಾಕದೆ ನಾನು ಅಯೋಧ್ಯೆಯನ್ನು ಪ್ರವೇಶಿಸೆನೆಂದು ನನ್ನ ಮೂವರು ಸೋದರರ ಮೇಲೆ ಆಣೆಯಿಟ್ಟು ಹೇಳುತ್ತೇನೆ."

ಯುದ್ಧಕಾಂಡ / ೧೦೦

ರಾವಣನು ಲಕ್ಷ್ಮಣನ ಮೇಲೆ ಶಕ್ತಿಯನ್ನು ಪ್ರಯೋಗಿಸಿದನು. ಶ್ರೀರಾಮನು ತನ್ನ ಸಾಮರ್ಥ್ಯದಿಂದ ಅದನ್ನು ಅವನ ಮೈಯಿಂದ ಕಿತ್ತೆಸೆದನು. ಆಗ ಅವನು ಹನುಮಂತ, ಸುಗ್ರೀವ ಮುಂತಾದವರಿಗೆ ಹೀಗೆಂದನು —"ನೀವು ಲಕ್ಷ್ಮಣನನ್ನು ಕಾಪಾಡಿ. ಪಾಪವೇ ಮೈವೆತ್ತುಬಂದಿರುವ ರಾವಣನನ್ನು ಕೊಂದುಬಿಡುವ ಒಳ್ಳೆಯ ಅವಕಾಶ ನನಗಿಂದು ಒದಗಿಬಂದಿದೆ. ಅವನನ್ನು ಕೊಲ್ಲಲು ಬಹಳ ದಿನಗಳಿಂದ ಕಾದು ಕುಳಿತಿದ್ದೆ.

ಅಸ್ಮಿನ್ ಮುಹೂರ್ತೇ ನ ಚಿರಾತ್ ಸತ್ಯಂ ಪ್ರತಿಶೃಣೋಮಿ ವಃ ।
ಅರಾವಣಮರಾಮಂ ವಾ ಜಗದ್ ದ್ರಕ್ಷ್ಯಥ ವಾನರಾಃ ॥ ೪೮ ॥

"ಈ ದಿನ ರಾಮ ಇಲ್ಲವೆ ರಾವಣರಲ್ಲಿ ಒಬ್ಬ ಮಾತ್ರ ಬದುಕಿ ಉಳಿದುದನ್ನು ಕಾಣಲಿದ್ದೀರೆಂದು ಸತ್ಯಪ್ರತಿಜ್ಞೆಯಿಂದ ಹೇಳುತ್ತೇನೆ."

ಯುದ್ಧಕಾಂಡ / ೧೦೧

ಲಕ್ಷ್ಮಣ ಶ್ರೀರಾಮನಿಗೆ ರಾವಣವಧೆ ಹಾಗೂ ವಿಭೀಷಣನನ್ನು ಲಂಕೆಯ ಪಟ್ಟಕ್ಕೇರಿಸುವ ಅವನ ಪ್ರತಿಜ್ಞೆಗಳನ್ನು ನೆನಪು ಮಾಡಿಕೊಡುತ್ತಾನೆ —

ತಾಂ ಪ್ರತಿಜ್ಞಾಂ ಪ್ರತಿಜ್ಞಾಯ ಪುರಾ ಸತ್ಯಪರಾಕ್ರಮ । ೫೧
ಸ ಹಿ ಪ್ರತಿಜ್ಞಾಂ ಕುರ್ವಂತಿ ವಿತಥಾಂ ಸತ್ಯವಾದಿನಃ ।
ಲಕ್ಷಣಂ ಹಿ ಮಹತ್ತ್ವಸ್ಯ ಪ್ರತಿಜ್ಞಾಪರಿಪಾಲನಮ್ ॥ ೫೨ ॥
ವಧೇನ ರಾವಣಸ್ಯಾದ್ಯ ಪ್ರತಿಜ್ಞಾಮನುಪಾಲಯ ॥ ೫೩ ॥

"ಸತ್ಯನಿಷ್ಠರಾದ ವ್ಯಕ್ತಿಗಳು ತಮ್ಮ ಪ್ರತಿಜ್ಞೆಗಳು ಸುಳ್ಳಾಗದಂತೆ ನೋಡಿಕೊಳ್ಳುತ್ತಾರೆ. ಏಕೆಂದರೆ ಪ್ರತಿಜ್ಞಾ ಪರಿಪಾಲನೆಯೇ ಮಹತ್ವದ ಲಕ್ಷಣವೆನಿಸಿದೆ. ಇಂದೇ ರಾವಣನನ್ನು ಕೊಂದು ನಿನ್ನ ಸತ್ಯಪ್ರತಿಜ್ಞೆಯನ್ನು ಪೂರ್ತಿಗೊಳಿಸು."

ಯದಿ ವಧಮಿಚ್ಛಸಿ ರಾವಣಸ್ಯ ಸಂಖ್ಯೇ
ಯದಿ ಚ ಕೃತಾಂ ಹಿ ತವೇಚ್ಛಸಿ ಪ್ರತಿಜ್ಞಾಮ್ ।
ಯದಿ ತವ ರಾಜಸುತಾಭಿಲಾಷ ಆರ್ಯ
ಕುರು ಚ ವಚೋ ಮಮ ಶೀಘ್ರಮದ್ಯ ವೀರ ॥ ೫೭ ॥

"ನೀನು ರಣರಂಗದಲ್ಲಿ ರಾವಣನನ್ನು ಕೊಂದು ಸೀತೆಯನ್ನು ಪಡೆಯಬಯಸುವಿಯಾದರೆ ಇಂದೇ ರಾವಣನನ್ನು ಕೊಂದು ನನ್ನ ಕೋರಿಕೆಯನ್ನು ಪೂರ್ತಿಮಾಡು."

ಯುದ್ಧಕಾಂಡ / ೧೦೮

ರಾವಣವಧೆಯ ಪ್ರತಿಜ್ಞೆಯ ಬಗೆಗಿನ ಇನ್ನೊಂದು ಉಲ್ಲೇಖ —

ಸ ತು ನಿಹತರಿಪುಃ ಸ್ಥಿರಪ್ರತಿಜ್ಞಃ ಸ್ವಜನಬಲಾಭಿವೃತೋ ರಣೇ ಬಭೂವ ।
ರಘುಕುಲನೃಪನಂದನೋ ಮಹೌಜಾಸ್ತ್ರಿದಶಗಣೈರಭಿಸಂವೃತ್ತೋ ಮಹೇಂದ್ರಃ ॥ ೩೪ ॥

ಶ್ರೀರಾಮನು ರಾವಣನನ್ನು ಕೊಲ್ಲುವ ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ ಬಳಿಕ ಅವನ ಜನ ಅವನನ್ನು ಸುತ್ತುಗಟ್ಟಿದರು. ಆಗ ಅವನು ಇಂದ್ರನಂತೆ ಕಂಗೊಳಿಸುತ್ತಿದ್ದನು.

ಯುದ್ಧಕಾಂಡ / ೧೧೩

ಶ್ರೀರಾಮನು ಹನುಮಂತನಿಗೆ ವಿಭೀಷಣನ ಅಪ್ಪಣೆಯನ್ನು ಪಡೆದು, ಲಂಕೆಯನ್ನು ಪ್ರವೇಶಿಸಿ, ಸೀತೆಗೆ ರಾವಣವಧೆಯ ಸಮಾಚಾರವನ್ನು ತಲುಪಿಸಿ, ತಮ್ಮ ಕುಶಲವಾರ್ತೆಯನ್ನು ಹೇಳಿ ಹಾಗೂ ಅವಳದನ್ನು ಕೇಳಿಕೊಂಡು ಬರಲು ಹೇಳಿದನು. ಆ ಪ್ರಕಾರ ಹನುಮಂತ ಸೀತೆಯನ್ನು ಕಂಡನು. ಅಪ್ಪಣೆಯಂತೆ ಅವಳ ಕುಶಲವನ್ನು ಅರಿತನು. ರಾವಣನ ಕೊಲೆಯಾದುದನ್ನು ಅವಳಿಗೆ ಹೇಳಿದನು :

ರಾವಣಶ್ಚ ಹತಃ ಶತ್ರುರ್ಲಂಕಾ ಚೈವ ವಶೀಕೃತಾ ॥ ೧೦ ॥
ಮಯಾ ಹ್ಯಲಬ್ಧನಿದ್ರೇಣ ಧೃತೇನ ತವ ನಿರ್ಜಯೇ ।
ಪ್ರತಿಜ್ಞೈಷಾ ವಿನಿಸ್ತೀರ್ಣಾ ಬದ್ಧ್ವಾ ಸೇತುಂ ಮಹಾದಧೌ ॥ ೧೧ ॥

"ಎಲ್ಲೆ ದೇವಿ, ನಿನ್ನನ್ನು ಬಿಡುಗಡೆಗೊಳಿಸಿ ನಾನು ರಾವಣವಧೆಯ ನನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದೆ. ಅದನ್ನು ಪೂರ್ತಿಗೊಳಿಸಲೆಂದು ನಿದ್ರೆಯನ್ನು ಲೆಕ್ಕಿಸದೆ ಸೇತುವೆಯನ್ನು ಕಟ್ಟಿದೆ" ಎಂಬುದಾಗಿ ಹನುಮಂತನು ಶ್ರೀರಾಮನ ಸಂದೇಶವನ್ನು ಸೀತೆಗೆ ಹೇಳಿದನು.

ಯುದ್ಧಕಾಂಡ / ೧೧೫

ಸೀತೆಯನ್ನು ಬಿಡುಗಡೆಗೊಳಿಸಿದ ತರುವಾಯ ಶ್ರೀರಾಮನು ಅವಳಿಗೆ ತನ್ನ ಮನದಲ್ಲಿದ್ದ ಮಾತನ್ನು ಹೀಗೆ ಹೇಳುತ್ತಾನೆ —

...ಅದ್ಯ ಮೇ ಸಫಲಃ ಶ್ರಮಃ ।
ಅದ್ಯ ತೀರ್ಣಪ್ರತಿಜ್ಞೋಽಹಂ ಪ್ರಭವಾಮ್ಯದ್ಯ ಚಾತ್ಮನಃ ॥ ೪ ॥

"ನನ್ನ ಹೆಣಗಾಟವೆಲ್ಲ ಇಂದು ಸಾರ್ಥಕವಾಯಿತಲ್ಲದೆ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ್ದರಿಂದ ಮನಸ್ಸು ಹಗುರಾಯಿತು."

## ೨೪. ಸೀತೆಯನ್ನು ಕಂಡುಹಿಡಿಯಲು ಶ್ರೀರಾಮನ ಪ್ರತಿಜ್ಞೆ — ಸುಂದರಕಾಂಡ / ೬೦

ಹನುಮಂತನು ಲಂಕೆಯಲ್ಲಿ ನಡೆದ ಘಟನೆಗಳನ್ನೆಲ್ಲ ವಾನರರಿಗೆ ವಿವರಿಸಿ ಲಂಕೆಯ ಮೇಲೆ ಏರಿ ಹೋಗುವಂತೆ ಅವರನ್ನು ಹುರಿದುಂಬಿಸಿದನು. ಆಗ ಅಂಗದನು ಉತ್ಸಾಹದ ಭರದಲ್ಲಿ ಸೀತೆಯೊಂದಿಗೆ ಕಿಷ್ಕಿಂಧೆಗೆ ಮರಳಿ ಹೋಗುವ ಬಗೆಗೆ ಪ್ರಸ್ತಾಪವನ್ನು ಮಂಡಿಸಿದನು. ಅದಕ್ಕೆ ಜಾಂಬುವಂತನು ಅವನಿಗೆ ಹೀಗೆಂದನು—"ನೀನು ಪರಾಕ್ರಮಿಯೂ, ಬುದ್ಧಿವಂತನೂ ಆಗಿದ್ದರೂ ನಿನ್ನೀ ಯೋಚನೆ ಸರಿಯಾದುದಲ್ಲ. ಏಕೆಂದರೆ ವಾನರರಾಜನಾದ ಸುಗ್ರೀವನಾಗಲಿ ಇಲ್ಲವೆ ಶ್ರೀರಾಮನಾಗಲಿ ಸೀತೆಯನ್ನು ಕಂಡುಹಿಡಿಯುವ ಕೆಲಸವನ್ನು ಮಾತ್ರ ನಮಗೆ ಒಪ್ಪಿಸಿದ್ದಾರೆಯೇ ಹೊರತು ಅವಳನ್ನು ಕರೆತರುವುದನ್ನಲ್ಲ.

ರಾಘವೋ ನೃಪಶಾರ್ದೂಲಃ ಕುಲಂ ವ್ಯಪದಿಶನ್ ಸ್ವಕಮ್ ।
ಪ್ರತಿಜ್ಞಾಯ ಸ್ವಯಂ ರಾಜಾ ಸೀತಾವಿಜಯಮಗ್ರತಃ ॥ ೧೬ ॥
ಸರ್ವೇಷಾಂ ಕಪಿಮುಖ್ಯಾನಾಂ ಕಥಂ ಮಿಥ್ಯಾ ಕರಿಷ್ಯತಿ । ೧೪

"(ನಾವೆಲ್ಲ ಸೀತೆಯೊಂದಿಗೆ ಹಿಂತಿರುಗಿ ಹೋದೆವಾದರೆ) ಶ್ರೀರಾಮನಿಗೆ ತನ್ನ ಕುಲದ ನಡೆನುಡಿಗಳೆಲ್ಲ ನೆನಪಾಗುತ್ತಲೇ ನಮ್ಮೀ ನಡತೆ ಅವನಿಗೆ ಇಷ್ಟವಾಗದು. ಏಕೆಂದರೆ ತಾನೇ ಸೀತೆಯನ್ನು ಗೆದ್ದುತರುವುದಾಗಿ ಅವನು ವಾನರವೀರರ ಎದುರು ಪ್ರತಿಜ್ಞೆಗೈದಿದ್ದಾನೆ. ಅದು ಸುಳ್ಳಾಗುವಂತಾದರೆ ಅವನಿಗೆ ಈ ಸಂಗತಿ ಹೇಗೆ ಹಿಡಿಸೀತು ?"

## ೨೫. ತನ್ನ ಉದ್ದೇಶವನ್ನು ಮರೆಮಾಚಲು ರಾವಣನ ಪ್ರತಿಜ್ಞೆ — ಯುದ್ಧಕಾಂಡ / ೧೨

ರಾವಣ ತಾನು ಒಂದು ವರ್ಷ ಕಾಯುವೆನೆಂದು ಸೀತೆಗೆ ಹೇಳಿ ಪ್ರತಿಜ್ಞೆಯನ್ನು ಮಾಡಿದನು. ಸೀತೆಯ ಕೋರಿಕೆಯನ್ನು ಮನ್ನಿಸುವುದೆಂದರೆ ಒಬ್ಬರ ಇಚ್ಛೆಯನ್ನು ಮನ್ನಿಸುವ ಆಭಾಸವನ್ನು ನಿರ್ಮಿಸುವ ಒಂದು ಯತ್ನವಾಗಿದೆ ಅಷ್ಟೆ. ಅವನು ಸೀತೆಯ ಕೋರಿಕೆ, ಯಾಚನೆಗಳನ್ನು ಕುರಿತು ಮಂತ್ರಿಗಳು, ಕಾರ್ಯದರ್ಶಿಗಳು ಹಾಗೂ ವಿದ್ವಾಂಸರ ತುಂಬುಸಭೆಯಲ್ಲಿ ಹೇಳಿದ್ದರೂ ಆ ಬಗೆಗೆ ಬೇರೆ ಕಡೆಗಳಲ್ಲಿ ಅದಾವ ಉಲ್ಲೇಖವೂ ಸಿಕ್ಕದು.

ಸ ತು ಸಂವತ್ಸರಂ ಕಾಲಂ ಮಾಮಯಾಚತ ಭಾಮಿನೀ ॥ ೧೮ ॥
ತನ್ಮಯಾ ಚಾರುನೇತ್ರಾಯಾಃ ಪ್ರತಿಜ್ಞಾತಂ ವಚಃ ಶುಭಮ್ ॥ ೧೯ ॥

ವಿಶಾಲವಾದ ಕಂಗಳ ಸೀತೆಯು ಒಂದು ವರ್ಷ ಕಾಯೆಂದು ನನ್ನನ್ನು ಬೇಡಿಕೊಂಡಿದ್ದರಿಂದ ನಾನು ಅವಳಿಗೆ ಪ್ರತಿಜ್ಞೆಯೊಂದಿಗೆ ಒಪ್ಪಿಗೆಯನ್ನಿತ್ತೆ. ಇದೇ ಸಭೆಯಲ್ಲಿ ಸೀತೆಯ ದೇಹದ ಅಂದವನ್ನು ಕುರಿತು ಬಾಯಿಚಪ್ಪರಿಸುವ ಬಣ್ಣನೆಯನ್ನು ಮಾಡಿ ಅವಳ ದರ್ಶನದಿಂದಾಗಿ,

ಪಶ್ಯಂಸ್ತದವಶಸ್ತಸ್ಯಾಃ ಕಾಮಸ್ಯ ವಶಮೇಯಿವಾನ್ । ೧೬
...ಕಾಮೇನ ಕಲುಷೀಕೃತಃ ॥ ೧೪ ॥

"ನನ್ನ ಮನಸ ಹಿಡಿತ ಇಲ್ಲವಾಗಿ ಕಾಮವಿಕಾರಕ್ಕೆ ಒಳಗಾದೆ"ನೆಂದು ನಿಖರವಾಗಿ ಒಪ್ಪಿಕೊಂಡಿದ್ದಾನೆ.

ಮೇಲಿನ ಎರಡೂ ಹೇಳಿಕೆಗಳು ಅಸಂಗತವಷ್ಟೇ ಅಲ್ಲ, ಪರಸ್ಪರ ವಿರೋಧಿಯಾಗಿವೆ. ರಾವಣ ಸೀತೆಯನ್ನು ಪಡೆಯಲು ಇಷ್ಟೊಂದು ತವಕಗೊಂಡಿದ್ದರೆ ಒಂದು ವರ್ಷ ಕಾಯಲು ಸಿದ್ಧನಾದುದು ಹೇಗೆ ? ಅವಳು ಅದೇ ಕಾಲಾವಧಿಯಲ್ಲಿ ಶ್ರೀರಾಮನ ಬರುವಿಗಾಗಿ ಕಾಯಲಿದ್ದಳೆಂದೂ ಅವನು ಹೇಳುತ್ತಾನೆ.

ಪ್ರತೀಕ್ಷಮಾಣಾ ಭರ್ತಾರಂ ರಾಮಮಾಯತಲೋಚನಾ । ೧೯

ಯುದ್ಧಕಾಂಡ / ೧೨

ಅವನಿಗೆ ಅವಳ ಬಗೆಗೆ ಇಷ್ಟೊಂದು ಆಸಕ್ತಿಯಿದ್ದರೆ ಇಷ್ಟೆಲ್ಲ ಔದಾರ್ಯವನ್ನು ಮೆರೆಯಲು ಕಾರಣ ವೇನು? ಖಂಡಿತವಾಗಿ ನಿರಾಕರಿಸಿಬಿಡುವುದು ಕಷ್ಟದ್ದಾಗಿತ್ತೆ? ವಾಸ್ತವತೆ ಪೂರ್ತಿ ಭಿನ್ನವಾಗಿತ್ತು. ಬ್ರಹ್ಮದೇವನ ಹಾಗೂ ನಲಕೂಬರರ ಶಾಪಗಳಿಂದಾಗಿ ಅವನು ಅವಳೊಪ್ಪದೆ ಅವಳ ಮೈಯನ್ನು ಸ್ಪರ್ಶಿಸುವಂತಿರಲಿಲ್ಲ. ಅವಳ ಮನವೊಲಿಸಿ ಅವಳನ್ನು ವಶಪಡಿಸಿಕೊಳ್ಳಲು ಅವನಿಗೆ ದೀರ್ಘಾವಧಿ ಬೇಕಾಗಿಯೇ ಇತ್ತು. ಹೀಗಾಗಿ ಅವನು ಪ್ರತಿಜ್ಞೆಯನ್ನು ಕೈಕೊಂಡುದು. ಅವನು ತನ್ನೀ ಉದ್ದೇಶವನ್ನು ಮರೆಮಾಚಲು ಅವಳು ತನ್ನನ್ನು ಬೇಡಿಕೊಂಡಳೆಂದು ಹೇಳುತ್ತಿದ್ದನು ಅಷ್ಟೆ.

## ೨೬. ಶ್ರೀರಾಮನು ಮದುವೆಯ ಕಾಲಕ್ಕೆ ಮಾಡಿದ ಪ್ರತಿಜ್ಞೆ ಯುದ್ಧಕಾಂಡ / ೩೨

ರಾವಣನು ಶ್ರೀರಾಮನ ಮಾಯದ ರುಂಡವನ್ನು ಬಿಲ್ಲುಬಾಣಗಳೊಂದಿಗೆ ತರುವಂತೆ ವಿದ್ಯುಜ್ಜಿಹ್ವ ರಾಕ್ಷಸನಿಗೆ ಅಪ್ಪಣೆಮಾಡಿದನು. ತುಸುಹೊತ್ತಿನಲ್ಲಿಯೇ ಅಶೋಕವನಕ್ಕೆ ಹೋಗಿ ಶ್ರೀರಾಮನ ಕೊಲೆಯಾದ ವಾರ್ತೆಯನ್ನು ಸೀತೆಗೆ ಹೇಳಿದನು. ಆಗಲೇ ವಿದ್ಯುಜ್ಜಿಹ್ವನು ಅವಳಿಗೆ ಆ ರುಂಡವನ್ನು ತೋರಿಸಿದನು.

ಶ್ರೀರಾಮನು ಸತ್ತುಹೋದ ಕಾರಣ ಸೀತೆಗೆ "ವಶವಾಗು" ಎಂದನು.

ಅವಳಿಗೆ ಅದೆಲ್ಲ ನಿಜವೆಂದು ತೋರಿತು. ಗಂಡನ ಕಡಿದುಬಿದ್ದ ರುಂಡವನ್ನು ಕಂಡು ಶೋಕಮಗ್ನಳಾದಳು. ಆಕ್ರೋಶಗೈಯುತ್ತ ಅಳಹತ್ತಿದಳು. ಶ್ರೀರಾಮನ ಜೊತೆಗೆ ಕಳೆದ ದಿನಗಳು ಅವಳ ಕಣ್ಣೆದುರು ಸರಸರನೆ ಸರಿಯಹತ್ತಿದವು. ಅವಳ ವಿಲಾಪದಲ್ಲಿ ಹಲವು ನೆನಹುಗಳು ವ್ಯಕ್ತಗೊಂಡಿವೆ. ಅವುಗಳಲ್ಲಿ, ಅವಳ ಮದುವೆಯ ಕಾಲದ್ದೊಂದು —

> ಸಂಶ್ರುತಂ ಗೃಹ್ಣತಾ ಪಾಣಿಂ ಚರಿಷ್ಯಾಮಿ... । ೨೧

ಅವಳೆನ್ನುತ್ತಾಳೆ: "ಪಾಣಿಗ್ರಹಣದ ಸಮಯದಲ್ಲಿ ನೀನು, 'ನಿನ್ನೊಂದಿಗೆ ಧರ್ಮದಿಂದ ನಡೆದುಕೊಳ್ಳುವೆ' ಎಂದು ಪ್ರತಿಜ್ಞೆಗೈದಿದ್ದೆ. ಅದನ್ನು ನೆನೆದು ನನ್ನನ್ನೀಗ ನಿನ್ನ ಜೊತೆಗೆ ಕರೆದೊಯ್ಯು."

## ೨೭. ಶ್ರೀರಾಮನನ್ನು ಕೊಲ್ಲುವುದಾಗಿ ರಾವಣನ ಪ್ರತಿಜ್ಞೆ ಯುದ್ಧಕಾಂಡ / ೩೬

ಹಲವರು ರಾವಣನಿಗೆ ಶ್ರೀರಾಮನ ಅತುಲನೀಯ ಸಾಮರ್ಥ್ಯದ ಬಗೆಗೆ ಹೇಳಿದರು. ಅವನ ಅಜ್ಜನಾದ (ಮಾತಾಮಹ) ಮಾಲ್ಯವಾನನು ರಾವಣನ ಹಿತವನ್ನು ಗಮನದಲ್ಲಿರಿಸಿ ಶ್ರೀರಾಮನೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳುವುದು ಒಳ್ಳೆಯದೆಂದು ಅವನನ್ನು ಮನಗಾಣಿಸಲು ಯತ್ನಿಸಿದನು. ಅಲ್ಲದೆ ಸೀತೆಯನ್ನು ಶ್ರೀರಾಮನಲ್ಲಿಗೆ ವಾಪಸು ಕಳಿಸುವುದೇ ಸರಿಯೆಂದೂ ಹೇಳಿದನು. ಅವನ ಈ ಮಾತು ಕೇಳಿ ರಾವಣ ಕೆರಳಿ ಕೆಂಡವಾದನು. "ಸೀತೆ ಕಮಲದ ಮೇಲಿಲ್ಲವಾದರೂ ಲಕ್ಷ್ಮಿಯಂತೆ ಕಂಗೊಳಿಸುತ್ತಾಳೆ. 'ಜನಸ್ಥಾನದಿಂದ ನಾನವಳನ್ನು ಕರೆತಂದುದು ಶ್ರೀರಾಮನಿಗೆ ಹೆದರಿ ಅವಳನ್ನು ಹಿಂತಿರುಗಿಸಲೆಂದಲ್ಲ" ಎಂದು ಅಬ್ಬರಿಸಿದನು.

> ಸ ತು ತೀರ್ತ್ವಾರ್ಣವಂ ರಾಮಃ ಸಹವಾನರಸೇನಯಾ ।
> ಪ್ರತಿಜಾನಾಮಿ ತೇ ಸತ್ಯಂ ನ ಜೀವನ್ ಪ್ರತಿಯಾಸ್ಯತಿ ॥ ೧೩ ॥

"ವಾನರರನ್ನು ಜೊತೆಗೆ ಕರೆತಂದ ಶ್ರೀರಾಮ ಜೀವದೊಂದಿಗೆ ಮರಳಲಾರನೆಂದು ನಿನ್ನೆದುರು ಸತ್ಯಪ್ರತಿಜ್ಞೆಯನ್ನು ಮಾಡುತ್ತೇನೆ."

## ೨೮. ಸೀತೆಯನ್ನು ಹಿಂದಕ್ಕೆ ಕಳಿಸದಿರುವ ಬಗೆಗೆ ರಾವಣನ ಪ್ರತಿಜ್ಞೆ ಯುದ್ಧಕಾಂಡ / ೫೦

ಮೇಘನಾದನು ಶ್ರೀರಾಮ-ಲಕ್ಷ್ಮಣರ ಮಾಯದ ಮೃತದೇಹಗಳನ್ನು ಸೀತೆಯೆದುರು ತಂದು ಅವಳನ್ನು ಹೆದರಿಸಲು ಯತ್ನಿಸಿದ್ದನು. ಅವು ಶ್ರೀರಾಮ-ಲಕ್ಷ್ಮಣರ ನಿಜವಾದ ದೇಹಗಳೆಂದು ಬಗೆದು ವಿಭೀಷಣ ಅವರ ಸಾವಿಗಾಗಿ ಅಳತೊಡಗಿದನು. ಅವನ ವಿಲಾಪದಲ್ಲಿ ರಾವಣನ ಪ್ರತಿಜ್ಞೆಯ ಉಲ್ಲೇಖವಿದೆ.

ಜೀವನ್ನದ್ಯ ವಿಪನ್ನೋಽಸ್ಮಿ ನಷ್ಟರಾಜ್ಯಮನೋರಥಃ ।
ಪ್ರಾಪ್ತಪ್ರತಿಜ್ಞಶ್ಚ ರಿಪುಃ ಸಕಾಮೋ ರಾವಣಃ ಕೃತಃ ॥ ೧೯ ॥

"ನಾನಿಂದು ಬದುಕಿಯೂ ಸತ್ತಂತಿರುವೆ. ರಾಜ್ಯವನ್ನು ಪಡೆಯಬೇಕೆಂಬ ನನ್ನಿಚ್ಛೆ ಮಣ್ಣುಗೂಡಿತು. ಸೀತೆಯನ್ನು ತಾನು ಹಿಂದಿರುಗಿ ಕಳುಹಿಸಲಾರೆನೆಂದು ವೈರಿ ರಾವಣನು ಕೈಕೊಂಡ ಪ್ರತಿಜ್ಞೆ ಪೂರ್ತಿಗೊಂಡಿತು." (ಅವನ ಮಗನೇ ಅವನ ಪ್ರತಿಜ್ಞೆಯನ್ನು ಪೂರೈಸಿದನು.)

## ೨೯. ಶ್ರೀರಾಮವಧೆಗಾಗಿ ಮೇಘನಾದನ ಪ್ರತಿಜ್ಞೆ — ಯುದ್ಧಕಾಂಡ / ೭೩

ದೇವಾಂತಕ, ತ್ರಿಶಿರ, ಅತಿಕಾಯ ಮೊದಲಾದ ಬಲುಬಲಾಢ್ಯರಾದ, ಪರಾಕ್ರಮಿಗಳಾದ ರಾಕ್ಷಸರು ಕಾಳಗದಲ್ಲಿ ಯಮಸದನಕ್ಕೆ ಹೋದುದನ್ನು ಕೇಳಿ ರಾವಣ ತುಂಬ ದುಃಖಿತನಾದನು. ಗಂಡುಮಕ್ಕಳು, ಬಂಧುಬಳಗದವರ ಕೊಲೆಗಳಿಂದಾಗಿ ಅವನು ಕುಸಿದುಬಿಟ್ಟನು. ಅವನ ಆಸೆ-ಆಕಾಂಕ್ಷೆಗಳೆಲ್ಲ (ಇಂದ್ರಜಿತ) ಮೇಘನಾದನೊಬ್ಬನ ಮೇಲೆಯೇ ಕೇಂದ್ರೀಕೃತಗೊಂಡವು. ತಂದೆಯ ದೀನ ಮೋರೆಯನ್ನು ಕಂಡು ಅವನೆಂದನು —

ಇಮಾಂ ಪ್ರತಿಜ್ಞಾಂ ಶೃಣು ಶಕ್ರಶತ್ರೋಃ ಸುನಿಶ್ಚಿತಾಂ ಪೌರುಷದೈವಯುಕ್ತಾಮ್ ।
ಅದ್ಯೈವ ರಾಮಂ ಸಹ ಲಕ್ಷ್ಮಣೇನ ಸಂತರ್ಪಯಿಷ್ಯಾಮಿ ಶರೈರಮೋಘೈಃ ॥ ೬ ॥

"ನಾನು ಬದುಕಿರುವವರೆಗೂ ನೀನು ಚಿಂತಿಸಬೇಕಿಲ್ಲ. ನನ್ನ ಬಾಣಗಳಿಗೆ ಈಡಾದ ಯಾವ ಕಡುಗಲಿಯೂ ತನ್ನ ಪ್ರಾಣವನ್ನು ಉಳಿಸಿಕೊಳ್ಳಲಾರ. ನನ್ನ ತೀಕ್ಷ್ಣಬಾಣಗಳಿಂದ ಇಂದೇ ಶ್ರೀರಾಮಲಕ್ಷ್ಮಣರ ದೇಹಗಳನ್ನು ಭೇದಿಸಿಬಿಡುವೆ. ಆಮೇಲೆ ಅವರು ಈ ಭೂಮಿಯ ಮೇಲೆ ಚಿರನಿದ್ರೆಯನ್ನು ಅನುಭವಿಸುತ್ತಿರಲಿ— ಈ ನನ್ನ ಪ್ರತಿಜ್ಞೆಯನ್ನು ನಿರ್ಧಾರದಿಂದ ಕೈಕೊಂಡಿರುವನೆಂಬುದು ಗಮನದಲ್ಲಿರಲಿ.

"ಇಂದ್ರ, ವಿಷ್ಣು, ರುದ್ರ, ಯಮ ಮೊದಲಾದ ದೇವತೆಗಳು ವಿಷ್ಣುವಿಗೆ ಸಮನಾದ ನನ್ನ ಪರಾಕ್ರಮವನ್ನು ಇಂದೇ ಕಂಡಾರು" ಎಂದೂ ಅವನೆಂದನು.

## ೩೦. ವಿಷ್ಣುವಿನ ಪ್ರತಿಜ್ಞೆ (೧) — ಉತ್ತರಕಾಂಡ / ೬

ಸುಕೇಶನ ಮಕ್ಕಳಾದ ಮಾಲ್ಯವಾನ ಮುಂತಾದವರು ದೇವತೆಗಳನ್ನು ತುಂಬ ಹಿಂಸಿಸಲು ಆರಂಭಿಸುತ್ತಲೇ ಅವರು ವಿಷ್ಣುವನ್ನು ಮೊರೆಹೊಕ್ಕರು. ವಿಷ್ಣುವು ಅವರಿಗೆ ಅಭಯವನ್ನಿತ್ತನು. ಆಗ,

ದೇವಾನಾಂ ಭಯಭೀತಾನಾಂ ಹರಿಣಾ ರಾಕ್ಷಸರ್ಷಭೌ ।
ಪ್ರತಿಜ್ಞಾತೋ ವಧೋಽಸ್ಮಾಕಂ ಚಿಂತ್ಯತಾಂ ಯದಿಹ ಕ್ಷಮಮ್ ॥ ೩೩ ॥

"ಹರಿಯು ಹೆದರಿ ಕಂಗಾಲಾದ ದೇವತೆಗಳೆದುರು ನಮ್ಮನ್ನು ಕೊಲ್ಲುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದಾನೆ. ಹೀಗಿರುವಲ್ಲಿ ನಾವೇನು ಮಾಡಬೇಕೆಂಬುದನ್ನು ಕುರಿತು ಯೋಚಿಸುವುದು ಅಗತ್ಯದ್ದು" ಎಂದು ಮಾಲ್ಯವಾನನು ಉಳಿದ ರಾಕ್ಷಸರಿಗೆ ಹೇಳಿದನು.

ಯುಷ್ಮತ್ತೋಽಭಯಭೀತಾನಾಂ ದೇವಾನಾಂ ವೈ ಭಯಾಭಯಮ್ ।
ರಾಕ್ಷಸೋತ್ಸಾದನಂ ದತ್ತಂ ತದೇತದನುಪಾಲ್ಯತೇ ॥ ೭ ॥
ಪ್ರಾಣೈರಪಿ ಪ್ರಿಯಂ ಕಾರ್ಯಂ ದೇವಾನಾಂ ಹಿ ಸದಾ ಮಯಾ ।
ಸೋಽಹಂ ವೋ ನಿಹನಿಷ್ಯಾಮಿ ರಸಾತಲಗತಾನಪಿ ॥ ೮ ॥

(ವಿಷ್ಣುವು ದೇವತೆಗಳನ್ನು ಹಿಂಸಿಸುವ ರಾಕ್ಷಸರನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದನು. ಅವನು ಸುಕೇಶನ ಮಗನಾದ ಮಾಲ್ಯವಾನನಿಗೆ ಹೀಗೆಂದನು—) "ನಿಮ್ಮಿಂದ ಸುಮ್ಮನೆ ಪೀಡೆಗೊಳಗಾದ ದೇವತೆಗಳನ್ನು ಕಾಪಾಡಲು ಪಣತೊಟ್ಟಿದ್ದೇನೆ. ಅವರಿಗೆ ಅಭಯವನ್ನಿತ್ತಿದ್ದೇನೆ. ನಾನೀಗ ನನ್ನ ಪ್ರತಿಜ್ಞೆಯನ್ನು ಪಾಲಿಸುತ್ತಿದ್ದೇನೆ. ನನ್ನ ಪ್ರಾಣವನ್ನು ಕಳೆದುಕೊಳ್ಳುವ ಹೊತ್ತು ಬಂದರೂ ಪರವಾಗಿಲ್ಲ, ನಾನು ದೇವತೆಗಳಿಗೆ ಪ್ರಿಯವಾದುದನ್ನೇ ಮಾಡುವೆನು. ಹಾಗೆಯೇ ನೀವು ರಸಾತಳಕ್ಕೆ ಹೋದರೂ ಚಿಂತಿಸದೆ ನಿಮ್ಮನ್ನು ಕೊಂದು ಹಾಕುವೆನು."

## ೩೧. ವಿಷ್ಣುವಿನ ಪ್ರತಿಜ್ಞೆ (೨) ಉತ್ತರಕಾಂಡ / ೨೭

ಇಂದ್ರನೂ ರಾವಣನನ್ನು ಕೊಲ್ಲುವಂತೆ ವಿಷ್ಣುವನ್ನು ಕೇಳಿಕೊಂಡನು. ಮೊದಲಿಗೆ ಅವನು ಒಪ್ಪಿಕೊಳ್ಳಲಿಲ್ಲ. ತರುವಾಯದಲ್ಲಿ ರಾವಣವಧೆಗಾಗಿ ಪ್ರತಿಜ್ಞೆಯನ್ನು ಮಾಡಿದನು :

ಪ್ರತಿಜಾನೇ ಚ ದೇವೇಂದ್ರ ತ್ವತ್ಸಮೀಪೇ ಶತಕ್ರತೋ ।
ಭವಿತಾಸ್ಮಿ ಯಥಾಸ್ಮಾಹಂ ರಕ್ಷಸೋ ಮೃತ್ಯುಕಾರಣಮ್ ॥ ೧೯ ॥
ಅಹಮೇವ ನಿಹಂತಾಸ್ಮಿ ರಾವಣಂ ಸಪುರಃ ಸರಮ್ । ೨೦

"ಎಲೈ ಶತಕ್ರತುವೇ ! ಸರಿಯಾದ ಸಮಯ ಬರುತ್ತಲೇ ನಾನೇ ರಾಕ್ಷಸನನ್ನು ಕೊಲ್ಲುವೆನೆಂದು ನಿನ್ನೆದುರು ಪ್ರತಿಜ್ಞೆಯನ್ನು ಕೈಕೊಳ್ಳುತ್ತೇನೆ. ನಾನೇ ರಾವಣನನ್ನು ಅವನ ಪ್ರಮುಖವಾದ ಸೈನಿಕರೊಡನೆ ಯಮಸದನಕ್ಕೆ ಅಟ್ಟುವೆ."

## ೩೨. ತಾಯಿಯ ಮುಂದೆ ರಾವಣನ ಪ್ರತಿಜ್ಞೆ ಉತ್ತರಕಾಂಡ / ೯

ಕುಬೇರ ಪುಷ್ಪಕವಿಮಾನದಲ್ಲಿ ಕುಳಿತು ತನ್ನ ತಂದೆ ವಿಶ್ರವ್ಯನನ್ನು ಕಾಣಲೆಂದು ಬಂದನು. ಅವನ ಐಸಿರಿ ಹಾಗೂ ತೇಜಸ್ಸುಗಳನ್ನು ಕಂಡು ತಾಯಿ ಕೈಕಸಿ ತನ್ನ ಮಗನೂ ಇದೇ ರೀತಿ ವೈಭವಸಂಪನ್ನನಾಗಬೇಕು, ಎಂದುಕೊಂಡಳು. ಅವಳು ತನ್ನ ಈ ಯೋಚನೆಯನ್ನು ರಾವಣನೆದುರು ಆಡಿ ತೋರಿಸಿದಳು. ತಾಯಿಯ ಮಾತಿನಿಂದ ರಾವಣನಲ್ಲಿ ದ್ವೇಷ ಭುಗಿಲೆದ್ದಿತು. ಅವನು ಹೀಗೆಂದನು —

ಅಮರ್ಷಾತುಲಂ ಲೇಭೇ ಪ್ರತಿಜ್ಞಾಂ ಚಾಕರೋತ್ ತದಾ ॥ ೪೪ ॥
ಸತ್ಯಂ ತೇ ಪ್ರತಿಜಾನಾಮಿ ಭ್ರಾತೃತುಲ್ಯೋಽಧಿಕೋಽಪಿ ವಾ । ೪೫

"ನೀನು ಯೋಚಿಸಬೇಡ. ನಾನು ನನ್ನ ಪರಾಕ್ರಮದಿಂದಾಗಿ ನನ್ನ ಸೋದರನಷ್ಟೇ ಅಲ್ಲದೆ ಅವನಿಗಿಂತಲೂ ಹೆಚ್ಚಿನವನಾಗುವೆನೆಂದು ಪ್ರತಿಜ್ಞೆಮಾಡಿ ನಿನಗೆ ಹೇಳುತ್ತೇನೆ."

## ೩೩. ವೇದವತಿಯ ಪ್ರತಿಜ್ಞೆ ಉತ್ತರಕಾಂಡ / ೧೭

ವೇದವತಿಯು ತಪಸ್ಸಿಗಾಗಿ ಕಾಡಿನಲ್ಲಿ ಕುಳಿತಾಗ ರಾವಣನ ಕಣ್ಣಿಗೆ ಬಿದ್ದಳು. ಅವಳ ಅದ್ವಿತೀಯವೂ, ಅನುಪಮವೂ ಆದ ಸೌಂದರ್ಯವನ್ನು ಕಂಡು ಅವನಲ್ಲಿ ಕಾಮವಾಸನೆ ಕೆರಳಿತು. ತನ್ನ ಮನದಲ್ಲಿರುವುದನ್ನು ತಿಳಿಯಗೊಡದೆ ಅವನು ಅವಳ ಚೆಲುವನ್ನು ಕೊಂಡಾಡಿ, ಅವಳ ಕುಶಲವಾರ್ತೆಯನ್ನು ಕೇಳಿಕೊಂಡನು. ತಾನು ಕುಶಧ್ವಜನ ಮಗಳೆಂದು ಅವಳು ಹೇಳಿದಳು. ಅಲ್ಲದೆ ತನ್ನ ಮದುವೆಗಾಗಿ ತಂದೆ ಬಯಸಿದ್ದೇನು, ಶಂಭು ಎಂಬ ರಾಕ್ಷಸನು ತಂದೆಯನ್ನು ಕೊಂದದ್ದು, ಗಂಡನ ಚಿತೆಯೇರಿದ ತನ್ನ ತಾಯಿ, ಮುಂತಾದ ಸಂಗತಿಗಳನ್ನೆಲ್ಲ ಮನಬಿಚ್ಚಿ ನುಡಿದಳು. ಒಂದೇ ಕಾಲಕ್ಕೆ ಹೆತ್ತವರಿಬ್ಬರನ್ನೂ ಕಳೆದುಕೊಳ್ಳಬೇಕಾಯಿತು. ಆಗಲೆ,

ತತೋ ಮನೋರಥಂ ಸತ್ಯಂ ಪಿತುರ್ನಾರಾಯಣಂ ಪ್ರತಿ ।
ಕರೋಮೀತಿ ತಮೇವಾಹಂ ಹೃದಯೇನ ಸಮುದ್ವಹೇ ॥ ೧೬ ॥
ಇತಿ ಪ್ರತಿಜ್ಞಾಮಾರುಹ್ಯ ಚರಾಮಿ ವಿಪುಲಂ ತಪಃ । ೧೭

"ನನ್ನ ತಂದೆಯ ಇಚ್ಛೆಯ ಮೇರೆಗೆ ನಾರಾಯಣನೊಂದಿಗೇನೆ ಮದುವೆಯಾಗಲು ನಿರ್ಧರಿಸಿ, ಪ್ರತಿಜ್ಞೆ ಮಾಡಿದೆ. ನಾರಾಯಣನನ್ನೇ ನನ್ನ ಗಂಡನೆಂದು ತಿಳಿದಿದ್ದೇನೆ. ಅವನಲ್ಲದೆ ಇನ್ನಾರೂ ನನ್ನ ಗಂಡನಾಗಲಾರರು. ನಾರಾಯಣನನ್ನು ಗಂಡನನ್ನಾಗಿ ಪಡೆಯಲೆಂದು ತಪಸ್ಸಿಗೆ ಕುಳಿತಿದ್ದೇನೆ."

ರಾವಣನು ವೇದವತಿಯ ತಲೆಗೂದಲನ್ನು ಹಿಡಿದೆಳೆದನು. ಅವಳು ಕೆರಳಿ ಸಿಡಿದೆದ್ದಳು, ಭ್ರಷ್ಟನಾದ ಕೈಗಳ ಸ್ಪರ್ಶವಾದ್ದರಿಂದ ಅವಳು ತನ್ನ ತಲೆಗೂದಲನ್ನು ಕತ್ತರಿಸಿ ಚೆಲ್ಲಿದಳು. ಅಗ್ನಿಪ್ರವೇಶಕ್ಕಾಗಿ ಸನ್ನದ್ಧಳಾದಳು. ಆಗ ಅವಳ ಬಾಯಿಂದ ಹೊರಟ ಮಾತುಗಳು ಪ್ರತಿಜ್ಞೆಯಷ್ಟೇ ದಾಹಕವಾದವುಗಳು. ಅವುಗಳಲ್ಲಿ ಸತ್ಕ್ರಿಯೆಯೂ ಇದೆ. ಅವಳು ರಾವಣನಿಗೆ ಇಂತೆಂದಳು —

ಧರ್ಷಿತಾಯಾಸ್ತ್ವಯಾನಾರ್ಯ ನ ಮೇ ಜೀವಿತಮಿಷ್ಯತೇ ॥ ೩೦ ॥
ರಕ್ಷಸ್ತಸ್ಮಾತ್ ಪ್ರವೇಕ್ಷ್ಯಾಮಿ ಪಶ್ಯತಸ್ತೇ ಹುತಾಶನಮ್ ।
ಯಸ್ಮಾತ್ ತು ಧರ್ಷಿತಾ ಚಾಹಂ ತ್ವಯಾ ಪಾಪಾತ್ಮನಾ ವನೇ ॥ ೩೧ ॥
ತಸ್ಮಾತ್ ತವ ವಧಾರ್ಥಂ ಹಿ ಸಮುತ್ಪತ್ಸ್ಯೇ ಹ್ಯಹಂ ಪುನಃ ।
ನ ಹಿ ಶಕ್ಯಃ ಸ್ತ್ರಿಯಾ ಹಂತುಂ ಪುರುಷಃ ಪಾಪನಿಶ್ಚಯಃ ॥ ೩೨ ॥

"ಎಲವೋ ಅನಾರ್ಯನೇ ! ನಿನ್ನ ಪಾಪದ ಸ್ಪರ್ಶದಿಂದಾಗಿ ಇನ್ನು ಬದುಕುಳಿವ ಆಸೆ ಉಳಿಯಲಿಲ್ಲ. ನಾನು ಸಾವನ್ನಪ್ಪಲಿದ್ದೇನೆ. ಅಗ್ನಿಪ್ರವೇಶ ಮಾಡುವೆ. ನೀನು ನನ್ನನ್ನು ಅವಮಾನಕ್ಕೀಡುಮಾಡಿದ್ದರಿಂದ (ಸೇಡು ತೀರಿಸಿಕೊಳ್ಳಲೆಂದು) ಮತ್ತೆ ಹುಟ್ಟಿ ಬರಲಿದ್ದೇನೆ. (ಏಕೆಂದರೆ) ಹೆಣ್ಣಾದವಳು ತನ್ನ ದೇಹದ ಇತಿಮಿತಿಗಳಿಂದಾಗಿ ಯಾವನೇ ಪಾಪಾಚಾರಿಯಾದ ಗಂಡನನ್ನು ಕೊಲೆಗೈಯಲಾರಳು."

## ೩೪. ಲೋಕಪಾಲರನ್ನು ಸೋಲಿಸಲು ರಾವಣನ ಪ್ರತಿಜ್ಞೆ ಉತ್ತರಕಾಂಡ / ೨೦

ರಾವಣನು ನಾಲ್ವರೂ ಲೋಕಪಾಲರನ್ನು ಗೆದ್ದುಕೊಳ್ಳುವ ಮಹತ್ವಾಕಾಂಕ್ಷೆಯನ್ನು ಹೊಂದಿದ್ದನು. ನಾರದ ಅವನನ್ನು ಭೆಟ್ಟಿಯಾದಾಗ, ದೇವತೆಗಳು, ಗಂಧರ್ವರು, ಯಕ್ಷರು, ರಾಕ್ಷಸರಿಂದ ಅಭಯ ದೊರೆಯಿತೆಂದಮಾತ್ರಕ್ಕೆ ಅಕಾರಣವಾಗಿ ಮಾನವರನ್ನು ಕೊಲ್ಲುವುದು ಒಳ್ಳೆಯದಲ್ಲವೆಂದು ಹೇಳಿದ್ದನು. ಅಲ್ಲದೆ ಅಷ್ಟೊಂದು ಸಾಮರ್ಥ್ಯ ಇದ್ದರೆ ನೇರವಾಗಿ ಯಮನೊಂದಿಗೇನೆ ಕಾಳಗಕ್ಕಿಳಿಯುವಂತೆ ಅವನಿಗೆ ಸೂಚಿಸಿದ್ದನು. ಸೊಕ್ಕೇರಿದ ರಾವಣ ನಾರದನ ಸವಾಲನ್ನು ಒಪ್ಪಿಕೊಂಡನು. ಅವನಂದುದು —

ಗಚ್ಛಾಮಿ ದಕ್ಷಿಣಾಮಾಶಾಂ ಯತ್ರ ಸೂರ್ಯಾತ್ಮಜೋ ನೃಪಃ ।
ಮಯಾ ಹಿ ಭಗವನ್ ಕ್ರೋಧಾತ್ ಪ್ರತಿಜ್ಞಾತಂ ರಣಾರ್ಥಿನಾ ॥ ೨೪ ॥
ಅವಜೇಷ್ಯಾಮಿ ಚತುರೋ ಲೋಕಪಾಲಾನಿತಿ ಪ್ರಭೋ ।
ತದಿಹ ಪ್ರಸ್ಥಿತೋಽಹಂ ವೈ ಪಿತೃರಾಜಪುರಂ ಪ್ರತಿ ॥ ೨೫ ॥

"ಯಮನ ನಿವಾಸ ದಕ್ಷಿಣದಿಕ್ಕಿಗೆ ಇರುವ ಕಾರಣ ಆ ಸೂರ್ಯಪುತ್ರನ ವಧೆಗಾಗಿ ಅತ್ತ ಕಡೆಗೆ ಹೋಗುವೆ. ನಾನು ಯುದ್ಧೇಚ್ಛುವಾದ್ದರಿಂದ ಕೆರಳಿ ನಾಲ್ವರೂ ಲೋಕಪಾಲರನ್ನು ಸೋಲಿಸಿಬಿಡುವುದಾಗಿ ಪ್ರತಿಜ್ಞೆ ಮಾಡಿದ್ದೇನೆ. ಎಲ್ಲ ಪ್ರಾಣಿಗಳಿಗೂ ಸಾವಿನ ನೋವನ್ನು ನೀಡುವ ಆ ಯಮನನ್ನೇ ಮೃತ್ಯುವಿನ ದವಡೆಗೆ ನೂಕುವೆ."

## ೩೫. ಮೂರೂ ಲೋಕಗಳನ್ನು ಗೆದ್ದುಕೊಳ್ಳಲು ರಾವಣನ ಪ್ರತಿಜ್ಞೆ ಉತ್ತರಕಾಂಡ / ೩೦

ಮೇಘನಾದನು ದೇವತೆಗಳ ದೊರೆಯಾದ ಇಂದ್ರನನ್ನು ಸೋಲಿಸಿ ತನ್ನ ಪಟ್ಟಣದಲ್ಲಿ ಅವನನ್ನು ಸೆರೆಯಲ್ಲಿರಿಸಿದನು. ಆಗ ಹಲವು ಜನ ದೇವತೆಗಳು ಬ್ರಹ್ಮದೇವನನ್ನೊಡಗೂಡಿ ಲಂಕೆಗೆ ಬಂದರು. ಬ್ರಹ್ಮದೇವನು ರಾವಣನೆದುರು ಅವನ ಮಗನ ಶೌರ್ಯವನ್ನು ಬಾಯಿತುಂಬ ಕೊಂಡಾಡಿದನು. ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತ ಅವನು ಹೀಗೆಂದನು —

ಜಿತಂ ಹಿ ಭವತಾ ಸರ್ವಂ ತ್ರೈಲೋಕ್ಯಂ ಸ್ವೇನ ತೇಜಸಾ ।
ಕೃತಾ ಪ್ರತಿಜ್ಞಾ ಸಫಲಾ ಪ್ರೀತೋಽಸ್ಮಿ ಸಸುತಸ್ಯ ತೇ ॥ ೪ ॥

"ನೀನು ನಿನ್ನ ಸಾಮರ್ಥ್ಯದಿಂದ ಮೂರು ಲೋಕಗಳನ್ನು ಗೆದ್ದುಕೊಂಡಿರುವೆ. ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ್ದಕ್ಕಾಗಿ ನಿನ್ನ ಮೇಲೂ, ನಿನ್ನ ಮಗನ ಮೇಲೂ ತುಂಬ ಪ್ರಸನ್ನನಾಗಿದ್ದೇನೆ."

## ೩೬. ಹನುಮಂತನ ಇಚ್ಛೆಯನ್ನು ಈಡೇರಿಸಲು ಶ್ರೀರಾಮನ ಪ್ರತಿಜ್ಞೆ ಉತ್ತರಕಾಂಡ / ೪೦

ಹನುಮಂತನು ತನ್ನಿಚ್ಛೆಯನ್ನು ಪೂರ್ತಿಗೊಳಿಸಲು ಕೈಕೊಂಡ ಪ್ರತಿಜ್ಞೆಯಿದೆ. ಶ್ರೀರಾಮನು ತನ್ನ ರಾಜ್ಯಾಭಿಷೇಕಕ್ಕಾಗಿ ಬಂದ ಅತಿಥಿಗಳನ್ನು ಬೀಳ್ಕೊಡುವಾಗ ಅವರೆಲ್ಲರನ್ನು ಯಥೋಚಿತವಾಗಿ ಸನ್ಮಾನಿಸಿದನು. ಆಗ ಹನುಮಂತನು ತನ್ನಿಚ್ಛೆಯನ್ನು ವ್ಯಕ್ತಪಡಿಸಿ ಅದನ್ನು ಪೂರ್ತಿಗೊಳಿಸಬೇಕೆಂದು ಕೇಳಿಕೊಂಡನು.

ಯಾವದ್ ರಾಮಕಥಾವೀರ ಚರಿಷ್ಯತಿ ಮಹೀತಲೇ ।
ತಾವಚ್ಛರೀರೇ ವತ್ಸ್ಯಂತು ಪ್ರಾಣಾ ಮಮ ನ ಸಂಶಯಃ ॥ ೧೭ ॥

⋮

ಅವನು ಶ್ರೀರಾಮನಿಗೆ ಇಂತೆಂದನು—"ನಿನ್ನ ಬಗೆಗಿನ ನನ್ನ ಪ್ರೀತಿ ಅವಿಚಲವಾಗಿ ಉಳಿಯಲಿ. ಈ ಭೂಮಿಯ ಮೇಲೆ ಎಲ್ಲಿಯವರೆಗೆ ನಿನ್ನ ಕಥೆಯನ್ನು ಹಾಡಿಕೊಳ್ಳಲಾಗುವುದೋ ಅಲ್ಲಿಯವರೆಗೆ ನನ್ನ ಪ್ರಾಣ ಇದೇ ದೇಹದಲ್ಲಿ ಇರಲಿ."

**ಉತ್ತರಕಾಂಡ / ೧೦೮**

ಇಲ್ಲಿ ಪ್ರತಿಜ್ಞೆ ಎಂದು ಖಚಿತವಾದ ಉಲ್ಲೇಖವಿಲ್ಲದೇ ಹೋದರೂ (ಉತ್ತರಕಾಂಡ ೧೦೮/೩೩) ಶ್ರೀರಾಮನು ಪ್ರತಿಜ್ಞೆಯೆಂದೇ ಖಚಿತವಾಗಿ ಉಲ್ಲೇಖಿಸಿ ಅದು ಪೂರ್ತಿಗೊಳ್ಳಲಿದೆಯೆಂದು ಭರವಸೆ ನೀಡಿದ್ದಾನೆ. ಶ್ರೀರಾಮನು ಪರಮಧಾಮಕ್ಕೆ ಹೊರಡುವ ಕಾಲಕ್ಕೆ ಹನುಮಂತನಿಗೆ ಹೇಳಿದ ಮಾತಿನಲ್ಲಿ ಪ್ರತಿಜ್ಞೆ ಪದವಿದೆ.

ಜೀವಿತೇ ಕೃತಬುದ್ಧಿಸ್ತ್ವಂ ಮಾ ಪ್ರತಿಜ್ಞಾಂ ವೃಥಾ ಕೃಥಾಃ ।
ಮತ್ಕಥಾಃ ಪ್ರಚರಿಷ್ಯಂತಿ ಯಾವಲ್ಲೋಕೇ ಹರೀಶ್ವರ ॥ ೩೩ ॥
ತಾವದ್ ರಮಸ್ವ ಸುಪ್ರೀತೋ ಮದ್ವಾಕ್ಯಮನುಪಾಲಯನ್ । ೩೪

ಶ್ರೀರಾಮನು ಅವನಿಗೆ ಹೀಗೆಂದನು—"ದೀರ್ಘಕಾಲ ಬಾಳಲೆಂದು ಕೈಕೊಂಡ ನಿನ್ನ ಪ್ರತಿಜ್ಞೆ ಸುಳ್ಳಾಗದಂತೆ ನೋಡಿಕೋ. ಈ ಪ್ರಪಂಚದಲ್ಲಿ ನನ್ನ ಕಥೆ ಬಳಕೆಯಲ್ಲಿರುವವರೆಗೆ ನನ್ನ ಅಪ್ಪಣೆಯ ಮೇರೆಗೆ ನೀನು ಪ್ರಸನ್ನತೆಯಿಂದ ಕೂಡಿದವನಾಗಿರು."

ಹನುಮಂತ ಕೂಡ ಸಂತುಷ್ಟಮನದಿಂದ ತನ್ನ ಒಪ್ಪಿಗೆಯನ್ನು ತಿಳಿಸಿದನು. ಅವನು "ಭಗವಂತನೇ ! ನಿನ್ನ ಪವಿತ್ರ ಕಥೆ ಪ್ರಚಲಿತವಾಗಿರುವವರೆಗೂ ನಿನ್ನ ಅಪ್ಪಣೆಯನ್ನು ಪಾಲಿಸುತ್ತ ನಾನು ಈ ಭೂಮಿಯ ಮೇಲಿರುವೆ" ಎಂದನು.

### ೩೭. ಸೀತೆಯ ಬಸಿರಿನ ಬಯಕೆಯನ್ನು ಈಡೇರಿಸಲು ಶ್ರೀರಾಮನ ಪ್ರತಿಜ್ಞೆ

**ಉತ್ತರಕಾಂಡ / ೪೨**

ಸೀತೆ ಬಸುರಿಯಾಗಿದ್ದಾಗ ಶ್ರೀರಾಮನು ಅವಳಿಗೆ, "ಏನಾದರೂ ವಿಶಿಷ್ಟವಾದ ಬಯಕೆ ಇದ್ದರೆ ಹೇಳು. ಅದನ್ನು ಈಡೇರಿಸುವೆನು" ಎಂದು ಹೇಳಿದನು.

ತಪೋವನಾನಿ ಪುಣ್ಯಾನಿ ದ್ರಷ್ಟುಮಿಚ್ಛಾಮಿ ರಾಘವ ।
ಗಂಗಾತೀರೋಪವಿಷ್ಟಾನಾಮೃಷೀಣಾಮುಗ್ರತೇಜಸಾಮ್ ॥ ೩೩ ॥
ಫಲಮೂಲಾಶಿನಾಂ ದೇವ ಪಾದಮೂಲೇಷು ವರ್ತಿತುಮ್ ।
ಏಷ ಮೇ ಪರಮಃ ಕಾಮೋ ಯನ್ಮೂಲಫಲಭೋಜಿನಾಮ್ ॥ ೩೪ ॥
ಅಪ್ಯೇಕರಾತ್ರಂ ಕಾಕುತ್ಸ್ಥ ನಿವೇಶಯಂ ತಪೋವನೇ ।
ತಥೇತಿ ಚ ಪ್ರತಿಜ್ಞಾತಂ ರಾಮೇಣಾಕ್ಲಿಷ್ಟಕರ್ಮಣಾ ।
ವಿಸ್ರಬ್ಧಾ ಭವ ವೈದೇಹಿ ಶ್ವೋ ಗಮಿಷ್ಯಸ್ಯಸಂಶಯಮ್ । ೩೫

"ಋಷಿಗಳ ತಪೋವನಗಳನ್ನು ಕಾಣಬೇಕು, ಕಂದಮೂಲಗಳನ್ನು ಸೇವಿಸುವ ಋಷಿಮುನಿಗಳ ಆಶ್ರಮದಲ್ಲಿ ಒಂದು ಇರುಳಿನ ಮಟ್ಟಿಗಾದರೂ ಉಳಿದುಕೊಳ್ಳಬೇಕು" ಎಂಬುದಾಗಿ ಸೀತೆ ತನ್ನ ಬಯಕೆಯನ್ನು ಹೇಳಿದಳು. ಅದಕ್ಕೆ ಶ್ರೀರಾಮನು ಅವಳಿಗೆ, "ಚಿಂತಿಸಬೇಡ. ನಿನ್ನ ಇಚ್ಛೆ ನಾಳೆಯೇ ಪೂರ್ತಿಗೊಂಡೀತು" ಎಂದು ಹೇಳಿ ಹಾಗೆಂದು ಪ್ರತಿಜ್ಞೆಮಾಡಿದನು.

ಮಾರನೆಯ ದಿನವೇ ಸೀತೆಯನ್ನು ವಾಲ್ಮೀಕಿಮುನಿಗಳ ಆಶ್ರಮದ ಬಳಿಯ ಕಾಡಿನಲ್ಲಿ ಬಿಟ್ಟು ಅವಳನ್ನು ಹಾಗೂ ಅವಳ ಬಸಿರಿನ ಬಯಕೆಯನ್ನು ಕ್ರೂರವಾದ ಕುಚೋದ್ಯಕ್ಕೆ ಈಡುಮಾಡಲಾಯಿತು.

### ೩೮. ನಾಯಿಯು ಶ್ರೀರಾಮ ನೀಡಿದ ಭರವಸೆಯನ್ನು ಪ್ರತಿಜ್ಞೆಯೆಂದು ತಪ್ಪು ತಿಳಿದಾಗ

**ಉತ್ತರಕಾಂಡ / ಪ್ರಕ್ಷಿಪ್ತ-೨, ಸರ್ಗ ೫೯ರಲ್ಲಿ ಹಾಗೂ ೬೦ರಲ್ಲಿ**

[ಉತ್ತರಕಾಂಡ ಸರ್ಗ ೫೯ರ ತರುವಾಯ ಹಾಗೂ ೬೦ರ ಮೊದಲು ಪ್ರಕ್ಷಿಪ್ತವಾದ ಸರ್ಗದಲ್ಲಿ ಒಂದು

ನಾಯಿ(ಶ್ವಾನ)ಯ ಕಥೆಯಿದೆ. ಎಲ್ಲರಿಗೂ ಸಮನಾದ ನ್ಯಾಯ ದೊರಕಬೇಕೆಂಬ ಬಗೆಗೆ ಶ್ರೀರಾಮನು ಅದೆಷ್ಟು ಎಚ್ಚರವಹಿಸುತ್ತಿದ್ದನೆಂಬ ಸಂಗತಿಯ ಮೇಲೆ ಬೆಳಕು ಬೀರಲೆಂದು ಈ ಸರ್ಗವನ್ನು ಬರೆಯಲಾಗಿರಬಹುದು.]

ಒಂದು ಸಲ ಒಂದು ನಾಯಿಯು ಶ್ರೀರಾಮನ ಓಲಗದಲ್ಲಿ ಒಂದು ದೂರನ್ನಿತ್ತಿತು. ತನ್ನ ದೂರು ಏನೆಂದು ಹೇಳುವ ಮುನ್ನ ಆ ನಾಯಿಯು ರಾಜನ ಹಿರಿಮೆ ಹಾಗೂ ರಾಜಧರ್ಮಗಳನ್ನು ಕುರಿತಾದ ತನ್ನ ಯೋಚನೆಗಳನ್ನು ಹೇಳಿ ಶ್ರೀರಾಮನ ಸಹಾನುಭೂತಿಯನ್ನು ಪಡೆಯಲು ಯತ್ನಿಸಿತು.

ಕಿಂ ತೇ ಕಾರ್ಯಂ ಕರೋಮ್ಯದ್ಯ ಬ್ರೂಹಿ ವಿಶ್ರಬ್ಧ ಮಾ ಚಿರಮ್ । ೧೮

"ಯಾವುದೇ ಬಗೆಯಾದ ಹೆದರಿಕೆಯನ್ನಿರಿಸಿಕೊಳ್ಳದೆ ನೀನು ಹೇಳಬಯಸಿದುದನ್ನು ಹೇಳು. ನಾನು ನಿನ್ನ ಯಾವ ಕೆಲಸವನ್ನು ಮಾಡಿಕೊಡಲಿ ? ತಡ ಮಾಡಬೇಡ."

ನಾಯಿಯು ತನ್ನ ದೂರನ್ನು ಸವಿಸ್ತರವಾಗಿ ಹೇಳಿ ಶ್ರೀರಾಮನಿಗೆ ಹೀಗೆಂದಿತು —

ಪ್ರತಿಜ್ಞಾತಂ ತ್ವಯಾ ವೀರ ಕಿಂ ಕರೋಮೀತಿ ವಿಶ್ರುತಮ್ ।

"ಓ ನರವೀರನೇ ! 'ನಾನು ನಿನ್ನ ಯಾವ ಕೆಲಸವನ್ನು ಮಾಡಿಕೊಡಲಿ ?' ಎಂದು ನೀನು ಪ್ರತಿಜ್ಞಾಪೂರ್ವಕವಾಗಿ ನನ್ನನ್ನು ಕೇಳಿದೆ. (ಹಾಗೂ ಅಪ್ರತ್ಯಕ್ಷವಾಗಿ) ನನ್ನಿಚ್ಛೆಯನ್ನು ಪೂರ್ತಿಗೊಳಿಸುವ ಪ್ರತಿಜ್ಞೆಯನ್ನೇ ಕೈಕೊಂಡಿರುವೆ (ಏನೋ, ಎಂದೆನ್ನಿಸುತ್ತದೆ)."

ಇಷ್ಟು ನುಡಿದು ಆ ನಾಯಿಯು ಅಪರಾಧಿಗೆ ಯಾವ ಬಗೆಯ ಶಿಕ್ಷೆಯನ್ನು ನೀಡಬೇಕೆಂದು ಸೂಚಿಸಿದೆ.

ಶ್ರೀರಾಮನು ಪ್ರತಿಜ್ಞೆ ಎಂಬ ಪದವನ್ನು ಬಳಸಿಲ್ಲ. ಆದರೆ ನಾಯಿ ಮಾತ್ರ ಅವನ "ಕಿಂ ತೇ ಕಾರ್ಯಂ ಕರೋಮಿ..." ಎಂಬ ಮಾತನ್ನು ಪ್ರತಿಜ್ಞೆಯೆಂದೇ ತಿಳಿದಿದೆ.

## ೭೯. ಲವಣಾಸುರನ ವಧೆಗಾಗಿ ಶ್ರೀರಾಮನ ಪ್ರತಿಜ್ಞೆ — ಉತ್ತರಕಾಂಡ / ೬೦

ಲವಣಾಸುರ ರಾಕ್ಷಸ ಚ್ಯವನ ಮುಂತಾದ ಋಷಿ-ಮುನಿಗಳನ್ನು ತುಂಬ ಪೀಡಿಸುತ್ತಿದ್ದನು. ಅವರಿಗೆ ಬದುಕು ಅಸಾಧ್ಯವಾಗಿ ತೋರಹತ್ತಿತು. ಚಿಂತೆಗೀಡಾದ ಮುನಿಗಳು ಶ್ರೀರಾಮನ ನೆರವು ಪಡೆಯಲು ಹವಣಿಸಿದ್ದರು. ಅವನನ್ನು ಕಂಡು ಬೇಡಿಕೊಳ್ಳಬೇಕೆಂದು ಯೋಚಿಸಿದರು. ಅವರು ಭೆಟ್ಟಿಗೆ ಬಂದಾಗ ಶ್ರೀರಾಮ ಅವರನ್ನು ಯಥೋಚಿತವಾಗಿ ಬರಮಾಡಿಕೊಂಡನು. ಅವರು ಬಾಯಿ ತೆರೆವ ಮುನ್ನವೇ ಅವರಿಗೆ ತಾನು ನೆರವು ನೀಡುವುದಾಗಿಯೂ, ಅವರನ್ನು ಕಾಪಾಡುವುದಾಗಿಯೂ ಭರವಸೆಯಿತ್ತನು. ಶ್ರೀರಾಮನ ಮಾತುಗಳನ್ನು ಆಲಿಸಿ ಋಷಿ-ಮುನಿಗಳು ಅಚ್ಚರಿಬಟ್ಟರು. ಏಕೆಂದರೆ ಹಿಂದೆಂದಿಗೂ ಅವರಿಗೆ ಈ ಬಗೆಯ ಸಹಾನುಭೂತಿಯ ನಡವಳಿಕೆ ದೊರೆತಿರಲಿಲ್ಲ.

ಬಹವಃ ಪಾರ್ಥಿವಾ ರಾಜನ್ನತಿಕ್ರಾಂತಾ ಮಹಾಬಲಾಃ ।
ಕಾರ್ಯಸ್ಯ ಗೌರವಂ ಮತ್ವಾ ಪ್ರತಿಜ್ಞಾಂ ನಾಭ್ಯರೋಚಯನ್ ॥ ೧೭ ॥
ತ್ವಯಾ ಪುನರ್ಬ್ರಾಹ್ಮಣಗೌರವಾದಿಯಂ ಕೃತಾ ಪ್ರತಿಜ್ಞಾಹ್ಯನವೇಕ್ಷ್ಯ ಕಾರಣಮ್ । ೧೮

"ನೆರವಿಗಾಗಿ ಹಲವು ಜನ ರಾಜರನ್ನು ಕೇಳಿದೆವು. ಅವರಾರೂ ನಮ್ಮ ವ್ಯಥೆಯನ್ನು ಅರಿಯಲೇ ಇಲ್ಲ. ಯಾರಿಂದಲೂ ನೆರವು ದೊರೆಯಲಿಲ್ಲ. ನಾವು ನಮ್ಮ ತೊಂದರೆಗಳನ್ನು ಹೇಳುವ ಮೊದಲೇ ನೀನು ನಮಗೆ ಗೌರವ ತೋರಿ ನೆರವು ನೀಡುವುದಾಗಿ ಪ್ರತಿಜ್ಞೆಯನ್ನು ಕೈಕೊಂಡೆ."

ಉತ್ತರಕಾಂಡ / ೬೧

ಋಷಿಗಳು ಲವಣಾಸುರ ಹಾಗೂ ಅವನ ಉರುಳು, ಅವನ ಸಾಮರ್ಥ್ಯ, ಅತ್ಯಾಚಾರ ಹಾಗೂ ಇವೆಲ್ಲವುಗಳಿಂದಾಗಿ ಬೇಡವಾದ, ಸಹಿಲಸಾಧ್ಯವಾದ ಬಾಳನ್ನು ಕುರಿತು ಶ್ರೀರಾಮನಿಗೆ ನಿವೇದಿಸಿ ತಮ್ಮನ್ನು ಈ ಸಂಕಟದಿಂದ ಪಾರುಮಾಡೆಂದು ಅವನನ್ನು ಕೋರಿದರು. ಆರಕ್ಕವನು ಹೀಗೆಂದನು —

ಘಾತಯಿಷ್ಯಾಮಿ ತದ್ ರಕ್ಷೋ ವ್ಯಪಗಚ್ಛತು ವೋ ಭಯಮ್ ॥ ೬ ॥
ಪ್ರತಿಜ್ಞಾಯ ತಥಾ ತೇಷಾಂ ಮುನೀನಾಮುಗ್ರತೇಜಸಾಮ್ । ೭

"ನಾನು ಆ ರಾಕ್ಷಸನನ್ನು ಸಂಹರಿಸುವೆ, ನೀವು ನಿರ್ಭಯರಾಗಿ" ಎಂಬುದಾಗಿ ಶ್ರೀರಾಮನು ಋಷಿಗಳ ತಂಡದೆದುರು ಪ್ರತಿಜ್ಞೆಗೈದು ಶತ್ರುಘ್ನನಿಗೆ ಲವಣಾಸುರನನ್ನು ಕೊಲ್ಲುವ ಕೆಲಸವನ್ನು ಒಪ್ಪಿಸಿದನು.

## ೪೦. ಮಾಂಧಾತನ ಪ್ರತಿಜ್ಞೆ ಉತ್ತರಕಾಂಡ / ೬೭

ಶತ್ರುಘ್ನನ ಕೋರಿಕೆಯ ಮೇರೆಗೆ ಚ್ಯವನ ಋಷಿಯು ಅವನಿಗೆ ಮಾಂಧಾತನ ಕಥೆಯನ್ನು ಹೇಳುತ್ತಿದ್ದಾನೆ— ಯುವನಾಶ್ವನ ಮಗನಾದ ಮಾಂಧಾತನು ಬಲು ಬಲಾಢ್ಯ ಹಾಗೂ ಪರಾಕ್ರಮಿಯಾಗಿದ್ದನು. ಇಡಿಯ ಪೃಥ್ವಿಯನ್ನೇ ಪಾದಾಕ್ರಾಂತಗೊಳಿಸಿ ದೇವಲೋಕವನ್ನು ಗೆದ್ದುಕೊಳ್ಳಲು ಆಸೆಪಟ್ಟಿದ್ದನು.

> ಅರ್ಧಾಸನೇನ ಶಕ್ರಸ್ಯ ರಾಜ್ಯಾರ್ಧೇನ ಚ ಪಾರ್ಥಿವಃ ।
> ವಂದ್ಯಮಾನಃ ಸುರಗಣೈಃ ಪ್ರತಿಜ್ಞಾಮಧ್ಯರೋಹತ ॥ ೮ ॥

ಅವನು ಇಂದ್ರನ ರಾಜ್ಯದ ಅರ್ಧಭಾಗವನ್ನು ಗೆದ್ದುಕೊಂಡು ಅವನ ಅರ್ಧಸಿಂಹಾಸನದ ಮೇಲೆ ವಿರಾಜಮಾನನಾಗಲು ಹಾಗೂ ದೇವತೆಗಳೂ ತನ್ನನ್ನು ವಂದಿಸುವಂತೆ ಮಾಡಲು ಪ್ರತಿಜ್ಞೆಯನ್ನು ಕೈಕೊಂಡಿದ್ದನು.

## ೪೧. ಬ್ರಾಹ್ಮಣನ ಮಗನನ್ನು ಜೀವಂತಗೊಳಿಸಲು ಶ್ರೀರಾಮನ ಪ್ರತಿಜ್ಞೆ ಉತ್ತರಕಾಂಡ / ೭೬

ಶ್ರೀರಾಮನು ರಾಜ್ಯವನ್ನಾಳುತ್ತಿದ್ದ ಕಾಲಕ್ಕೆ ಯಾವನೋ ಬ್ರಾಹ್ಮಣನ ಇದ್ದ ಒಬ್ಬನೇ ಮಗ ತೀರಿಕೊಂಡನು. ಬ್ರಾಹ್ಮಣನು ಬಹಳ ದುಃಖಿತನಾದನು. ಮಗನ ಹೆಣವನ್ನು ಎತ್ತಿಕೊಂಡು ಅರಮನೆಯ ಬಾಗಿಲಿಗೆ ಬಂದನು. ವಿಲಾಪಗೈಯತೊಡಗಿದನು—"ನನ್ನ ಮಗನನ್ನು ಜೀವಂತಗೊಳಿಸಿ, ಇಲ್ಲದಿದ್ದರೆ ಹೆಂಡತಿಯೊಂದಿಗೆ ನಾನಿಲ್ಲಿಯೇ ಅನಾಥನಾಗಿ ಜೀವ ಬಿಡುವೆ" ಎಂದು ಶ್ರೀರಾಮನಿಗೆ ಅಂದನು. ಇದಲ್ಲದೆ ರಾಜ್ಯದಲ್ಲಿ ಬೇರೆಲ್ಲೋ ಘೋರವಾದ ಅಪರಾಧಗಳು ನಡೆಯುತ್ತಿದ್ದು ರಾಜ ಅತ್ತ ಗಮನವೀಯುತ್ತಿಲ್ಲವಾದ್ದರಿಂದಲೇ ತನ್ನ ಮಗ ಸಾವಿಗೀಡಾದನೆಂದು ದೂರಿದನು. ಬ್ರಾಹ್ಮಣನ ಕಥೆಯನ್ನು ಕೇಳಿ ಶ್ರೀರಾಮನಿಗೆ ಕೆಡಕೆನಿಸಿತು. ಕ್ಷುದ್ರತಪಸ್ವಿಯೊಬ್ಬನ ಅಧರ್ಮದ ನಡತೆಯೇ ಆ ಬಾಲಕನ ಸಾವಿಗೆ ಕಾರಣವೆಂದು ನಾರದನಿಂದ ತಿಳಿದು ಬಂದಿತು. ಶ್ರೀರಾಮನು ಅಪರಾಧಿಯನ್ನು ಹುಡುಕಿಸಿ ತೆಗೆದನು. ಶಂಬೂಕ ಎಂಬವನು ಅಧಿಕಾರವಿಲ್ಲದೆಯೇ ತಪಸ್ಸನ್ನು ಆಚರಿಸುತ್ತಿದ್ದುದನ್ನು ಕಂಡು ಶ್ರೀರಾಮನು ಅವನನ್ನು ಕೊಂದುಹಾಕಿದನು. ಇದರಿಂದಾಗಿ ದೇವತೆಗಳು ಬಲು ಸಂತುಷ್ಟರಾದರು, ಶ್ರೀರಾಮನಿಗೆ ವರ ಕೇಳೆಂದರು. ಆಗ ಶ್ರೀರಾಮನು ದೇವತೆಗಳಿಗೆ ಹೀಗೆಂದನು : "ದೇವತೆಗಳು ನನ್ನ ಮೇಲೆ ಪ್ರಸನ್ನರಾಗಿದ್ದರೆ ಬ್ರಾಹ್ಮಣನ ಮಗ ಜೀವತಳೆಯಲಿ. ನನ್ನ ಅಪರಾಧದಿಂದಾಗಿಯೇ ಈತ ಬೇಗ ಸಾವಿಗೀಡಾಗಿರಲು ಸಾಕು."

> ತಂ ಜೀವಯತ ಭದ್ರಂ ವೋ ನಾನೃತಂ ಕರ್ತುಮರ್ಹಥ ।
> ದ್ವಿಜಸ್ಯ ಸಂಶ್ರುತೋಽರ್ಥೋ ಮೇ ಜೀವಯಿಷ್ಯಾಮಿ ತೇ ಸುತಮ್ ॥ ೧೨ ॥

"ಮಗನನ್ನು ಜೀವಂತಗೊಳಿಸುವೆನೆಂದು ಆ ಬ್ರಾಹ್ಮಣನೆದುರು ಪ್ರತಿಜ್ಞೆಗೈದಿದ್ದೇನೆ. ನೀವೀಗ ಆ ಬಾಲಕನನ್ನು ಜೀವಂತಗೊಳಿಸಿದರೆ ನನ್ನ ಮಾತು ಸುಳ್ಳಾಗಲಾರದು."

## ೪೨. ತಂದೆಯೆದುರು ಇಕ್ಷ್ವಾಕುವಿನ ಪ್ರತಿಜ್ಞೆ ಉತ್ತರಕಾಂಡ / ೭೯

ಕೃತಯುಗದಲ್ಲಿ ದಂಡಧಾರಿಯಾದ ಮನುವು ಭೂಮಿಯನ್ನು ಆಳುತ್ತಿದ್ದನು. ಅವನ ದುರ್ಜಯನೆನ್ನಿಸಿದ ಮಗನೇ ಇಕ್ಷ್ವಾಕು. ಮನುವು ಆತನನ್ನು ಪಟ್ಟಕ್ಕೇರಿಸುವಾಗ ಭೂಮಿಯ ಮೇಲೆ ರಾಜವಂಶವನ್ನು ಸೃಷ್ಟಿಸೆಂದು ಹೇಳಿದ್ದನು. ಆಗ,

> ತಥೈವ ಚ ಪ್ರತಿಜ್ಞಾತಂ ಪಿತುಃ ಪುತ್ರೇಣ ರಾಘವ । ೭

"ಎಲೈ ರಾಘವನೇ ! ಇಕ್ಷ್ವಾಕುವು ತನ್ನ ತಂದೆಗೆ 'ಎಲ್ಲವೂ ನಿಮ್ಮಿಚ್ಛೆಯಂತೆಯೇ ನಡೆದೀತು' ಎಂದು ಪ್ರತಿಜ್ಞೆಗೈದನು" ಎಂದು ಅಗಸ್ತ್ಯರು ಶ್ರೀರಾಮನಿಗೆ ಹೇಳಿದರು.

## ೪೩. ಕಾಲನ ಇಚ್ಛೆಯನ್ನು ಈಡೇರಿಸುವುದಾಗಿ ಶ್ರೀರಾಮನ ಪ್ರತಿಜ್ಞೆ ಉತ್ತರಕಾಂಡ / ೧೦೩

ಒಂದು ಸಲ ಕಾಲನು ತಪಸ್ವಿಯ ವೇಷವನ್ನು ತೊಟ್ಟು ಶ್ರೀರಾಮನಲ್ಲಿಗೆ ಬಂದನು. ತಾನು ಅವನನ್ನು ಏಕಾಂತದಲ್ಲಿ ಕಾಣುವೆನೆಂದನು. "ನಾವಿಬ್ಬರೂ ಮಾತನಾಡುವಾಗ ಇನ್ನಾರೂ ನಮ್ಮನ್ನು ಕಾಣಕೂಡದು" ಎಂದನು.

> ಯಃ ಶೃಣೋತಿ ನಿರೀಕ್ಷೇದ್ ವಾ ಸ ವಧ್ಯೋ ಭವಿತಾ ತವ । ೧೩
> ತಥೇತಿ ಚ ಪ್ರತಿಜ್ಞಾಯ ರಾಮೋ... । ೧೪

"ನಮ್ಮ ಮಾತುಗಳನ್ನು ಆಲಿಸುವವರನ್ನಾಗಲಿ, ನಮ್ಮನ್ನು ನೋಡುವವರನ್ನಾಗಲಿ ನಾನು ಕೊಂದು ಬಿಡುವೆ" ಎಂದು ಶ್ರೀರಾಮನು (ಪ್ರತಿಜ್ಞೆಯನ್ನು) ಸಾರಬೇಕೆಂದು ಒತ್ತಾಯ ತಂದನು. ಶ್ರೀರಾಮನು ಅದಕ್ಕೆ ಒಪ್ಪಿ "ಎಲ್ಲವೂ ನಿಮ್ಮಿಚ್ಛೆಯಂತೆ ನಡೆಯಲಿದೆ" ಎಂದು ಪ್ರತಿಜ್ಞೆಗೈದು ನುಡಿದನು.

ಲಕ್ಷ್ಮಣ ಕಾವಲಿಗೆ ನಿಂತನು. ಶ್ರೀರಾಮನು ಅವನಿಗೆ, "ಬಾಗಿಲು ಕಾಯುವವನಿಗೆ ಬೇರೆ ಕಡೆಗೆ ಹೋಗಲು ಹೇಳು. ನೀನು ಇಲ್ಲಿಯೇ ನಿಲ್ಲು. ಯಾರೂ ಇತ್ತ ಬಾರದಂತೆ ನೋಡಿಕೋ" ಎಂದು ಹೇಳಿದನು. ತಾನು ಕೈಕೊಂಡ ಪ್ರತಿಜ್ಞೆಯನ್ನು ಹೇಳಿ ಭೆಟ್ಟಿಯ ಈ ಷರತ್ತನ್ನು ಮುರಿದರೆ ಬಂದ ಅತಿಥಿ ಅಂಥವರನ್ನು ಕೊಲೆ ಮಾಡುವನೆಂದೂ ಲಕ್ಷ್ಮಣನಿಗೆ ವಿವರಿಸಿದನು. ಶ್ರೀರಾಮನ ಅಪ್ಪಣೆಯ ಮೇರೆಗೆ ಲಕ್ಷ್ಮಣ ಕಾವಲಿಗೆ ನಿಂತನು. ಒಳಗೆ.ಮಾತುಕತೆಗಳು ಶುರುವಾದ ತುಸು ಹೊತ್ತಿನ ತರುವಾಯ ದುರ್ವಾಸಮುನಿ ಅಲ್ಲಿಗೆ ಬಂದನು. ತುಸುವೂ ತಡಮಾಡದೆ ತನ್ನನ್ನು ಶ್ರೀರಾಮನಿಗೆ ಭೆಟ್ಟಿಮಾಡಿಸೆಂದನು. ಲಕ್ಷ್ಮಣನು ಅವನಿಗೆ ಶ್ರೀರಾಮನ ಅಪ್ಪಣೆಯನ್ನು ವಿವರಿಸಿ ಕಾಯಲು ಹೇಳಿದನು. ದುರ್ವಾಸನಾದರೋ ಲಕ್ಷ್ಮಣನ ಮಾತನ್ನು ಕಿವಿಗೆ ಹಾಕಿಕೊಳ್ಳದೆಯೇ, ಕೋಪದಿಂದ ಕೆಂಡವಾಗಿ, "ಒಂದರೆಕ್ಷಣವೂ ತಡ ಮಾಡದೆ ಶ್ರೀರಾಮನನ್ನು ನನಗೆ ಭೆಟ್ಟಿಮಾಡಿಸದಿದ್ದರೆ ಶ್ರೀರಾಮನಿಂದ ಹಿಡಿದು ನಿಮ್ಮೆಲ್ಲರನ್ನೂ, ಈ ರಾಜ್ಯವನ್ನೂ ಶಪಿಸಿ ಸುಟ್ಟು ಬೂದಿ ಮಾಡುವೆ !" ಎಂದು ಬೆದರಿಕೆ ಒಡ್ಡಿದನು. ಲಕ್ಷ್ಮಣ ನಿರುಪಾಯನಾದನು. ಅವನಿಗೆ ಆಗಬಹುದಾದ ಭಯಂಕರ ಪರಿಣಾಮಗಳ ಅಂದಾಜು ಇತ್ತು. ಸರ್ವನಾಶಕ್ಕಿಂತ ತಾನೊಬ್ಬ ಸಾಯುವುದು ಲೇಸೆಂದು ಬಗೆದು ಶ್ರೀರಾಮನ ಅಪ್ಪಣೆಯನ್ನು ಮುರಿದು ತತ್ಕ್ಷಣ ಅವನಿಗೆ ದುರ್ವಾಸನ ವಾರ್ತೆಯನ್ನು ತಿಳಿಸಿದನು.

ಉತ್ತರಕಾಂಡ / ೧೦೬

ಕಾಲನೆದುರು ತಾನು ಕೈಕೊಂಡ ಪ್ರತಿಜ್ಞೆಯ ಮೇರೆಗೆ ಲಕ್ಷ್ಮಣನನ್ನು ಕೊಲೆಗೈಯುವ ಹೊತ್ತು ಶ್ರೀರಾಮನ ಮೇಲೆ ಬಂದಿತು. ಅವನು ತುಂಬ ಮರುಗಿದನು. ಲಕ್ಷ್ಮಣನೆಂದರೆ ಅವನ ಬಹಿಃಪ್ರಾಣನೇ ಆಗಿದ್ದನು. ಅವನಿಲ್ಲದೆ ಶ್ರೀರಾಮ ಬದುಕುಳಿಯುವಂತಿರಲಿಲ್ಲ. ಅವನನ್ನು ಬಿಟ್ಟು ತಾನೊಬ್ಬನೇ ಇರಲಾರ. ಶ್ರೀರಾಮನ ಈ ಇಕ್ಕಟ್ಟನ್ನರಿತು ಲಕ್ಷ್ಮಣ ಅವನಿಗೆ ಹೀಗೆಂದನು —

> ಜಹಿ ಮಾಂ ಸೌಮ್ಯ ವಿಸ್ರಬ್ಧಂ ಪ್ರತಿಜ್ಞಾಂ ಪರಿಪಾಲಯ ।
> ಹೀನಪ್ರತಿಜ್ಞಾಃ ಕಾಕುತ್ಸ್ಥ ಪ್ರಯಾಂತಿ ನರಕಂ ನರಾಃ ॥ ೩ ॥

"ನನ್ನನ್ನು ಕೊಲೆಗೈದು ನಿನ್ನ ಪ್ರತಿಜ್ಞೆಯನ್ನು ಪೂರ್ಣಸಿಕೋ. ಪ್ರತಿಜ್ಞೆಯನ್ನು ಮುರಿದರೆ ನರಕ ತಪ್ಪಿದ್ದಲ್ಲ."

ಲಕ್ಷ್ಮಣನ ಈ ಮನಕರಗಿಸುವ ಮಾತುಗಳನ್ನು ಕೇಳಿ ಶ್ರೀರಾಮನ ಜಂಘಾಬಲವೇ ಉಡುಗಿತು. ಅವನು ವಸಿಷ್ಠ ಮೊದಲಾದ ಮಂತ್ರಿಗಳನ್ನು ಕರೆಯಿಸಿಕೊಂಡು ಅವರೆದುರು,

> ಅಬ್ರವೀಚ್ಚ ತದಾ ವೃತ್ತಂ ತೇಷಾಂ ಮಧ್ಯೇ ಸ ರಾಘವಃ ।
> ದುರ್ವಾಸೋಽಭಿಗಮಂ ಚೈವ ಪ್ರತಿಜ್ಞಾಂ ತಾಪಸಸ್ಯ ಚ ॥ ೬ ॥

ತಪಸ್ವಿಯ ವೇಷ ತೊಟ್ಟುಬಂದ ಕಾಲನೆದುರು ಕೈಕೊಂಡ ತನ್ನ ಪ್ರತಿಜ್ಞೆ, ದುರ್ವಾಸನ ಆಗಮನ(ತನಗೆದುರಾದ ಸನ್ನಿವೇಶಗಳಲ್ಲಿ ಲಕ್ಷ್ಮಣನು ಕೈಕೊಂಡ ತೀರ್ಮಾನ ಹಾಗೂ ಅದರ ದಾರುಣವಾದ ಪರಿಣಾಮ)ಗಳನ್ನು ಕುರಿತು ಹೇಳಿದನು. ಅವನ ಮಾತುಗಳನ್ನು ಆಲಿಸಿ ಯಾರೂ ಏನನ್ನೂ ಆಡದಂತಾಗಿಬಿಟ್ಟರು. ಆಗ ವಸಿಷ್ಠನೆಂದನು —

ದೃಷ್ಟಮೇತನ್ಮಹಾಬಾಹೋ ಕ್ಷಯಂ ತೇ ರೋಮಹರ್ಷಣಮ್ ।
ಲಕ್ಷ್ಮಣೇನ ವಿಯೋಗಶ್ಚ ತವ ರಾಮ ಮಹಾಯಶಃ ॥ ೮ ॥
ತ್ಯಜ್ಯೈನಂ ಬಲವಾನ್ ಕಾಲೋ ಮಾ ಪ್ರತಿಜ್ಞಾಂ ವೃಥಾ ಕೃಥಾಃ ।
ಪ್ರತಿಜ್ಞಾಯಾಂ ಹಿ ನಷ್ಟಾಯಾಂ ಧರ್ಮೋ ಹಿ ವಿಲಯಂ ವ್ರಜೇತ್ ॥ ೯

"ಇನ್ನುಮುಂದೆ ಶೀಘ್ರದಲ್ಲಿ ಬರಲಿರುವ ವಿಕಟನಾಶ ಹಾಗೂ ಲಕ್ಷ್ಮಣನಿಂದ ಅಗಲಿರುವ ನಿನ್ನ ಅಗಲುವಿಕೆಗಳನ್ನು (ತಪಸ್ಸಾಮರ್ಥ್ಯದಿಂದ) ಅರಿತಿದ್ದೇನೆ. ಕಾಲ ತುಂಬ ಸಮರ್ಥನಾದುದರಿಂದ ನೀನು ಲಕ್ಷ್ಮಣನನ್ನು ಬಿಟ್ಟುಕೊಡುವುದು ಒಳ್ಳೆಯದು. ನಿನ್ನ ಪ್ರತಿಜ್ಞೆಯನ್ನು ಸುಳ್ಳಾಗಿಸಬೇಡ. ಪ್ರತಿಜ್ಞೆಯನ್ನು ಪಾಲಿಸದಿದ್ದರೆ ಧರ್ಮವೇ ನಾಶಹೊಂದೀತು."

**ಉತ್ತರಕಾಂಡ / ೧೦೮**

ಶ್ರೀರಾಮನು ರಾಜ್ಯವನ್ನು ಬಿಟ್ಟುಕೊಡಲು ತೀರ್ಮಾನಿಸುತ್ತಾನೆ. ಅಯೋಧ್ಯೆ ತೊರೆದು ಭರತನೊಂದಿಗೆ ಸಾಕೇತಧಾಮಕ್ಕೆ ತೆರಳಲು ನಿರ್ಧರಿಸುತ್ತಾನೆ. ಕುಶ-ಲವರಿಗೆ ಪಟ್ಟಾಭಿಷೇಕ ನಡೆಯುತ್ತದೆ. ಶ್ರೀರಾಮನ ದೂತರು ಇವೆಲ್ಲ ಅಯೋಧ್ಯೆಯ ಘಟನೆಗಳು ಹಾಗೂ ಪ್ರಜೆಗಳ ಪ್ರತಿಕ್ರಿಯೆಗಳನ್ನು ಶತ್ರುಘ್ನನಿಗೆ,

ಲಕ್ಷ್ಮಣಸ್ಯ ಪರಿತ್ಯಾಗಂ ಪ್ರತಿಜ್ಞಾಂ ರಾಘವಸ್ಯ ಚ । ೩

(ತಪಸ್ವಿಯ ವೇಷದಲ್ಲಿ ಬಂದ ಕಾಲ ಹಾಗೂ ದುರ್ವಾಸನ ಬರುವಿಕೆ) ಶ್ರೀರಾಮನ ಪ್ರತಿಜ್ಞೆ ಹಾಗೂ ಲಕ್ಷ್ಮಣನನ್ನು ತೊರೆದುದು, ಮುಂತಾದವುಗಳನ್ನೆಲ್ಲ ಕುರಿತು ಹೇಳಿದರು.

### ೪೪. ದೀರ್ಘಕಾಲ ಬಾಳುವೆನೆಂದು ವಿಭೀಷಣನ ಪ್ರತಿಜ್ಞೆ — ಉತ್ತರಕಾಂಡ / ೧೦೮

ಶ್ರೀರಾಮನು ಪರಮಧಾಮಕ್ಕೆ ಹೊರಟು ನಿಂತನು. ಸಹೃದರೆಲ್ಲ ತಾವೂ ಅವನೊಂದಿಗೆ ಹೋಗುವೆವೆಂದರು. ಆಗ ಶ್ರೀರಾಮನು ಸುಗ್ರೀವ, ಶತ್ರುಘ್ನ, ಕರಡಿಗಳು ಹಾಗೂ ವಾನರರಿಗೆ ತನ್ನನ್ನು ಜೊತೆಗೂಡಲು ಒಪ್ಪಿಗೆಯನ್ನಿತ್ತನು. ವಿಭೀಷಣ, ಹನುಮಂತ, ಮೈಂದ, ದ್ವಿವಿದ, ಜಾಂಬುವಂತ ಇವರಿಗೆ ಮಾತ್ರ ಭೂಮಿಯ ಮೇಲಿರಲು ಹೇಳಿದನು. ಈ ಸಂದರ್ಭದಲ್ಲಿ ಅವನು ವಿಭೀಷಣನಿಗೆ, "ಜಗತ್ತಿನಲ್ಲಿ ಪ್ರಜೆಗಳಿರುವವರೆಗೂ ನೀನು ಲಂಕೆಯನ್ನಾಳು. ಸೂರ್ಯ-ಚಂದ್ರರಿರುವವರೆಗೂ ನನ್ನ ಕಥೆ ಬಳಕೆಯಲ್ಲಿದ್ದೀತು. ಅಲ್ಲಿಯವರೆಗೆ ನಿನ್ನ ರಾಜ್ಯವು ಉಳಿದೀತು. ಧರ್ಮದಿಂದ ನಡೆದುಕೊಂಡು ಪ್ರಜೆಗಳನ್ನು ಕಾಪಾಡು. ನಾನು ಹೇಳಿದುದಕ್ಕೆ ಎದುರಾಡದಿರು. ಇಕ್ಷ್ವಾಕುಕುಲದ ಪರಂಪರೆಯಂತೆ ನೀವೆಲ್ಲ ವಿಷ್ಣು, ಇಂದ್ರಾದಿ ದೇವತೆಗಳನ್ನು ಪೂಜಿಸುತ್ತ ಹೋಗಿ" ಎಂದನು. ವಿಭೀಷಣನು ಶ್ರೀರಾಮನ ಮಾತುಗಳನ್ನು ಆಲಿಸಿ,

ತಥೇತಿ ಪ್ರತಿಜಗ್ರಾಹ ರಾಮವಾಕ್ಯಂ ವಿಭೀಷಣಃ ॥ ೩೧ ॥
ರಾಜಾ ರಾಕ್ಷಸಮುಖ್ಯಾನಾಂ ರಾಘವಾಜ್ಞಾಮನುಸ್ಮರನ್ । ೩೨

ಅವನ ಅಪ್ಪಣೆಯನ್ನು ಮನದಲ್ಲಿಯೇ ಸ್ಮರಿಸುತ್ತ, "ಹಾಗೆಯೇ ನಡೆದೀತು" ಎಂದನು.

ಇಲ್ಲಿ 'ಪ್ರತಿಜ್ಞೆ' ಎಂಬುದಾಗಿ ಖಚಿತವಾದ ನಿರ್ದೇಶ ಇಲ್ಲದೆ ಹೋದರೂ ಹನುಮಂತನೊಂದಿಗೆ ಮಾತನಾಡುವಾಗ 'ಮಾ ಪ್ರತಿಜ್ಞಾಂ ವೃಥಾ ಕೃಥಾಃ ॥ ೩೩ ॥' ಎಂಬುದಾಗಿ ಪದಗಳ ಬಳಕೆಯಿದೆ.

## ಭಾಗ : ಆರು

# ಆಶೀರ್ವಾದಗಳು ಹಾಗೂ ಹೊತ್ತ ಹರಕೆಗಳು

## ಆಶೀರ್ವಾದಗಳು

### ೧. ಕೌಸಲ್ಯೆಯ ಆಶೀರ್ವಾದ

ಅಯೋಧ್ಯಾಕಾಂಡ / ೨೫

ಕೌಸಲ್ಯೆಯು ಬಲು ಭಾರವಾದ ಮನಸ್ಸಿನಿಂದ ಶ್ರೀರಾಮನಿಗೆ ಕಾಡಿಗೆ ಹೋಗಲು ಅನುಮತಿಯನ್ನು ನೀಡಿದಳು. ಅವನಿಗೆ ಕಲ್ಯಾಣವಾಗಲೆಂದು ಹೀಗೆ ನುಡಿದಳು —

"ಎಲೈ ರಘುವಂಶದ ಶ್ರೇಷ್ಠ ರಾಜನೇ ! ನೀನು ಪ್ರೇಮದಿಂದಲೂ, ನಿಶ್ಚಯದಿಂದಲೂ ಪಾಲಿಸುತ್ತಿರುವ ಧರ್ಮವು ನಿನ್ನನ್ನು ಕಾಪಾಡಲಿ. ದೇವಾಲಯದಲ್ಲಿ ನೀನು ನಮಸ್ಕರಿಸುವ ದೇವರು, ಮಹರ್ಷಿಗಳು ಕಾಡಿನಲ್ಲಿ ನಿನ್ನನ್ನು ಕಾಪಾಡಲಿ. ವಿಚಾರವಂತರಾದ ವಿಶ್ವಾಮಿತ್ರ ಮುನಿಗಳು ನಿನಗಿತ್ತ ಅಸ್ತ್ರಗಳು ಗುಣಸಂಪನ್ನನಾದ ನಿನ್ನನ್ನು ಯಾವಾಗಲೂ ಕಾಪಾಡುತ್ತಿರಲಿ. ಎಲೈ ಪರಾಕ್ರಮಿಯಾದ ಪುತ್ರನೇ ! ಪಿತೃಸೇವೆ, ಮಾತೃಸೇವೆ ಹಾಗೂ ಸತ್ಯವನ್ನು ರಕ್ಷಿಸುತ್ತ ಚಿರಕಾಲ ಬಾಳು. ಎಲೈ ನರೋತ್ತಮನೇ ! ಸಮಿಧೆ, ಕುಶ, ದರ್ಭೆ, ವೇದಿ, ದೇವಾಲಯಗಳು, ವಿಪ್ರರ ಸ್ಥಾನಗಳು, ಪರ್ವತಗಳು, ವೃಕ್ಷಗಳು, ಕಿರಿದಾದ ರೆಂಬೆಯ ಗಿಡಗಳು, ಸರೋವರಗಳು, ಪಕ್ಷಿಗಳು, ಸರ್ಪಗಳು ಹಾಗೂ ಸಿಂಹಗಳು ನಿನ್ನನ್ನು ರಕ್ಷಿಸಲಿ. ಇಂದ್ರ ಮೊದಲಾದ ಎಲ್ಲ ಲೋಕಪಾಲಕರುಗಳು, ಆರು ಋತುಗಳು, ಎಲ್ಲ ತಿಂಗಳುಗಳು, ಸಂವತ್ಸರಗಳು, ರಾತ್ರಿಗಳು, ಹಗಲುಗಳು, ಮುಹೂರ್ತಗಳೆಲ್ಲ ನಿನ್ನನ್ನು ಕಾಪಾಡಲಿ. ಮಗೂ ! ಶ್ರುತಿ, ಸ್ಮೃತಿಗಳು ಹಾಗೂ ಧರ್ಮವು ನಿನ್ನನ್ನು ಎಲ್ಲ ಬದಿಗಳಿಂದಲೂ ಕಾಪಾಡಲಿ. ಪರ್ವತಗಳು, ಎಲ್ಲ ಸಮುದ್ರಗಳು, ವರುಣರಾಜ, ಸ್ವರ್ಗ, ಅಂತರಿಕ್ಷ, ಭೂಮಿ, ಚರಾಚರರೊಂದಿಗಿನ ವರ್ತಮಾನ ವಾಯು, ನಕ್ಷತ್ರಗಳು, ಅಧಿದೇವತೆ ಹಾಗೂ ಪ್ರತ್ಯಧಿದೇವತೆಗಳೊಂದಿಗೆ ವರ್ತಮಾನ ಎಲ್ಲ ಗ್ರಹಗಳು, ಹಗಲುಗಳು ಹಾಗೂ ರಾತ್ರಿಗಳಲ್ಲದೆ ಎರಡೂ ಸಂಧ್ಯೆಗಳು ಕಾಡಿನ ಆಸರೆಯಲ್ಲಿ ವಾಸಿಸುವ ನಿನ್ನನ್ನು ಕಾಪಾಡಲಿ... ವಿಚಾರಿಯಾದ ನೀನು ಮುನಿವೇಷ ತೊಟ್ಟು ಮಹಾವನದಲ್ಲಿ ಸಂಚರಿಸುತ್ತಿರುವಾಗ ದೇವತೆಗಳು ಹಾಗೂ ದೈತ್ಯರು ಯಾವಾಗಲೂ ನಿನಗೆ ಸುಖದಾಯಕರಾಗಲಿ. ಮಗೂ ! ಘೋರರೂ, ಕ್ರೂರಕರ್ಮಿಗಳೂ ಆದ ರಾಕ್ಷಸರು ಹಾಗೂ ಪಿಶಾಚಿಗಳಲ್ಲದೆ ಎಲ್ಲ ಬಗೆಯ ಮಾಂಸಭಕ್ಷಕವಾದ ಪ್ರಾಣಿಗಳಿಂದ ನಿನಗೆ ಭಯವೆನ್ನಿಸದಿರಲಿ... ನರಮಾಂಸಭಕ್ಷಕವೆನ್ನಿಸಿದ ಜಾತಿಗಳನ್ನೆಲ್ಲ ನಾನಿಲ್ಲಿ ಪೂಜಿಸಿದ್ದೇನೆ. ಆದ್ದರಿಂದ ಅವು ನಿನ್ನನ್ನು ಹಿಂಸಿಸದಿರಲಿ."

ಆಗಮಾಸ್ತೇ ಶಿವಾಃ ಸಂತು ಸಿಧ್ಯಂತು ಚ ಪರಾಕ್ರಮಾಃ ।
ಸರ್ವಸಂಪತ್ತಯೋ ರಾಮ ಸ್ವಸ್ತಿಮಾನ್‌ಗಚ್ಛ ಪುತ್ರಕ ॥ ೨೦ ॥
ಸ್ವಸ್ತಿ ತೇಽಸ್ತ್ವಾಂತರಿಕ್ಷೇಭ್ಯಃ ಪಾರ್ಥಿವೇಭ್ಯಃ ಪುನಃಪುನಃ ।
ಸರ್ವೇಭ್ಯಶ್ಚೈವ ದೇವೇಭ್ಯೋ ಯೇ ಚ ತೇ ಪರಿಪಂಥಿನಃ ॥ ೨೨ ॥
ಶುಕ್ರಃ ಸೋಮಶ್ಚ ಸೂರ್ಯಶ್ಚ ಧನದೋಽಥ ಯಮಸ್ತಥಾ ।
ಪಾಂತು ತ್ವಾಮರ್ಚಿತಾ ರಾಮ ದಂಡಕಾರಣ್ಯವಾಸಿನಮ್ ॥ ೨೩ ॥
ಅಗ್ನಿರ್ವಾಯುಸ್ತಥಾ ಧೂಮೋ ಮಂತ್ರಾಶ್ಚರ್ಷಿಮುಖಚ್ಯುತಾಃ ।
ಉಪಸ್ಪರ್ಶನಕಾಲೇ ತು ಪಾಂತು ತ್ವಾಂ ರಘುನಂದನ ॥ ೨೪ ॥
ಸರ್ವಲೋಕಪ್ರಭುರ್ಬ್ರಹ್ಮಾ ಭೂತಕರ್ತಾ ತಥರ್ಷಯಃ ।
ಯೇ ಚ ಶೇಷಾಃ ಸುರಾಸ್ತೇ ತು ರಕ್ಷಂತು ವನವಾಸಿನಮ್ ॥ ೨೫ ॥

"ದಾರಿಗಳು ನಿನಗೆ ಕಲ್ಯಾಣಕಾರಕವಾಗಲಿ. ನಿನ್ನ ಪರಾಕ್ರಮಗಳು ಸಫಲವಾಗಲಿ. ನಿರೀಕ್ಷಿಸಿದ ಎಲ್ಲ ಬಗೆಯ ಸಮೃದ್ಧಿಗಳು ಕಾಡಿನಲ್ಲಿ ನಿನಗೆ ಸಿಗುವಂತಾಗಲಿ. ನೀನು ಕಲ್ಯಾಣಸಂಪನ್ನನಾಗಿದ್ದು ನಿನ್ನ ಗಮನ

ವಾಗಲಿ. ಆಕಾಶ ಹಾಗೂ ಪೃಥ್ವಿಗಳ ನಡುವೆ ಇರುವ ಪ್ರಾಣಿಗಳು ಹಾಗೂ ಎಲ್ಲ ದೇವತೆಗಳಿಂದ ಅಷ್ಟೇ ಅಲ್ಲದೆ ಇರಬಹುದಾದ ನಿನ್ನ ಎಲ್ಲ ಶತ್ರುಗಳಿಂದಲೂ ನಿನಗೆ ಕಲ್ಯಾಣವಾಗಲಿ. ಎಲೈ ಶ್ರೀರಾಮನೇ ! ಶುಕ್ರ, ಚಂದ್ರ, ಸೂರ್ಯ, ಕುಬೇರ ಹಾಗೂ ಯಮರನ್ನು ಪೂಜಿಸಿದ್ದೇನೆ. ಹೀಗಾಗಿ ನೀನು ದಂಡಕಾರಣ್ಯದಲ್ಲಿರುವಾಗ ಅವರು ನಿನ್ನನ್ನು ಕಾಪಾಡಲಿ. ಎಲೈ ರಘುನಂದನನೇ ! ಅಗ್ನಿ, ವಾಯು, ಧೂಮ ಹಾಗೂ ಋಷಿಗಳ ಬಾಯಿಂದ ಹೊರಟ ಮಂತ್ರಗಳು ಸ್ನಾನದ ಕಾಲಕ್ಕೆ ನಿನ್ನನ್ನು ಕಾಪಾಡಲಿ. ಸರ್ವಲೋಕಾಧಿಪತಿಯಾದ ಬ್ರಹ್ಮ, ಜಗತ್ಕಾರಣ ನಾದ ಬ್ರಹ್ಮ ಹಾಗೂ ಉಳಿದ ದೇವತೆಗಳು ಕಾಡಿನಲ್ಲಿ ವಾಸಿಸುವ ನಿನ್ನನ್ನು ಕಾಪಾಡಲಿ."

ಆಮೇಲೆ ಕೌಸಲ್ಯೆಯು ದೇವಗಣಗಳನ್ನು ಪೂಜಿಸಿದಳು. ಬ್ರಾಹ್ಮಣರಿಂದ ಯಥಾವಿಧಿ ಹವನವನ್ನು ಮಾಡಿಸಿದಳು. ಶ್ರೀರಾಮನಿಗೆ ಆರೋಗ್ಯ ಲಭಿಸಲೆಂದು ಉಪಾಧ್ಯಾಯರಿಂದ ಹೋಮವನ್ನು ಮಾಡಿಸಿದಳು. ಅವಶಿಷ್ಟವಾದ ಹವಿರ್ದ್ರವ್ಯವನ್ನು ಲೋಕಪಾಲ ಮೊದಲಾದವರಿಗೆ ಬಲಿ ಕೊಟ್ಟಳು. ಶ್ರೀರಾಮನಿಗೆ, ವನದಲ್ಲಿ ಮಂಗಲವಾಗಲೆಂದು ಪುಣ್ಯಾಹವಾಚನವನ್ನು ಮಾಡಿಸಿದಳು. ಬ್ರಾಹ್ಮಣರಿಗೆ ದಕ್ಷಿಣೆಯನ್ನಿತ್ತಳು.

ಯನ್ಮಂಗಲಂ ಸಹಸ್ರಾಕ್ಷೇ ಸರ್ವದೇವನಮಸ್ಕೃತೇ ।
ವೃತ್ರನಾಶೇ ಸಮಭವತ್ತತ್ತೇ ಭವತು ಮಂಗಲಮ್ ॥ ೩೨ ॥
ಯನ್ಮಂಗಲಂ ಸುಪರ್ಣಸ್ಯ ವಿನತಾಕಲ್ಪಯತ್ಪುರಾ ।
ಅಮೃತಂ ಪ್ರಾರ್ಥಯಾನಸ್ಯ ತತ್ತೇ ಭವತು ಮಂಗಲಮ್ ॥ ೩೩ ॥
ಅಮೃತೋತ್ಪಾದನೇ ದೈತ್ಯಾಂ ಘ್ನತೋ ವಜ್ರಧರಸ್ಯ ಯತ್ ।
ಅದಿತಿರ್ಮಂಗಲಂ ಪ್ರದಾತ್ತತ್ತೇ ಭವತು ಮಂಗಲಮ್ ॥ ೩೪ ॥
ತ್ರಿವಿಕ್ರಮಾಂಪ್ರಕ್ರಮತೋ ವಿಷ್ಣೋರತುಲತೇಜಸಃ ।
ಯದಾಸೀನ್ಮಂಗಲಂ ರಾಮ ತತ್ತೇ ಭವತು ಮಂಗಲಮ್ ॥ ೩೫ ॥
ಋಷಯಃ ಸಾಗರಾ ದ್ವೀಪಾ ವೇದಾ ಲೋಕಾ ದಿಶಶ್ಚ ತೇ ।
ಮಂಗಲಾನಿ ಮಹಾಬಾಹೋ ದಿಶಂತು ಶುಭಮಂಗಲಮ್ ॥ ೩೬ ॥

"ಎಲ್ಲ ದೇವತೆಗಳಿಗೂ ಮಾನ್ಯನಾದ ಇಂದ್ರನಿಗೆ ವೃತ್ರ-ವಧೆಯ-ಸಮಯಕ್ಕೆ ಯಾವ ಮಂಗಲ ಉಂಟಾಯಿತೋ ಅದೇ ನಿನಗೂ ಆಗಲಿ. ಅಮೃತವನ್ನು ತರಲೆಂದು ಹೊರಟ ಗರುಡನಿಗೆ ಹಿಂದಕ್ಕೆ ವಿನತೆಯು ಯಾವ ಮಂಗಲವನ್ನು ಮಾಡಿದಳೋ ಅದು ನಿನಗಾಗಲಿ. ಅಮೃತದ ಉತ್ಪಾದನೆಯ ಕಾಲಕ್ಕೆ ದೈತ್ಯನನ್ನು ಘಾತಗೊಳಿಸುವ ವಜ್ರಪಾಣಿಯಾದ ಇಂದ್ರನಿಗೆ ಅದಿತಿಯು ಯಾವ ಮಂಗಲವನ್ನು ಮಾಡಿದಳೋ ಅದು ನಿನಗಾಗಲಿ. ಮೂರು ಹೆಜ್ಜೆಗಳನ್ನಿಡುವಾಗ ವಿಷ್ಣುವಿಗೆ ಯಾವ ಮಂಗಲವಾಯಿತೋ ಅದು ನಿನಗಾಗಲಿ. ಎಲೈ ಪರಾಕ್ರಮಿಯಾದ ಶ್ರೀರಾಮನೇ ! ಋಷಿಗಳು, ಸಾಗರಗಳು, ದ್ವೀಪಗಳು, ವೇದಗಳು, ಲೋಕಗಳು ಹಾಗೂ ದಿಕ್ಕುಗಳು ನಿನಗೆ ಶುಭಮಂಗಲಗಳನ್ನು ಮಾಡಲಿ. ಇಷ್ಟೇ ಅಲ್ಲದೆ, ಅವರಿಂದ ನಿನಗೆ ಮಂಗಲದ ಮಂಗಲವೂ ಪ್ರಾಪ್ತವಾಗಲಿ."

ಕೌಸಲ್ಯೆಯು ಶ್ರೀರಾಮನಿಗೆ ಇಷ್ಟಕಾರ್ಯಕ್ಕಾಗಿ ಕಾಡಿಗೆ ಹೋಗಲು ಹೇಳಿದಳು. ಮಂಗಲಸಂಪನ್ನನಾಗಿ ಕಾಡಿನಲ್ಲಿ ಇದ್ದು ಬಂದಬಳಿಕ ತನ್ನ ಹಾಗೂ ತನ್ನ ಸೊಸೆಯ ಉದ್ದೇಶವನ್ನು ಸಫಲಗೊಳಿಸಲೆಂದು ತನ್ನಿಚ್ಛೆಯನ್ನು ವ್ಯಕ್ತಪಡಿಸಿದಳು. ಅವಳು ಹೀಗೆಂದಳು —

ಮಯಾರ್ಚಿತಾ ದೇವಗಣಾಃ ಶಿವಾದಯೋ
ಮಹರ್ಷಯೋ ಭೂತಗಣಾಃ ಸುರೋರಗಾಃ ।
ಅಭಿಪ್ರಯಾತಸ್ಯ ವನಂ ಚಿರಾಯ ತೇ
ಹಿತಾನಿ ಕಾಂಕ್ಷಂತು ದಿಶಶ್ಚ ರಾಘವ ॥ ೪೫ ॥

"ಎಲೈ ರಾಘವನೇ ! ನಾನು ಪೂಜಿಸಿದ ಶಿವಾದಿ ದೇವಗಣ, ಮಹರ್ಷಿಗಳು, ಭೂತಗಣ, ಬೇರೆ ದೇವತೆಗಳು, ಪನ್ನಗಗಳು ಹಾಗೂ ದಿಕ್ಕುಗಳು ಕಾಡಿಗೆ ಹೊರಟಿರುವ ನಿನ್ನ ಹಿತದ ಬಗೆಗೆ ಚಿರಕಾಲ ಇಚ್ಛೆಯನ್ನು ಹೊಂದಿರಲಿ."

## ೨. ಶ್ರೀರಾಮನಿಗೆ ಬ್ರಾಹ್ಮಣರ ಆಶೀರ್ವಾದಗಳು — ಅಯೋಧ್ಯಾಕಾಂಡ / ೩೨

ಶ್ರೀರಾಮನು ಕಾಡಿಗೆ ತೆರಳುವ ಮುನ್ನ ಬ್ರಾಹ್ಮಣರಿಗೆ ತನ್ನ ಬೊಕ್ಕಸದಿಂದ ಬೆಲೆಬಾಳುವ ವಸ್ತು ಒಡವೆಗಳನ್ನೂ, ಧನವನ್ನೂ ಕೈ ಸಡಿಲುಬಿಟ್ಟು ದಾನಮಾಡಿದನು. ಅವರು ಅವನನ್ನು ಹರಸಿದ ಉಲ್ಲೇಖಗಳು ಈ ಸರ್ಗದಲ್ಲಿವೆ.

೧. ವಸಿಷ್ಠನ ಮಗನಾದ ಸುಯಜ್ಞನ ಮಡದಿಗಾಗಿ ಹಲವು ಸುವರ್ಣಾಲಂಕಾರಗಳು, ಸೀತೆಯ ಒಡವೆಗಳು, ರತ್ನಗಳು, ಬಾಹು ಭೂಷಣಗಳು ಹಾಗೂ ಇತರ ವಸ್ತುಗಳು ದೊರಕುತ್ತಲೆ ಅವನು,

> ರಾಮಲಕ್ಷ್ಮಣಸೀತಾಂ ಪ್ರಯುಯೋಜಾಶಿಷಃ ಶಿವಾಃ ॥ ೧೧ ॥

ರಾಮ, ಲಕ್ಷ್ಮಣ, ಸೀತೆಯರಿಗೆ ಮಂಗಲ ಆಶೀರ್ವಾದಗಳನ್ನಿತ್ತನು.

೨. ಶ್ರೀರಾಮನು ಅಗಸ್ತ್ಯಮುನಿ ಹಾಗೂ ವಿಶ್ವಾಮಿತ್ರರನ್ನು ಕರೆಯಿಸಿಕೊಂಡು ಲಕ್ಷ್ಮಣನ ಕೈಯಿಂದ ಅವರಿಗೆ ರತ್ನಗಳ ಪೂಜೆ ಮಾಡಿಸಿದನು. ಅಲ್ಲದೆ ಅವರಿಗೆ ವಿಪುಲವಾದ ಗೋಧನ, ಸುವರ್ಣ, ರಜತ, ಮಣಿಗಳು ಮುಂತಾದವನ್ನು ನೀಡಿ ಅವನನ್ನು ಸಂತುಷ್ಟರನ್ನಾಗಿ ಮಾಡೆಂದನು. ಅದೇ ರೀತಿಯಾಗಿ —

> ಕೌಸಲ್ಯಾಂ ಚ ಆಶೀರ್ಭಿರ್ಭಕ್ತಃ ಪರ್ಯುಪತಿಷ್ಠತಿ ।
> ಆಚಾರ್ಯಸ್ತೈತ್ತಿರೀಯಾಣಾಮಭಿರೂಪಶ್ಚ ವೇದವಿತ್ ॥ ೧೫ ॥

ಕೌಸಲ್ಯೆಯ ಬಗೆಗೆ ಭಕ್ತಿಯುಳ್ಳವರೂ, ದಿನಾಲು ಅವಳನ್ನು ಹರಸುವವರೂ ಆದ ಬ್ರಾಹ್ಮಣರು, ತೈತ್ತಿರೀಯ ಶಾಖೆಯ ಆಚಾರ್ಯರು ಹಾಗೂ ಎಲ್ಲ ವೇದಜ್ಞರಿಗೂ ಸಾಕಷ್ಟು ದಾನವನ್ನು ಕೊಡಹೇಳಿದನು.

೩. ವಿಜಟಾ ಮುನಿಗೆ ದಾನವನ್ನೀಯುವಾಗ ಶ್ರೀರಾಮನು ಹೀಗೆಂದನು — "ನನ್ನ ಬಳಿಯ ಧನವೆಲ್ಲ ಬ್ರಾಹ್ಮಣನಿಗಾಗಿಯೇ ಇದೆಯೆಂಬುದಾಗಿ ನಾನು ನಿಜವನ್ನೇ ಹೇಳುತ್ತಲಿದ್ದೇನೆ. ನಾನು ನಿಮ್ಮಂಥವರಿಗೆ ಧನವನ್ನು ನೀಡುವುದರಿಂದ ನನ್ನ ವಂಶ ವೃದ್ಧಿಂಗತವಾಗಲಿದೆ." ವಿಪುಲವಾದ ಗೋಧನ ದೊರೆತ ಕಾರಣ ವಿಜಟಾ ಮುನಿ ಹಾಗೂ ಅವನ ಮಡದಿಗೆ ತುಂಬ ಸಂತೋಷವಾಯಿತು.

> ಯಶೋಬಲಪ್ರೀತಿಸುಖೋಪಬೃಂಹಿಣೀಸ್ತದಾಶಿಷಃ ಪ್ರತ್ಯವದನ್ಮಹಾತ್ಮನಃ ॥ ೪೩ ॥

ಅವನು ಶ್ರೀರಾಮನಿಗೆ ಯಶ, ಬಲ, ಪ್ರೀತಿ, ಸೌಖ್ಯ, ಮುಂತಾದವುಗಳು ವೃದ್ಧಿಹೊಂದಲೆಂದು ಹರಸಿದನು.

## ೩. ಸುಮಿತ್ರೆಯ ಆಶೀರ್ವಾದ — ಅಯೋಧ್ಯಾಕಾಂಡ / ೪೦

ಲಕ್ಷ್ಮಣ ಶ್ರೀರಾಮನೊಂದಿಗೆ ಕಾಡಿಗೆ ಹೋಗಲು ಸಿದ್ಧನಾದನು. ಹೊರಡುವ ಮುನ್ನ ಸುಮಿತ್ರೆಯನ್ನು ನಮಸ್ಕರಿಸಲು ಅವಳಲ್ಲಿಗೆ ಹೋದನು. ಅವಳು ಅವನ ತಲೆಯನ್ನು ಅವಘ್ರಹಿಸಿದಳು. ಅಳು ಅಳುತ್ತಲೇ ಅವನಿಗೆ ಹೀಗೆಂದಳು —

> ಸೃಷ್ಟಸ್ತ್ವಂ ವನವಾಸಾಯ ಸ್ವನುರಕ್ತಃ ಸುಹೃಜ್ಜನೇ ।
> ರಾಮೇ ಪ್ರಮಾದಂ ಮಾ ಕಾರ್ಷೀಃ ಪುತ್ರ ಭ್ರಾತರಿ ಗಚ್ಛತಿ ॥ ೫ ॥
> ವ್ಯಸನೀ ವಾ ಸಮೃದ್ಧೋ ವಾ ಗತಿರೇಷ ತವಾನಘ ।
> ಏಷ ಲೋಕೇ ಸತಾಂ ಧರ್ಮೋ ಯಜ್ಜ್ಯೇಷ್ಠವಶಗೋ ಭವೇತ್ ॥ ೬ ॥
> ಇದಂ ಹಿ ವೃತ್ತಮುಚಿತಂ ಕುಲಸ್ಯಾಸ್ಯ ಸನಾತನಮ್ ।
> ದಾನಂ ದೀಕ್ಷಾ ಚ ಯಜ್ಞೇಷು ತನುತ್ಯಾಗೋ ಮೃಧೇಷು ಹಿ ॥ ೭ ॥
> ಲಕ್ಷ್ಮಣಂ ತ್ವೇವಮುಕ್ತ್ವಾಸೌ ಸಂಸಿದ್ಧಂ ಪ್ರಿಯರಾಘವಮ್ ।
> ಸುಮಿತ್ರಾ ಗಚ್ಛಗಚ್ಛೇತಿ ಪುನಃಪುನರುವಾಚ ತಮ್ ॥ ೮ ॥
> ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಮ್ ।
> ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಮ್ ॥ ೯ ॥

"ಎಲೈ ಪುತ್ರನೇ ! ಸುಹೃಜ್ಜನಾದ ಶ್ರೀರಾಮನೆಂದರೆ ನಿನಗೆ ಬಲು ಮಮತೆ. ಹೀಗಾಗಿ ನಿನಗೆ ಕಾಡಿಗೆ ಹೋಗಲು ಒಪ್ಪಿಗೆ ನೀಡುತ್ತಿದ್ದೇನೆ. ನಿನ್ನಣ್ಣ ಕಾಡಿನಲ್ಲಿ (ಬೇರೆ ಕಡೆಗೆ) ಹೋಗಹತ್ತಿರವನೆಂದರೆ ನೀನು

ಎಚ್ಚರ ಕಳೆದುಕೊಳ್ಳದಿರು. ಎಲೈ ನಿಷ್ಪಾಪನೇ ! ಶ್ರೀರಾಮನು ಸಂಕಟದಲ್ಲಿ ಸಿಲುಕಿರಲಿ ಇಲ್ಲವೆ ಸಮೃದ್ಧನಾಗಿಯೇ ಇರಲಿ, ಅವನೇ ನಿನಗೆ ಗತಿ. ಅಣ್ಣನನ್ನು ಅನುಸರಿಸಿ ನಡೆದುಕೊಳ್ಳುವುದು ಈ ಕುಲಕ್ಕೆ ತಕ್ಕುದಾಗಿದ್ದು ಅದು ಪರಂಪರೆಯಿಂದ ನಡೆದುಕೊಂಡುಬಂದಿದೆ. ಜ್ಞಾನ, ಯಜ್ಞದೀಕ್ಷೆ ಹಾಗೂ ಯುದ್ಧದಲ್ಲಿ ದೇಹತ್ಯಾಗ ಎಂಬ ಈ ಧರ್ಮಗಳೂ ಕ್ಷತ್ರಿಯಕುಲಕ್ಕೆ ಸರಿಯಾದವುಗಳೇ ಆಗಿವೆ..." 'ಹೋಗು, ಹೋಗು' ಎಂದು ಸುಮಿತ್ರೆಯು ಮತ್ತೆ ಮತ್ತೆ ನುಡಿಯುತ್ತ ಲಕ್ಷ್ಮಣನಿಗೆ ಹೀಗೆಂದಳು — "ಮಗು ಲಕ್ಷ್ಮಣ ! ರಾಮನೇ ದಶರಥನು, ನಾನು ಈ ಜನಕಕನ್ಯೆ ಹಾಗೂ ಅರಣ್ಯವೇ ಅಯೋಧ್ಯೆಯೆಂದು ತಿಳಿದು ನಿಶ್ಚಿಂತನಾಗಿ ಹೋಗು."

## ೪. ಶ್ರೀರಾಮ, ಲಕ್ಷ್ಮಣ ಹಾಗೂ ಸೀತೆಯರಿಗೆ ಭರದ್ವಾಜ ಮುನಿಯ ಆಶೀರ್ವಾದಗಳು

ಅಯೋಧ್ಯಾಕಾಂಡ / ೫೫

ಶ್ರೀರಾಮ, ಲಕ್ಷ್ಮಣ ಹಾಗೂ ಸೀತೆಯರು ಚಿತ್ರಕೂಟಕ್ಕೆ ಹೋಗುವ ಮುನ್ನ ಭರದ್ವಾಜ ಮುನಿಗಳ ಆಶ್ರಮದಲ್ಲಿ ಒಂದಿರುಳು ಕಳೆದರು. ಅವರನ್ನು ತನ್ನ ಹೊಟ್ಟೆಮಕ್ಕಳಂತೆ ಬೀಳ್ಕೊಡುವಾಗ ಆ ಮಹರ್ಷಿಯು,

ತೇಷಾಂ ಸ್ವಸ್ತ್ಯಯನಂ ಚೈವ ಮಹರ್ಷಿಃ ಸಹ ಚಕಾರ ಹ । ೨

ಅವರಿಗಾಗಿ ಸ್ವಸ್ತಿವಾಚನ ಮಾಡಿದನು.

ಮಹರ್ಷಿಯು ಅವರಿಗೆ ಚಿತ್ರಕೂಟದತ್ತ ಹೋಗುವ ದಾರಿಯನ್ನು ವಿವರಿಸಿದನು. ಯಮುನೆಯನ್ನು ನಾವೆಯಲ್ಲಿ ದಾಟುವುದು, ಮುಂದಕ್ಕೆ ದಾರಿ ಸಾಗುವಾಗ ಒಂದು ಆಲದ ಹೆಮ್ಮರ ಕಂಡೀತು. ಅದರ ದರ್ಶನ ಪಡೆಯೆಂದನು. ಆ ಮರದ ಆಸರೆಯಲ್ಲಿ ಹಲವು ಜನ ಸಿದ್ಧಪುರುಷರು ವಾಸವಾಗಿದ್ದರು.

ತಸ್ಮಿನ್ ಸೀತಾಂಜಲಿಂ ಕೃತ್ವಾ ಪ್ರಯುಞ್ಜೀತಾಶಿಷಾಂ ಕ್ರಿಯಾಮ್ ।
ಸಮಾಸಾದ್ಯೋ ಚ ತಂ ವೃಕ್ಷಂ ವಸೇತ್ ವಾತಿಕ್ರಮೇತ ವಾ ॥ ೭ ॥

ಸೀತೆ ಆ ಮರದ ಬಳಿಗೆ ಹೋಗಿ ಅದಕ್ಕೆ ಕೈಮುಗಿದು ಆಶೀರ್ವಾದವನ್ನು ಕೇಳಿಕೊಳ್ಳಲಿ. ಅವಳು ಬೇಕಿದ್ದರೆ ಅಲ್ಲಿಯೇ ಉಳಿದುಕೊಳ್ಳಲಿ ಇಲ್ಲವೆ ಮುಂದಿನ ದಾರಿ ಹಿಡಿಯಲಿ.

ಆಲದ ಆ ಹೆಮ್ಮರ ಕಾಣುತ್ತಲೆ ಸೀತೆ ಅದಕ್ಕೆ ತಲೆಬಾಗಿದಳು. ತನ್ನ ಗಂಡನು ಆರಂಭಿಸಿದ ವನವಾಸದ ವ್ರತವು ಸುಖರೂಪವಾಗಿ ಪೂರ್ತಿಗೊಳ್ಳುವಂತಾಗಲಿ ಎಂದು ಕೃಪೆದೋರಲು ಬೇಡಿಕೊಂಡಳು. ಕೈಜೋಡಿಸಿ ಆ ಮರವನ್ನು ಸುತ್ತಿಬಂದಳು. ಮುನಿಗಳ ಹೇಳಿಕೆಯ ಮೇರೆಗೆ ಸೀತೆ ಮರದಿಂದ ಆಶೀರ್ವಾದವನ್ನು ಕೇಳುತ್ತಿರುವುದು ಶ್ರೀರಾಮನ ಗಮನಕ್ಕೆ ಬಂದಿತು.

## ೫. ಶ್ರಾವಣನಿಗೆ ತಂದೆಯ ಆಶೀರ್ವಾದ

ಅಯೋಧ್ಯಾಕಾಂಡ / ೬೪

ಶ್ರಾವಣನ ಮರಣದ ವಾರ್ತೆಯನ್ನು ಕೇಳಿ ಅವನ ತಂದೆ ತುಂಬ ದುಃಖಿಕ್ಕೀಡಾದನು. ಅವನು ತನ್ನ ಮಗನಿಗೆ ಸಂಸ್ಕಾರಪೂರ್ವಕವಾಗಿ ಜಲಾಂಜಲಿಯನ್ನೀಯುವ ಮುನ್ನ ಅವನನ್ನು ಈ ರೀತಿ ಹರಸಿದನು —

ಅಪಾಪೋಽಸಿ ಯಥಾ ಪುತ್ರ ನಿಹತಃ ಪಾಪಕರ್ಮಣಾ ।
ತೇನ ಸತ್ಯೇನ ಗಚ್ಛಾಶು ಯೇ ಲೋಕಾಸ್ತ್ವಸ್ತ್ರಯೋಧಿನಾಮ್ ॥ ೪೦ ॥
ಯಾಂ ಹಿ ಶೂರಾ ಗತಿಂ ಯಾಂತಿ ಸಂಗ್ರಾಮೇಷ್ವನಿವರ್ತಿನಃ ।
ಹತಾಸ್ತ್ವಭಿಮುಖಾಃ ಪುತ್ರ ಗತಿಂ ತಾಂ ಪರಮಾಂ ವ್ರಜ ॥ ೪೧ ॥
ಯಾಂ ಗತಿಂ ಸಗರಃ ಶೈಬ್ಯೋ ದಿಲೀಪೋ ಜನಮೇಜಯಃ ।
ನಹುಷೋ ಧುಂಧುಮಾರಶ್ಚ ಪ್ರಾಪ್ತಾಸ್ತಾಂ ಗಚ್ಛ ಪುತ್ರಕ ॥ ೪೨ ॥
ಯಾ ಗತಿಃ ಸರ್ವಭೂತಾನಾಂ ಸ್ವಾಧ್ಯಾಯಾತ್ತಪಸಶ್ಚ ಯಾ ।
ಭೂಮಿದಸ್ಯಾಹಿತಾಗ್ನೇಶ್ಚ ಏಕಪತ್ನೀವ್ರತಸ್ಯ ಚ ॥ ೪೩ ॥
ಗೋಸಹಸ್ರಪ್ರದಾತೄಣಾಂ ಗುರುಸೇವಾಭೃತಾಮಪಿ ।
ದೇಹನ್ಯಾಸಕೃತಾಂ ಯಾ ಚ ತಾಂ ಗಚ್ಛ ಪುತ್ರಕ ॥ ೪೪ ॥
ನ ಹಿ ತ್ವಸ್ಮಿನ್ ಕುಲೇ ಜಾತೋ ಗಚ್ಛತ್ಯಕುಶಲಾಂ ಗತಿಮ್ । ೪೫

"ನೀನು ನಿರಪರಾಧಿಯಾಗಿರುವಾಗಲೂ ಪಾಪಕರ್ಮವನ್ನು ಮಾಡುವವನೊಬ್ಬನು ನಿನ್ನನ್ನು ಕೊಂದಿದ್ದಾನೆ. ಈ ಸಂಗತಿ ನಿಜವಿದ್ದರೆ ಅಸ್ತ್ರಯುದ್ಧದಲ್ಲಿ ನೆಲಕ್ಕುರುಳುವವರಿಗೆ ಯಾವ ಲೋಕಗಳು ಪ್ರಾಪ್ತವಾಗುವುವೋ ಅವು ನಿನಗೂ ದೊರಕುವಂತಾಗಲಿ. ಕಾಳಗದಿಂದ ಕಾಲ್ತೆಗೆಯದೆ ಎದುರುಬದುರಾಗಿ ಹೋರಾಡುತ್ತ ಮಡಿದ ಕಡುಗಲಿಗಳಿಗೆ ಒಂದೊದಗುವ ವೀರಗತಿ ನಿನಗೂ ಒಂದೊದಗಲಿ. ಸಗರ, ಶೈಬ್ಯ, ದಿಲೀಪ, ಜನಮೇಜಯ, ನಹುಷ, ಧುಂಧುಮಾರರಿಗೆ ದೊರೆತ ಗತಿ ನಿನಗೊದಗಿಬರಲಿ. ಪ್ರಾಣಿಮಾತ್ರರಿಗೆಲ್ಲ ಆಶ್ರಯನಾದ ಬ್ರಹ್ಮ ನಿನಗೊದಗಲಿ. ವೇದಾಧ್ಯಯನ, ತಪಸ್ಸು ಹಾಗೂ ಪೃಥ್ವಿದಾನಗಳನ್ನು ನೀಡುವವರಿಗೆ, ಆಹಿತಾಗ್ನಿಗಳಿಗೆ, ಏಕಪತ್ನೀ ವ್ರತರಾಗಿ ನಡೆದುಕೊಳ್ಳುವವರಿಗೆ, ಸಾವಿರ ಗೋವುಗಳನ್ನು ಕೊಡುವವರಿಗೆ, ಗುರುಸೇವೆ ಮಾಡುವವರಿಗೆ ಅಲ್ಲದೆ ಮಹಾಪ್ರಸ್ಥಾನಾದಿ ಸಾಧನಗಳಿಂದ ಪರಲೋಕಪ್ರಾಪ್ತಿಗಾಗಿ ದೇಹತ್ಯಾಗವನ್ನು ಕೈಕೊಳ್ಳುವವರಿಗೆ ಪ್ರಾಪ್ತವಾಗುವ ಗತಿ ನಿನಗೂ ಒಂದೊದಗಲಿ. ನಮ್ಮ ಕುಲದಲ್ಲಿ ಹುಟ್ಟಿಬಂದ ನಿನಗೆ ಕೆಟ್ಟ ಗತಿ ಬಾರದು."

## ೬. ದಂಡಕಾರಣ್ಯದ ತಪಸ್ವಿಗಳ ಆಶೀರ್ವಾದಗಳು — ಅಯೋಧ್ಯಾಕಾಂಡ / ೧

ಶ್ರೀರಾಮ-ಲಕ್ಷ್ಮಣ-ಸೀತೆಯರು ದಂಡಕಾರಣ್ಯವನ್ನು ಪ್ರವೇಶಿಸಿದನು. ಅಲ್ಲೊಂದು ತಪಸ್ವಿಗಳ ಮಂಡಳವನ್ನು ಕಂಡರು. ತೇಜಸ್ವಿಗಳಾದ ಹಲವು ಜನ ತಪಸ್ವಿಗಳು ನಾರುಬಟ್ಟೆ ಹಾಗೂ ಚಿಗರೆಯ ಚರ್ಮಗಳನ್ನು ತೊಟ್ಟು ವೇದೋಚ್ಚಾರಣೆ ಗೈಯುತ್ತಿದ್ದರು. ಶ್ರೀರಾಮ ತನ್ನ ಬಿಲ್ಲಿನ ಹೆದೆಯನ್ನು ಬಿಚ್ಚಿದನು. ಆಶ್ರಮವಾಸಿಗಳು ಬಂದ ಈ ಮೂವರನ್ನೂ ಪ್ರಸನ್ನತೆಯಿಂದ ಬರಮಾಡಿಕೊಂಡರು. ಬಂದವರ ರೂಪ, ದೇಹಸೌಂದರ್ಯ, ಮೈಕಟ್ಟು, ತೇಜಸ್ಸಿನ ಶಾಂತಿ, ಸುಕುಮಾರತೆ ಹಾಗೂ ವೇಷಗಳನ್ನು ಕಂಡು ತಪಸ್ವಿಗಳು ನಿಬ್ಬೆರಗಾದರು. ಅವರು,

> ಮಂಗಲಾನಿ ಪ್ರಯುಞ್ಜಾನಾಃ ...... ॥ ೧೨ ॥

ಮಂಗಲಮಯವಾದ ಆಶೀರ್ವಾದಗಳನ್ನಿತ್ತರು.

ಮಹರ್ಷಿಗಳು ಶ್ರೀರಾಮ ಹಾಗೂ ಸಂಗಡಿಗರಿಗೆ ಉಳಿದುಕೊಳ್ಳಲೆಂದು ಪರ್ಣಶಾಲೆಯಲ್ಲಿ ಏರ್ಪಾಡು ಮಾಡಿದರು. ಬಂದ ಅತಿಥಿಗಳಿಗೆ ಸತ್ಕಾರಪೂರ್ವಕ ಜಲವನ್ನರ್ಪಿಸಿದರು. ಹಾಗೂ,

> ಮಂಗಲಾನಿ ಪ್ರಯುಞ್ಜಾನಾ ಮುದಾ ಪರಮಯಾ ಯುತಾಃ ।
> ಮೂಲಂ ಪುಷ್ಪಂ ಫಲಂ ಸರ್ವಾಶ್ರಮಂ ಚ ಮಹಾತ್ಮನಃ ॥ ೧೭ ॥

ಅವರು ಮಾಂಗಲ್ಯಯುಕ್ತವಾದ ಆಶೀರ್ವಾದಗಳನ್ನಿತ್ತರಲ್ಲದೆ ಹಣ್ಣುಹಂಪಲುಗಳೊಂದಿಗೆ ಇಡಿಯ ಆಶ್ರಮವನ್ನೇ ಅವರಿಗೆ ಒಪ್ಪಿಸಿಬಿಟ್ಟರು.

## ೭. ಸುತೀಕ್ಷ್ಣ ಮುನಿಗಳ ಆಶೀರ್ವಾದ — ಅರಣ್ಯಕಾಂಡ / ೮

ಶ್ರೀರಾಮನು ತಮ್ಮ ಆಶ್ರಮಕ್ಕೆ ಬಂದುದನ್ನು ಕಂಡು ಸುತೀಕ್ಷ್ಣ ಮುನಿಗಳು ಅವನನ್ನು ಬಿಗಿದಪ್ಪಿ ಬರಮಾಡಿಕೊಂಡರು. ಅವರ ಆದರಾತಿಥ್ಯಗಳನ್ನು ಸ್ವೀಕರಿಸಿ ಅವನು ಒಂದು ಇರುಳು ಅಲ್ಲಿ ಉಳಿದುಕೊಂಡನು. ಆ ಮುನಿಗಳಾದರೋ ಈ ಬಂದವರಿಗಾಗಿ ತಮ್ಮ ಆಶ್ರಮವನ್ನೇ ಬಿಟ್ಟುಕೊಡಲು ಸಿದ್ಧರಾದರು. ಆದರೆ ಸುತ್ತಲೂ ಜಿಂಕೆಗಳ ಉಪಟಳ ಹೆಚ್ಚಾಗಿತ್ತು. ಆಶ್ರಮದಲ್ಲಿ ವಾಸಿಸುವುದಾದರೆ ಜಿಂಕೆಗಳನ್ನು ಬೇಟೆಯಾಡಬೇಕಿತ್ತು. ಹಾಗೆ ಮಾಡುವುದು ಸರಿಯಲ್ಲವೆಂದು ಅಂದುಕೊಂಡು ಲಕ್ಷ್ಮಣನು ಮುನಿಗಳ ಕೊಡುಗೆಯನ್ನು ವಿನಯದಿಂದ ನಿರಾಕರಿಸಿದನು. ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡುವ ಮುನ್ನ ಮೂವರೂ ಮುನಿಗಳ ಪಾದಗಳನ್ನು ಸ್ಪರ್ಶಿಸಿ ವಂದಿಸಿದರು. ಅವರು "ನಿಮ್ಮ ಪ್ರಯಾಣ ಸುಖದ್ದಾಗಲಿ" ಎಂದು ಶುಭಕೋರಿದರು. ಅವರಂದುದು —

> ಅರಿಷ್ಟಂ ಗಚ್ಛ ಪಂಥಾನಂ ರಾಮಸೌಮಿತ್ರಿಣಾ ಸಹ ।
> ಸೀತಯಾ ಚಾನಯಾ ಸಾರ್ಧಂ ಛಾಯಯೇವಾನುವೃತ್ತಯಾ ॥ ೧೧ ॥

"ದಾರಿಯಲ್ಲಿನ ಎಲ್ಲಾ ಕಂಟಕಗಳು ದೂರಾಗಲಿ. ಶ್ರೀರಾಮಲಕ್ಷ್ಮಣಸೀತೆಯರು ಪರಸ್ಪರ ನೆರಳಿನಂತೆ ಹಿಂಬಾಲಿಸಿರಿ."

## ೮. ಸುಗ್ರೀವನ ಹೇಳಿಕೆ ಕಿಷ್ಕಿಂಧಾಕಾಂಡ / ೯

ಸುಗ್ರೀವ ಶ್ರೀರಾಮನಿಗೆ ತನ್ನ ಗೋಳಿನ ಕಥೆಯನ್ನು ಹೇಳುತ್ತಿದ್ದಾನೆ. ತನ್ನ ಹಾಗೂ ವಾಲಿಯ ನಡುವೆ ಹಗೆತನ ಹುಟ್ಟಿಕೊಂಡದ್ದೇಕೆ ಎಂಬುದನ್ನು ವಿವರಿಸುತ್ತಾನೆ. ವಾಲಿ ಸಾವನ್ನಪ್ಪಿದನೆಂದು ಬಗೆದು ಮಂತ್ರಿಗಳು ಸುಗ್ರೀವನಿಗೆ ಪಟ್ಟಗಟ್ಟಿದರು. ಅವನು ಒಳ್ಳೆಯ ರೀತಿಯಲ್ಲಿ ರಾಜ್ಯವನ್ನು ಆಳತೊಡಗಿದನು. ಕೆಲಕಾಲ ಕಳೆದ ತರುವಾಯ ವಾಲಿಯು ಮಾಯದ ರಾಕ್ಷಸರನ್ನು ಸಂಹರಿಸಿ ಮರಳಿ ಬಂದನು. ಸುಗ್ರೀವ ದೊರೆಯಾದುದನ್ನು ಕಂಡು ಕಿಡಿಕಿಡಿಯಾದನು. ಮಂತ್ರಿಗಳನ್ನು ಸೆರೆಹಿಡಿದನು. ಸುಗ್ರೀವನನ್ನೇ ಕಟುವಾಗಿ ಜರಿದನು.

ಸುಗ್ರೀವ ಶ್ರೀರಾಮನಿಗೆ ಹೀಗೆನ್ನುತ್ತಾನೆ — "ವಾಲಿಯನ್ನು ಶಿಕ್ಷಿಸುವುದು ನನಗೇನೂ ಕಷ್ಟದ್ದಾಗಿರಲಿಲ್ಲ. ಆದರೆ ಅವನು ನನ್ನಣ್ಣನೇ ಆದ್ದರಿಂದ ಹಾಗೆ ಮಾಡಲಿಲ್ಲ. ಆದರೆ,

> ಮಾನಯಂಸ್ತಂ ಮಹಾತ್ಮಾನಂ ಯಥಾವಚ್ಚಾಭಿವಾದಯಮ್ ।
> ಉಕ್ತಾಶ್ಚ ನಾಶಿಷಸ್ತೇನ ಪ್ರಹೃಷ್ಟೇನಾಂತರಾತ್ಮನಾ ॥ ೨೫ ॥

"ನನ್ನ ಅಣ್ಣನು ಜಯಶಾಲಿಯಾಗಿ ನಗರವನ್ನು ಪ್ರವೇಶಿಸುತ್ತಲೇ ನಾನವನನ್ನು ಯಥೋಚಿತವಾಗಿ ಬರಮಾಡಿಕೊಂಡೆ, ಅಭಿವಂದಿಸಿದೆ. ಆದರೆ ಅವನು ಮಾತ್ರ ಅದರಿಂದಾಗಿ ಸಂತುಷ್ಟನಾಗಲಿಲ್ಲವಲ್ಲದೆ ನನ್ನನ್ನು ಹರಸಲೂ ಇಲ್ಲ."

## ೯. ತಾರೆಯ ವಿಲಾಪ ಕಿಷ್ಕಿಂಧಾಕಾಂಡ / ೨೩

ವಾಲಿಯ ವಧೆಯಿಂದಾಗಿ ತಾರೆ ಬಲು ದುಃಖಿತಳಾದಳು. ವಿಲಪಿಸುವಾಗ ಅವಳಾಡಿದ ಒಂದು ಮಾತು ಹೃದಯಸ್ಪರ್ಶಿಯಾಗಿದೆ.

ವಾಲಿಯ ಮೃತದೇಹವನ್ನು ಕಂಡು ತಾರೆ ಅಂಗದನಿಗೆ ಹೀಗೆಂದಳು — "ನಿನ್ನಪ್ಪನಿಗೆ ಬಂದೊದಗಿದ ಈ ಅವಸ್ಥೆ ಸಹಿಸಲಸಾಧ್ಯವಾದುದು. ಆತ ನಿನ್ನೊಡನೆ ಬಲು ಮಮತೆಯಿಂದ ನಡೆದುಕೊಳ್ಳುತ್ತಿದ್ದ. ಅವನ ಪಾದಗಳನ್ನು ಸ್ಪರ್ಶಿಸಿ ಅವನನ್ನು ವಂದಿಸು." ಅಮ್ಮನ ಮಾತಿನಂತೆ ಅಂಗದ ತನ್ನಪ್ಪನ ಕಳೇಬರವನ್ನು ಅಪ್ಪಿಕೊಂಡು ನಮಸ್ಕರಿಸಿದನು. ವಾಲಿಯ ಬಾಯಿಂದ ಹರಕೆಯ ಮಾತು ಬರಲಿಲ್ಲ. ಅದಕ್ಕವಳು ಹೀಗೆನ್ನುತ್ತಾಳೆ —

> ಅಭಿವಾದಯಮಾನಂ ತ್ವಾಮಂಗದಂ ತ್ವಂ ಯಥಾ ಪುರಾ ॥ ೨೪ ॥
> ದೀರ್ಘಾಯುರ್ಭವ ಪುತ್ರೇತಿ ಕಿಮರ್ಥಂ ನಾಭಿಭಾಷಸೇ । ೨೫

"ನಮ್ಮ ಮುದ್ದು ಮಗು ಅಂಗದ ಎಂದಿನಂತೆಯೇ ನಿನ್ನನ್ನು ಅಭಿವಂದಿಸುತ್ತಿದ್ದಾನೆ. 'ಮಗು, ದೀರ್ಘಾಯುವಾಗು' ಎಂದೇಕೆ ನೀನವನನ್ನು ಹರಸುತ್ತಿಲ್ಲ ?"

## ೧೦. ಹನುಮಂತನಿಗೆ ಸಾಗರ ಹಾಗೂ ಮೈನಾಕರ ಆಶೀರ್ವಾದಗಳು ಸುಂದರಕಾಂಡ / ೧

ಹನುಮಂತ ಇಕ್ಷ್ವಾಕುಕುಲೋತ್ಪನ್ನನಾದ ಶ್ರೀರಾಮನ ಸೇವಕನು. ಸೀತೆಯನ್ನು ಹುಡುಕುವ ಬಲು ಕಠಿಣವಾದ ಕೆಲಸವನ್ನು ಒಪ್ಪಿಕೊಂಡಿದ್ದನು. ಹೀಗಾಗಿ ಅವನು ಸಾಗರ ಹಾಗೂ ಮೈನಾಕ ಇವರಿಬ್ಬರಿಗೂ ವಂದನೀಯನೆನಿಸಿದ್ದನು. ಸಾಗರನು ಇಕ್ಷ್ವಾಕುಕುಲದ ಸಗರರಾಜನ ಉಪಕಾರವನ್ನು ಸ್ಮರಿಸುತ್ತಿದ್ದನು. ಇಂದ್ರನು ತನ್ನ ವಜ್ರದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ ಚೆಲ್ಲಿದಾಗ ಹನುಮಂತನ ತಂದೆಯಾದ ವಾಯುವು ಮೈನಾಕಪರ್ವತವನ್ನು ಕಾಪಾಡಿ ಅದನ್ನು ಕಡಲ ಒಡಲಲ್ಲಿ ಅಡಗಿಸಿಟ್ಟನು. ಹೀಗಾಗಿ ಆ ಪರ್ವತಕ್ಕೆ ಕೂಡ

ಹನುಮಂತನಿಗೆ, ಅವನ ಸತ್ಕಾರ್ಯಕ್ಕೆ ನೆರವು ನೀಡುವ ಆಸೆಯಿತ್ತು. ಹನುಮಂತ ಲಂಕೆಗೆ ಹೋಗುವಾಗ, ಕಡಲನ್ನು ಹಾರುವಾಗ ನಡುವೆ ಅವನಿಗೆ ದಣಿವಾರಿಸಿಕೊಳ್ಳಲು ಅನುಕೂಲವಾಗಲೆಂದು ಅದು ಪರ್ವತಕ್ಕೆ ತಲೆಯೆತ್ತಿ ನೀರ ಮೇಲೆ ಬರಹೇಳಿತು. ಆ ರೀತಿಯಾಗಿ ಮೈನಾಕವು ತಲೆಯೆತ್ತಿನಿಂತಿತು. ಹನುಮಂತನಿಗೆ ತುಸು ಹೊತ್ತು ವಿಶ್ರಮಿಸಿಕೊಳ್ಳೆಂದಿತು. ಹನುಮಂತ ಆ ಕೋರಿಕೆಯನ್ನು ಗೌರವಿಸಿದನು. ಆದರೆ ನಡುವೆಲ್ಲೂ ನಿಲ್ಲೆನೆಂದು ತಾನು ವಾನರರೆದುರು ಪ್ರತಿಜ್ಞೆಗೈದದ್ದರಿಂದ ಸಾಗರ ಹಾಗೂ ಮೈನಾಕರಿಬ್ಬರ ಬಯಕೆಯನ್ನು ಈಡೇರಿಸಲಾಗಲಿಲ್ಲ. ಅವನು ಮೈನಾಕವನ್ನು ಬರಿ ಕೈಯಿಂದ ಸ್ಪರ್ಶಿಸಿದವನೇ ಮುಂದಕ್ಕೆ ಸಾಗಹತ್ತಿದನು. ಆಗ —

> ಸ ಪರ್ವತಸಮುದ್ರಾಭ್ಯಾಂ ಬಹುಮಾನಾದವೇಕ್ಷಿತಃ ।
> ಪೂಜಿತಶ್ಚೋಪಪನ್ನಾಭಿರಾಶೀರ್ಭಿರಭಿನಂದಿತಃ ॥ ೧೩೩ ॥

ಸಾಗರ ಹಾಗೂ ಪರ್ವತಗಳು ಅವನತ್ತ ಗೌರವದಿಂದ ನೋಡಿ ಅವನನ್ನು ಯಥೋಚಿತವಾಗಿ ಸತ್ಕರಿಸಿ, ಹರಸಿದರು.

## ೧೧. ಸಿದ್ಧರು, ಮಹರ್ಷಿಗಳು, ಚಾರಣರು, ಮುಂತಾದವರಿಂದ ಶ್ರೀರಾಮನಿಗೆ ಆಶೀರ್ವಾದಗಳು

ಯುದ್ಧಕಾಂಡ / ೨೨

ಕಡಲನ್ನು ದಾಟಲೆಂದು ನೂರು ಯೋಜನ ಉದ್ದಳತೆಯ ಸೇತುವೆ ಕಟ್ಟಿ ಸಿದ್ಧವಾಯಿತು. ಇದರಿಂದಾಗಿ ಲಂಕೆಯ ಮೇಲೇರಿಹೋಗಲು ಅನುಕೂಲವಾಯಿತು. ಶ್ರೀರಾಮನು ಕೈಗೆತ್ತಿಕೊಂಡ ಸೇತುವೆಯ ಕೆಲಸ ಪೂರ್ತಿಗೊಂಡ ಕಾರಣ ಸಿದ್ಧರು, ಮಹರ್ಷಿಗಳು, ಚಾರಣರು, ಮುಂತಾದವರಿಗೆಲ್ಲ ತುಂಬ ಸಂತೋಷ ವಾಯಿತು. ಅವರ ಬಾಯಿಂದ ಈ ಉದ್ಗಾರಗಳು ಹೊರಬಂದವು —

> ಜಯಸ್ವ ಶತ್ರೂನ್ನರದೇವ ಮೇದಿನೀಂ ಸಸಾಗರಾಂ ಪಾಲಯ ಶಾಶ್ವತೀಃ ಸಮಾಃ ।
> ಇತೀವ ರಾಮಂ ನರದೇವಸತ್ಕೃತಂ ಶುಭೈರ್ವಚೋಭಿರ್ವಿವಿಧೈರಪೂಜಯನ್ ॥ ೮೯॥

"ದೇವತುಲ್ಯನಾದ ನರನೇ ! ನೀನು ಶತ್ರುಗಳನ್ನು ಗೆದ್ದುಕೊಂಡು ಸಾಗರ ಸಹಿತ ಇಡಿಯ ಪೃಥ್ವಿಯನ್ನು ಕಾಪಾಡಲಿರುವೆ" ಎಂಬುದಾಗಿ ಅವರೆಲ್ಲ ಹಲವಾರು ಮಂಗಲವಚನಗಳಿಂದ ಶ್ರೀರಾಮನನ್ನು ಅಭಿವಂದಿಸಿದರು.

ಆಶೀರ್ವಾದ ಎಂಬ ಖಂಡಿತವಾದ ಪದವನ್ನು ಬಳಸಲಾಗದಿದ್ದರೂ ಮಂಗಲಕರವಾದ ಮಾತುಗಳು ಆಶೀರ್ವಾದಗಳಿಗೆ ಸಮನಾದವುಗಳೇ ಆಗಿವೆ.

## ೧೨. ರಾವಣನಿಗೆ ಮಾಲ್ಯವಾನನ ಆಶೀರ್ವಾದ

ಯುದ್ಧಕಾಂಡ / ೩೬

ಮಾಲ್ಯವಾನನು (ಮಾತಾಮಹನು) ರಾವಣನಿಗೆ ಶ್ರೀರಾಮನ ಗುಣಗಳು ಹಾಗೂ ಸಾಮರ್ಥ್ಯಗಳನ್ನು ಕುರಿತು ಸರಿಯಾಗಿ ತಿಳಿಹೇಳಿ ಅವನೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳೆಂದು ಸಲಹೆ ನೀಡಿದ್ದನು. ರಾವಣನಿಗೆ ಅವನ ಈ ಮಾತು ಹಿಡಿಸಲಿಲ್ಲವಷ್ಟೇ ಅಲ್ಲದೆ ಅವನ ಬಗೆಗೇ ಸಂದೇಹ ತಳೆದನು. ರಾವಣ ಸೀತೆಯನ್ನು ಅಪಹರಿಸಿದುದು ಅವನಿಗೆ ಸುತರಾಂ ಒಪ್ಪಿಗೆಯಾಗಲಿಲ್ಲ. ತನ್ನ ಸಾಮರ್ಥ್ಯದ ಬಗೆಗೆ ಜಂಭ ತಳೆದ ರಾವಣ ತುಂಬ ಕೆರಳಿ ಕಿಡಿಕಿಡಿಯಾದನು. ಆಗ ಮಾಲ್ಯವಾನನು —

> ಜಯಾಶಿಷಾ ತು ರಾಜಾನಂ ವರ್ಧಯಿತ್ವಾ ಯಥೋಚಿತಮ್ । ೧೫

"ಮಹಾರಾಜರಿಗೆ ಜಯವಾಗಲಿ !" ಎಂದು ಹರಸಿ ತನ್ನ ನಿವಾಸದತ್ತ ತೆರಳಿದನು.

ಸಂತೋಷದಿಂದ ನೀಡಿದ ಆಶೀರ್ವಾದ ಇದಲ್ಲ.

## ೧೩. ಕುಂಭಕರ್ಣಾದಿಗಳಿಗೆ ರಾವಣನ ಆಶೀರ್ವಾದಗಳು ಯುದ್ಧಕಾಂಡ / ೬೫

ರಾವಣನು ಕುಂಭಕರ್ಣನನ್ನು ಯುದ್ಧಕ್ಕಾಗಿ ಹುರಿದುಂಬಿಸಿದನು. ಆಗ ಅವನು ಸೇನೆಯಿಲ್ಲದೆ ಒಬ್ಬನೇ ಹೊರಟನು. ಆದರೆ ಸೇನೆಸಹಿತ ಯುದ್ಧಕ್ಕೆ ಹೋಗುವುದು ಒಳ್ಳೆಯದೆಂದು ರಾವಣನು ಅವನನ್ನು ಮನಗಾಣಿಸಿದನು. ರಾವಣ ಖುಷಿಯಿಂದ ಅವನಿಗೆ ಚಿನ್ನದ ಹಾರವನ್ನು ತೊಡಿಸಿದನು. ಅಲ್ಲದೆ ಬಗೆಬಗೆಯ ಒಡವೆಗಳಿಂದ ಅವನನ್ನು ಸಿಂಗರಿಸಿದನು. ಕುಂಭಕರ್ಣನು ರಾವಣನನ್ನು ಎದೆತುಂಬಿ ಬಿಗಿದಪ್ಪಿದನು. ತಲೆಬಾಗಿ ಅವನನ್ನು ನಮಸ್ಕರಿಸಿದನು. ಆಗ ಅವನು,

ತಮಾಶೀರ್ಭಿಃ ಪ್ರಶಸ್ತಾಭಿಃ ಪ್ರೇಕ್ಷಯಾಮಾಸ ರಾವಣಃ । ೩೩

ಎಂಬುದಾಗಿ ಉತ್ತಮವಾದ ಆಶೀರ್ವಾದವನ್ನಿತ್ತು ಕುಂಭಕರ್ಣನನ್ನು ರಣರಂಗಕ್ಕೆ ಕಳುಹಿಸಿಕೊಟ್ಟನು.

ಕುಂಭಕರ್ಣನ ಸಾವಿನ ಸಮಾಚಾರವನ್ನು ಕೇಳಿ ರಾವಣ ಬಲು ದುಃಖಿತನಾದನು. ಅವನಿಗೆ ಬದುಕೇ ಬೇಡವಾಯಿತು. ತಾನೂ ಕುಂಭಕರ್ಣನನ್ನು ಹಿಂಬಾಲಿಸುವುದಾಗಿ ವಿಲಾಪಗೈದನು. ಆಗ ತ್ರಿಶಿರನು ಅವನನ್ನು ಸಂತೈಸಿದನು. ತಾನು ಹಗೆಗಳನ್ನು ಸದೆಬಡಿಯುವ ಹೊಣೆಹೊತ್ತನು. ಅವನು ಅತಿಕಾಯ, ದೇವಾಂತಕ, ನರಾಂತಕ, ಮಹೋದರ ಹಾಗೂ ಮಹಾಪಾರ್ಶ್ವರೆಂಬ ಶ್ರೇಷ್ಠರನ್ನೂ, ಶೂರರನ್ನೂ ತನ್ನ ಜೊತೆಗೆ ಕರೆದೊಯ್ದು ಹಗೆಗಳನ್ನೆದುರಿಸಲು ಸನ್ನದ್ಧನಾದನು. ಆಗ ರಾವಣನು ಅವನನ್ನು ಬಿಗಿದಪ್ಪಿದನು. ಅವನನ್ನು ಹಲವು ಬಗೆಯ ಒಡವೆಗಳಿಂದ ಸಿಂಗರಿಸಿದನು. ಅಲ್ಲದೆ —

ಆಶೀರ್ಭಿಶ್ಚ ಪ್ರಶಸ್ತಾಭಿಃ ಪ್ರೇಷಯಾಮಾಸ ವೈ ರಣೇ ॥ ೧೫ ॥

ಉತ್ತಮವಾದ ಆಶೀರ್ವಾದಗಳನ್ನಿತ್ತು ಅವನನ್ನು ರಣಾಂಗಣಕ್ಕೆ ಕಳುಹಿಸಿದನು.

## ೧೪. ಮೇಘನಾದನಿಗೆ ರಾವಣನ ಆಶೀರ್ವಾದ ಯುದ್ಧಕಾಂಡ / ೭೩

ಅತಿಕಾಯ, ತ್ರಿಶರ, ದೇವಾಂತಕ, ಮೊದಲಾದ ಮಹಾಬಲಾಢ್ಯರಾದ ರಾಕ್ಷಸರೆಲ್ಲ ಯುದ್ಧದಲ್ಲಿ ಕೊಲ್ಲಲ್ಪಟ್ಟುದರಿಂದ ರಾವಣ ಕಂಗಾಲಾದನು. ಮಕ್ಕಳು, ಸೋದರರು, ಮರಣಹೊಂದಿದ್ದರಿಂದ ಬೆಂದು ಬಸವಳಿದುಹೋದ ತನ್ನ ತಂದೆಗೆ ಮೇಘನಾದ ಹೀಗೆಂದನು : "ನಾನು ಬದುಕಿರುವವರೆಗೂ ನೀನು ಚಿಂತಿಸುವ ಕಾರಣವಿಲ್ಲ. ನಾನಿಂದೇ ಶ್ರೀರಾಮಲಕ್ಷ್ಮಣರನ್ನು ಯಮಸದನಕ್ಕೆ ಅಟ್ಟಿಯೇಬಿಡುತ್ತೇನೆ. ಈ ದಿನ ಎಲ್ಲರೂ ನನ್ನ ಕಡುಗಲಿತನವನ್ನು ಕಂಡಾರು" ಎಂಬುದಾಗಿ ಸುಡುಸುಡುವ ಪ್ರತಿಜ್ಞೆಮಾಡಿ ಯುದ್ಧಕ್ಕೆ ಸಿದ್ಧನಾದನು. ರಾವಣನು ರಣರಂಗಕ್ಕೆ ಹೊರಟ ತನ್ನ ಮಗನಿಗೆ ಹೀಗೆಂದನು —

ತ್ವಮಪ್ರತಿರಥಃ ಪುತ್ರ ತ್ವಯಾ ವೈ ವಾಸವೋ ಜಿತಃ ।
ಕಿಂ ಪುನರ್ಮಾನುಷಂ ಧೃಷ್ಯಂ ನಿಹನ್ಯಸಿ ರಾಘವಮ್ ॥ ೧೬ ॥

"ಮಗು ! ನಿನ್ನೆದುರು ತಡೆಯಬಲ್ಲ ಒಬ್ಬನನ್ನೂ ನಾ ಕಾಣೆ. ನೀನಂತೂ ಇಂದ್ರನನ್ನೇ ಸೋಲಿಸಿದವನು. (ಅಂದಬಳಿಕ ಈ) ಹುಲುಮಾನವರನ್ನು ಸೋಲಿಸುವುದೇನು ಕಷ್ಟದ್ದು ನಿನಗೆ ?"

ಮೇಘನಾದನಿಗೆ ತನ್ನ ತಂದೆಯ ಮಾತುಗಳು ಆಶೀರ್ವಚನಗಳಾಗಿ ಕಂಡವು.

ಯಥೋಕ್ತೋ ರಾಕ್ಷಸೇಂದ್ರೇಣ ಪ್ರತ್ಯಗೃಹ್ಣಾನ್ಮಹಾಶಿಷಃ । ೧೯

ಅವನು ತಲೆಬಾಗಿ ಅದನ್ನು ಸ್ವೀಕರಿಸಿದನು.

## ೧೫. ಸ್ವರ್ಗಸ್ಥನಾದ ದಶರಥನ ಆಶೀರ್ವಾದಗಳು ಯುದ್ಧಕಾಂಡ / ೧೧೯

ಮಹೇಶ್ವರನು ಸ್ವರ್ಗಸ್ಥನಾದ ದಶರಥನಿಗೆ ಶ್ರೀರಾಮನ ದರ್ಶನವನ್ನು ಮಾಡಿಸಿದನು. ದಶರಥನಿಗೆ ಹಿಡಿಸಲಾಗದಷ್ಟು ಹಿಗ್ಗಾಯಿತು. ಅವನು "ಕಹೋಲನ ಮಗನು ಅವನನ್ನು ಉದ್ಧರಿಸಿದಂತೆಯೇ, ಮಹಾತ್ಮ, ಸುಪುತ್ರನಾದ ನೀನು ಕೂಡ ನನ್ನನ್ನು ಉದ್ಧರಿಸಿದೆ" ಎಂದು ಸಂತಸದುಂಬಿ ಉದ್ಗರಿಸಿದನು. ಕೈಕೇಯಿಯ

ದುರುಳಮಾತುಗಳು, ಅವಳಿಂದಾಗಿ ಶ್ರೀರಾಮ, ಲಕ್ಷ್ಮಣ, ಸೀತೆಯರು ವನವಾಸದ ಪಾಡುಪಡಬೇಕಾಗಿ ಬಂದುದು, ಮುಂತಾದ ಸಂಗತಿಗಳಿಂದಾಗಿ ದಶರಥನು ತುಂಬ ವ್ಯಥಿತನಾಗಿದ್ದನು. ಅವನು ಅವೆಲ್ಲವುಗಳನ್ನು ಶ್ರೀರಾಮನೆದುರು ತೋಡಿಕೊಂಡನು. ಅವನನ್ನು ಹೀಗೆಂದು ಹರಸಿದನು :

ನಿವೃತ್ತವನವಾಸೋಽಸಿ ಪ್ರತಿಜ್ಞಾ ಪೂರಿತಾ ತ್ವಯಾ ।
ರಾವಣಂ ಚ ರಣೇ ಹತ್ವಾ ದೇವತಾಃ ಪರಿತೋಷಿತಾಃ ॥ ೨೬ ॥
ಕೃತಂ ಕರ್ಮ ಯಶಃ ಶ್ಲಾಘ್ಯಂ ಪ್ರಾಪ್ತಂ ತೇ ಶತ್ರುಸೂದನ ।
ಭ್ರಾತೃಭಿಃ ಸಹ ರಾಜ್ಯಸ್ಥೋ ದೀರ್ಘಮಾಯುರವಾಪ್ನುಹಿ ॥ ೨೭ ॥

"ಈಗ ನಿನ್ನ ವನವಾಸ ಪೂರ್ತಿಯಾಯಿತು. ನೀನು ನಿನ್ನ ಪ್ರತಿಜ್ಞೆಯನ್ನು ಪಾಲಿಸಿರುವೆ. ಯುದ್ಧದಲ್ಲಿ ರಾವಣನನ್ನು ಕೊಂದು ನೀನು ದೇವತೆಗಳನ್ನು ಸಂತುಷ್ಟಗೊಳಿಸಿರುವೆ. ಎಲೈ ಶತ್ರುನಾಶಕನೇ ! ನೀನು ಪ್ರಶಂಸನೀಯವಾದ ಕಾರ್ಯವನ್ನು ಕೈಗೊಂಡಿದ್ದರಿಂದ ಕೀರ್ತಿಯನ್ನು ಗಳಿಸಿರುವೆ. ರಾಜ್ಯದ ಗದ್ದುಗೆಯೇರಿದ ದಿನ ನಿನಗೆ ನಿನ್ನ ಸೋದರರೊಡನೆ ದೀರ್ಘಾಯುಸ್ಸು ಲಭಿಸಲಿ." ಕೈಕೇಯಿ ಹಾಗೂ ಭರತರಿಗೆ ಕೃಪೆದೋರು ವಂತೆ ಶ್ರೀರಾಮನು ದಶರಥನನ್ನು ಕೋರುತ್ತಲೆ ಅದನ್ನವನು ಒಪ್ಪಿಕೊಂಡನು. ಶ್ರೀರಾಮನನ್ನು ಸೇವೆಗೈಯಲು ಲಕ್ಷ್ಮಣನಿಗೆ ಹೇಳಿ ಹೀಗೆಂದು ಆಶೀರ್ವಾದವಿತ್ತನು —

ಧರ್ಮಂ ಪ್ರಾಪ್ಸ್ಯಸಿ ಧರ್ಮಜ್ಞ ಯಶಶ್ಚ ವಿಪುಲಂ ಭುವಿ ।
ರಾಮೇ ಪ್ರಸನ್ನೇ ಸ್ವರ್ಗಂ ಚ ಮಹಿಮಾನಂ ತಥೋತ್ತಮಮ್ ॥ ೨೯ ॥

"ಎಲೈ ಧರ್ಮಜ್ಞನೇ ! ನಿನಗೆ ಧರ್ಮ ಪ್ರಾಪ್ತವಾದೀತು. ಭೂತಲದ ಮೇಲೆ ನಿನ್ನ ಕೀರ್ತಿ ಬೆಳೆದೀತು. ಶ್ರೀರಾಮನು ಪ್ರಸನ್ನನಾದನೆಂದರೆ ನಿನಗೆ ಸ್ವರ್ಗ ದೊರೆತು ಉತ್ಕೃಷ್ಟವಾದ ಕೀರ್ತಿ ಬಂದೀತು. ಎಲೈ ಸುಮಿತ್ರಾನಂದನನೇ ! ನಿನಗೆ ಕಲ್ಯಾಣವಾಗಲಿ." ತರುವಾಯ ಅವನು ಸೀತೆಗೆ ಉಪದೇಶದಂತಿರುವ ಆಶೀರ್ವಾದವನ್ನು ನೀಡುತ್ತ ಹೀಗೆಂದನು —

ಕರ್ತವ್ಯೋ ನ ತು ವೈದೇಹಿ ಮನ್ಯುಸ್ತ್ಯಾಗಮಿಮಂ ಪ್ರತಿ ।
ರಾಮೇಣೇದಂ ವಿಶುದ್ಧ್ಯರ್ಥಂ ಕೃತಂ ವೈ ತ್ವದ್ಧಿತೈಷಿಣಾ ॥ ೩೩ ॥
ಸುದುಷ್ಕರಮಿದಂ ಪುತ್ರಿ ತವ ಚಾರಿತ್ರಲಕ್ಷಣಮ್ ।
ಕೃತಂ ಯತ್ತೇಽನ್ಯನಾರೀಣಾಂ ಯಶೋ ಹ್ಯಭಿಭವಿಷ್ಯತಿ ॥ ೩೬ ॥
ನ ತ್ವಂ ಕಾಮಂ ಸಮಾಧೇಯಾ ಭರ್ತೃಶುಶ್ರೂಷಣಂ ಪ್ರತಿ ।
ಅವಶ್ಯಂ ತು ಮಯಾ ವಾಚ್ಯಮೇಷ ತೇ ದೈವತಂ ಪರಮ್ ॥ ೩೭ ॥

"ಅಮ್ಮ ವೈದೇಹಿ ! ಹಿಂದಕ್ಕೆ ಶ್ರೀರಾಮನು ನಿನ್ನನ್ನು ತ್ಯಜಿಸಿದ್ದನೆಂದು ಅವನ ಮೇಲೆ ಕೋಪ ತಳೆಯಬೇಡ. ನಿನ್ನ ಹಿತವನ್ನು ಬಯಸುವ ಶ್ರೀರಾಮ ನಿನ್ನ ಶುದ್ಧಿಗಾಗಿಯೇ ಹಾಗೆ ಮಾಡಿದನು. ಮಗು ! ನೀನು ಕೈಕೊಂಡ ವರ್ತನೆ ತೀರ ದುರ್ಘಟವಾದುದು. ನಿನ್ನೀ ನಡತೆಯಿಂದಾಗಿ ಉಳಿದ ಪತಿವ್ರತೆಯರ ಕೀರ್ತಿ ಹಿಂದುಳಿದೀತು. ಪತಿಸೇವೆಯ ಬಗೆಗೆ ನಾನು ನಿನಗೆ ಹೇಳಬೇಕಿಲ್ಲವಾದರೂ ಈ ಶ್ರೀರಾಮನೇ ನಿನ್ನ ದೇವನಾಗಿದ್ದಾನೆಂಬುದನ್ನು ನಾನು ಅವಶ್ಯವಾಗಿ ನಿನಗೆ ಹೇಳಲೇಬೇಕು."

## ೧೬. ಪುಷ್ಪಕ ವಿಮಾನಕ್ಕೆ ಶ್ರೀರಾಮನ ಆಶೀರ್ವಾದ ಉತ್ತರಕಾಂಡ / ೪೧

ಕುಬೇರನ ಅಪ್ಪಣೆಯ ಮೇರೆಗೆ ಪುಷ್ಪಕ ವಿಮಾನವು ಶ್ರೀರಾಮನ ಬಳಿಗೆ ಬಂದಿತು. ಶ್ರೀರಾಮನು ಕುಬೇರನ ಕೋರಿಕೆಯನ್ನು ಮನ್ನಿಸಿ ಆ ವಿಮಾನವನ್ನು ಬರಮಾಡಿಕೊಂಡು ಅದನ್ನು ಸ್ವೀಕರಿಸಿದನು. ಅವನು ಅದನ್ನು ಅರಳುಗಳು, ಹೂವುಗಳು ಹಾಗೂ ಸುಗಂಧ ದ್ರವ್ಯಗಳಿಂದ ಪೂಜಿಸಿ ಅದಕ್ಕೆ ಹೀಗೆಂದನು —

ಗಮ್ಯತಾಮಿತಿ ಚೋವಾಚ ಆಗಚ್ಛ ತ್ವಂ ಸ್ಮರೇ ಯದಾ ।
ಸಿದ್ಧಾನಾಂ ಚ ಗತೌ ಸೌಮ್ಯ ಮಾ ವಿಷಾದೇನ ಯೋಜಯ ॥ ೧೪ ॥
ಪ್ರತಿಘಾತಶ್ಚ ತೇ ಮಾ ಭೂದ್ಯಥೇಷ್ಟಂ ಗಚ್ಛತೋ ದಿಶಃ । ೧೫

"ಈಗ ಹೋಗು, ನಾನು ನಿನ್ನನ್ನು ನೆನೆಸುತ್ತಲೆ ಮತ್ತೆ ಬಾ. ಎಲೈ ಸೌಮ್ಯವಾದ ವಿಮಾನವೇ ! ಆಕಾಶ ಮಾರ್ಗದಲ್ಲಿ ಸುಖದಿಂದಿರು. ನೀನಿಚ್ಛಿಸಿದ ದಿಕ್ಕಿನಲ್ಲಿ ಹಾರುವಾಗ ನಿನಗೆಲ್ಲೂ ಅಡೆತಡೆಗಳು ಬಾರದಿರಲಿ."

## ೧೭. ಶ್ರೀರಾಮನಿಗೆ ಅಗಸ್ತ್ಯಾದಿ ಋಷಿಗಳ ಆಶೀರ್ವಾದಗಳು — ಉತ್ತರಕಾಂಡ / ೮೨

ಶ್ರೀರಾಮನು ಅಗಸ್ತ್ಯನ ಆಶ್ರಮದಿಂದ ಅಯೋಧ್ಯೆಯತ್ತ ಹೊರಟನು. ಆಗ ಅಗಸ್ತ್ಯನು ಅವನಿಗೆ ನಿರ್ಭಯವಾಗಿ ಹೋಗೆಂದನು. ಅಲ್ಲದೆ,

ಪ್ರಶಾಧಿ ರಾಜ್ಯಂ ಧರ್ಮೇಣ ಗತಿರ್ಹಿ ಜಗತೋ ಭವಾನ್ ॥ ೧೩ ॥

"ಇಡಿಯ ಜಗತ್ತಿಗೆ ನೀನೇ ಆಶ್ರಯದಾತ, ಹೀಗಾಗಿ ಧರ್ಮವನ್ನನುಸರಿಸಿ ರಾಜ್ಯವನ್ನಾಳು" ಎಂದು ಉಪದೇಶವನ್ನಿತ್ತನು. ಶ್ರೀರಾಮನು ಪುಷ್ಪಕವಿಮಾನವನ್ನೇರುವ ಮುನ್ನ ಮಹರ್ಷಿಗಳೆಲ್ಲರನ್ನೂ ಕೈಜೋಡಿಸಿ ವಂದಿಸಿದನು. ಆಗ ಅವರೆಲ್ಲ,

ತಂ ಪ್ರಯಾಂತಂ ಮುನಿಗಣಾ ಆಶೀರ್ವಾದೈಃ ಸಮಂತತಃ ।
ಅಪೂಜಯನ್..... ॥ ೧೭ ॥

ಎಂದು ಶ್ರೀರಾಮನಿಗೆ ಶುಭಾಶೀರ್ವಾದಗಳನ್ನಿತ್ತರು.

# ಹೊತ್ತ ಹರಕೆಗಳು

## ೧. ಗಂಗೆಗೆ ಹೊತ್ತ ಹರಕೆ — ಅಯೋಧ್ಯಾಕಾಂಡ / ೫೨

ಮನೆಯವರಿಂದ ಬೀಳ್ಕೊಂಡು ಶ್ರೀರಾಮ, ಲಕ್ಷ್ಮಣ, ಸೀತೆಯರು ಗಂಗೆಯನ್ನು ದಾಟಲೆಂದು ನಾವೆಯನ್ನೇರಿದರು. ಆಗ ಶ್ರೀರಾಮನು ತನ್ನ ಹಿತಕ್ಕಾಗಿ ಸರಿಯಾದ ಮಂತ್ರವನ್ನು ಉಚ್ಚರಿಸಿದನು. ಜಪ ಮಾಡಿದನು. ಆಚಮನ ಮುಂತಾದವುಗಳನ್ನು ಮಾಡಿ ಎಲ್ಲರೂ ಗಂಗೆಯನ್ನು ನಮಸ್ಕರಿಸಿಯಾಗುತ್ತಲೇ ಅಂಬಿಗನು ನಾವೆಯ ಹುಟ್ಟು ಕಡಿಯಲು ಆರಂಭಿಸಿದನು. ನಾವೆ ಗಂಗೆಯ ನಡುಮಧ್ಯಕ್ಕೆ ಬರುತ್ತಲೇ ಸೀತೆ ಕೈಮುಗಿದು ಗಂಗೆಯನ್ನು ಹೀಗೆಂದು ಬೇಡಿಕೊಂಡಳು —

ಪುತ್ರೋ ದಶರಥಸ್ಯಾಯಂ ಮಹಾರಾಜಸ್ಯ ಧೀಮತಃ ।
ನಿದೇಶಂ ಪಾಲಯತ್ವೇನಂ ಗಂಗೇ ತ್ವದಭಿರಕ್ಷಿತಃ ॥ ೮೩ ॥
ಚತುರ್ದಶ ಹಿ ವರ್ಷಾಣಿ ಸಮಗ್ರಾಣ್ಯುಷ್ಯ ಕಾನನೇ ।
ಭ್ರಾತ್ರಾ ಸಹ ಮಯಾ ಚೈವ ಪುನಃ ಪ್ರತ್ಯಾಗಮಿಷ್ಯತಿ ॥ ೮೪ ॥
ತತಸ್ತ್ವಾಂ ದೇವಿ ಸುಭಗೇ ಕ್ಷೇಮೇಣ ಪುನರಾಗತಾ ।
ಯಕ್ಷ್ಯೇ ಪ್ರಮುದಿತಾ ಗಂಗೇ ಸರ್ವಕಾಮಸಮೃದ್ಧಿನೀ ॥ ೮೫ ॥
ತ್ವಂ ಹಿ ತ್ರಿಪಥಗೇ ದೇವಿ ಬ್ರಹ್ಮಲೋಕಂ ಸಮಕ್ಷಸೇ ।
ಭಾರ್ಯಾ ಚೋದಧಿರಾಜಸ್ಯ ಲೋಕೇಽಸ್ಮಿನ್ಸಂಪ್ರದೃಶ್ಯಸೇ ॥ ೮೬ ॥
ಸಾ ತ್ವಾಂ ದೇವಿ ನಮಸ್ಯಾಮಿ ಪ್ರಶಂಸಾಮಿ ಚ ಶೋಭನೇ ।
ಪ್ರಾಪ್ತರಾಜ್ಯೇ ನರವ್ಯಾಘ್ರೇ ಶಿವೇನ ಪುನರಾಗತೇ ॥ ೮೭ ॥
ಗವಾಂ ಶತಸಹಸ್ರಂ ಚ ವಸ್ತ್ರಾಣ್ಯನ್ನಂ ಚ ಪೇಶಲಮ್ ।
ಬ್ರಾಹ್ಮಣೇಭ್ಯಃ ಪ್ರದಾಸ್ಯಾಮಿ ತವ ಪ್ರಿಯಚಿಕೀರ್ಷಯಾ ॥ ೮೮ ॥
ಸುರಾಘಟಸಹಸ್ರೇಣ ಮಾಂಸಭೂತೌದನೇನ ಚ ।
ಯಕ್ಷ್ಯೇ ತ್ವಾಂ ಪ್ರೀಯತಾಂ ದೇವಿ ಪುರೀಂ ಪುನರುಪಾಗತಾ ॥ ೮೯ ॥
ಯಾನಿ ತ್ವತ್ತೀರವಾಸೀನಿ ದೈವತಾನಿ ಚ ಸಂತಿ ಹಿ ।
ತಾನಿ ಸರ್ವಾಣಿ ಯಕ್ಷ್ಯಾಮಿ ತೀರ್ಥಾನ್ಯಾಯತನಾನಿ ಚ ॥ ೯೦ ॥
ಪುನರೇವ ಮಹಾಬಾಹುರ್ಮಯಾ ಭ್ರಾತ್ರಾ ಚ ಸಂಗತಃ ।
ಅಯೋಧ್ಯಾಂ ವನವಾಸಾತ್ತು ಪ್ರವಿಶತ್ವನಘೋಽನಘೇ ॥ ೯೧ ॥

"ಅಮ್ಮ, ಗಂಗೆಯೇ ! ದಶರಥ ಮಹಾರಾಜನ ವಿಚಾರವಂತನಾದ ಈ ಮಗನು ನಿನ್ನ ರಕ್ಷಣೆಯಲ್ಲಿ ತನ್ನ ತಂದೆಯ ಅಪ್ಪಣೆಯನ್ನು ಪೂರ್ತಿ ಪಾಲಿಸುವಂತಾಗಲಿ. ದೇವಿ ! ಓ ಭಾಗ್ಯಶಾಲಿನಿಯಾದ ಗಂಗೆಯೇ ! ಹದಿನಾಲ್ಕು ವರ್ಷಗಳನ್ನು ವನವಾಸದಲ್ಲಿ ಕಳೆದು ನನ್ನ ಗಂಡ ಹಾಗೂ ನಾನು ಜೊತೆಯಾಗಿ ಹಿಂತಿರುಗಿ ಬರುವಾಗ ನಮ್ಮ ಮನೋರಥಗಳೆಲ್ಲ ಪೂರ್ತಿಗೊಂಡಾವು. ಆಗ ಬಲು ಸಂತೋಷದಿಂದ ನಿನ್ನನ್ನು ಪೂಜಿಸುವೆ. ತ್ರೈಲೋಕ್ಯಗಾಮಿನಿಯಾದ ದೇವಿಯೇ ! ನೀನು ಬ್ರಹ್ಮಲೋಕವನ್ನು ವ್ಯಾಪಿಸುತ್ತಿರುವೆ. ಮಹಾಸಾಗರನ ಮಡದಿಯಾಗಿ ಈ ಲೋಕದಲ್ಲಿ ನೀನೆಲ್ಲರ ಕಣ್ಣಿಗೂ ಕಾಣುತ್ತಿರುವೆ. ಎಲೆ ದೇವಿ ! ಕಲ್ಯಾಣಿಯೇ ! ಪುರುಷ ಶ್ರೇಷ್ಠನಾದ ನನ್ನ ಗಂಡ ಕಾಡಿನಿಂದ ಸೌಖ್ಯವಾಗಿ ಹಿಂತಿರುಗಿ ಬಂದು ರಾಜ್ಯವನ್ನಾಳಲು ಆರಂಭಿಸಿದನೆಂದರೆ ನಾನು ನಿನ್ನನ್ನು ನಮಸ್ಕರಿಸುವೆನು. ಅಲ್ಲದೆ ನಿನ್ನನ್ನು ಸಂತುಷ್ಟಳನ್ನಾಗಿ ಮಾಡಲೆಂದು ಗೋಪ್ರದಾನಗಳು, ಬಟ್ಟೆಗಳು ಹಾಗೂ ಉತ್ತಮವಾದ ಭೋಜನಗಳನ್ನು ಬ್ರಾಹ್ಮಣರಿಗೆ ನೀಡುವೆ. ಇಷ್ಟೇ ಅಲ್ಲದೆ, ನಾನು ಅಯೋಧ್ಯಾನಗರಿಗೆ ಮರಳುತ್ತಲೇ ಸಾವಿರ ಕೊಡ ಮದ್ಯ ಹಾಗೂ ಮಾಂಸೋದನ(ಮಾಂಸ ಬೆರೆತ ಅನ್ನ) ಗಳನ್ನು ನಿನಗೆ ಬಲಿಯಾಗಿ ನೀಡುವೆ. ಗಂಗೆಯೇ ! ನೀನು ನನ್ನ ಮೇಲೆ ಪ್ರಸನ್ನಳಾಗು. ನಿನ್ನ ದಡಗಳ ಮೇಲಿರುವ ದೇವತೆಗಳು, ತೀರ್ಥಗಳು ಹಾಗೂ ಪುಣ್ಯಸ್ಥಾನಗಳನ್ನೆಲ್ಲ ನಾನು ಪೂಜಿಸುವೆ. ಆದರೆ ಎಲೆ ನಿಷ್ಪಾಪಿಯಾದ ಗಂಗೆಯೇ ! ನಾನು, ನನ್ನ ಸೋದರ ಲಕ್ಷ್ಮಣ, ಹಾಗೂ ನಿಷ್ಪಾಪನಾದ ನನ್ನ ಗಂಡ ಕಾಡಿನಿಂದ ಹಿಂತಿರುಗಿ ಅಯೋಧ್ಯೆಯನ್ನು ಪ್ರವೇಶಿಸುವಂತಾಗಲಿ."

## ೨. ಯಮುನೆಗೆ ಹೊತ್ತ ಹರಕೆ

ಅಯೋಧ್ಯಾಕಾಂಡ / ೫೫

ಶ್ರೀರಾಮ, ಸಂಗಡಿಗರು ಒಂದಿರುಳನ್ನು ಭರದ್ವಾಜ ಮುನಿಯ ಆಶ್ರಮದಲ್ಲಿ ಕಳೆದರು. ಮಾರನೆಯ ದಿನ ಮುನಿಯು ಅವರಿಗೆ ಚಿತ್ರಕೂಟಕ್ಕೆ ಹೋಗುವ ದಾರಿಯನ್ನು ತೋರಿಸಿದನು. ಆಶೀರ್ವಾದದ ಮಾತುಗಳನ್ನಾಡಿ ಅವನು ಆ ಮೂವರನ್ನೂ ಬೀಳ್ಕೊಟ್ಟನು. ಯಮುನೆಯನ್ನು ದಾಟಬೇಕೆಂದರೆ ಅಲ್ಲಿ ನಾವೆಯಿರಲಿಲ್ಲ. ಹೀಗಾಗಿ ಅವರು ಕಟ್ಟಿಗೆಗಳನ್ನು ಕಲೆಹಾಕಿ ಒಂದು ತೆಪ್ಪವನ್ನು ತಯಾರಿಸಿದರು. ಅದರ ಮೈಮೇಲೆ ಎಲೆಗಳನ್ನು ಹರಡಿ ಕುಳಿತುಕೊಳ್ಳಲು ಅನುವು ಮಾಡಿಕೊಂಡರು. ಸೀತೆಯನ್ನು ಅದರ ಮೇಲೆ ಮೊದಲಿಗೆ ಕುಳ್ಳಿರಿಸಿದ ತರುವಾಯ ಶ್ರೀರಾಮಲಕ್ಷ್ಮಣರು ಅದನ್ನೇರಿ ಕುಳಿತರು. ತೆಪ್ಪವು ಯಮುನೆಯ ಮಧ್ಯಭಾಗಕ್ಕೆ ಬರುತ್ತಲೆ ಸೀತೆ ಅವಳನ್ನು ವಂದಿಸಿ ಹೀಗೆಂದಳು —

ಸ್ವಸ್ತಿ ದೇವಿ ತರಾಮಿ ತ್ವಾಂ ಪಾರಯೇನ್ಮೇ ಪತಿವ್ರತಮ್ ॥ ೧೯ ॥
ಯಕ್ಷ್ಯೇ ತ್ವಾಂ ಗೋಸಹಸ್ರೇಣ ಸುರಾಘಟಶತೇನ ಚ ।
ಸ್ವಸ್ತಿ ಪ್ರತ್ಯಾಗತೇ ರಾಮೇ ಪುರೀಮಿಕ್ಷ್ವಾಕುಪಾಲಿತಾಮ್ ॥ ೨೦ ॥

"ಎಲೈ ದೇವಿ ! ನಾನು ನಿನ್ನ ಮೇಲೆ ತೇಲಿ ಹೊರಟಿದ್ದೇನೆ. ನನ್ನ ಗಂಡನು ಸ್ವೀಕರಿಸಿದ ವ್ರತವು ಪೂರ್ತಿಗೊಳ್ಳಲಿ. ಶ್ರೀರಾಮನು ಇಕ್ಷ್ವಾಕುವಂಶಜರು ರಕ್ಷಿಸಿದ ಅಯೋಧ್ಯೆಗೆ ಸುಖರೂಪನಾಗಿ ಮರಳಿ ಬಂದ ತರುವಾಯ ಸಾವಿರ ಗೋವುಗಳು ಹಾಗೂ ನೂರು ಮದ್ಯದ ಕೊಡಗಳಿಂದ ನಾನು ನಿನ್ನನ್ನು ಪೂಜಿಸುವೆ."

## ಭಾಗ : ಏಳು

# ವ್ಯಕ್ತಿವಿಶೇಷ

### ೧. ಅಗಸ್ತ್ಯ

ಅಗಸ್ತ್ಯನು ವಸಿಷ್ಠನಂತೆ ಮಿತ್ರ-ವರುಣರಿಂದ ಜನಿಸಿದ ಪುತ್ರ. ಊರ್ವಶಿಯು ವರುಣನೊಡನೆ ಸಂಭೋಗವನ್ನು ನಿರಾಕರಿಸಿದ ಕಾರಣ ಆತನು ತನ್ನ ತೇಜಸ್ಸನ್ನು (ವೀರ್ಯವನ್ನು) ಒಂದು ಕುಂಭದಲ್ಲಿ ಹಾಕಿದನು. ಮಿತ್ರನಿಗೆ ಈ ಸಂಗತಿಯು ತಿಳಿದುಬಂದಿತು. ಆಗ ಮಿತ್ರನು ಊರ್ವಶಿಗೆ ಶಾಪ ಕೊಟ್ಟು ತನ್ನ ತೇಜಸ್ಸನ್ನು ಕುಂಭದಲ್ಲಿ ವಿಸರ್ಜಿಸಿದನು. ಆ ಕುಂಭದಿಂದ ತೇಜಸ್ವಿಗಳಾದ ಇಬ್ಬರು ಶ್ರೇಷ್ಠ ಬ್ರಹ್ಮರ್ಷಿಗಳು ಹೊರಬಂದರು. ಅವರಲ್ಲಿ ಮೊದಲಿನವನು ಅಗಸ್ತ್ಯ, ಎರಡನೆಯವನು ವಸಿಷ್ಠ. ಅಗಸ್ತ್ಯನು, ಮಿತ್ರನಿಗೆ ನಾನು ನಿನ್ನೊಬ್ಬನ ಪುತ್ರನಲ್ಲ ವೆಂದು ಹೇಳಿದನು. ಇವರ ಜನ್ಮದ ಬಗೆಗಿನ ಇನ್ನೊಂದು ಕಥೆಯ ಪ್ರಕಾರ ಊರ್ವಶಿಯನ್ನು ಕಂಡಂತೆ ಮಿತ್ರ ಮತ್ತು ವರುಣರ ವೀರ್ಯವು ಕಮಲದಲ್ಲಿ ಬಿದ್ದಿತು : ಅದರಿಂದ ಅಗಸ್ತ್ಯ-ವಸಿಷ್ಠರು ಜನ್ಮ ತಾಳಿದರು. ಲೋಪಾಮುದ್ರೆ ಎಂಬಾಕೆಯು ಅಗಸ್ತ್ಯನ ಪತ್ನಿಯಾಗಿದ್ದಳು. ಅವಳು ರಾಜಕನ್ಯೆಯಾಗಿದ್ದಳು. ಅವಳ ಒಲವು ಐಶ್ವರ್ಯದತ್ತ ಇತ್ತು. ಅಗಸ್ತ್ಯನು ವಿರಕ್ತನಾಗಿದ್ದರೂ ತನ್ನ ಹೆಂಡತಿಯನ್ನು ಸಂತೋಷ ಗೊಳಿಸಲು ಆತನು 'ಇಲ್ವಲ' ಎಂಬಾತನ ಸಂಪತ್ತನ್ನು ಪಡೆದುಕೊಂಡನು. ಸಮುದ್ರದಲ್ಲಿದ್ದ ಕಾಲಕೇಯರು ಜನರನ್ನು ಪೀಡಿಸಲು ಪ್ರಾರಂಭಿಸಿದಾಗ ಅಗಸ್ತ್ಯನು ಇಡೀ ಸಮುದ್ರದ ನೀರನ್ನು ಪ್ರಾಶಿಸಿದನು. ನಹುಷನು ಅಗಸ್ತ್ಯನನ್ನು ಪಲ್ಲಕ್ಕಿಯನ್ನು ಎತ್ತಿಕೊಂಡು ನಡೆಯುವ ವಾಹಕನನ್ನಾಗಿ ಮಾಡಿದನು. ಆಗ ಕೋಪಗೊಂಡ ಅಗಸ್ತ್ಯನು ತನ್ನ ಜಡೆಯ ಒಂದು ಕೂದಲನ್ನು ಭೃಗುವಿನ ಶಾಪದಿಂದ ಅಭಿಮಂತ್ರಿಸಿ ನಹುಷ ನತ್ತ ಎಸೆದಾಗ, ನಹುಷನು, ಹತ್ತು ಸಾವಿರ ವರ್ಷಗಳ ಕಾಲ ಸರ್ಪದ ರೂಪದಲ್ಲಿ ಬಿದ್ದುಕೊಳ್ಳಬೇಕಾಯಿತು. ಅಗಸ್ತ್ಯನು, ಚಿನ್ನವೈಡೂರ್ಯಗಳಿಂದ ಖಚಿತವಾದ ಧನುಸ್ಸನ್ನು, ಅಮೋಘವಾದ ಶರಗಳನ್ನು ಹಾಗೂ ಶರ ತುಂಬಿದ ಅಕ್ಷಯ ಬತ್ತಳಿಕೆಯನ್ನು ಕೊಟ್ಟನು. ಯಜ್ಞಪಶುವೆಂದು ಮರುತನ ಸಲುವಾಗಿ ತಂದ ಪಶುವನ್ನು ಇಂದ್ರನು ಅಪಹರಿಸಿದನು. ಆಗ ಮರುತನು ಇಂದ್ರನನ್ನು, ಹೊಡೆಯಲು ಧಾವಿಸಿದನು. ಆಗ ಅಗಸ್ತ್ಯನು ಮರುತನನ್ನು ಶಾಂತಗೊಳಿಸಿ, ಇಂದ್ರನೊಡನೆ ಮಿತ್ರತ್ವನ್ನುಂಟುಮಾಡಿಕೊಟ್ಟನು. ಅವನು ಹತ್ತು ವರ್ಷಗಳ ಒಂದು ಯಾಗವನ್ನಾರಂಭಿಸಿ, ಪಶುಹಿಂಸೆಯನ್ನು ಮಾಡದೆಯೇ ಇಂದ್ರ ಮಳೆಗರೆಯುವಂತೆ ಮಾಡಿದನು. ಅಗಸ್ತ್ಯನ ಸಂಬಂಧವು ದಕ್ಷಿಣ ದಿಕ್ಕಿನೊಂದಿಗೆ ಹೆಚ್ಚಾಗಿ ಇದ್ದುದರಿಂದ ಈತನನ್ನು 'ದಕ್ಷಿಣದ ಸ್ವಾಮಿ' ಎಂದೆನ್ನುತ್ತಾರೆ. ಈತನಿಂದ ಲೋಪಾಮುದ್ರೆಯು ಇಧ್ಮವಾಹ (ದೃಢಸ್ಯು) ಎಂಬ ಪುತ್ರನನ್ನು ಪಡೆದಳು. ಈ ಎರಡು ಹೆಸರಿನ ಇಬ್ಬರು ಪುತ್ರರಿರುವ ಸಂಭವವೂ ಇದೆ. ಅಗಸ್ತ್ಯ ಹೆಸರಿನ ಒಂದು ಚುಕ್ಕೆಯು ಭಾದ್ರಪದ ಮಾಸದಲ್ಲಿ ದಕ್ಷಿಣ ದಿಕ್ಕಿನಲ್ಲಿ ಕಾಣಿಸಿಕೊಳ್ಳುತ್ತದೆ. ಆಗ ನೀರು ದೋಷರಹಿತವಾಗುತ್ತದೆ, ಎಂಬ ತಿಳುವಳಿಕೆ ಇದೆ. ಅದಕ್ಕೆ ಅಗಸ್ತ್ಯನ ಸಂಬಂಧವಿದೆ ಎನ್ನುತ್ತಾರೆ.

ಅಗಸ್ತ್ಯ ಋಷಿಯ ಹೆಸರಿನಲ್ಲಿ ಸಾಕಷ್ಟು ಗ್ರಂಥರಚನೆಯಿದೆ. 'ಅಗಸ್ತ್ಯ' ಹೆಸರಿನ ಗೋತ್ರವೂ ಕೂಡ ಇದೆ.

### ೨. ಅಂಗದ

ಈತನು ವಾಲಿ ಮತ್ತು ತಾರೆಯರ ಪುತ್ರ ; ವಾಲಿಯ ಬಲುಪ್ರೀತಿಯ ಮಗ : ಅವನಂತೆಯೇ ಅತ್ಯಂತ ಪರಾಕ್ರಮಿ ಕೂಡ. ಮರಣೋನ್ಮುಖನಾದಾಗ ವಾಲಿಯು ಅಂಗದನನ್ನು ಸುಗ್ರೀವನಿಗೆ ಒಪ್ಪಿಸಿ, ಅವನನ್ನು ತನ್ನ ಸ್ವಂತ ಮಗನೆಂದೇ ತಿಳಿಯಲು ಹೇಳಿದನು. ಸುಗ್ರೀವನನ್ನು ಅನುಸರಿಸಿ ವರ್ತಿಸಬೇಕೆಂದು ಅಂಗದನಿಗೆ ಹೇಳಿದನು. ಇಷ್ಟಾದರೂ ಸುಗ್ರೀವನ ಬಗ್ಗೆ ಅಂಗದನ ಮನಸ್ಸಿನಲ್ಲಿ ಸಂದೇಹ ಇತ್ತು. ಬೃಹಸ್ಪತಿಯು

ಶ್ರೀರಾಮನಿಗೆ ನೆರವಾಗಬೇಕೆಂದು ಅಂಶರೂಪವಾಗಿ ಅಂಗದನೆಂದು ಜನ್ಮತಾಳಿದ್ದರಿಂದ ಅಂಗದನು ಬಹು ಬುದ್ಧಿವಂತನಾಗಿದ್ದನು. ವಾಲಿಯ ವಧೆಯನಂತರ ಶ್ರೀರಾಮನು ಸುಗ್ರೀವನಿಗೆ ಕಿಷ್ಕಿಂಧೆಯ ಪಟ್ಟಕಟ್ಟಿದನು. ಅದೇ ಸಮಯಕ್ಕೆ ಸುಗ್ರೀವನಿಂದ ಅಂಗದನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿಸಿದನು. ಅಂಗದನು ಸೀತೆಯ ಶೋಧಾರ್ಥಕ್ಕಾಗಿ ದಕ್ಷಿಣ ದಿಕ್ಕಿನತ್ತ ಹೋದ ವಾನರರ ತಂಡದ ನಾಯಕನಾಗಿದ್ದನು. ಅವನು ಒಬ್ಬ ಅಸುರನನ್ನು ರಕ್ತ ಕಾರುವಂತೆ ಮಾಡಿದನು. ನಿರ್ದಿಷ್ಟ ಸಮಯದೊಳಗೆ ಸೀತೆಯ ಸುಳಿವು ಸಿಗದಿದ್ದರಿಂದ, ಈ ಅಂಗದನ ಗುಂಪಿನವರಿಗೆ ಸುಗ್ರೀವನ ಭಯವೆನಿಸಿ, ಆತನತ್ತ ಮರಳಿ ಹೋಗದೆ ವಾನರರೆಲ್ಲರೂ ಪ್ರಾಯೋಪವೇಶನ ಮಾಡಿ ಮರಣವನ್ನಪ್ಪುವುದೆಂದು ನಿಶ್ಚಯಿಸಿದರು. ಆಗ ಸಂಪಾತಿಯಿಂದ ಸೀತೆಯಿದ್ದ ಸ್ಥಾನವು ತಿಳಿದುಬಂದನಂತರ ಸಮುದ್ರವನ್ನು ದಾಟುವುದೆಂತು ? ಯಾರು ದಾಟಬಲ್ಲರು ? — ಎಂಬ ಚಿಂತೆಯು ಹುಟ್ಟಿಕೊಂಡಿತು. ಆಗ ಅಂಗದ ಒಂದೇ ನೆಗೆತದಲ್ಲಿ ನೂರು ಯೋಜನಗಳನ್ನು ದಾಟುವ ಮನೋಬಲವನ್ನು ವ್ಯಕ್ತಪಡಿಸಿದನು. ರಾವಣನೊಡನೆ ಯುದ್ಧವನ್ನು ತಡೆಯಲು, ಸಾಮೋಪಚಾರದ ಮಾತುಕತೆಗಾಗಿ, ಶ್ರೀರಾಮನ ರಾಜದೂತನೆಂದು ಅಂಗದನನ್ನು ನಿಶ್ಚಯಿಸಲಾಯಿತು. ಅಂಗದನು ಇಂದ್ರಜಿತುವಿನೊಡನೆ ಯುದ್ಧಮಾಡಿ ಆತನನ್ನು ಸೆದೆಬಡಿದನು ; ನರಾಂತಕ, ಮಹಾಪಾರ್ಶ್ವ, ವಜ್ರದಂಷ್ಟ್ರರಂಥ ಬಲಶಾಲಿ ರಾಕ್ಷಸರನ್ನು ಯಮ ಸದನಕ್ಕೆ ಅಟ್ಟಿದನು. ಅಂಗದನು ಕುಂಭಕರ್ಣನ ವಿಶಾಲವಾದ ಶರೀರವನ್ನು ಕಂಡು ಭಯಗೊಂಡು ತತ್ತರಿಸಿದ ವಾನರಭಟರನ್ನು ಹುರಿದುಂಬಿಸಿದನು. ಅಂಗದನ ಸಾಟಿಯಿಲ್ಲದ ಈ ಪರಾಕ್ರಮವನ್ನು ಅವಲೋಕಿಸಿ ಶ್ರೀರಾಮನು ಸಂತೋಷಗೊಂಡನು. ರಾಜ್ಯಾಭಿಷೇಕದ ಸಮಯದಲ್ಲಿ ಶ್ರೀರಾಮನು ತನ್ನ ಬಾಹುಭೂಷಣ ಗಳನ್ನು ಕೊಟ್ಟು ಅಂಗದನನ್ನು ಗೌರವಿಸಿದನು. ಶ್ರೀರಾಮನು ಅಂಗದನನ್ನು ತನ್ನ ಬಳಿ ಕುಳ್ಳಿರಿಸಿಕೊಂಡು ಸುಗ್ರೀವನಿಗೆ "ನಿನ್ನ ಮಗನಾದ ಈ ಅಂಗದನು ಸತ್ಪುತ್ರನಾಗಿದ್ದಾನೆ. ಸಲಹೆ, ವಿಚಾರವಿನಿಮಯಚತುರನಿದ್ದು, ನನ್ನ ಹಿತಾಸಕ್ತಿಯಲ್ಲಿ ತುಂಬಾ ದಕ್ಷನಿದ್ದಾನೆ" ಎಂದು ನುಡಿದನು. ಸುಗ್ರೀವನು ಅಂಗದನಿಗೆ ರಾಜ್ಯಾಭಿಷೇಕವನ್ನು ನಡೆಯಿಸಿ ಕಿಷ್ಕಿಂಧೆಯ ರಾಜ್ಯವನ್ನು ಆತನಿಗೆ ಕೊಟ್ಟನು.

## ೩. ಅಂಜನಾ

ಇವಳಿಗೆ 'ಅಂಜನಿ' ಎಂದು ಕೂಡ ಅನ್ನುತ್ತಾರೆ. ಪುಂಜಿಕಸ್ಥಲೆ ಎಂಬ ಅಪ್ಸರೆಯು ಋಷಿಗಳ ಶಾಪದಿಂದ ಕುಂಜರನೆಂಬ ವಾನರನ ಕನ್ಯೆಯಾದಳು. ಶಿವಶತರುದ್ರಸಂಹಿತೆಯಲ್ಲಿ ಈ ಕನ್ಯೆಯನ್ನು ಗೌತಮಋಷಿಯ ಮಗಳೆಂದು ಉಲ್ಲೇಖಿಸಲಾಗಿದೆ. ಇವಳು ಕೇಸರಿ ಎಂಬ ವಾನರನ ಪತ್ನಿಯಾಗಿದ್ದಳು. ವಾಯುವಿನ ಪ್ರಸಾದದಿಂದ ಇವಳಿಗೆ ಹನುಮಾನನೆಂಬ ಪುತ್ರನಾದನು—ಎಂದು ಸ್ಕಂದಪುರಾಣದಲ್ಲಿ ಉಲ್ಲೇಖವಿದೆ. ಮತಂಗಋಷಿಯು ಹೇಳಿದ್ದರಿಂದ ಇವಳು ಪತಿಯೊಡನೆ ವೆಂಕಟಾಚಲಪರ್ವತದ ಮೇಲೆ ಹೋಗಿ ಅಲ್ಲಿಯ ಪುಷ್ಕರಣಿಯಲ್ಲಿ ಸ್ನಾನಮಾಡಿದಳು. ಅಲ್ಲಿ ವರಾಹ ಮತ್ತು ವೆಂಕಟೇಶರನ್ನು ವಂದಿಸಿದಳು. ಆಕಾಶಗಂಗೆ ಎಂಬ ತೀರ್ಥದಲ್ಲಿ ವಾಯುವನ್ನು ಆರಾಧಿಸಿದಳು. ಒಂದುಸಾವಿರ ವರ್ಷಗಳ ತಪಸ್ಸು ಪೂರ್ಣವಾದನಂತರ ವಾಯುವು ಪ್ರಸನ್ನನಾಗಿ ವರವನ್ನು ಬೇಡಲು ಹೇಳಿದನು. ಆಗ ಅಂಜನಿಯು ತನಗೊಬ್ಬ ಪುತ್ರನನ್ನು ಬೇಡಿ ಕೊಂಡಳು. ಅವನೇ ಹನುಮಾನನಾದನು. ಇವಳು 'ಕಾಮರೂಪಧರೆ'ಯಾಗಿದ್ದಳು. ಈ ಅಂಜನಿಗೆ 'ಮಾರ್ಜರಾ' ಹೆಸರಿನ ಸವತಿಯೊಬ್ಬಳಿದ್ದಳು.

## ೪. ಅತಿಕಾಯ

ಅತಿಕಾಯನು ರಾವಣ ಹಾಗೂ ಧಾನ್ಯಮಾಲಿನಿ ಇವರ ಮಗನು. ಅವನು ಹೆಸರಿನಂತೆ ಬಹುದೊಡ್ಡ ದೇಹದವನಿದ್ದನು. ಬ್ರಹ್ಮದೇವನನ್ನು ಪ್ರಸನ್ನಗೊಳಿಸಿ, ಅಸ್ತ್ರ, ಕವಚ, ದಿವ್ಯರಥಗಳನ್ನು ಪಡೆದುದಲ್ಲದೆ ಸುರಾಸುರರಿಂದ ತನ್ನ ವಧೆಯಾಗಕೂಡದೆಂಬೆಲ್ಲ ವರಗಳನ್ನು ಸಹ ಪಡೆದಿದ್ದನು. ಈತನು ಇಂದ್ರ ಮತ್ತು ವರುಣರನ್ನು ಸೋಲಿಸಿದ್ದನು. ಕುಂಭಕರ್ಣನ ವಧೆಯಾದನಂತರ ಈತನು ರಣಾಂಗಣಕ್ಕೆ ಇಳಿದನು. ಅವನ ಆರ್ಭಟೆಮಾತ್ರದಿಂದ ತತ್ತರಿಸಿದ ವಾನರರು ಶ್ರೀರಾಮನ ಆಶ್ರಯಕ್ಕೆ ಧಾವಿಸಿಬಂದರು. ಅತಿಕಾಯನು

ಭೀಮಪರಾಕ್ರಮಿಯಾಗಿದ್ದನು. ಆತನು ತುಲನೆ ಇಲ್ಲದ ಬಲವುಳ್ಳ, ಅಸ್ತ್ರಜ್ಞಾನಿಯಾದ, ಗಜಾರೋಹಣ-ಅಶ್ವಾರೋಹಣಗಳಲ್ಲಿ ಖ್ಯಾತನಾದ, ಖಡ್ಗ, ಧನುಸ್ಸು, ಬಾಣ ಮುಂತಾದ ಶಸ್ತ್ರಾಸ್ತ್ರಗಳಲ್ಲಿ ನಿಪುಣನಾದ, ಸಾಮದಾಮಾದಿ ರಾಜನೀತಿಯಲ್ಲಿ ಮರ್ಮಜ್ಞನಾದ ವೀರನಾಗಿದ್ದಾನೆಂದು ವಿಭೀಷಣನು ಶ್ರೀರಾಮನಿಗೆ ಅತಿಕಾಯನ ಪರಿಚಯವನ್ನು ಮಾಡಿಕೊಟ್ಟನು. "ಯಾವ ಸಾಮಾನ್ಯ ವೀರನೊಡನೆಯೂ ನಾನು ಯುದ್ಧವನ್ನು ಇಚ್ಛಿಸುವುದಿಲ್ಲ ; ಯಾರ ಬಳಿ ಸಾಮರ್ಥ್ಯವಿದೆಯೋ ಅವರು ನನ್ನೊಡನೆ ಯುದ್ಧಕ್ಕೆ ನಿಲ್ಲಬೇಕು" ಎಂದು ಅತಿಕಾಯನು ಶ್ರೀರಾಮನಿಗೆ ನುಡಿದಿದ್ದನು. ಅತಿಕಾಯ-ಲಕ್ಷ್ಮಣ ಇವರ ಯುದ್ಧದಲ್ಲಿ, ಅತಿಕಾಯನು ಲಕ್ಷ್ಮಣನಿಂದ ಕೊಲ್ಲಲ್ಪಟ್ಟನು.

## ೫. ಅದಿತಿ

ಅದಿತಿಯು ಪ್ರಾಚೇತಸ ದಕ್ಷ ಹಾಗೂ ಅಸಿಕ್ನಿ ಇವರ ಪುತ್ರಿ. ಇವಳು ಕಶ್ಯಪನ ಪತ್ನಿಯಾಗಿದ್ದು ಮಿತ್ರ-ವರುಣರ ತಾಯಿಯಾಗಿದ್ದಳು. ಇವಳಿಗೆ ಬಲಶಾಲಿಗಳಾದ ಎಂಟು ಮಕ್ಕಳು ಜನಿಸಿದರು. ವೇದಗಳಲ್ಲಿ ಇವಳನ್ನು ವಿಷ್ಣುಪತ್ನಿ ಎಂದು ಉಲ್ಲೇಖಿಸಲಾಗಿದೆ. ಇವಳನ್ನು ದ್ಯೌ ಹಾಗೂ ಪೃಥ್ವಿಗಳೊಂದಿಗೆ ಒಂದಾದವಳೆಂದು ಬಗೆಯಲಾಗುತ್ತದೆ. ಇವಳು ಮೈನಾಕಪರ್ವತದ ಶಿಖರದ ಮೇಲೆ 'ಚರು'ವನ್ನು ಬೇಯಿಸಿದ್ದಳು. ಇವಳು ಒಂಟಿಗಾಲಿನಲ್ಲಿ ನಿಂತು ತಪಸ್ಸನ್ನಾಚರಿಸಿದ್ದರಿಂದ ಇವಳ ಉದರದಿಂದ ವಿಷ್ಣುವು ಜನ್ಮತಾಳಿದನು. ಅದಿತಿಗೆ ಹನ್ನೆರಡು ಪುತ್ರರಿದ್ದರೆಂಬ ಒಂದು ಉಲ್ಲೇಖವಿದೆ. ತೈತ್ತಿರೀಯಸಂಹಿತೆಯಲ್ಲಿ ಇವಳಿಗೆ ಎಂಟೇ ಪುತ್ರರಿದ್ದರೆಂದು ಹೇಳಲಾಗಿದೆ. ಇವಳು ಏಳು ಪುತ್ರರನ್ನು ಮಾತ್ರ ಬಯಸಿದ್ದಳು ; ಆದ್ದರಿಂದ ಇವಳು ಎಂಟನೆಯ ಗರ್ಭವನ್ನು ಒಡೆದಳು ; ಅದರಿಂದ 'ಮಾರ್ತಾಂಡ' ಅಥವಾ 'ವಿವಸ್ವಾನ'ರು ಜನ್ಮತಾಳಿದರು ; ನರಕಾಸುರನು ಇವಳ ಕರ್ಣಕುಂಡಲಗಳನ್ನು ಅಪಹರಿಸಿದ್ದನು ; ಆಗ ಕೃಷ್ಣನು ನರಕಾಸುರನನ್ನು ಗೆದ್ದು ಈ ಕರ್ಣಕುಂಡಲಗಳನ್ನು ಅದಿತಿಗೆ ಮರಳಿ ತಂದುಕೊಟ್ಟನು — ಎಂದು ಮಹಾಭಾರತದ ಉದ್ಯೋಗಪರ್ವ ಹೇಳುತ್ತದೆ.

ಇವಳು ಓರ್ವ ವೈದಿಕ ದೇವತೆಯಾಗಿದ್ದು ಹನ್ನೆರಡು ಆದಿತ್ಯರ ಮಾತೆಯಾಗಿದ್ದಾಳೆ. ಋಗ್ವೇದದಲ್ಲಿ ಇವಳನ್ನು ವಿಶ್ವಮಾತೆ ಎಂದು ಸಂಬೋಧಿಸಿದ್ದಾರೆ. ಇವಳು ಆದಿತ್ಯರ ಮಾತೆಯಾಗಿದ್ದರಿಂದ ಇವಳ ತೇಜಸ್ಸನ್ನು ಗೌರವಿಸಿದ್ದಾರೆ.

## ೬. ಅನರಣ್ಯ

ಅನರಣ್ಯನು ಇಕ್ಷ್ವಾಕುಕುಲದ ಒಬ್ಬ ರಾಜ. ಈತನು ಬಾಣನೆಂಬಾತನ ಮಗನಾಗಿದ್ದು, ಇವನು ಪೃಥುವಿನ ಪಿತನಾಗಿದ್ದನು — ಎಂದು ವಾಲ್ಮೀಕಿಯು ಬಾಲಕಾಂಡ ೭೦/೭೨-೭೪ ಸರ್ಗಗಳಲ್ಲಿ ಹೇಳಿದ್ದಾನೆ. ಅನರಣ್ಯನು ತ್ರಸದಸ್ಯುವಿನ ಮಗನೆಂದು ಭಾಗವತದಲ್ಲಿದೆ ; ಈತನು ಸಂಭೂತನ ಮಗನೆಂದು ಕೆಲವು ಪುರಾಣಗಳ ಮತವಿದೆ. ಈತನು ಅಯೋಧ್ಯೆಯನ್ನು ಆಳುತ್ತಿದ್ದಾಗ ರಾವಣನು ಯುದ್ಧಮಾಡಿ ಈತನ ಸೈನ್ಯವನ್ನೆಲ್ಲ ಸಂಹರಿಸಿದನು. ಹಾಗೆ ನೋಡಿದರೆ ಅನರಣ್ಯನು ವೀರನೂ ಪರಾಕ್ರಮಿಯೂ ಆಗಿದ್ದನು ; ಏಕೆಂದರೆ, ಈತನು ಮಾರೀಚ, ಸಾರಣ, ಶುಕ, ಪ್ರಹಸ್ತ ಮುಂತಾದ ರಾವಣನ ಅಮಾತ್ಯರನ್ನು ಪರಾಜಯಗೊಳಿಸಿದ್ದನು. ಹೀಗಿದ್ದರೂ ರಾವಣನು ತನ್ನ ಅಂಗೈಯಿಂದ ಅನರಣ್ಯನ ತಲೆಗೆ ಕೊಟ್ಟ ಒಂದೇ ಏಟಿಗೆ ಈತನು ರಥದಿಂದ ಭೂಮಿಯತ್ತ ಉರುಳಿ ಬಿದ್ದನು. ಅನರಣ್ಯನು ಮುಮೂರ್ಷು ಅವಸ್ಥೆಯಲ್ಲಿರುವಾಗ ರಾವಣನಿಗೆ ಶಾಪವನ್ನು ಕೊಟ್ಟನು.

ಈತನು ಯುದ್ಧವನ್ನು ತ್ಯಜಿಸಿ ತಪಸ್ಸಿಗೆ ತೊಡಗಿದಾಗ ರಾವಣನು ಇವನನ್ನು ವಧಿಸಿದನು. ಮರಣಪೂರ್ವದಲ್ಲಿ ಅನರಣ್ಯನು ಶಾಪವನ್ನು ಕೊಟ್ಟನೆಂದು ಕೂಡ ಒಂದು ಉಲ್ಲೇಖವಿದೆ. ವಾಲ್ಮೀಕಿರಾಮಾಯಣದಲ್ಲಿ ಮಾತ್ರ ಇದಕ್ಕೆ ಆಧಾರ ದೊರೆಯುತ್ತಿಲ್ಲ. ಇದಕ್ಕೆ ಪ್ರತಿಯಾಗಿ "ಎಲೈ ರಾಕ್ಷಸನೇ, ನಾನು ಎಂದಿಗೂ ಯುದ್ಧವನ್ನು ಬಿಟ್ಟು ಓಡಿಹೋಗಿಲ್ಲ . ನಾನು ಯುದ್ಧಮಾಡುತ್ತಿರುವಾಗಲೇ ನೀನು ನನ್ನನ್ನು ವಧಿಸಿರುವೆ" ಎಂಬ ಉಲ್ಲೇಖವಿದೆ (ಉತ್ತರಕಾಂಡ ೧೯ / ೨೮)

## ೭. ಅನಸೂಯಾ

ಇವಳು ಕರ್ದಮ ಹಾಗೂ ದೇವಹೂತಿ ದಂಪತಿಗಳ ಕನ್ಯೆಯಾಗಿದ್ದು ಸ್ವಾಯಂಭುವ ಮತ್ತು ವೈವಸ್ವತ ಮನ್ವಂತರದ ಬ್ರಹ್ಮಮಾನಸಪುತ್ರನಾದ ಅತ್ರಿಮುನಿಯ ಭಾರ್ಯೆಯಾಗಿದ್ದಳು. ಪೌರಾಣಿಕ ವಾಙ್ಮಯದಲ್ಲಿ ಇವಳನ್ನು 'ಪತಿವ್ರತೆ' ಎಂದು ಉಲ್ಲೇಖಿಸಲಾಗಿದೆ. ಮೂರುನೂರು ವರ್ಷಗಳ ಕಾಲ ಯಾವ ಆಹಾರವನ್ನೂ ಸೇವಿಸದೆ ತಪಸ್ಸನ್ನಾಚರಿಸಿ ಶಂಕರನ ಕೃಪಾಪ್ರಸಾದವನ್ನು ಪಡೆದಳು. ಆದರಿಂದಾಗಿ ಇವಳಿಗೆ ದತ್ತಾತ್ರೇಯ, ದುರ್ವಾಸ ಹಾಗೂ ಚಂದ್ರ ಎಂಬ ಮೂರು ಮಕ್ಕಳು ಹುಟ್ಟಿದರು. ಇವಳು ಗಂಗೆಯನ್ನು ಚಿತ್ರಕೂಟದ ಮೇಲೆ ಹರಿಯಲು ಪ್ರವೃತ್ತಗೊಳಿಸಿದಳು. ಕತ್ತಲೆಯಲ್ಲಿ ಮಾಂಡವ್ಯ ಋಷಿಯನ್ನು ಶೂಲಕ್ಕೇರಿಸಿದ ಸಮಯದಲ್ಲಿ, ಓರ್ವ ಋಷಿಪತ್ನಿಯ ಧಕ್ಕೆ ಆ ಶೂಲಕ್ಕೆ ತಗಲಿತು. ಆಗ ಮಾಂಡವ್ಯನು ಆ ಋಷಿಪತ್ನಿಗೆ 'ಸೂರ್ಯೋದಯವಾಗುತ್ತಲೇ ನೀನು ವಿಧವೆಯಾಗುವೆ' ಎಂಬ ಶಾಪವನ್ನಿತ್ತನು. ಅನಸೂಯೆಯು ಆ ಋಷಿಪತ್ನಿಯ ಗೆಳತಿಯಾದ್ದರಿಂದ ಸೂರ್ಯೋದಯವಾಗದಂತೆ ಮಾಡಿದಳು. ಹೀಗಾದ್ದರಿಂದ ಲೋಕದ ವ್ಯವಹಾರಗಳು ನಿಂತುಹೋದವು. ಆ ಋಷಿಪತ್ನಿಯ ವೈಧವ್ಯದ ಶಾಪನಿವಾರಣೆಯಾದನಂತರವೇ ಅನಸೂಯೆಯು ಸೂರ್ಯೋದಯವಾಗಲು ಅವಕಾಶ ಕೊಟ್ಟಳು. ಅನಸೂಯೆಯು ದಕ್ಷಕನ್ಯೆಯಾಗಿದ್ದಳು ಎಂಬೊಂದು ಉಲ್ಲೇಖವೂ ಇದೆ.

ಅನಸೂಯೆಯ ಪತಿಯಾದ ಅತ್ರಿಮುನಿಯು ಇವಳ ಬಗ್ಗೆ ಗೌರವದಿಂದ ಉದ್ಗರಿಸಿದ್ದಾನೆ. ಅವನು ಶ್ರೀರಾಮನಿಗೆ "ಹೇ ಶ್ರೀರಾಮನೇ, ಹತ್ತು ವರ್ಷಗಳ ಕಾಲ ಮಳೆಯಾಗದೆ ಜನರು ಸತತವಾಗಿ ಪರಿತಪಿಸುತ್ತಿದ್ದಾಗ ಈ ಅನಸೂಯೆಯು ಫಲಮೂಲಗಳನ್ನು ನಿರ್ಮಿಸಿದಳು ; ಈ ಆಶ್ರಮದತ್ತ ಗಂಗೆಯನ್ನು ತರಿಸಿದಳು. ಇವಳು ಕಠೋರ ತಪವನ್ನು ಆಚರಿಸುವವಳಾಗಿದ್ದ ಕೆಲವು ಕಟ್ಟುನಿಯಮಗಳಿಂದ ಭೂಷಿತಳಾಗಿದ್ದಾಳೆ. ಇವಳು ಹತ್ತು ಸಾವಿರ ವರ್ಷಗಳ ಉಗ್ರತಪಸ್ಸನ್ನು ಪೂರ್ತಿಗೊಳಿಸಿದ್ದಾಳೆ. ಈ ಅನಸೂಯೆಯ ವ್ರತಗಳ ಬಲದಿಂದಾಗಿ ಋಷಿಗಳು ಮಾಡುತ್ತಿರುವ ತಪಸ್ಸಿನಲ್ಲಿ ಬರುವ ವಿಘ್ನಗಳು ಇಲ್ಲದಂತಾ.ವೆ. ದೇವಕಾರ್ಯಕ್ಕೆಂದು ಹೆಣಗುತ್ತಿದ್ದಾಗ ಹತ್ತು ರಾತ್ರಿಗಳನ್ನು ಒಂದೇ ರಾತ್ರಿಯನ್ನಾಗಿ ಮಾಡಿದ ಈ ಅನಸೂಯೆಯು ನಿನಗೆ ಮಾತೆಯ ಸಮಾನಳಾಗಿದ್ದಾಳೆ" ಎಂದು ಹೇಳಿದನು.

ಇವಳ ಸತೀತ್ವದ ಬಗ್ಗೆ ಮತ್ಸರವನ್ನು ಹೊಂದಿ, ಉಮಾ, [illegible] ಮತ್ತು ಸಾವಿತ್ರಿಯರು ತಮ್ಮ ಪತಿಯರನ್ನು ಅನಸೂಯೆಯ ಪಾತಿವ್ರತ್ಯವನ್ನು ಕಳೆಯಲು ಕಳುಹಿದರು. ಬ್ರಹ್ಮ, ವಿಷ್ಣು, ಮಹೇಶ — ಈ ಮೂವರು ಅನಸೂಯೆಯತ್ತ ಬಂದು "ನೀನು ನಗ್ನಳಾಗಿ ನಮಗೆ ಭಿಕ್ಷೆ ನೀಡು !" ಎಂದು ಬೇಡಿದರು. ಆಗ ಅನಸೂಯೆಯು ತನ್ನ ಪತಿಯ ಚರಣತೀರ್ಥವನ್ನು ಇವರ ಮೇಲೆ ಸಿಂಪಡಿಸಿದಳು. ಕೂಡಲೇ ಈ ಮೂವರೂ ಅರ್ಭಕರಾದರು. ಆಗ ಅನಸೂಯೆಯು ನಗ್ನಳಾಗಿ ಈ ಮೂವರಿಗೂ ಮೊಲೆಯುಣಿಸಿದಳು. ಈ ತ್ರಿಮೂರ್ತಿಗಳು ನಂತರ ಅಂಶರೂಪವಾಗಿ ದತ್ತಾತ್ರೇಯ, ದುರ್ವಾಸ ಮತ್ತು ಚಂದ್ರ ಎಂಬ ಮೂರು ಪುತ್ರರಾದ ಮಾಹಿತಿ ಕೂಡ ಇದೆ.

## ೮. ಅಂಬರೀಷ

ತ್ರಿಶಂಕುವಿನ ಇಬ್ಬರು ಮಕ್ಕಳಲ್ಲಿ ಅಂಬರೀಷನು ಚಿಕ್ಕವನು. ಈತನಿಗೆ ಶ್ರೀಮತಿ ಎಂಬ ಓರ್ವ ಕನ್ಯೆಯಿದ್ದಳು. 'ನಾರದ ಮತ್ತು ಪರ್ವತ ಇವರ ವಾದವಿವಾದದಲ್ಲಿ, ವಿಷ್ಣುವು ಈ ಕನ್ಯೆಯನ್ನು ಪಡೆದುಕೊಂಡನು'—ಎಂಬ ಉಲ್ಲೇಖವು ಅದ್ಭುತರಾಮಾಯಣದಲ್ಲಿದೆ. ಒಮ್ಮೆ ಕಾರ್ತೀಕಮಾಸದ ಏಕಾದಶಿಯ ವ್ರತವಿದ್ದಾಗ ದ್ವಾದಶಿಯ ದಿನದಂದು ದುರ್ವಾಸಋಷಿಯು ಅತಿಥಿಯೊಂದು ಬಂದನು. ದುರ್ವಾಸನು ನದಿಗೆ ಸ್ನಾನಕ್ಕೆಂದು ಹೋಗಿ ಪ್ರಾತಃಕರ್ಮಗಳನ್ನು ಪೂರೈಸಿ ಮರಳಿ ಬರ[illegible]ರೆಗೆ ದ್ವಾದಶಿಯ ಸಮಯವು ಮೀರಿಹೋಗುತ್ತದೆ ಎಂದು ತಿಳಿದು ಅಂಬರೀಷನು ನೈವೇದ್ಯವನ್ನು ಮಾಡಿ ತೀರ್ಥಪ್ರಾಶನ ಮಾಡಿ ಪಾರಣೆಯನ್ನು ಪೂರೈಸಿದನು. ಇದನ್ನರಿತ ದುರ್ವಾಸನು ಕೋಪಗೊಂಡು ತನ್ನ ಜಟೆಯಿಂದ 'ಕೃತ್ಯೆ'ಯನ್ನು

ನಿರ್ಮಿಸಿ ಅಂಬರೀಷನ ಮೇಲೆ ಬಿಟ್ಟನು. ವಿಷ್ಣುವು ಸುದರ್ಶನ ಚಕ್ರದಿಂದ ಆ ಕೃತ್ಯೆಯನ್ನು ನಾಶಗೊಳಿಸಿದ ನಂತರ ಆ ಚಕ್ರವು ದುರ್ವಾಸನ ಬೆನ್ನುಹತ್ತಿತು. ವಿಷ್ಣುವು ದುರ್ವಾಸನಿಗೆ ಸಂರಕ್ಷಣೆಯನ್ನು ನಿರಾಕರಿಸಿ, ಆತನಿಗೆ ಅಂಬರೀಷನ ಬಳಿ ಹೋಗಲು ಹೇಳಿದನು. ದುರ್ವಾಸನಿಗೆ ಅಂಬರೀಷನ ಬಳಿ ಬರಲು ಒಂದು ವರ್ಷದ ಸಮಯ ಹಿಡಿಯಿತು. ಅವರೆಗೆ ಅಂಬರೀಷನು ಉಪವಾಸವಿದ್ದನು. ಆತನು ದುರ್ವಾಸನನ್ನು ಸ್ವಾಗತಿಸಿ, ಆ ಚಕ್ರವನ್ನು ಸ್ತುತಿಯಿಂದ ಪ್ರಾರ್ಥಿಸಿದನಂತರ ಅದು ಮರಳಿ ವಿಷ್ಣುವಿನತ್ತ ಹೋಯಿತು. ಅಂಬರೀಷನು ಋಷಿಗೆ ಉತ್ತಮ ಭೋಜನವನ್ನು ಕೊಟ್ಟನೆಂದು ಭಾಗವತದಲ್ಲಿದೆ. ಅಂಬರೀಷನು 'ಪಕ್ಷವರ್ಧಿನಿ' ಏಕಾದಶಿಯ ವ್ರತವನ್ನು ಕೈಕೊಂಡಿದ್ದನು ; ಹಾಗೂ ಯೋಗ್ಯ ಸಮಯಕ್ಕೆ ದ್ವಾದಶಿಯನ್ನು ಪೂರೈಸಿದ್ದರಿಂದ ವಿಷ್ಣುವಿಗೆ ಪ್ರಿಯನಾದನೆಂದು ಪದ್ಮಪುರಾಣದಲ್ಲಿದೆ. ಅಂಬರೀಷನು ಸ್ವರ್ಗವನ್ನು ಸೇರಿದಾಗ ಅಲ್ಲಿ ಸುದೇವನೆಂಬ ಸೇನಾಪತಿಯನ್ನು ಕಂಡನು. ರಣಾಂಗಣದಲ್ಲಿ ವೀರಮರಣವನ್ನು ಹೊಂದಿದ್ದರಿಂದ ಆತನಿಗೆ ಸ್ವರ್ಗವು ದೊರಕಿದೆ ಎಂದು ಇಂದ್ರನು ತಿಳಿಸಿದನು. ಅಂಬರೀಷನಿಗೆ ಮೂವರು ಪುತ್ರರಿದ್ದರು.

ನೋಡಿ : ಋಚೀಕ, ಪುಟ - ೩೦೪.

## ೯. ಅರಜಾ

ಅರಜಾ ಉಶನಸ ಶುಕ್ರನ ಪುತ್ರಿ. ಇವಳ ಲಾವಣ್ಯಕ್ಕೆ ಮನಸೋತು ಕಾಮಮೋಹಿತನಾಗಿ ದಂಡರಾಜನು ಇವಳನ್ನು ಬಲಾತ್ಕರಿಸಿ ಸಂಭೋಗಿಸಿದನು. ಈ ಸಂಗತಿಯು ಭಾರ್ಗವನಿಗೆ ತಿಳಿದಾಗ ಆತನು ದಂಡರಾಜ ಮತ್ತು ದಂಡಕಾರಣ್ಯ ಇವರಿಗೆ ಶಾಪವನ್ನು ಕೊಟ್ಟು ತನ್ನ ಕನ್ಯೆಯನ್ನು ಕುರಿತು, "ನೀನು ಜಾಗರೂಕಳಾಗಿ ಇದೇ ಆಶ್ರಮದಲ್ಲಿರು ! ನೀನು ಭಯರಹಿತಳಾಗಿ, ಈ ಉದ್ದ-ಅಗಲ ಒಂದು ಯೋಜನವಿರುವ ವಿಶಾಲ ಸರೋವರವನ್ನು ಉಪಭೋಗಿಸಿಕೊಂಡಿರು ! ನೀನು ಇಲ್ಲಿ ಸಮಯಪ್ರತೀಕ್ಷೆಯಲ್ಲಿರು ! ಒಂದು ರಾತ್ರಿಯಲ್ಲಿ ಈ ಪ್ರದೇಶದಲ್ಲಿ ಧೂಳಿವೃಷ್ಟಿಯಾಗುವದಿದೆ. ಆ ರಾತ್ರಿಯಲ್ಲಿ ನಿನ್ನ ನಿಕಟದಲ್ಲಿರುವವರ ವಧೆಯು ಆ ಧೂಳಿವೃಷ್ಟಿಯಿಂದ ಆಗಲಾರದು !" ಎಂದು ತಿಳಿಸಿ ಅವಳನ್ನು ಅಲ್ಲಿಯೇ ಬಿಟ್ಟು ಬೇರೆಡೆಗೆ ಹೋದನು. ಶುಕ್ರಭಾರ್ಗವನ ಈ ಆಜ್ಞೆಯನ್ನು ಕೇಳಿ ಅರಜಾ ಬಲುದುಃಖಿತಳಾದಳು.

## ೧೦. ಅಲರ್ಕ

ಅಲರ್ಕನು ಕಾಶಿಯ ದಿವೋದಾಸ ರಾಜನ ಮರಿಮಗನಾಗಿದ್ದನು. ಈತನು ಕಾಶಿಯಲ್ಲಿ ಅರವತ್ತಾರು ಸಾವಿರ ವರ್ಷಗಳ ಕಾಲ ರಾಜ್ಯವನ್ನಾಳಿದನು. ಲೋಪಾಮುದ್ರೆಯ ಕೃಪೆಯಿಂದ ಈತನಿಗೆ ದೀರ್ಘಾಯುಸ್ಸು ದೊರಕಿತ್ತು. ಇವನು ಚಿರತರುಣನಾಗಿದ್ದನು. ನಿಕುಂಭನ ಶಾಪದಿಂದ ವಾರಣಾಸಿಯು ಜನರಹಿತವಾಗಿತ್ತು. ಅಲರ್ಕನು ಕ್ಷೇಮಕನನ್ನು ಕೊಂದು ಪುನಃ ಇದನ್ನು ಸ್ಥಾಪಿಸಿದನು ; ಧನುರ್ವಿದ್ಯೆಯ ಬಲದಿಂದ ಸಮಗ್ರ ಭೂಲೋಕವನ್ನು ಗೆದ್ದುಕೊಂಡನು. ಅನಂತರ ಅಲರ್ಕನ ಮನಸ್ಸು ಸೂಕ್ಷ್ಮಬ್ರಹ್ಮದತ್ತ ಒಲಿಯಿತು. ಈತನಿಗೆ 'ಸಂತತಿ' ಎಂಬ ಒಬ್ಬ ಪುತ್ರನಿದ್ದನು. ತಾಯಿಯ ಇಚ್ಛೆಯನುಸಾರ ಈತನು ರಾಜ್ಯವನ್ನು ತ್ಯಜಿಸಿದನು, ಇತ್ಯಾದಿ ಮಾಹಿತಿಗಳು ಬೇರೆಬೇರೆ ಗ್ರಂಥಗಳಿಂದ ತಿಳಿದುಬರುತ್ತವೆ.

## ೧೧. ಅಸಮಂಜ

ಅಸಮಂಜನು ಸಗರ-ಕೇಶಿನಿ ದಂಪತಿಗಳ ಪುತ್ರ. ಈತನು ತನ್ನ ಮಲತಾಯಿಯ ಮಕ್ಕಳನ್ನು ಸರಯೂ ನದಿಯ ನೀರಿನಲ್ಲಿ ತಳ್ಳುತ್ತಿದ್ದನು, ಮತ್ತು ಅವರು ಮುಳುಗಹತ್ತಿದಾಗ ನಗುತ್ತಿದ್ದನು. ಈತನು ಪೂರ್ವಜನ್ಮದಲ್ಲಿ ಯೋಗಿಯಾಗಿದ್ದು ಆಗಿನ ದುಷ್ಟಜನರ ಸಂಪರ್ಕದಿಂದ ಯೋಗಭ್ರಷ್ಟನಾಗಿದ್ದನು. ರಾಜನು ಈತನನ್ನು ಹೊರಗೆ ಅಟ್ಟಿದಾಗ ಇವನು ಕಾಡಿಗೆ ಹೋದನು. ಹೀಗೆ ವನಕ್ಕೆ ಹೋಗುವಾಗ ಈತನು, ತಾನು ನೀರಿನಲ್ಲಿ ಮುಳುಗಿಸಿದ ಎಲ್ಲರನ್ನೂ ಯೋಗಬಲದಿಂದ ಜೀವಿತಗೊಳಿಸಿದನು. ಈತನು ಶಿವಭಕ್ತನಾಗಿದ್ದನು. ಈತನಿಗೆ 'ಅಂಶುಮಾನ' ಎಂಬ ಮಗನಿದ್ದನು.

## ೧೨. ಅಹಲ್ಯೆ

ಇವಳು ಬ್ರಹ್ಮದೇವನ ಮಾನಸಪುತ್ರಿಯಾಗಿದ್ದಳು. ಈಕೆಯ ತಂದೆಯ ಹೆಸರು ಭಾಗವತದಲ್ಲಿ 'ಮದ್ಗಲ' ಎಂದಿದ್ದರೆ ಹರಿವಂಶದಲ್ಲಿ 'ವಧ್ರ್ಯಶ್ವ' ಎಂದಿದೆ. ಇವಳಲ್ಲಿ ರೂಪಹೀನತೆಯ (ಹಲ್ಯ) ಲವಲೇಶವೂ ಇರಲಿಲ್ಲವಾದ್ದರಿಂದ ಬ್ರಹ್ಮದೇವನು ಇವಳನ್ನು 'ಅಹಲ್ಯೆ' ಎಂದು ಕರೆದನು. ಇವಳು ಅತಿರೂಪವತಿಯಾಗಿದ್ದಳು. ಚಿಕ್ಕವಳಿದ್ದಾಗ ಬ್ರಹ್ಮದೇವನು ಈಕೆಯನ್ನು ಗೌತಮನ ಬಳಿ ಮುಡುವಾಗಿ ಇಟ್ಟಿದ್ದನು. ಪ್ರಾಯಕ್ಕೆ ಬಂದನಂತರ ಗೌತಮನು ಇವಳನ್ನು ಬ್ರಹ್ಮದೇವನತ್ತ ಮರಳಿ ಕಳುಹಿಸಿದನು. ಗೌತಮನ ಜಿತೇಂದ್ರಿಯತ್ವವನ್ನೂ ಮತ್ತು ಆತನಲ್ಲಿದ್ದ ಸಿದ್ಧಿಯನ್ನೂ ಕಂಡ ಬ್ರಹ್ಮದೇವನಿಗೆ ಗೌತಮನು ಅಹಲ್ಯೆಯನ್ನು ಭಾರ್ಯೆಯಾಗಿ ಸ್ವೀಕರಿಸಬೇಕು ಎಂದೆನಿಸಿತು. ಪೃಥ್ವಿಯ ಪ್ರದಕ್ಷಿಣೆಯನ್ನು ಪೂರೈಸಿ ಮೊದಲು ಬರುವವನ ಜೊತೆ ಇವಳ ವಿವಾಹವನ್ನು ಮಾಡುವದೆಂದು ನಿರ್ಣಯಿಸಿದನು. ದೇವ, ದಾನವ, ರಾಕ್ಷಸರಿಗೂ ಸಹ ಈ ರೂಪಲಾವಣ್ಯ ಸಂಪನ್ನೆಯಾದ ಅಹಲ್ಯೆಯು ಬೇಕಿದ್ದಳು. ಮಿಕ್ಕ ದೇವತೆಗಳೊಡನೆ ಇಂದ್ರನು ಕೂಡ ಪೃಥ್ವಿಯ ಪ್ರದಕ್ಷಿಣೆಯಲ್ಲಿ ತೊಡಗಿದನು. ಕರುವನ್ನು ಈಯುತ್ತಿರುವ ಹಸು, ಅರ್ಧಪ್ರಸೂತಿಯ ವೇಳೆಗೆ, ಪೃಥ್ವಿಗೆ ಸಮವಿರುತ್ತದೆ ಎಂದು ಮನ್ನಣೆ ಇದ್ದುದರಿಂದ ಗೌತಮನು ಅಂಥ ಹಸುವಿಗೆ ಪ್ರದಕ್ಷಿಣೆಮಾಡಿ ಬ್ರಹ್ಮದೇವನ ಷರತ್ತನ್ನು ಪೂರ್ತಿಗೊಳಿಸಿದನು. ಗೌತಮನು ಅಹಲ್ಯೆಯೊಡನೆ ವಿವಾಹಬದ್ಧನಾದನು. ಗೌತಮ-ಅಹಲ್ಯೆಯರ ವಿವಾಹದ ವಿಷಯವು ಪೃಥ್ವಿಯ ಪ್ರದಕ್ಷಿಣೆಯನ್ನು ಮಾಡಿ ಬಂದ ದೇವತೆಗಳಿಗೆ ತಿಳಿದಾಗ ಅವರೆಲ್ಲರೂ ಅತಿ ದುಃಖಿತರಾದರು. ಇಂದ್ರನು ಅಹಲ್ಯೆಯ ಬಗ್ಗೆ ತುಂಬ ಅಭಿಲಾಷೆಯನ್ನು ಇಟ್ಟುಕೊಂಡಿದ್ದರಿಂದ ಆತನು ಬಲುಖಿನ್ನನಾದನು. ಒಮ್ಮೆ ಗೌತಮನು ಮನೆಯಲ್ಲಿ ಇಲ್ಲದ್ದನ್ನು ನೋಡಿ ಇಂದ್ರನು ಗೌತಮನ ವೇಷವನ್ನು ಧರಿಸಿ ಅಹಲ್ಯೆಯನ್ನು ಸಮೀಪಿಸಿ ಸಮಾಗಮದ ಇಚ್ಛೆಯನ್ನು ವ್ಯಕ್ತಪಡಿಸಿದನು. ವಾಲ್ಮೀಕಿರಾಮಾಯಣದ ಬಾಲಕಾಂಡದ ಪ್ರಕಾರ ಇಂದ್ರನು ಗೌತಮನ ವೇಷವನ್ನು ಧರಿಸಿಬಂದ ವಿಷಯವನ್ನು ಅಹಲ್ಯೆಯು ಅರಿತಿದ್ದರೂ, ಅವಳಿಗೆ ಕೂಡ ಇಂದ್ರನೊಡನೆ ಸುಖದ ಇಚ್ಛೆಯಿತ್ತು. ಸಮಾಗಮವಾದನಂತರ 'ನಾನು ಕೃತಾರ್ಥಳಾದೆನು ; ನೀನು ಇಲ್ಲಿಂದ ಬೇಗ ಹೊರಡು !' ಎಂದು ಇಂದ್ರನಿಗೆ ಸೂಚಿಸಿದಳು. ಗೌತಮನಿಂದ, ತನ್ನ ಹಾಗೂ ಇಂದ್ರನ ರಕ್ಷಣೆಯಾಗುವಂತೆ ಮಾಡಬೇಕೆಂದು ಇಂದ್ರನಿಗೆ ಹೇಳಿದಳು. ಇಂದ್ರನು ಅಹಲ್ಯೆಗೆ ಮೋಸಮಾಡಿದ ವಿಷಯ ಗೊತ್ತಾಗದೆ ಅವಳಿಂದ ಪ್ರಮಾದ ನಡೆಯಿತೆಂದು ಉತ್ತರಕಾಂಡದಲ್ಲಿ ಹೇಳಲಾಗಿದೆ. ಇಂದ್ರನು ಅಹಲ್ಯೆಯ ಬಳಿ ಮೇಲಿಂದಮೇಲೆ ಬರುತ್ತಿದ್ದನೆಂದು ಬ್ರಹ್ಮಪುರಾಣದಲ್ಲಿದೆ. ಗೌತಮನು ಇಲ್ಲದಾಗ ಇಂದ್ರನು ಬರುತ್ತಿದ್ದ ಸಂಗತಿಯನ್ನು ಗೌತಮನ ಶಿಷ್ಯರು ಆತನಿಗೆ ತಿಳಿಸಿದರು. ಆಗ ಗೌತಮನು ಇಂದ್ರ ಮತ್ತು ಅಹಲ್ಯೆ ಇಬ್ಬರನ್ನೂ ಶಪಿಸಿದನು. ಅಹಲ್ಯೆಗೆ ದೊರೆತ ಶಾಪದ ಸ್ವರೂಪವು ಬೇರೆಬೇರೆ ಗ್ರಂಥಗಳಲ್ಲಿ ಬೇರೆಬೇರೆಯಾಗಿದೆ. 'ನೀನು ಯಾರ ದೃಷ್ಟಿಗೂ ಬೀಳಲಾರೆ ! ಕೇವಲ ವಾಯುವನ್ನು ಸೇವಿಸಿ ಬಾಳುವೆ ! ನೀನು ರೂಪಹೀನಳಾಗುವೆ !' ಎಂಬ ಶಾಪವು ವಾಲ್ಮೀಕಿರಾಮಾಯಣದಲ್ಲಿದೆ. ಆನಂದರಾಮಾಯಣ, ಸ್ಕಂದ ಪುರಾಣ ಹಾಗೂ ಗಣೇಶಪುರಾಣಗಳನುಸಾರ 'ನೀನು ಶಿಲೆಯಾಗುವೆ' ಎಂಬ ಶಾಪದ ಉಲ್ಲೇಖವಿದೆ. 'ನಿನ್ನ ದೇಹವು ಕೇವಲ ಅಸ್ಥಿಚರ್ಮವುಳ್ಳದ್ದಾಗುವುದು ; ಜೀವಿತ ಪ್ರಾಣಿಗಳಲ್ಲಿ ಮಾಂಸ, ಉಗುರುಗಳು ಬೆಳೆಯುವಂತೆ ನಿನ್ನಲ್ಲಿ ಬೆಳೆಯಲಾರವು; ನಿನ್ನ ಈ ವಿದ್ರೂಪತೆಯಿಂದ ಸ್ತ್ರೀಯರಿಗೆ ಪಾಪಕರ್ಮದ ಬಗ್ಗೆ ಭಯವುಂಟಾಗುವುದು' ಎಂಬ ಶಾಪದ ವಿವರವನ್ನು ಪದ್ಮಪುರಾಣದಲ್ಲಿ ಬಣ್ಣಿಸಿದ್ದಾರೆ. ಇದೇ ಉಃಶಾಪಗಳಲ್ಲಿಯೂ ಭಿನ್ನತೆಯು ಕಂಡುಬರುತ್ತದೆ. 'ದಶರಥಪುತ್ರನಾದ ದುರ್ಧರ್ಷ ಶ್ರೀರಾಮನು ಈ ಘೋರ ಅರಣ್ಯಕ್ಕೆ ಬಂದಾಗ ಲೋಭ ಮೋಹರಹಿತಳಾದ ನೀನು ಆತನನ್ನು ಸತ್ಕರಿಸುವುದರಿಂದ ಶುದ್ಧಳಾಗುವೆ ; ಅನಂತರ ಶುದ್ಧಿಗೊಂಡ ನೀನು ನಿನ್ನ ನಿಜರೂಪ ಪಡೆದು ನನ್ನನ್ನು ಸಮೀಪಿಸುವೆ' ಎಂದು ವಾಲ್ಮೀಕಿಯು ಹೇಳಿದ್ದಾನೆ. ಸ್ಕಂದಪುರಾಣದಲ್ಲಿ 'ಗೌತಮನು ಇವಳ ಮುಕ್ತಿಗಾಗಿ ಕೋಟಿತೀರ್ಥದಲ್ಲಿ ತಪಸ್ಸನ್ನಾಚರಿಸಿದನು ; ಆಗ ಅಹಲ್ಯೆಯು ಮುಕ್ತಳಾದಳು; ಅಲ್ಲಿ ಅಹಲ್ಯಾಸರೋವರವು ನಿರ್ಮಾಣವಾಯಿತು' ಎಂಬ ಉಲ್ಲೇಖವಿದೆ.

ತಪಸ್ಸಿನಿಂದ ಪರಿಶುದ್ಧಳಾದನಂತರ ಗೌತಮನೊಡನೆ ಇವಳ ಪುನರ್ಮಿಲನವಾಯಿತು. ಬ್ರಹ್ಮಪುರಾಣದಲ್ಲಿ ಅಹಲ್ಯೆಯನ್ನು 'ಗೌತಮಿ' ಎಂದು ಉಲ್ಲೇಖಿಸಲಾಗಿದೆ. ಇಂದ್ರನೊಡನೆ ಸಂಬಂಧ ಬರುವ ಮೊದಲೇ ಈಕೆಗೆ

ಗೌತಮನಿಂದ 'ಶತಾನಂದ' ಎಂಬ ಮಗನು ಹುಟ್ಟಿದ್ದನು. ಅಹಲ್ಯೆಯು ಗೌತಮನ ಶಿಷ್ಯನಾದ ಉತ್ತಂಕನಿಗೆ ಸೌದಾಸನ ರಾಣಿಯ ಕರ್ಣಕುಂಡಲಗಳನ್ನು ತಂದು ತನಗೆ ಗುರುದಕ್ಷಿಣೆಯಾಗಿ ಕೊಡಲು ಹೇಳಿದ್ದಳು.

## ೧೩. ಆದಿತ್ಯ (ಸೂರ್ಯ)

ಇದು ವೈವಸ್ವತ ಮನ್ವಂತರದ ದೇವತೆಗಳ ಸಮೂಹದ ಹೆಸರು. ಋಗ್ವೇದದಲ್ಲಿ ಇದರ ಬಗ್ಗೆ ಆರು ಸೂಕ್ತಗಳಿವೆ. ಆದಿತ್ಯರ ಸಂಖ್ಯೆ ಹನ್ನೆರಡು ಇದ್ದು ಅವು ಹನ್ನೆರಡು ಮಾಸಗಳನ್ನು ದರ್ಶಿಸುತ್ತವೆ. ಇಂದ್ರನು ಅದಿತಿಯ ಮಗನಾಗಿದ್ದರಿಂದ ಆತನು ಆದಿತ್ಯರಲ್ಲಿ ಒಬ್ಬನಾಗಿದ್ದಾನೆ. ಹೀಗಿದ್ದರೂ ಹನ್ನೆರಡು ಆದಿತ್ಯರನ್ನು ಹೊರತುಪಡಿಸಿದ್ದಾನೆ. ಆದಿತ್ಯರ ವರ್ಣನೆಯು, ಇನ್ನಿತರ ದೇವತೆಗಳ ಸಾಮಾನ್ಯವರ್ಣನೆಯಂತಿದ್ದರೂ ಅವರಲ್ಲಿ ಪ್ರಮುಖರಾದ ಮಿತ್ರವರುಣರಿಗಿಂತ ಭಿನ್ನವಾಗಿದೆ ; ಸರ್ವಾಧಾರ, ಸರ್ವಪಾಲಕ, ಮನದ ಅಂತರಂಗದ ವಿಚಾರಗಳನ್ನು ಅರಿತುಕೊಳ್ಳುವ, ಪಾಪಿ ಜನರನ್ನು ಶಿಕ್ಷಿಸುವ, ರೋಗಗಳನ್ನು ಇಲ್ಲದಂತೆ ಮಾಡುವ, ದೀರ್ಘಾಯುಸ್ಸನ್ನು ದಯಪಾಲಿಸುವ, ಎಂಬ ವರ್ಣನೆಯು ಕಂಡುಬರುತ್ತದೆ. ಅದಿತಿಯು ತನ್ನ ಉದರದಿಂದ ಸಾಧ್ಯದೇವತೆಗಳು ಹುಟ್ಟಬೇಕೆಂದು ಬ್ರಹ್ಮನನ್ನು ಉದ್ದೇಶಿಸಿ ಓದನವನ್ನು (ಅನ್ನ) ಬೇಯಿಸಿ ದಳು. ಆಹುತಿಯನ್ನು ಕೊಟ್ಟು ಮಿಕ್ಕ ಅನ್ನವನ್ನು ತಿಂದ ಕಾರಣ ಅದಿತಿಗೆ ಧಾತಾ ಮತ್ತು ಆರ್ಯಮಾ ಎಂಬ ಇಬ್ಬರು ಅವಳಿಜವಳಿ ಮಕ್ಕಳಾದರು. ಎರಡನೆಯ ಬಾರಿಗೆ ಮಿತ್ರ ಹಾಗೂ ವರುಣ, ಮೂರನೆಯ ಸಲ ಅಂಶ ಹಾಗೂ ಭಗ ಮತ್ತು ನಾಲ್ಕನೆಯ ವೇಳೆಗೆ ಇಂದ್ರ ಹಾಗೂ ವಿವಸ್ವಾನ ಎಂಬ ಮಕ್ಕಳು ಹುಟ್ಟಿದರು. ಅದಿತಿಯ ಹನ್ನೆರಡು ಗಂಡುಮಕ್ಕಳೆಂದರೆ ದ್ವಾದಶಾದಿತ್ಯರು ಅಥವಾ 'ಸಾಧ್ಯ'-ಎಂಬ ದೇವತೆಗಳಾಗಿದ್ದಾರೆ.

## ೧೪. ಇಂದ್ರ

'ಇಂದ್ರ' ಒಂದು ಪದವಿಯಾಗಿದೆ. ನೂರು ಯಜ್ಞಗಳನ್ನು ಮಾಡಿ ಇದನ್ನು ಸಂಪಾದಿಸಬಹುದು. ಪ್ರಜೆಗಳ ಸಂರಕ್ಷಣೆ ಆತನ ಪ್ರಮುಖ ಕಾರ್ಯವಾಗಿರುತ್ತದೆ. ಬೇರೆಬೇರೆ ಮನ್ವಂತರಗಳಲ್ಲಿ ಬೇರೆಬೇರೆ ಇಂದ್ರರಿದ್ದರೂ ಅವರ ಗುಣಗಳು ಮತ್ತು ಕಾರ್ಯಗಳು ಒಂದೇ ಆಗಿರುತ್ತದೆ. ಸಪ್ತರ್ಷಿಗಳು ಇಂದ್ರನ ಸಲಹೆಗಾರರು. ಗಂಧರ್ವ, ಅಪ್ಸರೆಯರು ಎಂದರೆ ಇಂದ್ರನ ಐಶ್ವರ್ಯ. ಇಂದ್ರರಾದವರು ವಜ್ರಪಾಣಿ, ಸಹಸ್ರಾಕ್ಷ, ಪುರಂದರ ಹಾಗೂ ಮಘವಾನ ಆಗಿರುತ್ತಾರೆ. ನಹುಷ, ಹಿರಣ್ಯಕಶಿಪು, ಬಲಿ, ಪ್ರಹ್ಲಾದ — ಇವರೆಲ್ಲರೂ ಕೆಲವು ಕಾಲ ಇಂದ್ರರಾಗಿದ್ದರು. ಇಂದ್ರನು ಮಳೆಯ ದೇವತೆಯಾಗಿದ್ದಾನೆ.

ರಾಮಾಯಣ, ಮಹಾಭಾರತ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ ಇಂದ್ರನೆಂದರೆ ಅದಿತಿಪುತ್ರನಾದ ಶಕ್ರನಾಗಿದ್ದಾನೆ. ಈತನು ದೇವತೆಗಳ ರಾಜನಿದ್ದು ಇಂದ್ರಾಣಿ ಶಚಿಯು ಆತನ ಪತ್ನಿಯಾಗಿರು ತ್ತಾಳೆ. ನೂರು ಯಜ್ಞಗಳನ್ನು ಮಾಡಿದರೆ ಇಂದ್ರಪದವು ದೊರೆಯುತ್ತಿದ್ದುದರಿಂದ ಅಷ್ಟು ಯಜ್ಞಗಳು ಪೂರ್ಣವಾಗುವ ಮೊದಲೇ ಇವನು ಅಶ್ವಮೇಧಯಾಗದ ಕುದುರೆಯನ್ನು ಅಪಹರಿಸಿ ಯಜ್ಞದಲ್ಲಿ ವಿಘ್ನವನ್ನು ಉಂಟುಮಾಡುತ್ತಿದ್ದನು. ಯಾರಾದರೂ ಉಗ್ರತಪಸ್ಸನ್ನು ಕೈಗೊಂಡಾಗ ಅವರ ತಪೋಭಂಗವನ್ನು ಮಾಡಲು ಅಪ್ಸರೆಯರನ್ನು ಕಳುಹಿಸುತ್ತಿದ್ದನು. ವಿಶ್ವಾಮಿತ್ರನ ತಪಸ್ಸನ್ನು ಕೆಡಿಸಲು ಅವನು ರಂಭೆಯನ್ನು ಕಳುಹಿಸಿದ್ದನು. ಯಮನ ತಪವನ್ನು ಹಾಳುಮಾಡಲು 'ಗಣಿಕಾ' ಎಂಬ ಅಪ್ಸರೆಯನ್ನು ನೇಮಿಸಿದನು, ಗೌತಮ ಋಷಿಯ ವೇಷದಲ್ಲಿ ಬಂದು ಅಹಲ್ಯೆಯನ್ನು ಸಂಭೋಗಿಸಿದನು. ಆಗ ಗೌತಮನ ಶಾಪದಿಂದ ವೃಷಣಹೀನನಾದನು. ಗೌತಮನ ತಪಸ್ಸನ್ನು ಹರಣಮಾಡುವದು ಒಂದು ದೇವತಾಕಾರ್ಯವೆಂದು ತಾನು ಈ ಕೃತ್ಯವನ್ನು ಮಾಡಿದ್ದರಿಂದ ತನಗೆ ವೃಷಣಗಳು ಪುನಃ ದೊರೆಯಬೇಕು ಎಂಬ ಇಚ್ಛೆಯನ್ನು ಇಂದ್ರನು ಪ್ರಕಟಿಸಿದಾಗ, ಪಿತೃದೇವತೆಗಳೆಲ್ಲರೂ ಸೇರಿ ಈತನನ್ನು 'ಮೇಷವೃಷಣ'ನನ್ನಾಗಿ ಮಾಡಿದರು. ವಾಚಕ್ನವೀಮುನಿಯ 'ಮುಕುಂದಾ' ಹೆಸರಿನ ಪತ್ನಿಯು ರುಕ್ಮಾಂಗದನಲ್ಲಿ ಮೋಹಿತಳಾಗಿದ್ದಳು. ಆಗ ಇಂದ್ರನು ರುಕ್ಮಾಂಗದನ ವೇಷವನ್ನು ತಾಳಿ ಅವಳನ್ನು ಉಪಭೋಗಿಸಿದನು. ಇಂದ್ರನು ಹಿರಣ್ಯಾಕ್ಷ ಹಾಗೂ ಹಿರಣ್ಯಕಶಿಪು ಇವರ ವಧೆಯನ್ನು ಮಾಡಿಸಿದನು. ಆಗ ದಿತಿಯು ಕಶ್ಯಪನಿಂದ ಇಂದ್ರನನ್ನು ಕೊಲ್ಲುವಂಥ ಪುತ್ರನನ್ನು

ಬೇಡಿಕೊಂಡಳು. ಆಗ ಕಶ್ಯಪನು ಒಂದು ವರತ್ತನ್ನು ದಿತಿಯ ಮುಂದಿಟ್ಟನು. ದಿತಿಯಿಂದ ಆ ವರತ್ತಿನ ಪಾಲನೆಯಾಗಲಿಲ್ಲ. ಆಗ ಇಂದ್ರನು ದಿತಿಯ ಉದರವನ್ನು ಪ್ರವೇಶಿಸಿ ಅಲ್ಲಿದ್ದ ಗರ್ಭವನ್ನು ಏಳು ಭಾಗಗಳನ್ನಾಗಿ ತುಂಡರಿಸಿದನು. ದುರ್ವಾಸಋಷಿಯು ಇಂದ್ರನಿಗೆ ಒಂದು ಕೊರಳ ಮಾಲೆಯನ್ನು ಕೊಟ್ಟಿದ್ದನು. ಅದನ್ನು ಅನಾದರಿಸಿದ ಕಾರಣ ದುರ್ವಾಸನು ಇಂದ್ರನಿಗೆ ಶಾಪವನ್ನು ಕೊಟ್ಟನು. ಇಂದ್ರನು ವಿಶ್ವಾಮಿತ್ರನ ನೆರವಿನಿಂದ ಸ್ವರ್ಗವನ್ನು ಸೇರಿದ ತ್ರಿಶಂಕುವನ್ನು ತಲೆಕೆಳಗಾಗುವಂತೆ ಮಾಡಿ ಭೂಮಿಯತ್ತ ತಳ್ಳಿದನು. ಸ್ವತಃ ಇಂದ್ರನೇ ಶರಭಂಗ ಋಷಿಯನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ಬಂದಿದ್ದನು. ಅದೇ ರೀತಿ ಶ್ರೀರಾಮ-ರಾವಣರ ಯುದ್ಧದ ಸಮಯಕ್ಕೆ ಶ್ರೀರಾಮನಿಗೆ ನೆರವಾಗಲು ತನ್ನ ರಥದೊಂದಿಗೆ ಸಾರಥಿಯಾದ ಮಾತಲಿಯನ್ನು ಸಹ ಕಳುಹಿಸಿದ್ದನು. ಕುಂಭಕರ್ಣನು ಇಂದ್ರನನ್ನು ಯುದ್ಧದಲ್ಲಿ ಪರಾಭವಗೊಳಿಸಿದ್ದನು. ಮೇಘನಾದನಂತೂ ಇಂದ್ರನನ್ನು ಗೆದ್ದು ಈತನನ್ನು ಹಿಡಿದು ಲಂಕೆಗೆ ಒಯ್ದಿದ್ದನು. ಇಂದ್ರನನ್ನು ಮುಕ್ತಗೊಳಿಸಲು ಬ್ರಹ್ಮದೇವನು ಮೇಘನಾದನಿಗೆ ಸೀಮಿತವಾದ ಅವಧ್ಯತ್ವದ ವರವನ್ನು ಕೊಟ್ಟನು ; ಅಲ್ಲದೆ, ಅಗ್ನಿಯ ಅಶ್ವಯುಕ್ತ ರಥವನ್ನೂ ಕೊಟ್ಟನು. ಬ್ರಹ್ಮದೇವನ ಹೇಳಿಕೆಯಂತೆ ಇಂದ್ರನು ಒಂದು ವೈಷ್ಣವಯಾಗವನ್ನು ಮಾಡಿದನು. ಈತನ ವಜ್ರಪ್ರಹಾರದಿಂದ ವಾಯುಪುತ್ರನ 'ಹನು' ಅಂದರೆ ಗದ್ದವು ಭಗ್ನವಾಯಿತು. ಆಗ ಆ ವಾಯುಪುತ್ರನಿಗೆ ಹನುಮಾನನೆಂಬ ಹೆಸರು ಬಂದಿತು. ವಿಷ್ಣುವಿನ ಆಜ್ಞೆಯ ಮೇರೆಗೆ ಈತನು ಅಶ್ವಮೇಧಯಾಗವನ್ನು ಮಾಡಿದನು.

ಇಂದ್ರನು ಬ್ರಹ್ಮದೇವನ ವಿನಂತಿಯನುಸಾರ ನಿದ್ರಾದೇವಿಯನ್ನು ಲಂಕೆಗೆ ಕರೆದೊಯ್ದನು. ಅಲ್ಲಿ ಸೀತೆಯನ್ನು ಭೇಟಿಯಾದಾಗ ಅವಳು ಅನ್ನಪಾನೀಯಗಳನ್ನು ಸೇವಿಸದಿದ್ದರೂ ಅವಳು ಜೀವಿತವಿರಬೇಕೆಂದು ಅವಳಿಗೆ ಹವಿಷ್ಯಾನ್ನವನ್ನು ಕೊಟ್ಟನು. ತ್ವಷ್ಟನ ಪುತ್ರನಾದ ವೃತ್ರಾಸುರನನ್ನು ಇಂದ್ರನು ವಧಿಸಿದ ಕಾರಣ ಬ್ರಹ್ಮಹತ್ಯೆಯು ಇವನನ್ನು ಬೆನ್ನಟ್ಟಿತು. ಶ್ರೀರಾಮನ ಸಹಾಯಕ್ಕಾಗಿ ಇಂದ್ರನು ಮೈನಾಕಪರ್ವತಕ್ಕೆ ವರವನ್ನು ಕೊಟ್ಟು ಅದನ್ನು ಸಮುದ್ರದಲ್ಲಿ ಮುಳುಗಿಸಿದ್ದನು. ಸಮುದ್ರವನ್ನು ದಾಟಿ ಲಂಕೆಯನ್ನು ತಲಪುವಾಗ ಹನುಮಾನನಿಗೆ ವಿಶ್ರಾಂತಿಯು ಸಿಗಬೇಕೆಂಬ ಉದ್ದೇಶ ಅವನದಿತ್ತು. ಕಬಂಧ ರಾಕ್ಷಸನು ಮೈಮೇಲೇರಿಬಂದಾಗ ಇಂದ್ರನು ವಜ್ರಾಘಾತದಿಂದ ಆತನನ್ನು ದುರವಸ್ಥೆಗೀಡುಮಾಡಿಬಿಟ್ಟನು. ಅನಂತರ ಕಬಂಧನ ಪ್ರಾರ್ಥನೆಯಂತೆ ಆತನ ಉದರನಿರ್ವಹಣೆಗಾಗಿ ಬಹುದೀರ್ಘವಾದ ಬಾಹುಗಳನ್ನು ಕರುಣಿಸಿದನು. ಇಂದ್ರನು ಶುನಃಶೇಪನ ಸ್ತುತಿಗೆ ಮಾರುಹೋಗಿ ಆತನಿಗೆ ದೀರ್ಘಾಯುಸ್ಸನ್ನು ಕೊಟ್ಟನು.

ತನ್ನ ಶರೀರದ ಮಲ ಹಾಗೂ ಹಸಿವುಗಳಿಂದ ಬಿಡುಗಡೆಹೊಂದಿ ಶುದ್ಧನಾಗಲು ಸಹಾಯಕ್ಕೆ ಬಂದ ಪ್ರದೇಶಗಳಿಗೆ ಇಂದ್ರನು 'ಮಲದ', 'ಕರುಷ' ಎಂಬ ಹೆಸರುಗಳನ್ನು ನೀಡಿ ಆ ಪ್ರದೇಶಗಳಿಗೆ ವರಗಳನ್ನು ಕೊಟ್ಟು ಅವನ್ನು ಸಮೃದ್ಧಗೊಳಿಸಿದನು. ಕಶ್ಯಪನು ಅದಿತಿಯ ಹೊಟ್ಟೆಯಲ್ಲಿ ಜನ್ಮತಾಳಲು ವಿಷ್ಣುವನ್ನು ವಿನಂತಿಸಿದನು. ಅದನ್ನು ಮನ್ನಿಸಿ ಅವನು ವಾಮನಾವತಾರವನ್ನು ತಾಳಿ ಬಲಿಯನ್ನು ಹತ್ತಿಕ್ಕಿ, ಇಂದ್ರನನ್ನು ಪುನಃ ತ್ರೈಲೋಕ್ಯಾಧಿಪತಿಯನ್ನಾಗಿ ಮಾಡಿದನು. ಇಂದ್ರನಿಂದ ಋಕ್ಷಪತ್ನಿಯಾದ ವಿರಜೆ ಎಂಬಾಕೆಗೆ ವಾಲಿಯೆಂಬ ಮಗನು ಹುಟ್ಟಿದನು. -

## ೧೫. ಇಲ, ಇಲಾ

ಇಲರಾಜನು ಕರ್ದಮ ಪ್ರಜಾಪತಿಯ ಮಗನಾಗಿದ್ದು ಬಾಹ್ಲೀಕ ಎಂಬ ದೇಶವನ್ನು ಆಳುತ್ತಿದ್ದನು. ಶಿವ-ಪಾರ್ವತಿಯರ ವರಕ್ಕನುಸಾರವಾಗಿ ಆತನಿಗೆ ಒಂದು ತಿಂಗಳು ಸ್ತ್ರೀತ್ವವೂ ನಂತರದ ಒಂದು ತಿಂಗಳಲ್ಲಿ ಪುರುಷತ್ವವೂ ಪ್ರಾಪ್ತವಾಗುತ್ತಿತ್ತು. ಈತನ ಮಗನೆಂದರೆ ಪುರೂರವ. ಇವನು ವೈವಸ್ವತಮನು (ಶ್ರಾದ್ಧದೇವ) ಮತ್ತು ಶ್ರದ್ಧಾ ಇವರ ಪುತ್ರ. ಇವರು ಪುತ್ರಪ್ರಾಪ್ತಿಗಾಗಿ ಮಿತ್ರ-ವರುಣರನ್ನು ಕುರಿತು ವಸಿಷ್ಠರಿಂದ ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿಸಿದರು. ಅವರಿಗೆ 'ಇಲಾ' ಎಂಬ ಕನ್ಯೆಯು ಹುಟ್ಟಿದಳು. ಆಗ ಮನುವಿನ ಇಚ್ಛೆಯನುಸಾರ ವಸಿಷ್ಠರು ಆಕೆಯನ್ನು ಪುರುಷನನ್ನಾಗಿ ಮಾಡಿದರು. ಇಲರಾಜನು ಶಂಕರನ ಶಾಪವಿದ್ದ ಶರವನಕ್ಕೆ ಬೇಟೆಗೆಂದು ಹೋದಾಗ ಪರಿವಾರಸಮೇತ ಆತನಿಗೆ ಸ್ತ್ರೀರೂಪವು ದೊರಕಿತು. ವಸಿಷ್ಠನ

ಕೃಪೆಯಿಂದ, ಒಂದು ತಿಂಗಳ 'ಸ್ತ್ರೀತ್ವ'ದನಂತರ ಒಂದು ತಿಂಗಳ 'ಪುರುಷತ್ವ'ವು ಕ್ರಮವಾಗಿ ಬರುವಂತಾಯಿತೆಂದು ಮತ್ಸ್ಯ ಹಾಗೂ ಪದ್ಮಪುರಾಣಗಳಲ್ಲಿ ಹೇಳಲಾಗಿದೆ.

ತನ್ನಲ್ಲಿ ಸದಾಕಾಲವೂ ಪುರುಷತ್ವವಿರಬೇಕೆಂದು ಮರುತ್ತನು ಶಂಕರನಿಗೆ ಪ್ರಿಯವಾಗಿದ್ದ ಅಶ್ವಮೇಧ ಯಜ್ಞವನ್ನು ಮಾಡಿದನು. ಆಗ ಪ್ರಸನ್ನನಾದ ಶಂಕರನು ಆತನಿಗೆ ನಿರಂತರ ಸ್ವರೂಪದ ಪುರುಷತ್ವವನ್ನು ಕೊಟ್ಟನೆಂದು ರಾಮಾಯಣದಲ್ಲಿದೆ (ಉತ್ತರಕಾಂಡ/೯೦). ಸ್ಕಂದಪುರಾಣದಲ್ಲಿ ಅರುಣಾಚಲೇಶ್ವರನ ಉಪಾಸನೆಯಿಂದ ಅದು ಲಭಿಸಿತೆಂದು ಹೇಳಿದ್ದಾರೆ. ಬ್ರಹ್ಮಪುರಾಣದಲ್ಲಿ ಗೌತಮೀ ನದಿಯಲ್ಲಿ ಸ್ನಾನ ಮಾಡಿದ್ದರಿಂದ ಪುರುಷತ್ವ ಪ್ರಾಪ್ತವಾಯಿತೆಂಬ ಉಲ್ಲೇಖವಿದೆ.

ಈತನು 'ಇಲಾ' ಎಂಬ ಸ್ತ್ರೀರೂಪದಲ್ಲಿದ್ದಾಗ ಬುಧನಿಂದ ಈತನಿಗೆ ಪುರೂರವ ಎಂಬ ಪುತ್ರನು ಹುಟ್ಟಿದನು. ಈತನಿಗೆ ಇವನ ಹೊರತು ಇನ್ನೂ ಮೂರು ಜನ ಮಕ್ಕಳಿದ್ದರು.

## ೧೬. ಉಮಾ

ಇವಳು ಹಿಮಾಲಯ ಹಾಗೂ ಮೈನಾ ಇವರ ದ್ವಿತೀಯ ಕನ್ಯೆಯಿದ್ದು ರುದ್ರನ ಪತ್ನಿಯಾಗಿದ್ದಾಳೆ. ಪಾರ್ವತಿಯು ಸೌಮ್ಯರೂಪದವಳು ; ಶಕ್ತಿದೇವತೆಯೂ ಕೂಡ. ಇವಳು ಮೊದಲು ಗೌರಾಂಗಿಯಾಗಿದ್ದಳು. ನಿಶಾದೇವಿಯ ಸ್ಪರ್ಶದಿಂದ ಇವಳು ಕಪ್ಪಾದಳು. ಅಂದಿನಿಂದ ಇವಳ ಬಗ್ಗೆ ಇದ್ದ ಪತಿಯ ವ್ಯಾಮೋಹವು ಕಡಿಮೆಯಾಗಿ, ಮುನಿಸುಂಟಾಯಿತು. ಪುನಃ ಗೌರಕಾಂತಿಯನ್ನು ಹೊಂದಲೆಂದು ಅವಳು ತಪಸ್ಸನ್ನು ಕೈಕೊಂಡಳು. ಅನಂತರ ಅವಳಿಗೆ ಗೌರವರ್ಣವು ಪ್ರಾಪ್ತವಾಯಿತು. ರುದ್ರನಿಂದ ಈಕೆಗೆ ಸಂತಾನವಾಗಲಿಲ್ಲ. ಶಿವ ಮತ್ತು ಆಕಾಶಗಂಗೆ ಇವರಿಂದ ಹುಟ್ಟುವ ಮಗನು ಗಂಗಾ ಮತ್ತು ಉಮಾ ಇವರಿಬ್ಬರಿಗೂ ಅಕ್ಕರೆಯವನಾಗುವನೆಂದು ಬ್ರಹ್ಮದೇವನು ಹೇಳಿದನು.

## ೧೭. ಉರ್ವಶಿ

ಉರ್ವಶಿಯ ಉಲ್ಲೇಖವು ಋಗ್ವೇದದಲ್ಲಿ ಅನೇಕ ಕಡೆಗಳಲ್ಲಿ ಬಂದಿದೆ. ಇವಳು ಓರ್ವ ಲಾವಣ್ಯವತಿಯಾದ ಅಪ್ಸರೆಯಾಗಿದ್ದಳು. ಬದರಿಕಾಶ್ರಮದಲ್ಲಿ ನರನಾರಾಯಣರು ತಪಸ್ಸನ್ನು ಕೈಕೊಂಡಾಗ ಇಂದ್ರನಿಗೆ ತನ್ನ ಪದವಿಯು ಕೈಬಿಡುವ ಭಯವೆನಿಸಿತು. ನರನಾರಾಯಣರ ಮನಸ್ಸನ್ನು ವಿಚಲಿತಗೊಳಿಸಲೆಂದು ಇಂದ್ರನು ರಂಭಾ, ಮೇನಕಾ, ತಿಲೋತ್ತಮಾ ಮೊದಲಾದ ಹದಿನಾರು ಸಾವಿರದ ಐವತ್ತು ಅಪ್ಸರೆಯರನ್ನು ಕಳುಹಿಸಿದನು ; ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಪ್ರತಿಯಾಗಿ ನಾರಾಯಣನ ತೊಡೆಯಿಂದ ಹದಿನಾರು ಸಾವಿರದ ಐವತ್ತೊಂದು ಅಪ್ಸರೆಯರು ನಿರ್ಮಿತರಾದರು. ಅವರಲ್ಲಿ ಅತ್ಯಂತ ಲಾವಣ್ಯವತಿಯಾದ ಅಪ್ಸರೆ ಎಂದರೆ ಉರ್ವಶಿ. ಉರು ಎಂದರೆ ತೊಡೆ ; ತೊಡೆಯಿಂದ ಹುಟ್ಟಿದವಳೆಂದು ಉರ್ವಶಿ ಎಂಬ ಹೆಸರು ಬಂದಿತು. ನರನಾರಾಯಣರು ಈ ಉರ್ವಶಿಯನ್ನು ಇಂದ್ರನಿಗೆ ಉಡುಗೊರೆಯಾಗಿ ಕೊಟ್ಟು ಕಳುಹಿಸಿದರು. ಈ ಕಥೆಯು ಪದ್ಮಪುರಾಣದಲ್ಲಿದೆ.

ಉರ್ವಶಿಯು ಸೂರ್ಯನ ಆರಾಧನೆಗೆಂದು ಹೊರಟಾಗ ಮಿತ್ರ ಆದಿತ್ಯನಿಗೆ 'ನಾನು ನಿನ್ನನ್ನು ವರಿಸುವೆ' ಎಂಬ ಆಶ್ವಾಸನೆಯನ್ನು ಕೊಟ್ಟಳು. ಅನಂತರ ಭೇಟಿಯಾದ ವರುಣನು ತನ್ನೊಡನೆ ವಿವಾಹವಾಗಲು ಉರ್ವಶಿಯನ್ನು ಕೇಳಿಕೊಂಡನು. ಆಗ ಉರ್ವಶಿಯು 'ನಾನು ಈ ಮೊದಲೇ ಮಿತ್ರನನ್ನು ವರಿಸಿದ್ದೇನೆ' ಎಂದು ಹೇಳಿದಳು. ಆದರೆ ವರುಣನಿಗೆ ತನ್ನ ಪ್ರೇಮವನ್ನು ಕೊಟ್ಟಳು. ಆಗ ವರುಣನು ಇವಳಿಂದಾಗಿ ಉಂಟಾದ ತನ್ನ ತೇಜಸ್ಸನ್ನು (ವೀರ್ಯವನ್ನು) ಒಂದು ಕುಂಭದಲ್ಲಿ ಹಾಕಿದನು. ಈ ಸಂಗತಿಯು ಮಿತ್ರನಿಗೆ ತಿಳಿದಾಗ ಆತನು ಬಲು ಸಿಟ್ಟಾಗಿ ಉರ್ವಶಿಗೆ 'ನೀನು ಮೃತ್ಯುಲೋಕದಲ್ಲಿ ಪುರೂರವನ ಪತ್ನಿಯಾಗು !' ಎಂದು ಶಾಪವನ್ನು ಕೊಟ್ಟನು ; ತನ್ನ ವೀರ್ಯವನ್ನು ಒಂದು ಕುಂಭದಲ್ಲಿ ಹಾಕಿದನು. ಈ ಕುಂಭಗಳಿಂದ ಅಗಸ್ತ್ಯ ಮತ್ತು ವಸಿಷ್ಠರು ಜನ್ಮತಾಳಿದರು. ಉರ್ವಶಿಯು ಕಣ್ಣಿಗೆ ಬೀಳುತ್ತಲೇ ಮಿತ್ರನ ವೀರ್ಯ ಪತನವಾಯಿತು ; ಶಾಪದ ಭೀತಿಯಿಂದ ಆತನು ಅದನ್ನು ಪಾದದ ಕೆಳಗೆ ಅಡಗಿಸಿದನು ; ಅದರಿಂದಾಗಿ ವಸಿಷ್ಠನು ಜನ್ಮತಾಳಿದನೆಂದು ವಿಷ್ಣುಪುರಾಣದಲ್ಲಿದೆ.

ನಾರದನು ಬಣ್ಣಿಸಿದ್ದರಿಂದ ಊರ್ವಶಿಯು ಪುರೂರವನತ್ತ ಆಕರ್ಷಿತಳಾದಳು. ಹೀಗಾಗಿ ಲಕ್ಷ್ಮೀ ಸ್ವಯಂವರವೆಂಬ ಪ್ರಸಂಗದಲ್ಲಿ ಇವಳ ವದನ್ಯಾಸ, ಭಾವಮುದ್ರೆಗಳು ತಪ್ಪಿದವು. ಆಗ ಭರತಮುನಿಯ ಶಾಪ ತಗುಲಿ ಊರ್ವಶಿಯು ಇಪ್ಪತ್ತೈದು ವರ್ಷಗಳ ಕಾಲ ಬಳ್ಳಿಯಾಗಿ ಬದುಕಿದಳು. ಶಾಪವಿಮೋಚನೆ ಯಾದನಂತರ ಪುರೂರವನತ್ತ ಹೋಗುತ್ತಿದ್ದಾಗ ದಾರಿಯಲ್ಲಿ ಕೇಶಿ ಎಂಬ ದೈತ್ಯನು ಅವಳನ್ನು ಅಪಹರಿಸಲು ಮಾಡಿದ ಪ್ರಯತ್ನವು ವಿಫಲವಾಯಿತು. ಪುರೂರವನು ಇವಳನ್ನು ಆ ದೈತ್ಯನಿಂದ ಬಿಡಿಸಿದನು. ಊರ್ವಶಿಯು ಪುರೂರವನಿಗೆ ಮೂರು ಷರತ್ತುಗಳನ್ನು ಹಾಕಿ, ಆತನ ಬಳಿ ಇರಲು ಸಮ್ಮತಿಸಿದಳು. ಆ ಷರತ್ತುಗಳೆಂದರೆ

೧. ಅವಳು ಸಾಕಿದ್ದ, ಮಕ್ಕಳಂತೆ ಜೋಪಾನಮಾಡಿದ್ದ ಎರಡು ಕುರಿಗಳಿಗೆ ರಕ್ಷಣೆಯನ್ನೀಯಬೇಕು ;

೨. ಅವಳು ಯಾವಾಗಲೂ ಘೃತವನ್ನೇ ಆಹಾರವಾಗಿ ಸೇವಿಸುವವಳಾದ್ದರಿಂದ ಈ ಬಗೆಗಿನ ವ್ಯವಸ್ಥೆ ಯಾಗಬೇಕು ; ಮತ್ತು

೩. ಮೈಥುನದ ಸಮಯವನ್ನು ಹೊರತುಪಡಿಸಿ ಪುರೂರವನು ನಗ್ನಸ್ಥಿತಿಯಲ್ಲಿ ಅವಳ ದೃಷ್ಟಿಗೆ ಬೀಳಕೂಡದು.

ಆತನು ಈ ಮೂರೂ ಷರತ್ತುಗಳನ್ನು ಕೂಲಂಕಷವಾಗಿ ಪಾಲಿಸಿ ಅರವತ್ತೊಂದುಸಾವಿರ ವರ್ಷಗಳವರೆಗೆ ಊರ್ವಶಿಯನ್ನು ಉಪಭೋಗಿಸಿದನು. ಒಮ್ಮೆ ಆತನಿಂದ ಮೂರನೆಯ ಶರತ್ತಿನ ಭಂಗವಾದ್ದರಿಂದ ಅವಳು ಪುರೂರವನನ್ನು ಬಿಟ್ಟು ದೇವಲೋಕಕ್ಕೆ ತೆರಳಿದಳು.

ಮಹಾಭಾರತದಲ್ಲಿಯೂ ಊರ್ವಶಿಯ ಉಲ್ಲೇಖವು ಅನೇಕ ಸಲ ಬಂದಿದೆ. ಇವಳು ಯಾವಾಗಲೂ ಕುಬೇರನ ಸೇವೆಯಲ್ಲಿದ್ದವಳು. ಅರ್ಜುನನು ಜನ್ಮತಾಳಿದಾಗ ಸಂಗೀತವನ್ನು ಹಾಡಿದ ಹನ್ನೊಂದು ಅಪ್ಸರೆಯರಲ್ಲಿ ಇವಳೂ ಒಬ್ಬಳಾಗಿದ್ದಳು. ಅರ್ಜುನನು ವಿದ್ಯಾಭ್ಯಾಸಕ್ಕೆಂದು ಇಂದ್ರಲೋಕಕ್ಕೆ ಹೋದಾಗ ಆತನು ಊರ್ವಶಿಯತ್ತ ಆದರಭಾವದಿಂದ ನೋಡುತ್ತಿದ್ದರೂ, ಇಂದ್ರನಿಗೆ ಅರ್ಜುನನ ನೋಟವು ಕಾಮ ಭಾವನೆಯದೆಂದೆನಿಸಿತು. ಇಂದ್ರನು ಚಿತ್ರಸೇನಗಂಧರ್ವನನ್ನು ಕರೆಯಿಸಿ ವಸ್ತ್ರಾಲಂಕಾರಭೂಷಿತಳಾದ ಊರ್ವಶಿ ಯನ್ನು ಅರ್ಜುನನತ್ತ ಹೋಗಲು ಆತನೊಡನೆ ಹೇಳಿಕಳುಹಿಸಿದನು. ಆಕೆಯು ಅರ್ಜುನನ ಬಳಿ ಹೋದಳು. ಆಗ ಅರ್ಜುನನು ಆಕೆಗೆ ತನ್ನ ದೃಷ್ಟಿಕೋನವನ್ನು ತಿಳಿಸಿದನು. ಹೀಗೆ ಅವಳ ಇಚ್ಛಾಭಂಗವಾದ್ದರಿಂದ 'ಒಂದು ವರ್ಷದವರೆಗೆ ನೀನು ಷಂಡನಾಗಿರು !' ಎಂದು ಅರ್ಜುನನಿಗೆ ಶಾಪಕೊಟ್ಟಳು. 'ಉರ್ವಶೀತೀರ್ಥ' ಎಂಬ ಹೆಸರಿನ ಒಂದು ಪವಿತ್ರ ತೀರ್ಥಸ್ಥಾನವಿದೆ.

## ೧೪. ಋಚೀಕ

ಋಚೀಕನು ಭಾರ್ಗವಕುಲದಲ್ಲಿ ಜನಿಸಿದ ಪ್ರಖ್ಯಾತ ಋಷಿಯಾಗಿದ್ದನು. ಬ್ರಹ್ಮಾಂಡಪುರಾಣದ ಪ್ರಕಾರ ಇವನು ಔರ್ವನೆಂಬಾತನ ತೊಡೆಯೊಡೆದು ಹೊರಗೆ ಬಂದ ಪುತ್ರ. ಬಾಲ್ಯದಿಂದ ಈತನ ಒಲವು ವೇದಾನುಷ್ಠಾನ, ತಪಸ್ಸುಗಳತ್ತ ಇತ್ತು. ತೀರ್ಥಾಟನೆಯನ್ನು ಮಾಡುತ್ತ ನಡೆದ ಈತನು ವಿಶ್ವಾಮಿತ್ರಿ ಎಂಬ ನದಿಯಲ್ಲಿ ಸ್ನಾನಮಾಡುತ್ತಿದ್ದ ಗಾಧಿಕನ್ಯೆಯಾದ ಸತ್ಯವತಿಯನ್ನು ಕಂಡನು. ಅವಳ ಲಾವಣ್ಯಕ್ಕೆ ಮನಸೋತ ಋಚೀಕನು ಗಾಧಿಯನ್ನು ಸತ್ಯವತಿಗಾಗಿ ಕೇಳಿದನು. ಆಗ ಗಾಧಿಯು ಒಂದು ಸಾವಿರ ಕಪ್ಪುಕಿವಿಗಳುಳ್ಳ ಕುದುರೆಗಳನ್ನು ಕನ್ಯಾಶುಲ್ಕವಾಗಿ ಋಚೀಕನಿಗೆ ತರಲು ಹೇಳಿದನು. ಆಗ ವರುಣನನ್ನು ಪ್ರಾರ್ಥಿಸಿ ಅಷ್ಟು ಕುದುರೆಗಳನ್ನು ದೊರಕಿಸಿಕೊಂಡು ಸತ್ಯವತಿಯನ್ನು ಪಡೆದನು. ಸತ್ಯವತಿಯು ಪುತ್ರಪ್ರಾಪ್ತಿಯ ಅಭಿಲಾಷೆಯಿಂದ ತನಗಾಗಿ ಮತ್ತು ತನ್ನ ತಾಯಿಗೆಂದು ವರಗಳನ್ನು ಬೇಡಿಕೊಂಡಳು. ಆಗ ಋಚೀಕನು ಅಭಿಮಂತ್ರಿಸಿದ ಎರಡು 'ಚರು'(ಪ್ರಸಾದ)ಗಳನ್ನು ಸತ್ಯವತಿಯ ಕೈಗೆ ಕೊಟ್ಟನು. ಯಾರು ಯಾವ ರೀತಿ, ಯಾವ ಚರುವನ್ನು ಭಕ್ಷಿಸಬೇಕು ಎಂಬ ಬಗ್ಗೆ ಸೂಚಿಸಿದನು. ಪ್ರತ್ಯಕ್ಷದಲ್ಲಿ ಈ ಚರುಗಳ ಬದಲಾವಣೆ ನಡೆದುಹೋಯಿತು. ಹೀಗಾದ್ದರಿಂದ ಸತ್ಯವತಿಗೆ ಜಮದಗ್ನಿ ಮುಂತಾದ ಒಂದುನೂರು ಪುತ್ರರಾದರು ; ಗಾಧಿಗೆ ವಿಶ್ವಾಮಿತ್ರನಾದನು. ಪೃಥ್ವಿಯನ್ನು ಕ್ಷತ್ರಿಯರಹಿತವಾಗಿ ಮಾಡಿದ ಪರಶುರಾಮನು ಈತನ ಮೊಮ್ಮಗನು. ಅಂಬರೀಷನು ಈ ಋಚೀಕನನ್ನು ಪರ್ವತದ ಮೇಲೆ ಭೇಟಿಯಾದಾಗ ಒಂದು ಲಕ್ಷ ಗೋವುಗಳನ್ನು ತೆಗೆದುಕೊಂಡು ಒಬ್ಬ ಮಗನನ್ನು ನರಬಲಿಯಾಗಿ ಕೊಡಲು ಕೇಳಿದನು. ಋಚೀಕನು ಸಮ್ಮತಿಸಲಿಲ್ಲ.

## ೧೯. ಐರಾವತ

ಇದು ಇರಾವಾನನ ಗಂಡು ಮಗು. ಪುರಾಣವಾಙ್ಮಯದಲ್ಲಿ ಇದನ್ನು 'ಇಂದ್ರನ ಆನೆ' ಎಂದಿದ್ದಾರೆ. ಸಮುದ್ರಮಥನದಿಂದ ಉತ್ಪನ್ನವಾಗಿ ಇದು ಇಂದ್ರನ ವಾಹನವಾಯಿತು. ಈ ಐರಾವತವು ಬಿಳಿಯ ಬಣ್ಣದ್ದಿದ್ದು ಇದಕ್ಕೆ ನಾಲ್ಕು ದಂತಗಳಿವೆ. ಇಂದ್ರನು ಈ ಐರಾವತವನ್ನು ಪೂರ್ವದಿಕ್ಕಿನ ಅಧಿಪತಿಯನ್ನಾಗಿ ಮಾಡಿದನು. ಗರುಡನು ಇಂದ್ರ-ಕೃಷ್ಣರ ಯುದ್ಧದಲ್ಲಿ ಈ ಐರಾವತವನ್ನು ಸೋಲಿಸಿದನು.

## ೨೦. ಕಂಡು

ಈತನು ಸತ್ಯವಾದಿಯೂ ತಪೋಬಲವಿದ್ದ ಮಹರ್ಷಿಯೂ ಆಗಿದ್ದನು. ಈತನು ಬಲ್ಲು ಸಿಡುಕನಿದ್ದನು. ಕಟ್ಟುನಿಟ್ಟಿನಿಂದ ನಿಯಮಗಳನ್ನು ಪಾಲಿಸುವದರಲ್ಲಿ ಯಾರೂ ಇವನನ್ನು ಮೀರಿಸುವಂತೆ ಇರಲಿಲ್ಲ. ಈತನು ಬ್ರಹ್ಮರ್ಷಿಯಾಗಿದ್ದನು. ಇಂದ್ರನು ಈತನ ತಪೋಭಂಗವನ್ನು ಮಾಡಲು 'ಪ್ರಮ್ಲೋಚಾ' ಹೆಸರಿನ ಓರ್ವ ಅಪ್ಸರೆಯನ್ನು ಕಳುಹಿಸಿದನು. ಕೌಸಲ್ಯೆಯನ್ನು ಸಂತೈಸುವಾಗ ರಾಮನು ಪಿತನ ವಚನವನ್ನು ಪಾಲಿಸುವುದೇ ಮಗನ ಕರ್ತವ್ಯವೆಂದು ಹೇಳುತ್ತ ಕಂಡುವಿನ ಉದಾಹರಣೆಯನ್ನು ಕೊಟ್ಟಿದ್ದಾನೆ. ತಂದೆಯ ಆಜ್ಞೆಯನ್ನು ಪಾಲಿಸುವುದಕ್ಕಾಗಿ ಕಂಡುವು ಗೋವಧೆಯನ್ನು ಮಾಡಿದನು.

> ಋಷಿಣಾ ಚ ಪಿತುರ್ವಾಕ್ಯಂ ಕುರ್ವತಾ ವನಚಾರಿಣಾ ।
> ಗೌರ್ಹತಾ ಜಾನತಾಧರ್ಮ ಕಂಡುನಾ ಚ ವಿಪಶ್ಚಿತಾ ॥

ಅಯೋಧ್ಯಾಕಾಂಡ / ೨೧-೩೧

ಈತನ ಹತ್ತುವರ್ಷದ ಮಗನು ಒಂದು ಅರಣ್ಯದಲ್ಲಿ ಮೃತನಾದನು ; ಆಗ ಕಂಡುವು ತನ್ನ ಶಾಪದಿಂದ ಆ ಅರಣ್ಯವನ್ನು ತೃಣರಹಿತ, ವೃಕ್ಷರಹಿತ, ಹಾಗೂ ನೀರೂ ಸಹ ಇರದ ಮರುಭೂಮಿಯನ್ನಾಗಿ ಮಾಡಿದನು.

## ೨೧. ಕಬಂಧ

ಈತನು ದಂಡಕಾರಣ್ಯದಲ್ಲಿದ್ದ ರಾಕ್ಷಸನಾಗಿದ್ದನು. ಇಂದ್ರನ ವಜ್ರದ ಏಟಿನಿಂದ ಈತನ ತೊಡೆಗಳು ಮತ್ತು ಶಿರವು ಶರೀರದಲ್ಲಿ ಸಿಕ್ಕಿಕೊಂಡ ಕಾರಣ ಇವನು ಶಿರವಿಲ್ಲದವನಾದನು. ಅಂದಿನಿಂದ ಈತನಿಗೆ ಕಬಂಧನೆಂಬ ಹೆಸರು ಬಂದಿತು. ತನ್ನ ಹೊಟ್ಟೆಯನ್ನು ತುಂಬಿಸಲು ಇವನು ಯೋಜನದಷ್ಟು ಉದ್ದವಾದ ಕೈಗಳನ್ನು ಪಡೆದುಕೊಂಡನು. ಇವನು ಆ ಪರಿಸರದಲ್ಲಿ ಸಂಚರಿಸುವ ಪ್ರಾಣಿಗಳನ್ನು ಹಿಡಿದು ಭಕ್ಷಿಸುತ್ತಿದ್ದನು. 'ಶ್ರೀರಾಮನಿಂದ ಸಾವು ಬಂದನಂತರ ನೀನು ಮೊದಲಿನ ರೂಪವನ್ನು ಪಡೆಯುವೆ' ಎಂದು ಇಂದ್ರನು ಇವನಿಗೆ ಹೇಳಿದ್ದನು. ಈ ರೀತಿ ದಿನೇದಿನೇ ಆಹಾರವನ್ನು ಶೋಧಿಸುತ್ತಿರುವಾಗ ಒಂದಿಲ್ಲೊಂದು ದಿನ ಶ್ರೀರಾಮನು ಭೇಟಿಯಾಗುತ್ತಾನೆ ಎಂಬ ವಿಶ್ವಾಸವು ಕಬಂಧನಲ್ಲಿ ಮೂಡಿಬಂತು. ಶ್ರೀರಾಮಲಕ್ಷ್ಮಣರು ತನ್ನ ಕೈಸೇರಿದಾಗ ಇವನಿಗೆ ಬಹಳ ಸಂತೋಷವಾಯಿತು. ಶ್ರೀರಾಮನು ಕಬಂಧನ ಎಡಗೈಯನ್ನೂ, ಲಕ್ಷ್ಮಣನು ಅವನ ಬಲಗೈಯನ್ನೂ ಕತ್ತರಿಸಿಹಾಕಿದರು. ಆಗ ಕಬಂಧನ ದೇಹದಿಂದ ತೇಜಸ್ಸುಳ್ಳ ಒಬ್ಬ ಪುರುಷನು ಗೋಚರಿಸಿ ಆಕಾಶದಲ್ಲಿ ವಿಲೀನನಾದನು. ಶ್ರೀರಾಮನು ಆತನನ್ನು ಪ್ರಶ್ನಿಸಿದಾಗ ತಾನು 'ವಿಶ್ವಾವಸು' ಎಂಬ ಗಂಧರ್ವನಾಗಿದ್ದೆನೆಂದು ಕಬಂಧನು ತಿಳಿಸಿದನು. ಬ್ರಾಹ್ಮಣನ ಶಾಪದಿಂದ ಕಬಂಧನು ರಾಕ್ಷಸನಾಗಿದ್ದನು. ಕಬಂಧನಿಗೆ ದಿವ್ಯಜ್ಞಾನವಿರಲಿಲ್ಲ ; ಆದಕಾರಣ, ಸೀತೆಯನ್ನು ಯಾರು ಅಪಹರಿಸಿದರೆಂಬುದನ್ನು ಹೇಳಲು ಆತನಿಗೆ ಸಾಧ್ಯವಾಗಲಿಲ್ಲ. ಆದರೆ ತನ್ನ ಮರಣದನಂತರ ಶ್ರೀರಾಮನಿಗೆ ಸಹಾಯಮಾಡುವುದಾಗಿ ಅವನು ವಚನ ವಿತ್ತನು ; ಸುಗ್ರೀವನ ಬಳಿಗೆ ಹೋಗಿ ಸಹಾಯವನ್ನು ಕೋರಬೇಕೆಂದೂ ಸೂಚಿಸಿದನು. ಸುಗ್ರೀವನತ್ತ ಹೋಗುವ ಮಾರ್ಗವನ್ನು ಶ್ರೀರಾಮನಿಗೆ ತಿಳಿಸಿ, ಪುನಃ ಗಂಧರ್ವನಾಗಿ ಕಬಂಧನು ಪುಣ್ಯಲೋಕಕ್ಕೆ ತೆರಳಿದನು.

## ೨೨. ಕಶ್ಯಪ

ಕರ್ದಮನ ಕನ್ಯೆಯಾದ, ಮರೀಚಿಯ ಪತ್ನಿಯಾದ ಕಲಾ ಇವಳಿಗೆ ಕಶ್ಯಪ ಹಾಗೂ ಪೂರ್ಣಿಮಾ ಎಂಬ ಇಬ್ಬರು ಮಕ್ಕಳಾದರು. ಕಶ್ಯಪನು ಜೇಷ್ಠಪುತ್ರನಾಗಿದ್ದನು. ಇವನಿಗೆ ತಾರ್ಕ್ಷ್ಯ ಮತ್ತು ಅರಿಷ್ಟನೇಮಿ ಎಂಬ ಎರಡು ಹೆಸರುಗಳಿದ್ದವೆಂದು ಕಂಡುಬರುತ್ತದೆ. ಕಶ್ಯಪನು ಸಪ್ತರ್ಷಿಗಳಲ್ಲಿ ಒಬ್ಬನಾಗಿದ್ದು ಆತನು ಪ್ರಜಾಪತಿಯೂ ಆಗಿದ್ದನು. ಈತನಿಗೆ ಆರು ಜನ ಬಲತಾಯಿಯರಿಂದ ಜನಿಸಿದ ಸಹೋದರರಿದ್ದಾರೆಂದು ವಾಯುಪುರಾಣದಲ್ಲಿ ಹೇಳಿದೆ. ಇವನು ಬ್ರಹ್ಮದೇವನ ಮಾನಸಪುತ್ರನಾಗಿದ್ದನು. ಪರಶುರಾಮನು ಪೃಥ್ವಿಯನ್ನು ಇಪ್ಪತ್ತೊಂದು ಸಲ ಕ್ಷತ್ರಿಯರಹಿತವನ್ನಾಗಿ ಮಾಡಿದನಂತರ ಸರಸ್ವತೀನದಿಯ ತೀರದ ರಾಮತೀರ್ಥದಲ್ಲಿ ಕೈಕೊಂಡ ಆತನ ಯಜ್ಞಕ್ಕೆ ಕಶ್ಯಪ ಅಧ್ವರ್ಯುವಾಗಿದ್ದನು. ಪೃಥ್ವಿಯು ಕಶ್ಯಪನಿಗೆ ದಕ್ಷಿಣೆಯ ರೂಪದಲ್ಲಿ ದೊರೆಯಿತು. ಉಳಿದ ಕ್ಷತ್ರಿಯರು ನಾಶವಾಗಬಾರದೆಂದು ಕಶ್ಯಪನು ತನ್ನ ಗಡಿಯಾಚೆ ಇರಲು ಪರಶುರಾಮನಿಗೆ ಹೇಳಿದನು. ಆ ಪ್ರಕಾರ ಪರಶುರಾಮನು ತಾನು ನಿರ್ಮಿಸಿದ ಶೂರ್ಪಾರಕ(ಕೊಂಕಣ)ವೆಂಬ ಪ್ರದೇಶದಲ್ಲಿ ವಾಸಿಸಿದನು. ಕಶ್ಯಪನು ಪೃಥ್ವಿಯನ್ನು ಬ್ರಾಹ್ಮಣರಿಗೆ ಒಪ್ಪಿಸಿ ವನವನ್ನು ಆಶ್ರಯಿಸಿದನು. ಈತನು ಪುತ್ರಪ್ರಾಪ್ತಿಗೆಂದು ಯಜ್ಞವನ್ನು ಆಚರಿಸುತ್ತಿದ್ದಾಗ ದೇವತೆಗಳು, ಋಷಿಗಳು, ಗಂಧರ್ವರು ಈತನಿಗೆ ಸಹಾಯಮಾಡಿದರು. ಇಂದ್ರನು 'ವಾಲಖಿಲ್ಯ'ರನ್ನು ಅವಮಾನಿಸಿದ ಕಾರಣ ಅವರು ರೊಚ್ಚಿಗೆದ್ದರು. ಆಗ ಅವರಿಂದ ತನ್ನ ರಕ್ಷಣೆ ಮಾಡಿಕೊಳ್ಳಲೆಂದು ಇಂದ್ರನು ಕಶ್ಯಪನಿಗೆ ಶರಣುಹೋದನು. ಕಶ್ಯಪನು ಬಲು ಚಾತುರ್ಯದಿಂದ ವಾಲಖಿಲ್ಯರನ್ನು ಸಂತೈಸಿದನು. ಅವರ ಕೃಪೆಯಿಂದ ಕಶ್ಯಪನಿಗೆ ಗರುಡ ಮತ್ತು ವರುಣ ಎಂಬ ಇಬ್ಬರು ಪುತ್ರರು ಹುಟ್ಟಿದರು. ವಾಲಖಿಲ್ಯರು ನೂತನ ಇಂದ್ರನಿಗಾಗಿ ಮಾಡಿದ ತಪಸ್ಸಿನ ಫಲವನ್ನು ಕಶ್ಯಪನಿಗೆ ಕೊಟ್ಟ ಕಾರಣ ಇಂದ್ರನಿಗೆ ಭಯವಿಲ್ಲದಂತಾಯಿತು.

ಕಶ್ಯಪನು 'ಅರ್ಬುದ' ಪರ್ವತದ ಮೇಲೆ ದೀರ್ಘತಪಸ್ಸನ್ನು ಮಾಡಿದನು. ಶಂಕರನಿಂದ ಗಂಗೆಯನ್ನು ಪಡೆದುಕೊಂಡನು. ಗರುಡನಿಗೆ ನಾರಾಯಣಮಾಹಾತ್ಮ್ಯೆಯನ್ನು ಹೇಳಿದನು. ಇವನಿಗೆ ಕಪಿಲಾ, ಇರಾ, ಕದ್ರು, ಅದಿತಿ, ವಿನತಾ ಎಂಬ ಅನೇಕ ಜನ ಮಡದಿಯರಿದ್ದರು ; ಅನೇಕ ಮಕ್ಕಳಿದ್ದರು. ಈತನ ಹೆಸರಿನ 'ಕಶ್ಯಪ' ಎಂಬ ಗೋತ್ರವು ಇರುತ್ತದೆ. ಗೋತ್ರವಿಲ್ಲದವರಾಗಲಿ ಇಲ್ಲವೆ ಅದು ನೆನಪಿಲ್ಲದವರಾಗಲಿ ಕಾಶ್ಯಪಗೋತ್ರದವರೆಂದು ಎನ್ನಿಸುತ್ತಾರೆ. ದೇವ-ದೈತ್ಯರ ಉತ್ಪತ್ತಿಯು ಈತನಿಂದಾಯಿತು

## ೨೩. ಕಾರ್ತಿಕೇಯ (ಸ್ಕಂದ)

ಪೃಥ್ವಿಯು ಶಂಕರನ ತೇಜಸ್ಸನ್ನು ಅಂಗೀಕರಿಸಿದಳು. ಅದರಲ್ಲಿ ಅಗ್ನಿಯ ಪ್ರವೇಶವಾದನಂತರ ಆ ಶ್ವೇತಪರ್ವತರೂಪದ ತೇಜಸ್ಸಿನಿಂದ ಕಾರ್ತಿಕೇಯನು ಹುಟ್ಟಿದನು. ಕೃತ್ತಿಕೆಯರು ಈತನಿಗೆ ಹಾಲುಣಿಸಿ ಬೆಳೆಸಿದರೆಂದು ಅವನಿಗೆ 'ಕಾರ್ತಿಕೇಯ' ಎಂಬ ಹೆಸರು ಬಂದಿತು. ಆರು ಜನ ಕೃತ್ತಿಕೆಯರು. ಈ ಆರು ಜನರೂ ಕಾರ್ತಿಕೇಯನನ್ನು ಮಗನೆಂದು ಭಾವಿಸಿದ ಕಾರಣ ಇವನಿಗೆ ಷಣ್ಮುಖ, ಷಣ್ಮಾತುರ, ಷಡಾನನ ಎಂಬ ಹೆಸರುಗಳೂ ಬಂದುವು. ಈತನು ದಾನವರನ್ನು ಸ್ಕಂದಿಸಿದನಾಗಿ (ಕೊಂದನಾಗಿ) ಅಥವಾ ಸ್ಕನ್ನವೀರ್ಯದಿಂದ ಈತನು ಜನ್ಮತಾಳಿದ್ದರಿಂದಾಗಿ ಈತನನ್ನು ಸ್ಕಂದನೆಂತಲೂ ಕರೆಯುತ್ತಾರೆ. ತನ್ನ ಶೂರತನದಿಂದ ದಾನವರನ್ನು ಸದೆಬಡಿದ ಕಾರಣ, ದೇವತೆಗಳು ಈತನನ್ನು ತಮ್ಮ ಸೇನಾಪತಿಯನ್ನಾಗಿ ಮಾಡಿಕೊಂಡರು. ಅಗ್ನಿಯು ಸಪ್ತರ್ಷಿಗಳ ಯಜ್ಞಕಾಲದಲ್ಲಿ ಅರುಂಧತಿಯೊಬ್ಬಳನ್ನು ಬಿಟ್ಟು ಇನ್ನಿತರ ಆರು ಜನ ಋಷಿಪತ್ನಿಯರಲ್ಲಿ ಕಾಮಾಸಕ್ತನಾದನು. ಅಗ್ನಿಗೆ ಅಪ್ರಿಯಳಿದ್ದ ಮಡದಿ 'ಸ್ವಾಹಾ' ಎಂಬವಳಿಗೆ ತಾನವನಿಗೆ ಪ್ರಿಯಳಾಗುವ ಈ ಒಳ್ಳೆಯ ಸಂಧಿಯ ಅರಿವಾಗಿ, ಆಕೆಯು ಈ ಆರು ಋಷಿಕನ್ಯೆಯರ ವೇಷತಾಳಿ ಸಂಭೋಗವನ್ನು ಪಡೆದು, ದೊರೆತ ವೀರ್ಯವನ್ನು ಒಂದು ಕುಂಡದಲ್ಲಿ ಶೇಖರಿಸಿಟ್ಟಳು. ಅದರಿಂದ ಸ್ಕಂದನ ಜನ್ಮವಾಯಿತೆಂದು ಮಹಾಭಾರತದ ವನಪರ್ವದಲ್ಲಿ ಉಲ್ಲೇಖವಿದೆ. ಈತನು ಅಮಾವಾಸ್ಯೆಯ ದಿನ ಹುಟ್ಟಿದನು. ವಿಶ್ವಾಮಿತ್ರನು ಈತನ ಉಪನಯನವನ್ನು ಮಾಡಿದನು. ವಿಷ್ಣುವು ಈತನಿಗೆ ಗರುಡ, ಮಯೂರ, ಕುಕ್ಕುಟ ಮುಂತಾದ

ವಾಹನಗಳನ್ನು ಕೊಟ್ಟನು. ವಾಯುವು ಧ್ವಜವನ್ನೂ, ಸರಸ್ವತಿಯು ವೀಣೆಯನ್ನೂ, ಬ್ರಹ್ಮದೇವನು ಹೋತವನ್ನೂ ಮತ್ತು ಶಂಭುವು ಒಂದು ಕುರಿಯನ್ನೂ ಕೊಟ್ಟರು. ಸ್ತ್ರೀಯರು ಈತನ ದರ್ಶನವನ್ನು ತೆಗೆದುಕೊಳ್ಳುವುದಿಲ್ಲ. ಇದಕ್ಕೆ ಪುರಾಣದಲ್ಲಿ ಯಾವ ಆಧಾರವೂ ಇಲ್ಲ. 'ಶಿವಲೀಲಾಮೃತ' ಎಂಬ ಪುರಾಣದಲ್ಲಿ ಆತನ ದರ್ಶನವನ್ನು ಪಡೆದ ಸ್ತ್ರೀಯರು ಏಳುಜನ್ಮಗಳ ಕಾಲ ವಿಧವೆಯರಾಗುವರು ! ಎಂಬ ಶಾಪವನ್ನು ಕೊಡಲಾದ ಉಲ್ಲೇಖವಿದೆ. ಚಿಕ್ಕಮಕ್ಕಳ ಆರೋಗ್ಯರಕ್ಷಣೆಗಾಗಿ ಈತನನ್ನೂ, ಸಪ್ತಮಾತೆಯರನ್ನೂ ಪೂಜಿಸುವ ರೂಢಿಯಿದೆ. ಈತನು ತಾರಕಾಸುರನನ್ನು ವಧಿಸಲು ಜನ್ಮತಾಳುವನೆಂದು ಬ್ರಹ್ಮದೇವನು ವರವನ್ನು ಕೊಟ್ಟಿದ್ದನು. ಈತನು ಜನ್ಮತಾಳಿದ ಏಳು ದಿನಗಳಲ್ಲಿ ತಾರಕಾಸುರನನ್ನು ವಧಿಸಿದನೆಂದು ಪದ್ಮಪುರಾಣ ಮತ್ತು ಮತ್ಸ್ಯಪುರಾಣದಲ್ಲಿ ಹೇಳಿದೆ.

### ೨೪. ಕಾಲ

ತಪಸ್ವಿಯ ವೇಷವನ್ನು ಧರಿಸಿಬಂದ ಕಾಲನು ಬಹುದೀರ್ಘಕಾಲದವರೆಗೆ ರಾಜ್ಯವನ್ನಾಳುತ್ತಿದ್ದ ಶ್ರೀರಾಮನಿಗೆ 'ಕೇವಲ ನಿನ್ನೊಡನೆ ಮಾತಾಡುವುದಿದೆ' ಎಂದು ತಿಳಿಸಿದನು. ಶ್ರೀರಾಮನು ಆತನಿಗೆ ಸ್ವಾಗತವನ್ನು ಕೋರಿ ಏಕಾಂತದಲ್ಲಿ ಭೇಟಿಯಾದನು. ಅವನು ಶ್ರೀರಾಮನಿಗೆ 'ನಾನು ಬ್ರಹ್ಮದೇವನ ದೂತನಾಗಿದ್ದೇನೆ. ನಾನು ವಿಷ್ಣುವಿನ ರೂಪದ ನಿನ್ನ ಪುತ್ರನಾದ ಕಾಲನು. ಪೃಥ್ವಿಯ ಮೇಲೆ ವಾಸವಿರುವ ನಿನ್ನ ಸಮಯವು ಮುಗಿದಿದೆ ಎಂಬುದನ್ನು ತಿಳಿಸಲು ಬಂದಿದ್ದೇನೆ' ಎಂದು ಹೇಳಿದನು.

### ೨೫. ಕಾಲಕೇಯ

ಕಾಲಕಾ ಇವಳು ವೈಶ್ವಾನರನೆಂಬ ದಾನವನ ಕನ್ಯೆಯಾಗಿದ್ದು ಪ್ರಜಾಪತಿ ಕಶ್ಯಪನ ಮಡದಿಯಾಗಿದ್ದಳು. ಈಕೆಗೆ ಕಾಲಕೇಯ (ಕಾಲಖಂಡ) ಹೆಸರಿನ ಅಸಂಖ್ಯ ಮಕ್ಕಳಾದರು. ಅವರಿಗೆ ಕಾಲಕೇಯರೆನ್ನುತ್ತಾರೆ.

### ೨೬. ಕಾಲಿಂದಿ

ಅಸಿತರಾಜನ ಇಬ್ಬರು ರಾಣಿಯರಲ್ಲಿ ಕಾಲಿಂದಿಯೂ ಒಬ್ಬಳು. ಅವರಿಬ್ಬರೂ ಗರ್ಭವತಿಯರಾಗಿದ್ದಾಗ ರಾಜನು ಮೃತಪಟ್ಟನು. ಆಗ ಸವತಿಯು ಕಾಲಿಂದಿಗೆ ವಿಷ ಬೆರೆಸಿದ ಆಹಾರವನ್ನು ಕೊಟ್ಟಳು. ಆಗ ಕಾಲಿಂದಿಯು ಹಿಮಾಲಯ ಪರ್ವತದಲ್ಲಿ ವಾಸವಿದ್ದ ಚ್ಯವನಭಾರ್ಗವನ ಬಳಿಗೆ ಹೋದಳು. ಆತನಿಗೆ ನಮಸ್ಕರಿಸಿ ತನಗೆ ಒಂದು ಗಂಡುಮಗುವಾಗಬೇಕೆಂದು ಪ್ರಾರ್ಥಿಸಿದಳು. 'ವಿಷವನ್ನು ಅರಗಿಸಿಕೊಂಡ ಒಬ್ಬ ಉತ್ಕೃಷ್ಟ ಮಗನನ್ನು ಪಡೆಯುವೆ !' ಎಂದು ಭಾರ್ಗವನು ಆಶೀರ್ವದಿಸಿದನು. ಅವಳಿಗೆ ಹುಟ್ಟಿದ ಮಗನೆಂದರೆ 'ಸಗರ'.

### ೨೭. ಕುಂಭಕರ್ಣ

ಈತನು ಪುಲಸ್ತ್ಯನ ಮಗನಾದ ವಿಶ್ರವಾ ಋಷಿ ಹಾಗೂ ಕೈಕಸಿಗೆ ಜನಿಸಿದ ಪುತ್ರನು. ಕೈಕಸಿಗೆ ಹುಟ್ಟಿದ ನಾಲ್ಕು ಗಂಡುಮಕ್ಕಳಲ್ಲಿ ಈತನು ಎರಡನೆಯವನು. ಭಾಗವತಪುರಾಣದಲ್ಲಿ ಈತನ ತಾಯಿಯ ಹೆಸರು ಕೇಶಿನಿ ಎಂದಿದೆ. ಇವನು ರಾವಣನ ತಮ್ಮ. ಈತನು ಹುಟ್ಟಿದ ಕ್ಷಣವೇ ಸಾವಿರಾರು ಜನರನ್ನು ನುಂಗಿಹಾಕಿದನು. ಆಗ ಜನರೆಲ್ಲರೂ ಇಂದ್ರನಿಗೆ ದೂರು ಕೊಟ್ಟರು. ಇಂದ್ರನು ಕೋಪಗೊಂಡು ಕುಂಭಕರ್ಣನ ಮೇಲೆ ತನ್ನ ಆಯುಧವಾದ ವಜ್ರವನ್ನೆಸೆದನು. ಅದರಿಂದ ರೊಚ್ಚಿಗೆದ್ದ ಕುಂಭಕರ್ಣನು ಜನರನ್ನು ಇನ್ನಷ್ಟು ಕಾಡಹತ್ತಿದನು. ಐರಾವತದ ಒಂದು ದಂತವನ್ನು ಕಿತ್ತು ಇಂದ್ರನ ಮೇಲೆ ಎಸೆದು ಅವನನ್ನು ಗಾಯಗೊಳಿಸಿದನು. ಬ್ರಹ್ಮದೇವನು ಕುಂಭಕರ್ಣನಿಗೆ 'ನೀನು ಯಾವಾಗಲೂ ನಿದ್ರೆಯಲ್ಲಿ ಮುಳುಗಿರು !' ಎಂಬ ಶಾಪವನ್ನು ಕೊಟ್ಟಿದ್ದನು. ರಾವಣನ ವಿನಂತಿಯಿಂದ ಕುಂಭಕರ್ಣನಿಗೆ ಉಃಶಾಪವು ದೊರಕಿ, ಆರು ತಿಂಗಳ ಗಾಢನಿದ್ರೆಯ ನಂತರ ಒಂದು ದಿನದ ಮಟ್ಟಿಗೆ ಎಚ್ಚರವಾಗಿರುವ ಅವಕಾಶವನ್ನು ಪಡೆದನು. ಕುಬೇರನೊಡನೆ ಸ್ಪರ್ಧಿಸಲೆಂದು ಆತನು ಹತ್ತು ಸಾವಿರ ವರ್ಷಗಳ ತಪಸ್ಸನ್ನು ಮಾಡಿದನು. ಬ್ರಹ್ಮದೇವನು ವರ ಕೊಡಲು ಸಿದ್ಧನಾದಾಗ

ದೇವತೆಗಳು ಅದನ್ನು ವಿರೋಧಿಸಿದರು. ಇದಕ್ಕೆ ಕಾರಣ ಕುಂಭಕರ್ಣನೇ ಆಗಿದ್ದನು. ಆತನು ನಂದನವನದಲ್ಲಿಯ ಏಳು ಅಪ್ಸರೆಯರನ್ನೂ, ಇಂದ್ರನ ಹತ್ತು ಸೇವಕರನ್ನೂ, ಮತ್ತು ಅನೇಕ ಋಷಿಗಳು ಮತ್ತಿತರರನ್ನೂ ತಿಂದುಹಾಕಿದ್ದನು. ಬ್ರಹ್ಮದೇವನು ದೇವತೆಗಳ ಬಯಕೆಯನ್ನು ಪೂರ್ಣಗೊಳಿಸಲು ಕುಂಭಕರ್ಣನು ಸರಸ್ವತಿಯಿಂದ ವರವನ್ನು ಬೇಡಿಕೊಳ್ಳುವಂತೆ ಮಾಡಿದನು. ಆಗ ಕುಂಭಕರ್ಣನು ದೀರ್ಘಕಾಲನಿದ್ರೆಯ ವರವನ್ನು ಬೇಡಿಕೊಂಡನು. ಬ್ರಹ್ಮದೇವನು ಅದಕ್ಕೆ ಒಪ್ಪಿಕೊಂಡನು. ನಿದ್ರೆಯ ವರವನ್ನು ಬೇಡಿಕೊಂಡಿದ್ದಕ್ಕೆ ಕುಂಭಕರ್ಣನಿಗೆ ಪಶ್ಚಾತ್ತಾಪವಾಯಿತು. ರಾವಣನು ಕುಬೇರನ ಲಂಕಾನಗರವನ್ನು ದೋಚಿಕೊಂಡನಂತರ ಕುಂಭಕರ್ಣನು ಕೂಡ ಲಂಕೆಯಲ್ಲಿ ಉಳಿದನು. ವಿರೋಚನಪುತ್ರನೆಂದರೆ ಬಲಿರಾಜ. ಈತನ ಮೊಮ್ಮಗಳು ವಜ್ರಜ್ವಾಲಾ. ಕುಂಭಕರ್ಣನ ವಿವಾಹವು ವಜ್ರಜ್ವಾಲೆಯೊಡನೆ ನಡೆಯಿತು. ಈತನು ನಿದ್ರೆಯಿಂದ ಎಚ್ಚತ್ತಿದ್ದ ದಿನದಂದು ರಾವಣನ ಸಭೆಗೆ ಹಾಜರಾಗುತ್ತಿದ್ದನು. ಈತನು ಸೀತಾಪಹರಣಮಾಡಿದುದಕ್ಕಾಗಿ ರಾವಣನನ್ನು ದೂಷಿಸಿದನು. ಏನಿದ್ದರೂ ರಾವಣನಿಗೆ ಎಲ್ಲ ವಿಧವಾಗಿ ನೆರವಾಗುವುದಾಗಿ ವಚನವನ್ನಿತ್ತನು. ಶ್ರೀರಾಮನು ಅನೇಕ ವೀರಭಟರನ್ನು ವಧಿಸಿ ರಾವಣನನ್ನು ಪರಾಜಯಗೊಳಿಸಿದನು. ಆ ಸಮಯದಲ್ಲಿ ಕುಂಭಕರ್ಣನನ್ನು ಎಚ್ಚರಿಸಲು ತುಂಬಾ ಪ್ರಯತ್ನ ಮಾಡಲಾಯಿತು. ಕೊನೆಗೆ ಕುಂಭಕರ್ಣನು ಎಚ್ಚತ್ತು ಯುದ್ಧಕ್ಕೆ ಸಜ್ಜಾದನು. ರಾವಣನಿಗೆ ಹಿತವಚನಗಳನ್ನಾಡಿದನು. 'ಮಹೋದರ'ನೆಂಬಾತನು ರಾವಣನ ವಧೆಯಾಯಿತೆಂಬ ಸುಳ್ಳು ಸುದ್ದಿಯನ್ನು ಹರಡಿಸಿ, ಸೀತೆಯನ್ನು ವಶಪಡಿಸಿಕೊಳ್ಳಬೇಕೆಂದು ಅವನಿಗೆ ಸೂಚಿಸಿದನು. ಕುಂಭಕರ್ಣನು ಈ ಸೂಚನೆಯನ್ನು ತಿರಸ್ಕರಿಸಿದನು. ಕುಂಭಕರ್ಣನು ಯುದ್ಧಕ್ಕೆ ನಿಂತಾಗ, ಅವನನ್ನು ದೃಷ್ಟಿಸಿದ ವಾನರರೆಲ್ಲರೂ ಅಂಜಿ ದಿಕ್ಕೆಟ್ಟು ಓಡತೊಡಗಿದರು. ಅಂಗದನು ಆ ವಾನರರಿಗೆ ಧೈರ್ಯಕೊಟ್ಟು ಅವರನ್ನು ಪುನಃ ಒಟ್ಟುಗೂಡಿಸಿದನು. ಕುಂಭಕರ್ಣನು ಹನುಮಂತನಿಗೆ ಗಾಯಮಾಡಿದನು. ಋಷಭ, ಶರಭ, ನೀಲ, ಗವಾಕ್ಷ —ಇವರೆಲ್ಲರೂ ನೆತ್ತರನ್ನು ಕಾರುವಂತಾದರು. ಅಂಗದನು ಕುಂಭಕರ್ಣನು ಎಸೆದ ಶೂಲವನ್ನು ಬಲು ಚಾತುರ್ಯದಿಂದ ತಪ್ಪಿಸಿಕೊಂಡನು. ಅನಂತರ ಅಂಗದನು ಕುಂಭಕರ್ಣನ ಎದೆಗೆ ಬಲು ಬಿರುಸಾದ ಏಟನ್ನು ಕೊಟ್ಟು ಆತನನ್ನು ಮೂರ್ಛೆಗೊಳಿಸಿದನು. ತನಗೆ ಪ್ರಜ್ಞೆಬಂದನಂತರ ಕುಂಭಕರ್ಣನು ಅಂಗದನನ್ನು ಮೂರ್ಛೆಗೊಳಿಸಿದನು. ಕುಂಭಕರ್ಣನು ಸುಗ್ರೀವನನ್ನು ಕರೆದುಕೊಂಡು ಲಂಕೆಯತ್ತ ನಡೆದಾಗ ಸುಗ್ರೀವನು ಕುಂಭಕರ್ಣನ ಕಿವಿಮೂಗುಗಳನ್ನು ಕತ್ತರಿಸಿಬಿಟ್ಟನು. ಶ್ರೀರಾಮನು ಶರಗಳಿಂದ ಕುಂಭಕರ್ಣನ ಕಾಲುಗಳನ್ನು ಕತ್ತರಿಸಿದನು. ಆಗ ಕುಂಭಕರ್ಣನು ಭೂಮಿಗೆ ಕುಸಿದನು. ಈ ಅವಸ್ಥೆಯಲ್ಲಿಯೂ ಆತನು ಶ್ರೀರಾಮನತ್ತ ನುಗ್ಗಿಬರಲು ಯತ್ನಿಸುತ್ತಿದ್ದಾಗ ಶ್ರೀರಾಮನು ಐಂದ್ರಬಾಣದಿಂದ ಕುಂಭಕರ್ಣನ ಶಿರವನ್ನು ಹಾರಿಸಿದನು. ಕುಂಭಕರ್ಣನು ಮೃತನಾದನು. ಈತನಿಗೆ ಕುಂಭ-ನಿಕುಂಭರೆಂಬ ಇಬ್ಬರು ಬಲಶಾಲಿಗಳಾದ ಪುತ್ರರಿದ್ದರು. ವಿಭೀಷಣ ಮತ್ತು ಶೂರ್ಪನಖಿ ಕುಂಭಕರ್ಣನ ವೀರತ್ವವನ್ನು ಬಹುವಾಗಿ ಬಣ್ಣಿಸಿದ್ದಾರೆ.

## ೨೮. ಕುಬೇರ (ವೈಶ್ರವಣ)

ಕುಬೇರನು ವಿಶ್ರವಸು ಮುನಿ ಮತ್ತು ದೇವವರ್ಣಿನಿ ಇವರ ಮಗ. ಇವನ ರೂಪವು ರಾಕ್ಷಸನಂತೆ ಮತ್ತು ಬಲವು ಅಸುರರಂತೆ ಇತ್ತು. ಇವನಿಗೆ ಮೂರು ಕಾಲುಗಳು, ಬಹುದೊಡ್ಡ ಶರೀರ, ಭಾರವಾದ ತಲೆ, ದೀರ್ಘ ಗಲ್ಲ, ಎಂಟು ಹಲ್ಲುಗಳು, ಬೂದುವರ್ಣದ ಕೂದಲು, ಶಂಕುವಿನಂತಿದ್ದ ಕಿವಿಗಳು, ಕೆಂಪು ವರ್ಣದ ದಪ್ಪವಾದ ಭುಜಗಳು ಇದ್ದವು. ಕೆಂಜಗನಂತಿದ್ದ, ಕ್ರೂರಿಯೆನಿಸುತ್ತಿದ್ದ ಈ ಕುಬೇರನು ವೈವರ್ತಜ್ಞಾನಸಂಪನ್ನನೂ ಆಗಿದ್ದು ಹುಟ್ಟಿನಿಂದ ಜ್ಞಾನಿಯಾಗಿದ್ದನು. ಈತನ ಶರೀರವು ಹೇಸಿಗೆ ತರುವಂತಿದ್ದ ಕಾರಣ ಈತನಿಗೆ ಕುಬೇರ ಎಂಬ ಹೆಸರು ಬಂದಿತೆಂದು ಬ್ರಹ್ಮಾಂಡಪುರಾಣದಲ್ಲಿದೆ. ಈತನು ತನ್ನ ತಂದೆಯನ್ನು ಹೋಲುತ್ತಿದ್ದುದರಿಂದ ಪಿತಾಮಹನಾದ ಪುಲಸ್ತ್ಯನು ಈತನಿಗೆ ವೈಶ್ರವಣನೆಂದು ಹೆಸರಿಟ್ಟನು ; ಹಾಗೂ ಇವನು ಧನಾಧ್ಯಕ್ಷನಾಗುವನೆಂದು ಭವಿಷ್ಯವಾಣಿಯನ್ನು ಸಹ ನುಡಿದಿದ್ದನು, ಎಂದು ಹೇಳುತ್ತಾರೆ. ಕುಬೇರನ ತಾಯಿಯ ಹೆಸರು ಬೇರೆಬೇರೆ ಗ್ರಂಥಗಳಲ್ಲಿ ಬೇರೆಬೇರೆಯಾಗಿದೆ. ಈತನು ತಪೋಬಲದಿಂದ ಬ್ರಹ್ಮದೇವನನ್ನು ಪ್ರಸನ್ನಗೊಳಿಸಿ ಆತನಿಂದ ಯಕ್ಷರ ಆಧಿಪತ್ಯ, ರಾಜರಾಜತ್ವ, ಧನೇಶತ್ವ, ಅಮರತ್ವ, ರುದ್ರನ ಸ್ನೇಹ

ಮತ್ತು ನಲಕೂಬರನಂಥ ಪುತ್ರ, ಮುಂತಾದವುಗಳನ್ನು ಗಳಿಸಿಕೊಂಡನು. ರಾವಣನು ಲಂಕೆಯನ್ನು ಬೇಡಿದಾಗ, ತಂದೆಯ ಹೇಳಿಕೆಯನ್ನು ಮನ್ನಿಸಿ ಕುಬೇರನು ಲಂಕೆಯನ್ನು ರಾವಣನಿಗೆ ಬಿಟ್ಟುಕೊಟ್ಟನು. ರಾವಣನು ಕುಬೇರನನ್ನು ಸೋಲಿಸಿ ಆತನ ಪುಷ್ಪಕವಿಮಾನವನ್ನು ಅಪಹರಿಸಿದನು. ಕುಬೇರನು ಪಾರ್ವತಿಯತ್ತ ಓರಗಣ್ಣಿನಿಂದ ನೋಡಿದ ಕಾರಣ ಅವನ ಆ ಕಣ್ಣು ಸುಟ್ಟುಹೋಯಿತು ; ಮತ್ತು ಬಲಗಣ್ಣು ಕೆಂಜುಬಣ್ಣಾಯಿತು. ಹೀಗಾಗಿ ಈತನಿಗೆ ಏಕಾಕ್ಷ, ಕೆಂಜುಗಣ್ಣನವ ಎಂಬ ಹೆಸರು ಬಂದಿತು. ಈತನ ಸಭೆಗೆ ಕುಬೇರಸಭೆ ಎಂದೆನ್ನುತ್ತಿದ್ದರು. ಈತನಿಗೆ ನೂರಕ್ಕೂ ಹೆಚ್ಚು ಜನ ಮಡದಿಯರಿದ್ದರು. ಕುಬೇರನ ರಾಜಧಾನಿಯ ಹೆಸರು ಅಲಕಾವತಿ ಎಂದಿದ್ದು ಅವನು ಗಂಧಮಾದನ ಪರ್ವತದ ಮೇಲೆ ವಾಸವಿದ್ದನು. ಇವನು 'ಸೌಗಂಧಿಕ' ಎಂಬ ಹೆಸರಿನ ಉದ್ಯಾನವನವನ್ನು ನಿರ್ಮಿಸಿದ್ದನು. ಮಹಾಭಾರತದಲ್ಲಿ ಹಲವಾರು ಕಡೆ ಇದರ ಉಲ್ಲೇಖವು ಬಂದಿದೆ. ಈತನು ಗಂಧಮಾದನರೆಂಬ ವಾನರರನ್ನು ಸೃಷ್ಟಿಸಿದನು. ದೂತನ ಮುಖಾಂತರ ರಾವಣನಿಗೆ ಹಿತವಚನಗಳನ್ನು ಹೇಳಲು ಯತ್ನಿಸಿದನು ; ಆದರೆ ರಾವಣನಿಗೆ ಅದು ಹಿಡಿಸಲಿಲ್ಲ. ಕುಬೇರನು ತುಂಬರುವಿಗೆ ಶಾಪ, ನಂತರ ಉಃಶಾಪವನ್ನು ಕೊಟ್ಟಿದ್ದನು. ಸೀತೆಯ ಅಗ್ನಿಪರೀಕ್ಷೆಯ ಕಾಲಕ್ಕೆ ಕುಬೇರನು ಶ್ರೀರಾಮನಿಗೆ ತಿಳಿಹೇಳಲು ಪ್ರಯತ್ನಿಸಿದನು. ಈತನು ಸರಿಸಾಟಿಯಿಲ್ಲದ ತನ್ನ ಗದೆಯನ್ನು ಹನುಮಂತನಿಗೆ ಕೊಟ್ಟನು.

**ನೋಡಿ** : ತುಂಬರು, ಪುಟ - ೩೧೭.

### ೨೯. ಕುಶನಾಭ, ಕುಶಕನ್ಯೆಯರು

ಕುಶನಾಭನು ಬ್ರಹ್ಮನ ಪುತ್ರನಾಗಿದ್ದನು. ಈತನು ಕುಶರಾಜನಿಗೆ ವಿದರ್ಭಕನ್ಯೆಯಿಂದ ಜನಿಸಿದ ನಾಲ್ಕನೆಯ ಮಗ. ಈತನು ಘೃತಾಚಿ ಎಂಬ ಅಪ್ಸರೆಯಿಂದ ನೂರು ಕನ್ಯೆಯರನ್ನು ಪಡೆದನು. ಅವರೆಲ್ಲರೂ ಅನುಪಮ ಸುಂದರಿಯಾಗಿದ್ದರು. ಅವರ ರೂಪಕ್ಕೆ ಮರುಳಾಗಿ ವಾಯುವು ಕಾಮಮೋಹಿತನಾಗಿ, ಅವರೊಡನೆ ವಿವಾಹವಾಗುವ ಪ್ರಸ್ತಾಪವನ್ನಿಟ್ಟನು. ಆದರೆ ಆ ಕುಶಕನ್ಯೆಯರು ಈತನ ಬೇಡಿಕೆಯನ್ನು ನಿರಾಕರಿಸಿದರು. ಆದರಿಂದ ಕೋಪಗೊಂಡ ವಾಯುವು ಆ ಕನ್ಯೆಯರ ಅಂಗಾಂಗಗಳನ್ನು ಪ್ರವೇಶಿಸಿ ಅವರನ್ನು ಭ್ರಷ್ಟಗೊಳಿಸಿದನು. ಆ ಕನ್ಯೆಯರ ರೂಪವು ನಷ್ಟವಾಗಿ ಅವರು ಕುಬ್ಜೆಯರಾದರು. ಕುಶನಾಭನು ಅವರ ವಿವಾಹವನ್ನು 'ಸೋಮದಾ' ಎಂಬ ಗಂಧರ್ವಿಯ ಮಗನಾದ ಬ್ರಹ್ಮದತ್ತನೊಡನೆ ಮಾಡಿಕೊಟ್ಟನು. ಪತಿಯ ಪ್ರಥಮ ಸ್ಪರ್ಶದಿಂದ ಅವರ ಕುರೂಪತ್ವವು ಇಲ್ಲದಂತಾಗಿ ಅವರು ಮೊದಲಿನಂತೆ ಸೌಂದರ್ಯಸಂಪನ್ನೆಯರಾದರು. ಅವರಿಂದಾಗಿ ಆ ದೇಶಕ್ಕೆ 'ಕಾನ್ಯಕುಬ್ಜ'ವೆಂಬ ಹೆಸರು ಬಂದಿತು. ಕುಶನಾಭನು 'ಮಹೋದಯ'ವೆಂಬ ಪಟ್ಟಣವನ್ನು ಸ್ಥಾಪಿಸಿದನು.

### ೩೦. ಕುಶ – ಲವ

ಶ್ರೀರಾಮನು ಲೋಕಾಪವಾದಕ್ಕೆ ಅಂಜಿ ಸೀತೆಯನ್ನು ಬಿಟ್ಟುಕೊಟ್ಟನು. ಶ್ರೀರಾಮನ ಆಜ್ಞೆಗನುಸಾರ ಲಕ್ಷ್ಮಣನು ಆಕೆಯನ್ನು ತಮಸಾ ನದಿಯ ತೀರದಲ್ಲಿದ್ದ ಒಂದು ಆಶ್ರಮದ ಬಳಿ ಬಿಟ್ಟುಬಂದನು. ಶಿಷ್ಯರಿಂದ ಇದನ್ನು ಅರಿತ ವಾಲ್ಮೀಕಿಯು ತನ್ನ ಆಶ್ರಮದಲ್ಲಿ ಸೀತೆಗೆ ಅವಶ್ಯವಿದ್ದ ವ್ಯವಸ್ಥೆಯನ್ನು ಮಾಡಿದನು. ಸೀತೆಯು ಅಲ್ಲಿ ಪ್ರಸೂತಳಾಗಿ, ಅವಳಿಗೆ ಹುಟ್ಟಿದ ಮಕ್ಕಳೆಂದರೆ ಕುಶ-ಲವರು. ಇವರು ಹುಟ್ಟಿದ ದಿನದಂದು ಶತ್ರುಘ್ನನು ವಾಲ್ಮೀಕಿಯ ಆಶ್ರಮದಲ್ಲಿಯೇ ಇದ್ದನು. ದರ್ಭೆ ಮತ್ತು ಮದ(ಒಂದು ಪ್ರಕಾರದ ಹುಲ್ಲು)ದಿಂದ ಈ ಮಕ್ಕಳ ಮೇಲೆ ಪ್ರೋಕ್ಷಣೆ ಮಾಡಿದ್ದರಿಂದ ಇವರಿಗೆ ಕುಶ-ಲವ ಎಂಬ ನಾಮಾಭಿಧಾನವಾಯಿತು. ವಾಲ್ಮೀಕಿಯು ಈ ಬಾಲಕರಿಗೆ ಒಳ್ಳೆಯ ಸಂಸ್ಕಾರಗಳನ್ನು ನೀಡಿದನು. ಅವರನ್ನು ವೇದ, ಧನುರ್ವೇದ, ಕ್ಷಾತ್ರವಿದ್ಯೆಗಳಲ್ಲಿ ಪರಿಣತರನ್ನಾಗಿ ಮಾಡಿದನು. ವೇದಗಳ ದೃಢೀಕರಣಕ್ಕಾಗಿ ಅವರಿಗೆ ರಾಮಾಯಣವನ್ನು ಕಲಿಸಿದನು. ರಾಮಾಯಣಕಾವ್ಯವನ್ನು ಹಾಡಿ ತೋರಿಸುವ ನೆವದಲ್ಲಿ ಕುಶ-ಲವರ ಮತ್ತು ಶ್ರೀರಾಮನ ಭೇಟಿ ನಡೆಯಿತೆಂದು ವಾಲ್ಮೀಕಿರಾಮಾಯಣದಲ್ಲಿ ಹೇಳಿದ್ದಾರೆ. ಅಶ್ವಮೇಧಯಜ್ಞದ ಸಮಯದಲ್ಲಿ ಶ್ರೀರಾಮನು ಇವರಿಬ್ಬರನ್ನೂ ಅಯೋಧ್ಯೆಗೆ ಕರೆದುಕೊಂಡು ಹೋಗಿದ್ದನು. ಎಳ್ಳಷ್ಟೂ ಧನದ ಅಪೇಕ್ಷೆಯನ್ನು ಇಟ್ಟು,

ಕೊಳ್ಳದೆ ಈ ಬಾಲಕರು ಸುಶ್ರಾವ್ಯವಾಗಿ ತಾಲ-ಲಯಬದ್ಧವಾಗಿ 'ರಾಮಾಯಣ' ಕಾವ್ಯದ ಇಪ್ಪತ್ತು ಸರ್ಗಗಳನ್ನು ಪ್ರತಿದಿನ ಹಾಡುತ್ತಿದ್ದರು. ಆಗ ಇವರು ವಾಲ್ಮೀಕಿಪುತ್ರರೆಂದೆನಿಸಿಕೊಳ್ಳುತ್ತಿದ್ದರು. ಶ್ರೀರಾಮನು ಅನಂತರ ಇವರು ತನ್ನ ಪುತ್ರರೆಂದು ಅರಿತುಕೊಂಡನು. ಲವನಿಗೆ ಕೋಶಲ ದೇಶದ ರಾಜ್ಯವನ್ನೂ ಕುಶನಿಗೆ ಉತ್ತರಕೋಶಲ ದೇಶವನ್ನೂ ಕೊಟ್ಟನು. ಸುಮತಿ ಮತ್ತು ಕುಂಜಾನನಾ ಎಂಬ ಇಬ್ಬರು ಮಡದಿಯರು ಅವನಿಗಿದ್ದರು. ಕುಶನ ಹೆಂಡತಿಯ ಹೆಸರು ಚಂಪಕಾ ಎಂದಿತ್ತು. ಲವ-ಕುಶರು ಶ್ರೀರಾಮನ ಅಶ್ವಮೇಧದ ಕುದುರೆಯನ್ನು ಸೆರೆಹಿಡಿದರು. ಕುದುರೆಯನ್ನು ಮರಳಿ ಪಡೆಯಲು ಶತ್ರುಘ್ನ, ಲಕ್ಷ್ಮಣ, ಭರತ, ಹನುಮಂತ ಇವರಷ್ಟೇ ಅಲ್ಲದೇ ಸ್ವತಃ ಶ್ರೀರಾಮನೂ ಲವ-ಕುಶರೊಡನೆ ಯುದ್ಧಕ್ಕೆ ನಿಂತಾಗ, ಲವ-ಕುಶರು, ಶ್ರೀರಾಮನೊಬ್ಬನನ್ನುಳಿದು ಮಿಕ್ಕೆಲ್ಲರನ್ನೂ ಸೋಲಿಸಿದರು. ಲವ-ಕುಶರು ತನ್ನ ಸ್ವಂತ ಮಕ್ಕಳು ಎಂದು ತಿಳಿದುಬಂದ ಕೂಡಲೆ ಶ್ರೀರಾಮನ ಕೈಯಿಂದ ಧನುಸ್ಸು ಕಳಚಿಬಿದ್ದಿತು. ಎಲ್ಲರನ್ನೂ ಗೆದ್ದುಕೊಂಡು ಲವ-ಕುಶರು ಸೀತೆಯ ಬಳಿ ಬಂದರು. ಸೀತೆಯು ಅವರೆಲ್ಲರನ್ನೂ ಬಿಟ್ಟುಕೊಡಲು ಲವ-ಕುಶರಿಗೆ ಹೇಳಿದಳು. ಆಗ ಕುಶ-ಲವರು ಆ ಕುದುರೆಯ ಸಂರಕ್ಷಕರಾದರು. ಶ್ರೀರಾಮನ ಯಜ್ಞವು ಪೂರ್ಣಗೊಂಡಿತು. ಮೇಲೆ ವಿವರಿಸಿದ ಕಥೆಯು ಬೇರೆ ಗ್ರಂಥಗಳಲ್ಲಿ ಕಂಡುಬಂದರೂ ವಾಲ್ಮೀಕಿರಾಮಾಯಣದಲ್ಲಿಲ್ಲ.

### ೩೧. ಕೃಶಾಶ್ವ

ಈ ಹೆಸರಿನ ಒಬ್ಬ ಋಷಿಯಿದ್ದನು. ಆತನು ಪ್ರಜಾಪತಿಯಾಗಿದ್ದನು. ಪ್ರಾಚೇತಸ ದಕ್ಷನು ತನ್ನ ಅರವತ್ತು ಸಾವಿರ ಕನ್ಯೆಯರಲ್ಲಿ ಇಬ್ಬರನ್ನು ಇವನಿಗೆ ವಿವಾಹ ಮಾಡಿಕೊಟ್ಟಿದ್ದನು. ಎಲ್ಲ ಅಸ್ತ್ರಗಳೆಂದರೆ ಕೃಶಾಶ್ವನ ಪುತ್ರರು. ತಾಟಕಿಯ ವಧೆಯ ಅನಂತರ ದೇವತೆಗಳು ಸಂತೋಷಗೊಂಡು ಎಲ್ಲ ಅಸ್ತ್ರಗಳನ್ನೂ, ಅಂದರೆ ಕೃಶಾಶ್ವಪ್ರಜಾಪತಿಯ ಪುತ್ರರನ್ನು ಶ್ರೀರಾಮನಿಗೆ ಕೊಡಬೇಕೆಂದು ವಿಶ್ವಾಮಿತ್ರನಿಗೆ ಹೇಳಿದರು. ವಿಶ್ವಾಮಿತ್ರನು ಈ ಅಸ್ತ್ರಗಳನ್ನು ಶ್ರೀರಾಮನಿಗೆ ಕೊಟ್ಟನು.

### ೩೨. ಕೇಕಯ

ಈತನು ಕೇಕಯ ದೇಶದ ರಾಜನಾಗಿದ್ದನು. ಈತನಿಗೆ 'ಅಶ್ವಪತಿ' ಎಂಬುದು ಅನ್ಯ ಹೆಸರು (ಉಪನಾಮ) ಎಂದೆನಿಸುತ್ತದೆ. ಇವನಿಗೆ ಯುಧಾಜಿತ ಮತ್ತು ಕೈಕೇಯಿ ಎಂಬ ಇಬ್ಬರು ಮಕ್ಕಳಿದ್ದರು. ಇವನ ಹೆಂಡತಿಯು ಬಲು ಧೈರ್ಯವಂತೆ ; ಯಾರ ಪರಿವೆಯೂ ಇವಳಿಗಿರಲಿಲ್ಲ.

### ೩೩. ಕೇಶಿನಿ

ಇವಳು ವಿದರ್ಭದೇಶದ ರಾಜಕನ್ಯೆ ಮತ್ತು ಸಗರನ ಹಿರಿಯ ಹೆಂಡತಿ. ಇವಳ ಮಗನ ಹೆಸರು ಅಸಮಂಜ.

### ೩೪. ಕೇಸರಿ

ಈತನು ಒಬ್ಬ ವಾನರಪ್ರಮುಖನಾಗಿದ್ದು ಅಂಜನಿಯ ಪತಿಯಾಗಿದ್ದನು. ಸುಮೇರು ಎಂಬ ಪರ್ವತದ ಮೇಲೆ ಇವನ ವಾಸ. ಋಷಿಗಳ ಆಜ್ಞೆಯ ಮೇರೆಗೆ ಇವನು ಋಷಿಗಳಿಗೆ ಕಾಟ ಕೊಡುವ ಶಂಬಸಾದನ ಎಂಬ ಅಸುರನನ್ನು ಕೊಂದುಬಿಟ್ಟನು. ಇದರಿಂದ ಸಂತೋಷಗೊಂಡ ಋಷಿಗಳು 'ನಿನಗೆ ಸುಸ್ವಭಾವದವನಾದ, ಭಗವದ್ಭಕ್ತನೆನಿಸುವ, ಬಲಶಾಲಿಯಾದ ಒಬ್ಬ ಮಗನು ಹುಟ್ಟುವನು' ಎಂದು ಆಶೀರ್ವದಿಸಿದರು. ಈ ಪುತ್ರನೇ ಹನುಮಾನನು. ಇಂದ್ರಜಿತು ಇವನ ಮೇಲೆ ಎರಗಿಹೋಗಿ ಕೆಡವಿದನು. ಯುದ್ಧವು ಕೊನೆಗೊಂಡನಂತರ ಶ್ರೀರಾಮನು ಇವನನ್ನು ಸತ್ಕರಿಸಿದನು.

### ೩೫. ಕೈಕಸಿ

ಈಕೆ ಸುಮಾಲಿ ರಾಕ್ಷಸನ ಕನ್ಯೆ ಮತ್ತು ವಿಶ್ರವಸನ ಹೆಂಡತಿ. ಇವಳ ಮದುವೆಯ ಅನೇಕ ಪ್ರಸ್ತಾವಗಳು

ಬಂದರೂ ಸುಮಾಲಿಯು ಒಪ್ಪುತ್ತಿರಲಿಲ್ಲ. ಹೀಗಾಗಿ ಈಕೆಯ ಮದುವೆಯ ಬೇಡಿಕೆಗಳೇ ಬಾರದಂತಾದವು ; ಅವಳ ಮದುವೆಯ ಪ್ರಾಯವು ಬೆಳೆಯುತ್ತಲೇ ಹೋಯಿತು. ಆಗ ಸುಮಾಲಿಯು ಕೈಕಸಿಗೆ 'ನೀನು ವಿಶ್ರವನನ್ನು ಮದುವೆಯಾಗು !' ಎಂದು ಹೇಳಿದನು. ಹೊತ್ತು ಸಮಯವನ್ನು ಯೋಚಿಸದೆ ಕೈಕಸಿಯು ಪಿತನ ಹೇಳಿಕೆಯಂತೆ ಕಟ್ಟ ಗಳಿಗೆಯ ಸಂಜೆಯಲ್ಲಿ ವಿಶ್ರವನ ಮುಂದೆ ಹೋಗಿ ನಿಂತಳು. ಅಗ್ನಿಹೋತ್ರವು ನಡೆದ ಆ ಗಳಿಗೆಯು ಕ್ರೂರವಾಗಿತ್ತು. ಮುನಿಯು ಅವಳ ಬರುವಿಕೆಯ ಇಂಗಿತಾರ್ಥವನ್ನು ಅರಿತುಕೊಂಡನು. 'ನೀನು ಬಂದ ಸಮಯವು ಕ್ರೂರವಿರುವುದರಿಂದ ನಿನಗೆ ಕ್ರೂರಿಗಳೂ ಭಯಂಕರರೂ ಆದ ಮಕ್ಕಳಾಗುವರು !' ಎಂದು ವಿಶ್ರವನು ಅವಳಿಗೆ ಹೇಳಿದನು. ಅಂಥ ಮಕ್ಕಳಾಗಬಾರದೆಂದು ಕೈಕಸಿಯು ಪ್ರಾರ್ಥಿಸಿಕೊಂಡಳು. ಆಗ ವಿಶ್ರವನು 'ಕೊನೆಯ ಪುತ್ರನು ನಮ್ಮ ಕುಲಕ್ಕೆ ತಕ್ಕಂತೆ ಧರ್ಮಾತ್ಮನಾಗಲಿರುವನು' ಎಂದು ನುಡಿದನು. ಅವನೇ ವಿಭೀಷಣ. ಇನ್ನುಳಿದ ರಾವಣ, ಕುಂಭಕರ್ಣ, ಶೂರ್ಪನಖಿ ಇವರು ಮೊದಲ ಮೂರು ಮಕ್ಕಳು. ತಂದೆಯನ್ನು ಭೇಟಿಮಾಡಲು ಪುಷ್ಪಕವಿಮಾನದಲ್ಲಿ ಆಗಮಿಸಿದ ವೈಶ್ರವಣನ ತೇಜಸ್ಸನ್ನು ಕಂಡು 'ಈತನಂತೆ ಆಗು !' ಎಂದು ದಶಗ್ರೀವನಿಗೆ ಉಪದೇಶ ಮಾಡಿದಳು. 'ಕೇಶಿನಿ' ಎಂಬ ಹೆಸರೂ ಇವಳದೇ ಆಗಿರಬೇಕು.

## ೩೭. ಕೈಕೇಯಿ

ಈಕೆ ಕೇಕಯ ದೇಶದ ಅಶ್ವಪತಿರಾಜನ ಕನ್ಯೆ ಮತ್ತು ದಶರಥನ ಪತ್ನಿ. ದಶರಥ ಮತ್ತು ಕೈಕೇಯಿ ಇವರ ಪ್ರಾಯದಲ್ಲಿ ಬಹಳ ಅಂತರವಿತ್ತು. ಕೈಕೇಯಿ-ದಶರಥರ ಮದುವೆಯ ಸಂದರ್ಭದಲ್ಲಿ ಇವಳ ತಂದೆಯು ಕೈಕೇಯಿಗೆ ಹುಟ್ಟುವ ಮಗನಿಗೆ ರಾಜ್ಯವನ್ನು ಕೊಡಬೇಕೆಂಬ ಶರತ್ತನ್ನು ದಶರಥನಿಗೆ ಹಾಕಿದ್ದನು. ದಶರಥನು ಈ ಶರತ್ತನ್ನು ಒಪ್ಪಿಕೊಂಡಿದ್ದನು. ದಶರಥನು ದೇವತೆಗಳ ಪರವಾಗಿ ಕಾಯುತ್ತಿದ್ದಾಗ, ಅವನ ರಥದ ಗಾಲಿಯ ಅಚ್ಚು ಮುರಿದುಹೋಯಿತು. ಆಗ ಅದಕ್ಕೆ ಪ್ರತಿಯಾಗಿ ಕೈಕೇಯಿಯು ತನ್ನ ಕೈಯನ್ನೇ ಬಳಸಿ ದಶರಥನನ್ನು ಕಾಪಾಡಲು ಹೆಣಗಿ ಯಶಸ್ವಿಯಾದಳು. ಸಂತುಷ್ಟನಾದ ದಶರಥನು ಕೈಕೇಯಿಗೆ ಎರಡು ವರಗಳನ್ನು ಕೊಡಲಿಚ್ಛಿಸಿದನು. ಕೈಕೇಯಿಯು ಆ ವರಗಳನ್ನು ಆಗಲೇ ಬೇಡಿಕೊಳ್ಳದೆ ಸಮಯ ಒದಗಿದಾಗ ಕೇಳಿಕೊಳ್ಳುವುದಾಗಿ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದಳು. ದಶರಥನು ಅದಕ್ಕೆ ಒಪ್ಪಿಕೊಂಡನು. ಶ್ರೀರಾಮನಿಗೆ ಯೌವರಾಜ್ಯಾಭಿಷೇಕವಾಗಲಿದೆ ಎಂಬ ವಾರ್ತೆಯು ಇವಳಿಗೆ ತಿಳಿದು ಬಂದಾಗ, ದಾಸಿಯಾದ ಮಂಥರೆಯು ಇವಳಲ್ಲಿ ಮತ್ಸರಭಾವವನ್ನು ಕೆರಳಿಸಿದಳು. ಕೈಕೇಯಿಯು ಭರತನಿಗೆ ಯೌವರಾಜ್ಯಾಭಿಷೇಕ ಮತ್ತು ಶ್ರೀರಾಮನಿಗೆ ಹದಿನಾಲ್ಕು ವರ್ಷದ ವನವಾಸ ಎಂಬ ಎರಡು ವರಗಳನ್ನು ದಶರಥನಿಂದ ಪಡೆಯುವಂತೆ ಮಂಥರೆಯು ಅವಳನ್ನು ಪ್ರಚೋದಿಸಿದಳು.

ಶ್ರೀರಾಮನು ವನವಾಸಕ್ಕೆ ಹೋದನಂತರ ಭರತನು ಇವಳನ್ನು ಭೇಟಿಯಾದಾಗ ಕೈಕೇಯಿಯು ಬಲು ಆನಂದದಿಂದ ಅವನಿಗೆ ರಾಜ್ಯಾಭಿಷೇಕವಾಗಲಿದೆ ಎಂಬ ವಾರ್ತೆಯನ್ನು ತಿಳಿಸಿದಳು. ಅಷ್ಟೇ ಅಲ್ಲದೆ, ಮೊದಲು ದಶರಥರಾಜನ ಉತ್ತರಕ್ರಿಯೆಯನ್ನು ಪೂರೈಸಿ ಅನಂತರ ರಾಜ್ಯಾಭಿಷೇಕವನ್ನು ಹೊಂದು ! ಎಂದು ದುಗುಡದಿಂದ ಆಜ್ಞೆಮಾಡಿದಳು. ಇದನ್ನು ಕೇಳಿ ಭರತನಿಗೆ ದುಃಖವಾಯಿತು. ಭರತನು ಕಟುವಾದ ಮಾತುಗಳಲ್ಲಿ ಕೈಕೇಯಿಯನ್ನು ತೆಗಳಿದನು. ಕೈಕೇಯಿಯು ಆತ್ಮಕಾಮಿ, ಸದಾಚಂಡಿ, ಕ್ರೋಧವುಳ್ಳವಳು, ತಾನೊಬ್ಬಳೇ ಜಾಣೆ ಎಂದು ತಿಳಿದುಕೊಂಡವಳು, ಎಂದು ಮುಂತಾಗಿ ಭರತನು ಜರೆದಿದ್ದಾನೆ. ವನವಾಸದಲ್ಲಿ ಭರದ್ವಾಜರ ಆಶ್ರಮದಲ್ಲಿದ್ದಾಗ ಖಿನ್ನನಾದ ಶ್ರೀರಾಮನು, 'ನೀನು ಅಯೋಧ್ಯೆಗೆ ಮರಳಿ ಮಾತೆಯರನ್ನು ರಕ್ಷಿಸು !' ಎಂದು ಲಕ್ಷ್ಮಣನಿಗೆ ಆಜ್ಞಾಪಿಸಿದನು. ಮಾತ್ರವಲ್ಲದೆ, 'ಐಶ್ವರ್ಯದ ಮದವೇರಿದ ಕೈಕೇಯಿಯು, ಕೌಸಲ್ಯೆ ಮತ್ತು ಸುಮಿತ್ರೆಯರನ್ನು ಪೀಡಿಸಬಹುದು ; ಕ್ಷುದ್ರಬುದ್ಧಿಯವಳಾದ್ದರಿಂದ ದ್ವೇಷದಿಂದ ಅವರಿಗೆ ಅನ್ಯಾಯ ಮಾಡಬಹುದು. ಒಂದುವೇಳೆ ಅವರಿಗೆ ವಿಷವನ್ನೂ ಹಾಕಬಹುದು '' ಎಂಬ ತನಗಿದ್ದ ಭೀತಿಯನ್ನು ಲಕ್ಷ್ಮಣನೆದುರು ವ್ಯಕ್ತಪಡಿಸಿದನು. ಕೌಸಲ್ಯೆಯಲ್ಲೂ ಸಹ ಕೈಕೇಯಿಯ ಬಗ್ಗೆ ಇದೇ ಬಗೆಯ ಭೀತಿಯಿತ್ತು. ದಶರಥನು ತನ್ನ ಮನಸ್ಸಿನ ವ್ಯಥೆಯನ್ನು ಈ ರೀತಿ ವ್ಯಕ್ತಗೊಳಿಸಿದ್ದಾನೆ. 'ಬೂದಿ ಮುಚ್ಚಿದ ಕೆಂಡದಂತೆ ಇದ್ದ ಈ ಸ್ತ್ರೀಯ ಕಪಟನಾಟಕಕ್ಕೆ ಮೋಸಹೋದೆ. ನನ್ನನ್ನು ಮುಟ್ಟಬೇಡ ! ವಿಧವೆಯಾಗಿ ರಾಜ್ಯವನ್ನಾಳು !' ಸುಮಂತ್ರನು

ಪತಿಘಾತಿನಿ, ಕುಲಘಾತಿನಿ ಎಂಬ ವಿಶೇಷಣಗಳಿಂದ ಆಕೆಯನ್ನು ಸಂಬೋಧಿಸಿದ್ದಾನೆ. ಶತ್ರುಘ್ನನು ಈಕೆಯನ್ನು ಅತಿ ತೀಕ್ಷ್ಣ ಮಾತುಗಳಿಂದ ತೆಗಳಿದ್ದಾನೆ. ಇವಳ ಬಗ್ಗೆ ಈ ರೀತಿ ನುಡಿದನು : 'ಇವಳಿಂದ ಶ್ರೀರಾಮ-ಲಕ್ಷ್ಮಣರ ಆಯುಸ್ಸು ಕಡಿಮೆಯಾಯಿತು. ದಶರಥರಾಜನು ಪುತ್ರವಿಹೀನನಾಗಿ ಸ್ವರ್ಗವಾಸಿಯಾದನು. ಕೋಪ, ಅವಿವೇಕ, ಗರ್ವ, ಐಶ್ವರ್ಯದ ಲೋಭ, ಇವನ್ನೆಲ್ಲ ಹೊಂದಿದ ಇವಳು ಆರ್ಯಳಿದ್ದರೂ ಅನಾರ್ಯಳಾಗಿದ್ದಾಳೆ. ದುರ್ದೈವದಿಂದ ಇಂಥವಳು ನನ್ನ ಮಾತೆಯಾಗಿದ್ದಾಳೆ !'

## ೩೭. ಕೌಸಲ್ಯೆ

ಕೌಸಲ್ಯೆ ಕೋಸಲ ದೇಶದ ಭಾನುಮಾನನೆಂಬ ರಾಜನ ಪುತ್ರಿ ; ದಶರಥರಾಜನ ಪಟ್ಟದ ರಾಣಿ. ತವರಿನಿಂದ ಇವಳಿಗೆ ಒಂದು ಸಹಸ್ರ ಗ್ರಾಮಗಳು ಸ್ತ್ರೀಧನವಾಗಿ ದೊರೆತಿದ್ದವು. ದಶರಥನು ಪಾಯಸದ ಅರ್ಧವನ್ನು ಇವಳಿಗೆ ಕೊಟ್ಟನು. ತನ್ನ ಪುತ್ರನಾದ ಶ್ರೀರಾಮನಿಗೆ ಯೌವರಾಜ್ಯಾಭಿಷೇಕವಾಗಲಿದೆ ಎಂಬುದನ್ನು ಕೇಳಿ ಅವಳಿಗೆ ಎಷ್ಟು ಸಂತೋಷವಾಯಿತೋ, ಶ್ರೀರಾಮನು ವನವಾಸಕ್ಕೆ ಹೋಗಬೇಕಾಗಿದೆ ಎಂಬುದನ್ನು ತಿಳಿದಾಗ ಕೌಸಲ್ಯೆಗೆ ಅಷ್ಟೇ ದುಃಖ ಉಂಟಾಯಿತು. ಇವಳಿಗೆ ಪತಿಯಿಂದ ಹೆಚ್ಚಾಗಿ ಸುಖವು ಲಭಿಸಲಿಲ್ಲ. ಹೀಗಿರುವಾಗ ತನಗೆ ಪುತ್ರಸುಖವೂ ಇಲ್ಲದಾಗುತ್ತಿದೆ ಎಂಬ ಕಲ್ಪನೆಯನ್ನು ಅವಳಿಂದ ಸಹಿಸಲಿಕ್ಕಾಗಲಿಲ್ಲ. ಶ್ರೀರಾಮನು ವನವಾಸಕ್ಕೆ ಹೋಗಬಾರದು, ಹಾಗೆ ಹೋಗುವುದಾದರೆ ತನ್ನನ್ನೂ ಜೊತೆಗೆ ಕರೆದುಕೊಂಡೇ ಹೋಗಬೇಕೆಂದು ಅವಳು ಶ್ರೀರಾಮನಿಗೆ ಪರಿಪರಿಯಾಗಿ ಹೇಳಿ, ಇಲ್ಲದಿದ್ದರೆ ಪ್ರಾಣತ್ಯಾಗಮಾಡುವ ತನ್ನ ನಿರ್ಧಾರವನ್ನು ವ್ಯಕ್ತಪಡಿಸಿದಳು. ಆಗ ಶ್ರೀರಾಮನು ಅವಳನ್ನು ಸಂತೈಸಿ ಅಯೋಧ್ಯೆಯಲ್ಲಿಯೇ ಇರಲು ಹೇಳಿದನು. ಕೈಕೇಯಿಯು ಇವಳಿಗೆ ಯಾವಾಗಲೂ ಕೊಂಕುಮಾತುಗಳನ್ನಾಡುತ್ತಿದ್ದಳು; ಆದರೆ ಕೌಸಲ್ಯೆಯು ಮಾತ್ರ ಕೈಕೇಯಿಯೊಡನೆ ಅಕ್ಕನಂತೆಯೇ ವರ್ತಿಸುತ್ತಿದ್ದಳು, ಭರತನ ಬಗ್ಗೆ ಇವಳಿಗೆ ಸಂದೇಹವುಂಟಾಗಿತ್ತಾದರೂ ಅವನ ವರ್ತನೆಯಿಂದ ಅದು ದೂರವಾಯಿತು. ತಾನು ಅಯೋಧ್ಯೆಯಲ್ಲಿ ಇರದ ಕಾಲದಲ್ಲಿ ಕೌಸಲ್ಯೆಗೆ ತಾಪತ್ರಯವಾಗಬಹುದು ಎಂಬುದರ ಕಲ್ಪನೆ ಶ್ರೀರಾಮನಿಗಿತ್ತು. ಲಕ್ಷ್ಮಣನು ಪಿತನನ್ನು ನಿಗ್ರಹಿಸಿ ರಾಜ್ಯವನ್ನು ಕಬಳಿಸುವ ಸಲಹೆಯನ್ನು ಅವನಿಗೆ ಕೊಟ್ಟನು ; ಆಗ ಪುತ್ರವಾತ್ಸಲ್ಯದಿಂದ ಅಂಧಳಾದ ಕೌಸಲ್ಯೆಯು ಅದಕ್ಕೆ ಸಮ್ಮತಿಸಿದಳು. ಶ್ರೀರಾಮನು ವನಕ್ಕೆ ತೆರಳಿದನಂತರ ಈಕೆಯು ದಶರಥನಿಗೆ ಚುಚ್ಚುಮಾತನಾಡಹತ್ತಿದಳು. ಇದರಿಂದಾಗಿ ತಾನು ಈ ರೀತಿ ನುಡಿಯುವುದು ತಪ್ಪೆಂದು ಆಕೆಗೆ ಎನಿಸಿತು. ಅತಿಯಾದ ಪುತ್ರಶೋಕದಿಂದ ತಾನು ಈ ರೀತಿ ನುಡಿದೆನೆಂದು ಕರಗಳನ್ನು ಜೋಡಿಸಿ ತಪ್ಪೊಪ್ಪಿಕೊಂಡಳು. ಇವಳು ಮೃದುಸ್ವಭಾವದವಳು ; ತುಂಬಾ ಖಿನ್ನಳಾದ ಅವಸ್ಥೆಯಲ್ಲಿದ್ದವಳು ; ಉದಾಸೀನಭಾವ ತಳೆಯಬೇಕಾಗಿಬಂದವಳು.

## ೩೮. ಗಾಲವ

ಗಾಲವ ವಿಶ್ವಾಮಿತ್ರನ ಶಿಷ್ಯ ; ಗುರುಸೇವೆಯನ್ನು ನಿಷ್ಠೆಯಿಂದ ಮಾಡಿ ಗುರುಕೃಪೆಯನ್ನು ಸಂಪಾದಿಸಿದ್ದನು. ಈತನ ತೀವ್ರಬೇಡಿಕೆಯಂತೆ ವಿಶ್ವಾಮಿತ್ರನು ಇವನಿಗೆ ಎಂಟುನೂರು ಶ್ಯಾಮಕರ್ಣಗಳಿದ್ದ ಅಶ್ವಗಳನ್ನು ಗುರುದಕ್ಷಿಣೆಯಾಗಿ ತರಲು ಹೇಳಿದನು. ಇಷ್ಟೊಂದು ಗುರುದಕ್ಷಿಣೆಯನ್ನು ಕೊಡಲು ಆತನಿಗೆ ಸಾಧ್ಯವಿರಲಿಲ್ಲ. ಆಗ ಗಾಲವನು ವಿಷ್ಣುವನ್ನು ಆರಾಧಿಸಿದನು. ಈತನ ಭಕ್ತಿಭಾವಕ್ಕೆ ಮೆಚ್ಚಿ ವಿಷ್ಣುವು ಗರುಡನಿಗೆ ಗಾಲವನ ಇಚ್ಛೆಯನ್ನು ನಡೆಸಿಕೊಡಲು ಹೇಳಿದನು. ಗರುಡನು ಗಾಲವನನ್ನು ಯಯಾತಿಯ ಬಳಿಗೆ ಕರೆದುಕೊಂಡು ಹೋದನು. ಈ ಎಂಟುನೂರು ಶ್ಯಾಮಕರ್ಣ ಕುದುರೆಗಳನ್ನು ಕೊಡುವುದು ಯಯಾತಿಗೂ ಸಾಧ್ಯವಿರಲಿಲ್ಲ. ಹೀಗಿದ್ದರೂ ಯಯಾತಿಯು ತನ್ನ ಮಗಳಾದ ಮಾಧವಿಯನ್ನು, ಅವಳಿಂದ ಆಗುವ ಪುತ್ರರ ಮೇಲೆ ಬಾಧ್ಯತೆಯನ್ನಿಟ್ಟುಕೊಂಡು ಗಾಲವನಿಗೆ ಒಪ್ಪಿಸಿದನು. ಮಾಧವಿಯ ಮೂಲಕ ಗಾಲವನು ತನ್ನ ಗುರುದಕ್ಷಿಣೆಯನ್ನು ಪೂರ್ತಿಗೊಳಿಸಿದನು.

ವಿಶ್ವಾಮಿತ್ರನ ಒಬ್ಬ ಪುತ್ರನ ಹೆಸರು ಸಹ ಗಾಲವನೆಂದಿದೆ. ಬರಗಾಲವು ಬಂದೊದಗಿದಾಗ ವಿಶ್ವಾಮಿತ್ರನು ಹೆಂಡತಿಮಕ್ಕಳ ಹೊಟ್ಟೆಯ ಪಾಡನ್ನು ಗಮನಿಸದೆ, ತಪಸ್ಸಿಗಾಗಿ ಹೊರಟುಹೋದನು. ವಿಶ್ವಾಮಿತ್ರನ

ಹೆಂಡತಿಯು ಅತ್ಯಂತ ಭೀಕರ ಪರಿಸ್ಥಿತಿಯನ್ನೆದುರಿಸಿ ಮಕ್ಕಳ ರಕ್ಷಣೆಯ ಯತ್ನಮಾಡಿದಳು. ಉದರ ನಿರ್ವಹಣೆಗೆ ಏನೂ ಸಿಗದಿದ್ದುದರಿಂದ ಮಕ್ಕಳು ಹಸಿವೆಯಿಂದ ಕಸಿವಿಸಿಗೊಂಡರು. ಆಗ ಅವಳು ಈ ಮಕ್ಕಳನ್ನು ಮಾರಲು ಯೋಚಿಸಿದಳು. ಸತ್ಯವ್ರತನು ಇವಳ ಕುಶಲವನ್ನು ವಿಚಾರಿಸಿಕೊಂಡು ವಿಶ್ವಾಮಿತ್ರನು ಮರಳಿ ಬರುವವರೆಗೆ ತಾನು ಇವರ ನಿರ್ವಹಣೆಯನ್ನು ತುಸುಮಟ್ಟಿಗೆ ವಹಿಸಿಕೊಂಡನು.

## ೩೯. ಗೌತಮ

ಇವನು ಬೃಹಸ್ಪತಿಯ ಶಾಪದಿಂದ ಹುಟ್ಟುಕುರುಡನಾಗಿದ್ದ, ಅಂಗೀರಸ ಕುಲದಲ್ಲಿ ಜನಿಸಿದ, ದೀರ್ಘತಮಾ ಮತ್ತು ಪ್ರದ್ವೇಷಿ ಇವರ ಮಗನಾಗಿದ್ದನು. ಇವನು ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬನು. ಬ್ರಹ್ಮದೇವನ ಮಾನಸಪುತ್ರಿಯಾದ ಅಹಲ್ಯೆಯು ಗೌತಮನ ಪತ್ನಿಯಾಗಿದ್ದಳು. ಇವಳಿಂದ ಹುಟ್ಟಿದ ಮಗನಾದ ಶತಾನಂದನು ಜನಕರಾಜನ ಪುರೋಹಿತನಾಗಿದ್ದನು. ಅವನ ಶಿಷ್ಯನಾದ ಉತ್ತಂಕನನ್ನು ತನ್ನ ಅಳಿಯನನ್ನಾಗಿ ಮಾಡಿಕೊಂಡನು. ಮಿಥಿಲಾಪಟ್ಟಣದ ಸಮೀಪದ ವನದಲ್ಲಿ ಪಾರಿಯಾತ್ರ ಪರ್ವತದ ಹತ್ತಿರ ಗೌತಮನ ಆಶ್ರಮವಿತ್ತು. ಈತನು ಅರವತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಆಚರಿಸಿದನೆಂದು ಹೇಳುತ್ತಾರೆ. ಶಂಕರನು ಈತನ ತಪಸ್ಸಿನಿಂದ ಪ್ರಸನ್ನನಾಗಿ ಇವನಿಗೆ ಗಂಗೆಯನ್ನು ಅರ್ಪಿಸಿದನು. ಅವಳೇ ಗೌತಮಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಕ್ಷಾಮ ಬಂದಾಗ ಇವನು ಋಷಿಗಳಿಗೆ ಊಟ ಹಾಕಿ ಅವರನ್ನು ಬದುಕಿಸಿದನು. ಇವನೊಬ್ಬ ಧರ್ಮಶಾಸ್ತ್ರಕಾರ. ಈತನು ಬರೆದ 'ಗೌತಮಸ್ಮೃತಿ' ಎಂಬ ಗ್ರಂಥವು ಪ್ರಸಿದ್ಧವಿದೆ. ಇದಲ್ಲದೆ, ಈತನು ಆಸ್ತಿಕಸೂತ್ರ, ಪಿತೃಮೇಧಸೂತ್ರ, ದಾನಚಂದ್ರಿಕಾ, ಗೌತಮೀಶಿಕ್ಷಾ, ನ್ಯಾಯಸೂತ್ರ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ.

## ೪೦. ಗ್ರಾಮಣಿ, ದೇವವತಿ

ಋಷಭಪರ್ವತದ ಗಂಧದ ವನವನ್ನು ರಕ್ಷಿಸಲು ಐವರು ಗಂಧರ್ವರಿದ್ದರು. ದೇವವತಿಯು ಅವರಲ್ಲಿಯ ಒಬ್ಬ ಗಂಧರ್ವನ ಮಗಳು. ಇವಳು ಸುಕೇಶ ರಾಕ್ಷಸನ ಪತ್ನಿಯಾಗಿದ್ದಳು. ಈಕೆಗೆ ಮಾಲ್ಯವಾನ, ಸುಮಾಲಿ ಮತ್ತು ಮಾಲಿ ಎಂಬ ಮಕ್ಕಳಿದ್ದರು.

## ೪೧. ಘೃತಾಚಿ

ಕಶ್ಯಪನ ಪತ್ನಿಯ ಹೆಸರು ಪ್ರಾಧಾ ಎಂದಿತ್ತು. ಇವಳಿಗೆ ಹುಟ್ಟಿದ ಅಪ್ಸರೆಯರಲ್ಲಿ ಘೃತಾಚಿಯೂ ಒಬ್ಬಳು. ಘೃತಾಚಿಯನ್ನು ಕಂಡ ಕ್ಷಣವೇ ಭರದ್ವಾಜನ ವೀರ್ಯಸ್ಖಲನವಾಯಿತು. ಈ ವೀರ್ಯದಿಂದಲೇ ದ್ರೋಣಾಚಾರ್ಯನು ಹುಟ್ಟಿದನು. ಇವಳಿಗೆ ವ್ಯಾಸನಿಂದ ಶುಕನು ಜನಿಸಿದನು. ಪ್ರಯತಿ ಋಷಿಯಿಂದ ಇವಳಿಗೆ 'ರುರು' ಎಂಬ ಪುತ್ರನಾದನು. ಇವಳಿಗೆ ಒಟ್ಟು ಹತ್ತು ಗಂಡುಮಕ್ಕಳಾದರು. ವಿಶ್ವಾಮಿತ್ರನು ಇವಳಲ್ಲಿ ಆಸಕ್ತನಾಗಿದ್ದನು. ಘೃತಾಚಿಯ ಸಹವಾಸದಲ್ಲಿ ಕಳೆದ ಹತ್ತು ವರ್ಷಗಳ ಕಾಲವೂ ಒಂದು ದಿನದಂತೆ ಮಾತ್ರ ಭಾಸವಾಯಿತೆಂದು ವಿಶ್ವಾಮಿತ್ರನಿಗೆನಿಸಿತೆಂಬ ಉಲ್ಲೇಖವು ಕಿಷ್ಕಿಂಧಾಕಾಂಡ(೩೫/೭)ದಲ್ಲಿದೆ.

ವಿಶ್ವಕರ್ಮನೊಡನೆ ಇವಳ ಸಂಪರ್ಕ ಬಂದಾಗ ಅವನು 'ನೀನು ಪೃಥ್ವಿಯಲ್ಲಿ ಶೂದ್ರರ ಮನೆಯಲ್ಲಿ ಹುಟ್ಟುವೆ !' ಎಂಬ ಶಾಪವನ್ನಿತ್ತನು. ಆ ಪ್ರಕಾರ ಅವಳು ಗೋಪನ ಮನೆಯಲ್ಲಿ ಜನ್ಮಹೊಂದಿದಳು. ಪೂರ್ವಜನ್ಮದ ಸ್ಮರಣೆ ಇವಳಿಗೆ ಇದ್ದುದರಿಂದ ಇವಳು ವಿವಾಹವಾಗಲಿಲ್ಲ. ವಿಶ್ವಕರ್ಮನು ಬ್ರಹ್ಮದೇವನ ಕೃಪೆಯಿಂದ ಬ್ರಾಹ್ಮಣರ ಮನೆಯಲ್ಲಿ ಜನಿಸಿದನು. ವಿಶ್ವಕರ್ಮ ಮತ್ತು ಘೃತಾಚಿ ಇವರ ಭೇಟಿಯು ಗಂಗಾನದೀತೀರದಲ್ಲಿ ಪ್ರಯಾಗದಲ್ಲಿ ಆಯಿತು. ಇವರಿಬ್ಬರಿಗೂ ಪೂರ್ವಜನ್ಮದ ಸ್ಮರಣೆ ಇತ್ತು. ಇವರಿಗೆ ತೋಟಗಾರ, ಬಳೆಗಾರ, ಶಿಂಪಿಗ, ಕುಂಬಾರ, ಅಕ್ಕಸಾಲಿಗ, ಕಲ್ಲುಕುಟಿಗ, ಬಡಗಿ ಮೊದಲಾದವರು ಹುಟ್ಟಿದರೆಂದು ವೈವಸ್ವತಪುರಾಣದಲ್ಲಿ ಉಲ್ಲೇಖವಿದೆ.

### ೪೨. ಚೂಲಿ

ಇವನೊಬ್ಬ ಬ್ರಹ್ಮರ್ಷಿ. ಚೂಲಿ ತಪಸ್ಸನ್ನಾಚರಿಸುತ್ತಿದ್ದ ಕಾಲದಲ್ಲಿ ಸೋಮದಾ ಎಂಬ ಗಂಧರ್ವಿ ಉತ್ತಮವಾಗಿ ಅವನ ಸೇವೆಮಾಡಿದಳು. ಚೂಲಿಯು ಸಂತೋಷಗೊಂಡು ಸೋಮದೆಗೆ ಒಬ್ಬ ಮಾನಸಪುತ್ರನನ್ನು ಕೊಟ್ಟನು. ಆತನ ಹೆಸರು ಬ್ರಹ್ಮದತ್ತನೆಂದಿತ್ತು.

### ೪೩. ಚ್ಯವನ – ಭಾರ್ಗವ

ಭೃಗು ಋಷಿಯ ಪತ್ನಿಯ ಹೆಸರು ಪುಲೋಮೆ ಎಂದಿತ್ತು.

ಭೃಗುವಿನ ವೀರ್ಯದಿಂದ ಅವಳ ಉದರದಲ್ಲಿ ಗರ್ಭಸಂಭವವಾಯಿತು. ಋಷಿಯು ಮಿಂದುಬರಲು ಜಲಾಶಯಕ್ಕೆ ಹೋದಾಗ ಪುಲೋಮನೆಂಬ ರಾಕ್ಷಸನು ಈತನ ಆಶ್ರಮಕ್ಕೆ ಬಂದನು. ಪುಲೋಮೆಯ ಲಾವಣ್ಯದಿಂದ ಮೋಹಿತನಾಗಿ ಅವನು ಆಕೆಯನ್ನು ಅಪಹರಿಸಿದನು. ರಾಕ್ಷಸನ ಭೀತಿಯಿಂದ ಅವಳು ದಾರಿಯಲ್ಲಿಯೇ ಪ್ರಸೂತಳಾದಳು. ಆ ಮಗುವಿನ ಹೆಸರು ಚ್ಯವನ. ಈ ಚ್ಯವನನ ತೇಜಸ್ಸಿನಿಂದ ಆ ರಾಕ್ಷಸನು ಸುಟ್ಟುಹೋದನು. ಪುಲೋಮೆಯು ಮಗುವಿನ ಸಹಿತ ಆಶ್ರಮಕ್ಕೆ ಹಿಂತಿರುಗಿದಳು. ಚ್ಯವನ ವೇದಪಾರಂಗತನಾಗಿದ್ದನು. ಈತನು ಉಗ್ರತಪಸ್ಸನ್ನಾಚರಿಸಿದನು. ಈ ಚ್ಯವನನ ದೇಹದ ಮೇಲೆ ಹುತ್ತ ಬೆಳೆದರೂ ತಪಸ್ಸಿನಲ್ಲಿದ್ದ ಕಾರಣ ಆತನಿಗೆ ಅದರ ಪರಿವೆಯೇ ಇರಲಿಲ್ಲ. ಶರ್ಯಾತಿ ಎಂಬ ವೈವಸ್ವತಮನುವಿನ ಪುತ್ರನು ತನ್ನ ಪರಿವಾರದೊಂದಿಗೆ ಇದೇ ಕಾಡಿಗೆ ಕ್ರೀಡೆಗಾಗಿ ಬಂದು ತಲುಪಿದನು. ಶರ್ಯಾತಿಯ ಮಗಳಾದ ಸುಕನ್ಯೆಯು ತನ್ನ ಸಖಿಯರೊಂದಿಗೆ ಆ ಹುತ್ತದ ಸಮೀಪಕ್ಕೆ ಬಂದಳು. ಆ ಹುತ್ತದೊಳಗೆ ಏನೋ ಹೊಳೆಯುತ್ತಿರುವ ಹಾಗೆ ಅವಳಿಗೆ ಕಂಡಿತು. ಅದು ಏನಿರಬಹುದೆಂಬ ಉತ್ಸುಕತೆಯಿಂದ ಅವಳು ಹುತ್ತದಲ್ಲಿ ಹೊಳೆಯುವ ಭಾಗಕ್ಕೆ ಮುಳ್ಳುಕಡ್ಡಿಯನ್ನು ತಿವಿಸಿದಳು. ಆ ಮುಳ್ಳಿನಿಂದ ಋಷಿಯ ಕಣ್ಣು ಒಡೆಯಿತು. ಆಗ ಕೋಪಗೊಂಡ ಋಷಿಯು ತಪೋಬಲದಿಂದ ರಾಜನ ಪರಿವಾರದವರೆಲ್ಲರ ಮಲ-ಮೂತ್ರಕ್ರಿಯೆಗಳನ್ನು ನಿರೋಧಿಸಿದನು. ಆಗ ಆ ರಾಜನು ಚ್ಯವನನಿಗೆ ಶರಣಾದನು. ಚ್ಯವನನು 'ಸುಕನ್ಯೆಯೊಡನೆ ನನ್ನ ವಿವಾಹವನ್ನು ನಡೆಯಿಸಿಕೊಡು !' ಎಂದು ಪ್ರಸ್ತಾಪವಿಟ್ಟನು. ಚ್ಯವನನು ವಯೋವೃದ್ಧನಾಗಿದ್ದರೂ ರಾಜನು ತನ್ನ ಮಗಳಾದ ಸುಕನ್ಯೆಯ ಮದುವೆಯನ್ನು ಅವನೊಡನೆ ಮಾಡಿಕೊಟ್ಟನು. ಒಂದು ಸಲ ಸುಕನ್ಯೆಯು ಅಶ್ವಿನೀಕುಮಾರರ ಕಣ್ಣಿಗೆ ಬಿದ್ದಳು. ಅವರು ಸುಕನ್ಯೆಗೆ ತಮ್ಮೊಡನೆ ಬರಲು ಹೇಳಿದರು. ಸುಕನ್ಯೆಯು ತನ್ನ ಪಾತಿವ್ರತ್ಯದಿಂದ ಅವರನ್ನು ಬೆರಗುಗೊಳಿಸಿ, ತನ್ನ ಗಂಡನಿಗೆ ಯೌವನವನ್ನು ದೊರಕಿಸಿಕೊಟ್ಟಳು. ಪ್ರತ್ಯುಪಕಾರಾರ್ಥವಾಗಿ ಚ್ಯವನ ಋಷಿಯು ಮಾವನ ಮನೆಗೆ ಹೋಗಿ ಒಂದು ಯಜ್ಞವನ್ನು ಆಚರಿಸಿ, ಅಶ್ವಿನೀಕುಮಾರರಿಗೆ ಹವಿರ್ಭಾಗವನ್ನು ಅರ್ಪಿಸಿದನು. ಇಂದ್ರನಿಗೆ ಈ ಸಂಗತಿಯು ಹಿಡಿಸಲಿಲ್ಲ. ಇಂದ್ರನು ಚ್ಯವನನನ್ನು ವಧಿಸಬೇಕೆಂದು ವಜ್ರಾಯುಧವನ್ನು ಕೈಗೆತ್ತಿಕೊಂಡಾಗ ಚ್ಯವನನು ಕೂಡಲೇ ಮದ ಎಂಬ ರಾಕ್ಷಸನನ್ನು ನಿರ್ಮಿಸಿದನು. ಇದನ್ನು ಕಂಡು ಇಂದ್ರನು ಭಯಗೊಂಡನು. ಹವಿರ್ಭಾಗವನ್ನು ಅಶ್ವಿನೀಕುಮಾರರಿಗೆ ಅರ್ಪಿಸಲು ಅವನು ಅನಂತರ ವಿರೋಧಿಸಲಿಲ್ಲ. ಚ್ಯವನನು ಪ್ರಯಾಗಕ್ಷೇತ್ರದಲ್ಲಿ ಹಗಲಿರುಳು ನೀರಿನಲ್ಲಿ ನಿಂತು 'ಉದವಾಸ' ಎಂಬ ವ್ರತವನ್ನು ಆಚರಿಸಿದನು. ಆಗ ಬೆಸ್ತರವನೊಬ್ಬ ನೀರಿನಲ್ಲಿ ಎಸೆದ ಬಲೆಗೆ ಮೀನುಗಳ ಜೊತೆಗೆ ಈ ಋಷಿಯೂ ಸಿಕ್ಕಿಕೊಂಡನು. ಇದನ್ನು ಕಂಡ ಬೆಸ್ತರು ಭಯಗೊಂಡು, ನಹುಷರಾಜನ ಬಳಿ ಹೋಗಿ ನಡೆದುದೆಲ್ಲವನ್ನೂ ತಿಳಿಸಿದರು. ನಹುಷರಾಜನು ಚ್ಯವನಋಷಿಯನ್ನು ಷೋಡಶೋಪಚಾರದಿಂದ ಪೂಜಿಸಿ, ಅವನ ಇಷ್ಟಾರ್ಥವನ್ನು ಕೇಳಬಯಸಿದನು. ಆಗ ಚ್ಯವನನು ತನ್ನ ಮೌಲ್ಯದಷ್ಟು ಹಣವನ್ನು ಬೆಸ್ತರಿಗೆ ಕೊಡಲು ತಿಳಿಸಿದನು. ನಹುಷನು ತನ್ನ ಸಮಸ್ತ ರಾಜ್ಯವನ್ನೇ ಅರ್ಪಿಸಿದರೂ ಬೆಲೆ ಪೂರ್ತಿಗೊಳ್ಳಲಿಲ್ಲ. ಆಗ ಒಬ್ಬ ಋಷಿಯು ಅವನಿಗೆ ಗೋಧನವನ್ನು ಅರ್ಪಿಸಲು ಹೇಳಿದನು. ಆಗ ಬೆಲೆ ಸರಿಹೋಯಿತು. ಚ್ಯವನನು ತನ್ನ ಕುಲಕ್ಕೆ ಭಿನ್ನಜಾತಿಯ ದೋಷವು ತಗಲುವದಿದೆ ಎಂಬ ಭವಿಷ್ಯವನ್ನು ಅರಿತಿದ್ದನು. ಅದಕ್ಕೆ ಕುಶಿಕನು ಕಾರಣನಾಗಲಿರುವನು ಎಂಬ ಸಂಗತಿಯೂ ಗೊತ್ತಿತ್ತು. ಆದಕಾರಣ ಕುಶಿಕನನ್ನು ನಾಶಗೊಳಿಸಲೆಂದು ಆತನಿಗೆ ವಿಪರೀತ ಹಿಂಸೆಯನ್ನು ಮಾಡಲಾಯಿತು ; ಆದರೆ ಪ್ರಯೋಜನವಾಗಲಿಲ್ಲ. ಬದಲು ಇವನ ಸೇವೆಯಿಂದ ಸಂತುಷ್ಟನಾಗಿ ಕುಶಿಕನು 'ನಿನ್ನ ಕುಲದಲ್ಲಿ ಬ್ರಾಹ್ಮಣನು ಹುಟ್ಟುವನು' ಎಂಬ

ವರವನ್ನು ನೀಡಿ, ಆತನಿಗೆ ಸ್ವರ್ಗಸುಖದ ದಾರಿ ಮಾಡಿಕೊಟ್ಟನು. ಮನುವಿನ ಕನ್ಯೆಯಾದ ಆರುಷಿಯಿಂದ ಈತನಿಗೆ ಔರ್ವನೆಂಬ ಮಗನಾದನು. ಅವನು ಒಳ್ಳೆಯ ವಾಗ್ಮಿ, ಮಂತ್ರಕಾರನಾಗಿದ್ದನು. ಈತನನ್ನು ಸಪ್ತರ್ಷಿಗಳಲ್ಲಿ ಒಬ್ಬನೆಂದು ಎಣಿಸಲಾಗುತ್ತದೆ.

### ೪೪. ಜಯಾ, ಸುಪ್ರಭಾ

ಇವರಿಬ್ಬರೂ ದಕ್ಷಪ್ರಜಾಪತಿಯ ಕನ್ಯೆಯರಾಗಿದ್ದರು. ರಾಕ್ಷಸರನ್ನು ಸಂಹರಿಸಲೋಸುಗ, ಇಷ್ಟವಿದ್ದಹಾಗೆ ಅದೃಶ್ಯರಾಗಬಲ್ಲ ಐವತ್ತು ಗಂಡುಮಕ್ಕಳು ವರದಿಂದ ಜಯಳಿಗೆ ಹುಟ್ಟಿದರು. ಇವಳು ಕೃಶಾಶ್ವಪ್ರಜಾಪತಿಯ ಮಗಳಾಗಿದ್ದು ಪಾರ್ವತಿಯ ದಾಸಿಯಾಗಿದ್ದಳೆಂಬ ಉಲ್ಲೇಖ ಸ್ಕಂದಪುರಾಣದಲ್ಲಿ ಇದೆ. ಇವಳು ಪಾರ್ವತಿಯ ಗೆಳತಿಯಾಗಿದ್ದಳೆಂದು ವಾಮನಪುರಾಣ ಹಾಗೂ ಪದ್ಮಪುರಾಣಗಳಲ್ಲಿ ಹೇಳಿದೆ. ಸುಪ್ರಭೆಯು ಐವತ್ತು ಶಸ್ತ್ರಾಸ್ತ್ರಗಳನ್ನು ಪಡೆದಳು.

### ೪೫. ಜಾಂಬವಾನ

ಇವನು ಬ್ರಹ್ಮದೇವನ ಆಕಳಿಕೆಯಿಂದ ಹುಟ್ಟಿದನು—ಎಂದು ವಾಲ್ಮೀಕಿಯು ಹೇಳಿದ್ದಾನೆ. ಈತನು ಪ್ರಜಾಪತಿ ಹಾಗೂ ರಕ್ಷಾ ಇವರ ಮಗನೆಂದು ಬ್ರಹ್ಮಾಂಡಪುರಾಣದಲ್ಲಿದೆ. ಜಾಂಬವಾನನ ಪತ್ನಿಯ ಹೆಸರು ವ್ಯಾಘ್ರಿ. ಈತನ ಮಗಳ ಹೆಸರು ಜಾಂಬವತಿ ಎಂದಿತ್ತು. ಈತನು ಋಕ್ಷ ಅಂದರೆ ಕರಡಿಗಳಿಗೆ ರಾಜನಾಗಿದ್ದನು. ಶ್ರೀರಾಮನು ಸೀತೆಯ ಶೋಧವನ್ನು ಮಾಡುವಾಗ ಈತನ ನೆರವನ್ನು ಪಡೆದನು. ರಾವಣನ ವಧೆಯನಂತರ ಈತನು ಶ್ರೀರಾಮನಿಗಾದ ವಿಜಯವನ್ನು ತಮ್ಮಟೆ-ತಾಳ ಬಾರಿಸಿ ಘೋಷಿಸಿದನು. ವೃದ್ಧನಾಗಿದ್ದರೂ ತೊಂಬತ್ತು ಯೋಜನದಷ್ಟು ದೂರ ನೆಗೆಯುವ ಶಕ್ತಿ ಈತನಲ್ಲಿತ್ತು. ಜಾಂಬವಾನನು ಹನುಮಾನನಿಗೆ ಸ್ವಸಾಮರ್ಥ್ಯದ ನೆನಪನ್ನು ಮಾಡಿಕೊಟ್ಟ ಕಾರಣ ಅವನು ಲಂಕೆಯತ್ತ ಲಂಘಿಸಲು ಪ್ರವೃತ್ತನಾದನು. ಇವನು ವಿಭೀಷಣನ ಬಗ್ಗೆ ಎಚ್ಚರಿಕೆ ವಹಿಸಿರಬೇಕೆಂಬ ಸಲಹೆಯನ್ನು ಕೊಟ್ಟಿದ್ದನು. ಈತನು ದೇವಾಸುರರ ಸಂಗ್ರಾಮದಲ್ಲಿ ಇಂದ್ರನಿಗೆ ನೆರವಾಗಿದ್ದನು. ರಾಮ-ರಾವಣರ ಯುದ್ಧದಲ್ಲಿ ಶ್ರೀರಾಮನಿಗೆ ಸಹಾಯ ಮಾಡಿದನು. ರಾಜ್ಯಾಭಿಷೇಕದ ಸಮಯಕ್ಕೆ ನೂರು ನದಿಗಳ ಮತ್ತು ಸಮುದ್ರದ ನೀರನ್ನು ತಂದು ಈತನು ಅದನ್ನು ಪೂರೈಸಿದನು. ಈತನು ರಾಜಸೂಯಯಜ್ಞದ ಕಾಲಕ್ಕೆ ಶತ್ರುಘ್ನನನ್ನು ಜೊತೆಗೂಡಿ ಅಶ್ವರಕ್ಷಣೆಯ ಕಾರ್ಯವನ್ನು ನೆರವೇರಿಸಿದ್ದನು. ಶ್ರೀರಾಮನು ಇವನಿಗೆ ಅಮೂಲ್ಯವಾದ ಆಭರಣಗಳನ್ನು ಕೊಟ್ಟು ಸತ್ಕರಿಸಿದನು.

### ೪೬. ತಾಟಕಾ

ಇವಳು ಸುಕೇತು ಎಂಬ ಯಕ್ಷನ ಮಗಳು. ಈಕೆಯು ಜಂಭಪುತ್ರ ಸುಂದನ ಹೆಂಡತಿ. ಬ್ರಹ್ಮದೇವನು ಸುಕೇತುವಿಗೆ ಕೊಟ್ಟ ವರದಿಂದ ಇವಳು ಹುಟ್ಟಿದಳು. ಇವಳಲ್ಲಿ ಸಹಸ್ರ ಆನೆಗಳ ಶಕ್ತಿಯಿದ್ದಿತು. ಅವಳು ತನ್ನ ಇಚ್ಛೆಯಂತೆ ಹಲವು ರೂಪಗಳನ್ನು ಧರಿಸಬಹುದಿತ್ತು. ಈಕೆಗೆ ಮಾರೀಚ, ಸುಬಾಹು ಎಂಬ ಇಬ್ಬರು ಗಂಡುಮಕ್ಕಳಾದರು. ಅಗಸ್ತ್ಯನು ಸುಂದನನ್ನು ವಧಿಸಿದ ಕಾರಣ ಇವಳು ಮಕ್ಕಳ ಸಹಿತ ಅಗಸ್ತ್ಯನ ಮೇಲೆ ಏರಿಹೋದಳು. ಆಗ ಅಗಸ್ತ್ಯನು ಇವಳನ್ನು ಮತ್ತು ಇವಳ ಮಕ್ಕಳನ್ನು ಶಪಿಸಿದನು. ಈ ಶಾಪದಿಂದ ತಾಟಕೆಯು ಕುರೂಪಗೊಂಡು ರಾಕ್ಷಸಿಯಾದಳು. ಶಾಪ ತಗುಲಿದ ಸಮಯದಿಂದ ಅವಳು ಮಲದ ಮತ್ತು ಕರುಷ ಎಂಬ ಪ್ರದೇಶದಲ್ಲಿ ವಾಸವಿದ್ದಳು. ಆ ಪ್ರದೇಶವು ಬಂಜರುಭೂಮಿಯಾಗಿ ತಾಟಕಾವನವೆಂದು ಕರೆಯಲ್ಪಟ್ಟಿತು. ವಿಶ್ವಾಮಿತ್ರನ ಆಶ್ರಮವು ಈ ವನದ ಸಮೀಪದಲ್ಲಿಯೇ ಇತ್ತು. ವಿಶ್ವಾಮಿತ್ರನು ಕೈಕೊಂಡ ಯಜ್ಞಗಳಲ್ಲಿ ತಾಟಕೆಯ ಮಕ್ಕಳು ವಿಘ್ನವನ್ನುಂಟುಮಾಡುತ್ತಿದ್ದರು. ವಿಶ್ವಾಮಿತ್ರನು ತನ್ನ ಯಜ್ಞದ ರಕ್ಷಣೆಗಾಗಿ ಅಯೋಧ್ಯೆಯಿಂದ ಶ್ರೀರಾಮಲಕ್ಷ್ಮಣರನ್ನು ಕರೆತಂದನು. ವಿಶ್ವಾಮಿತ್ರನ ಹೇಳಿಕೆಯನುಸಾರ ಶ್ರೀರಾಮನು ತಾಟಕೆಯ ಅವಯವಗಳನ್ನು ಕತ್ತರಿಸಿ ಆಕೆಯನ್ನು ಕೊಂದುಹಾಕಿದನು.

## ೪೭. ತಾರ

ತಾರನೆಂದರೆ ಬೃಹಸ್ಪತಿಯಿಂದ ಹುಟ್ಟಿದ ವಾನರಪುತ್ರ. ಇವನು ಬಲುಬುದ್ಧಿವಂತನಿದ್ದು ವಾನರಪ್ರಮುಖ ನಾಗಿದ್ದನು. ಈತನ ಮಗಳಾದ ರುಮೆಯು ಸುಗ್ರೀವನ ಪತ್ನಿ. ಈತನು ಐದು ಕೋಟಿ ವಾನರರನ್ನು ಜೊತೆ ಗೂಡಿಸಿಕೊಂಡು ಸುಗ್ರೀವನ ಸೇನೆಯಲ್ಲಿ ದಾಖಲಾದನು. ಇವನು ಸೀತೆಯನ್ನು ಹುಡುಕಲು ಜಾಂಬವಂತನ ಜೊತೆಗೆ ದಕ್ಷಿಣದಿಕ್ಕಿನತ್ತ ಹೋದನು. ಈತನು ಇತರ ವಾನರರೊಂದಿಗೆ ಋಕ್ಷಗುಹೆಯನ್ನು ಪ್ರವೇಶಿಸಿದನು. ಇವನು ವಾಲಿಯ ಶಕ್ತಿ-ಬಲಗಳನ್ನು ರಾವಣನಿಗೆ ನಿಖರವಾಗಿ ಹೇಳಿದ್ದನು.

## ೪೮. ತುಂಬರು

ಇವನು ಕಶ್ಯಪ ಹಾಗೂ ಪ್ರಾಧಾ ಇವರ ಮಕ್ಕಳಲ್ಲಿ ಒಬ್ಬ. ಈತನು ಚೈತ್ರಮಾಸದ ಧಾತಾ ಎಂಬ ಸೂರ್ಯನೊಡನೆ ಇರುತ್ತಾನೆ. ರಂಭೆಯು ಇವನ ಹೆಂಡತಿ. ಬ್ರಹ್ಮಸಭೆಯಲ್ಲಿ ಈತನು ನಾರದನ ಸಮೇತ ಸಂಗೀತವನ್ನು ಹೇಳಿ ಭಗವಂತನನ್ನು ಸ್ತುತಿಸುತ್ತಿದ್ದನು. ಇವನು ರಂಭೆಯಲ್ಲಿ ಆಸಕ್ತನಾದ್ದರಿಂದ ಕುಬೇರನು ಇವನಿಗೆ ಶಾಪಕೊಟ್ಟು 'ವಿರಾಧ' ರಾಕ್ಷಸನನ್ನಾಗಿ ಮಾಡಿದನು. ಇದನ್ನೆಲ್ಲ ಗಮನಿಸಿದರೆ ರಂಭೆಯು ಈತನ ಪತ್ನಿಯಾಗಿರಲಾರಳು ಎಂದು ಸ್ಪಷ್ಟವಾಗುತ್ತದೆ.

ಭರದ್ವಾಜರು ಭರತನನ್ನು ಸತ್ಕರಿಸುವ ಸಂದರ್ಭದಲ್ಲಿ ಇವನನ್ನು ಕರೆಯಿಸಿಕೊಂಡಿದ್ದರು.

## ೪೯. ತೃಣಬಿಂದು

ತೃಣಬಿಂದು ಒಬ್ಬ ರಾಜರ್ಷಿ. ಭಾಗವತಪುರಾಣ ಹಾಗೂ ವಾಯುಪುರಾಣಗಳ ಪ್ರಕಾರ ಈತನು ಬಂಧುರಾಜನ ಮಗ. ಈತನಿಗೆ ವಿಶಾಲ, ಶೂನ್ಯಬಂಧು, ಧೂಮ್ರಕೇತು, ಇಡವಿಡಾ ಎಂಬ ನಾಲ್ಕು ಜನ ಮಕ್ಕಳಿದ್ದರು. ರಾಮಾಯಣ ಹಾಗೂ ವಿಷ್ಣುಪುರಾಣದ ಅನುಸಾರವಾಗಿ ಇವನು ಬುಧರಾಜನ ಮಗನೆಂದು ತಿಳಿದುಬರುತ್ತದೆ. ಇವನ ಪತ್ನಿಯ ಹೆಸರು ಅಲಂಬುಷಾ ಎಂದಿತ್ತು. ಇವನಿಗೆ ವಿಶಾಲ ಮತ್ತು ಇಲವಿಲಾ ಎಂಬ ಎರಡು ಮಕ್ಕಳಿದ್ದ ಉಲ್ಲೇಖವಿದೆ. ಇಲವಿಲೆಯ ಮದುವೆ ಪುಲಸ್ತ್ಯನೊಂದಿಗೆ ಆಯಿತು. ಪುಲಸ್ತ್ಯಮುನಿಯ ಶಾಪದ ಕಲ್ಪನೆ ಇರದ ತೃಣಬಿಂದುವಿನ ಮಗಳಾದ ಇಲವಿಲೆಯು ಪುಲಸ್ತ್ಯನ ತಪಸ್ಥಾನದ ಬಳಿ ಹೋದಳು. ಆತನ ಈ ಶಾಪದ ಪ್ರಭಾವದಿಂದ ಇಲವಿಲೆಗೆ ಗರ್ಭಧಾರಣೆಯಾಯಿತು. ಅವಳು ಕೂಡ ತನ್ನ ತಂದೆಯಾದ ತೃಣಬಿಂದುವಿಗೆ ನಡೆದ ವಿಷಯವನ್ನು ತಿಳಿಸಿದಳು. ಅವನು ಧ್ಯಾನಸಾಧನೆಯಿಂದ ನಡೆದ ಸಂಗತಿಯ ಕಾರಣವನ್ನು ಅರಿತುಕೊಂಡು, ಪುಲಸ್ತ್ಯನ ಬಳಿಗೆ ಹೋಗಿ ತನ್ನ ಕನ್ಯೆಯನ್ನು ಮದುವೆಯಾಗಲು ವಿನಂತಿಸಿದನು. ತೃಣಬಿಂದುವಿನ ಈ ಕನ್ಯೆಯ ಹೆಸರು 'ಗೋ' ಎಂತಲೂ ಇತ್ತು.

## ೫೦. ತ್ರಿಶಂಕು

ಇವನ ನಿಜವಾದ ಹೆಸರು ಸತ್ಯವ್ರತ ಎಂದಿತ್ತು. ಶಾಪವೊಂದರ ಪರಿಣಾಮವಾಗಿ ಇವನಿಗೆ ತ್ರಿಶಂಕು ಎಂಬ ಹೆಸರು ಬಂದಿತು. ಈತನ ತಂದೆಯ ಹೆಸರು ನಿಬಂಧನ ; ಕೆಲವು ಗ್ರಂಥಗಳಲ್ಲಿ ತಂದೆಯ ಹೆಸರು 'ತ್ರಯ್ಯಾರುಣ' ಇಲ್ಲವೆ 'ಅರುಣ' ಎಂದಿದೆ. ತ್ರಿಶಂಕುವು ಪೌರಾಣಿಕ ಕಾಲದವನಲ್ಲವೆಂದು ತೋರುತ್ತದೆ. ಇವನು ಬ್ರಹ್ಮಜ್ಞ, ಸರ್ವಜ್ಞ ಎಂದೂ ಎನಿಸಿಕೊಳ್ಳುತ್ತಿದ್ದನು. ಈತನ ಆಚರಣೆಯು ಸರಿ ಇರದ ಕಾರಣ ಜನರು ಇವನ ಬಗ್ಗೆ ಒಳ್ಳೆಯ ಅಭಿಪ್ರಾಯ ಹೊಂದಿರಲಿಲ್ಲ. ಈತನು ಒಬ್ಬ ಬ್ರಾಹ್ಮಣಸ್ತ್ರೀಯನ್ನು ಅಪಹರಿಸಿದ್ದರಿಂದ ಇವನ ತಂದೆಯು ಇವನನ್ನು ಗಡಿಯಾಚೆ ತಳ್ಳಿದನು. ಆಗ ಅವನು ವಿಶ್ವಾಮಿತ್ರನ ಬಳಿ ಇರಹತ್ತಿದನು. ಒಮ್ಮೆ ಮಾಂಸಾಹಾರವು ಸಿಗದಿದ್ದಾಗ ತ್ರಿಶಂಕುವು ವಸಿಷ್ಠ ಋಷಿಯ ಕಾಮಧೇನುವನ್ನು ಕೊಂದನು. 'ಗೋವಧೆ, ಸ್ತ್ರೀ-ಅಪಹರಣ, ಮತ್ತು ತಂದೆಯ ಕ್ರೋಧ — ಈ ತ್ರಿವಿಧ ಶಂಕುಗಳು ನಿನ್ನ ತಲೆಯ ಮೇಲೆ ಹುಟ್ಟುವುವು ಮತ್ತು ನೀನು ಪಿಶಾಚಿಯಾಗುವೆ !' ಎಂದು ವಸಿಷ್ಠನು ಇವನಿಗೆ ಶಾಪವನ್ನು

ಕೊಟ್ಟನು. ದೇವಿಯ ಕೃಪೆಯಿಂದ ಈತನ ಪಿಶಾಚಿಸ್ವರೂಪವು ಇಲ್ಲದಾಯಿತು. ತಂದೆಯು ಇವನನ್ನು ಪಟ್ಟಕ್ಕೆ ಕೂಡಿಸಿದನು. ವಿಶ್ವಾಮಿತ್ರನು ಇವನಿಂದ ಯಜ್ಞವನ್ನು ಮಾಡಿಸಿ, ದೇಹಸಹಿತ ಸ್ವರ್ಗವನ್ನು ಸೇರಬೇಕೆಂಬ ಈತನ ಇಚ್ಛೆಯನ್ನು ಪೂರ್ತಿಗೊಳಿಸಿದನು. ವಿಶ್ವಾಮಿತ್ರನು ಈತನ ಯಜ್ಞಕ್ಕೆ ಅಧ್ವರ್ಯುವಾಗಿದ್ದನು. ಆದ್ದರಿಂದ ದೇವತೆಗಳನ್ನು ಆಹ್ವಾನಿಸಿದ್ದರೂ ಅವರು ಬಂದಿರಲಿಲ್ಲ. ಆಗ ವಿಶ್ವಾಮಿತ್ರನು ತನ್ನ ತಪೋಬಲದಿಂದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳಿಸಿದನು. ಇಂದ್ರನು ತ್ರಿಶಂಕುವನ್ನು ಅಲ್ಲಿಂದ ಕೆಳಗೆ ನೂಕಿಬಿಟ್ಟನು. 'ತ್ರಾಹಿ ! ತ್ರಾಹಿ !' ಎಂದು ಚೀರುತ್ತ, ತ್ರಿಶಂಕು ತಲೆಕೆಳಗಾಗಿ ಬೀಳುತ್ತಿದ್ದಾಗ ವಿಶ್ವಾಮಿತ್ರನು ಕೋಪಗೊಂಡು 'ನಿಲ್ಲು ! ನಿಲ್ಲು !' ಎಂದು ಕೂಗಿದನು. ತನ್ನ ಪ್ರತಿಜ್ಞೆಯು ಸುಳ್ಳಾಗಬಾರದೆಂದು ವಿಶ್ವಾಮಿತ್ರನು ನಕ್ಷತ್ರ, ದೇವತೆಗಳನ್ನೊಳಗೊಂಡ ಪ್ರತಿಸೃಷ್ಟಿಯನ್ನೇ ನಿರ್ಮಿಸಲಾರಂಭಿಸಿದನು. ವಿಶ್ವಾಮಿತ್ರನು ತನ್ನ ಸ್ವರ್ಗದಲ್ಲಿ ಇಂದ್ರನಿರಲೇಬಾರದು, ಇದ್ದರೆ ತಾನೇ ಬೇರೆ ಇಂದ್ರನನ್ನು ಸೃಷ್ಟಿಸುವುದೆಂದು ನಿರ್ಧರಿಸಿದನು. ಆಗ ದೇವತೆಗಳಲ್ಲಿ ದೊಡ್ಡ ಗೊಂದಲವುಂಟಾಯಿತು. ತ್ರಿಶಂಕುವು ಸದೇಹಸ್ವರ್ಗವನ್ನು ಸೇರಲು ಯೋಗ್ಯನಿರಲಿಲ್ಲವಾದರೂ ಗುರುಪಾಶದಿಂದ ದಗ್ಧನಾದ್ದರಿಂದ ದೇವತೆಗಳು ಅದನ್ನು ಮನ್ನಿಸಿದರು.

ಸ್ಕಂದಪುರಾಣದಲ್ಲಿ ಈ ಕಥೆಯನ್ನು ಭಿನ್ನವಾಗಿ ಹೇಳಿದ್ದಾರೆ. ಹರಿವಂಶದಲ್ಲಿ ಈತನ ಪತ್ನಿಯ ಹೆಸರನ್ನು ಸತ್ಯರಥಾ ಎಂದು ಹೇಳಿದ್ದಾರೆ. ಇವಳಿಂದ ತ್ರಿಶಂಕುವಿಗೆ ಸುಪ್ರಸಿದ್ಧನಾದ ಹರಿಶ್ಚಂದ್ರನು ಹುಟ್ಟಿದನು. ವಿಶ್ವಾಮಿತ್ರನು ತ್ರಿಶಂಕುವಿನ ಧಾರ್ಮಿಕ ವೃತ್ತಿಯನ್ನು ಪ್ರಶಂಸಿಸಿದ್ದಾನೆ. ವನವಾಸದಲ್ಲಿರುವಾಗ ಈತನ ಆಚರಣೆಯು ಪರಿಶುದ್ಧವಿತ್ತು. ಇವನು ನೂರು ಯಜ್ಞಗಳನ್ನು ಸಾಂಗಗೊಳಿಸಿದನು ; ವಿಶ್ವಾಮಿತ್ರನ ಮಕ್ಕಳ ರಕ್ಷಣೆಯನ್ನು ಮಾಡಿದನು.

ದೇಹಸಹಿತವಾಗಿ ಸ್ವರ್ಗವನ್ನು ಸೇರಬೇಕೆಂಬ ಈತನ ಇಚ್ಛೆಯು ವಿಚಿತ್ರವಿದ್ದರೂ ಅಸಾಧ್ಯವಿರಲಿಲ್ಲ. ವಸಿಷ್ಠ-ವಿಶ್ವಾಮಿತ್ರಾದಿ ಋಷಿಗಳು ದೇಹಸಹಿತ ಸ್ವರ್ಗಕ್ಕೆ ಆಗಾಗ ಹೋಗಿಬರುತ್ತಿದ್ದರು. ಮಹಾಭಾರತದಲ್ಲಿ ಅರ್ಜುನನು ಸ್ವರ್ಗಕ್ಕೆ ಹೋಗಿ ಇಂದ್ರನ ಆತಿಥಿಸತ್ಕಾರವನ್ನು ಪಡೆದುಕೊಂಡು ಮರಳಿದ್ದು ಜ್ಞಾತವಿಷಯವಾಗಿದೆ. ವಿಶ್ವಾಮಿತ್ರನ ಬಲವಂತದಿಂದ ತ್ರಿಶಂಕುವು ಯಾವಾಗಲೂ ನಕ್ಷತ್ರಗಳಲ್ಲಿ ತಲೆಕೆಳಗಾಗಿ ಹೊಳೆಯುತ್ತ ಉಳಿಯುವನು ಎಂದು ದೇವತೆಗಳು ಆಶ್ವಾಸಿಸಿದರು.

### ೫೧. ತ್ರಿಶಿರ

ಈತನು ರಾವಣನ ಒಬ್ಬ ಮಗನಾಗಿದ್ದನು. ಇವನು ಕುಂಭಕರ್ಣನ ವಧೆಯಿಂದ ತುಂಬ ವ್ಯಥಿತವಾದ ರಾವಣನಿಗೆ ಸಮಾಧಾನ ಹೇಳಿ ಶ್ರೀರಾಮನನ್ನು ಸದೆಬಡಿಯಲು ಪ್ರತಿಜ್ಞೆಯನ್ನು ತೊಟ್ಟನು. ತೀಕ್ಷ್ಣಶೂಲವೊಂದನ್ನು ಎತ್ತಿಕೊಂಡು, ಬಿಳಿಯ ವೃಷಭವನ್ನೇರಿ ರಣರಂಗದತ್ತ ಧುಮುಕಿದನು. ಈತನು ಮೂರು ಕಿರೀಟಗಳನ್ನು ಧರಿಸಿದ್ದನು. ನರಾಂತಕನು ವಧೆಗೊಂಡಾಗ ಇವನು ವಿಲಾಪ-ಆಕ್ರೋಶ ಮಾಡಿದನು. ಈತನು ಅಂಗದ ಹಾಗೂ ಹನುಮಾನನೊಡನೆ ಯುದ್ಧಮಾಡಿದನು ; ಹನುಮಾನನಿಂದ ಹತನಾದನು.

ತ್ರಿಶಿರ ಎಂಬ ಹೆಸರಿನ ಇನ್ನೊಬ್ಬ ರಾಕ್ಷಸನು ಜನಸ್ಥಾನದಲ್ಲಿದ್ದನು. ಆತನು ಖರನ ಸೇನಾಪತಿಯಾಗಿದ್ದನು. ಶ್ರೀರಾಮನು ಆತನನ್ನು ವಧಿಸಿದನು.

### ೫೨. ದನು

ಇವಳು ದಕ್ಷನ ಮಗಳಾಗಿದ್ದು ಕಶ್ಯಪನ ಭಾರ್ಯೆಯಾಗಿದ್ದಳು. ಇವಳು ಅಶ್ವಗ್ರೀವನನ್ನು ಹೆತ್ತಳು. ಇವಳಿಂದ ದಾನವರ ಉತ್ಪತ್ತಿಯಾಯಿತು. ವೃತ್ರನೂ ಸಹ ಈಕೆಯ ಮಗನೇ.

### ೫೩. ದಂಡಕ

ಇಕ್ಷ್ವಾಕುವಿನ ನೂರು ಪುತ್ರರಲ್ಲಿ ಇವನು ತೀರ ಚಿಕ್ಕವನು. ಇವನು ಅತ್ಯಂತ ಶೂರನೂ ಬುದ್ಧಿವಂತನೂ ಆಗಿದ್ದನು ; ಆದರೆ 'ಘೋರ' ಎಂಬ ದೋಷವು ಇವನಲ್ಲಿದ್ದುದರಿಂದ ಈತನು ಮೂಢನೂ ವಿದ್ಯಾಹೀನನೂ

ಉನ್ಮತ್ತನೂ ಆಗಿದ್ದನು. ಇಕ್ಷ್ವಾಕುವು ದೂರಪ್ರದೇಶದ ವಿಂಧ್ಯ ಹಾಗೂ ಶೈವಲ ಪರ್ವತದ ರಾಜ್ಯವನ್ನು ಈತನಿಗೆ ವಿಚಾರಮಾಡಿಯೇ ಕೊಟ್ಟಿದ್ದನು. ಇವನು ವಿಂಧ್ಯಪರ್ವತದ ಎರಡು ಶಿಖರಗಳ ಮಧ್ಯೆ ಮಧುಮತ್ತ ಅಥವಾ ಮಧುಮಂತ ಎಂಬ ನಗರವನ್ನು ನಿರ್ಮಿಸಿದನು. ಉಶನಸ್ ಶುಕ್ರನು ಈತನ ಪುರೋಹಿತನಾಗಿದ್ದನು. ಇವನು ಗುರುಕನ್ಯೆಯಾದ 'ಅರಜಾ'ಳೊಡನೆ ಬಲಾತ್ಕಾರದ ಸಂಭೋಗವನ್ನು ಮಾಡಿದನು. ಆಗ ಕೋಪಗೊಂಡ ಭಾರ್ಗವ(ಶುಕ್ರ)ನು ಇವನಿಗೆ ಮತ್ತು ಇವನ ಪ್ರದೇಶವಾದ ದಂಡಕಾರಣ್ಯಕ್ಕೆ ಶಾಪವಿತ್ತನು. ಈತನಿಗೆ ದಂಡಕನೆಂಬ ಹೆಸರೂ ಇತ್ತೆಂದು ತಿಳಿದುಬರುತ್ತದೆ.

ಶಾಪ ಕ್ರಮಸಂಖ್ಯೆ / ೫೯, ಭಾರ್ಗವ > ದಂಡ ; ೬೦, ಭಾರ್ಗವ > ದಂಡಕಾರಣ್ಯ—ನೋಡಿರಿ.

## ೫೪. ದಶರಥ

ದಶರಥನು ಇಕ್ಷ್ವಾಕುಕುಲೋತ್ಪನ್ನ ಅಜರಾಜನ ಮಗ. ಇವನು ಅಯೋಧ್ಯೆಯ ರಾಜ. ಪದ್ಮಪುರಾಣದಲ್ಲಿ ಈತನ ತಂದೆಯ ಹೆಸರು ಪ್ರಜಾಪಾಲನೆಂದಿದೆ. ಈತನು ವೇದಜ್ಞನೂ, ಸರ್ವಸಂಗ್ರಹಿಯೂ, ದೂರದೃಷ್ಟಿಯವನೂ, ಲೋಕಪ್ರಿಯನೂ, ಪರಾಕ್ರಮಿಯೂ, ಋಷಿಸರಿಸಮಾನನೂ, ಜಿತೇಂದ್ರಿಯನೂ, ಧನಧಾನ್ಯಗಳ ವಿಪುಲಸಂಗ್ರಹ ಹೊಂದಿದವನೂ, ಅಲ್ಲದೆ ಮನುವಿನಂತೆ ಸಕಲ ರೀತಿಯಲ್ಲಿ ಪ್ರಜಾಪಾಲಕನೂ ಆಗಿದ್ದನು. ಈತನ ರಾಜ್ಯದಲ್ಲಿ ನಾಲ್ಕು ವರ್ಣದವರೂ ಸಹಿಷ್ಣುತೆಯಿಂದ ಬಾಳುತ್ತಿದ್ದರು. ಇವನು ಗುಣವಂತ ಅಮಾತ್ಯರ ಸಹಾಯದಿಂದ ಮತ್ತು ಗೂಢಚಾರರ ಸೇವೆಯಿಂದ ಮನುನಿರ್ಮಿತವಾದ ಅಯೋಧ್ಯಾನಗರವನ್ನೂ ಅದರ ವೈಭವವನ್ನೂ ವೃದ್ಧಿಗೊಳಿಸಿದನು. ಕೌಸಲ್ಯೆ, ಸುಮಿತ್ರೆ, ಕೈಕೇಯಿ ಇವರೆಲ್ಲ ಇವನ ರಾಣಿಯರೆಂದು ಸುಪರಿಚಿತರಾಗಿದ್ದಾರೆ. ಪದ್ಮಪುರಾಣದಲ್ಲಿ ಕೈಕೇಯಿಯ ಉಲ್ಲೇಖವಿಲ್ಲ; ಸುರೂಪಾ ಮತ್ತು ಸುವೇಷಾ ಎಂಬ ಇನ್ನೆರಡು ಹೆಸರುಗಳ ಉಲ್ಲೇಖವಿದ್ದು, ಅವರಿಬ್ಬರಿಗೂ ಒಬ್ಬೊಬ್ಬ ಮಗನಿದ್ದನೆಂದು ತಿಳಿಸಲಾಗಿದೆ. ದಶರಥನು ಅತ್ಯಂತ ವಿಷಯಲಂಪಟನಿದ್ದನು. ಆದ್ದರಿಂದಲೇ ವೃದ್ಧಾಪ್ಯಕಾಲದಲ್ಲಿಯೂ ಈತನು ಕೈಕೇಯಿಯ ಮಗನಿಗೆ ರಾಜ್ಯ ಕೊಡಬೇಕೆಂಬ ಅವಳ ತಂದೆಯ ಶರತ್ತನ್ನು ಮನ್ನಿಸಿ, ಕೈಕೇಯಿಯೊಡನೆ ಮದುವೆಮಾಡಿಕೊಂಡನು. ಅನಂತರ ದಶರಥನು ಅಶ್ವಮೇಧಯಜ್ಞವನ್ನು ಮಾಡಿದನು. ಇವನಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ಆದ್ದರಿಂದ ಇವನು ಪುತ್ರಕಾಮೇಷ್ಟಿಯಜ್ಞವನ್ನು ಮಾಡಿದನು. ಈ ಯಜ್ಞಕ್ಕೆ ಋಷ್ಯಶೃಂಗನ ಸಹಾಯವು ಆವಶ್ಯಕವಿತ್ತು. ದಶರಥನು ತನ್ನ ಕನ್ಯೆಯಾದ ಶಾಂತಾ ಇವಳನ್ನು ಋಷ್ಯಶೃಂಗನಿಗೆ ಮದುವೆ ಮಾಡಿಕೊಟ್ಟನು.

ಕೈಕೇಯಿಗೆ ವರವನ್ನು ಮೊದಲು ಕೊಟ್ಟಿದ್ದರಿಂದ, ಶ್ರೀರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡಬೇಕೆಂಬ ಇವನ ಮನೋರಥವು ಭಗ್ನವಾಯಿತು. ಶ್ರೀರಾಮನ ಬಗ್ಗೆ ದಶರಥನಿಗೆ ಬಹಳ ಪ್ರೀತಿ ಇತ್ತು. ಶ್ರೀರಾಮನ ಯೌವರಾಜ್ಯಾಭಿಷೇಕಕ್ಕೆ ಭರತನಿಂದ ಅಡಚಣೆ ಬರಬಹುದೆಂಬ ಕಲ್ಪನೆಯು ದಶರಥನಿಗೆ ಇತ್ತು. ಹೀಗಿದ್ದುದರಿಂದ ಭರತನು ತನ್ನ ತಾತನ ಮನೆಗೆ ಹೋದಾಗ ಯೌವರಾಜ್ಯಾಭಿಷೇಕವನ್ನು ಪೂರೈಸಬೇಕೆಂಬ ಆತುರತೆ ಈತನಿಗೆ ಇತ್ತು. ಕೈಕೇಯಿಯು ವರಗಳನ್ನು ಬೇಡಿಕೊಂಡ ಕಾರಣ ಈತನ ಯೋಜನೆಯು ಮಣ್ಣುಪಾಲಾಯಿತು. ಶ್ರವಣನ ಶಾಪದ ಭೀತಿಯು ದಶರಥನನ್ನು ಹಗಲಿರುಳೂ ಕಾಡುತ್ತಿತ್ತು. ಈಗ ಈ ವರದಿಂದ ಅದು ನಿಜವೆನಿಸಿತು. ಕೊಡಬೇಕಾದ ವರಗಳ ಬಗ್ಗೆ ಕೈಕೇಯಿಯಿಂದ ಅರಿತುಕೊಳ್ಳದೆ, ದಶರಥನು ಅವನ್ನು ಪೂರ್ತಿಗೊಳಿಸುವ ವಚನವನ್ನು ಕೊಟ್ಟನು. ಹೀಗಾದ್ದರಿಂದ ಆ ವರಗಳು ಎಷ್ಟೇ ಕಟುವಾಗಿದ್ದರೂ ದಶರಥನಿಗೆ ಬೇರೆ ವಿಧಿಯಿಲ್ಲದಂತಾಯಿತು. ಅವನು ಕೈಕೇಯಿಗೆ ಪರಿಪರಿಯಾಗಿ ಸಮಜಾಯಿಸಲು ಪ್ರಯತ್ನಿಸಿದನು ; ಪ್ರಾರ್ಥಿಸಿದನು, ಬೆದರಿಕೆಯನ್ನು ಹಾಕಿದನು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ದಶರಥನು ಕೈಕೇಯಿಯ ಕಾಲಿಗೆ ಬಿದ್ದನು. ಇಷ್ಟಾದರೂ ಕೈಕೇಯಿಯು ತನ್ನ ಹಟವನ್ನು ಬಿಡಲೇ ಇಲ್ಲ. ಶ್ರೀರಾಮನು ಪಿತನ ಆಜ್ಞೆಯನ್ನು ಯಥಾರ್ಥವಾಗಿ ಪಾಲಿಸುವ ನಿರ್ಧಾರವನ್ನು ಮಾಡಿದ್ದರಿಂದ ಈತನಿಗೆ ಪುತ್ರವಿಯೋಗವು ತಪ್ಪದಂತಾಯಿತು. ಪುತ್ರವಿರಹವನ್ನು ಸಹಿಸುವ ಮನೋಬಲ ತನ್ನಲ್ಲಿರದ ಕಾರಣ ದಶರಥನು ಮೃತನಾದನು. ಭರತನು ಅಯೋಧ್ಯೆಗೆ ಮರಳುವವರೆಗೆ ಇವನ ಪಾರ್ಥಿವ ದೇಹವನ್ನು ಎಣ್ಣೆಯಲ್ಲಿಟ್ಟು ರಕ್ಷಿಸಲಾಯಿತು. ವಸಿಷ್ಠನು ಹೇಳಿದ ಪ್ರಕಾರ ಭರತನು ದಶರಥನ ಅಂತ್ಯಕ್ರಿಯೆಯನ್ನು ನೆರವೇರಿಸಿದನು. ಕೈಕೇಯಿಗೆ ವರವನ್ನು

ಕೊಟ್ಟದ್ದಕ್ಕಾಗಿ ದಶರಥನು ಪಶ್ಚಾತ್ತಾಪ ಪಡಬೇಕಾಯಿತು. ಅವನು ಕೈಕೇಯಿಯೊಡನೆ ಇದ್ದ ಎಲ್ಲ ಸಂಬಂಧಗಳನ್ನೂ ತೊರೆದುಬಿಟ್ಟನು.

ಸ್ವರ್ಗಸ್ಥನಾದ ದಶರಥನು ಮಹೇಶ್ವರನ ಕೃಪೆಯಿಂದ ಸೀತೆಯು ಅಗ್ನಿದಿವ್ಯವನ್ನು ಮಾಡಿದನಂತರ ಭೂಲೋಕಕ್ಕೆ ಬಂದು ಶ್ರೀರಾಮನಿಗೆ ದರ್ಶನವನ್ನಿತ್ತನು. 'ನೀನು ನನ್ನನ್ನು ಉದ್ಧರಿಸಿದೆ !' ಎಂಬ ಧನ್ಯೋದ್ಗಾರಗಳನ್ನು ನುಡಿದನು. ಶ್ರೀರಾಮನ ವಿನಂತಿಯನುಸಾರ ದಶರಥನು ಕೈಕೇಯಿ ಹಾಗೂ ಭರತರ ಬಗ್ಗೆ ಅನುರಾಗ-ಪ್ರೀತಿಗಳನ್ನು ತೋರಿಸುವುದಾಗಿ ಹೇಳಿದನು ; ಸೀತೆಗೆ ಆಶೀರ್ವದಿಸಿ ಉಪದೇಶಿಸಿದನು. ದುರ್ವಾಸನು ಈ ಮೊದಲೇ ದಶರಥನಿಗೆ ಶ್ರೀರಾಮನು ಸೀತೆಯನ್ನು ತ್ಯಜಿಸಲಿರುವನೆಂಬ ಭವಿಷ್ಯವನ್ನು ಹೇಳಿದ್ದನು.

## ೫೫. ದಿತಿ

ಇವಳು ಪ್ರಾಚೇತಸ ದಕ್ಷಪ್ರಜಾಪತಿ ಮತ್ತು ಅಸಿಕ್ನಿ ಇವರ ಪುತ್ರಿಯಾಗಿದ್ದು ಕಶ್ಯಪನ ಓರ್ವ ಪತ್ನಿಯಾಗಿದ್ದಳು. ಇವಳ ಮಕ್ಕಳೆಂದರೆ ದೈತ್ಯರು. ದೇವತೆಗಳೆಂದರೆ ಕಶ್ಯಪನ ಇನ್ನೊಬ್ಬ ಪತ್ನಿಯಾದ ಅದಿತಿಯ ಮಕ್ಕಳು. ಅವರು ದೈತ್ಯರ ಶತ್ರುಗಳು. ಋಗ್ವೇದದಲ್ಲಿ ಇವಳ ಉಲ್ಲೇಖವು ಎರಡು ಬಾರಿ ಬಂದಿದೆ : ಒಂದು, ಅದಿತಿಯೊಡನೆ ; ಇನ್ನೊಂದು, ಅಗ್ನಿ, ಸವಿತಾ ಹಾಗೂ ಭಗ ಇವರೊಡನೆ. ಅಥರ್ವವೇದದಲ್ಲಿ ಇವಳ ಮಕ್ಕಳ ಉಲ್ಲೇಖವಿದೆ. ದಿತಿಯು ಅದಿತಿಯನ್ನು ವಿರೋಧಿಸಲು ಬಂದಂತಿದ್ದಾಳೆ.

## ೫೬. ದುಂದುಭಿ

ದುಂದುಭಿಯು ಮಯಾಸುರ ಮತ್ತು ಅಪ್ಸರೆಯಾದ ಹೇಮಾ ಇವರ ಎರಡನೆಯ ಮಗ. ಈತನು ದೀರ್ಘತಪಸ್ಸನ್ನಾಚರಿಸಿ ಸಹಸ್ರ ಆನೆಗಳ ಶಕ್ತಿಯನ್ನು ಪಡೆದುಕೊಂಡಿದ್ದನು. ಇವನಿಗೆ ತನ್ನ ಬಲದ ಅಹಂಕಾರವಿತ್ತು. ವಾಲಿಯು ಇವನನ್ನು ಕೊಂದು ದೂರ ಎಸೆದಾಗ ಇವನ ರಕ್ತವು ಮತಂಗಋಷಿಯ ಆಶ್ರಮದಲ್ಲಿ ಸಿಡಿಯಿತು. ಶ್ರೀರಾಮ-ಸುಗ್ರೀವರಲ್ಲಿ ಸ್ನೇಹವಾದನಂತರ, ತನ್ನ ಸಾಮರ್ಥ್ಯವನ್ನು ಸುಗ್ರೀವನಿಗೆ ತೋರಿಸಿಕೊಡಲು ಶ್ರೀರಾಮನು ದುಂದುಭಿಯ ಭಾರವಾದ ಅಸ್ಥಿಪಂಜರವನ್ನು ತನ್ನ ಕಾಲಿನ ಹೆಬ್ಬೆರಳಿನಿಂದ ಮತ್ತು ಯೋಜನಗಳಷ್ಟು ದೂರಕ್ಕೆ ಚಿಮ್ಮಿದನು. ದುಂದುಭಿಯು ಹದಿನಾರು ಸಾವಿರ ಸ್ತ್ರೀಯರನ್ನು ಬಂಧನದಲ್ಲಿಟ್ಟಿದ್ದನು. ಒಂದು ಲಕ್ಷ ಸ್ತ್ರೀಯರನ್ನು ಏಕಕಾಲಕ್ಕೆ ಮದುವೆಯಾಗುವ ಇಚ್ಛೆ ಈತನದಿತ್ತು. ಈತನಿಗೆ ಮಾಯಾವಿ ಎಂಬ ಮಗನಿದ್ದನು.

## ೫೭. ದುರ್ವಾಸ

ಇವನು ಅತ್ರಿಋಷಿ ಹಾಗೂ ಅನಸೂಯೆ ಇವರ ಮಗ. ಶಿವಶತರುದ್ರಸಂಹಿತೆ ಮತ್ತು ಮಹಾಭಾರತದ ಅನುಶಾಸನಪರ್ವದ ಈತನ ಜನ್ಮದ ಬಗೆಗಿನ ಕಥೆಗಳು ಭಿನ್ನವಾಗಿವೆ. ಅತ್ರಿಋಷಿಯ ಶಿರದಿಂದ ಮೂಡಿದ ತೇಜಃಪೂರ್ಣ ಜ್ವಾಲೆಯಿಂದ ದುರ್ವಾಸನು ಜನ್ಮತಾಳಿದನೆಂದು ಶಿವಶತರುದ್ರಸಂಹಿತೆಯಲ್ಲಿ ಹೇಳಿದೆ. ತ್ರಿಪುರಾಸುರನ ನಾಶಕ್ಕೆಂದು ಬಿಟ್ಟ ಶರವು ಚಿಕ್ಕ ಮಗುವಿನ ರೂಪತಾಳಿ ಶಂಕರನ ತೊಡೆಯ ಮೇಲೆ ಬಂದು ಕುಳಿತಿತು. ಅತನೇ ದುರ್ವಾಸನೆಂದು ಮಹಾಭಾರತದಲ್ಲಿ ಬಣ್ಣಿಸಲಾಗಿದೆ. ದುರ್ವಾಸನೆಂದರೆ ಶಿವನ ಅವತಾರವೆಂದು ಭಾವಿಸುವುದುಂಟು. ದುರ್ವಾಸನು ಅತ್ಯಂತ ಶೀಘ್ರಕೋಪಿಯಾಗಿದ್ದನು. ಇಡೀ ಪೃಥ್ವಿಯಲ್ಲಿಯೇ ಎತ್ತರವಾಗಿ ಬೆಳೆದ ಈತನು ಸದಾಕಾಲವೂ ಜನರನ್ನು ಪೀಡಿಸುತ್ತಿದ್ದನು. ಇವನ ಕ್ರೋಧದ ಅನೇಕ ಕಥೆಗಳು ಪುರಾಣಗಳಲ್ಲಿವೆ. ಇಂದ್ರನಿಗೆ ಕೊಟ್ಟ ಮಾಲೆಯ ಐರಾವತದ ಕಾಲಿನಡಿಯಲ್ಲಿ ತುಳಿಯಲ್ಪಟ್ಟ ಕಾರಣ ಕ್ರೋಧಗೊಂಡ ದುರ್ವಾಸನು 'ನಿನ್ನ ಎಲ್ಲ ಐಶ್ವರ್ಯವೂ ನಷ್ಟವಾಗಲಿ !' ಎಂಬ ಶಾಪವನ್ನು ಇಂದ್ರನಿಗೆ ಕೊಟ್ಟನು. ಇಂದ್ರನು ಉಃಶಾಪಕ್ಕಾಗಿ ಪ್ರಾರ್ಥಿಸಿದರೂ ದುರ್ವಾಸನು ಕೊಡಲಿಲ್ಲ. ದುರ್ವಾಸನು ಅಂಬರೀಷನನ್ನು ಕಾರಣವಿಲ್ಲದೆ ಕಾಡಿದನು. ಆಗ ವಿಷ್ಣುವಿನ ಸುದರ್ಶನ ಚಕ್ರದಿಂದ ಬಿಡುಗಡೆಹೊಂದಲು ದುರ್ವಾಸನು ಅಂಬರೀಷನಿಗೆ

ಶರಣುಹೋಗಬೇಕಾಯಿತು. ಪದ್ಮಪುರಾಣದಲ್ಲಿ ದುರ್ವಾಸನ ಶಾಪ ಪಡೆದ ಒಬ್ಬ ದಾಂಭಿಕ ಬ್ರಾಹ್ಮಣ ಶ್ರೀರಾಮನ ಅಶ್ವಮೇಧಯಜ್ಞದ ಕುದುರೆಯ ವೇಷದಲ್ಲಿ ಇದ್ದನೆಂದಿದೆ.

ದುರ್ವಾಸನು ಒಮ್ಮೆ ಒಂದು ಸಾವಿರ ವರ್ಷಗಳ ಕಾಲ ಉಪವಾಸವಿದ್ದನು. ಆತನು ಉಪವಾಸವನ್ನು ಪೂರ್ತಿಗೊಳಿಸಲು ಶ್ರೀರಾಮನ ಬಳಿಗೆ ಹೋದನು. ಆಗ 'ಕಾಲನು' ಏಕಾಂತದಲ್ಲಿ ಶ್ರೀರಾಮನ ಜೊತೆ ಮಾತನಾಡುತ್ತಿದ್ದನು. ಶ್ರೀರಾಮನ ಆಜ್ಞೆಯ ಮೇರೆಗೆ 'ಶ್ರೀರಾಮನನ್ನು ತಕ್ಷಣ ಭೇಟಿಯಾಗುವದು ಸಾಧ್ಯವಿಲ್ಲ' ಎಂದು ಲಕ್ಷ್ಮಣನು ದುರ್ವಾಸನಿಗೆ ತಿಳಿಸಿದನು. ಆಗ ದುರ್ವಾಸನು, 'ನಿಮ್ಮೆಲ್ಲರನ್ನೂ ಶಪಿಸುವೆ ! ಎಂಬ ಬೆದರಿಕೆಯನ್ನು ಲಕ್ಷ್ಮಣನಿಗೆ ಹಾಕಿದನು. ಲಕ್ಷ್ಮಣನು ದುರ್ವಾಸನಿಗೆ ಶ್ರೀರಾಮನ ಭೇಟಿ ಮಾಡಿಸಿದನು. ಶ್ರೀರಾಮನು ಅವನು ಇಚ್ಛೆಪಟ್ಟ ಭೋಜನವನ್ನು ಕೊಟ್ಟು ತೃಪ್ತಗೊಳಿಸಿದನು. ದುರ್ವಾಸವನು ಮುದ್ಗಲನ ಸತ್ವಪರೀಕ್ಷೆಮಾಡಿ, 'ನೀನು ದೇಹಸಹಿತ ಸ್ವರ್ಗವನ್ನು ಸೇರುವೆ !' ಎಂಬ ವರವನ್ನು ಅವನಿಗೆ ಕೊಟ್ಟನು. ದುರ್ವಾಸನು 'ಶ್ರೀಕೃಷ್ಣನಿಗೆ ವರವನ್ನು ಕೊಟ್ಟಂತೆ ರುಕ್ಮಿಣಿಗೆ ಶಾಪವನ್ನು ಕೊಟ್ಟಿದ್ದಾನೆ' ಎಂಬ ಉಲ್ಲೇಖವು ಸ್ಕಂದಪುರಾಣದಲ್ಲಿದೆ. ಈತನು ಶಿವಾರಾಧನೆಯಲ್ಲಿದ್ದುಕೊಂಡು ಬಹಳಷ್ಟು ತಪವನ್ನು ಆಚರಿಸಿದನು. ಶಂಕರನು ಪ್ರಸನ್ನನಾಗುತ್ತಿಲ್ಲವೆಂದು ತೋರಿಬಂದಾಗ ದುರ್ವಾಸನು ಶಿವನನ್ನು ಶಪಿಸಲು ಹವಣಿಸಿದನು. ಓರ್ವ ಋಷಿಪುತ್ರಿಯಾದ ಕಂದಲಿ ಈತನ ಪತ್ನಿ. ಕ್ರೋಧಾವೇಶದಲ್ಲಿ ಈತನು ತನ್ನ ಪತ್ನಿಯನ್ನೇ ಶಪಿಸಿ ಅವಳನ್ನು ಸುಟ್ಟು ಬೂದಿ ಮಾಡಿದನು.

ದುರ್ವಾಸನು ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಈತನು ಕುಂತಿಗೆ 'ದೇವಹೂತಿ' ಎಂಬ ವಿದ್ಯೆಯನ್ನು ಕೊಟ್ಟಿದ್ದನು. ಈ ವಿದ್ಯೆಯಿಂದ ಕುಂತಿಯು ಇಂದ್ರ, ವರುಣ, ಯಮ, ಅಶ್ವಿನೀಕುಮಾರ ಮತ್ತು ಸೂರ್ಯ ಇವರಿಂದ ಮಕ್ಕಳನ್ನು ಪಡೆಯುವಂತಾದಳು. ಕೆಲವರ ಅಭಿಪ್ರಾಯದಂತೆ ದುರ್ವಾಸನು ಪಾಂಡವರ ಪಿತ.

## ೫೮. ದೇವಯಾನಿ

ಇವಳು ದೈತ್ಯಗುರುವಾದ ಶುಕ್ರಾಚಾರ್ಯನ ಮಗಳು. ದೇವತೆಗಳ ಗುರುವಾದ ಬೃಹಸ್ಪತಿಯ ಪುತ್ರನಾದ ಕಚನು ಸಂಜೀವಿನಿವಿದ್ಯೆಯನ್ನು ಕಲಿಯಲು ಶುಕ್ರಾಚಾರ್ಯನ ಬಳಿಗೆ ಬಂದಾಗ ದೇವಯಾನಿಯು ಕಚನಲ್ಲಿ ಮೋಹಿತಳಾಗಿ ಅವನನ್ನು ವಿವಾಹವಾಗಲು ಬಯಸಿದಳು. ಆದರೆ ಕಚನು ಗುರುಕನ್ಯೆಯಾದ ದೇವಯಾನಿಯನ್ನು ಮದುವೆಯಾಗಲು ಒಪ್ಪಲಿಲ್ಲ. ಆಗ ದೇವಯಾನಿಯು ಅವನಿಗೆ 'ನಿನ್ನ ವಿದ್ಯೆಯು ನಿನಗೆ ಫಲಪ್ರದವಾಗಲಾರದು !' ಎಂಬ ಶಾಪವನ್ನು ಕೊಟ್ಟಳು. ಶರ್ಮಿಷ್ಠೆಯೊಡನೆ ದೇವಯಾನಿಯ ಜಗಳ ನಡೆದಾಗ ಇವಳು ಶರ್ಮಿಷ್ಠೆಯನ್ನು ಒಂದು ಬಾವಿಯಲ್ಲಿ ತಳ್ಳಬಿಟ್ಟಳು. ಯಯಾತಿಯು ಶರ್ಮಿಷ್ಠೆಯನ್ನು ಹೊರಕ್ಕೆ ತೆಗೆದನು. ಅವಳು ಯಯಾತಿಗೆ ತನ್ನ ಪರಿಚಯವನ್ನು ಹೇಳಿಕೊಂಡಳು. ಯಯಾತಿಯು ಈಕೆಯನ್ನು ಪತ್ನಿಯೆಂದು ಸ್ವೀಕರಿಸಿದನು. ಶುಕ್ರಾಚಾರ್ಯನ ಕೋಪದ ಅಂಜಿಕೆಯಿಂದ ಮತ್ತು ಸ್ವಜಾತಿಯ ಒಳಿತಿಗಾಗಿ ಶರ್ಮಿಷ್ಠೆ ದೇವಯಾನಿಯ ದಾಸಿಯಾಗಿ, ಯಯಾತಿಯ ಬಳಿಗೆ ಹೋದಳು. ದೇವಯಾನಿಯು ಯಯಾತಿಯಿಂದ 'ಯದು' ಮತ್ತು 'ತುರ್ವಸು' ಎಂಬ ಗಂಡುಮಕ್ಕಳನ್ನು ಪಡೆದಳು. ರಾಮಾಯಣದಲ್ಲಿ ಯದುವಿನ ಉಲ್ಲೇಖ ಮಾತ್ರವಿದೆ. ಶರ್ಮಿಷ್ಠೆಯೊಡನೆ ಶಯನಸುಖವನ್ನು ಪಡೆಯಬಾರದೆಂದು ಶುಕ್ರಾಚಾರ್ಯನು ನಿಖರವಾಗಿ ಹೇಳಿದ್ದರೂ, ಶರ್ಮಿಷ್ಠೆಗೆ ಮಗುವಾದುದನ್ನು ತಿಳಿದು ಶುಕ್ರಾಚಾರ್ಯನು ಯಯಾತಿಗೆ ವಾರ್ಧಕ್ಯದ ಶಾಪವನ್ನು ಕೊಟ್ಟನು.

## ೫೯. ದೇವಾಂತಕ

ಕುಂಭಕರ್ಣನು ಹತನಾದಾಗ ರಾವಣನ ಮಗನಾದ ದೇವಾಂತಕನು ಬಹಳ ಶೋಕಾಕುಲನಾದನು. ತ್ರಿಶಿರನ ಹುರಿದುಂಬಿಸುವ ಭಾಷಣದಿಂದ ನರಾಂತಕನಂತೆ ಇವನೂ ಯುದ್ಧಕ್ಕೆ ಸಜ್ಜಾದನು. ಯುದ್ಧದಲ್ಲಿ ನರಾಂತಕನು ಹತನಾದುದನ್ನು ಕಂಡು ಈತನು ರೋಷಗೊಂಡು ಅಂಗದನ ಮೇಲೆ ಏರಿಹೋದನು. ಹನುಮಾನನು ಇವನನ್ನು ವಧಿಸಿದನು.

## ೬೦. ದ್ವಿವಿದ

ದ್ವಿವಿದನು ಸುಷೇಣನೆಂಬ ವಾನರನ ಮಗ. ಇವನು ಸುಗ್ರೀವನಿಗೆ ಪಟ್ಟಕಟ್ಟಲು ಪ್ರಯತ್ನಿಸುತ್ತಿದ್ದನು. ಈತನು ನಂತರ ಸುಗ್ರೀವನ ಮಂತ್ರಿಯಾದನು. ದ್ವಿವಿದನು ಮೈಂದನ ಸಹೋದರ. ಈತನು ಎಪ್ಪತ್ತು ಯೋಜನಗಳಷ್ಟು ದೂರದವರೆಗೆ ನೆಗೆಯುವ ಶಕ್ತಿಯುಳ್ಳವನಾಗಿದ್ದನು. ಈತನು ಎಲ್ಲ ವಾನರರೊಡನೆ ಋಕ್ಷ ಗುಹೆಯನ್ನು ಪ್ರವೇಶಿಸಿದ್ದನು. ಬ್ರಹ್ಮನಿಂದ ಈತನಿಗೆ ಯಾರಿಂದಲೂ ವಧೆಯಾಗದ ವರವು ದೊರೆತಿತ್ತು. 'ಕಾಳಗದಲ್ಲಿ ಈತನನ್ನು ಮೀರಿಸುವವರು ಯಾರೂ ಇಲ್ಲ' ಎಂದು ಶುಕನು ಇವನ ಪರಾಕ್ರಮವನ್ನು ರಾವಣನ ಮುಂದೆ ಬಣ್ಣಿಸಿದ್ದನು. ಇವನು 'ಅಶನಿಪ್ರಭ' ಮತ್ತು 'ಸಮಪ್ರಭ' ಎಂಬ ರಾಕ್ಷಸರನ್ನು ವಧಿಸಿದನು. ಇವನು ಕುಂಭಕರ್ಣನ ಮೇಲೆ ಪರ್ವತವೊಂದನ್ನು ಎಸೆದಾಗ ಅನೇಕ ರಾಕ್ಷಸರು, ಕುದುರೆಗಳು, ರಥಗಳು ಅದರಡಿಯಲ್ಲಿ ಸಿಕ್ಕಿ ಪುಡಿಪುಡಿಯಾದವು. ಈತನು ಅತಿಕಾಯ ರಾಕ್ಷಸನ ಮೇಲೆ ಮಾಡಿದ ಹಲ್ಲೆಯು ನಿಷ್ಫಲವಾಯಿತು. ಇವನು ಶೋಣಿತನೆಂಬ ರಾಕ್ಷಸನನ್ನು ಕೊಂದನು. ಶ್ರೀರಾಮನು ಈತನಿಗೆ ಕಲಿಯುಗದವರೆಗೆ ಜೀವಿತವಿರಲು ಹೇಳಿದ್ದನು.

ಈತನು ಕಿಷ್ಕಿಂಧಾಪತಿಯಾದನು. ಈತನು ರಾಜಸೂಯಯಜ್ಞದ ಸಮಯಕ್ಕೆ ಸಹದೇವನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟ ಉಲ್ಲೇಖವು ಮಹಾಭಾರತದಲ್ಲಿದೆ.

## ೬೧. ನಂದೀಶ್ವರ

ನಂದೀಶ್ವರನು ಶಾಲಂಕಾಯನನ ಮೊಮ್ಮಗ ; ಶಿಲಾದನ ಮಗ. ಶಿಲಾದನಿಗೆ ಸಂತಾನವಿರದಾಗ ಮಕ್ಕಳನ್ನು ಪಡೆಯಲು ತಪಸ್ಸನ್ನು ಕೈಕೊಂಡನು. ಶಂಕರನು ಪ್ರಸನ್ನನಾಗಿ ಇಚ್ಛಾಪೂರ್ತಿಯ ವರವನ್ನು ಕರುಣಿಸಿದನು. ಯಜ್ಞಕ್ಕೆಂದು ಒಮ್ಮೆ ಭೂಮಿಯನ್ನು ಉಳುತ್ತಿದ್ದಾಗ ಶಿಲಾದನು ಮೂರು ನೇತ್ರಗಳುಳ್ಳ, ನಾಲ್ಕು ಕೈಗಳುಳ್ಳ, ಜಟಾಮುಕುಟಧಾರಿಯಾದ ಶಂಕರರೂಪದವನಾದ ಬಾಲಕನೊಬ್ಬನನ್ನು ಕಂಡನು. ಅವನನ್ನು ಮನೆಗೆ ಕರೆತಂದ ನಂತರ ಆ ಬಾಲಕನು ಸಾಮಾನ್ಯ ಹುಡುಗನಂತೆ ಆದನು. ಈ ಬಾಲಕನೇ ನಂದೀಶ್ವರನು. ಈತನು ಎಂಟು ವರ್ಷ ಪ್ರಾಯದವನಾದಾಗ ಮಿತ್ರ-ವರುಣರು, ಈ ಹುಡುಗನು ಅಲ್ಪಾಯುಷಿಯಾಗಿರುವನೆಂದು ನುಡಿದರು. ಇವನು ಅಪಮೃತ್ಯುವನ್ನು ತಡೆಯಲು ಶಂಕರನನ್ನು ಆರಾಧಿಸಿ ಪ್ರಸನ್ನಗೊಳಿಸಿಕೊಂಡನು. ಶಂಕರನಿಂದ ಈತನಿಗೆ ಅಮರತ್ವವು ದೊರೆಯಿತು. ಅಷ್ಟೇ ಅಲ್ಲದೆ, ಶಂಕರನು ಇವನನ್ನು ಪುತ್ರನಂತೆ ಭಾವಿಸಿ ಇವನಿಗೆ ತನ್ನ ಪಾರ್ಶ್ವಗಣದಲ್ಲಿ ಸ್ಥಾನವನ್ನು ಕೊಟ್ಟನು. ಈತನ ವಿವಾಹವು ಮರುತನ ಕನ್ಯೆಯಾದ ಸುಯಶಾಳೊಡನೆ ನಡೆಯಿತು. ದಕ್ಷಯಜ್ಞಧ್ವಂಸದ ಸಮಯದಲ್ಲಿ ಈತನು ಭಗನೆಂಬ ಋತ್ವಿಜನನ್ನು ಬಂಧಿಸಿಟ್ಟನು ; ಹಾಗೂ ದಕ್ಷನಿಗೆ ಶಾಪವನ್ನಿತ್ತನು. ಶ್ರೀರಾಮನ ಅಶ್ವಮೇಧಯಜ್ಞದ ಸಮಯಕ್ಕೆ ಈತನು ಹನುಮಾನನೊಡನೆ ಕಾದಾಡಿದನೆಂದು ಪದ್ಮಪುರಾಣದ ಪಾತಾಲಖಂಡದಲ್ಲಿ ಹೇಳಲಾಗಿದೆ. ಈತನು ರಾವಣನಿಗೆ ಶಾಪವನ್ನು ಕೊಟ್ಟಿದ್ದನು.

## ೬೨. ನರಾಂತಕ

ಇವನು ರಾವಣನ ಮಗನಾಗಿದ್ದು ಅಗ್ನಿಯಂತೆ ಪ್ರಖರನೂ, ಪರ್ವತಶಿಖರಗಳೊಡನೆ ಸೆಣಸಾಡುವವನೂ ಆಗಿರುವನೆಂದು ವಿಭೀಷಣನು ಶ್ರೀರಾಮನಿಗೆ ವಿವರಿಸುತ್ತಾನೆ. ಕುಂಭಕರ್ಣನು ಯುದ್ಧದಲ್ಲಿ ಮಡಿದನಂತರ ನರಾಂತಕನು ಸಿಟ್ಟಿಗೆದ್ದು ರಣಾಂಗಣಕ್ಕೆ ಇಳಿದನು. ತ್ರಿಶಿರನ ಭಾಷಣದಿಂದ ಸ್ಫೂರ್ತಿಗೊಂಡು ಈತನು ವಾನರ ಸೈನ್ಯದಲ್ಲಿ ನುಗ್ಗಿ ಅವರನ್ನು ಸಂಹರಿಸಿದನು. ಅಂಗದನೊಡನೆ ನಡೆದ ಯುದ್ಧದಲ್ಲಿ ಈತನು ಕೊಲ್ಲಲ್ಪಟ್ಟನು.

## ೬೩. ನಲವಾನರ

ಇವನು ವಿಶ್ವಕರ್ಮ ಮತ್ತು ಘೃತಾಚಿ ಎಂಬ ಅಪ್ಸರೆಯ ಮಗನು. ಋತುಧ್ವಜನೆಂಬ ಮುನಿಯ

ಶಾಪದಿಂದ ಈತನಿಗೆ ವಾನರರೂಪವು ಬಂದಿತು. ಇವನು ವಾನರರ ಸೇನೆಯ ಪ್ರಮುಖರಲ್ಲಿ ಒಬ್ಬನಾಗಿದ್ದನು. ಈತನು ಇಷ್ಟವಿದ್ದ ವಸ್ತುಗಳನ್ನು ತಕ್ಷಣ ನಿರ್ಮಿಸುವ ಶಕ್ತಿಯ ವರವನ್ನು ತನ್ನ ತಂದೆಯಿಂದ ಪಡೆದಿದ್ದನು. ಇವನು ಶ್ರೀರಾಮನ ಆಜ್ಞೆಯನುಸಾರ ಸೇತುವೆಯನ್ನು ನಿರ್ಮಿಸಿದನು. ಲಂಕೆಯ ಪ್ರಾಕಾರದಲ್ಲಿ ನುಗ್ಗಲು ಕಿಂಡಿಯನ್ನು ತೋಡುವುದರಲ್ಲಿ ಇವನದು ಪ್ರಮುಖ ಪಾತ್ರವಿತ್ತು. ಇವನು 'ನಿನ್ನ ಕೈಯಿಂದ ನೀರಿನಲ್ಲಿ ಬಿಡಲಾದ ಕಲ್ಲುಗಳು ತೇಲುವುವು' ಎಂಬ ವರವನ್ನು ಒಬ್ಬ ಬ್ರಾಹ್ಮಣನಿಂದ ಪಡೆದಿದ್ದನು. ಇದರಿಂದ ನಲನಿಗೆ ಸೇತುವೆಯನ್ನು ಕಟ್ಟುವುದು ಸಾಧ್ಯವಾಯಿತು. ನಲನು ಪ್ರತಪನ, ಅಕಂಪನ, ಪ್ರಹಸ್ತ ಮೊದಲಾದವರೊಡನೆ ಯುದ್ಧಮಾಡಿ ತನ್ನ ಶೌರ್ಯಸಾಹಸಗಳನ್ನು ಪ್ರದರ್ಶಿಸಿದನು. ಅಶ್ವಮೇಧಯಜ್ಞದ ಕಾಲಕ್ಕೆ ಯಜ್ಞದ ಕುದುರೆಯನ್ನು ರಕ್ಷಿಸಲು ಈತನು ಶತ್ರುಘ್ನನೊಡನೆ ಇದ್ದನು. ಇಂದ್ರಜಿತುವು ಇವನನ್ನು ಬಾಣಗಳಿಂದ ಗಾಯಗೊಳಿಸಿದನು. ರಾಜ್ಯಾಭಿಷೇಕದ ಸಮಯಕ್ಕೆ ಶ್ರೀರಾಮನು ಇವನನ್ನು ಸತ್ಕರಿಸಿದನು. ಕುಶ-ಲವರು ಇವನನ್ನು ಸೋಲಿಸಿದರು.

## ೬೪. ನಲಕೂಬರ

ಇವನು ವೈಶ್ರವಣನ ಮಗ ಮತ್ತು ಮಣಿಗ್ರೀವನ ಸಹೋದರ. ಒಮ್ಮೆ ಈ ಸಹೋದರರಿಬ್ಬರೂ ಕೈಲಾಸಪರ್ವತದ ಗಂಗಾತೀರದ ಉಪವನದಲ್ಲಿ ಸ್ತ್ರೀಯರೊಡನೆ ಕೂಡಿ ಮದ್ಯಪಾನ ಮಾಡಿ ರತಿಕ್ರೀಡೆಯಲ್ಲಿ ತೊಡಗಿದ್ದರು. ಎಲ್ಲರೂ ವಸ್ತ್ರರಹಿತರಾಗಿದ್ದರು. ನಾರದನು ಇದನ್ನೆಲ್ಲ ದೃಷ್ಟಿಸಿದಾಗ ಆತನು ಶಾಪ ಕೊಡಬಹುದೆಂಬ ಭಯದಿಂದ ಸ್ತ್ರೀಯರೆಲ್ಲರೂ ತಮ್ಮ ತಮ್ಮ ವಸ್ತ್ರಗಳನ್ನು ತೊಟ್ಟುಕೊಂಡರು. ಈ ಸಹೋದರರಿಬ್ಬರೂ ಮದ್ಯದ ಮತ್ತಿನಲ್ಲಿ ನಗ್ನರಾಗಿಯೇ ಉಳಿದರು. ನಾರದನು ಇವರನ್ನು ಶಿಕ್ಷಿಸಲೆಂದು ಇವರಿಗೆ ನೂರು ವರ್ಷಗಳ ಕಾಲ ದಿವ್ಯ ವೃಕ್ಷಗಳಾಗಿ ನಿಲ್ಲುವ ಶಾಪವನ್ನು ಕೊಟ್ಟನು. ಅಂಥ ಸ್ಥಿತಿಯಲ್ಲಿಯೂ ನಾರದನ ಕೃಪೆಯಿಂದ ಅವರಿಗೆ ಪೂರ್ವಸ್ಮರಣೆಯು ಇತ್ತು. ಶ್ರೀಕೃಷ್ಣನ ಸಾನ್ನಿಧ್ಯದಿಂದ ಇವರು ಶಾಪದಿಂದ ಮುಕ್ತರಾದರು. ನಂತರ ಇವರು ಶ್ರೀಕೃಷ್ಣನ ಭಕ್ತರಾದರೆಂದು ಮಹಾಭಾರತದ ಸಭಾಪರ್ವದಲ್ಲಿ ಉಲ್ಲೇಖವಿದೆ.

ನಲಕೂಬರನು ರಂಭೆಯಲ್ಲಿ ಬಹಳ ಪ್ರೀತಿಯುಳ್ಳವನಾಗಿದ್ದನು. ರಂಭೆಗೆ ನಲಕೂಬರನೆಂದರೆ ಪಂಚಪ್ರಾಣದಂತಿದ್ದನೆಂದು ವಾಲ್ಮೀಕಿರಾಮಾಯಣದಲ್ಲಿದೆ. 'ನಲಕೂಬರನು ಧರ್ಮದಲ್ಲಿ ಬ್ರಾಹ್ಮಣನಂತೆ, ಶೌರ್ಯಸಾಹಸಗಳಲ್ಲಿ ಕ್ಷತ್ರಿಯನಂತೆ, ಕ್ರೋಧದಲ್ಲಿ ಅಗ್ನಿಯಂತೆ ಮತ್ತು ಕ್ಷಮಾವೃತ್ತಿಯಲ್ಲಿ ಪೃಥ್ವಿಯಂತೆ ಇದ್ದಾನೆ' ಎಂದು ರಂಭೆಯು ರಾವಣನ ಮುಂದೆ ಉದ್ಗರಿಸಿದ್ದಳು. ಸಂಕೇತಕ್ಕನುಸಾರವಾಗಿ ರಂಭೆಯು ಒಮ್ಮೆ ಸರ್ವಾಲಂಕಾರಭೂಷಿತಳಾಗಿ ಶೃಂಗರಿಸಿಕೊಂಡು ನಲಕೂಬರನ ಭೇಟಿಗೆ ನಡೆದಿದ್ದಳು. ರಾವಣನು ಮಾರ್ಗಮಧ್ಯದಲ್ಲಿ ಬಂದು ಅವಳನ್ನು ಬಲಾತ್ಕರಿಸಿ ಉಪಭೋಗಿಸಿದನು. ಈ ವಿಷಯವನ್ನು ರಂಭೆಯು ನಲಕೂಬರನಿಗೆ ತಿಳಿಸಿದಾಗ ಆತನು ರೊಚ್ಚಿಗೆದ್ದು ಕೈಯಲ್ಲಿ ಉದಕವನ್ನು ಹಿಡಿದು ರಾವಣನಿಗೆ ಶಾಪವಿತ್ತನು.

## ೬೫. ನಹುಷ

ಇವನು ಪುರೂರವನ ಮೊಮ್ಮಗ, ಆಯುವಿನ ಪುತ್ರ, ಯಯಾತಿಯ ಪಿತ. ಬೇರೆಬೇರೆ ಪುರಾಣಗಳಲ್ಲಿ ಇವನ ತಾಯಿಯ ಹೆಸರು ಬೇರೆಬೇರೆಯಾಗಿದೆ. ತನ್ನ ಹೊಟ್ಟೆಯಿಂದ ಹುಟ್ಟುವ ಮಗನು ಪಿತೃಘಾತಕನಾಗಲಿರುವನು ! — ಎಂಬ ಭವಿಷ್ಯವನ್ನು ಇವನ ತಾಯಿಯು ಗರ್ಭದಿಂದಲೇ ತಿಳಿದುಕೊಂಡಿದ್ದಳು. ಹೀಗಾದ್ದರಿಂದ ಹುಟ್ಟಿದಂದಿನಿಂದ ನಹುಷನು ಸಂಕಟದಲ್ಲಿ ಸಿಲುಕಿದ್ದನು. ವಸಿಷ್ಠನು ದಿವ್ಯದೃಷ್ಟಿಯಿಂದ ಎಲ್ಲವನ್ನೂ ಅರಿತುಕೊಂಡು, ನಹುಷನನ್ನು ರಕ್ಷಿಸಿದನು. ವಸಿಷ್ಠನು ಈತನ ಉಪನಯನವಿಧಿಯನ್ನು ಪೂರ್ತಿಮಾಡಿ, ವೇದಗಳನ್ನೂ ಧನುರ್ವಿದ್ಯೆಯನ್ನೂ ಹೇಳಿಕೊಟ್ಟನು. ಈತನು ಬೆಸ್ತರ ಬಲೆಯಲ್ಲಿ ಸಿಲುಕಿಕೊಂಡ ಚ್ಯವನ ಮುನಿಯನ್ನು ಬಿಡುಗಡೆ ಮಾಡಿದನು. ಬೆಸ್ತರಿಗೆ ಗೋವುಗಳನ್ನು ಕೊಟ್ಟನು. ತೃಷ್ಟನನ್ನು ಸನ್ಮಾನಿಸಲು ಗೋವಧೆಯನ್ನು ಮಾಡಿದನು. ಬ್ರಹ್ಮಹತ್ಯೆಯ ಪಾತಕವು ನಡೆದ ಕಾರಣ ಇಂದ್ರನ ಇಂದ್ರಪದವು ಕಳೆದುಹೋಗಿತ್ತು. ಆಗ ದೇವತೆಗಳು ಮತ್ತು ಋಷಿಗಳೆಲ್ಲರೂ ಸೇರಿ ತಮ್ಮ ತಪಸ್ಸಾಮರ್ಥ್ಯವನ್ನು ನಹುಷನಿಗೆ

ಕೊಟ್ಟು ಆತನಿಗೆ ಇಂದ್ರಪದವನ್ನು ಕೊಟ್ಟರು ಮತ್ತು 'ನೀನು ಯಾರನ್ನು ದೃಷ್ಟಿಸುವೆಯೋ ಅವರ ತೇಜಹರಣವಾಗುವುದು' ಎಂದು ವರವನ್ನು ಕೊಟ್ಟರು. ಕೆಲವು ಕಾಲದವರೆಗೆ ಇವನು ಧರ್ಮದಿಂದ ರಾಜ್ಯವನ್ನಾಳಿದನು. ಆದರೆ ಬರಬರುತ್ತ ಈತನಿಗೆ ಅಹಂಕಾರವು ಹೆಚ್ಚಾಗಿ, ಬುದ್ಧಿಯೂ ಕೆಟ್ಟು, ವಿಷಯಲಂಪಟನಾದನು. ಒಮ್ಮೆ ಇಂದ್ರಾಣಿಯು ಈತನ ಕಣ್ಣಿಗೆ ಬಿದ್ದಳು. ಇವನು ಅವಳ ಸೌಂದರ್ಯವನ್ನು ಕಂಡು ಕಾಮಾಸಕ್ತನಾದನು. ಆಕೆಯನ್ನು ತನ್ನ ಬಳಿ ಕರೆತರಲು ದೇವತೆಗಳಿಗೆ ಹೇಳಿದನು. ಆಗ ಇಂದ್ರಾಣಿಯು ಇಂದ್ರನೊಡನೆ ವಿಚಾರವಿನಿಮಯ ನಡೆಸಿದಳು. ನಂತರ 'ಸಪ್ತರ್ಷಿಗಳು ಹೊತ್ತುತಂದ ಪಲ್ಲಕ್ಕಿಯಲ್ಲಿ ಕುಳಿತು ಬಂದರೆ ಸ್ವಾಗತಿಸುವೆ' ಎಂದು ಇಂದ್ರಾಣಿಯು ನಹುಷನಿಗೆ ಹೇಳಿಕಳುಹಿಸಿದಳು. ನಹುಷನಿಗೆ ಇದು ಬಹು ಸುಲಭವಾದ ಸಂಗತಿ ಎನಿಸಿತು. ನಹುಷನು ಸಪ್ತರ್ಷಿಗಳು ಹೊತ್ತುತಂದ ಪಲ್ಲಕ್ಕಿಯಲ್ಲಿ ಕುಳಿತು ಇಂದ್ರಾಣಿಯತ್ತ ನಡೆದನು. ಪಲ್ಲಕ್ಕಿಯಲ್ಲಿ ಕುಳಿತ ನಹುಷನ ಪಾದವು, ಪಲ್ಲಕ್ಕಿಯನ್ನು ಹೊತ್ತ ಅಗಸ್ತ್ಯ ಋಷಿಯ ತಲೆಗೆ ತಗಲಿತು. ಆಗ ಅಗಸ್ತ್ಯನು ನಹುಷನಿಗೆ ಶಾಪವನ್ನು ಕೊಟ್ಟ, ಕಾರಣ ನಹುಷನು ಸರ್ಪವಾಗಿ ಬಿದ್ದನು. ಈ ನಹುಷನು ಅಗಸ್ತ್ಯನತ್ತ ದೃಷ್ಟಿಸಿ ಆತನ ತೇಜಹರಣವನ್ನು ಮಾಡಿದರೂ ಅಗಸ್ತ್ಯನ ಪ್ರಭಾವವು ಕಡಿಮೆಯಾಗಿರಲಿಲ್ಲ. ಏಕೆಂದರೆ ಅಗಸ್ತ್ಯನ ಜಟೆಯಲ್ಲಿ ಭೃಗುವು ಕುಳಿತಿದ್ದನು. ನಹುಷನು ಅವನನ್ನು ಗಮನಿಸಿರಲಿಲ್ಲ. ಆದ್ದರಿಂದಲೇ ಅವನಿಗೆ ಶಾಪವು ತಗುಲಿತು. ಯುಧಿಷ್ಠಿರನು ನಹುಷನನ್ನು ಈ ಶಾಪದಿಂದ ಮುಕ್ತಗೊಳಿಸಿದನು.

ಈತನ ಮಕ್ಕಳ ಬಗ್ಗೆ ಬೇರೆಬೇರೆ ಗ್ರಂಥಗಳಲ್ಲಿ ಬೇರೆಬೇರೆ ಉಲ್ಲೇಖವಿದೆ. ಯತಿ, ಯಯಾತಿ, ಸಂಯಾತಿ ಮತ್ತು ಆಯಾತಿ ಎಂಬ ಹೆಸರುಗಳ ಉಲ್ಲೇಖವು ಅನೇಕ ಗ್ರಂಥಗಳಲ್ಲಿದೆ.

## ೬೬. ನಿಮಿರಾಜ

ನಿಮಿರಾಜ ಅಯೋಧ್ಯಾಪತಿಯಾದ ಇಕ್ಷ್ವಾಕುವಿನ ಹನ್ನೆರಡನೆಯ ಪುತ್ರ. ಈತನು ಸ್ತ್ರೀಯರೊಡನೆ ದ್ಯೂತವಾಡುತ್ತಿದ್ದ ವೇಳೆಗೆ ವಸಿಷ್ಠನು ಅಲ್ಲಿಗೆ ಬಂದನು. ರಾಜನು ವಸಿಷ್ಠನಿಗೆ ಯೋಗ್ಯವಾದ ಆಸನ, ಅತಿಥಿಸತ್ಕಾರ ನೀಡದೇ ಇದ್ದ ಕಾರಣ ವಸಿಷ್ಠನು ಕೋಪಗೊಂಡು ನಿಮಿರಾಜನಿಗೆ ಶಾಪಕೊಟ್ಟನು. ನಿಮಿರಾಜನು ವಸಿಷ್ಠನಿಗೆ ಪ್ರತಿಶಾಪವನ್ನು ಕೊಟ್ಟನೆಂದು ಪದ್ಮ ಪುರಾಣದಲ್ಲಿ ಬರೆದಿದೆ. ವಸಿಷ್ಠನ ಶಾಪದಿಂದ ಚೈತನ್ಯಹೀನವಾಗಿದ್ದ ನಿಮಿರಾಜನ ದೇಹವನ್ನು ಸುಗಂಧದ್ರವ್ಯಗಳನ್ನು ಬಳಸಿ ರಕ್ಷಿಸಿಡಲಾಗಿತ್ತು. ನಿಮಿರಾಜನ ಯಜ್ಞಕ್ಕೆಂದು ಬಂದ ಋಷಿಗಳು ಯಜ್ಞವನ್ನು ಮುಂದುವರಿಸಿದರು. ಕೊನೆಗೆ ಹವಿರ್ಭಾಗವನ್ನು ಒಯ್ಯಲು ಬಂದ ದೇವತೆಗಳು ಯಜಮಾನನನ್ನು ಆಶೀರ್ವದಿಸಬೇಕೆಂದು ವಿನಂತಿಸಲಾಯಿತು. 'ದೇಹ ಮತ್ತು ಜೀವ—ಇವುಗಳ ವಿಯೋಗವೆಂದರೆ ಬಲು ದುಃಖಕರ ಸಂಗತಿ. ಆದ್ದರಿಂದ ನಾನು ದೇಹವನ್ನು ಧರಿಸದೆಯೇ ಎಲ್ಲರ ನೇತ್ರಗಳಲ್ಲಿರಲು ಇಚ್ಛಿಸುತ್ತೇನೆ' ಎಂದು ನಿಮಿರಾಜನು ತಿಳಿಸಿದನು. ನಿಮಿರಾಜನು ಈ ರೀತಿ ಬಯಸಿದ್ದರಿಂದ, ದೇವತೆಗಳು ಈತನನ್ನು ಎಲ್ಲ ಪ್ರಾಣಿಗಳ ನೇತ್ರಗಳ ಹೊಳಪಾಗಿ ಸ್ಥಾಪಿಸಿದರು. ಇದರಿಂದ ಪ್ರಾಣಿಗಳು ಕಣ್ಣು ರೆಪ್ಪೆಗಳನ್ನು ತೆರೆಯುವುದು-ಮುಚ್ಚುವುದನ್ನು ಮಾಡುತ್ತವೆಂದು ಕೆಲವು ಗ್ರಂಥಗಳಲ್ಲಿದೆ. ಕಣ್ಣೆವೆಗಳನ್ನು ಮುಚ್ಚಿ ಮತ್ತೆ ತೆರೆಯುವಷ್ಟು ಅಲ್ಪಕಾಲಕ್ಕೆ 'ನಿಮಿಷ' ಎಂಬ ಪದ ಈತನಿಂದಲೇ ಬಂದಿದೆ. ಬ್ರಹ್ಮದೇವನು ನಿಮಿರಾಜನಿಗೆ ಕಣ್ಣಿನ ರೆಪ್ಪೆಗಳ ಮೇಲಿರಲು ಹೇಳಿದನೆಂದು ಮತ್ಸ್ಯಪುರಾಣದಲ್ಲಿದೆ. ನಿಮಿರಾಜನಿಗೆ ಸಂತಾನವಿಲ್ಲವಾದ್ದರಿಂದ ಈತನು ತನ್ನ ದೇಹವನ್ನು 'ಅರಣಿ'(ಬೆಂಕಿಯನ್ನು ಹುಟ್ಟಿಸುವ)ಯಂತೆ ಉಜ್ಜಿ ಮಂತ್ರಸಹಿತವಾಗಿ ಹೋಮ ಮಾಡಿ ಮಂಥನ ಮಾಡಲು ಕೊಟ್ಟನು. ಇದರಿಂದ ಉತ್ಪನ್ನವಾದ ತೇಜಸ್ಸುಳ್ಳ ಪುರುಷನೆಂದರೆ 'ಮಿಥಿ' ಎಂದಿದೆ. ಈ ರೀತಿಯಾಗಿ ಮಿಥಿಯು ಮಾತೆಯಿಂದ ಜನ್ಮತಾಳದೆ ಪಿತನಿಂದ ಜನ್ಮತಾಳಿದನು. ಆದ್ದರಿಂದ ಮಿಥಿಗೆ 'ನಿಮಿಜನಕ' ಎಂದು ಕೂಡ ಎನ್ನುತ್ತಾರೆ ; ಅಲ್ಲದೆ ದೇಹರಹಿತ ನಿಮಿರಾಜನಿಂದ ಹುಟ್ಟಿದ ಕಾರಣ ಮಿಥಿಗೆ 'ವೈದೇಹ' ಎಂಬ ಹೆಸರು ಸಹ ಬಂದಿದೆ ಎಂದು ವಾಲ್ಮೀಕಿಯು ಉತ್ತರಕಾಂಡ ಸರ್ಗ ೫೭ರಲ್ಲಿ ವಿವರಿಸಿದ್ದಾನೆ.

ಶಾಪ ಕ್ರಮಸಂಖ್ಯೆ ೫೦, ವಸಿಷ್ಠ > ನಿಮಿರಾಜ ; ನಿಮಿರಾಜ > ವಸಿಷ್ಠ; ದೇವ > ನಿಮಿರಾಜ ಇವುಗಳನ್ನು (ಹೆಚ್ಚಿನ ವಿವರಗಳಿಗೆ) ನೋಡಿ.

## ೬೭. ನಿವಾತಕವಚ

ಇದೊಂದು ರಾಕ್ಷಸರ ಗುಂಪು. ಪ್ರಹ್ಲಾದನ ಸಹೋದರನಾದ ಸಂಹ್ರಾದನ ಮಗನ ಹೆಸರು ಕೂಡ ನಿವಾತಕವಚನೆಂದಿತ್ತು. ಇವರೆಲ್ಲರೂ ರಾವಣನಿಗೆ ಮಿತ್ರರಾಗಿದ್ದರು. ಇಂದ್ರನು ಕೂಡ ಇವರನ್ನು ಸೋಲಿಸು ವಂತಿರಲಿಲ್ಲ. ಅರವತ್ತುಸಾವಿರ ಅಥವಾ ಎಪ್ಪತ್ನಾಲ್ಕುಸಾವಿರದಷ್ಟು ಸಂಖ್ಯೆ ಇವರದಾಗಿರಬಹುದು. ಬ್ರಹ್ಮದೇವನಿಂದ ಇವರಿಗೆ ವರವು ದೊರೆತಿತ್ತು. ಇವರು ಪಾತಾಳದ ಮಣಿಮಯ ನಗರದಲ್ಲಿ ವಾಸವಾಗಿದ್ದರು.

## ೬೮. ನಿಶಾಕರ

ಈತನು ವಿಂಧ್ಯಪರ್ವತದ ಒಂದು ಆಶ್ರಮದಲ್ಲಿ ವಾಸವಿದ್ದ ಋಷಿ. ಸಂಪಾತಿ ಹಾಗೂ ಜಟಾಯು ಇಬ್ಬರೂ ಬಹುಕಾಲ ಈ ಋಷಿಯ ಸೇವೆಯನ್ನು ಮಾಡಿದರು. ಸೂರ್ಯನ ಕಿರಣಗಳಿಂದ ರೆಕ್ಕೆಗಳು ಸುಟ್ಟು, ಸಂಪಾತಿಯು ಈ ಋಷಿಯ ಆಶ್ರಮದ ಬಳಿ ಬಿದ್ದಿದ್ದಾಗ ಇವನು 'ನಿನಗೆ ಹೊಸ ರೆಕ್ಕೆಗಳು, ನೇತ್ರಗಳು, ಪ್ರಾಣ ಇವೆಲ್ಲ ದೊರೆಯುವುವು' ಎಂಬ ವರವನ್ನು ಕೊಟ್ಟನು. ಅಲ್ಲದೆ ಸೀತಾಪಹರಣದ ಭವಿಷ್ಯವಾರ್ತೆಯನ್ನು ತಿಳಿಸಿ, 'ಅಲ್ಲಿಯವರೆಗೆ ಸಮಯದ ಪ್ರತೀಕ್ಷೆಯಲ್ಲಿರು !' ಎಂದು ನುಡಿದು ಈ ಋಷಿಯು ಮಹಾಪ್ರಸ್ಥಾನ ಮಾಡಿ ಸ್ವರ್ಗಕ್ಕೆ ಹೋದನು.

## ೬೯. ನಿಷಾದ

'ನಿಷದ್ಯತೇ ಗ್ರಾಮಶೇಷಸೀಮಾಯಾಮ್'—'ಯಾವನು ಗ್ರಾಮದ ಸೀಮೆಯ ಅಂಚಿನಲ್ಲಿ ವಾಸಿಸುತ್ತಾನೋ ಅವನು ನಿಷಾದನು' ಎಂದು ಶಬ್ದೋತ್ಪತ್ತಿ ಇದೆ. 'ಚತ್ವಾರೋ ವರ್ಣಾಃ ಪಂಚಮೋ ನಿಷಾದಃ' ಎಂಬಂತೆ ಐದು ತರಹದ ಜನರಿಂದ ಕೂಡಿದ ಭಾರತೀಯ ಸಮಾಜದಲ್ಲಿ ಚಾತುರ್ವರ್ಣ್ಯದವರನ್ನು ಹೊರತುಪಡಿಸಿ, ಇನ್ನುಳಿದ ಐದನೆಯ ಭಾಗದವರೆಲ್ಲರನ್ನೂ ನಿಷಾದರೆಂದು ಪರಿಗಣಿಸುತ್ತಿದ್ದಿರಬಹುದು. ಬೌಧಾಯನ ಹಾಗೂ ಮಹಾಭಾರತ ಗ್ರಂಥಗಳನುಸಾರ ಒಬ್ಬ ಬ್ರಾಹ್ಮಣಪುರುಷ ಮತ್ತು ಓರ್ವ ಶೂದ್ರಸ್ತ್ರೀ ಇವರ ಸಂಬಂಧದಿಂದ ನಿಷಾದ ಜಾತಿಯು ಹುಟ್ಟಿರುವದೆಂದಿದೆ. ಐತರೇಯ ಬ್ರಾಹ್ಮಣದಲ್ಲಿ ನಿಷಾದರ ವಿಷಯ ಪ್ರಸ್ತಾಪವಿದೆ. ನಮ್ಮ ಸಮಾಜವ್ಯವಸ್ಥೆಯಲ್ಲಿ ನಿಷಾದರಿಗೆ ಗೌಣಸ್ಥಾನವನ್ನು ಕೊಡಲಾಗಿದ್ದರೂ ಅವರಿಗೆ ಕೆಲವು ಧಾರ್ಮಿಕ ಅಧಿಕಾರಗಳೂ ಇದ್ದವು. ನಿಷಾದರು ಮೀನುಗಾರಿಕೆ ಮತ್ತು ಬೇಟೆಯನ್ನು ಅವಲಂಬಿಸಿರುತ್ತಿದ್ದರು. ಪ್ರಾಚೀನ ಕಾಲದಲ್ಲಿ ನಿಷಾದರು ದೋಣಿಗಳಿಂದ ಸಾಗಾಣಿಕೆಯನ್ನು ಮಾಡುತ್ತಿದ್ದಿರಬಹುದು. ವನವಾಸಕ್ಕೆ ಹೊರಟ ಶ್ರೀರಾಮನಿಗೆ ಗಂಗಾನದಿಯನ್ನು ದಾಟಲು ನೆರವಾದ ಗುಹನೂ ಒಬ್ಬ ನಿಷಾದನೇ ಆಗಿದ್ದನು.

ಶಾಪ ಪಡೆದ ನಿಷಾದನ ಉಲ್ಲೇಖವು ವಾಲ್ಮೀಕಿರಾಮಾಯಣದಲ್ಲಿ 'ಮಾ ನಿಷಾದ' ಎಂಬ (ಬಾಲಕಾಂಡ ೨/೧೫) ಶ್ಲೋಕದನಂತರ ಎಲ್ಲಿಯೂ ಬಂದಿಲ್ಲ. ಬೇಟೆಯು ನಿಷಾದರ ಬದುಕಿನ ಹಾದಿಯಾಗಿರುವುದರಿಂದ ಕ್ರೌಂಚಪಕ್ಷಿಯ ವಧೆಯು ಅವರ ದೃಷ್ಟಿಯಿಂದ ಪಾಪಕರ್ಮವೆನಿಸಲಾರದು. ಹೀಗಿದ್ದರೂ ಆ ಕ್ರೌಂಚಪಕ್ಷಿಯ ಜೋಡಿಯು ಮೈಥುನದಲ್ಲಿ ತೊಡಗಿದಾಗ ಬಾಣಬಿಡುವುದು ಸರಿಯಲ್ಲ. ಅದೊಂದು ಹೇಯ ಕೆಲಸವಾದ್ದರಿಂದ ನಿಷಾದನಿಗೆ ಶಾಪ ದೊರೆಯಿತು.

ಶಾಪ ಕ್ರಮಸಂಖ್ಯೆ ೧, ವಾಲ್ಮೀಕಿ > ನಿಷಾದ—ಟಿಪ್ಪಣಿಯನ್ನು ನೋಡಿ.

## ೭೦. ನೀಲ

ನೀಲನು ಅಗ್ನಿಯಿಂದ ಜನಿಸಿದ ಒಬ್ಬ ವಾನರಪ್ರಮುಖ. ಇವನು ತೀಕ್ಷ್ಣಬುದ್ಧಿಯವನಿದ್ದು ಸತತವಾಗಿ ಕಾರ್ಯದಲ್ಲಿ ತೊಡಗಿರುತ್ತಿದ್ದನು. ಸುಗ್ರೀವನ ವಿನಂತಿಯ ಮೇರೆಗೆ ಇವನು ಹತ್ತುಕೋಟಿ ವಾನರರ ಸೈನ್ಯ ಸಹಿತ ಬಂದನು. ಈತನು ವಾನರಸೇನೆಯ ಸೇನಾಪತಿಯಾಗಿದ್ದನು. ಇವನು ಇಡೀ ವಾನರಸೈನ್ಯವನ್ನು ವ್ಯವಸ್ಥಿತವಾಗಿ ಕಡಲು ದಾಟಿಸಿ, ಲಂಕೆಯತ್ತ ಸಾಗಿಸಿದನು. ಶ್ರೀರಾಮನ ಆಜ್ಞೆಯಂತೆ ಪ್ರಹಸ್ತನನ್ನು ಎದುರಿಸಲು

ಇವನು ಲಂಕೆಯ ಪೂರ್ವದ ದ್ವಾರದಲ್ಲಿ ಅನೇಕ ವಾನರರೊಂದಿಗೆ ಕಾಯ್ದು ನಿಂತುಕೊಂಡಿದ್ದನು. ನಿಕುಂಭನು ಯುದ್ಧದಲ್ಲಿ ಇವನನ್ನು ತೀಕ್ಷ್ಣಶರಗಳಿಂದ ಗಾಯಗೊಳಿಸಿದನು. ಆಗ ಇವನು ನಿಕುಂಭನ ಸಾರಥಿಯ ಶಿರವನ್ನು ಕತ್ತರಿಸಿ ಭೂಮಿಗೆ ಕೆಡವಿದನು. ಇಂದ್ರಜಿತುವನ್ನು ಹುಡುಕುತ್ತಿದ್ದಾಗ ನೀಲನು ಅವನ ಬಾಣಗಳಿಂದ ಕೆಳಗೆ ಉರುಳಿದನು. ಪ್ರಹಸ್ತನ ಜೊತೆ ಯುದ್ಧಮಾಡಿ ಅವನನ್ನು ಯಮಸದನಕ್ಕೆ ಅಟ್ಟಿದನು. ಇದರಿಂದ ಶ್ರೀರಾಮನಿಗೆ ಪರಮಾನಂದವಾಯಿತು. ರಾವಣನು ಅಗ್ನಿಯ ಅಸ್ತ್ರವನ್ನು ಪ್ರಯೋಗಿಸಿ ನೀಲನನ್ನು ಕೆಳಗೆ ಉರುಳಿಸಿದರೂ ಅವನು ಸಾಯಲಿಲ್ಲ. ನೀಲನು ಸೇನೆಯ ವ್ಯೂಹವನ್ನು ಉತ್ಕೃಷ್ಟವಾಗಿ ರಚಿಸಿ ಕುಂಭಕರ್ಣನ ಮೇಲೆ ಪರ್ವತಶಿಖರವನ್ನು ಎಸೆದನು. ಕುಂಭಕರ್ಣನು ಈತನನ್ನು ಮೊಣಕಾಲಿನಿಂದ ತಿವಿದು ಒದ್ದನು. ಈ ನೀಲನು ರಾಕ್ಷಸರಿಂದ ಸುತ್ತುಗಟ್ಟಲ್ಪಟ್ಟ ಅಂಗದನ ಸಹಾಯಕ್ಕೆ ಮುಂದಾದನು. ಮಹೋದರನೊಡನೆ ಯುದ್ಧಮಾಡಿ ಆತನನ್ನು ಕೊಂದುಹಾಕಿದನು. ಅತಿಕಾಯನಿಗೆ ಮಾತ್ರ ಇವನನ್ನು ಸೋಲಿಸಲು ಸಾಧ್ಯವಾಯಿತು. ಯುದ್ಧಸಮಾಪ್ತಿಯಾದನಂತರ ಶ್ರೀರಾಮನು ನೀಲನನ್ನು ಸತ್ಕರಿಸಿದನು. ಶ್ರೀರಾಮನ ಅಶ್ವಮೇಧಯಜ್ಞದ ಸಮಯದಲ್ಲಿ ಅಶ್ವರಕ್ಷಣೆಗಾಗಿ ಶತ್ರುಘ್ನನೊಡನೆ ನೀಲನೂ ಸಹ ಇದ್ದನು.

## ೭೧. ನೃಗ

ನೃಗನು ಪುಷ್ಕರತೀರ್ಥದಲ್ಲಿ ಒಂದು ಕೋಟಿ ಕರುಗಳೊಂದಿಗಿದ್ದ ಗೋವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಒಬ್ಬ ಆಹಿತಾಗ್ನಿ ಬ್ರಾಹ್ಮಣನ ಹಸು, ಹೀಗೆ ದಾನಕೊಟ್ಟ ಹಸುಗಳ ಹಿಂಡಿನೊಡನೆ ಕಣ್ಣುತಪ್ಪಿ ಹೋಗಿಬಿಟ್ಟಿತು. ಆ ಬ್ರಾಹ್ಮಣನು ಕಳೆದುಹೋದ ತನ್ನ ಹಸುವಿಗಾಗಿ ತುಂಬ ಹುಡುಕಾಡಿದನು. ಆಗ ಅದು ಇನ್ನೊಬ್ಬ ಬ್ರಾಹ್ಮಣನ ಬಳಿ ಇರುವುದು ಕಂಡುಬಂದಿತು. ಈ ಇಬ್ಬರು ಬ್ರಾಹ್ಮಣರಲ್ಲಿ ಹಸುವಿಗಾಗಿ ವ್ಯಾಜ್ಯ ವುಂಟಾಯಿತು. ನ್ಯಾಯವನ್ನು ಪಡೆಯಲು ಇವರಿಬ್ಬರೂ ನೃಗರಾಜನ ಅರಮನೆಯ ಬಾಗಿಲಿಗೆ ಹೋದರು. ಇವರಿಬ್ಬರೂ ಅಲ್ಲಿ ಅನೇಕ ದಿನಗಳವರೆಗೆ ಕಾಯ್ದುಕೊಂಡಿದ್ದರೂ ನೃಗರಾಜನು ವ್ಯಾಜ್ಯದ ಇತ್ಯರ್ಥ ಮಾಡಲಿಲ್ಲ. ಆಗ ಕೋಪಗೊಂಡ ಇಬ್ಬರೂ ಬ್ರಾಹ್ಮಣರು 'ನೀನು ಓತಿಕೇತನಾಗು !' ಎಂದು ನೃಗರಾಜನಿಗೆ ಶಪಿಸಿದರು. ಅಲ್ಲದೆ 'ಕಲಿಯುಗದಲ್ಲಿ ಶಾಪಮುಕ್ತನಾಗುವೆ !' ಎಂಬ ಉಃಶಾಪವನ್ನೂ ಕೊಟ್ಟರು. ಆಗ ನೃಗರಾಜನು 'ವಸು' ಎಂಬ ತನ್ನ ಪುತ್ರನಿಗೆ ರಾಜ್ಯಾಭಿಷೇಕ ಮಾಡಿ, ತಾನು ಒಂದು ಬಿಲದಲ್ಲಿ ಸೇರಿಕೊಂಡು ಶಾಪವನ್ನು ಅನುಭವಿಸತೊಡಗಿದನು. ನೃಗರಾಜನು ಉಃಶಾಪವನ್ನು ಪ್ರಾರ್ಥಿಸಿದಾಗ 'ಶ್ರೀಕೃಷ್ಣನಿಂದ ನಿನ್ನ ಉದ್ಧಾರವಾಗುವದು !' ಎಂಬ ಉಃಶಾಪವು ದೊರೆಯಿತೆಂಬ ಉಲ್ಲೇಖವು ಕೆಲವೆಡೆಯಲ್ಲಿದೆ.

## ೭೨. ಪರ್ವತ

ಇವನು ಒಬ್ಬ ದೇವರ್ಷಿಯಾಗಿದ್ದನು. 'ಮಾಂಧಾತ ಎಂಬ ರಾಜನು ನಿನ್ನ ಯುದ್ಧದ ತೀಟೆಯನ್ನು ಇಂಗಿಸುವನು !' ಎಂದು ಇವನು ರಾವಣನಿಗೆ ಹೇಳಿದ್ದನು.

## ೭೩. ಪುಂಜಿಕಸ್ಥಲೆ

ಇವಳೋರ್ವ ಶ್ರೇಷ್ಠ ಅಪ್ಸರೆ. ಇವಳು ಲಾವಣ್ಯಸಂಪನ್ನೆಯಾಗಿದ್ದಳು. ಒಬ್ಬ ಅನಾಮಿಕ ಋಷಿಯ ಶಾಪದಿಂದ ಇವಳಿಗೆ ಕೋತಿಯ ಜನ್ಮವು ಬಂದಿತು. ಆಗ ಇವಳು ಕೇಸರಿ ಎಂಬ ವಾನರನ ಪತ್ನಿಯಾದಳು. ವಾನರಜನ್ಮವನ್ನು ತಾಳಿದ್ದರೂ ಉಃಶಾಪದಿಂದ ಇವಳು ಇಷ್ಟಬಂದಾಗ ಮನುಷ್ಯರೂಪವನ್ನು ತಾಳುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಳು. ಇವಳ ರೂಪಕ್ಕೆ ವಾಯುವು ಮೋಹಗೊಂಡನು. ಇವಳನ್ನು ಆಲಿಂಗಿಸಿ, ಮಾನಸಿಕವಾಗಿ ಸಮಾಗಮವನ್ನು ಸಾಧಿಸಿದನು. ವಾಯುವು ಭಯಪಡುವ ಕಾರಣವಿಲ್ಲವೆಂದು ಪುಂಜಿಕಸ್ಥಲೆಗೆ ಆಶ್ವಾಸನೆಯನ್ನಿತ್ತು, 'ನಿನಗೆ ಒಬ್ಬ ಬುದ್ಧಿವಂತ, ಧೀಮಂತ ಮಗನು ಹುಟ್ಟುವನು' ಎಂದು ಹೇಳಿದನು. ಈ ಪುತ್ರನೇ ಹನುಮಾನನು.

## ೭೪. ಪುರೂರವ

ಈತನು ಬುಧ ಮತ್ತು ಇಳೆ ಇವರ ಮಗನಾಗಿದ್ದನು. ಇವನು ಸೋಮವಂಶದ ಮೂಲಪುರುಷ. ಮತ್ಸ್ಯಪುರಾಣದ ಪ್ರಕಾರ ಪ್ರತಿಷ್ಠಾನಪುರಿಯು ಈತನ ರಾಜಧಾನಿಯಾಗಿತ್ತು. ಇವನು ನೂರು ಅಶ್ವಮೇಧ ಯಜ್ಞಗಳನ್ನು ಆಚರಿಸಿದ್ದನು. ಉರ್ವಶಿ ಮಿತ್ರ-ವರುಣರ ಶಾಪ ತಗುಲಿ ಪೃಥ್ವಿಗೆ ಬಂದಳು. ಪುರುವು ಕೇಶಿರಾಕ್ಷಸನ ಕೈಯಿಂದ ಈಕೆಯನ್ನು ಬಿಡಿಸಿದನು. ಇವಳು ಪುರೂರವನ ಗುಣಗಳನ್ನು ಮೆಚ್ಚಿದಳು. ಉರ್ವಶಿಯ ಸೌಂದರ್ಯಕ್ಕೆ ಮೋಹಾಸಕ್ತನಾದ ಪುರುವು ಆಕೆಯೆದುರು ಮದುವೆಯ ಪ್ರಸ್ತಾಪವನ್ನಿಟ್ಟನು. ಆಗ ಉರ್ವಶಿಯು ಆತನಿಗೆ ಮೂರು ಶರತ್ತುಗಳನ್ನು ಹಾಕಿದಳು. 'ನಿನ್ನಿಂದ ಈ ಷರತ್ತುಗಳ ಪಾಲನೆಯಾಗುವ ವರೆಗೆ ಮಾತ್ರ ನಾನು ನಿನ್ನ ಪತ್ನಿಯಾಗಿ ಉಳಿಯುವೆ' ಎಂದು ಮಾತುಕೊಟ್ಟಳು. ಪುರುವಿನಿಂದ ಒಂದು ಷರತ್ತಿನ ಭಂಗವಾಯಿತು. ಆಗ ಇವಳು ಪುರುವನ್ನು ಬಿಟ್ಟು ಹೊರಟುಹೋದಳು. ಪುರುವು ಇವಳಿಂದ ಆರು ಪುತ್ರರನ್ನು ಪಡೆದನು. ಒಮ್ಮೆ ಧರ್ಮ, ಅರ್ಥ, ಕಾಮ — ಇವು ಮನುಷ್ಯರೂಪವನ್ನು ತಾಳಿ ಈತನನ್ನು ಪರೀಕ್ಷಿಸಲು ಬಂದಾಗ ಪುರುವು ಧರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟ ಕಾರಣ, ಅರ್ಥ ಮತ್ತು ಕಾಮಗಳು, 'ಲೋಭದಿಂದ ನಿನ್ನ ನಾಶವಾಗುವುದು !' ಎಂಬ ಶಾಪವನ್ನು ಕೊಟ್ಟವು. ತುಂಬರು ಪುರೂರವನನ್ನು ಶಪಿಸಿದ ಉಲ್ಲೇಖವು ಸ್ಕಂದಪುರಾಣದಲ್ಲಿದೆ. ಪುರೂರವನು ಕ್ಷತ್ರಿಯನಾಗಿದ್ದರೂ ಮಂತ್ರಕಾರನಾಗಿದ್ದನು. ಚಾತುರ್ವರ್ಣ್ಯದ ಬಗ್ಗೆ ಈತನು ಕಶ್ಯಪ ಹಾಗೂ ವಾಯುವಿನೊಡನೆ ವಾದವಿವಾದವನ್ನು ಮಾಡಿದನು.

ವ್ಯಕ್ತಿವಿಶೇಷ ಕ್ರಮಸಂಖ್ಯೆ ೧೭ ನೋಡಿರಿ.

## ೭೫. ಪುಲಸ್ತ್ಯ

ಪುಲಸ್ತ್ಯನು ಕರ್ದಮನಿಂದ ಕ್ರಮಶಃ ಹನ್ನೊಂದನೆಯ ಪ್ರಜಾಪತಿ ; ಬ್ರಹ್ಮದೇವನ ಮಾನಸಪುತ್ರ, ಪ್ರತ್ಯಕ್ಷ ಬ್ರಹ್ಮದೇವನಂತೆ ದೇವತೆಗಳಿಗೂ ಜನರಿಗೂ ಪ್ರಿಯನು. ವಿಶ್ರವ ಈತನ ಮಾನಸಪುತ್ರ. ದೇವವರ್ಣಿಯಿಂದ ಈತನಿಗೆ ಹುಟ್ಟಿದ ಮಗನು ಧನಾಧ್ಯಕ್ಷನಾಗುವನೆಂಬ ಭವಿಷ್ಯವನ್ನು ಆ ಮಗುವಿನ ಲಕ್ಷಣಗಳಿಂದ ಹೇಳಲಾಗಿತ್ತು. ಆದ್ದರಿಂದ ಆ ಮಗುವಿಗೆ ವೈಶ್ರವಣನೆಂಬ ಹೆಸರನ್ನು ಇಡಲಾಯಿತು ; ಗಾಲವ ಋಷಿಯ ನೆರವಿನಿಂದ ಪುಲಸ್ತ್ಯನು ಮಾಂಧಾತ ಮತ್ತು ರಾವಣ ಇವರಲ್ಲಿ ಸ್ನೇಹವನ್ನು ಮಾಡಿಸಿದನು.

ಬ್ರಹ್ಮಾಂಡಪುರಾಣದ ಪ್ರಕಾರ ಪುಲಸ್ತ್ಯನು ಬ್ರಹ್ಮದೇವನ ಉದಾನದಿಂದ ಹುಟ್ಟಿದವನು ; ಸ್ವಾಯಂಭುವ-ದಕ್ಷನ ಅಳಿಯನು, ಶಂಕರನ ಷಡ್ಡಕನು. ದಕ್ಷನು ಶಂಕರನನ್ನು ಅವಮಾನಿಸಿದ್ದರಿಂದ ಅವನು ಇವನನ್ನು ಸುಟ್ಟು ಭಸ್ಮಮಾಡಿದನು. ದಕ್ಷಕನ್ಯೆಯಾದ ಪ್ರೀತಿಯು ಪುಲಸ್ತ್ಯನ ಹೆಂಡತಿಯಾಗಿದ್ದಳು. ಇವಳಿಂದ ದಾನಾಗ್ನಿ ಎಂಬ ಮಗನು ಹುಟ್ಟಿದನು. ಇವನಲ್ಲದೆ ದೇವಬಾಹು ಮತ್ತು ಅತ್ರಿ ಎಂಬ ಗಂಡುಮಕ್ಕಳೂ, ಸದ್ಗತಿ ಎಂಬ ಮಗಳೂ ಇವರಿಗೆ ಹುಟ್ಟಿದರು. ಮಹಾಭಾರತ, ವಾಯುಪುರಾಣ ಮತ್ತು ಮತ್ಸ್ಯಪುರಾಣಗಳ ಪ್ರಕಾರ ಪುಲಸ್ತ್ಯನು ಬ್ರಹ್ಮದೇವನ ಮಾನಸಪುತ್ರನು. ಈತ ಬ್ರಹ್ಮದೇವನ ಕಿವಿಯಿಂದ ಹೊರಬಂದವನೆಂದೂ ಉಲ್ಲೇಖವಿದೆ. ಬ್ರಹ್ಮದೇವನು ನಿರ್ಮಿಸಿದ ಪ್ರಜಾಪತಿಗಳಲ್ಲಿ ಇವನೂ ಒಬ್ಬನಾಗಿದ್ದಾನೆ. ಕರ್ದಮನ ಕನ್ಯೆಯಾದ ಹವಿರ್ಭುವಾ ಈತನ ಪತ್ನಿಯಾಗಿದ್ದಳು. ಈಕೆಗೆ ಅಗಸ್ತ್ಯ ಮತ್ತು ವಿಶ್ರವಾ ಎಂಬ ಇಬ್ಬರು ಮಕ್ಕಳಾದರು. ಅಗಸ್ತ್ಯನು ಪ್ರೀತಿಯ ಪುತ್ರನಾಗಿದ್ದನೆಂದು ವಿಷ್ಣುಪುರಾಣದಲ್ಲಿ ಹೇಳಿದೆ. ಮಹಾದೇವನ ಶಾಪದಿಂದ ಮೃತಪಟ್ಟ ಬ್ರಹ್ಮದೇವನ ಮಾನಸಪುತ್ರರಲ್ಲಿ ಇವನೂ ಒಬ್ಬನಾಗಿದ್ದನು.

ಬ್ರಹ್ಮದೇವನು ಈ ರೀತಿ ಮೃತವಟ್ಟ ತನ್ನ ಮಾನಸಪುತ್ರರನ್ನು ವೈವಸ್ವತಮನ್ವಂತರದಲ್ಲಿ ಪುನಃ ಸೃಷ್ಟಿಸಿದನು. ಆಗ ಈತನು ಅಗ್ನಿಯ ಕೆಂಜುವರ್ಣದ ಕೂದಲಿನಿಂದ ಹುಟ್ಟಿದನೆಂದು ಹೇಳಲಾಗಿದೆ. 'ಗಮನವಿರದೆಯೇ ತಪ್ಪಿ ತನ್ನ ತಪಸ್ಸಿಗೆ ವಿಘ್ನವುಂಟುಮಾಡುವ ಕನ್ಯೆಯರು ಕಣ್ಣಿಗೆ ಬೀಳುತ್ತಲೇ ಅವರಿಗೆ ಗರ್ಭಧಾರಣೆಯಾಗುವುದು !' ಎಂಬ ಶಾಪವನ್ನು ಪುಲಸ್ತ್ಯನು ಕೊಟ್ಟ ಕಾರಣ, ತೃಣಬಿಂದುವಿನ ಕನ್ಯೆಯು ಗರ್ಭವತಿಯಾದಳು. ತೃಣಬಿಂದುವಿನ ಪ್ರಾರ್ಥನೆಯ ಮೇರೆಗೆ ಪುಲಸ್ತ್ಯನು ಈ ಕನ್ಯೆಯನ್ನು ವಿವಾಹವಾದನು. ಇವಳಿಂದ ವಿಶ್ರವಾ ಎಂಬ ಮಗನು ಹುಟ್ಟಿದನು, ಎಂದು ವಾಲ್ಮೀಕಿರಾಮಾಯಣದ ಉತ್ತರಕಾಂಡದಲ್ಲಿದೆ.

ಪದ್ಮಪುರಾಣದ ಪ್ರಕಾರ ಬ್ರಹ್ಮದೇವನ ಪುಷ್ಕರತೀರ್ಥದ ಯಜ್ಞದಲ್ಲಿ ಪುಲಸ್ತ್ಯನು ಅಧ್ವರ್ಯುವಾಗಿದ್ದನು. ಯಾಜ್ಞವಲ್ಕ್ಯನು ಇವನನ್ನು ಸ್ಮೃತಿಕಾರನೆಂದು ಗೌರವಿಸಿದ್ದಾನೆ. 'ಪೌಲಸ್ತ್ಯಸ್ಮೃತಿ' ಮೊದಲಾದ ಗ್ರಂಥಗಳನ್ನು ನಾಲ್ಕನೆಯ ಇಲ್ಲವೆ ಐದನೆಯ ಶತಮಾನದ ಸಮಯದಲ್ಲಿ ಬರೆದಿರಬಹುದೆಂದು ಊಹಿಸಬಹುದು.

## ೭೬. ಪ್ರಹಸ್ತ

ಪ್ರಹಸ್ತ ಸುಮಾಲಿರಾಕ್ಷಸ ಮತ್ತು ಕೇತುಮತಿ ಇವರ ಮಗ. ಇವನು ರಾವಣನ ಸೋದರಮಾವ ಹಾಗೂ ಆತನ ಮಂತ್ರಿಯಾಗಿದ್ದನು. ಈತನು ಬಲು ಶೂರನಾಗಿದ್ದು, ರಾವಣನ ಸೇನೆಯ ಆಧಿಪತ್ಯ ಇವನದಾಗಿತ್ತು. ಪ್ರಹಸ್ತನು ಕೈಲಾಸಪರ್ವತದ ಮೇಲೆ ಮಣಿಭದ್ರನನ್ನು ಪರಾಭವಗೊಳಿಸಿದ್ದನು. ಈತನು ಶ್ರೀರಾಮ-ರಾವಣರ ಯುದ್ಧದಲ್ಲಿ ಅತುಲಸಾಹಸ-ಶೌರ್ಯಗಳನ್ನು ತೋರಿದನು. ಹಿಂದೆ ಲಂಕೆಯ ದಹನದ ಕಾಲಕ್ಕೆ ಹನುಮಾನನು ಇವನ ಗೃಹಕ್ಕೆ ಬೆಂಕಿ ಹಚ್ಚಿದಾಗ, ಪ್ರಹಸ್ತನು 'ಈ ಪೃಥ್ವಿಯ ಮೇಲಿನ ಎಲ್ಲ ವಾನರರನ್ನೂ ನಿರ್ಮೂಲಗೊಳಿಸುವೆನು' ಎಂಬ ಪಣವನ್ನು ತೊಟ್ಟಿದ್ದನು. ಶ್ರೀರಾಮನೊಡನೆ ಸ್ನೇಹವನ್ನು ಮಾಡಿಕೊಳ್ಳಬೇಕೆಂದು ವಿಭೀಷಣನು ರಾವಣನಿಗೆ ಕೊಟ್ಟ ಸಲಹೆಯನ್ನು ಪ್ರಹಸ್ತನು ತಳ್ಳಿಹಾಕಿದ್ದನು. ಕುಬೇರನು ಮೊದಲು ಲಂಕಾಪತಿಯಾಗಿದ್ದಾಗ, ರಾವಣನು ಲಂಕೆಯು ತನಗೆ ದೊರೆಯಬೇಕೆಂದು ಪ್ರಹಸ್ತನನ್ನು ಒತ್ತಾಯಿಸಿ ಅವನನ್ನು ದೂತನನ್ನಾಗಿ ಕಳುಹಿಸಿದ್ದನು.

ನರಾಂತಕನ ವಧೆಯಾದನಂತರ ಇವನು ನೀರಿನ ಮೇಲೆ ಸಾಗಿಹೋದನು ; ಆದರೆ ನೀಲನು ಇವನನ್ನು ಕೊಂದುಬಿಟ್ಟನು.

## ೭೭. ಬಲಿ

ಪ್ರಹ್ಲಾದನ ಮಗನಾದ ವಿರೋಚನ ಎಂಬುವನಿಗೆ ದೇವಿ ಎಂಬ ಪತ್ನಿಯಿದ್ದಳು. ಇವರಿಬ್ಬರ ಮಗನೇ ಬಲಿ. ಇವನು ದೈತ್ಯರ ಅತ್ಯಂತ ಬಲಾಢ್ಯ ರಾಜನಾಗಿದ್ದನು. ಬಲಿಯ ಒಬ್ಬಳು ಹೆಂಡತಿಯ ಹೆಸರು ವಿಂಧ್ಯಾವಲಿ. ಇವನ ಎರಡನೆಯ ಪತ್ನಿಯ ಹೆಸರು ಅಶನಾ ಎಂದಿತ್ತು. ಇವಳಿಂದ ಬಲಿರಾಜನಿಗೆ ಬಾಣ ಮೊದಲಾದ ನೂರು ಗಂಡುಮಕ್ಕಳಾದರು. ಬಲಿಯು ವಿಷ್ಣುಭಕ್ತನಾಗಿದ್ದನು. ಶುಕ್ರಾಚಾರ್ಯನ ಸಲಹೆಯಂತೆ ಬಲಿಯು ಸ್ವರ್ಗದ ಮೇಲೆ ದಾಳಿಮಾಡಿದನು. ಆಗ ದೇವತೆಗಳು ತಮ್ಮ ವೇಷವನ್ನು ಬದಲುಮಾಡಿ, ಮುಖ ಮರೆಯಿಸಿ ಅವಿತುಕೊಂಡರು. ಪ್ರಹ್ಲಾದನು ಬಲಿರಾಜನಿಗೆ 'ನೀನು ಧರ್ಮದಿಂದ ರಾಜ್ಯವನ್ನಾಳು ! ದೇವತೆಗಳಿಗೆ ಪೀಡೆ ಕೊಟ್ಟರೆ ನೀನು ಕೂಡಲೇ ನಾಶಹೊಂದುವೆ !' ಎಂಬ ಉಪದೇಶವನ್ನು ಕೊಟ್ಟು, ನಂತರ ಶಾಪವನ್ನು ಕೊಟ್ಟಿದ್ದಾನೆ. ಬಲಿಯು ಬಹುಕಾಲದವರೆಗೆ ರಾಜ್ಯವನ್ನಾಳಿದನು. ದೇವದಾನವರ ಯುದ್ಧದಲ್ಲಿ ಇಂದ್ರನು ಎಸೆದ ವಜ್ರಾಯುಧದಿಂದ ಇವನು ಮಡಿದನು. ಶುಕ್ರಾಚಾರ್ಯನ ಸ್ಪರ್ಶದಿಂದ ಮತ್ತು ಮಂತ್ರಬಲದಿಂದ ಬಲಿಯು ಪುನಃ ಜೀವಿತನಾದನು. ಶುಕ್ರಾಚಾರ್ಯನು ಈತನಿಂದ ವಿಶ್ವಜಿತಯಜ್ಞವನ್ನು ಮಾಡಿಸಿದನು. ಆಗ ಯಜ್ಞನಾರಾಯಣನು ಪ್ರಸನ್ನನಾಗಿ, ಬಲಿಗೆ ಇಂದ್ರನಂತಹ ದಿವ್ಯರಥವನ್ನೂ, ಹೇರಳ ಸುವರ್ಣವನ್ನೂ, ಧನುಸ್ಸನ್ನೂ, ಅಕ್ಷಯ ಬತ್ತಳಿಕೆಯನ್ನೂ, ದಿವ್ಯಕವಚಗಳನ್ನೂ ಕೊಟ್ಟನು. ಪ್ರಹ್ಲಾದನು ಬಲಿಗೆ ಎಂದೂ ಬಾಡದೇ ಇರುವ ಹೂಮಾಲೆಯನ್ನೂ ಶುಕ್ರಾಚಾರ್ಯನು ದಿವ್ಯಶಂಖವನ್ನೂ ಮತ್ತು ಬ್ರಹ್ಮದೇವನು ಒಂದು ಕೊರಳಮಾಲೆಯನ್ನೂ ಕೊಟ್ಟರು. ಬಲಿಯು ಸ್ವರ್ಗವನ್ನು ಪುನಃ ಗೆದ್ದುಕೊಂಡನು ; ನೂರು ಅಶ್ವಮೇಧಯಜ್ಞಗಳನ್ನು ಮಾಡಿದನು.

ನರ್ಮದಾನದಿಯ ಉತ್ತರತೀರದ ಭೃಗುಕಚ್ಛ ಎಂಬ ಪ್ರದೇಶದಲ್ಲಿ ಬಲಿಯ ಕೊನೆಯ ಅಶ್ವಮೇಧಯಜ್ಞ ನಡೆದಾಗ, ವಿಷ್ಣುವು ವಾಮನರೂಪವನ್ನು ತಾಳಿ ಬಲಿಯ ಬಳಿ ಬಂದು, ಮೂರು ಹೆಜ್ಜೆಗಳಷ್ಟು ಭೂಮಿಯನ್ನು ದಾನವಾಗಿ ಬೇಡಿದನು. ಬಂದವನು ಶ್ರೀವಿಷ್ಣು ಎಂದು ಶುಕ್ರನು ಅರಿತಿದ್ದನು ; ಭೂಮಿಯನ್ನು ಕೊಡಕೂಡದೆಂದು ಬಲಿಗೆ ಸೂಚಿಸಿದನು. ಆದರೆ ಬಂದ ಅತಿಥಿಯನ್ನು ಬರಿಗೈಯಿಂದ ಕಳುಹಿಸಬಾರದೆಂಬ ವ್ರತ ಬಲಿಯದಿತ್ತು. ಹೀಗಿದ್ದುದರಿಂದ ಬಲಿಯು ಶುಕ್ರಾಚಾರ್ಯನ ಸಲಹೆಯನ್ನು ಮನ್ನಿಸಲಿಲ್ಲ. ಆಗ

ಕ್ರೋಧಗೊಂಡ ಶುಕ್ರಾಚಾರ್ಯನು ಇವನಿಗೆ ಶಾಪವನ್ನಿತ್ತನು. ವಾಮನನು ವಿಶಾಲರೂಪವನ್ನು ಧರಿಸಿ ಎರಡೇ ಹೆಜ್ಜೆಗಳಲ್ಲಿ ಸಮಸ್ತ ಬ್ರಹ್ಮಾಂಡವನ್ನೇ ವ್ಯಾಪಿಸಿ, ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಆತನನ್ನು ಪಾತಾಳಕ್ಕೆ ಮೆಟ್ಟಿದನು. ಬ್ರಹ್ಮದೇವನು ಬಲಿರಾಜನಿಗೆ ಅನೇಕ ವರಗಳನ್ನು ಕೊಟ್ಟಿದ್ದನೆಂಬ ಉಲ್ಲೇಖವು ಹರಿವಂಶ ಮತ್ತು ಮತ್ಸ್ಯಪುರಾಣಗಳಲ್ಲಿದೆ. ಬಲಿಯ ರಾಜ್ಯದಲ್ಲಿ ದೇವತೆಗಳು, ಬ್ರಾಹ್ಮಣರು ಮತ್ತು ಭೂಮಿ ಇವರೆಲ್ಲರಿಗೂ ವಿಲಕ್ಷಣ ತೊಂದರೆಯಾಗಹತ್ತಿದ್ದರಿಂದ ದೇವತೆಗಳೆಲ್ಲರೂ ವಿಷ್ಣುವಿಗೆ ಶರಣುಹೋದರು. ವಿಷ್ಣುವು ಬಲಿಯನ್ನು ನಿರೋಧಿಸಲು ವಾಮನಾವತಾರವನ್ನು ತಳೆದನು.

## ೭೮. ಬಾಣಾಸುರ

ಇವನೊಬ್ಬ ಅಸುರ. ಶಂಕರನು ಇವನಿಗೆ ಅನೇಕ ವರಗಳನ್ನು ಕೊಟ್ಟಿದ್ದನು. ಪಾರ್ವತಿಯು ತನ್ನನ್ನು ಮಗನೆಂದು ಸ್ವೀಕರಿಸಬೇಕೆಂಬ ವರವನ್ನು ಸಹ ಇವನು ಶಂಕರನಿಂದ ಪಡೆದುಕೊಂಡಿದ್ದನು. ಕಾರ್ತಿಕೇಯನು ಜನಿಸಿದ ಪ್ರದೇಶದ ಆಧಿಪತ್ಯವು ಇವನಿಗೆ ಚಿರವಾಗಿ ದೊರೆಯಿತು. ಬಾಣಾಸುರನು ಅತ್ಯಂತ ಪ್ರಬಲನಾಗಿದ್ದು, ಯಾವಾಗಲೂ ಯುದ್ಧಕ್ಕೆ ಹಾತೊರೆಯುತ್ತಿದ್ದನು. ದೇವತೆಗಳು ವಿಧಿಯಿಲ್ಲದೆ ಬಾಣಾಸುರನು ತಮ್ಮನ್ನು ಇಟ್ಟ ಸ್ಥಿತಿಯಲ್ಲಿಯೇ ಇರಬೇಕಾಯಿತು. ಇವನಿಗೆ ಸಹಸ್ರ ಬಾಹುಗಳಿದ್ದವು; ಅವುಗಳಲ್ಲಿ ಎರಡನ್ನು ಮಾತ್ರ ಉಳಿಸಿ ಶ್ರೀಕೃಷ್ಣನು ಮಿಕ್ಕವನ್ನು ಕತ್ತರಿಸಿಹಾಕಿದನು. ಬಾಣಾಸುರನು ಅನಿರುದ್ಧನನ್ನು ಬಂಧನದಲ್ಲಿಟ್ಟ ಕಾರಣಕ್ಕಾಗಿ, ಶ್ರೀಕೃಷ್ಣನು ಅವನನ್ನು ವಧಿಸಬಹುದಿತ್ತು. ಆದರೆ ಶ್ರೀಕೃಷ್ಣನು ಪ್ರಹ್ಲಾದನಿಗೆ 'ನಾನು ನಿನ್ನ ವಂಶದಲ್ಲಿಯ ಯಾರನ್ನೂ ಕೊಲ್ಲುವುದಿಲ್ಲ' ಎಂಬ ವರವನ್ನು ಕೊಟ್ಟಿದ್ದನು. ಬಾಣಾಸುರನು ನಂತರ ತನ್ನ ಕನ್ಯೆಯಾದ ರೂಪವತಿ ಉಷಾ ಇವಳ ವಿವಾಹವನ್ನು ಅನಿರುದ್ಧನೊಡನೆ ಮಾಡಿಕೊಟ್ಟನು. ಬಾಣಾಸುರನು ಶಂಕರನ ಸೇವಕರಲ್ಲಿ ಅಗ್ರಣಿಯಾಗಿದ್ದನು. ಇವನು ಉಷಾ ಮತ್ತು ಅನಿರುದ್ಧರ ಮಗನಿಗೆ ತನ್ನ ರಾಜ್ಯವನ್ನು ಕೊಟ್ಟನು. ಹೀಗಾಗಿ ಬಾಣಾಸುರನಿಗೆ ಪುತ್ರರಿರಲಿಲ್ಲವೆಂದು ತೋರುತ್ತದೆ. ಬ್ರಹ್ಮಾಂಡಪುರಾಣದ ಹೇಳಿಕೆಯಂತೆ ಬಾಣಾಸುರನಿಗೆ ಲೋಹಿನಿ ಎಂಬ ಸ್ತ್ರೀಯಿಂದ ಇಂದ್ರಧ್ವನ ಎಂಬ ಮಗನಾದನೆಂದು ಉಲ್ಲೇಖವಿದೆ.

## ೭೯. ವಿಭೀಷಣ

ಇವನು ವಿಶ್ರವಸ ಮತ್ತು ಕೈಕಸಿ—ಇವರ ಮಗ. ವನಪರ್ವದಲ್ಲಿ ಈತನ ತಾಯಿಯ ಹೆಸರನ್ನು ಮಾಲಿನಿ ಎಂದು ಉಲ್ಲೇಖಿಸಲಾಗಿದೆ ; ಭಾಗವತದಲ್ಲಿ ಕೇಶಿನಿ ಎಂದಿದೆ. ವಿಭೀಷಣನು ಒಳ್ಳೆಯ ಸ್ವಭಾವದವನು. ಇವನು ಉಗ್ರತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಸಂತುಷ್ಟಗೊಳಿಸಿದನು. 'ನನ್ನ ಬುದ್ಧಿಯು ಸದಾಕಾಲವೂ ಧರ್ಮದತ್ತ ಇರಲಿ' ಎಂಬ ವರವನ್ನು ಬೇಡಿಕೊಂಡನು. ಬ್ರಹ್ಮದೇವನು ಇವನಿಗೆ ಅಮರತ್ವವನ್ನೂ ಬ್ರಹ್ಮಾಸ್ತ್ರವನ್ನೂ ಕರುಣಿಸಿದನು. ಶೈಲೂಷ ಎಂಬ ಗಂಧರ್ವನ ಮಗಳಾದ ಸರಮೆಯು ಅವನ ಭಾರ್ಯೆ. ಪದ್ಮಪುರಾಣದಲ್ಲಿ ಈತನ ಮಡದಿಯ ಹೆಸರು ಮಹಾಮೂರ್ತಿ ಎಂದಿದೆ.

ವಿಭೀಷಣನು ಲಂಕೆಯಲ್ಲಿಯೇ ವಾಸವಿದ್ದರೂ ರಾವಣನೊಡನೆ ಅಷ್ಟೊಂದು ಹೊಂದಾಣಿಕೆ ಇರಲಿಲ್ಲ. ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿ ಆತನೊಡನೆ ಸ್ನೇಹವಿಟ್ಟುಕೊಳ್ಳಬೇಕೆಂದು ವಿಭೀಷಣನು ರಾವಣನಿಗೆ ಪದೇ ಪದೇ ಹೇಳುತ್ತಲೇ ಇದ್ದನು. ಆಗಾಗ ರಾವಣನಿಗೆ ಉಪದೇಶಿಸುತ್ತಿದ್ದನು ; ಸಲಹೆ ಕೊಡುತ್ತಿದ್ದನು. 'ದೂತನನ್ನು ಹೇಗೆ ಕಾಣಬೇಕು ?' ಎಂಬ ಬಗ್ಗೆ ನೀತಿಯ ಮಾತುಗಳನ್ನಾಡಿದನು. 'ಶ್ರೀರಾಮನ ಬಲದ ಮುಂದೆ ಮಾಶಿನ ಮಲ್ಲರಾದ ರಾಕ್ಷಸರ ಆಟವು ನಡೆಯಲಾರದು ! ನೀನೂ ಪಾರಾಗುವುದು ಅಸಾಧ್ಯ !' ಎಂದು ವಿಭೀಷಣನು ತುಂಬಿದ ರಾಜಸಭೆಯಲ್ಲಿ ರಾವಣನಿಗೆ ಸ್ಪಷ್ಟವಾಗಿ ನುಡಿದನು. ರಾವಣನು ಇವನ ಮಾತಿಗೆ ಎಳ್ಳಷ್ಟೂ ಬೆಲೆಕೊಡಲಿಲ್ಲ ; ಬದಲಾಗಿ, ಅವನನ್ನು ಧಿಕ್ಕರಿಸಿದನು. ಆಗ ವಿಭೀಷಣನು ರಾವಣನನ್ನು ಬಿಟ್ಟುಹೋಗಲು ನಿರ್ಧರಿಸಿದನು. ರಾವಣನು ಇಂದ್ರಜಿತುವಿನಿಂದ ಸೆರೆಹಿಡಿಯಲ್ಪಟ್ಟ ಹನುಮಾನನನ್ನು ವಧಿಸಲು ಹೊರಟಾಗ ವಿಭೀಷಣನು ಹನುಮಾನನನ್ನು ಬದುಕಿಸಿದನು. ಶ್ರೀರಾಮನೊಡನೆ ಆಗಬಹುದಾದ ಯುದ್ಧವನ್ನು ತಪ್ಪಿಸಿ, ಲಂಕೆಯನ್ನು ರಕ್ಷಿಸಬೇಕೆಂದು ಅವನು ರಾವಣನಿಗೆ ಪುನಃಪುನಃ ವಿನಂತಿಸಿದನು.

ಆದರೆ ರಾವಣನು ಎಲ್ಲವನ್ನೂ ಕಡೆಗಣಿಸಿದನು. ಆಗ ವಿಭೀಷಣನು ಶ್ರೀರಾಮನಿಗೆ ಶರಣುಹೋದನು. ಶ್ರೀರಾಮ-ರಾವಣರ ಸಂಗ್ರಾಮದಲ್ಲಿ ವಿಭಿಷಣನು ತನ್ನ ಪರಾಕ್ರಮವನ್ನು ಪ್ರದರ್ಶಿಸಿ, ಧೂಮ್ರಾಕ್ಷ, ಪ್ರಹಸ್ತಾದಿ ರಾಕ್ಷಸರನ್ನು ಕೊಂದನು. ತನ್ನ ಮಂತ್ರಿಗಳನ್ನು ಗುಪ್ತರೀತಿಯಲ್ಲಿ ಲಂಕೆಯಲ್ಲಿರಿಸಿ ಶ್ರೀರಾಮನಿಗೆ ಆವಶ್ಯಕವಿದ್ದ ಮಾಹಿತಿಯನ್ನು ಕಾಲಕಾಲಕ್ಕೆ ಒದಗಿಸಿದನು. ಅವನು ಇಂದ್ರಜಿತುವಿನಿಂದ ಯಜ್ಞವು ಪೂರ್ಣವಾಗುವ ಮೊದಲೇ ಆತನನ್ನು ವಧಿಸಬೇಕೆಂಬ ಸಲಹೆಯನ್ನು ಲಕ್ಷ್ಮಣನಿಗೆ ಕೊಟ್ಟನು. ಆ ಸಲಹೆಯಂತೆ ಲಕ್ಷ್ಮಣನು ಇಂದ್ರಜಿತುವನ್ನು ವಧಿಸಿದನು. ಶ್ರೀರಾಮನಿಂದ ರಾವಣನು ಕೊಲ್ಲಲ್ಪಟ್ಟನಂತರ ಮಾತ್ರ ವಿಭೀಷಣನು ಅಣ್ಣನ ಸಾವಿಗಾಗಿ ತುಂಬ ಶೋಕಪಟ್ಟನು. ಶ್ರೀರಾಮನ ಸೂಚನೆಯಂತೆ ರಾವಣನ ಉತ್ತರಕ್ರಿಯೆ-ಕರ್ಮಗಳನ್ನು ಪೂರೈಸಿದನು. ಶ್ರೀರಾಮನು ಲಕ್ಷ್ಮಣನಿಂದ ವಿಭೀಷಣನಿಗೆ ಲಂಕೆಯ ರಾಜ್ಯಾಭಿಷೇಕವನ್ನು ಮಾಡಿಸಿದನು. ರಾವಣನ ತರುವಾಯ ವಿಭೀಷಣನು ಲಂಕಾಧಿಪತಿಯಾದನು. ಶ್ರೀರಾಮನೊಡನೆ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಹೋದನು. ಇವನು ರಾಜ್ಯಾಸನಾಧಿಷ್ಠಿತ ಶ್ರೀರಾಮನಿಗೆ ಚಾಮರ ಬೀಸಿದನು. ಶ್ರೀರಾಮನು ಈತನಿಗೆ ರತ್ನಾದಿಗಳನ್ನರ್ಪಿಸಿ ಸತ್ಕರಿಸಿದನು. ಶ್ರೀರಾಮನಿಗೆ ನೆರವು ನೀಡಿದುದಕ್ಕಾಗಿ ಭರತನು ವಿಭೀಷಣನಿಗೆ ಧನ್ಯವಾದಗಳನ್ನು ಅರ್ಪಿಸಿದನು.

ವಿಭೀಷಣನು ಅತ್ಯಂತ ಧರ್ಮಪರಾಯಣನೂ ಜಿತೇಂದ್ರಿಯನೂ ಸ್ವಾಧ್ಯಾಯದಲ್ಲಿ ಮಗ್ನನಾದವನೂ ಮತ್ತು ಮಿತಾಹಾರಿಯೂ ಆಗಿದ್ದನು. ರಾಕ್ಷಸರ ಕುಲದಲ್ಲಿ ಜನಿಸಿದ್ದರೂ ಈತನ ಒಲವು ಅಧರ್ಮದತ್ತ ಇರಲಿಲ್ಲ. ಆದ್ದರಿಂದಲೇ ಬ್ರಹ್ಮದೇವನು ಇವನಿಗೆ ಅಮರತ್ವವನ್ನು ಕರುಣಿಸಿದನು. ವಿಭೀಷಣನು ಸಪ್ತಚಿರಂಜೀವಿಗಳಲ್ಲಿ ಒಬ್ಬನಾದನು. ರಾಕ್ಷಸರೊಂದಿಗೆ ಅಶ್ವಮೇಧಯಜ್ಞಕ್ಕೆ ಬರಬೇಕೆಂದು ಶ್ರೀರಾಮನು ವಿಭೀಷಣನನ್ನು ಆಮಂತ್ರಿಸಿದ್ದನು. ವಿಭೀಷಣನು ಆತನ ಆಜ್ಞೆಯಂತೆ ನಡೆದುಕೊಂಡನು.

## ೮೦. ಬುಧ

ಈತನು ಚಂದ್ರನಿಂದ ಬೃಹಸ್ಪತಿಯ ಪತ್ನಿಯಾದ ತಾರೆಗೆ ಹುಟ್ಟಿದ ಮಗನು. ಇವನು ಚಂದ್ರವಂಶೋತ್ಪಾದಕನೆಂದೂ, ಬೃಹಸ್ಪತಿಯ ಪತ್ನಿಯ ಮಗನೆಂದೂ ಖ್ಯಾತನಿದ್ದಾನೆ. ಭವಿಷ್ಯಪುರಾಣದ ಹೇಳಿಕೆಯಂತೆ ಬುಧನು ಚಂದ್ರ ಹಾಗೂ ರೋಹಿಣಿ ಇವರ ಪುತ್ರ. ಬೃಹಸ್ಪತಿಯು ಬುಧನ ಜಾತಕರ್ಮಾದಿಗಳನ್ನು ಮಾಡಿಸಿದನು. ಬುಧನು ಮಹಾವಿದ್ವಾಂಸನಾಗಿದ್ದು ಹಸ್ತಿಶಾಸ್ತ್ರದಲ್ಲಿ ಪ್ರವೀಣನಾಗಿದ್ದನು. ಇವನು ಗ್ರಹಮಾಲೆಯಲ್ಲಿ ಶುಕ್ರನಿಂದ ಎರಡು ಲಕ್ಷ ಯೋಜನಗಳಷ್ಟು ದೂರದಲ್ಲಿದ್ದಾನೆ ; ಶುಭಗ್ರಸೆಂದೆನಿಸಿಕೊಳ್ಳುತ್ತಾನೆ. ಆದರೆ ಬುಧನು ಸೂರ್ಯನನ್ನು ಉಲ್ಲಂಘಿಸಿದಾಗ ಅನಾವೃಷ್ಟಿ ಮೊದಲಾದ ಅರಿಷ್ಟಗಳು ಸಂಭವಿಸುವ ಸೂಚನೆ ದೊರೆಯುತ್ತದೆ. ಬುಧನು ಸರೋವರದಲ್ಲಿಳಿದ್ದುಕೊಂಡು ಕಠೋರ ತಪಸ್ಸನ್ನಾಚರಿಸಿದನು. ಈತನು ಇಲಾ ಎಂಬ ರೂಪವತಿಗೆ ಮೋಹಿತನಾದನು. ಇವಳಿಂದ ಬುಧನಿಗೆ ಪುರೂರವ ಎಂಬ ಮಗನು ಹುಟ್ಟಿದನು. ಪದ್ಮಪುರಾಣದ ಪ್ರಕಾರ ಸೋಮವಂಶದ ಮೂಲಪುರುಷನೇ ಪುರೂರವ.

## ೮೧. ಬ್ರಹ್ಮದತ್ತ

ಇವನು ಚೂಲೀ ಮಹರ್ಷಿಯ ಕೃಪೆಯಿಂದ ಊರ್ಮಿಳಾ ಎಂಬ ಗಂಧರ್ವಿಯ ಮಗಳಾದ ಸೋಮದೆಗೆ ಹುಟ್ಟಿದ ಪುತ್ರ. ಸೋಮದೆಯ ಸೇವೆಯಿಂದ ಸಂತೋಷಗೊಂಡ ಚೂಲಿಯು ಇವಳಿಗೆ ಈ ಮಾನಸಪುತ್ರನನ್ನು ಕೊಟ್ಟನು. ಬ್ರಹ್ಮದತ್ತನು ಕಾಂಪಿಲ್ಯ ಪಟ್ಟಣದ ರಾಜನಾಗಿದ್ದನು. ಈತನು ವಾಯುವಿನ ಕೋಪದಿಂದ ಕುಬ್ಜೆಯರಾದ ಕುಶನಾಭನ ನೂರು ಕನ್ಯೆಯರನ್ನು ಮದುವೆಯಾಗಿದ್ದನು. ಬ್ರಹ್ಮದತ್ತನ ಪ್ರಥಮ ಸ್ಪರ್ಶದಿಂದ ಆ ಕನ್ಯೆಯರ ವಿರೂಪವು ಇಲ್ಲದಂತಾಗಿ ಅವರು ಮೊದಲಿನಂತೆ ರೂಪಸಂಪನ್ನೆಯರಾದರು.

## ೮೨. ಬ್ರಹ್ಮದೇವ

ಬ್ರಹ್ಮನ್ ಎಂದರೆ ಸೃಷ್ಟಿಯ ಆದಿತತ್ತ್ವವೆಂದು ಪರಿಗಣಿಸಲಾಗುತ್ತದೆ. ಸಕಲಸೃಷ್ಟಿಯು ನಿರ್ಮಾಣ

ಗೊಳ್ಳುವ ಮೊದಲೇ ಈತನು ಅವತರಿಸಿದನು. ಭಗವಂತನು ಸೃಷ್ಟಿಸಿದ ಪೃಥ್ವಿಯ ರೂಪದ ಕಮಲದಲ್ಲಿ ಬ್ರಹ್ಮನು ಹುಟ್ಟಿದನೆಂದು ಮತ್ಸ್ಯಪುರಾಣದಲ್ಲಿದೆ. ವಿಷ್ಣುವು ಸೃಷ್ಟಿಯ ಬಗ್ಗೆ ವಿಚಾರಮಾಡುತ್ತಿದ್ದಾಗ ಯಾವ ಅಹಂಕಾರವು ಮೂಡಿತೋ ಅದರಿಂದಲೇ ಬ್ರಹ್ಮನ ಉತ್ಪತ್ತಿಯಾಯಿತೆಂದು ಮಹಾಭಾರತದಲ್ಲಿದೆ. ವಿಶ್ವದ ಶಕ್ತಿ ಎಂದರೆ ಭಗವಂತ ; ಆತನೆಂದರೆ ಬ್ರಹ್ಮ. ಸ್ಕಂದಪುರಾಣದಂತೆ, ಒಂದು ಬೃಹದಾಕಾರದ ಮೊಟ್ಟೆಯು ನಿರ್ಮಾಣಗೊಂಡಿತು ; ಅದರಿಂದ ಬ್ರಹ್ಮನಾದನು ಎಂದಿದೆ. ಇಂಥ ಬ್ರಹ್ಮನು ಮೊಟ್ಟಮೊದಲು ತಮೋಗುಣವನ್ನು ಹೊಂದಿದ ಪ್ರಜೆಗಳನ್ನು ನಿರ್ಮಿಸಿ ನಂತರ ರಜೋಗುಣಯುಕ್ತ ಮತ್ತು ಆಮೇಲೆ ಸತ್ವಸಂಪನ್ನರನ್ನು ನಿರ್ಮಿಸಿದನು. ಬ್ರಹ್ಮನು ಎಲ್ಲ ವೇದ-ವೇದಾಂತಗಳ ಅಧಿಷ್ಠಾತನಿದ್ದು ಈತನಿಂದಲೇ ಗಾಯತ್ರಿಯು ಪ್ರಕಟಳಾದಳು. ಈ ಈರ್ವರೂ ಸಾಕ್ಷಾದಾಕಾರಸಹಿತವಾಗಿ ಇಲ್ಲವೆ ಅಮೂರ್ತರೂಪವಾಗಿಯೂ ಇರಬಲ್ಲರು. ಗಾಯತ್ರಿಯು ಬ್ರಹ್ಮನಿಂದ ಎಂದೂ ದೂರವಾಗಲಾರಳು. ಬ್ರಹ್ಮನು ವೇದರಾಶಿಯಾಗಿದ್ದು ಸಾವಿತ್ರಿಯು ಅದರಲ್ಲಿ ವಿರಾಜಿಸಿದ್ದಾಳೆ. ಈ ಕಾರಣದಿಂದ ಬ್ರಹ್ಮನಿಗೆ ಸಾವಿತ್ರೀಗಮನದ ದೋಷವಿಲ್ಲವೆಂದು ಮತ್ಸ್ಯ ಪುರಾಣದ ಮತವಿದೆ.

ಬ್ರಹ್ಮನು ಮೂಲತಃ ಒಂದೇ ಮುಖದವನಿದ್ದರೂ ಇವನನ್ನು ಚತುರ್ಮುಖನೆಂದು ವರ್ಣಿಸುತ್ತಾರೆ. ಇವನು ತನ್ನ ಅವಯವಗಳಿಂದ ಶತರೂಪಾ ಎಂಬ ಲಾವಣ್ಯವತಿಯಾದ ಸ್ತ್ರೀಯನ್ನು ಸೃಷ್ಟಿಸಿದನು. ಇವಳು ಬ್ರಹ್ಮನಿಗೆ ಪ್ರದಕ್ಷಿಣೆ ಹಾಕಲು ಪ್ರಾರಂಭಿಸಿದಾಗ ಬ್ರಹ್ಮನ ಸುತ್ತಲೂ ಮಾನಸಪುತ್ರರು ಕುಳಿತುಕೊಂಡಿದ್ದ ಕಾರಣ ಅವಳತ್ತ ನೋಡಲು ಬ್ರಹ್ಮನಿಗೆ ಸಂಕೋಚವೆನಿಸಿತು ; ಆದರೆ ಶತರೂಪೆಯತ್ತ ನೋಡುವ ಆಸೆಯನ್ನು ತಡೆಯುವುದು ಅಸಾಧ್ಯವಾಯಿತು. ಆಗ ಇವನು ನಾಲ್ಕೂ ದಿಕ್ಕುಗಳತ್ತ ಒಂದೊಂದು ಮುಖವನ್ನು ನಿರ್ಮಿಸಿಕೊಂಡನು. ನಂತರ ಈ ಶತರೂಪೆಯು ಆಕಾಶದತ್ತ ಮೇಲಕ್ಕೆ ಹೊರಟಾಗ ಈ ನಾಲ್ಕು ಮುಖಗಳ ಮೇಲೆ ಐದನೆಯ ಮುಖವೊಂದು ಉದ್ಭವಿಸಿತು. ಆ ಮುಖವನ್ನು ಶಂಕರನು ಕತ್ತರಿಸಿಹಾಕಿದನು. ಶತರೂಪೆಯತ್ತ ನೋಡಿದ ಕಾರಣ ಪುತ್ರಪ್ರಾಪ್ತಿಗಾಗಿ ಇವನು ಆಚರಿಸಿದ ತಪಸ್ಸು ನಷ್ಟವಾಯಿತು. ರುದ್ರನು ತನ್ನ ಕನ್ಯೆಯಾದ ಸಂಧ್ಯಾಳಿಂದ ಬ್ರಹ್ಮನನ್ನು ಮೋಹಗೊಳಿಸಿದನು ; ನಂತರ ಬ್ರಹ್ಮನ ಮಕ್ಕಳ ಮುಂದೆ ಅವನನ್ನು ಅವಮಾನಿತನನ್ನಾಗಿ ಮಾಡಿದನು. ಆಗ ಬ್ರಹ್ಮನು ಶಂಕರನನ್ನು ಮೋಹಗೊಳಿಸುವ 'ಸತಿ'ಯನ್ನು ನಿರ್ಮಿಸಿ, ನಂತರ ದಕ್ಷನಿಂದ ರುದ್ರನನ್ನು ಅವಮಾನಗೊಳಿಸಿದನು.

ಬ್ರಹ್ಮದೇವನು ವರ ನೀಡುವುದರಲ್ಲಿ ಅತ್ಯಂತ ಉದಾರಿಯಾಗಿದ್ದನು. ವಾಲ್ಮೀಕಿರಾಮಾಯಣದ ಪ್ರಕಾರ ಇವನು ಇಪ್ಪತ್ತು ವರಗಳನ್ನು ಕೊಟ್ಟಿರುವನೆಂದು ಕಂಡುಬರುತ್ತದೆ. ಬ್ರಹ್ಮದೇವನು ಕೊಟ್ಟ ವರದ ಕಾರಣದಿಂದಲೇ ವಾಲ್ಮೀಕಿಯು ರಾಮಾಯಣವನ್ನು ಬರೆಯಲು ಪ್ರವೃತ್ತನಾದನು. ಒಂದು ಸಾವಿರ ವರ್ಷಗಳ ತಪಸ್ಸನ್ನು ಮಾಡಿದನೆಂದು ಬ್ರಹ್ಮನು ವಿಶ್ವಾಮಿತ್ರನಿಗೆ ಮೊದಲು ರಾಜರ್ಷಿ ಎಂದೂ ನಂತರದ ವಿಶ್ವಾಮಿತ್ರನ ಪ್ರತಿ ಸಾವಿರ ವರ್ಷಗಳ ತಪಸ್ಸು ಪೂರ್ಣಗೊಂಡಾಗ ಅವನಿಗೆ ಋಷಿ, ಮಹರ್ಷಿ ಮತ್ತು ಬ್ರಹ್ಮರ್ಷಿ ಎಂಬ ಪದವಿಗಳನ್ನೂ ಕೊಟ್ಟನು. ಈತನು ರಾವಣ, ಕುಂಭಕರ್ಣ, ಮೇಘನಾದ, ಮಾಲಿ, ಸುಮಾಲಿ, ಮಾಲ್ಯವಾನ, ಸುಕೇತು, ತಾಟಕಾ, ವಿರಾಧ, ಮಾರೀಚ, ಮಯ, ನಿವಾತಕವಚ ಮೊದಲಾದ ಅನೇಕ ರಾಕ್ಷಸರಿಗೆ ವರಗಳನ್ನು ಕೊಟ್ಟಿದ್ದಾನೆ. ಪಿತರಿಗೆ ಸ್ವರ್ಗವನ್ನು ದೊರಕಿಸಿಕೊಡುವ ಕಾರ್ಯವು ಭಗೀರಥನಿಗೆ ಬ್ರಹ್ಮನಿಂದಲೇ ಸಾಧ್ಯವಾಯಿತು. ದೇವತೆಗಳ ಕಾರ್ಯಕ್ಕಾಗಿ ಮುಂದೆ ಹನುಮಾನನ ಉಪಯೋಗವಾಗಲಿದೆ ಎಂಬುದನ್ನು ಲಕ್ಷಿಸಿ ಬ್ರಹ್ಮದೇವನು ಹನುಮಾನನಿಗೆ ವರಗಳನ್ನು ಕೊಟ್ಟಿದ್ದನು. ಅಷ್ಟೇ ಅಲ್ಲದೆ, ಬೇರೆ ದೇವತೆಗಳಿಂದಲೂ ಹನುಮಾನನಿಗೆ ವರ ಸಿಗುವಂತೆ ಮಾಡಿದನು. ಕುಂಭಕರ್ಣನಿಗೆ ದೀರ್ಘನಿದ್ರೆಯ ವರವನ್ನೂ ಮತ್ತು ರಾವಣನಿಗೆ ಮರ್ಯಾದಿತ ಸಂದರ್ಭದಲ್ಲಿ ಸಾವು ಇರದಂಥ ವರವನ್ನೂ ಕೊಟ್ಟನು. ಮೇಘನಾದನು ಇಂದ್ರನನ್ನು ಸೋಲಿಸಿ ಆತನನ್ನು ಬಂಧಿಸಿ ತಂದಾಗ ಬ್ರಹ್ಮದೇವನು ಇಂದ್ರನನ್ನು ಬಿಡಿಸಲು ಏನನ್ನು ಮಾಡಲೂ ಸಿದ್ಧನಾದನು. ಭೂಲೋಕದಲ್ಲಿ ಯಾರಿಗೂ ಸಂಪೂರ್ಣವಾಗಿ ಅಮರತ್ವವು ಸಿಗಲಾರದು .; ಆದ್ದರಿಂದ ಬ್ರಹ್ಮದೇವನು ಅದನ್ನು ಹೊರತುಪಡಿಸಿ ಮೇಘನಾದನು ಬೇಡಿದ ಎಲ್ಲ ವರಗಳನ್ನೂ ಕೊಟ್ಟನು. ಅವನು, 'ಹೋಮವನ್ನು ಪೂರ್ತಿಗೊಳಿಸುವ ಮೊದಲು ನಿಕುಂಭಿಲೆಗೆ ಬಂದು, ಯಾವ ಶಸ್ತ್ರಧಾರಿಯು ನಿನ್ನೊತನ

ಯುದ್ಧಮಾಡುವನೋ ಆತನಿಂದ ನಿನ್ನ ವಧೆಯಾಗುವುದು !' ಎಂಬ ಶಾಪಸಮವಾದ ವರವನ್ನು ಮೇಘನಾದನಿಗೆ ಕೊಟ್ಟನು. ಬ್ರಹ್ಮನಿಂದ ಮೈಂದ, ದ್ವಿವಿದ, ಈ ವಾನರರಿಗೂ ವರಗಳು ದೊರೆತವು. ವರಗಳನ್ನು ಕರುಣಿಸಿದಂತೆಯೇ ಬ್ರಹ್ಮನು ಶಾಪಗಳನ್ನೂ ಕೊಟ್ಟಿದ್ದಾನೆ. ಆದರೆ ಈ ಶಾಪಗಳನ್ನು ಕೇವಲ ರಾವಣ ಮತ್ತು ಕುಂಭಕರ್ಣರಿಗೆ ಮಾತ್ರ ಕೊಟ್ಟಿದ್ದಾನೆ. ಉನ್ಮತ್ತನಾದ ರಾವಣನು ವರದಿಂದ ಹೊಂದಿದ ಸಾಮರ್ಥ್ಯವನ್ನು ದುರುಪಯೋಗಿಸಿ ಪ್ರಜೆಗಳನ್ನು ಪೀಡಿಸಹತ್ತಿದನು. ಸ್ತ್ರೀಯರ ಮೇಲೆ ಬಲಾತ್ಕಾರ ನಡೆಸಿದನು. ಆಗ ರಾವಣನಿಗೆ ಶಾಪವನ್ನು ಕೊಡಲೇಬೇಕಾಯಿತು. ಕುಂಭಕರ್ಣನ ಅಪಾರಸಾಮರ್ಥ್ಯವನ್ನು ಪ್ರತಿಭಟಿಸಲು ಆತನಿಗೆ ಘೋರನಿದ್ರೆಯ ಶಾಪವನ್ನು ಕೊಡಬೇಕಾಯಿತು. ತಾನು ಕೊಟ್ಟ ವರಗಳು ಸುಳ್ಳು ಎಂದಾಗಬಾರದೆಂದು ಬ್ರಹ್ಮನು ಬಹಳ ಎಚ್ಚರಿಕೆ ವಹಿಸುತ್ತಿದ್ದನು. ರಾವಣ ಮತ್ತು ಯಮ ಇವರಲ್ಲಿ ಯುದ್ಧ ನಡೆದಾಗ ಯಮನು ರಾವಣನನ್ನು ಸಾಯಿಸಲು ಕಾಲದಂಡವನ್ನೇ ಎತ್ತಿಕೊಂಡನು. ಕಾಲದಂಡದಿಂದ ರಾವಣನ ಸಾವು ನಿಶ್ಚಿತವಿತ್ತು. ಆಗ ಬ್ರಹ್ಮನು ತಾನು ರಾವಣನಿಗೆ ಕೊಟ್ಟ ವರವು ಸುಳ್ಳಾಗಬಾರದೆಂದು, ಯಮನಿಗೆ ಕಾಲದಂಡವನ್ನು ಹಿಂತೆಗೆದುಕೊಳ್ಳಲು ಹೇಳಿದನು. ರಾವಣ ಮತ್ತು ನಿವಾತಕವಚ ಈ ಇಬ್ಬರಿಗೂ ಕೊಟ್ಟ ವರದಂತೆ ಇವರಿಬ್ಬರೂ ಪರಸ್ಪರರನ್ನು ವಧಿಸುವಂತಿರಲಿಲ್ಲ. ಆದ್ದರಿಂದ ಬ್ರಹ್ಮನು ಇವರಿಬ್ಬರಲ್ಲಿ ಸ್ನೇಹವನ್ನುಂಟುಮಾಡಿದನು.

ಬ್ರಹ್ಮದೇವನು ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಪುಷ್ಪಕವಿಮಾನವನ್ನು ಕುಬೇರನಿಗೆ ಕೊಟ್ಟನು. ಇಂದ್ರನಿಂದ ವೈಷ್ಣವಯಾಗವನ್ನು ಮಾಡಿಸಿದನು. ಚಂದ್ರನಿಗೆ ಕಾಟಕೊಡುತ್ತಿದ್ದ ರಾವಣನಿಗೆ ಒಂದು ಮಂತ್ರವನ್ನು ಕೊಟ್ಟು ಸುಮ್ಮನಿರಿಸಿದನು. ದೇವತೆಗಳ ಕಾರ್ಯವನ್ನು ಸಾಧ್ಯಮಾಡಿಕೊಳ್ಳಲು, ವಿಷ್ಣುವು ಮಾನವ ಅವತಾರವನ್ನು ತಾಳಬೇಕೆಂದು ದೇವತೆಗಳಿಂದ ಪ್ರಾರ್ಥಿಲ್ಪಟ್ಟನು. ಆಹಾರಪಾನೀಯಗಳನ್ನು ತ್ಯಜಿಸಿದ ಸೀತೆಯು ಬದುಕಿ ಉಳಿಯಬೇಕೆಂದು, ಹವಿಷ್ಯಾನ್ನವನ್ನು ಆಕೆಗೆ ತಲುಪಿಸಲು ಇಂದ್ರನಿಗೆ ಸೂಚಿಸಿದನು; ಮತ್ತು ಇಂದ್ರನನ್ನು ಈ ಕೆಲಸಕ್ಕಾಗಿಯೇ ಲಂಕೆಗೆ ಕಳುಹಿದನು. ಈತನು ಮಹಾಪ್ರಸ್ಥಾನದನಂತರ ವಿಷ್ಣುವಿನ ತೇಜಸ್ಸಿನಲ್ಲಿ ವಿಲೀನವಾಗುವ ಶ್ರೀರಾಮನನ್ನು ಸ್ವಾಗತಿಸಿದನು.

## ೮೩. ಬ್ರಹ್ಮಹತ್ಯೆ

ಭೈರವನು ಬ್ರಹ್ಮದೇವನ ರುಂಡವನ್ನು ತುಂಡರಿಸಿದಾಗ, ಶಂಕರನು ಓರ್ವ ಸ್ತ್ರೀಯನ್ನು ಸೃಷ್ಟಿಸಿದನು. ಇವಳೇ ಬ್ರಹ್ಮಹತ್ಯೆ. ಶಿವನು ಭೈರವನನ್ನು ಬೆನ್ನಟ್ಟಲು ಈ ಬ್ರಹ್ಮಹತ್ಯೆಗೆ ಆಜ್ಞಾಪಿಸಿದನು.

## ೮೪. ಭಗೀರಥ

ಇವನು ದಿಲೀಪರಾಜನ ಮಗ. ಕಪಿಲಮುನಿಯ ಕೋಪದಿಂದ ಸಗರನ ಅರವತ್ತುಸಾವಿರ ಪುತ್ರರು ಒಮ್ಮೆಲೇ ಮೃತರಾದರು. ಅವರೆಲ್ಲ ಸುಟ್ಟು ಬೂದಿಯಾಗಿದ್ದರು. ಅವರನ್ನು ಉದ್ಧರಿಸಲು ಕಪಿಲಮುನಿಯ ಹೇಳಿಕೆಯಂತೆ ಅಂಶುಮಾನ ಹಾಗೂ ದಿಲೀಪರು ತಪಸ್ಸನ್ನಾಚರಿಸಿದರು. ಆದರೆ ಅವರ ಪ್ರಯತ್ನವು ಅರ್ಧಕ್ಕೇ ನಿಂತಿತು. ಅನಂತರ ಭಗೀರಥನು ಹಿಮಾಲಯಕ್ಕೆ ಹೋಗಿ ಗಂಗೆಯನ್ನು ತರಲು ಅತ್ಯಂತ ಕಠೋರವಾದ ತಪಸ್ಸನ್ನು ಕೈಗೊಂಡನು. ಇವನ ಯತ್ನವು ಸಫಲವಾಗಿ ಗಂಗೆ ಇವನಿಗೆ ದರ್ಶನವನ್ನು ಕೊಟ್ಟಳು. ಗಂಗೆಯು ಸ್ವರ್ಗದಿಂದ ಪೃಥ್ವಿಯತ್ತ ಬೀಳುವ ತನ್ನ ಪ್ರವಾಹವನ್ನು ತಡೆಯಲು ಶಂಕರನನ್ನು ಪ್ರಸನ್ನಗೊಳಿಸಬೇಕೆಂದು ನುಡಿದಳು. ಭಗೀರಥನು ಶಂಕರನನ್ನು ಆರಾಧಿಸಿ ಸಂತೋಷಗೊಳಿಸಿದನು. ಶಂಕರನು ತನ್ನ ಜಟಾಜೂಟದಲ್ಲಿ ಗಂಗೆಯನ್ನು ಧರಿಸಲು ಸಿದ್ಧನಾದನು. ತನ್ನ ಜಟೆಯಲ್ಲಿಯ ಒಂದು ಕೂದಲನ್ನು ತೆಗೆದು ಗಂಗೆಗೆ ದಾರಿ ಮಾಡಿಕೊಟ್ಟನು ಹಾಗೂ ಅಂದಿನಿಂದ ಗಂಗೆಯ ಪ್ರವಾಹಕ್ಕೆ ಅಲಕನಂದಾ ಎಂಬ ಹೆಸರು ಬಂದಿತು.

ಭಗೀರಥನು ಗಂಗೆಗೆ ತನ್ನನ್ನು ಹಿಂಬಾಲಿಸಲು ಹೇಳಿದನು. ಕಪಿಲಮುನಿಯಿಂದ ಸುಟ್ಟುಬೂದಿಯಾಗಿ ತನ್ನ ಪಿತರು ಬಿದ್ದ ಸ್ಥಳದತ್ತ ಗಂಗೆಯು ಹರಿಯುವಂತೆ ಮಾಡಿ ಅವರೆಲ್ಲರನ್ನೂ ಉದ್ಧರಿಸಿದನು. ಭಗೀರಥನು ಗಂಗೆಯನ್ನು ಪೃಥ್ವಿಗೆ ತಂದಿದ್ದರಿಂದ ಗಂಗೆಗೆ ಭಾಗೀರಥಿ ಎಂಬ ಹೆಸರು ಬಂದಿತು. ಈ ನಂತರ ಭಗೀರಥನು

ಮೊದಲಿನಂತೆ ರಾಜ್ಯವನ್ನಾಳಿದನು. ಈತನು ಅತ್ಯಂತ ಧಾರ್ಮಿಕವೃತ್ತಿಯುಳ್ಳವನೂ, ದಾನಶೂರನೂ ಆಗಿದ್ದನು. ಇವನಿಗೆ ನಾಭಾಗ ಮತ್ತು ಶ್ರುತ ಎಂಬ ಪುತ್ರರೂ ಮತ್ತು ಹಸಿ ಎಂಬ ಕನ್ಯೆಯೂ ಇದ್ದರು. ಇವನು ಈ ಕನ್ಯೆಯನ್ನು ಕೌತ್ಸ ಎಂಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು. ಇವನು ಗಂಗಾನದಿಯ ತೀರಕ್ಕೆ ಸಾಲುಮೆಟ್ಟಿಲುಗಳನ್ನು ಕಟ್ಟಿಸಿದನು. ಸಾವಿರಾರು ಸಾಲಂಕೃತ ಕನ್ಯೆಯರನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಇವನು ಯಜ್ಞಮಾಡಿ ವಿಪುಲದಕ್ಷಿಣೆಯನ್ನು ಅರ್ಪಿಸುತ್ತಿದ್ದನು. ಈತನು ಮಾಡಿದ ಯಜ್ಞಕ್ಕೆ ದೇವತೆಗಳೂ ಆಗಮಿಸುತ್ತಿದ್ದರು. ಈತನು ಸಾವಿರಾರು ಗೋವುಗಳನ್ನು ದಾನಮಾಡಿದನೆಂಬ ಉಲ್ಲೇಖವು ಮಹಾಭಾರತದಲ್ಲಿದೆ. ವಾಲ್ಮೀಕಿರಾಮಾಯಣದಲ್ಲಿ ಭಗೀರಥನ ಮಗನ ಹೆಸರು ಕಕುತ್ಸ್ಥ ಎಂದಿದೆ.

## ೮೫. ಭರತ

ಈತ ದಶರಥ ಹಾಗೂ ಕೈಕೇಯಿಯ ಪುತ್ರ. ಇವನಿಗೆ ವಿಷ್ಣುವಿನ ನಾಲ್ಕನೆಯ ಅಂಶವೆನ್ನುತ್ತಾರೆ. ಭರತ-ಶತ್ರುಘ್ನರಲ್ಲಿ ಪರಸ್ಪರ ಗಾಢಪ್ರೀತಿಯಿತ್ತು. ಜನಕರಾಜನ ತಮ್ಮನಾದ ಕುಶಧ್ವಜನ ಮಗಳಾದ ಮಾಂಡವಿಯು ಭರತನ ಪತ್ನಿಯಾಗಿದ್ದಳು. ದಶರಥನು ಶ್ರೀರಾಮನಿಗೆ ಯೌವರಾಜ್ಯಾಭಿಷೇಕ ಮಾಡುವುದನ್ನು ನಿಶ್ಚಯಿಸಿದನು. ಆಗ ಭರತನು ಅಯೋಧ್ಯೆಯಲ್ಲಿರಲಿಲ್ಲ. ಶತ್ರುಘ್ನನೊಡನೆ ಆತನು ತನ್ನ ಸೋದರಮಾವನ ಮನೆಗೆ ಹೋಗಿದ್ದನು. 'ಭರತನು ಧರ್ಮಾತ್ಮನಿದ್ದು ಎಲ್ಲರ ಸಂಗಡ ಒಳ್ಳೆಯದಾಗಿ ಮಾತನಾಡುವವನು' ಎಂದು ಶ್ರೀರಾಮನು ಕೌಸಲ್ಯೆಗೆ ಭರತನ ಬಗ್ಗೆ ಹೇಳಿದ್ದಾನೆ. ವಸಿಷ್ಠನು ಸಹ 'ಭರತನು ಶ್ರೀರಾಮನ ಹಾಗೆ ವಲ್ಕಲಗಳನ್ನುಟ್ಟು ವನವಾಸಕ್ಕೆ ಹೋಗುವನು. ಪಿತನಿಂದ ದೊರೆಯದ ರಾಜ್ಯವನ್ನಾಳಲು ಭರತನು ಇಚ್ಛಿಸುವುದಿಲ್ಲ' ಎಂದು ನಿಖರವಾಗಿ ನುಡಿದಿದ್ದನು. ಭರತನು ಅಯೋಧ್ಯೆಗೆ ಕೂಡಲೇ ಬರಬೇಕೆಂದು ಹೇಳಿ ದೂತರನ್ನು ಕಳುಹಿಸಲಾಗಿತ್ತು. ಆ ದೂತರು ತಲುಪುವ ಮುನ್ನವೇ ಭರತನು ಅಶುಭಸೂಚಕ ಕನಸುಗಳನ್ನು ಕಂಡನು. ಅಯೋಧ್ಯೆಗೆ ಮರಳಿದನಂತರ ನಡೆದ ಸಂಗತಿಗಳು ಆತನಿಗೆ ತಿಳಿದವು. ಆಗ ಭರತನು ಕೈಕೇಯಿಯ ಮೇಲೆ ಸಿಟ್ಟುಗೊಂಡವನಾದನು. ಆತನು ಅತಿಕಠೋರಶಬ್ದಗಳಲ್ಲಿ ಕೈಕೇಯಿಯನ್ನು ಜರೆದನು. 'ಮಾತೆಯ ರೂಪದ ವೈರಿಣಿಯೇ ನೀನು ! ನೀನು ನರಕಕ್ಕೆ ಹೋಗು ! ನೀನು ನನ್ನ ಪಿತನ ಕುಲವನ್ನು ಹಾಳುಮಾಡಿದೆ !' ಎಂದನು. ಹೀಗೆ ನುಡಿದು, ತನಗೆ ರಾಜ್ಯದ ಆಕಾಂಕ್ಷೆಯು ಎಳ್ಳಷ್ಟೂ ಇಲ್ಲವೆಂದು ಮಂತ್ರಿಗಳಿಗೆ ಸ್ಪಷ್ಟವಾಗಿ ತಿಳಿಸಿದನು. ಕೌಸಲ್ಯೆ, ಗುಹ ಹಾಗೂ ಭರದ್ವಾಜ—ಇವರಿಗೆ ಭರತನ ಬಗ್ಗೆ ಸಂದೇಹ ಮೂಡಿತ್ತು. ಭರತನು ತನ್ನ ವರ್ತನೆಯಿಂದ ಮತ್ತು ಶಪಥಮಾಡಿ ಅದನ್ನು ನಿವಾರಿಸಿದನು. ದಶರಥನ ಉತ್ತರಕ್ರಿಯೆ-ಕರ್ಮಗಳನ್ನು ಭರತನಿಂದ ಮಾಡಿಸಿದನಂತರ ವಸಿಷ್ಠನು, 'ರಾಜ್ಯವನ್ನು ಸ್ವೀಕರಿಸು !' ಎಂದು ಭರತನಿಗೆ ಹೇಳಿದನು. ಭರತನು ಅದಕ್ಕೆ ಒಪ್ಪಲಿಲ್ಲ.

ಶ್ರೀರಾಮನನ್ನು ಅಯೋಧ್ಯೆಗೆ ಮರಳಿ ಕರೆತರಲು ಭರತನೂ ವಸಿಷ್ಠ ಹಾಗೂ ಮಾತೆಯರೊಡನೆ ಹೊರಟನು. ಶ್ರೀರಾಮನ ಭೇಟಿಯಾದಾಗ ಇವನಿಗೆ ಪರಮಾನಂದವಾಯಿತು. ಭರತನು ಶ್ರೀರಾಮನಿಗೆ ರಾಜ್ಯವನ್ನು ಸ್ವೀಕರಿಸಲು ಎಷ್ಟೇ ಬಲವಂತಮಾಡಿದರೂ ಶ್ರೀರಾಮನು ತನ್ನ ನಿಶ್ಚಯದಿಂದ ಪರಾವೃತ್ತನಾಗಲಿಲ್ಲ. ಅಷ್ಟೇ ಅಲ್ಲದೆ. ಭರತನಿಗೆ ಆತನ ಕರ್ತವ್ಯದ ಅರಿವನ್ನು ಮಾಡಿಕೊಟ್ಟನು. ಭರತನು ಶ್ರೀರಾಮನ ಪಾದುಕೆಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಮರಳಿದನು. ಈ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು, ರಾಜ್ಯವನ್ನಾಳುತ್ತ ಸನ್ಯಾಸವೃತ್ತಿಯನ್ನು ಅಂಗೀಕರಿಸಿದನು. ಶ್ರೀರಾಮನು ವನವಾಸ ಮುಗಿದೊಡನೆ ಅಯೋಧ್ಯೆಗೆ ಮರಳುವ ಭರವಸೆಯನ್ನು ಕೊಟ್ಟಿದ್ದನು. ಈ ಆಶ್ವಾಸನೆಯಂತೆ ನಡೆಯದಿದ್ದಲ್ಲಿ 'ನಾನು ಅಗ್ನಿಪ್ರವೇಶ ಮಾಡುವೆ' ಎಂದು ಭರತನು ಶ್ರೀರಾಮನಿಗೆ ಹೇಳಿದ್ದನು. ಶ್ರೀರಾಮನು ವನವಾಸದನಂತರ ಮರಳಿ ಅಯೋಧ್ಯೆಯ ಸಮೀಪ ಬಂದಾಗ, ಭರತನನ್ನು ಭೇಟಿಯಾಗಲು ಮೊದಲಿಗೆ ಹನುಮಾನನನ್ನು ಕಳಿಸಿದನು. ಅನಂತರ ಭರತನು ಶ್ರೀರಾಮನನ್ನು ಯಥಾಯೋಗ್ಯವಾಗಿ ಸತ್ಕರಿಸಿ ಆತನ ರಾಜ್ಯವನ್ನು ಅವನಿಗೆ ಒಪ್ಪಿಸಿದನು. ಲಕ್ಷ್ಮಣನು ಯೌವರಾಜ್ಯಪದವನ್ನು ನಿರಾಕರಿಸಿದ್ದರಿಂದ, ಭರತನು ಅದನ್ನು ಸ್ವೀಕರಿಸಬೇಕಾಯಿತು. ಭರತನು ಲವಣಾಸುರನನ್ನು ಕೊಲ್ಲಲು ಹವಣಿಸಿದ್ದನು . ಆದರೆ ಇದನ್ನು ಶತ್ರುಘ್ನನು ವಹಿಸಿಕೊಂಡನು. ಭರತನಿಗೆ

ತಕ್ಷ ಹಾಗೂ ಪುಷ್ಕಲ ಎಂಬ ಎರಡು ಗಂಡುಮಕ್ಕಳಿದ್ದರು. ತಕ್ಷನಿಗೆ ತಕ್ಷಶಿಲಾ ಎಂಬ ಪಟ್ಟಣವನ್ನೂ, ಪುಷ್ಕಲನಿಗೆ ಪುಷ್ಕಲಾವರ್ತ ಎಂಬ ಪಟ್ಟಣವನ್ನೂ ಸ್ಥಾಪಿಸಿಕೊಟ್ಟನು. ಲಕ್ಷ್ಮಣನ ಪುತ್ರರಿಗಾಗಿ ಎರಡು ಪಟ್ಟಣಗಳನ್ನು ನೆಲೆಸಿಕೊಟ್ಟನು. ಶ್ರೀರಾಮನು ಮಹಾಪ್ರಸ್ಥಾನಕ್ಕಾಗಿ ನಡೆದಾಗ ಭರತನೂ ಅವನನ್ನು ಹಿಂಬಾಲಿಸಿದನು.

## ೮೬. ಭರದ್ವಾಜ

ಇವನು ವಾಲ್ಮೀಕಿ ಋಷಿಯ ಶಿಷ್ಯರಲ್ಲೊಬ್ಬ. ವಾಲ್ಮೀಕಿಯ ಮುಖದಿಂದ 'ಮಾನಿಷಾದ' ಎಂಬ ಶಾಪವಾಣಿ ಹೊರಬಂದಾಗ ಭರದ್ವಾಜನು ಅಲ್ಲಿಯೇ ಇದ್ದನು. ಇವನು ಪ್ರಯಾಗದಲ್ಲಿರುತ್ತಿದ್ದನು. ಇವನು ದಂಡಕಾರಣ್ಯದತ್ತ ಹೋಗುವ ಶ್ರೀರಾಮನ ದರ್ಶನಮಾಡಿ, ಅವನನ್ನು ಯೋಗ್ಯವಾಗಿ ಸತ್ಕರಿಸಿ ತನ್ನ 'ಆಶ್ರಮದಲ್ಲಿ ತಂಗಲು ಹೇಳಿದನು. ಅಯೋಧ್ಯೆ ತೀರ ಸಮೀಪವಾದ್ದರಿಂದ ಸುರಕ್ಷಿತವಾದ ಇನ್ನೊಂದು ಸ್ಥಳವನ್ನು ಸೂಚಿಸಲು ಶ್ರೀರಾಮನು ಭರದ್ವಾಜನನ್ನು ಕೇಳಿದಾಗ, ಭರದ್ವಾಜನು ಅವನಿಗೆ ಚಿತ್ರಕೂಟದಲ್ಲಿ ವಾಸವುಳಿಯಲು ಹೇಳಿದನು. ಶ್ರೀರಾಮನನ್ನು ಅಯೋಧ್ಯೆಗೆ ಮರಳಿ ಕರೆದೊಯ್ಯಲು ಸೈನ್ಯಸಮೇತನಾಗಿ ಬಂದ ಭರತನನ್ನು ಕಂಡು ಭರದ್ವಾಜನಿಗೆ ಸಂದೇಹವುಂಟಾಯಿತು ; ಆದರೆ ಕಂಬನಿಗಳೊಂದಿಗೆ ಭರತನು ಎಲ್ಲವನ್ನೂ ತಿಳಿಸಿ ಹೇಳಿದನಂತರ ಭರದ್ವಾಜನು ಭರತನಿಗೆ ಯೋಗ್ಯ ಸ್ವಾಗತವನ್ನು ಬಯಸಿದನು. ಶ್ರೀರಾಮನಿದ್ದ ವಾಸಸ್ಥಳದ ಮಾರ್ಗವನ್ನು ನಿರೂಪಿಸಿದನು. ಶ್ರೀರಾಮನು ವನವಾಸದಿಂದ ಮರಳುವಾಗ ಮಾರ್ಗದಲ್ಲಿ ಪುನಃ ಭರದ್ವಾಜನ ದರ್ಶನವನ್ನು ಪಡೆದನು. ಆಗ ಭರದ್ವಾಜನು ಶ್ರೀರಾಮನನ್ನು ಅಭಿನಂದಿಸಿ ವರವನ್ನು ಕೊಟ್ಟನು. ಅಶ್ವಮೇಧಯಜ್ಞದನಂತರ ಮತ್ತೊಮ್ಮೆ ಶ್ರೀರಾಮನು ಭರದ್ವಾಜನನ್ನು ಕಾಣಲು ಬಂದಿದ್ದನು.

ಭರದ್ವಾಜನು ಪುಲಸ್ತ್ಯನ ವಿಶ್ರವಾ ಎಂಬ ತಪಸ್ವಿಪುತ್ರನಿಗೆ ದೇವವರ್ಣೆ ಎಂಬ ತನ್ನ ಕನ್ಯೆಯನ್ನು ಮದುವೆ ಮಾಡಿಕೊಟ್ಟನು.

## ೮೭. ಭೃಗು

ಭೃಗು ಹೆಸರಿನ ಅನೇಕ ವ್ಯಕ್ತಿಗಳಿದ್ದು ಬೇರೆಬೇರೆ ಗ್ರಂಥಗಳಲ್ಲಿ ಅವರ ಬಗ್ಗೆ ಭಿನ್ನಭಿನ್ನ ಮಾಹಿತಿಯು ದೊರೆಯುತ್ತದೆ. ಪ್ರಜಾಪತಿಯ ವೀರ್ಯದಲ್ಲಿ ಮೂರು ಭಾಗಗಳಾಗಿ ಆದಿತ್ಯ, ಭೃಗು ಮತ್ತು ಅಂಗೀರಸರು ಜನ್ಮ ತಡೆದರೆಂದು ಐತರೇಯ ಬ್ರಾಹ್ಮಣದಲ್ಲಿದೆ. ತೈತ್ತರೀಯ ಉಪನಿಷತ್ತಿನಲ್ಲಿ ಭೃಗುವು ವರುಣಪುತ್ರನೆಂಬ ಉಲ್ಲೇಖವಿದೆ. ಈತನು ವರುಣನಿಂದ ಬ್ರಹ್ಮಜ್ಞಾನವನ್ನು ಪಡೆದುಕೊಂಡ ಕಾರಣ ಇವನಿಗೆ ವಾರುಣಿಭೃಗು ಎಂದು ಕರೆಯುತ್ತಾರೆ. ಬ್ರಹ್ಮದೇವನು ಸೃಷ್ಟಿಯನ್ನು ನಿರ್ಮಿಸಲೋಸುಗ ತಪಸ್ಸನ್ನಾಚರಿಸುತ್ತಿದ್ದಾಗ ಅವನ ಮೈಯ ಬೆವರು ಭೂಮಿಗೆ ಬಿದ್ದಿತು. ಆ ಬೆವರಿನಲ್ಲಿ ತನ್ನ ಸ್ವಂತ ಪ್ರತಿಬಿಂಬವನ್ನು ಕಂಡು ಈತನ ವೀರ್ಯ ಸ್ಖಲನವಾಯಿತು. ಈ ವೀರ್ಯದಲ್ಲಿ ಎರಡು ಭಾಗಗಳಾದವು. ಒಂದು ಭಾಗವು ಸೌಮ್ಯವೂ ಸ್ವಾದಿಷ್ಟವೂ ಆದ ಪಾನೀಯವಾಯಿತು. ಇನ್ನೊಂದು ಭಾಗವು ಕ್ಷಾರಯುಕ್ತವಾಗಿದ್ದು, ಕುಡಿಯಲು ಬಾರದಂಥ, ರುಚಿಯಿಲ್ಲದ್ದಾಯಿತು. ಈ ಎರಡು ಭಾಗಗಳಿಂದ ಅನುಕ್ರಮವಾಗಿ ಭೃಗು ಮತ್ತು ಅಂಗೀರಸ—ಇವರು ಹುಟ್ಟಿದರೆಂದು ಗೋಪಥಬ್ರಾಹ್ಮಣದಲ್ಲಿ ಉಲ್ಲೇಖಿಸಲಾಗಿದೆ. ಬ್ರಹ್ಮನ ಹೃದಯದಿಂದ ಹುಟ್ಟಿದ ಭೃಗು ಮನುವಿನ ಅಳಿಯ ; ಶಂಕರನ ಷಡ್ಡಕ. ದಕ್ಷನ ಯಜ್ಞದ ಕಾಲಕ್ಕೆ ಶಿವನಿಗೆ ಅವಮಾನವಾಯಿತು. ಆಗ ಶಿವನನ್ನು ನಿಂದಿಸಿದವರಲ್ಲಿ ಭೃಗುವೂ ಒಬ್ಬನಾಗಿದ್ದನು. ವೀರಭದ್ರನು ದಕ್ಷನ ಯಜ್ಞವನ್ನು ಧ್ವಂಸಗೊಳಿಸುತ್ತಿದ್ದಾಗ ಭೃಗುವಿನ ಗಡ್ಡವನ್ನು ಸುಟ್ಟನು. ಶಂಕರನನ್ನು ಸ್ತುತಿಸಿದನಂತರ ಅವನು ಪ್ರಸನ್ನನಾಗಿ ಭೃಗುವಿಗೆ ಹೋತದ ಗಡ್ಡವನ್ನು ಅಂಟಿಸಿದನೆಂದು ಭಾಗವತದಲ್ಲಿ ಹೇಳಿದ್ದಾರೆ. ದಕ್ಷನಿಂದ ಅವಮಾನಗೊಂಡ ಶಂಕರನು ಭೃಗುವನ್ನು ಸುಟ್ಟುಹಾಕಿದನೆಂದು ಒಂದೆಡೆ ಉಲ್ಲೇಖವಿದೆ. ದೇವ-ದೈತ್ಯರ ಕಾಳಗದಲ್ಲಿ ದೇವತೆಗಳ ಕೈಮೇಲಾದಾಗ ಶುಕ್ರನು ಸಂಜೀವಿನಿಮಂತ್ರವನ್ನು ಪಡೆಯಲು ಹೊರಟನು. ಭೃಗುವು ತಪಸ್ಸನ್ನು ಆರಂಭಿಸಿದನು. ಭೃಗುಪತ್ನಿಯು

ದೇವತೆಗಳೊಡನೆ ಕಾದಾಡಹತ್ತಿದಳು. ಈಕೆ ಓರ್ವ ಸ್ತ್ರೀ ಇರುವಳೆಂಬುದನ್ನು ಗಮನಿಸದೆ, ವಿಷ್ಣುವು ತನ್ನ ಚಕ್ರವನ್ನು ಆಕೆಯ ಮೇಲೆ ಬಿಟ್ಟು ಅವಳನ್ನು ವಧಿಸಿದನು. ಭೃಗುವು ಸಂಜೀವಿನಿಮಂತ್ರದಿಂದ ಅವಳನ್ನು ಜೀವಿತಗೊಳಿಸಿದನು. ವಿಷ್ಣುವಿಗೆ 'ನೀನು ಗರ್ಭವಾಸದ ದುಃಖವನ್ನು ಅನುಭವಿಸುವೆ ! ಪೃಥ್ವಿಯಲ್ಲಿ ಅವತರಿಸುವೆ !' ಎಂಬ ಶಾಪವನ್ನು ಕೊಟ್ಟನೆಂದು ದೇವೀಭಾಗವತದಲ್ಲಿದೆ. ತಾಟಕಿಯ ವಧೆಯ ಕಾಲದಲ್ಲಿ 'ವಿಶಿಷ್ಟ ಪ್ರಸಂಗದಲ್ಲಿ ಸ್ತ್ರೀವಧೆ ದೋಷಾಸ್ಪದವಲ್ಲ' ಎಂಬುದನ್ನು ಸ್ಪಷ್ಟಪಡಿಸಲು ವಿಶ್ವಾಮಿತ್ರನು ಶ್ರೀರಾಮನಿಗೆ ಈ ಮೇಲಿನ ಕಥೆಯನ್ನು ಉದಹರಿಸಿದ್ದಾನೆ. ಭೃಗುವು ವಿಷ್ಣುವಿಗೆ ಶಾಪ ಕೊಟ್ಟ ಇನ್ನೊಂದು ಕಥೆಯು ಪದ್ಮಪುರಾಣದ ಭೂಮಿಖಂಡದಲ್ಲಿದೆ. ಭೃಗುವಿನ ಯಜ್ಞವನ್ನು ರಕ್ಷಿಸುವೆನೆಂದು ವಿಷ್ಣುವು ಆಶ್ವಾಸನೆಯನ್ನು ಕೊಟ್ಟಿದ್ದನು ; ಆದರೆ ಇಂದ್ರನಿಂದ ಕರೆಬಂದ ಕಾರಣ ವಿಷ್ಣುವು ತನ್ನ ಮಾತಿನಂತೆ ನಡೆಯದೆ ಇಂದ್ರನತ್ತ ಹೊರಟುಹೋದನು. ವಿಷ್ಣುವು ಇರದೇ ಇದ್ದುದನ್ನು ಲಕ್ಷಿಸಿ ದೈತ್ಯರು ಭೃಗುವಿನ ಯಜ್ಞವನ್ನು ಹಾಳು ಮಾಡಿದರು. ಆಗ 'ಭೂಲೋಕದಲ್ಲಿ ಹತ್ತು ಬಾರಿ ಜನ್ಮತಾಳುವೆ !' ಎಂದು ಭೃಗು ವಿಷ್ಣುವಿಗೆ ಶಾಪವನ್ನು ಕೊಟ್ಟನು. ಭೃಗುವಿಗೆ ಬ್ರಹ್ಮ, ವಿಷ್ಣು, ಮಹೇಶ್ವರ—ಈ ಮೂವರಲ್ಲಿ ಯಾರು ಶ್ರೇಷ್ಠರು ?— ಎಂಬುದನ್ನು ತೀರ್ಮಾನಿಸುವ ಸಂದರ್ಭ ಬಂದಿತು. ಆಗ ಭೃಗುವು ನಿದ್ರಿಸುತ್ತಿದ್ದ ವಿಷ್ಣುವಿನ ಎದೆಗೆ ಒದ್ದುಬಿಟ್ಟನು. ಆಗಲೂ ವಿಷ್ಣುವು ಕೋಪಗೊಳ್ಳಲಿಲ್ಲ. ಆಗ ಭೃಗುವಿಗೆ ವಿಷ್ಣುವಿನ ಹಿರಿಮೆ ಅರ್ಥವಾಯಿತು. ಭೃಗುವಿನ ಒದೆತದ ಕಾರಣದಿಂದ ವಿಷ್ಣುವಿನ ಎದೆಯ ಮೇಲೆ ಉಂಟಾದ ಕಲೆಯನ್ನು 'ಶ್ರೀವತ್ಸಲಾಂಛನ' ಎಂದು ವಿಷ್ಣುವು ತನ್ನ ವಕ್ಷಃಸ್ಥಲದ ಮೇಲೆ ಧರಿಸಿದನು.

ಭೃಗುವಿಗೆ ದಿವ್ಯಾ ಮತ್ತು ಪುಲೋಮೀ ಎಂಬ ಇಬ್ಬರು ಹೆಂಡತಿಯರಿದ್ದರು. ದಿವ್ಯಳಿಂದ ಶುಕ್ರ ಮತ್ತು ಇತರ ಹನ್ನೆರಡು ಪುತ್ರರಾದರು. ಪುಲೋಮೀಯ ಮಗನ ಹೆಸರು ಚ್ಯವನನೆಂದಿದೆ. ಇವನು ಭೃಗುಸ್ಮೃತಿ, ಭೃಗುಗೀತಾ, ಭೃಗುಸೂತ್ರ ಮುಂತಾದ ಗ್ರಂಥಗಳನ್ನು ಬರೆದಿದ್ದಾನೆ. ವಾಸ್ತುಶಿಲ್ಪಶಾಸ್ತ್ರದ ಬಗ್ಗೆಯೂ ಇವನು ಗ್ರಂಥವನ್ನು ಬರೆದಿದ್ದಾನೆ.

ಇಕ್ಷ್ವಾಕುಕುಲದ ಪುರೋಹಿತನಾದ ವಸಿಷ್ಠನ ತರುವಾಯ ನಿಮಿರಾಜನು ಅತ್ರಿ ಮತ್ತು ಅಂಗೀರಸರಂತೆಯೇ ಭೃಗುವನ್ನೂ ಋತ್ವಿಜನನ್ನಾಗಿ ಮಾಡಿದನು.

## ೮೮. ಮತಂಗ

ಋಷ್ಯಮೂಕಪರ್ವತದ ಸಮೀಪದಲ್ಲಿ ಗಂಗಾನದಿಯ ಪಶ್ಚಿಮತೀರದಲ್ಲಿ ಒಂದು ಕಾಡಿತ್ತು. ಅದು ಮತಂಗವನವೆಂದು ಗುರುತಿಸಲ್ಪಡುತ್ತಿತ್ತು. ಮತಂಗಮುನಿಯ ಶಾಪದಿಂದಾಗಿ ವಾಲಿಯು ಇಲ್ಲಿ ಪ್ರವೇಶಿಸುವುದು ಸಾಧ್ಯವಿರಲಿಲ್ಲವಾದ್ದರಿಂದ ಸುಗ್ರೀವನು ಇಲ್ಲಿ ನಿರ್ಭಯನಾಗಿರುತ್ತಿದ್ದನು. ಮತಂಗಋಷಿಯ ಶಿಷ್ಯರು ಕಟ್ಟಿಗೆಯ ಹೊರೆಗಳನ್ನು ತರಲು ಹೋದಾಗ ಅವರ ಮೈಬೆವರಿನ ಹನಿಗಳು ಬಿದ್ದ ಸ್ಥಳಗಳಲ್ಲಿ ಹೂವುಗಳು ಅರಳಿದವು. ಆ ಹೂವುಗಳು ಎಂದೂ ಬಾಡಲಾರದಂತಹವಿದ್ದವು. ಶ್ರೀರಾಮನಿಗೆ ಹಣ್ಣುಗಳನ್ನು ಅರ್ಪಿಸಿದ ಶಬರಿ ಇಲ್ಲಿಯೇ ಇರುತ್ತಿದ್ದಳು. ಮತಂಗನು ಶಬರಿಯ ಗುರುವಾಗಿದ್ದನು.

ಬ್ರಾಹ್ಮಣತ್ವವು ಜನ್ಮವನ್ನು ಅವಲಂಬಿಸಿರುತ್ತದೆ ಎಂಬುದನ್ನು ಸ್ಪಷ್ಟಪಡಿಸಲು ಮಹಾಭಾರತದ ಅನುಶಾಸನಪರ್ವದಲ್ಲಿ ಮತಂಗನ ಕಥೆ ಇದೆ. ತಂದೆಯ ಯಜ್ಞಕ್ಕಾಗಿ ಸಮಿಧೆ ದರ್ಭೆಯನ್ನು ತರಲು ಒಂದು ಬಂಡಿಗೆ ಅದರ ಒಂದು ಬದಿಗೆ ಹೆಣ್ಣುಕತ್ತೆಯನ್ನೂ, ಇನ್ನೊಂದು ಬದಿಗೆ ಮರಿ ಗಂಡುಕತ್ತೆಯನ್ನೂ ಹೂಡಿದನು. ಗಂಡುಕತ್ತೆಯು ಬಂಡಿಯನ್ನು ಸರಿಯಾಗಿ ಎಳೆಯಲೊಲ್ಲದು. ಆಗ ಮತಂಗನು ಅದರ ಮೂಗಿನ ಮೇಲೆ ಚಾಟಿಯಿಂದ ಹೊಡೆದನು. ಆಗ ಅದನ್ನು ಕಂಡ ತಾಯಿಕತ್ತೆಯು ಮರಿಕತ್ತೆಗೆ ತಿಳಿಸಿದ ಸಂಗತಿಯ ಆಶಯವು ಮತಂಗನಿಗೆ ತಿಳಿದುಬಂದಿತು, ಈ ಬಗ್ಗೆ ಮತಂಗನು ಕೇಳಿದ್ದರಿಂದ ಆ ಹೆಣ್ಣುಕತ್ತೆಯು, ಮತಂಗನು ಚಾಂಡಾಲನು ಏಕಾದನು ಎಂಬ ಬಗ್ಗೆ ವಿವರಿಸಿತು. ಮತಂಗನ ತಾಯಿಯು ಬ್ರಾಹ್ಮಣಳಾಗಿದ್ದರೂ ತಂದೆಯು ಕ್ಷೌರಿಕನಾಗಿದ್ದನು. ಆದ್ದರಿಂದ ಮತಂಗನಿಗೆ ಬ್ರಾಹ್ಮಣತ್ವವು ಇಲ್ಲವಾಗಿದೆ, ಎಂದಿತು. ಇದನ್ನು ಕೇಳಿಕೊಂಡ ಮತಂಗನು ಯಜ್ಞದ ಸಿದ್ಧತೆಯನ್ನು ಮಾಡುವುದನ್ನು ಬಿಟ್ಟು ತಪಸ್ಸಿಗಾರಂಭಿಸಿದನು. ಇಂದ್ರನು ಅವನಿಗೆ

ಪ್ರಸನ್ನನಾದನು. ಚಾಂಡಾಲಯೋನಿಯಲ್ಲಿ ಜನಿಸಿದವನಿಗೆ ಬ್ರಾಹ್ಮಣತ್ವವು ಸಿಗುವುದು ಅಶಕ್ಯವೆಂದು ಇಂದ್ರನು ಹೇಳಿದನು. ಅನಂತರ ಮತಂಗನು ಒಂಟಿಕಾಲಿನಲ್ಲಿ ನಿಂತು ನೂರು ವರ್ಷಗಳ ಕಾಲ ತಪಸ್ಸನ್ನಾಚರಿಸಿದನು. ಇಂದ್ರನು ಅವನಿಗೆ ಅಸಾಧ್ಯವಾದ ಸಂಗತಿಗಳ ಆಸೆ ಇಟ್ಟುಕೊಳ್ಳಬಾರದೆಂದು ಹೇಳಿದನು. ಬ್ರಾಹ್ಮಣತ್ವವು ಸಹಜಸಾಧ್ಯವಿರದೆ ಅನೇಕ ಜನ್ಮಗಳನಂತರ ದೊರಕುತ್ತದೆ ಎಂದು ತಿಳಿದಾಗ, ಮತಂಗನು ಇನ್ನೂ ಒಂದು ಸಾವಿರ ವರ್ಷಗಳ ತಪಸ್ಸನ್ನು ಮಾಡಿದನು. ಆಗ ಇಂದ್ರನು ಮತಂಗನಿಗೆ ಬ್ರಾಹ್ಮಣತ್ವವನ್ನು ಹೊರತುಪಡಿಸಿ, ಕಾಮವಿಹಾರಿ, ಕಾಮರೂಪಿ, ಆಕಾಶಗಾಮಿ, ಅಕ್ಷಯಕೀರ್ತಿ ಉಳ್ಳವನಾಗಬೇಕೆಂಬ ವರಗಳನ್ನು ಕೊಟ್ಟನು. ಮತಂಗನು ದೇಹತ್ಯಾಗಮಾಡಿ ವರಗಳಿಂದ ದೊರೆತ ಸ್ಥಾನಕ್ಕೆ ತಲುಪಿದನು.

### ೮೯. ಮದಯಂತಿ

ಇವಳು ಸೌದಾಸ (ಕಲ್ಮಾಷಪಾದ) ರಾಜನ ಪತ್ನಿಯಾಗಿದ್ದಳು. ಪುರೋಹಿತನಾದ ವಸಿಷ್ಠನು ರಾಜನಿಗೆ ಶಾಪವನ್ನು ಕೊಟ್ಟನಂತರ, ಸೌದಾಸರಾಜನು ವಸಿಷ್ಠನಿಗೆ ಪ್ರತಿಶಾಪವನ್ನು ಕೊಡಲು ಸಿದ್ಧನಾಗಿದ್ದನು. ಆಗ ಮದಯಂತಿಯು ಈ ರೀತಿ ಮಾಡುವುದು ಸರಿಯಲ್ಲವೆಂದು ತಿಳಿಸಿ ಸೌದಾಸನನ್ನು ಪರಾವೃತ್ತಗೊಳಿಸಿದ್ದಳು. ಮದಯಂತಿಗೆ ಅಶ್ಮಕನೆಂಬ ಒಬ್ಬ ಮಗನಿದ್ದನು.

### ೯೦. ಮಧುಚ್ಛಂದ

ಇವನು ವಿಶ್ವಾಮಿತ್ರನ ಐವತ್ತೊಂದನೆಯ ಮಗ. ಮೊದಲಿನ ಐವತ್ತು ಮಕ್ಕಳು ಶುನಃಶೇಪನನ್ನು ಅಣ್ಣನೆಂದು ಬಗೆಯಲು ಒಪ್ಪಿಕೊಳ್ಳಲಿಲ್ಲ. ಒಪ್ಪಿಕೊಂಡವರಲ್ಲಿ ಮಧುಚ್ಛಂದನೇ ಪ್ರಮುಖನಾಗಿದ್ದನು. ವಿಶ್ವಾಮಿತ್ರನು ಇದರಿಂದ ಪ್ರಸನ್ನಗೊಂಡು ಮಧುಚ್ಛಂದನಿಗೆ ಉತ್ತಮ ಆಶೀರ್ವಾದವನ್ನು ಕೊಟ್ಟನು. ಮಧುಚ್ಛಂದನು ಋಗ್ವೇದದ ಮೊದಲನೆಯ ಮಂಡಲದ ಮೊದಲಿನ ಹತ್ತು ಸೂಕ್ತಗಳನ್ನು ರಚಿಸಿದ್ದಾನೆ. ಈತನು ಶರ್ಯಾತಿಯ ಪುರೋಹಿತನಾಗಿದ್ದನು.

### ೯೧. ಮಧುದೈತ್ಯ

ಈತನು ಕೃತಯುಗದ ದಿತಿಯ ಮಗ. ರಾವಣನ ಚಿಕ್ಕಮ್ಮನ ಮಗಳ ಹೆಸರು ಕುಂಭೀನಸಿ ಎಂದಿತ್ತು. ಮಧುದೈತ್ಯನು ಈಕೆಯನ್ನು ಅಪಹರಿಸಿದಾಗ ಇವನನ್ನು ಸೆರೆಹಿಡಿಯಲು ರಾವಣನು ಸೈನ್ಯಸಮೇತನಾಗಿ ಸಜ್ಜಾದನು. ಆಗ ಕುಂಭೀನಸಿಯು ಮಧುದೈತ್ಯನೇ ತನ್ನ ಪತಿ ಎಂದು ಹೇಳಿ ಸಹಾಯ ಮಾಡಲು ರಾವಣನಿಗೆ ಹೇಳಿದಳು. ಮಧುದೈತ್ಯನು ಜ್ಞಾನಿಯೂ ಬುದ್ಧಿನಿಷ್ಠನೂ ಆಗಿದ್ದನು ; ದೇವತೆಗಳೊಡನೆ ಮಿತ್ರತ್ವವನ್ನಿಟ್ಟುಕೊಂಡಿದ್ದನು. ಶಂಕರನಿಂದ ಇವನಿಗೆ ಒಂದು ತ್ರಿಶೂಲವು ವರವಾಗಿ ದೊರೆತಿತ್ತು. ಈತನು ದೇವತೆ-ಬ್ರಾಹ್ಮಣರೊಡನೆ ವೈರತ್ವವನ್ನು ತಾಳದೇ ಇರುವವರೆಗೆ ಮಾತ್ರ ಈ ಶೂಲವು ಇವನ ಬಳಿ ಇರುವಂತೆ ವರವಿತ್ತು. ಈ ತ್ರಿಶೂಲವು ತನ್ನ ವಂಶದಲ್ಲಿಯೇ ಚಿರವಾಗಿರಬೇಕೆಂಬ ಇಚ್ಛೆಯು ಮಧುದೈತ್ಯನದಿದ್ದಿತ್ತು. ಅವನು ಶಂಕರನ ಬಳಿ ಈ ಇಚ್ಛೆಯನ್ನು ವ್ಯಕ್ತಪಡಿಸಿದನು. 'ಈ ಇಚ್ಛೆಯು ಪೂರ್ಣವಾಗಲಾರದು ; ಕೇವಲ ಒಬ್ಬ ಪುತ್ರನಿಗೆ ಮಾತ್ರ ಅದು ದೊರಕುವುದು ; ಮತ್ತು ಈ ಶೂಲವು ಕೈಯಲ್ಲಿರುವವರೆಗೆ ಆ ಪುತ್ರನನ್ನು ಯಾರೂ ವಧಿಸುವಂತಿಲ್ಲ !' ಎಂದು ಶಂಕರನು ಹೇಳಿದನು. ಈ ಶೂಲವು ಮಧುದೈತ್ಯನ ಮಗನಾದ ಲವಣನಿಗೆ ವಾರಸಾಗಿ ದೊರೆಯಿತು.

### ೯೨. ಮಯ

ಇವನು ದನುವಿನ ಪುತ್ರರಾದ ದಾನವರಲ್ಲಿ ಒಬ್ಬನಿದ್ದನು. ರಾಮಾಯಣದಲ್ಲಿ ಇವನನ್ನು ದಿತಿಯ ಪುತ್ರನೆಂದು ಉಲ್ಲೇಖಿಸಿದ್ದು ಅದು ಸರಿಯಲ್ಲ. ಈತನಿಗೆ ನಮುಚಿ ಎಂಬ ಸಹೋದರನಿದ್ದನು. ಮಯನ ಪತ್ನಿಯರು ಮತ್ತು ಮಕ್ಕಳ ಬಗ್ಗೆ ವಿವಿಧ ಗ್ರಂಥಗಳಲ್ಲಿ ಭಿನ್ನಭಿನ್ನ ಮಾಹಿತಿ ಇದೆ. ಹೇಮಾ ಎಂಬ ಅಪ್ಸರೆಯು

ಈತನ ಮಡದಿಯಾಗಿದ್ದು ಇವಳಿಂದ ಮಯನಿಗೆ ಮಂಡೋದರಿ ಎಂಬ ಕನ್ಯೆಯಾದಳು. ಅವಳ ಮದುವೆಯು ರಾವಣನೊಡನೆ ನಡೆಯಿತೆಂದು ವಾಲ್ಮೀಕಿರಾಮಾಯಣದಲ್ಲಿದೆ. ಮಂಡೋದರಿಯಂತೆ, ಮಾಯಾವಿನ ಮತ್ತು ದುಂದುಭಿ ಎಂಬ ಇನ್ನೆರಡು ಮಕ್ಕಳ ಉಲ್ಲೇಖವೂ ಸಹ ಇದೆ. ಮಂಡೋದರಿಯ ಜೊತೆ ಕುಹೂ ಮತ್ತು ಉಪದಾನವಿ ಎಂಬ ಇನ್ನಿಬ್ಬರು ಕನ್ಯೆಯರ ಹೆಸರುಗಳೂ ಕಂಡುಬರುತ್ತವೆ—ಎಂದು ಮತ್ಸ್ಯಪುರಾಣದಲ್ಲಿದೆ. ಮಯನು ರಂಭೆಯಿಂದ ಆರು ಮಕ್ಕಳನ್ನು ಹೊಂದಿದನು ಎಂದು ಬ್ರಹ್ಮಾಂಡಪುರಾಣದಲ್ಲಿ ತಿಳಿದುಬರುತ್ತದೆ. ಮಾಯಾವೀ ಶಿಲ್ಪಕಾರನಾದ ಮಯನೆಂಬ ಈ ದಾನವನು ಋಕ್ಷಗುಹೆಯಲ್ಲಿ, ಒಂದು ಸುವರ್ಣಭವನವನ್ನು ನಿರ್ಮಿಸಿದನು. ಬ್ರಹ್ಮದೇವನ ವರದಿಂದ ಉಶನಸ ಎಂಬುವನ ಸಂಪತ್ತೆಲ್ಲವೂ ಮಯನಿಗೆ ಲಭಿಸಿತು. ಮಯನು ಹೇಮಾ ಎಂಬುವಳೊಡನೆ ಲಂಪಟನಾದ್ದರಿಂದ ಇಂದ್ರನು ಮಯನನ್ನು ವಧಿಸಿದನೆಂದು ವಾಲ್ಮೀಕಿ ರಾಮಾಯಣದಲ್ಲಿದೆ. ನಮುಚಿಯ ವಧೆಯಿಂದ ಉಂಟಾದ ವೈರತ್ವವು ಕೊನೆಗೊಂಡು ಇಂದ್ರ ಮತ್ತು ಮಯ ಇವರಲ್ಲಿ ಸ್ನೇಹ ಬೆಳೆಯಿತೆಂದೂ, ಪರಸ್ಪರರು ತಮ್ಮ ಮಾಯಾವೀ ವಿದ್ಯೆಗಳನ್ನು ಹಂಚಿಕೊಂಡರೆಂದೂ ಬ್ರಹ್ಮಪುರಾಣದಲ್ಲಿದೆ. ಮಯನು ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ ಮತ್ತು ಜ್ಯೋತಿಷ್ಯಶಾಸ್ತ್ರಗಳನ್ನು ಕುರಿತು ಗ್ರಂಥಗಳನ್ನು ರಚಿಸಿದ್ದಾನೆ.

### ೯೩. ಮಂಥರೆ

ಮಂಥರೆಯು ಕೈಕೇಯಿಯ ತವರಿನಿಂದ ಬಂದ ದಾಸಿಯಾಗಿದ್ದಳು. ಪೂರ್ವಜನ್ಮದಲ್ಲಿ ಇವಳು ದುಂದುಭಿ ಎಂಬ ಗಂಧರ್ವಿಯಾಗಿದ್ದಳು. ಕೃಷ್ಣಾವತಾರದಲ್ಲಿ ಇವಳು ಕುಬ್ಜೆಯಾಗಿದ್ದಳು. ಇವಳಿಗೆ ಗೂನು ಇತ್ತು. ಕೈಕೇಯಿಯು ಶ್ರೀರಾಮನ ಬಗ್ಗೆ ಅತಿಶಯವಾದ ಪ್ರೀತಿಯನ್ನು ಇಟ್ಟುಕೊಂಡಿದ್ದಳು. ಆದರೂ ಮಂಥರೆಯು ಕೈಕೇಯಿಯ ಮನಸ್ಸಿನಲ್ಲಿ ಶ್ರೀರಾಮನ ಬಗ್ಗೆ ಮತ್ಸರವನ್ನು ಜಾಗ್ರತಗೊಳಿಸಿದಳು. ದಶರಥನು ಕೈಕೇಯಿಗೆ ಕೊಡಬೇಕಿದ್ದ ಎರಡು ವರಗಳನ್ನು ಶ್ರೀರಾಮನ ಯೌವರಾಜ್ಯಾಭಿಷೇಕದ ಸಮಯದಲ್ಲಿಯೇ ಬೇಡಿಕೊಳ್ಳಬೇಕೆಂದು ಮಂಥರೆಯು ಒತ್ತಾಯಪಡಿಸಿದಳು. ಭರತನಿಗೆ ಯೌವರಾಜ್ಯಾಭಿಷೇಕ ಮತ್ತು ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸವಾಗಬೇಕೆಂದು ಕೈಕೇಯಿಗೆ ಒಪ್ಪಿಗೆಯಾಗುವಂತೆ ಹೇಳಿದಳು. ಮಂಥರೆಯು ತನ್ನ ದುಷ್ಟಬುದ್ಧಿಯಿಂದ ಕೈಕೇಯಿಯನ್ನು ಬುದ್ಧಿಗೆಡಿಸಿದಳು. ಶತ್ರುಘ್ನ ಹಾಗೂ ಭರತ ಇವರು ಮಾತನಾಡುತ್ತಿದ್ದಾಗ, ಶೃಂಗರಿಸಿಕೊಂಡು ಬಾಗಿಲಿನಲ್ಲಿ ನಿಂತಿದ್ದ ಮಂಥರೆಯನ್ನು ಕಂಡು ಶತ್ರುಘ್ನನಿಗೆ ತಡೆಯಲಾರದ ಕೋಪಬಂದಿತು. ಭರತನು ಇವಳಿಗೆ ಸರಿಯಾದ ಶಿಕ್ಷೆ ಮಾಡಬೇಕೆಂದು ಉದ್ಯುಕ್ತನಾದ ಶತ್ರುಘ್ನನನ್ನು ತಡೆದನು. ಮಂಥರೆಯು ಗೋಳಿಡುತ್ತ ಕೈಕೇಯಿಯ ಬಳಿ ಹೋದಾಗ ಕೈಕೇಯಿಯು ಅವಳನ್ನು ಸಂತೈಸಿದಳು.

### ೯೪. ಮಂಡೋದರಿ

ಇವಳು ಮಯಾಸುರನ ಮಗಳಾಗಿದ್ದಳು. ರಾವಣನ ಭಯದಿಂದ ಮಯನು ತನ್ನ ಕನ್ಯೆಯಾದ ಇವಳನ್ನು ಅವನಿಗೆ ಒಪ್ಪಿಸಿ ಅವನೊಡನೆ ಸ್ನೇಹವನ್ನು ಸಂಪಾದಿಸಿದನೆಂದು ವಾಲ್ಮೀಕಿರಾಮಾಯಣ(ಯುದ್ಧಕಾಂಡ ೭/೭)ದಲ್ಲಿದೆ. ಆಭರಣಗಳನ್ನು ಧರಿಸಿದ, ಗೌರಾಂಗಿಯಾದ, ಓರ್ವ ರೂಪಸಂಪನ್ನೆ, ಅಂತಃಪುರದ ಸ್ವಾಮಿಯೆನಿಸುತ್ತಿದ್ದ ಮಂಡೋದರಿಯು ಸೀತೆಯ ಶೋಧಾರ್ಥವಾಗಿ ಅಲೆಯುತ್ತಿದ್ದ ಹನುಮಾನನಿಗೆ ಲಂಕೆಯ ಅರಮನೆಯಲ್ಲಿ ಕಂಡುಬಂದಳು (ಸುಂದರಕಾಂಡ ೧೦ / ೫೦, ೫೨).

ಸ್ಕಂದಪುರಾಣದಲ್ಲಿ ರಂಭೆ ಇಲ್ಲವೆ ಹೇಮಾ, ಎಂಬ ಅಪ್ಸರೆಯರಿಂದ ಮಯಾಸುರನಿಗೆ ಹುಟ್ಟಿದ ಕನ್ಯೆ, ಮಂಡೋದರಿ ಎಂದಿದೆ. ಬ್ರಹ್ಮಾಂಡಪುರಾಣದಲ್ಲಿಯೂ ಇದೇ ರೀತಿಯ ಉಲ್ಲೇಖವಿದೆ. 'ಸೀತೆಯು ಇವಳ ಕನ್ಯೆಯಾಗಿದ್ದಳು' ಎಂಬ ಅಭಿಪ್ರಾಯವೂ ಕಂಡುಬರುತ್ತದೆ. ಮಂಡೋದರಿಯ ಮಗ ಮೇಘನಾದ.

ಮಂಡೋದರಿ ಪಂಚಪತಿವ್ರತೆಯರಲ್ಲಿ ಒಬ್ಬಳಾಗಿದ್ದಾಳೆ. 'ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರಿ ತಥಾ' ಎಂದಿದೆ.

## ೯೫. ಮರುತ್ತ

ಈ ರಾಜರ್ಷಿಯು ಸಂವರ್ತಋಷಿಯ ಶಿಷ್ಯ. ಐತರೇಯಬ್ರಾಹ್ಮಣದ ಪ್ರಕಾರ ಈತನು ಕಾಮಪ್ರಾನ ವಂಶಜನಾಗಿದ್ದನು. ಬೃಹಸ್ಪತಿಯು ಇವನಿಗೆ ಪುರೋಹಿತನಾಗಿದ್ದನು. ಇಂದ್ರ ಮತ್ತು ಮರುತ್ತರಲ್ಲಿ ಯಾವಾಗಲೂ ಸ್ಪರ್ಧೆ ನಡೆಯುತ್ತಿತ್ತು. ಮರುತ್ತನ ಮುಂದೆ ಇಂದ್ರನ ಆಟವು ನಡೆಯುತ್ತಿರಲಿಲ್ಲ. ಆಗ ಇಂದ್ರನು ಬೃಹಸ್ಪತಿಗೆ ಮರುತ್ತನ ಪೌರೋಹಿತ್ಯವನ್ನು ಬಿಡಲು ಹೇಳಿದನು. ನಾರದನ ಹೇಳಿಕೆಯಂತೆ ಮರುತ್ತನು ಸಂವರ್ತನ ಬಳಿಗೆ ಹೋಗಿ, ಯಜ್ಞದ ಋತ್ವಿಜತ್ವವನ್ನು ಸ್ವೀಕರಿಸಬೇಕೆಂದು ವಿನಂತಿಸಿದನು. ಸಂವರ್ತನು ಯಜ್ಞದಲ್ಲಿ ಅನೇಕ ಅಡೆತಡೆಗಳನ್ನು ತರಲು ಪ್ರಯತ್ನಿಸಿದನು. ಆದರೆ ಸಂವರ್ತನ ಬೆಂಗಾವಲಿನಿಂದಾಗಿ ಇಂದ್ರನ ಕುಚೇಷ್ಟೆಗಳು ವ್ಯರ್ಥವಾದವು. ಮರುತ್ತನು ಇಂದ್ರ, ಬೃಹಸ್ಪತಿ ಮೊದಲಾದ ದೇವತೆಗಳನ್ನು ಸನ್ಮಾನಪೂರ್ವಕವಾಗಿ ಯಜ್ಞಕ್ಕೆ ಆಮಂತ್ರಿಸಿ, ಹವನ ಮಾಡಿದ ಸೋಮವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಅನಂತರ ಇಂದ್ರ ಮತ್ತು ಮರುತ್ತರಲ್ಲಿ ಸ್ನೇಹವು ಬೆಳೆಯಿತು.

ರಾವಣನು ಮರುತ್ತನ ಯಜ್ಞದಲ್ಲಿ ವಿಘ್ನವನ್ನುಂಟುಮಾಡಿದನು. ಆಗ ಮರುತ್ತನು ಅವನೊಡನೆ ಯುದ್ಧಮಾಡಲು ಸಜ್ಜಾದನು. 'ಯಜ್ಞದೀಕ್ಷೆಯನ್ನು ಹೊಂದಿದವನು ಯುದ್ಧಮಾಡುವಂತಿಲ್ಲ !' ಎಂದು ಹೇಳಿ ಸಂವರ್ತನು ಆತನನ್ನು ಪರಾವೃತ್ತಗೊಳಿಸಿದನು. ಆಗ ರಾವಣನು ತನಗೆ ಜಯವಾಯಿತು ಎಂದು ಘೋಷಿಸಿಕೊಂಡು ಹೊರಟುಹೋದನು. ಮರುತ್ತನ ಯಜ್ಞವು ಅಭೂತಪೂರ್ವವಾಯಿತು. ಮರುತ್ತನ ಗಣದವರೆಲ್ಲರೂ ಸಂತೋಷಗೊಂಡರು. ಮರುತ್ತನು ಬ್ರಾಹ್ಮಣಗಂಧರ್ವಾದಿಗಳಿಗೆ ಹೇರಳ ದ್ರವ್ಯವನ್ನು ಕೊಟ್ಟನು. ಗುರುವಿನ ಆಜ್ಞೆಯ ಮೇರೆಗೆ ಯಜ್ಞವನ್ನು ಪೂರ್ಣಗೊಳಿಸಿದನಂತರ ಇವನು ರಾಜ್ಯವನ್ನಾಳಿದನು. ಮರುತ್ತನಿಗೆ ದಮ ಎಂಬ ಹೆಸರಿನ ಒಬ್ಬ ಮಗನಿದ್ದನು.

## ೯೬. ಮಹಾಪಾರ್ಶ್ವ

ಇವನು ವಿಶ್ರವ ಮತ್ತು ಪುಷ್ಪೋತ್ಕಟಾ ಇವರ ಪುತ್ರ. ಇವನಿಗೆ 'ಮತ್ತ'ನೆಂತಲೂ ಹೆಸರಿತ್ತು. ಇವನು ರಾವಣನ ಅಮಾತ್ಯರಲ್ಲಿ ಒಬ್ಬನಾಗಿದ್ದನು. ಹನುಮಾನನು ಲಂಕಾದಹನದ ಕಾಲಕ್ಕೆ ಇವನ ಮನೆಗೆ ಬೆಂಕಿಯಿಟ್ಟನು. ಯುದ್ಧದಲ್ಲಿ ಶ್ರೀರಾಮನು ಇವನನ್ನು ಓಡಿಸಿದನು. ಮಹಾಪಾರ್ಶ್ವನು ವಾನರರ ಸೇನೆಯನ್ನು ಅಪರಿಮಿತವಾಗಿ ಸಂಹರಿಸಿದನು ; ಜಾಂಬವಾನ ಹಾಗೂ ಗವಾಕ್ಷ ಇವರಿಗೆ ಗಾಯಗಳನ್ನು ಉಂಟುಮಾಡಿದನು. ಅಂಗದನಿಂದ ಇವನ ವಧೆಯಾಯಿತು.

## ೯೭. ಮಾತಲಿ

ಇವನು ಇಂದ್ರನ ಸಾರಥಿ ; ಇವನ ಪತ್ನಿ ಸುಧರ್ಮೆ. ಇವಳಿಂದ ಮಾತಲಿಗೆ ಎರಡು ಮಕ್ಕಳಾದವು. ಶ್ರೀರಾಮ-ರಾವಣರ ಯುದ್ಧದಲ್ಲಿ ಇಂದ್ರನ ಸೂಚನೆಯಂತೆ ಇವನು ರಥ, ಧನುಸ್ಸು, ಬಾಣ, ಕವಚಸಹಿತನಾಗಿ ಶ್ರೀರಾಮನ ನೆರವಿಗೆ ಬಂದನು. ಶ್ರೀರಾಮನ ಸಾರಥ್ಯವನ್ನು ಬಹಳ ಕುಶಲತೆಯಿಂದ ಮಾಡಿ ರಾವಣನನ್ನು ವಧಿಸುವದರಲ್ಲಿ ಶ್ರೀರಾಮನಿಗೆ ನೆರವಾದನು. ರಾವಣನನ್ನು ವಧಿಸಲು ಬ್ರಹ್ಮದೇವನು ಕೊಟ್ಟ ಅಸ್ತ್ರಗಳನ್ನು ಉಪಯೋಗಿಸಬೇಕೆಂದು ಶ್ರೀರಾಮನಿಗೆ ಜ್ಞಾಪಿಸಿದನು. ರಾವಣನ ವಧೆಯಾದನಂತರ ಶ್ರೀರಾಮನು ಮಾತಲಿಯನ್ನು ಗೌರವಿಸಿದನು.

ಇಂದ್ರನ ಆಜ್ಞೆಯನುಸಾರ ಅರ್ಜುನನನ್ನು ಸ್ವರ್ಗಕ್ಕೆ ಕರೆತಂದವನು ಮಾತಲಿ.

## ೯೮. ಮಾಂಧಾತ

ಇವನು ಯವನಾಶ್ವ ಎಂಬ ರಾಜನ ಮಗ. ರಾಜ್ಯದಲ್ಲಿ ಬರಗಾಲವುಂಟಾದಾಗ ಈತನು ಉಗ್ರತಪಸ್ಸನ್ನು ಕೈಕೊಂಡು 'ಪದ್ಮಾ' ಎಂಬ ಏಕಾದಶೀ ವ್ರತವನ್ನಾಚರಿಸಿ ಬರಗಾಲದ ನಿವಾರಣೆ ಮಾಡಿದನು. ಇವನು

ಪಾಪಾಚರಣೆಯನ್ನು ಮಾಡಿದ ಶ್ರಮಣ ಎಂಬುವನಿಗೆ ಕಠಿಣಶಿಕ್ಷೆ ವಿಧಿಸಿದನೆಂದು ಶ್ರೀರಾಮನು ವಾಲಿಗೆ ಹೇಳಿದ್ದನು. ಮಾಂಧಾತನಿಗೆ ನೂರು ಜನ ಹೆಂಡತಿಯರಿದ್ದರೂ ಮಕ್ಕಳಾಗಲಿಲ್ಲ. ಅದಕ್ಕಾಗಿ ಇವನು ತುಂಬಾ ಕೊರಗುತ್ತಿದ್ದನು. ಇವನು ಪುತ್ರಪ್ರಾಪ್ತಿಗಾಗಿ ಋಷಿಗಳಿಂದ ಯಜ್ಞವನ್ನು ಮಾಡಿಸಿದನು. ರಾಣಿಯರಿಗೆ ಪುತ್ರಪ್ರಾಪ್ತಿಯಾಗಬೇಕೆಂದು ಋಷಿಗಳು ಸಿದ್ಧಪಡಿಸಿದ ಜಲವನ್ನು (ಪೃಷದಾಜ್ಯ) ಮಾಂಧಾತನು ಬಾಯಾರಿಕೆಯಾಯಿತೆಂದು ಕುಡಿದನು. ಆಗ ಇವನಿಗೆ ಗರ್ಭಧಾರಣೆಯಾಯಿತು. ಗರ್ಭವು ಚೆನ್ನಾಗಿ ಉದರದಲ್ಲಿ ಬೆಳೆದಾಗ, ಋಷಿಗಳು ಈತನ ಕುಕ್ಷಿಯನ್ನು ಭೇದಿಸಿ ಬಾಲಕನನ್ನು ಹೊರತೆಗೆದರು. ಇಂದ್ರನು ತನ್ನ ಹೆಬ್ಬೆರಳನ್ನು ಮಗುವಿನ ಬಾಯಿಗೆ ಚೀಪಲು ಕೊಟ್ಟು ಆ ಬಾಲಕನನ್ನು ಸಂರಕ್ಷಿಸಿದನು. ಮಾಂಧಾತನು ತುಂಬಾ ಬಲಶಾಲಿ ಮತ್ತು ವಿದ್ಯಾಪ್ರವೀಣ. ತಪೋಬಲದಿಂದ ಇವನಿಗೆ ಹಲವಾರು ಶಸ್ತ್ರಾಸ್ತ್ರಗಳು ಲಭಿಸಿದ್ದವು. ಇವನು ಸಕಲ ಭೂಲೋಕವನ್ನೂ ಗೆದ್ದುಕೊಂಡು ರಾಜಸೂಯ, ಅಶ್ವಮೇಧಾದಿ ಯಜ್ಞಗಳನ್ನು ನೆರವೇರಿಸಿದನು. ಅನಂತರ ಇವನಿಗೆ ತನ್ನ ಪರಾಕ್ರಮದ ಗರ್ವವುಂಟಾಯಿತು ; ಇಂದ್ರನ ಅರ್ಧಸಿಂಹಾಸನವು ದೊರೆಯಬೇಕೆಂಬ ಅಭಿಲಾಷೆಯು ಇವನಿಗಾಯಿತು. ಇಂದ್ರನು ಇವನನ್ನು ಯುದ್ಧಕ್ಕೆ ಆಹ್ವಾನಿಸಿ, ಲವಣಾಸುರನೊಡನೆ ಯುದ್ಧಮಾಡಲು ಹೇಳಿದನು. ಈ ಯುದ್ಧದಲ್ಲಿ ಮಾಂಧಾತನು ಮಡಿದನು. ಮಾಂಧಾತನು ಕ್ಷತ್ರಿಯನಾಗಿ ಹುಟ್ಟಿದ್ದರೂ ಬ್ರಾಹ್ಮಣನಾದನು. ಇವನು ರಾವಣನನ್ನು ಸೋಲಿಸಿದ್ದನು. 'ಶಶಬಿಂದು'ವಿನ ಕನ್ಯೆಯಾದ ಬಿಂದುಮತಿಯೊಡನೆ ಈತನ ವಿವಾಹವಾಗಿತ್ತು. ಇವಳಿಂದ ಮುಚುಕುಂದ, ಅಂಬರೀಷ, ಪುರುಕುತ್ಸ ಎಂಬ ಮೂರು ಜನ ಪುತ್ರರು ಹುಟ್ಟಿದರು. ಅಲ್ಲದೆ ಇವನಿಗೆ ಐವತ್ತು ಮಂದಿ ಕನ್ಯೆಯರಿದ್ದರು. ಒಮ್ಮೆ ಒಬ್ಬ ಋಷಿಯು ಮಾಂಧಾತನಿಗೆ ಓರ್ವ ಕನ್ಯೆಯ ಮದುವೆಯ ಪ್ರಸ್ತಾಪವಿಟ್ಟನು. ಈ ಋಷಿಯು ತೀರ ವೃದ್ಧನಾದ್ದರಿಂದ ತನ್ನ ಕನ್ಯೆಯನ್ನು ಕೊಡಲು ಮಾಂಧಾತನ ಮನಸ್ಸಿಗೆ ಸರಿಯೆನಿಸಲಿಲ್ಲ. ಆಗ ಮಾಂಧಾತನು ಅಂತರ್ಗೃಹಕ್ಕೆ ಹೋಗಿ 'ಯಾವ ಕನ್ಯೆಯು ಈ ವೃದ್ಧ ಋಷಿಯೊಡನೆ ಮದುವೆಯಾಗಲು ಇಷ್ಟಪಡುವಳೋ ಅವಳಿಗೆ ಆತನೊಡನೆ ಮದುವೆಮಾಡುವೆನು' ಎಂದು ಹೇಳಿದನು. ವೃದ್ಧನ ರೂಪವನ್ನು ಕಂಡನಂತರ ಯಾವ ಕನ್ಯೆಯೂ ಒಪ್ಪಲಾರಳೆಂಬ ನಂಬಿಕೆ ರಾಜನಿಗಿತ್ತು. ಈ ಕಪಟವನ್ನರಿತ ಆ ವೃದ್ಧ ಋಷಿಯು ಅತಿಸುಂದರ ರೂಪವನ್ನು ತಾಳಿ ಅಂತರ್ಗೃಹದಲ್ಲಿ ಪ್ರವೇಶಿಸಿದನು. ಆಗ ಅಲ್ಲಿದ್ದ ಪ್ರತಿಯೊಬ್ಬ ಕನ್ಯೆಯೂ ತನಗೆ ಈತನೇ ಪತಿಯಾಗಬೇಕೆಂದು ದೃಢವಾಗಿ ಹೇಳಿದಳು. ಹೀಗಾದ್ದರಿಂದ ಮಾಂಧಾತನು ತನ್ನ ಎಲ್ಲ ಕನ್ಯೆಯರನ್ನೂ ಈ ಋಷಿಗೆ ಮದುವೆ ಮಾಡಿಕೊಟ್ಟನೆಂಬ ಕಥೆಯು ಪದ್ಮಪುರಾಣ, ವಿಷ್ಣುಪುರಾಣ ಮತ್ತು ಗರುಡಪುರಾಣಗಳಲ್ಲಿದೆ.

## ೯೯. ಮಾರೀಚ, ಸುಬಾಹು

ಮಾರೀಚ-ಸುಬಾಹು ಇವರು ತಾಟಕಿ ಮತ್ತು ಸುಂದ ಇವರ ಮಕ್ಕಳು. ಇಬ್ಬರೂ ತುಂಬಾ ಬಲಶಾಲಿಗಳೂ, ಸುಶಿಕ್ಷಿತರೂ ಆಗಿದ್ದರೆಂದು ವಿಶ್ವಾಮಿತ್ರನು ಹೇಳಿದ್ದಾನೆ. ಮಾರೀಚನು ಈ ಮೊದಲು ಯಕ್ಷನಾಗಿದ್ದನು. ಅಗಸ್ತ್ಯನ ಶಾಪದಿಂದ ಅವನು ರಾಕ್ಷಸನಾದನು. ಈತನು ಸೀತೆಯನ್ನು ಅಪಹರಿಸಬಾರದೆಂದು ರಾವಣನಿಗೆ ಮತ್ತೆಮತ್ತೆ ಹೇಳಿದನು. ಮಾರೀಚನಿಗೆ ಶ್ರೀರಾಮನ ಸಾಮರ್ಥ್ಯದ ಅನುಭವವು ಇತ್ತಾದರೂ, ರಾವಣನು ಈತನನ್ನು ಕೊಂದುಹಾಕುವ ಬೆದರಿಕೆ ಹಾಕಿದ ಕಾರಣ ಅನಿವಾರ್ಯವಾಗಿ ಇವನು 'ಸುವರ್ಣಮೃಗ'ವಾಗಿ ಸೀತಾಪಹರಣಕಾರ್ಯದಲ್ಲಿ ರಾವಣನಿಗೆ ನೆರವಾದನು. ಮಾರೀಚನಿಗೆ ಹತ್ತು ಸಹಸ್ರ ಆನೆಗಳ ಬಲವಿತ್ತು. ಸುಮಾಲಿ ರಾಕ್ಷಸನ ಬಳಿಯ ನಾಲ್ಕು ಅಮಾತ್ಯರಲ್ಲಿ ಇವನೂ ಒಬ್ಬ.

ಮಾರೀಚ ಹಾಗೂ ಸುಬಾಹು ವಿಶ್ವಾಮಿತ್ರನ ಯಜ್ಞದಲ್ಲಿ ತುಂಬ ವಿಘ್ನಗಳನ್ನುಂಟುಮಾಡುತ್ತಿದ್ದರು. ಶ್ರೀರಾಮನು ಸುಬಾಹುವನ್ನು ವಧಿಸಿದನು. ಮಾರೀಚನು ಬಾಣಗಳ ಹೊಡೆತದಿಂದಾಗಿ ಸಮುದ್ರದಲ್ಲಿ ಬಿದ್ದನು ; ಲಂಕೆಗೆ ಹೋಗಿ ರಾವಣನ ಆಶ್ರಯವನ್ನು ಆಗ ಪಡೆದಿದ್ದನು. ಮಾರೀಚನು ಸುವರ್ಣಮೃಗದ ರೂಪವನ್ನು ಧರಿಸಿದಾಗ ಶ್ರೀರಾಮ ಇವನನ್ನು ಬೆನ್ನಟ್ಟಿ ಕೊಂದನು. ಯಾರಿಂದಲೂ ವಧೆಯಾಗದ ವರ ಬ್ರಹ್ಮದೇವನಿಂದ ಈತನಿಗೆ ದೊರೆತಿತ್ತು.

## ೧೦೦. ಮಾಲಿ

ಸುಕೇಶ ರಾಕ್ಷಸ ಮತ್ತು ದೇವವತಿ ಇವರ ಮೂರನೆಯ ಮಗನೇ ಮಾಲಿ. ಇವನು ಮಾಲ್ಯವಾನ ಮತ್ತು ಸುಮಾಲಿ ಎಂಬ ತನ್ನ ಸಹೋದರರೊಡನೆ ತಪಸ್ಸು ಮಾಡಿ ಬ್ರಹ್ಮದೇವನನ್ನು ಸಂತುಷ್ಟಗೊಳಿಸಿದನು. ಬ್ರಹ್ಮದೇವನ ವರದಿಂದ ಸದಾ ವಿಜಯವನ್ನೂ ಚಿರಂಜೀವಿತ್ವವನ್ನೂ ಪಡೆದುಕೊಂಡನು. ಬಂಧುಗಳ ಸಮೇತ ಇವನು ದೇವತೆಗಳನ್ನು ಪೀಡಿಸತೊಡಗಿದಾಗ ವಿಷ್ಣುವು ಇವನನ್ನು ವಧಿಸಿದನು. ವಸುಧಾ ಎಂಬ ಗಂಧರ್ವಿಯು ಇವನ ಪತ್ನಿ. ಇವಳಿಂದ ಅನಲ, ಅನಿಲ, ಹರ ಮತ್ತು ಸಂಪಾತಿ ಎಂಬ ಗಂಡುಮಕ್ಕಳಾದರು. ವಿಭೀಷಣನು ಇವರಿಗೆ ಮಂತ್ರಿಪದವನ್ನು ಕೊಟ್ಟನು.

## ೧೦೧. ಮಾಲ್ಯವಾನ (ಮಾಲ್ಯವತ್)

ಸುಕೇಶರಾಕ್ಷಸ ಮತ್ತು ದೇವವತಿಯರ ಹಿರಿಯ ಮಗ. ತನ್ನ ತಂದೆಯಾದ ಸುಕೇಶನು ತಪೋಬಲದಿಂದ ಐಶ್ವರ್ಯವನ್ನು ಪಡೆದನೆಂಬುದನ್ನು ಕೇಳಿ ಮಾಲ್ಯವಾನನು ತನ್ನ ಇಬ್ಬರು ತಮ್ಮಂದಿರೊಡನೆ ಕಠಿಣ ತಪಸ್ಸನ್ನು ಆಚರಿಸಿದನು. ಪ್ರಸನ್ನನಾದ ಬ್ರಹ್ಮನಿಂದ ವರಗಳನ್ನು ಪಡೆದುಕೊಂಡನಂತರ ಎಲ್ಲರೊಡನೆ ಲಂಕೆಯಲ್ಲಿ ವಾಸವಿದ್ದು ದೇವತೆಗಳನ್ನು ಪೀಡಿಸಹತ್ತಿದನು. ಆಗ ವಿಷ್ಣುವು ದೇವತೆಗಳಿಗೆ ಅಭಯ ನೀಡಿ, ಮಾಲ್ಯವಾನನನ್ನು ವಧಿಸುವ ಪ್ರತಿಜ್ಞೆಯನ್ನು ಮಾಡಿದನು. ವಿಷ್ಣುವು ಮಾಲಿಯನ್ನು ವಧಿಸಿದನಂತರ ಭಯಗೊಂಡ ಮಾಲ್ಯವಾನನು, ಸುಮಾಲಿಯ ಜೊತೆಗೂಡಿ ಪಾತಾಳಕ್ಕೆ ಹೋಗಿ ತಂಗಿದನು. ಪುನಃ ಮತ್ರ್ಯಲೋಕಕ್ಕೆ ಬಂದಾಗ ವೈಶ್ರವಣನ ಐಶ್ವರ್ಯವನ್ನು ಕಂಡು ಬೆರಗಾದನು. ಇವನು ತನ್ನ ಕನ್ಯೆಯಾದ ಕೈಕಸಿಯನ್ನು ವೈಶ್ರವಣನಿಗೆ ಕೊಟ್ಟು, ಮದುವೆ ಮಾಡಿದನು. ಈಕೆಯಿಂದ ರಾವಣ ಮೊದಲಾದವರು ಹುಟ್ಟಿದರು. ನರ್ಮದಾ ಎಂಬ ಗಂಧರ್ವಿಯ ಹಿರಿಯ ಮಗಳಾದ ಸುಂದರಿಯು ಮಾಲ್ಯವಾನನ ಹೆಂಡತಿ. ಅವಳಿಂದ ಮಾಲ್ಯವಾನನಿಗೆ ಏಳು ಪುತ್ರರೂ, ಓರ್ವ ಕನ್ಯೆಯೂ ಹುಟ್ಟಿದರು. ರಾವಣನು ಸೀತಾಪಹರಣವನ್ನು ಮಾಡಿದ ಸಂಗತಿಯು ಮಾಲ್ಯವಾನನಿಗೆ ಹಿಡಿಸಲಿಲ್ಲ. ಸೀತೆಯನ್ನು ಶ್ರೀರಾಮನಿಗೆ ಮರಳಿ ಒಪ್ಪಿಸಿ, ಅಧರ್ಮದಿಂದ ದೂರಾಗಿರಬೇಕೆಂದು ರಾವಣನಿಗೆ ಉಪದೇಶಿಸಿದನು.

## ೧೦೨. ಮಿತ್ರ

ವರುಣಪದಕ್ಕೆ ಸಂಬಂಧವಿದ್ದ ಒಬ್ಬ ದೇವತೆ. ಹನ್ನೆರಡು ಆದಿತ್ಯರಲ್ಲಿ ಈತನೂ ಒಬ್ಬ. ಇವನಿಗೆ ರೇವತಿ ಎಂಬ ಸ್ತ್ರೀಯಿಂದ ಉತ್ಸರ್ಗ, ಅರಿಷ್ಟ, ಮತ್ತು ಪಿಪ್ಪಲ ಎಂಬ ಮೂವರು ಪುತ್ರರಾದರು. ಇವನು ವರುಣಪದದ ಅಧಿಕಾರದಲ್ಲಿದ್ದಾಗ ಊರ್ವಶಿಯನ್ನು ತನ್ನೊಡನೆ ಮದುವೆಯಾಗಲು ಕೇಳಿದ್ದನು. ಊರ್ವಶಿಯು ಅದಕ್ಕೆ ಸಮ್ಮತಿಸಿದ್ದಳು. ನಂತರ ವರುಣನು ಊರ್ವಶಿಯನ್ನು ಕಂಡಾಗ ಈತನ ಕಾಮಭಾವನೆಯು ಕೆರಳಿ, ತನ್ನನ್ನು ಮದುವೆ ಮಾಡಿಕೊಳ್ಳುವಂತೆ ಕೇಳಿದನು. ಆಗ ಊರ್ವಶಿ 'ನಾನು ಮೊದಲು ಮಿತ್ರನಿಗೆ ಮಾತುಕೊಟ್ಟಿದ್ದೇನೆ : ನನ್ನ ದೇಹವು ಅವನ ಅಧಿಕಾರದ್ದಾಗಿದೆ' ಎಂದು ನುಡಿದು ಅವನಿಗೆ ಕೇವಲ ತನ್ನ ಪ್ರೇಮವನ್ನು ಕೊಟ್ಟಳು. ಆಗ ವರುಣನು ತನ್ನ ಕಾಮೋದ್ರೇಕವನ್ನು ತಡೆಯಲಾರದೆ, ಊರ್ವಶಿಗಾಗಿದ್ದ ತನ್ನ ತೇಜಸ್ಸನ್ನು ಒಂದು ಕುಂಭದಲ್ಲಿ ವಿಸರ್ಜಿಸಿದನು. ಈ ಸಮಾಚಾರವು ಮಿತ್ರನಿಗೆ ತಿಳಿದುಬಂದಾಗ ಅವನು ಕೋಪಗೊಂಡು ಊರ್ವಶಿಗೆ ಶಾಪವನ್ನಿತ್ತು, ತನ್ನ ವೀರ್ಯವನ್ನು ಅದೇ ಕುಂಭದಲ್ಲಿ ವಿಸರ್ಜಿಸಿದನು. ಆ ಕುಂಭದಿಂದ ಅಗಸ್ತ್ಯ ಮತ್ತು ವಸಿಷ್ಠರು ಜನ್ಮತಾಳಿದರು. 'ನಾನು ಕೇವಲ ನಿನ್ನೊಬ್ಬನ ಮಗ ಮಾತ್ರವಲ್ಲ' ಎಂದು ಅಗಸ್ತ್ಯನು ಮಿತ್ರನಿಗೆ ಹೇಳಿ ಅವನನ್ನು ತ್ಯಜಿಸಿದನು.

## ೧೦೩. ಮೇಘನಾದ (ಇಂದ್ರಜಿತು)

ಇವನು ರಾವಣ ಮತ್ತು ಮಂಡೋದರಿಯ ಹಿರಿಯ ಮಗ. ಹುಟ್ಟಿದ ಕ್ಷಣವೇ ಇವನು ಮೇಘದಂತೆ

ಘರ್ಜಿಸಿದವನಾಗಿ ಇವನಿಗೆ ಮೇಘನಾದನೆಂಬ ಹೆಸರು ಬಂದಿತು. ಪ್ರಾಯಕ್ಕೆ ಬಂದನಂತರ ಇವನು ಶುಕ್ರಾಚಾರ್ಯರ ಸಹಾಯದಿಂದ ಅಶ್ವಮೇಧ, ಅಗ್ನಿಷ್ಟೋಮ, ಬಹುಸುವರ್ಣಕ, ರಾಜಸೂಯ, ಗೋಮೇಧ, ವೈಷ್ಣವ ಮತ್ತು ಮಹೇಶ್ವರಿ ಎಂಬ ಏಳು ಯಜ್ಞಗಳನ್ನು ನಿಕುಂಭಿಲೆಯಲ್ಲಿ ನೆರವೇರಿಸಿದನು. ಆಗ ಶಿವನಿಂದ ಮೇಘನಾದನಿಗೆ ದಿವ್ಯವಾದ ರಥ, ತಾಮಸೀಮಾಯಾವಿದ್ಯೆ, ಶಸ್ತ್ರಗಳು, ಧನುಸ್ಸು, ಬಾಣಗಳು, ಇವೆಲ್ಲ ಪ್ರಾಪ್ತವಾದವು. ಬ್ರಹ್ಮದೇವನು ಇವನಿಗೆ ಮರ್ಯಾದಿತ ಸಂದರ್ಭಗಳಲ್ಲಿ ವಧೆಯಾಗಲಾರದೆಂಬ ವರ ಕೊಟ್ಟಿದ್ದನು. ಮೇಘನಾದನು ಬಲು ಶೂರ; ಇಂದ್ರನನ್ನು ಜಯಿಸಿದವನು. ಇಂದ್ರನ ಬಿಡುಗಡೆಗಾಗಿ ಬ್ರಹ್ಮದೇವನು, ಇವನಿಗೆ ಅಮರತ್ವವನ್ನು ಹೊರತುಪಡಿಸಿ ಏನು ಬೇಕಾದರೂ ಬೇಡಿಕೊಳ್ಳಲು ಹೇಳಿದನು. ಬ್ರಹ್ಮದೇವನು ಇವನನ್ನು ಇಂದ್ರಜಿತನೆಂದು ಸನ್ಮಾನಿಸಿದನು. ಈತನ ಪತ್ನಿಯ ಹೆಸರು ಸುಲೋಚನಾ ಎಂದಿತ್ತು. 'ನಿಕುಂಭಿಲೆಯಲ್ಲಿಯ ಮೇಘನಾದನ ಹೋಮಗಳೆಲ್ಲ ಪೂರ್ತಿಗೊಂಡು ಆತನು ಹೊರಗೆ ಯುದ್ಧಕ್ಕೆ ನಿಂತರೆ ಎಲ್ಲರ ವಧೆಯಾಗುವುದು ಖಂಡಿತ'ವೆಂದು ವಿಭೀಷಣನು ಅರಿತಿದ್ದು, ಈ ಬಗ್ಗೆ ಶ್ರೀರಾಮನಿಗೆ ಮುನ್ಸೂಚನೆಯನ್ನು ಕೊಟ್ಟಿದ್ದನು. ಆ ಪ್ರಕಾರ, ಇಂದ್ರಜಿತುವಿನ ಹೋಮವು ಪೂರ್ಣಗೊಳ್ಳುವ ಮೊದಲೇ ಲಕ್ಷ್ಮಣನು ಅದನ್ನು ಧ್ವಂಸಮಾಡಿದನು. ಯುದ್ಧ ನಡೆದಾಗ ಲಕ್ಷ್ಮಣನು ಇಂದ್ರಜಿತುವನ್ನು ವಧಿಸಿದನು. ಆಗ ಇಂದ್ರಜಿತುವಿನ ಪತ್ನಿಯಾದ ಸುಲೋಚನೆಯು ಸತಿಹೋದಳು.

ಇಂದ್ರಜಿತು ಬಹುಪರಾಕ್ರಮಿಯಾಗಿದ್ದು ಯಾರಿಗೂ ಸೋಲುವಂತಿರಲಿಲ್ಲ. ಶ್ರೀರಾಮ-ರಾವಣರ ಯುದ್ಧದಲ್ಲಿ ಇವನು ತೋರಿದ ಶೌರ್ಯಸಾಹಸಗಳು ಅನುಪಮವಾಗಿದ್ದವು. ಅನೇಕ ವಾನರವೀರರನ್ನು ಇವನು ಯಮಸದನಕ್ಕೆ ಅಟ್ಟಿದನು. ಹನುಮಾನನ ಮನಸ್ಸಿನಲ್ಲಿ ಭಯವನ್ನುಂಟುಮಾಡಲು ಈತನು 'ಹೇ ರಾಮ, ಹೇ ರಾಮ !' ಎಂದು ಆಕ್ರೋಶಿಸುತ್ತಿದ್ದ ಮಾಯಾವೀ ಸೀತೆಯನ್ನು ಸೃಷ್ಟಿಸಿ, ಅವಳನ್ನು ಹನುಮಾನನ ಎದುರಿಗೆ ತಂದು ಅವಳ ವಧೆಯನ್ನು ಮಾಡುವುದಾಗಿ ಘೋಷಿಸಿದನು. ಖಡ್ಗವನ್ನು ಹಿರಿದು ಈ ಮಾಯೆಯ ಸೀತೆಯನ್ನು ವಧಿಸಿದನು. ಇದನ್ನು ಕಂಡ ವಾನರರೆಲ್ಲರೂ ದುಃಖಗೊಂಡು ಚೆಲ್ಲಾಪಿಲ್ಲಿಯಾಗಿ ಓಡತೊಡಗಿದರು. ಶತ್ರುವನ್ನು ಸದೆಬಡಿಯಲು ಮೇಘನಾದನು, ತನ್ನ ಪರಾಕ್ರಮದ ಜೊತೆಗೆ, ವರದಿಂದ ತಾನು ಪಡೆದ ಶಸ್ತ್ರಾಸ್ತ್ರಗಳನ್ನೂ ಮಾಯಾವೀ ವಿದ್ಯೆಯನ್ನೂ ಪುಷ್ಕಳವಾಗಿ ಬಳಸಿದನು. ಇಂದ್ರಜಿತುವು ಹನುಮಾನನ ಮೇಲೆ ಬ್ರಹ್ಮಾಸ್ತ್ರವನ್ನು ಉಪಯೋಗಿಸಿದನು. ಆದರೆ ಇತರ ರಾಕ್ಷಸರು ಆಗ ಹನುಮಾನನನ್ನು ಹಗ್ಗ ಮೊದಲಾದ ಇತರ ಬಂಧನಗಳಿಂದ ಹೆಡಮುರಿಗೆ ಕಟ್ಟಿದ್ದರಿಂದ ಬ್ರಹ್ಮಾಸ್ತ್ರ ವಿಫಲಗೊಂಡಿತು. ಇಂದ್ರಜಿತು ತನ್ನ ಶರಗಳಿಂದ ಶ್ರೀರಾಮ-ಲಕ್ಷ್ಮಣರನ್ನು ನಿಶ್ಶೇಷ್ಟಗೊಳಿಸಿ, ನಾಗಪಾಶದಿಂದ ಬಂಧಿಸಿದ್ದನು. ಇಂದ್ರಜಿತು ಅದೃಶ್ಯನಾಗುವ ಮಾಯಾವಿದ್ಯೆಯನ್ನು ಅರಿತಿದ್ದರಿಂದ ಯುದ್ಧದಲ್ಲಿ ಇವನು ಸತತವಾಗಿ ಜಯ ಪಡೆಯುತ್ತಿದ್ದನು.

## ೧೧೪. ಮೈಂದ

ಇವನು ಸುಷೇಣನೆಂಬ ವಾನರನ ಜ್ಯೇಷ್ಠಪುತ್ರ; ದ್ವಿವಿದನೆಂಬ ವಾನರನ ಅಣ್ಣ. ಅರವತ್ತು ಲಕ್ಷ ಯೋಜನಗಳಷ್ಟು ದೂರ ನೆಗೆಯುವ ಬಲ ಈತನಲ್ಲಿತ್ತು. ಇವನು ಶ್ರೀರಾಮನಿಗೆ ನೆರವಾಗಿ, ಯುದ್ಧದಲ್ಲಿ ವಜ್ರಮುಷ್ಟಿ ಹಾಗೂ ಯೂಪಾಕ್ಷರೆಂಬ ರಾಕ್ಷಸರನ್ನು ವಧಿಸಿದನು. ವಾಲಿಯ ವಧೆಯಾದನಂತರ ಸುಗ್ರೀವನು ಸೀತೆಯ ಶೋಧಾರ್ಥಕ್ಕಾಗಿ ಕಳಿಸಿದ ವಾನರರಲ್ಲಿ ಮೈಂದನೂ ಒಬ್ಬನಾಗಿದ್ದನು. ಬ್ರಹ್ಮದೇವನು ಈತನಿಗೆ ಮರ್ಯಾದಿತ ಸಂದರ್ಭದಲ್ಲಿ ವಧೆಯಾಗಲಾರದೆಂಬ ವರವನ್ನು ಕೊಟ್ಟಿದ್ದನು. ಕಲಿಯುಗದವರೆಗೆ ಜೀವಿಸಿರಬೇಕೆಂದು ಶ್ರೀರಾಮನು ಮೈಂದನಿಗೆ ಹೇಳಿದ್ದನು.

## ೧೧೫. ಯದು

ಇವನು ಯಯಾತಿ ಹಾಗೂ ದೇವಯಾನಿಯರ ಮಗ. ಯಯಾತಿ ಮತ್ತು ಆತನ ಎರಡನೇ ಹೆಂಡತಿಯಾದ ಶರ್ಮಿಷ್ಠೆಯ ಜ್ಯೇಷ್ಠಪುತ್ರನಾದ ಪುರು ಯಯಾತಿಗೆ ತುಂಬಾ ಮೆಚ್ಚಿಗೆಯಾಗಿದ್ದವನು. ಇದು ಯದುವಿನ ಕೊರಗಿಗೆ ಕಾರಣವಾಯಿತು. ಯದುವಿಗೆ ಪುರುವಿನ ಬಗ್ಗೆ ಮತ್ಸರವಿದ್ದು ತಂದೆಯಾದ ಯಯಾತಿಯ ಬಗೆ

ಒಂದು ರೀತಿಯ ತಿರಸ್ಕಾರವಿತ್ತು. ದೈತ್ಯರ ಗುರುವಾದ ಶುಕ್ರಾಚಾರ್ಯನ ಶಾಪದಿಂದ ಪ್ರಾಪ್ತವಾದ ಮುಪ್ಪನ್ನು ಕೆಲವು ಕಾಲದವರೆಗೆ ಮಗನು ಸ್ವೀಕರಿಸಿ, ತನ್ನ ತಾರುಣ್ಯವನ್ನು ತಂದೆಗೆ ಕೊಡಬೇಕೆಂಬ ಅಪೇಕ್ಷೆಯು ಯಯಾತಿಯದಾಗಿತ್ತು. ಯಯಾತಿಯು ಈ ಮುಪ್ಪನ್ನು ಸ್ವೀಕರಿಸಲು ಯದುವಿಗೆ ಹೇಳಿದಾಗ ಅವನು ಅದನ್ನು ನಿರಾಕರಿಸಿದನು. ಇದಕ್ಕೆ ಯದುವು ಕೊಟ್ಟ ಕಾರಣಗಳು ಅನೇಕವಾಗಿವೆ. ಯಯಾತಿಯು ಯದುವನ್ನು ಪ್ರೀತಿಮಮತೆಗಳಿಂದ ಕಾಣುತ್ತಿರಲಿಲ್ಲವೆಂಬುದೂ ಒಂದು ಕಾರಣವಾಗಿತ್ತು. ಅದಲ್ಲದೆ, ಯದುವು ಒಬ್ಬ ಬ್ರಾಹ್ಮಣನಿಗೆ ಏನಾದರೊಂದನ್ನು ಕೊಡುವ ವಚನವನ್ನು ಕೊಟ್ಟಿದ್ದನು. ಮುಪ್ಪನ್ನು ಒಪ್ಪಿಕೊಂಡಿದ್ದರೆ ಅದರಲ್ಲಿ ಯದುವಿಗೆ ಅಡಚಣೆ ಬರುವ ಸಂಭವವಿತ್ತು. ಇದಕ್ಕಿಂತ ಮಹತ್ವದ ಕಾರಣವೆಂದರೆ, ತನ್ನ ತಾರುಣ್ಯವನ್ನು ಸ್ವೀಕರಿಸಿದ ತಂದೆಯು ತನ್ನ ತಾಯಿಯೊಡನೆ ರತಿಕ್ರೀಡೆಯಲ್ಲಿ ತೊಡಗುವುದರಿಂದ ಮಾತೃಗಮನದ ಪಾಪವು ತನಗೆ ತಗಲುವದೆಂಬ ಭಯ ಯದುವಿಗೆ ಇತ್ತು. ಕಾರಣಗಳು ಏನೇ ಇದ್ದರೂ, ಯಯಾತಿಯು ಯದುವಿನ ಮೇಲೆ ಕೋಪಗೊಂಡು ಅವನಿಗೆ 'ನೀನು ಒಬ್ಬ ಭಯಂಕರ ರಾಕ್ಷಸನಾಗು ! ನೀನು ಯಾತುಧಾನವನ್ನು ಉಂಟುಮಾಡು ! ಸೋಮಕುಲದಲ್ಲಿ ನಿನ್ನ ದುಷ್ಟಸಂತತಿಯು ಬಾಳಲಾರದು ! ನಿನ್ನಂತೆಯೇ ನಿನ್ನ ವಂಶಜರೂ ಉದ್ದಟರಾಗುವರು !' ಎಂಬ ಶಾಪವನ್ನು ಕೊಟ್ಟನು. ಜ್ಯೇಷ್ಠಪುತ್ರನಾದ ಯದುವೇ ಯಯಾತಿಯ ತರುವಾಯ ರಾಜ್ಯದ ಹಕ್ಕುದಾರನಾಗಿದ್ದರೂ ಯಯಾತಿಯು ಅವನಿಗೆ ರಾಜ್ಯವನ್ನು ಕೊಡಲು ಒಪ್ಪಲಿಲ್ಲ. ಯದುವು ರಾಜ್ಯದ ಹಾಗೂ ಸಾರ್ವಭೌಮ ಪದದ ಲೋಭವನ್ನು ತೊರೆದು ಯಯಾತಿಯಿಂದ ದೊರೆತ ಚಿಕ್ಕ ರಾಜ್ಯವೊಂದನ್ನು ಸ್ವೀಕರಿಸಿದನು. ಯದುವಿನಿಂದ ಯದುವಂಶವು ನಿರ್ಮಾಣಗೊಂಡಿತು. ಕೊನೆಗೆ ಯಾದವರು ಅಂತಃಕಲಹದ ಒನಕೆ (ಮೌಸಲ) ಯುದ್ಧದಲ್ಲಿ ಪರಸ್ಪರರನ್ನು ಸಂಹರಿಸಿದ್ದರಿಂದ ಯದುವಂಶದ ಸಂಹಾರವಾಯಿತು.

## ೧೧೬. ಯಮ

ಋಗ್ವೇದದಲ್ಲಿ ಈತನ ತಂದೆಯು ವಿವಸ್ವತನೆಂದೂ, ತಾಯಿಯು 'ಸರಣ್ಯು' ಎಂದೂ ಇದೆ. ಹರಿವಂಶ, ಮಾರ್ಕಂಡೇಯ, ಪದ್ಮ, ವಿಷ್ಣು, ಮತ್ಸ್ಯ, ವರಾಹ ಮುಂತಾದ ಪುರಾಣಗಳಲ್ಲಿ ಈತನ ತಾಯಿಯ ಹೆಸರು 'ಸಂಜ್ಞಾ' ಎಂದಿದೆ. ಸಂಜ್ಞಾಳಿಗೆ ಸೂರ್ಯನ ಪ್ರಖರತೆಯನ್ನು ಸಹಿಸಲು ಆಗುತ್ತಿರಲಿಲ್ಲ. ಆ ಕಾರಣ ಅವಳು ಸೂರ್ಯನ ಎದುರಿನಲ್ಲಿ ನಿಂತಾಗ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಿದ್ದಳು. ಆದ್ದರಿಂದ ಸೂರ್ಯನು 'ನಿನಗೆ ಪ್ರಜೆಗಳನ್ನು ಸಂಹರಿಸುವ ಯಮನು ಹುಟ್ಟುವನು !' ಎಂಬ ಶಾಪವನ್ನು ಕೊಟ್ಟನು.-ಯಮ ಮತ್ತು ಯಮಿ ಎಂಬ ಇವರಿಬ್ಬರೂ ಅವಳಮಕ್ಕಳಾಗಿ ಹುಟ್ಟಿದರು. ಇವರಿಬ್ಬರ ಸಂಭೋಗ, ಪ್ರಾರ್ಥನೆ, ಸಂವಾದ ಇವುಗಳ ಉಲ್ಲೇಖವು ಋಗ್ವೇದದಲ್ಲಿದೆ. ಯಮನು ಮಲತಾಯಿಯಾದ ಛಾಯಾಳನ್ನು ಒದ್ದ ಕಾರಣದಿಂದ ಛಾಯೆಯು 'ನಿನ್ನ ಬಲಗಾಲು ಕಳಚಿ ಬಿದ್ದುಹೋಗಲಿ !' ಎಂಬ ಶಾಪವನ್ನು ಯಮನಿಗೆ ಕೊಟ್ಟಳು. ಆಗ ಯಮನ ತಂದೆಯು ಇವನಿಗೆ ಉಃಶಾಪವನ್ನು ಕೊಟ್ಟನು. ಯಮನು ತಪಸ್ಸುಮಾಡಿದಾಗ ಬ್ರಹ್ಮನು ಪಿತೃಜರ ಸ್ವಾಮಿತ್ವವನ್ನು ಇವನಿಗೆ ವಹಿಸಿ, ಜಗತ್ತಿನಲ್ಲಿ ನಡೆಯುವ ಪಾಪಪುಣ್ಯಗಳ ಮೇಲ್ವಿಚಾರಕನೆಂದು ನೇಮಿಸಿದನು. ನಿರಪರಾಧಿಯಾದ ಮಾಂಡವ್ಯ ಋಷಿಯನ್ನು ಗಲ್ಲಿಗೇರಿಸಲಾಯಿತು. ಆಗ ಸಾಯುವ ಮುಂಚೆ ಆ ಋಷಿಯು 'ನೀನು ಶೂದ್ರನಾಗಿ ಜನ್ಮತಾಳುವೆ !' ಎಂದು ಯಮನಿಗೆ ಶಪಿಸಿದನು. ಕುಂತಿ ಇವನನ್ನು ಉದ್ದೇಶಿಸಿ ಮಂತ್ರೋಚ್ಚಾರಣೆ ಮಾಡಿದ್ದರಿಂದ ಅವಳಿಗೆ ಯುಧಿಷ್ಠಿರನು ಹುಟ್ಟಿದನು. ಧರ್ಮ ಮತ್ತು ಯಮ ಇವರಲ್ಲಿ (ಯಕ್ಷಪ್ರಶ್ನೆಯ ಸಮಯದಲ್ಲಿ) ಸಂವಾದವು ನಡೆದಾಗ ಧರ್ಮರಾಜ-ಯುಧಿಷ್ಠಿರನು ಸಮರ್ಪಕವಾಗಿ ಉತ್ತರಿಸಿದ್ದರಿಂದ ಯಮನು ಸರೋವರದ ಬಳಿ ಮೃತರಾಗಿ ಬಿದ್ದ ಉಳಿದ ಪಾಂಡವರನ್ನು ಜೀವಿತಗೊಳಿಸಿದನು. ಯಮನು ಧರ್ಮಶಾಸ್ತ್ರಕಾರನಾಗಿದ್ದನು.

ಇವನು ದಕ್ಷಿಣ ದಿಕ್ಕಿನ ಅಧಿಪತಿ. ಕುಂಭಕರ್ಣನು ಇವನನ್ನು ಪರಾಭವಗೊಳಿಸಿದ್ದನು. ರಾವಣನ ಅಂಜಿಕೆಯಿಂದ ಈತನು ಕಾಗೆಯಾಗಿ ಅವಿತುಕೊಂಡಿದ್ದನು. ರಾವಣನು ಹೊರಟುಹೋದನಂತರ ಇವನು ಕಾಗೆಗಳಿಗೆ 'ನಿಮಗೆ ರೋಗಗಳು ಬರಲಾರವು ; ಮತ್ತು ನಿಮ್ಮ ವಂಶದವರಿಗೆ ಸ್ವಾಭಾವಿಕ ಮರಣವು

ಬರಲಾರದು ! ಯಾರಾದರೂ ನಿಮ್ಮನ್ನು ಕೊಂದರೆ ಮಾತ್ರ ನಿಮಗೆ ಮರಣ ! ಇಲ್ಲವಾದರೆ ನೀವು ಜೀವಿತವಾಗಿಯೇ ಉಳಿಯುವಿರಿ !' ಎಂಬ ವರವನ್ನು ಕೊಟ್ಟನು. ಯಮ ಮತ್ತು ರಾವಣರಲ್ಲಿ ಏಳು ರಾತ್ರಿಗಳವರೆಗೆ ಯುದ್ಧ ನಡೆದಿತ್ತು. ಕೊನೆಗೆ ಯಮನು ಕಾಲದಂಡವನ್ನು ಎತ್ತಿಕೊಂಡನು. ಆಗ ಬ್ರಹ್ಮದೇವನು ಅದನ್ನು ಪ್ರಯೋಗಿಸಬಾರದೆಂದು ಯಮನಿಗೆ ಹೇಳಿ ತಡೆದನು. ಏಕೆಂದರೆ ಇದರಿಂದ ಬ್ರಹ್ಮದೇವನು ರಾವಣನಿಗೆ ಕೊಟ್ಟ ವರವನ್ನು ವಿರೋಧಿಸಿದಂತಾಗುತ್ತಿತ್ತು. ಯಮನು ಹನುಮಾನನಿಗೆ 'ನನ್ನ ಕಾಲದಂಡದಿಂದ ನೀನು ಸಾಯಲಾರೆ ! ನೀನು ರೋಗಮುಕ್ತನಾಗಿರುವಿ !' ಎಂಬ ವರವನ್ನು ಕೊಟ್ಟಿದ್ದನು.

## ೧೧೭. ಯಯಾತಿ

ಈತನು ಇಕ್ಷ್ವಾಕುಕುಲದ ನಹುಷರಾಜನ ಮಗ. ದೈತ್ಯರ ಗುರುವಾದ ಶುಕ್ರಾಚಾರ್ಯನ ಮಗಳಾದ ದೇವಯಾನಿ ಈತನ ಭಾರ್ಯೆಯಾಗಿದ್ದಳು. ದೈತ್ಯರಾಜನಾದ ವೃಷಪರ್ವನ ಕನ್ಯೆಯಾದ ಶರ್ಮಿಷ್ಠೆಯೂ ಈತನ ಹೆಂಡತಿಯಾಗಿದ್ದಳು. ಶರ್ಮಿಷ್ಠೆಯು ದೇವಯಾನಿಯ ದಾಸಿಯಾಗಿ ಮದುವೆಯನಂತರ ಯಯಾತಿಯ ಬಳಿಗೆ ಬಂದಿದ್ದಳು. ಆಗ ಶುಕ್ರಾಚಾರ್ಯನು ಯಯಾತಿಗೆ 'ನೀನು ಶರ್ಮಿಷ್ಠೆಯ ಶಯನಸೇವೆಯನ್ನು ಪಡೆಯ ಕೂಡದು !' ಎಂದು ಹೇಳಿದ್ದರೂ ಯಯಾತಿಯಿಂದ ಶರ್ಮಿಷ್ಠೆಗೆ ಮೂರು ಮಕ್ಕಳಾದರು. ದೇವಯಾನಿಗೆ ಇಬ್ಬರೇ ಮಕ್ಕಳಾದರು. ಈ ಕಾರಣ ದೇವಯಾನಿಗೆ ತಡೆಯಲಾಗದ ಕೋಪವುಂಟಾಯಿತು. ಅವಳು ತಂದೆಯಾದ ಶುಕ್ರಾಚಾರ್ಯನಿಗೆ ದೂರುಕೊಟ್ಟಳು. ಆಗ ಶುಕ್ರಾಚಾರ್ಯನು ಯಯಾತಿಗೆ 'ನೀನು ಜರಾಜರ್ಜರನಾಗಿ ದುರ್ಬಲನಾಗುವೆ !' ಎಂಬ ಶಾಪವನ್ನು ಉಸುರಿದನು. 'ನಿನ್ನ ವಾರ್ಧಕ್ಯವನ್ನು ಯಾರಾದರೂ ಸ್ವೀಕರಿಸಿದರೆ ಅವರ ತಾರುಣ್ಯವು ನಿನಗೆ ಪ್ರಾಪ್ತವಾಗುವುದು' ಎಂಬ ಸಂಗತಿಯನ್ನು ತಿಳಿಸಿದನು. ಯಯಾತಿ ತನ್ನ ಮುಪ್ಪನ್ನು ಸ್ವೀಕರಿಸಲು ತನ್ನ ಪುತ್ರರನ್ನು ವಿನಂತಿಸಿದನು. ಪುರೂರವನು ಒಪ್ಪಿ ಅದನ್ನು ಸ್ವೀಕರಿಸಿದನು. ಇನ್ನುಳಿದ ಮಕ್ಕಳು ನಿರಾಕರಿಸಿದರು. ಅಂಥ ಮಕ್ಕಳಿಗೆ ಯಯಾತಿ ಹಲವು ಬೇರೆ ಬೇರೆ ಶಾಪಗಳನ್ನು ಕೊಟ್ಟನು. ಯಯಾತಿ ಅತ್ಯಂತ ಕಾಮುಕನಿದ್ದನು. ಸಾವಿರಾರು ವರ್ಷಗಳನ್ನು ಭೋಗವಿಲಾಸಗಳಲ್ಲಿ ಕಳೆದಿದ್ದರೂ ಅವನಿಗೆ ತೃಪ್ತಿಯಾಗಿರಲಿಲ್ಲ. ಆತನು ಧರ್ಮಿಷ್ಠನಾಗಿದ್ದನು. ಇವನು ಪುರುವಿಗೆ ಕೊಟ್ಟ ವಾರ್ಧಕ್ಯವನ್ನು ಪುನಃ ಪಡೆದು ಪುರುವಿನ ಯೌವನವನ್ನು ಅವನಿಗೆ ಮರಳಿ ಕೊಟ್ಟನು. ಸ್ವರ್ಗದಲ್ಲಿಯೂ ಇವನ ಅಹಂಕಾರವು ಈತನನ್ನು ಅಡಚಣೆಗೊಳಮಾಡಿತು. ಇಂದ್ರನು ಇವನನ್ನು ಸ್ವರ್ಗದಿಂದ ಪುನಃ ಭೂಮಿಗೆ ತಳ್ಳಿದನು. ಇವನು ಅನೇಕ ಯಜ್ಞಯಾಗಗಳನ್ನು ಸಾಂಗಗೊಳಿಸಿದನು. ರಾಜನೀತಿಯನ್ನು ಅನುಸರಿಸಿ ಪ್ರಜೆಗಳ ರಕ್ಷಣೆ-ಪೋಷಣೆಗಳನ್ನು ಮಾಡಿದನು. ಬ್ರಾಹ್ಮಣರಿಗೆ ಸಹಸ್ರಾರು ಗೋವುಗಳನ್ನು ದಾನವಾಗಿ ಕೊಟ್ಟನು ; ಖ್ಯಾತ ದಾನಿ ಎನಿಸಿದನು. ದೇವಯಾನಿಯಿಂದ ಇವನಿಗೆ ಯದು-ತುರ್ವಸು ಎಂಬ ಮಕ್ಕಳಾದರು. ಶರ್ಮಿಷ್ಠೆಯಿಂದ ದ್ರುಹ್ಯು, ಅನು ಮತ್ತು ಪುರು ಎಂಬ ಮಕ್ಕಳಾದರು. ಯಯಾತಿಗೆ ಮಾಧವಿ ಮತ್ತು ಸುಕನ್ಯೆ ಎಂಬ ಇಬ್ಬರು ಕನ್ಯೆಯರಿದ್ದರೆಂಬ ಉಲ್ಲೇಖ ಕೆಲವು ಗ್ರಂಥಗಳಲ್ಲಿದೆ. ಸುಕನ್ಯೆ ಯಯಾತಿಯ ಮಗಳಿರದೇ ಶರ್ಯಾತಿಯ ಮಗಳಿರಬೇಕೆಂಬ ಊಹೆ ಇದೆ.

ಯಯಾತಿಯ ವೃತ್ತಾಂತ ಬೇರೆ ಬೇರೆ ಹೊತ್ತಿಗೆಗಳಲ್ಲಿ ಬೇರೆಬೇರೆಯಾಗಿದೆ.

## ೧೧೮. ರಂಭೆ

ಇವಳು ಅತ್ಯಂತ ಸುಂದರಿಯಾದ ಓರ್ವ ಅಪ್ಸರೆ. ಇವಳು ಕಶ್ಯಪ ಹಾಗೂ ಪ್ರಾಧಾ ಇವರ ಮಗಳು. ಇವಳು ಕುಬೇರನ ಪುತ್ರನಾದ ನಲಕೂಬರನೊಡನೆ ಪತ್ನಿಯಂತೆ ಇರುತ್ತಿದ್ದಳು. ಒಮ್ಮೆ ಇವಳು ವಸ್ತ್ರಾಲಂಕಾರ ಭೂಷಿತಳಾಗಿ ಹೊರಟಾಗ ರಾವಣನ ಕಣ್ಣಿಗೆ ಬಿದ್ದಳು. ಆಗ ರಾವಣನು ಇವಳಲ್ಲಿ ಕಾಮಮೋಹಿತನಾಗಿ ರತಿಸುಖವನ್ನು ಅಪೇಕ್ಷಿಸಿದನು. ಆಗ ರಂಭೆ 'ನಾನು ನಲಕೂಬರನನ್ನು ಪ್ರೀತಿಸುತ್ತೇನೆ, ನಾನು ಅವನ ಸಮಾಗಮವನ್ನು ಬಯಸಿ ಹೊರಟಿರುವೆನು ; ನಾನು ನಿನ್ನ ಸೊಸೆಯಾಗಿದ್ದೇನೆ' ಎಂದು ರಾವಣನಿಗೆ ತಿಳಿಸಿದಳು. ರಾವಣನು ಅವಳ ಹೇಳಿಕೆಯನ್ನು ಕಿವಿಗೆ ಹಾಕಿಕೊಳ್ಳದೇ ಅವಳನ್ನು ಬಲಾತ್ಕರಿಸಿ ಉಪಭೋಗಿಸಿದನು.

ಶ್ವೇತಮುನಿ ಹಾಗೂ ಓರ್ವ ರಾಕ್ಷಸಿ, ಇವರಲ್ಲಿ ಯುದ್ಧವು ನಡೆದಾಗ, ವಿಶ್ವಾಮಿತ್ರನ ಶಾಪದಿಂದ ಶಿಲೆಯಾದ ರಂಭೆ ಹಾಗೂ ಈ ರಾಕ್ಷಸಿ ಇಬ್ಬರೂ ವಾಯು-ಅಸ್ತ್ರದ ಪ್ರಭಾವದಿಂದ ಕಪಿತೀರ್ಥದಲ್ಲಿ ಬಿದ್ದರು. ಆಗ ಇವರಿಬ್ಬರ ಉದ್ಧಾರವಾಯಿತು. ಮಹಾಭಾರತ ಉದ್ಯೋಗಪರ್ವದ ಉಲ್ಲೇಖದಂತೆ ರಂಭೆಯು ತುಂಬರುವಿನ ಸ್ತ್ರೀಯಾಗಿದ್ದಳು. ಇವಳೊಡನೆ ಸಂಬಂಧವನ್ನಿಟ್ಟುಕೊಂಡ ಕಾರಣ ಈತನಿಗೆ ಶಾಪ ತಗುಲಿ ವಿರಾಧ ರಾಕ್ಷಸನಾದನೆಂಬ ಕಥೆಯಿದೆ. ಹೀಗಾಗಿರುವುದರಿಂದ ತುಂಬರು ರಂಭೆಯ ಪತಿಯಾಗಿರಲಿಲ್ಲವೆಂದು ತಿಳಿದುಬರುತ್ತದೆ.

## ೧೯೯. ಶ್ರೀರಾಮ

ಅಯೋಧ್ಯೆಯ ರಾಜನಾದ ದಶರಥನು ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿದಾಗ ಯಜ್ಞಪುರುಷನು ಪಾಯಸವನ್ನು ಕರುಣಿಸಿದನು. ಈ ಪಾಯಸವನ್ನು ಸೇವಿಸಿದನಂತರ ದಶರಥನ ಮೂವರು ರಾಣಿಯರಿಗೆ ನಾಲ್ಕು ಪುತ್ರರಾದರು. ಅವರಲ್ಲಿ ಕೌಸಲ್ಯೆಗೆ ಹುಟ್ಟಿದ ಶ್ರೀರಾಮನು ಹಿರಿಯವನಾಗಿದ್ದನು. ಶ್ರೀರಾಮನಿಗೆ ವಿಷ್ಣುವಿನ ಅವತಾರವೆಂದೆನ್ನುತ್ತಾರೆ. ಬ್ರಹ್ಮದೇವನು ರಾವಣನಿಗೆ ಒಂದು ಮರ್ಯಾದಿತ ಸಂದರ್ಭದಲ್ಲಿ ವಧೆಯಾಗಲಾರದೆಂಬ ವರವನ್ನು ಕೊಟ್ಟಿದ್ದನು. ಅದರಲ್ಲಿ ಮಾನವರ ಉಲ್ಲೇಖವಿರಲಿಲ್ಲ ; ಆದ್ದರಿಂದ ದೇವತೆಗಳ ವಿನಂತಿಯನುಸಾರ ವಿಷ್ಣುವು ರಾಮಾವತಾರವನ್ನು ತಾಳಿದನು. ಶ್ರೀರಾಮನು ರಾಜಪುರೋಹಿತನಾದ ವಸಿಷ್ಠನಿಂದ ಶಸ್ತ್ರ-ಶಾಸ್ತ್ರಗಳನ್ನು ಕಲಿತುಕೊಂಡನು. ವಿಶ್ವಾಮಿತ್ರನು ತನ್ನ ಯಜ್ಞವನ್ನು ರಕ್ಷಿಸಲು ಶ್ರೀರಾಮನನ್ನು ಕಳುಹಿಸಬೇಕೆಂದು ದಶರಥನನ್ನು ಬೇಡಿಕೊಂಡನು. ಶ್ರೀರಾಮನು ವಿಶ್ವಾಮಿತ್ರನಿಂದ ಅನೇಕ ವಿದ್ಯೆಗಳನ್ನು, ಅಸ್ತ್ರಗಳನ್ನು, ಕಥೆಗಳನ್ನು ಅರಿತುಕೊಂಡನು. ತಾಟಕಾ ಮತ್ತು ಸುಬಾಹು ಇವರನ್ನು ವಧಿಸಿದನು ; ಮಾರೀಚನನ್ನು ದೂರಕ್ಕೆ ಹಾರಿಸಿದನು. ಶ್ರೀರಾಮನು ಮಿಥಿಲೆಯ ಜನಕರಾಜನಲ್ಲಿದ್ದ ಶಿವಧನುರ್ಭಂಗವನ್ನು ಮಾಡಿ, ಜನಕಕನ್ಯೆಯಾದ ಜಾನಕಿಯನ್ನು ಮದುವೆಯಾದನು. ಶ್ರೀರಾಮನ ಯೌವರಾಜ್ಯಾಭಿಷೇಕವು ನಿಶ್ಚಿತವಾದಾಗ, ಕೈಕೇಯಿ ದಶರಥನಿಂದ ಮೊದಲಿನ ಎರಡು ವರಗಳನ್ನು ಬೇಡಿಕೊಂಡಳು. ಆ ಪ್ರಕಾರ ಶ್ರೀರಾಮನಿಗೆ ಹದಿನಾಲ್ಕು ವರ್ಷ ವನವಾಸವಾಯಿತು. ಶ್ರೀರಾಮನೊಡನೆ ಲಕ್ಷ್ಮಣ ಮತ್ತು ಸೀತೆ ಇವರೂ ವನವಾಸಕ್ಕೆ ಹೋದರು. ಕೂಡಲೇ ಪುತ್ರವಿಯೋಗದಿಂದ ದಶರಥ ಮರಣಹೊಂದಿದನು. ಶ್ರೀರಾಮನನ್ನು ವನವಾಸಕ್ಕೆ ಕಳುಹಿದಾಗ ಭರತನು ಅಯೋಧ್ಯೆಯಲ್ಲಿರಲಿಲ್ಲ. ಆತನು ಅಯೋಧ್ಯೆಗೆ ಬಂದಾಗ ನಡೆದ ಸಮಾಚಾರವನ್ನರಿತು ದುಃಖಿತನಾದನು. ತನ್ನ ತಾಯಿಯ ಹಟದಿಂದ ಇಷ್ಟೆಲ್ಲ ನಡೆಯಿತೆಂದು ಅವಳನ್ನು ಬಿರುನುಡಿಗಳಿಂದ ಜರಿದನು. ಶ್ರೀರಾಮನನ್ನು ಮರಳಿ ಅಯೋಧ್ಯೆಗೆ ಕರೆದು ತರುವ ಭರತನ ಪ್ರಯತ್ನ ವಿಫಲಗೊಂಡಿತು. ಶ್ರೀರಾಮನ ಪಾದುಕೆಗಳನ್ನು ಅಯೋಧ್ಯೆಗೆ ತಂದು ತಾನು ಸನ್ಯಾಸವೃತ್ತಿಯನ್ನು ತಳೆದು ಶ್ರೀರಾಮನ ಹೆಸರಿನಲ್ಲಿ ರಾಜ್ಯಭಾರವನ್ನು ನಡೆಯಿಸಿದನು.

ಶ್ರೀರಾಮನು ವನವಾಸದಲ್ಲಿದ್ದಾಗ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ರಾವಣನು ಕಾಂಚನಮೃಗದ ಆಸೆಯನ್ನು ತೋರಿಸಿ ಸೀತೆಯನ್ನು ಅಪಹರಿಸಿ ಲಂಕೆಗೆ ಒಯ್ದನು. ತನ್ನ ಪತ್ನಿಯಾಗು ಎಂದು ಸೀತೆಯನ್ನು ಅನುನಯಿಸಿದನು ; ಪೀಡಿಸಿದನು ; ಆದರೆ ಸೀತೆ ರಾವಣನಿಗೆ ವಶಳಾಗಲಿಲ್ಲ. ಶ್ರೀರಾಮನು ಸೀತೆಯನ್ನು ಹುಡುಕಲು ಲಕ್ಷ್ಮಣನೊಡನೆ ತುಂಬಾ ಕಷ್ಟಪಟ್ಟನು. ಸುಗ್ರೀವನೊಡನೆ ಸ್ನೇಹಬೆಳೆಸಿ ವಾಲಿಯನ್ನು ವಧಿಸಿದನು. ಶ್ರೀರಾಮನಿಗೆ ನಿಷ್ಠಾವಂತನಾದ ಹನುಮಾನನಂತಹ ಸುಹೃದ್ ಬಂಟನು ದೊರೆತನು. ಶ್ರೀರಾಮನು ವಿಭೀಷಣನನ್ನು ಆತ್ಮೀಯನನ್ನಾಗಿ ಮಾಡಿಕೊಂಡು ವಾನರರ ಬೆಂಬಲದಿಂದ ಲಂಕೆಯ ಮೇಲೆ ಏರಿಹೋದನು. ರಾವಣನನ್ನು ವಧಿಸಿ ಸೀತೆಯನ್ನು ಮುಕ್ತಗೊಳಿಸಿದನು. ಅಗ್ನಿದಿವ್ಯದ ಮೂಲಕ ಸೀತೆಯ ಶುದ್ಧತೆಯನ್ನು ಪ್ರಕಟಿಸಿ ಆಕೆಯನ್ನು ಸ್ವೀಕರಿಸಿದನು. ಲಂಕಾರಾಜ್ಯವನ್ನು ವಿಭೀಷಣನಿಗೆ ಕೊಟ್ಟು ಅಯೋಧ್ಯೆಗೆ ಮರಳಿದನು. ಭರತನು ರಕ್ಷಿಸಿಟ್ಟ ರಾಜ್ಯವನ್ನು ಸ್ವೀಕರಿಸಿದನು. ಲೋಕಾಪವಾದವನ್ನು ಕಳೆಯಲು, ಸೀತೆಯು ಆಗ ಗರ್ಭಿಣಿಯಿದ್ದರೂ, ಶ್ರೀರಾಮನು ಅವಳನ್ನು ತ್ಯಜಿಸಿದನು. ವಾಲ್ಮೀಕಿ ಋಷಿಯ ಆಶ್ರಮದಲ್ಲಿ ಸೀತೆಯು ಲವ-ಕುಶರನ್ನು ಹೆತ್ತಳು. ಕಾಲನು 'ಶ್ರೀರಾಮನ ಅವತಾರಕಾರ್ಯ ಮುಗಿದಿದೆ' ಎಂಬ ಸೂಚನೆಯನ್ನು

ಕೊಟ್ಟನಂತರ ಶ್ರೀರಾಮನು ಮಹಾಪ್ರಸ್ಥಾನಕ್ಕೆ ತೆರಳಿದನು. ಶ್ರೀರಾಮನು ಸತ್ಯವಚನಿ. ಪಿತನ ಆಜ್ಞೆಯನ್ನು ಪಾಲಿಸಲು ರಾಜ್ಯಾಧಿಕಾರವನ್ನು ತ್ಯಜಿಸಿ, ಆನಂದದಿಂದ ವನವಾಸವನ್ನು ಸ್ವೀಕರಿಸಿದನು. ಸೀತೆಯ ಮೇಲೆ ಇವನಿಗೆ ಅಪಾರ ಪ್ರೀತಿಯಿತ್ತು. ಅವಳ ಚಾರಿತ್ರ್ಯವು ಶುದ್ಧವಿದೆ ಎಂದು ಗೊತ್ತಿದ್ದರೂ ಅವಳಿಂದ ಅಗ್ನಿದಿವ್ಯ ಮಾಡಿಸಿ ನಂತರ ಅವಳನ್ನು ಸ್ವೀಕರಿಸಿದನು. ರಾಜನ ಚಾರಿತ್ರ್ಯವು ಕಲಂಕರಹಿತವಾಗಿರಬೇಕೆಂದು, ಲೋಕಾಪವಾದವನ್ನು ಗಮನಿಸಿ, ಸೀತೆಯನ್ನು ತ್ಯಜಿಸಿದನು. ಶ್ರೀರಾಮನು ಏಕಪತ್ನೀವ್ರತವನ್ನು ಬಲು ಕಟ್ಟುನಿಟ್ಟಿನ ನಿಷ್ಠೆಯಿಂದ ಪಾಲಿಸಿ ಸಮಾಜಕ್ಕೆ ಒಂದು ಆದರ್ಶವನ್ನು ಕಲ್ಪಿಸಿದನು. ದುಷ್ಟರನ್ನು ದಂಡಿಸುವಾಗ ಸಜ್ಜನರ ರಕ್ಷಣೆಯ ಹೊಣೆಯನ್ನು ಅಂಗೀಕರಿಸಿದನು.

ಶ್ರೀರಾಮನು ಕರ್ತವ್ಯದಕ್ಷನಿದ್ದಷ್ಟೇ ಕರ್ತವ್ಯಕಠೋರನಾಗಿದ್ದನು. ಲಕ್ಷ್ಮಣನ ಮೇಲೆ ಇವನಿಗೆ ಬಲು ಪ್ರೀತಿ. ಶ್ರೀರಾಮನು ಲಕ್ಷ್ಮಣನನ್ನು ಬಿಟ್ಟು ಒಂದು ಕ್ಷಣವೂ ಇರುತ್ತಿರಲಿಲ್ಲ. ಬಹಳ ಹೊಣೆಗಾರಿಕೆಯ ಹಾಗೂ ಕಠಿಣಕಾರ್ಯಗಳನ್ನು ಲಕ್ಷ್ಮಣನಿಗೆ ಒಪ್ಪಿಸುತ್ತಿದ್ದನು. ಶ್ರೀರಾಮನು ಕಾಲನೊಡನೆ ಏಕಾಂತದಲ್ಲಿ ಮಾತಿನಲ್ಲಿದ್ದಾಗ ಒಂದು ಉದಾತ್ತಧ್ಯೇಯದಿಂದ ಲಕ್ಷ್ಮಣನು ಅಣ್ಣನ ಆಜ್ಞೆಯನ್ನು ಮೀರಿದನು. ನಂತರ ಈ ಕಾರಣದಿಂದಲೇ ಶ್ರೀರಾಮನು ಲಕ್ಷ್ಮಣನನ್ನು ಬಿಟ್ಟುಕೊಡಬೇಕಾಯಿತು. ಆಮೇಲೆ ತಾನು ಸಹ ಲಕ್ಷ್ಮಣನನ್ನು ಹಿಂಬಾಲಿಸಿ ಮಹಾಪ್ರಸ್ಥಾನವನ್ನು ಕೈಕೊಂಡನು. ಶ್ರೀರಾಮನ ನಿಸ್ವಾರ್ಥತೆ ಅಪೂರ್ವವಾಗಿದೆ. ಶರಭಂಗ ಮತ್ತು ಸುತೀಕ್ಷ್ಣ ಋಷಿಗಳು ತಾವು ಸಂಪಾದಿಸಿದ ಬ್ರಹ್ಮಲೋಕ-ಸ್ವರ್ಗಲೋಕಗಳನ್ನು ಶ್ರೀರಾಮನಿಗೆ ಕೊಡಲು ಇಚ್ಛಿಸಿದಾಗ ಶ್ರೀರಾಮನು ಅವುಗಳನ್ನು ಬಹುವಿನಯಪೂರ್ವಕವಾಗಿ ಬೇಡವೆಂದನು. ಭರದ್ವಾಜಮುನಿ ವರವನ್ನು ಕೊಡಲು ಬಯಸಿದಾಗ 'ಅಯೋಧ್ಯೆಯ ಮಾರ್ಗದಲ್ಲಿಯ ಗಿಡಮರಗಳು ಎಲ್ಲ ಋತುಗಳಲ್ಲಿಯೂ ಫಲಪುಷ್ಪಗಳಿಂದ ತುಂಬಿರಬೇಕು !' ಎಂಬ ತನ್ನ ಇಚ್ಛೆಯನ್ನು ಆತನ ಮುಂದೆ ವ್ಯಕ್ತಮಾಡಿದನು. ಶಂಬೂಕನ ವಧೆಯಿಂದ ಸಂತೋಷಗೊಂಡ ದೇವತೆಗಳಿಗೆ ಬ್ರಾಹ್ಮಣನ ಪುತ್ರನನ್ನು ಜೀವಿತಗೊಳಿಸಲು ಹೇಳಿದನು.

ಸೀತಾತ್ಯಾಗ ಹಾಗೂ ವಾಲಿಯ ವಧೆ—ಶ್ರೀರಾಮನ ಈ ಎರಡು ವರ್ತನೆಗಳು ಸರಿ ಎನಿಸುವದಿಲ್ಲ. ಶಂಬೂಕನ ವಧೆಯ ಬಾಬತ್ತಿನಲ್ಲಿಯೂ ಹಾಗೇ ಎನಿಸುತ್ತದೆ. ಶ್ರೀರಾಮನ ಸಂಪೂರ್ಣ ಜೀವನಚರಿತ್ರೆ, ವರ್ತನೆ ಆದರ್ಶಪೂರ್ಣವಾಗಿವೆ. ಇವನೊಬ್ಬ ಅಲೌಕಿಕ ಪುರುಷ, ಮರ್ಯಾದಾ-ಪುರುಷೋತ್ತಮನೆಂದೆನ್ನಬಹುದು. ಕರ್ತವ್ಯಪೂರ್ತಿಯೇ ಈತನ ಜೀವನನಿಷ್ಠೆಯಾಗಿತ್ತು. ಪುತ್ರ, ಪತಿ, ಬಂಧು, ಶಾಸಕ, ಮಿತ್ರ ಎಲ್ಲ ಸಂಬಂಧಗಳಲ್ಲಿಯೂ ತನ್ನ ಕರ್ತವ್ಯಕಠೋರವರ್ತನೆಯಿಂದ ಸಮಾಜದ ಮುಂದೆ ಒಂದು ಆದರ್ಶವನ್ನಿಟ್ಟನು. ಶ್ರೀರಾಮನ ಅನೇಕ ತೀರ್ಮಾನಗಳು ಕೆಲವು ವ್ಯಕ್ತಿಗಳಿಗೆ ಅನ್ಯಾಯವೆಂದೆನಿಸಿದರೂ ಸಮಷ್ಟಿಕಲ್ಯಾಣದ ಅರಿವು ಶ್ರೀರಾಮನಲ್ಲಿ ಸದಾಕಾಲವೂ ಇತ್ತು.

## ೧೧೦. ರಾವಣ

ಇವನು ಪುಲಸ್ತ್ಯನ ಮಗನಾದ ವಿಶ್ರವಾ ಮತ್ತು ಸುಮಾಲಿ ರಾಕ್ಷಸನ ಮಗಳಾದ ಕೈಕಸಿ ಇವರ ಪುತ್ರನಾಗಿ ಹುಟ್ಟಿದನು. ಈತನಿಗೆ 'ಮಲತಾಯಿಯ ಮಗನಾದ ಕುಬೇರನಂತೆ ಆಗು !' ಎಂದು ಕೈಕಸಿ ನುಡಿದಿದ್ದರಿಂದ ರಾವಣ ಗೋಕರ್ಣಕ್ಷೇತ್ರದಲ್ಲಿ ಹತ್ತುಸಾವಿರ ವರ್ಷ ಉಗ್ರತಪಸ್ಸನ್ನಾಚರಿಸಿದನು. ಪ್ರತಿಸಲ ಒಂದು ಸಾವಿರ ವರ್ಷಗಳು ಪೂರ್ಣಗೊಂಡಾಗ ಇವನು ತನ್ನ ಒಂದು ಶಿರವನ್ನು ಅಗ್ನಿಯಲ್ಲಿ ಹವನಮಾಡುತ್ತಿದ್ದನು. ಈ ಪ್ರಕಾರ ಹತ್ತನೆಯ ಶಿರವನ್ನು ಅರ್ಪಿಸಲು ಸಿದ್ಧನಾದಾಗ ಬ್ರಹ್ಮದೇವನು ಪ್ರಸನ್ನನಾಗಿ 'ಮರ್ಯಾದಿತ ಸಂದರ್ಭದಲ್ಲಿ ವಧೆಯಾಗಲಾರದು !' ಎಂಬ ವರ ಕೊಟ್ಟನು. ಪದ್ಮಪುರಾಣದಲ್ಲಿ ಶಂಕರನು ಈ ವರವನ್ನು ಕೊಟ್ಟನೆಂದಿದೆ. ಬ್ರಹ್ಮದೇವನು ಇನ್ನೊಂದು ವರವನ್ನು ರಾವಣನಿಗೆ ಕೊಟ್ಟು, ಹವನಮಾಡಿದ ಎಲ್ಲ ಶಿರಗಳನ್ನು ರಾವಣನಿಗೆ ಮರಳಿಸಿದನು. ಅಂದಿನಿಂದ ರಾವಣನು ಪುನಃ ದಶಾನನ ಅಥವಾ ದಶಗ್ರೀವನಾದನು. ರಾವಣನು ಕುಬೇರನಿಂದ ಲಂಕೆಯನ್ನು ದೋಚಿಕೊಂಡು ಸ್ವತಃ ಲಂಕಾಧೀಶನಾದನು. ಮಯನ ಮಗಳಾದ ಮಂಡೋದರಿ ಈತನ ಪತ್ನಿ. ಇವಳಲ್ಲದೆ ರಾವಣನಿಗೆ ಒಂದು ಸಾವಿರ ಸ್ತ್ರೀಯರಿದ್ದರು. ಮಂಡೋದರಿಯ

ಮಗನೇ ಮೇಘನಾದ. ಇವನಿಗೆ ಅತಿಕಾಯ, ತ್ರಿಶಿರ, ನರಾಂತಕ, ದೇವಾಂತಕರೆಂಬ ಇನ್ನೂ ಅನೇಕ ಗಂಡು ಮಕ್ಕಳು ಇದ್ದರು. ಕುಂಭಕರ್ಣ, ವಿಭೀಷಣರು ಈತನ ಸಹೋದರರು. ಶೂರ್ಪಣಖಿ ಇವನ ಸಹೋದರಿಯಾಗಿದ್ದಳು. ಪ್ರಹಸ್ತ, ಮಹೋದರ, ಮಾರೀಚ, ಶುಕ, ಸಾರಣ, ಮಹಾಪಾರ್ಶ್ವ, ಧೂಮ್ರಾಕ್ಷ ಮೊದಲಾದವರು ರಾವಣನ ಅಮಾತ್ಯರಾಗಿದ್ದರು. ರಾವಣನು ಅತಿಬಲಾಢ್ಯನಾಗಿದ್ದು ವರಗಳನ್ನು ಪಡೆದುಕೊಂಡಿದ್ದರಿಂದ ಯಾರಿಂದಲೂ ಸೋಲುವಂತಿರಲಿಲ್ಲ. ಇವನು ಕುಬೇರನ ಸಂಗಡ ಯುದ್ಧಮಾಡಿ ಕುಬೇರನ ಪುಷ್ಪಕವಿಮಾನವನ್ನು ಪಡೆದನು. ರಾವಣನು ಅನೇಕ ರಾಜರನ್ನು ಗೆದ್ದುಕೊಂಡಿದ್ದನು. ಈತನು ಶಂಕರನ ಬಗ್ಗೆ ಅನಾದರದ ಮಾತುಗಳನ್ನು ನುಡಿದಾಗ ನಂದೀಶ್ವರನು ಇವನಿಗೆ ಸರಿಯಾದ ಎಚ್ಚರಿಕೆಯನ್ನು ಕೊಟ್ಟನು. ಶಂಕರನು ಕಾಲಿನ ಹೆಬ್ಬೆರಳಿನಿಂದ ಪರ್ವತವನ್ನೇ ಎತ್ತಿಹಾಕುವ ಬಲವಿದ್ದ ರಾವಣನ ಕೈಗಳೆರಡನ್ನೂ ಪರ್ವತದಡಿಯಲ್ಲಿ ಅದುಮಿ ಅವನ ಗರ್ವಹರಣವನ್ನು ಮಾಡಿದನು. ಯಮನೊಡನೆ ನಡೆದ ಸಂಗ್ರಾಮದಲ್ಲಿ ರಾವಣನ ಮರಣವು ಸಮೀಪಿಸಿತ್ತು. ಆಗ ಬ್ರಹ್ಮದೇವನು ಮಧ್ಯಸ್ಥಿಕೆ ವಹಿಸಿ, ಯಮನನ್ನು ಯುದ್ಧದಿಂದ ಪರಾವೃತ್ತಗೊಳಿಸಿದನು. ರಾವಣನು ನಿವಾತಕವಚನನ್ನು ಸೋಲಿಸಲು ಸಾಧ್ಯವಿಲ್ಲವೆಂಬುದನ್ನು ಅರಿತ ಬ್ರಹ್ಮನು ಅವರಲ್ಲಿ ಸ್ನೇಹ ಬೆಳೆಯುವಂತೆ ಮಾಡಿದನು. ಮರುತ್ತನು ಯಜ್ಞದೀಕ್ಷೆಯನ್ನು ತೆಗೆದುಕೊಂಡಿದ್ದರಿಂದ ಯುದ್ಧವು ಆತನಿಗೆ ನಿಷೇಧಿಸಲ್ಪಟ್ಟಿತ್ತು. ಹೀಗಾದ್ದರಿಂದ ಆಗ ರಾವಣನ ಪರಾಭವವು ತಪ್ಪಿತು. ರಾವಣನು ವಾಲಿಯೊಡನೆ ಯುದ್ಧಸನ್ನದ್ಧನಾದಾಗ ವಾಲಿಯು ಈತನನ್ನು ಕಂಕುಳಲ್ಲಿ ಅದುಮಿಕೊಂಡು ಹೋಗಿದ್ದನು. ಆಗ ವಾಲಿಯ ಬಲವನ್ನರಿತು ರಾವಣ ಅಗ್ನಿಸಾಕ್ಷಿಯಾಗಿ ವಾಲಿಯೊಡನೆ ಮಿತ್ರತ್ವವನ್ನು ಬೆಳೆಸಿದನು.

ಸ್ತ್ರೀಯರ ಮೇಲೆ ಬಲಾತ್ಕಾರ ಮಾಡುವವರಲ್ಲಿ ರಾವಣನದು ಎತ್ತಿದ ಕೈ. ಅನೇಕ ಸಾಧ್ವಿಯರ ಆಪ್ತಬಾಂಧವರನ್ನು ಯಮಲೋಕಕ್ಕೆ ಅಟ್ಟಿ, ರಾವಣನು ಆ ಸ್ತ್ರೀಯರನ್ನು ಉಪಭೋಗಿಸಿದನು. ಪುಂಜಿಕಸ್ಥಲೆ ಮತ್ತು ರಂಭೆ ಈ ಅಪ್ಸರೆಯರನ್ನು ಬಲಾತ್ಕರಿಸಿದ್ದಕ್ಕಾಗಿ ಬ್ರಹ್ಮದೇವ ಹಾಗೂ ನಲಕೂಬರರು ರಾವಣನಿಗೆ ಶಾಪಕೊಟ್ಟರು. ವೇದವತಿಯೊಡನೆ ದುರ್ವರ್ತನೆಮಾಡಿದಾಗ, ಅವಳು ಈತನಿಂದ ಭ್ರಷ್ಟಳಾಗುವ ಬದಲು ಆತ್ಮದಹನವೇ ಲೇಸೆಂದು ಬಗೆದು ಆ ರೀತಿ ಮಾಡಿದಳು. ಆಗ ವೇದವತಿ 'ನಿನ್ನನ್ನು ವಧಿಸಲು ಪುನಃ ಸ್ತ್ರೀಜನ್ಮತಾಳುವೆ !' ಎಂಬ ಪ್ರತಿಜ್ಞೆಯನ್ನು ಮಾಡಿದ್ದಳು. ಈ ವೇದವತಿಯೇ ನಂತರ ಸೀತೆಯಾಗಿದ್ದಳೆಂದು ನಂಬುತ್ತಾರೆ. ಸೀತಾಸ್ವಯಂವರದ ಸಮಯದಲ್ಲಿ ರಾವಣನು ಅಲ್ಲಿಗೆ ಹೋಗಿದ್ದನು ; ಆದರೆ ಶಿವಧನುಸ್ಸನ್ನು ಎತ್ತುವದು ಅವನಿಂದಾಗಲಿಲ್ಲ. ಮಾರೀಚನು ರಾವಣನಿಗೆ ಶ್ರೀರಾಮಲಕ್ಷ್ಮಣರ ಸಾಮರ್ಥ್ಯದ ಕಲ್ಪನೆಯನ್ನು ಅರುಹಿದ್ದನು. ಆಗಲೂ ರಾವಣನು ಸೀತಾಪಹರಣದ ಕಾರ್ಯದಲ್ಲಿ ನೆರವಾಗಬೇಕೆಂದು ಮಾರೀಚನನ್ನು ಒತ್ತಾಯಪಡಿಸಿದನು. ಸಹಾಯ ಮಾಡದಿದ್ದಲ್ಲಿ ಕೊಂದುಹಾಕುವ ಬೆದರಿಕೆಯನ್ನು ಮಾರೀಚನಿಗೆ ಹಾಕಿದ್ದನು. ವಿಭೀಷಣನು ಸೀತಾಪಹರಣದ ಬಗ್ಗೆ ರಾವಣನನ್ನು ತುಂಬಾ ನಿಂದಿಸಿದನು ; ಆದರೆ ರಾವಣನು ಯಾವುದನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಸೀತೆಯನ್ನು ಅನುನಯಿಸಿ ರಾವಣನು ವಿಫಲನಾದಾಗ—ಆತನು ಆಕೆಯನ್ನು ಕೊಂದುಹಾಕಬಹುದಿತ್ತು. ಆದರೆ ಎಲ್ಲರೂ ಆತನನ್ನು ಈ ವಿಚಾರದಿಂದ ಪರಾವೃತ್ತಗೊಳಿಸಿದರು. ಶ್ರೀರಾಮನು ವಧೆಯಾದನೆಂಬ ಒಂದು ಮಾಯಾವೀ ದೃಶ್ಯವನ್ನು ಸೀತೆಗೆ ತೋರಿಸಿದನು. ಅದರಿಂದಲೂ ಅವಳು ವಶಳಾಗಲಿಲ್ಲವಾದ್ದರಿಂದ ರಾವಣನಿಗೆ ಬಹಳ ವಿಫಲತೆ ಎನಿಸಿತು.

ಅನರಣ್ಯ, ಮಾಂಧಾತ—ಈ ರಾಜರನ್ನು ಸೋಲಿಸಿ ಇವನು ತನ್ನ ಸಾಮರ್ಥ್ಯವನ್ನು ಸ್ಥಾಪಿಸಿದನು. ಹನುಮಾನನ ಬಾಲಕ್ಕೆ ಬೆಂಕಿಹಚ್ಚಿ ಸ್ವಹಸ್ತದಿಂದ ಲಂಕೆಯನ್ನು ಸುಟ್ಟಂತೆ ಮಾಡಿಕೊಂಡನು. ಮಾನವರನ್ನು ತರಲೆಗಳೆಂದು ತಿಳಿಯುತ್ತಿದ್ದ ರಾವಣನು ಯುದ್ಧದಲ್ಲಿ ಶ್ರೀರಾಮನನ್ನು ಸಹಜವಾಗಿ ಜಯಿಸಬಹುದೆಂಬ ಗರ್ವವನ್ನು ಹೊಂದಿದ್ದನು. ಆದರೆ ಇವನ ಸೈನ್ಯದ ಅತಿಕಾಯ, ಕುಂಭಕರ್ಣ ಈ ಮೊದಲಾದ ವೀರಾಗ್ರಣಿಗಳ ವಧೆಯಿಂದ ರಾವಣನ ಧೈರ್ಯ ಕುಗ್ಗಿತು. ಇಂದ್ರಜಿತನ ವಧೆಯಿಂದ ರಾವಣನ ಜಂಘಾಬಲವೇ ಉಡುಗಿತು. ಕೆಲವೊಮ್ಮೆ ಯುದ್ಧದಲ್ಲಿ ಗೆಲವು ಗೋಚರವಾದರೂ ಇನ್ನು ಪರಾಭವವು ನಿಶ್ಚಿತವೆಂಬ ಅರಿವು ರಾವಣನಿಗೆ ಉಂಟಾಗತೊಡಗಿತು. 'ಮರಣಾದನಂತರ ಶತ್ರುತ್ವವಿರದು' ಎಂಬ ನುಡಿಯಂತೆ ಶ್ರೀರಾಮನು ರಾವಣನ ಅಂತ್ಯಸಂಸ್ಕಾರಗಳೆಲ್ಲವನ್ನೂ ವಿಧಿಯುಕ್ತವಾಗಿ ಮಾಡಿಸಿದನು. ಬ್ರಹ್ಮದೇವ ಹಾಗೂ ಶಂಕರ ಇವರಿಂದ

ವರಗಳನ್ನು ಪಡೆದ ಕಾರಣ ರಾವಣನ ಅಹಂಕಾರ, ಉದ್ಧಟತನ, ಕ್ರೌರ್ಯ ಇವೆಲ್ಲ ಹೆಚ್ಚುತ್ತಹೋಗಿ ಯಾರ ಪರಿವೆಯೂ ಈತನಿಗೆ ಇಲ್ಲದಂತಾಯಿತು. ಶಂಕರನಿಂದ ಚಂದ್ರಹಾಸ ಖಡ್ಗವನ್ನು, ಬ್ರಹ್ಮದೇವನಿಂದ ಸಿದ್ಧಿಮಂತ್ರವನ್ನು ಹೊಂದಿದ ಕಾರಣ ಇವನ ದುರ್ವರ್ತನೆಯು ಮಿತಿಮೀರಿತು. ಯಾರಿಗೂ ಅಂಜದೇ ನಿರ್ಭಯನಾಗಿದ್ದ ರಾವಣನು ಬ್ರಹ್ಮದೇವನ ಶಾಪದಿಂದ ಭಯಗೊಂಡನು. ಮಹಾಪಾರ್ಶ್ವನ ಮುಂದೆ ಈ ಮಾತನ್ನು ಅವನು ಆಡಿತೋರಿಸಿದ್ದನು. ಈ ಶಾಪದ ಭಯದಿಂದ ರಾವಣನು ಸೀತೆಯನ್ನು ಸ್ಪರ್ಶಿಸಲು ಹಿಂಜರಿಯುತ್ತಿದ್ದನು.

## ೧೧೧. ರುದ್ರ (ಮಹಾದೇವ, ಹರ, ಶಿವ)

ರುದ್ರನು ಕೆಂಜುಗೂದಲಿನ ಜಟಾಧಾರಿಯೂ ಶತ್ರುಸಂಹಾರಕನೂ ಪರಾಕ್ರಮಿಯೂ ಆದ ದೇವತೆಯಾಗಿದ್ದಾನೆ. ಪ್ರಾಣಿಗಳ ಪ್ರಾಣಹರಣವನ್ನು ಮಾಡುವ ಈತನು ರುದ್ರನೆಂದು ಭೀತಿದಾಯಕನೆನಿಸುತ್ತಾನೆ. ಔಷಧಿವನಸ್ಪತಿಗಳಿಂದ ರೋಗರುಜಿನಗಳನ್ನು ವಾಸಿಗೊಳಿಸುವ ವಿದ್ಯೆ ರುದ್ರನಲ್ಲಿದೆ. ಬಿಲ್ಲುಬಾಣಗಳನ್ನು ಮತ್ತು ವಜ್ರಾಯುಧಗಳನ್ನು ಧರಿಸಿದ ದೇವತೆ ಎಂಬ ವರ್ಣನೆ ಋಗ್ವೇದದಲ್ಲಿದೆ. ಶತಪಥಬ್ರಾಹ್ಮಣದಲ್ಲಿ ಅಗ್ನಿದೇವತೆಗೆ ರುದ್ರನೆಂದೂ, ಶರ್ವ, ಭವ ಹಾಗೂ ಪಶುಪತಿ ಎಂದೂ ಈತನನ್ನು ಸಂಬೋಧಿಸಿದ್ದಾರೆ. ಪ್ರಜಾಪತಿಯು ದುಹಿತೃಗಮನಮಾಡಿದ ಕಾರಣ ಅವನನ್ನು ಶಿಕ್ಷೆವಿಧಿಸಲು ರುದ್ರನು ಹುಟ್ಟಿದನೆಂದು ಬ್ರಹ್ಮಪುರಾಣ, ಐತರೇಯ ಹಾಗೂ ಶತಪಥಬ್ರಾಹ್ಮಣಗಳಲ್ಲಿದೆ. ವಿಷ್ಣುಪುರಾಣದನುಸಾರ ರುದ್ರನ ಉತ್ಪತ್ತಿಯು ಬ್ರಹ್ಮದೇವನ ಹುಬ್ಬುಗಳಿಂದ ನಡೆದಿದೆ. ಮತ್ಸ್ಯಪುರಾಣದಲ್ಲಿ ಈತನ ವರ್ಣನೆಯನ್ನು ಅರ್ಧನರ-ನಾರಿದೇಹಧಾರಿ ಎಂದು ಮಾಡಿದ್ದಾರೆ. ಪ್ರಜೆಗಳನ್ನು ಸೃಷ್ಟಿಸಲು ಚಿಂತಿಸುತ್ತಿದ್ದ ಬ್ರಹ್ಮದೇವನಿಗೆ ಮೊದಲು ಕೆಂಪು ವರ್ಣದವ, ಅನಂತರ ನೀಲವರ್ಣದವನಾದ ರುದ್ರನು ಹುಟ್ಟಿದನೆಂದು ಸ್ಕಂದಪುರಾಣದ ಮತವಿದೆ. ಒಟ್ಟು ಹನ್ನೊಂದು ರುದ್ರರಿದ್ದು, ಬೇರೆ ಬೇರೆ ಗ್ರಂಥಗಳಲ್ಲಿ ಅವರ ಹೆಸರುಗಳು ಬೇರೆಬೇರೆಯಾಗಿವೆ.

ದಕ್ಷಕನ್ಯೆಯಾದ ಸತಿಯು ರುದ್ರನ ಪತ್ನಿಯಾಗಿದ್ದಳು. ಈಕೆ ನಂತರ ಹಿಮಾಲಯದ ಕನ್ಯೆ ಪಾರ್ವತಿಯಾಗಿ (ಉಮೆ) ರುದ್ರನೊಡನೆ ವಿವಾಹವಾದಳು. ಒಮ್ಮೆ ಬ್ರಹ್ಮದೇವನು ನಿರ್ಮಿಸಿದ ಅಪ್ಸರೆಯನ್ನು ಕಂಡು ರುದ್ರನು ಮೋಹಗೊಂಡನು. ಆಗ ಪಾರ್ವತಿಯು ಹತ್ತಿರದಲ್ಲಿ ಇದ್ದ ಕಾರಣ ಆ ಅಪ್ಸರೆಯತ್ತ ತಿರುಗಿ ನೋಡುವುದು ರುದ್ರನಿಗೆ ಸಮಸ್ಯೆಯಾಯಿತು. ಆಗ ಅವಳನ್ನು ನೋಡಲೋಸುಗ ರುದ್ರನಿಗೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಮುಖಗಳು ನಿರ್ಮಿತವಾದವು. ಪಾರ್ವತಿಗೆ ನಾರದನಿಂದ ಈ ಸಂಗತಿ ತಿಳಿಯಿತು. ಆಗ ಪಾರ್ವತಿ ಈತನ ಎರಡು ಕಣ್ಣುಗಳನ್ನೂ ಮುಚ್ಚಿದಾಗ ರುದ್ರನಿಗೆ ಮೂರನೆಯ ಕಣ್ಣು ಮೂಡಿತು. ರುದ್ರನು ವೀರಭದ್ರನಿಂದ ದಕ್ಷನ ಯಜ್ಞವನ್ನು ಧ್ವಂಸಗೊಳಿಸಿದನು. ಭೈರವನಿಂದ ಬ್ರಹ್ಮದೇವನ ಐದನೆಯ ಶಿರಸ್ಸನ್ನು ಕಡಿಸಿಹಾಕಿದ ಕಾರಣ ಈತನಿಗೆ ಬ್ರಹ್ಮಹತ್ಯೆಯು ಬೆನ್ನಟ್ಟಿತು. ರುದ್ರನು ಭೂತಪಿಶಾಚಿಗಣಗಳ ಅಧಿಪತಿಯಾಗಿದ್ದು ಇವನ ವಾಸವು ಸ್ಮಶಾನಭೂಮಿಯಲ್ಲಿ. ಭೂತಪಿಶಾಚಿಗಣಗಳ ಅಧಿಪತಿಗಳಾದ ವೀರಭದ್ರ ಮೊದಲಾದವರು ಈತನ ಪುತ್ರರಾಗಿದ್ದಾರೆ. ಅನೇಕ ಋಷಿಗಳು ತಾಮಸಿಗಳಾಗುವುದಕ್ಕೆ ರುದ್ರನೇ ಕಾರಣನಿರುತ್ತಾನೆ. ಈತನು ಬಾಣ, ಭಸ್ಮಾಸುರ, ರಾವಣ ಇವರ ಬಾಬತ್ತಿನಲ್ಲಿ ತೋರಿಸಿದ ಒಳ್ಳೆಯತನವು ಖ್ಯಾತವಿದೆ. ರುದ್ರನು ಗಂಧಮಾದನ ಪರ್ವತದ ಮೇಲೆ ಬೀಳುವ ಗಂಗೆಯನ್ನು ತನ್ನ ಶಿರದಲ್ಲಿಯ ಜಟಾಜೂಟದಲ್ಲಿ ಧರಿಸಿದನು. ಇದರಿಂದ ಗಂಗೆ ಎಂದರೆ ಇವನ ಪತ್ನಿ ಎಂತಲೂ ಎನ್ನುತ್ತಾರೆ. ಈತನ ವಾಸಸ್ಥಳದ ಬಗ್ಗೆ ಬಹಳ ಮತಭೇದಗಳಿವೆ. ಮೇರುಪರ್ವತ, ಉತ್ತರಧ್ರುವ, ಕೈಲಾಸ, ಹಿಮಾಲಯ ಎಂಬ ಅನೇಕ ಸ್ಥಳಗಳನ್ನು ಈತನ ವಸತಿಸ್ಥಾನಗಳೆಂದು ನಂಬಲಾಗಿವೆ. ಈತನನ್ನು ಮಹಾದೇವ, ಹರ, ಶಿವ, ಶಂಕರ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಸಂತಾನವಾಗಬೇಕೆಂಬ ಇಚ್ಛೆಯಿಂದ ಶಿವನು ಬಹುಕಾಲದವರೆಗೆ ಪಾರ್ವತಿಯೊಡನೆ ಸರಸಸಲ್ಲಾಪದಲ್ಲಿ ನಿರತನಾದುದನ್ನು ಅವಲೋಕಿಸಿ, ದೇವತೆಗಳಿಗೆ ಚಿಂತೆಯುಂಟಾಯಿತು. ಆಗ ದೇವತೆಗಳು ಇವರ ರತಿಕ್ರೀಡೆಯಲ್ಲಿ ವ್ಯತ್ಯಯವನ್ನುಂಟುಮಾಡಿದ ಕಾರಣ ಪಾರ್ವತಿಯು ದೇವತೆಗಳಿಗೆ ಹಾಗೂ ಈ ದೇವತೆಗಳಿಗೆ

ಅಪ್ರತ್ಯಕ್ಷವಾಗಿ ಸಹಾಯ ಮಾಡಿದ ವೃಥ್ವಿಗೆ 'ನಿಮಗೆ ಸಂತಾನವಾಗದಿರಲಿ' ಎಂಬ ಶಾಪವನ್ನು ಕೊಟ್ಟಳು. ಅನಂತರ ಮಹಾದೇವನು ಪರ್ವತದ ಮೇಲೆ ಹೋಗಿ ತಪಾಚರಣೆಯಲ್ಲಿ ತೊಡಗಿದನು. ಭಗೀರಥನ ತಪಸ್ಸಿನಿಂದ ಪ್ರಸನ್ನನಾದ ಶಿವನು ಆತನ ಇಚ್ಛೆಯಂತೆ ಆಕಾಶದಿಂದ ಧುಮುಕುವ ಗಂಗೆಯನ್ನು ಶಿರದಲ್ಲಿ ಧರಿಸಿದನು. ಸಮುದ್ರಮಂಥನದಿಂದ ಹೊರಬಂದ ವಿಷವನ್ನು ಕುಡಿದನು. ಹನುಮಾನ ಮತ್ತು ಮಧುದೈತ್ಯರಿಗೆ ವರಗಳನ್ನು ಕೊಟ್ಟನು. ಶ್ರೀರಾಮನಿಗೆ ಅಯೋಧ್ಯೆಯ ರಾಜ್ಯವನ್ನಾಳಲು ಹೇಳಿದನು. ಅಶ್ವಮೇಧಯಜ್ಞವನ್ನು ನೆರವೇರಿಸಲು ಹೇಳಿದನು. ಶಿವನೇ ಇಂದ್ರಲೋಕದಿಂದ ವಿಮಾನದಲ್ಲಿ ಬಂದ ದಶರಥನನ್ನು ಅಭಿವಾದಿಸಲು ಶ್ರೀರಾಮನಿಗೆ ಹೇಳಿದನು. ಒಮ್ಮೆ ಶಿವನು ಪಾರ್ವತೀಸಹಿತನಾಗಿ ಆಕಾಶಮಾರ್ಗದಿಂದ ಸಾಗಿದಾಗ ಸಾಲಕಟಂಕಟಾ ಇವಳು ತ್ಯಜಿಸಿದ ಸುಕೇಶನೆಂಬ ಬಾಲಕನನ್ನು ಕಂಡನು. ಕನಿಕರಪಟ್ಟು ಆ ಬಾಲಕನಿಗೆ ಅಮರತ್ವವನ್ನು ಕರುಣಿಸಿದನು. ಪಾರ್ವತಿಯು ತನ್ನತ್ತ ಓರೆಗಣ್ಣಿನಿಂದ ನೋಡಿದ ಕುಬೇರನಿಗೆ ಶಾಪ ಕೊಟ್ಟಳು. ಆಗ ಕುಬೇರನ ಒಂದು ಕಣ್ಣು ಸುಟ್ಟು ಬೂದಿಯಾಯಿತು. ಇನ್ನೊಂದು ಕಣ್ಣು ಕೆಂಜು ಬಣ್ಣದ್ದಾಯಿತು. ಆಗ ಕುಬೇರನು ಮಹಾದೇವನನ್ನು ಪ್ರಸನ್ನಗೊಳಿಸಿ ಆತನ ಮಿತ್ರತ್ವವನ್ನು ಪಡೆದನು. ಒಮ್ಮೆ ಶಿವನು ಪಾರ್ವತಿಯೊಡನೆ ಪರ್ವತದಲ್ಲಿ ಕ್ರೀಡಿಸುತ್ತಿದ್ದಾಗ ರಾವಣನು ಅಲ್ಲಿಗೆ ಆಗಮಿಸಿದನು. ನಂದೀಶ್ವರನು ರಾವಣನ ಪ್ರವೇಶವನ್ನು ತಡೆದನು. ಕೋಪಗೊಂಡ ರಾವಣನು ಆ ಪರ್ವತವನ್ನೇ ಕಿತ್ತು ಎಸೆಯಲು ಉದ್ಯುಕ್ತನಾದನು. ಆಗ ಶಿವನು ತನ್ನ ಪಾದದ ಹೆಬ್ಬೆರಳಿನಿಂದ ಪರ್ವತವನ್ನು ಅದುಮಿ ರಾವಣನ ಕೈಗಳನ್ನು ಪರ್ವತದಡಿಯಲ್ಲಿ ಸಿಲುಕುವಂತೆ ಮಾಡಿದನು. ಹೀಗಾಗಿ ರಾವಣನ ಉದ್ದಿಷ್ಟವು ವಿಫಲವಾಯಿತು. ರಾವಣನು ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡನು. ಆಗ ಶಿವನು ಈತನಿಗೆ ಚಂದ್ರಹಾಸವೆಂಬ ಖಡ್ಗವನ್ನು ಕೊಟ್ಟನು; ಅಲ್ಲದೆ ಕೆಲವು ನಿರ್ಬಂಧಗಳನ್ನು ಹಾಕಿ ಮಿಕ್ಕ ಆಯುಷ್ಯವನ್ನು ಭೋಗಿಸಲು ವರವನ್ನಿತ್ತನು. ಇಲನೆಂಬ ರಾಜನಿಗೆ ಸ್ತ್ರೀತ್ವವು ಉಂಟಾಗಿತ್ತು. ಆಗ ಕರ್ದಮನು ಶಿವನಿಗೆ ಪ್ರಿಯವಾಗಿರುವ ಅಶ್ವಮೇಧ ಯಜ್ಞವನ್ನು ಮಾಡಿ ಅವನನ್ನು ಸಂತೋಷಗೊಳಿಸಿದನು. ಆದರಿಂದಾಗಿ ಇಲನಿಗೆ ಪುನಃ ಪುರುಷತ್ವವು ದೊರಕಿತು.

## ೧೧೨. ಲಕ್ಷ್ಮಣ

ಲಕ್ಷ್ಮಣನು ದಶರಥ ಮತ್ತು ಸುಮಿತ್ರಾ ಇವರ ಹಿರಿಯ ಮಗನು ಮತ್ತು ಶತ್ರುಘ್ನನ ಸಹೋದರನಾಗಿದ್ದನು. ಅವನಿಗೆ ಶ್ರೀರಾಮನಲ್ಲಿ ವಿಶೇಷ ಭಕ್ತಿ, ಆದರ, ಪ್ರೇಮಗಳಿದ್ದವು. ಈತನು ಸ್ವತಃದ ಸುಖ ದುಃಖಗಳ ಪರಿವೆಯಿಲ್ಲದೇ ಸಂಪೂರ್ಣ ಆಯುಸ್ಸನ್ನು ಶ್ರೀರಾಮನ ಏಕನಿಷ್ಠ ಸೇವೆಯಲ್ಲಿ ಕಳೆದನು. ಲಕ್ಷ್ಮಣನು ಸ್ವ-ಇಚ್ಛೆಯಿಂದ ಶ್ರೀರಾಮನೊಡನೆ ವನವಾಸವನ್ನು ಅಂಗೀಕರಿಸಿದನು. ಈತನ ಪತ್ನಿ ಊರ್ಮಿಳೆ. ಲಕ್ಷ್ಮಣನು ಶಸ್ತ್ರಾಸ್ತ್ರನಿಪುಣನಿದ್ದನು. ಶ್ರೀರಾಮ-ರಾವಣರ ಯುದ್ಧದಲ್ಲಿ ಈತನ ಶೌರ್ಯವು ಪ್ರಕಟವಾಯಿತು. ವಿಶ್ವಾಮಿತ್ರನು ತನ್ನ ಯಜ್ಞರಕ್ಷಣೆಗೆಂದು ಶ್ರೀರಾಮನೊಡನೆ ಲಕ್ಷ್ಮಣನನ್ನೂ ಕರೆದೊಯ್ದಿದ್ದನು. ಇವನು ತಾಟಕಿ, ಶೂರ್ಪನಖಿ ಮತ್ತು ಅಯೋಮುಖಿ ಇವರ ಕಿವಿಮೂಗುಗಳನ್ನು ಕತ್ತರಿಸಿ ಅವರಿಗೆ ಅತಿಭಯವನ್ನುಂಟುಮಾಡಿದನು. ಅದೇ ರೀತಿ ಅತಿಕಾಯ, ವಿರೂಪಾಕ್ಷ ಮೊದಲಾದ ರಾಕ್ಷಸರನ್ನು ಯಮಸದನಕ್ಕೆ ಅಟ್ಟಿದನು. ಮೇಘನಾದನು ನಿಕುಂಭಿಲೆಯಲ್ಲಿ ಹೋಮವನ್ನು ಪೂರೈಸಿ ಹೊರಬರುವ ಮೊದಲೇ, ಲಕ್ಷ್ಮಣನು ವಿಭೀಷಣನ ಹೇಳಿಕೆಯಂತೆ, ಮೇಘನಾದನನ್ನು ವಧಿಸಿದನು. ಆನಂದರಾಮಾಯಣದಲ್ಲಿ ಹೇಳಿದಂತೆ ಅಯೋಧ್ಯೆಯನ್ನು ಬಿಟ್ಟ ಸಮಯದಿಂದ ಲಕ್ಷ್ಮಣನು ಹನ್ನೆರಡು ವರ್ಷಗಳವರೆಗೆ ಆಹಾರನಿದ್ರೆಗಳನ್ನು ತೊರೆದಿದ್ದನು. ಅದ್ದರಿಂದಲೇ ಇಂದ್ರಜಿತನನ್ನು ವಧಿಸಲು ಲಕ್ಷ್ಮಣನೊಬ್ಬನಿಂದ ಸಾಧ್ಯವಿತ್ತು. ಬ್ರಹ್ಮದೇವನು ಈ ರೀತಿಯ ವರವನ್ನು ಇಂದ್ರಜಿತನಿಗೆ ಕೊಟ್ಟಿದ್ದನು. ಲಕ್ಷ್ಮಣನಿಗೆ ಅನ್ಯಾಯವು ಎಳ್ಳಷ್ಟೂ ಸಹನೆಯಾಗುತ್ತಿರಲಿಲ್ಲ. ಕೈಕೇಯಿಯನ್ನು ಸಂತೋಷವಾಗಿಡಲು ಶ್ರೀರಾಮನನ್ನು ವನವಾಸಕ್ಕೆ ಅಟ್ಟುವ ತನ್ನ ತಂದೆ ದಶರಥನ ಬಗ್ಗೆಯೂ ಈತನಿಗೆ ಸಿಟ್ಟುಬಂದು ದಶರಥನನ್ನು ವಧಿಸಬೇಕೆಂದು ಬಗೆದಿದ್ದನು. ಅದೇ ರೀತಿ ಭರತನು ಶ್ರೀರಾಮನನ್ನು ಭೇಟಿಯಾಗಲು ಬಂದಾಗ ಲಕ್ಷ್ಮಣನು ಭರತನ ಬಗ್ಗೆಯೂ ಸಂದೇಹವನ್ನು ತಾಳಿದ್ದನು. ಆತನನ್ನು ಮತ್ತು ಕೈಕೇಯಿಯನ್ನು ವಧಿಸುವ ಇಚ್ಛೆ ಈತನಲ್ಲಿತ್ತು : ಆದರೆ ಶ್ರೀರಾಮನು ಇವನಿಗೆ

ಬುದ್ಧಿ ಹೇಳಿದನು. 'ಶ್ರೀರಾಮನಿಗೆ ಕೊಟ್ಟ ವಚನವನ್ನು ಲಕ್ಷಿಸದೇ ಸುಗ್ರೀವನು ಸುಖವಿಲಾಸಗಳಲ್ಲಿ ಮಗ್ನನಾಗಿ ಕಾಲಹರಣ ಮಾಡುತ್ತಿದ್ದಾನೆ' ಎಂದು ತಿಳಿದುಬಂದಾಗ ಲಕ್ಷ್ಮಣನು ಕಠೋರನುಡಿಗಳಲ್ಲಿ ಸುಗ್ರೀವನಿಗೆ ಎಚ್ಚರಿಕೆ ಕೊಟ್ಟನು. ಲಕ್ಷ್ಮಣನು ಸೀತೆಯ ಪಾದಗಳನ್ನು ಮಾತ್ರ ದೃಷ್ಟಿಸಿದ್ದನು ; ಆಕೆಯ ಮುಖವನ್ನು ಎಂದೂ ನೋಡಿರಲಿಲ್ಲ. ಲಕ್ಷ್ಮಣನು ಸೀತೆಯನ್ನು ಅಷ್ಟು ಮರ್ಯಾದೆಯಿಂದ ಕಾಣುತ್ತಿದ್ದನು. ಅಂಥ ಲಕ್ಷ್ಮಣನಿಗೆ ಸೀತೆಯು ಆತನ ಚಾರಿತ್ರ್ಯದ ಬಗ್ಗೆ ವೃಥಾ ಆರೋಪವನ್ನು ಮಾಡಿದಾಗ ಅವನು ಬಹಳ ವ್ಯಥಿತನಾದನು. ಹೀಗಿದ್ದರೂ ನಂತರದ ಸೀತಾಶೋಧದ ಕಾರ್ಯಕ್ಕಾಗಿ ಇವನು ತನ್ನ ಪ್ರಾಣಗಳನ್ನು ಮುಡಿಪಾಗಿಟ್ಟು ಶ್ರಮಿಸಿದನು. ಲಕ್ಷ್ಮಣನು ಆಗಾಗ ಶ್ರೀರಾಮನಿಗೆ ಸಲಹೆ ನೀಡುತ್ತಿದ್ದನು. ಲಕ್ಷ್ಮಣನು ಶ್ರೀರಾಮನಿಗೆ ಬಂದ ಕೋಪವನ್ನು ಶಾಂತಗೊಳಿಸಿದ್ದನ್ನು ಕಂಡು ಅವನ ಬುದ್ಧಿವಂತಿಕೆಯೂ, ನಿಜವಾದ ಶಾಂತವೃತ್ತಿಯೂ ಕಂಡುಬರುತ್ತದೆ. ಲಕ್ಷ್ಮಣನು ಬಲು ಚಾಣಾಕ್ಷನಾಗಿದ್ದನು. 'ಕಾಂಚನಮೃಗ'ವೆಂದರೆ ಒಬ್ಬ ಮಾಯಾವೀ ರಾಕ್ಷಸನೇ ಇರಬೇಕೆಂದು ಆತನು ಊಹಿಸಿ ಶ್ರೀರಾಮನನ್ನು ಎಚ್ಚರಿಸಿದ್ದನು.

ಮೇಘನಾದನು ಲಕ್ಷ್ಮಣನ ಮೇಲೆ ಶಕ್ತಿ-ಅಸ್ತ್ರವನ್ನು ಬಳಸುತ್ತಲೆ ಅವನು ಮೂರ್ಛೆಹೋದನು. ಹನುಮಾನನು ತಂದ ಔಷಧಿಯಿಂದ ಈತನ ಪ್ರಜ್ಞೆ ಮರಳಿತು. ಲಕ್ಷ್ಮಣನು ತನಗೆ ಸಕಾಲಕ್ಕೆ ಕೊಡುತ್ತಿದ್ದ ಸಲಹೆಗಳು 'ಪಿತನ ಸಲಹೆಗೆ ಸಮವಾಗಿವೆ' ಎಂದು ಶ್ರೀರಾಮನು ಎಂದುಕೊಳ್ಳುತ್ತಿದ್ದನು. ಶ್ರೀರಾಮನು ಬಹಳೇ ಬಿಕ್ಕಟ್ಟಿನ, ಕಠೋರಕಾರ್ಯಗಳನ್ನು ಲಕ್ಷ್ಮಣನಿಗೆ ಒಪ್ಪಿಸುತ್ತಿದ್ದನು. ಲಕ್ಷ್ಮಣನಿಗೆ ಅವು ಸರಿ ಎನಿಸದೆ ಹೋದಾಗಲೂ ಕೇವಲ ಶ್ರೀರಾಮನ ಆಜ್ಞೆ ಎಂದು ಶಿರಸಾವಹಿಸಿ ಆ ಕಾರ್ಯಗಳನ್ನು ನೆರವೇರಿಸಿದನು. ಗರ್ಭವತಿಯಾಗಿದ್ದ ಸೀತೆಯನ್ನು ವನದಲ್ಲಿ ಬಿಟ್ಟುಬರುವ ಕಠಿಣಕಾರ್ಯವನ್ನು ಇವನೇ ಮಾಡಬೇಕಾಯಿತು. ಶ್ರೀರಾಮ ಹಾಗೂ ಕಾಲ ಇವರಲ್ಲಿ ಏಕಾಂತದ ಮಾತು ನಡೆದಾಗ ದುರ್ವಾಸಮುನಿಯು ರಾಮನನ್ನು ತಕ್ಷಣ ಕಾಣಬೇಕೆಂದು ಕೋರಿ, ಅದನ್ನು ಪೂರೈಸದೇ ಇದ್ದರೆ ಶಾಪವನ್ನು ಕೊಡುವ ಬೆದರಿಕೆಯನ್ನು ಲಕ್ಷ್ಮಣನಿಗೆ ಹಾಕಿದನು. ಆಗ ಲಕ್ಷ್ಮಣನು ಪ್ರತ್ಯಕ್ಷ ತನ್ನ ಮೃತ್ಯುವನ್ನೇ ಎದುರುಗೊಂಡು, ಕುಲದ ಸಂಹಾರವನ್ನು ತಡೆದನು. ಅವನ ತ್ಯಾಗವು ಅತುಲನೀಯವಾಗಿದೆ. ಲಕ್ಷ್ಮಣನು ಮಿತಭಾಷಿಯೂ ಶಾಂತಸ್ವಭಾವದವನೂ ಆಗಿದ್ದನು ; ಆದರೆ ಪ್ರಸಂಗಾನುಸಾರ ಒಮ್ಮೆಲೇ ರೊಚ್ಚಿಗೇಳುತ್ತಿದ್ದನು. ಅವನು ತ್ಯಾಗಮೂರ್ತಿಯೂ ಶುದ್ಧಚಾರಿತ್ರ್ಯದವನೂ ಆಗಿದ್ದನು.

### ೧೧೩. ಲವಣ

ಲವಣನು ಮಧು ಹಾಗೂ ಕುಂಭೀನಸಿ ಇವರ ಪುತ್ರನಾಗಿದ್ದನು. ಚಿಕ್ಕಂದಿನಿಂದ ಈತ ಪಾಪಾಚಾರಣನಾಗಿದ್ದನು. ಮಧುದೈತ್ಯನು ಶಂಕರನ ವರದಿಂದ ಒಂದು ತ್ರಿಶೂಲವನ್ನು ಪಡೆದಿದ್ದನು. ಅದು ತನ್ನ ವಂಶದಲ್ಲಿಯೇ ಯಾವಾಗಲೂ ಉಳಿಯಬಹುದೆಂಬ ಇಚ್ಛೆ ಮಧುದೈತ್ಯನದಾಗಿತ್ತು. ಶಂಕರನು 'ಅದು ಕೇವಲ ಒಬ್ಬ ಮಗನ ಜೀವಿತ ಮಾತ್ರಕ್ಕೆ ಆತನ ಕೈಯಲ್ಲಿ ಉಳಿಯುವದು ; ಮತ್ತು ಅದು ಕೈಯಲ್ಲಿರುವವರೆಗೆ ಯಾರೂ ಆತನನ್ನು ವಧಿಸಲಾರರು !' ಎಂದು ಹೇಳಿದ್ದನು. ಈ ಶೂಲವು ತಂದೆಯಿಂದ ಲವಣನಿಗೆ ದೊರೆಯಿತು. ಈ ಶೂಲವು ಕೈಗೆ ಬಂದನಂತರ ಲವಣನು ಉನ್ಮತ್ತನಾದನು. ಶ್ರೀರಾಮನು ಶತ್ರುಘ್ನನಿಂದ ಈತನ ವಧೆಯನ್ನು ಮಾಡಿಸಿದನು. ಶತ್ರುಘ್ನನು ಲವಣನ ಬಳಿ ಶೂಲವಿರದೇ ಇದ್ದಾಗ ಈತನನ್ನು ವಧಿಸಿದನು.

### ೧೧೪. ವರುಣ

ಈತನು ಒಬ್ಬ ಮಂತ್ರದ್ರಷ್ಟಾರನಾಗಿದ್ದನು. ಈತನು ಅದಿತಿಯ ಮಗ. ಇವನು ಪಶ್ಚಿಮ ದಿಕ್ಕಿನ, ನಾಗಲೋಕದ ಮತ್ತು ಜಲದ ಅಧಿಪತಿಯಾಗಿದ್ದನು. ವಾರುಣಿ ಅಥವಾ ಗೌರಿ ಈತನ ಹೆಂಡತಿಯಾಗಿದ್ದು 'ಈತನಿಗೆ 'ಗೋ' ಎಂಬ ಮಗನಿದ್ದನು. ಸುನಾಭ ಎಂಬಾತನು ಈತನ ಮಂತ್ರಿಯಾಗಿದ್ದನು. ಶುಕ್ರಾಚಾರ್ಯನ ಮಗಳಾದ ಜ್ಯೇಷ್ಠಾ ಎಂಬಾಕೆ ಈತನ ದ್ವಿತೀಯ ಭಾರ್ಯೆ. ಈಕೆಯಿಂದ ಬಲ, ಸುರಾ, ಅಧರ್ಮ, ಪುಷ್ಕರ, ಬಂದಿನ ಎಂಬ ಪುತ್ರರಾದರು. ಸೋಮಕನ್ಯೆಯಾದ ಭದ್ರಾ ಇವಳೊಡನೆ ವರುಣನ ವಿವಾಹವಾಗುವದಿತ್ತು ;

ಆದರೆ ಅವಳ ವಿವಾಹವು ಇನ್ನೊಬ್ಬನೊಡನೆ ನಡೆಯಿತು. ಆಗ ವರುಣನು ಇವಳನ್ನು ಓಡಿಸಿತಂದನು. ದೇವತೆಗಳು ಈತನಿಗೆ ಜಲಾಧಿಪತಿಯೆಂದು ಅಭಿಷೇಕಮಾಡಿದರು. ವರುಣನು ಶ್ರೀರಾಮನಿಗೆ ರಾವಣನ ಬಂಧನದಿಂದ ಮುಕ್ತಳಾಗಿ ಬಂದ ಸೀತೆ ನಿರ್ದೋಷಿಯಾಗಿದ್ದ ಬಗ್ಗೆ ಮನವರಿಕೆ ಮಾಡಿಕೊಟ್ಟನು. ಈತನು ರುದ್ರನ ಯಜ್ಞದಿಂದ ನಿರ್ಮಾಣಗೊಂಡ ಅಂಗೀರಸನನ್ನು ಪುತ್ರನೆಂದು ಸ್ವೀಕರಿಸಿದನು. ಮಾನಸೋತ್ತರ ಪರ್ವತದ ಹಿಂಭಾಗದಲ್ಲಿದ್ದ ನಿಮ್ಲೋಚನಿ ನಗರವು ಈತನದಾಗಿತ್ತು. ಈತನು ಓರ್ವ ಆದಿತ್ಯದೇವತೆ.

ಶಾಪ ಕ್ರಮಸಂಖ್ಯೆ ೫೨, ಮಿತ್ರ > ಊರ್ವಶಿ ಪರಿಶೀಲಿಸಿರಿ.

## ೧೧೫. ವಸಿಷ್ಠ

ಪ್ರಾಚೀನ ಗ್ರಂಥಗಳಲ್ಲಿ 'ವಸಿಷ್ಠ' ಎಂಬ ಹೆಸರಿನಲ್ಲಿ ಕಂಡುಬರುವ ಎಲ್ಲ ಉಲ್ಲೇಖಗಳು ಒಂದೇ ವ್ಯಕ್ತಿಯ ಬಗ್ಗೆ ಇರಲಿಕ್ಕಿಲ್ಲ. ವಸಿಷ್ಠ ಹೆಸರಿನ ಅನೇಕರಿರಲು ಸಾಧ್ಯ. ವಸಿಷ್ಠನು ಋಗ್ವೇದದ ಏಳನೆಯ ಮಂಡಲದ ದ್ರಷ್ಟಾರನಿದ್ದು ಇವನು ಸೂಕ್ತವನ್ನು ರಚಿಸಿದನೆಂಬ ಉಲ್ಲೇಖ ಮಂತ್ರದಲ್ಲಿ ನಿರ್ದೇಶಿತವಾಗಿದೆ. ಊರ್ವಶಿಯ ಕಾರಣದಿಂದ ಮಿತ್ರ-ವರುಣರ ವೀರ್ಯವು ಕುಂಭ ಅಥವಾ ಕಮಲದಲ್ಲಿ ಬಿದ್ದುದರಿಂದ ಈತನು ಜನ್ಮತಾಳಿದನು. ವಸಿಷ್ಠ-ವಿಶ್ವಾಮಿತ್ರರ ವಾದವು ಋಗ್ವೇದದಲ್ಲಿಯೂ ಕಂಡುಬರುತ್ತದೆ. ಈತನು ಸುದಾಸನ ಪುರೋಹಿತನಾಗಿದ್ದನು. ಆದ್ದರಿಂದಲೇ ಇವರಿಬ್ಬರಲ್ಲಿ ವೈಮನಸ್ಯವು ಉಂಟಾಯಿತು. ಸ್ವಾಯಂಭುವ ಮನ್ವಂತರದ ಬ್ರಹ್ಮದೇವನ ಹತ್ತು ಮಾನಸಪುತ್ರರಲ್ಲಿ ವಸಿಷ್ಠನು ಒಬ್ಬನಾಗಿದ್ದಾನೆ. ಕರ್ದಮಪ್ರಜಾಪತಿಯ ಮಗಳಾದ ಅರುಂಧತಿಯು ಇವನ ಓರ್ವ ಭಾರ್ಯೆಯಾಗಿದ್ದಾಳೆ. ಇನ್ನೋರ್ವ ಭಾರ್ಯೆಯೆಂದರೆ ದಕ್ಷಕನ್ಯೆಯಾದ ಊರ್ಜಾ. ಬ್ರಹ್ಮದೇವನ ಪ್ರಾಣವಾಯುವಿನಿಂದ ಈತನ ಉತ್ಪತ್ತಿ ಆಯಿತು. ವಸಿಷ್ಠನು ತನ್ನ ಆಶ್ರಮದಲ್ಲಿದ್ದ ಕಾಮಧೇನುವಿನ ನೆರವಿನಿಂದ ವಿಶ್ವಾಮಿತ್ರನನ್ನು ಬಹಳ ಉತ್ತಮವಾಗಿ ಉಪಚರಿಸಿದನು. ಆಗ ವಿಶ್ವಾಮಿತ್ರನು 'ಆ ಕಾಮಧೇನುವನ್ನು ಕೊಡು !' ಎಂದು ವಸಿಷ್ಠನನ್ನು ಬೇಡಿದನು. ವಸಿಷ್ಠನು ಒಪ್ಪಲಿಲ್ಲವಾದ್ದರಿಂದ ವಿಶ್ವಾಮಿತ್ರನು ಆ ಕಾಮಧೇನುವನ್ನು ಬಲಾತ್ಕಾರದಿಂದ ಎಳೆದೊಯ್ಯಲು ಯತ್ನಿಸಿದನು. ಆಗ ಕಾಮಧೇನುವಿನ ದೇಹದಿಂದ ಶಕ, ಪಲ್ಲವಾದಿ ಮ್ಲೇಚ್ಛರು ಉದ್ಭವಿಸಿದರು. ಅವರು ವಿಶ್ವಾಮಿತ್ರನನ್ನು ಸೋಲಿಸಿದರು. ಬ್ರಹ್ಮತೇಜವು ಕ್ಷಾತ್ರತೇಜಕ್ಕಿಂತ ಶ್ರೇಷ್ಠವೆಂಬುದು ಖಚಿತವಾಯಿತು. ವಿಶ್ವಾಮಿತ್ರನು ಆ ಬ್ರಹ್ಮತೇಜವನ್ನು ಪಡೆಯಲು ಪ್ರಯತ್ನಪಟ್ಟನು. ಅಷ್ಟೇ ಅಲ್ಲದೆ ಅವನು ಪಡೆದ ಬ್ರಹ್ಮರ್ಷಿಪದಕ್ಕೆ ವಸಿಷ್ಠನಿಂದ ಮನ್ನಣೆ ದೊರಕಿತು. ಈತನು ವಸಿಷ್ಠಸ್ಮೃತಿ, ವಸಿಷ್ಠತಂತ್ರ, ವಸಿಷ್ಠಪುರಾಣಗಳನ್ನು ರಚಿಸಿರುವನೆಂದು ಕಂಡುಬರುತ್ತದೆ.

ವಸಿಷ್ಠನು ಇಕ್ಷ್ವಾಕುಕುಲದ ಪುರೋಹಿತನಾಗಿದ್ದನು. ಮಾರೀಚ ಮತ್ತು ಸುಬಾಹು ಇವರಿಂದ ವಿಶ್ವಾಮಿತ್ರನ ಯಜ್ಞಕ್ಕೆ ಉಪಟಳವಾಗುತ್ತಿತ್ತು. ಅದನ್ನು ತಡೆಯಲು ವಿಶ್ವಾಮಿತ್ರನೊಡನೆ ಶ್ರೀರಾಮನನ್ನು ಕಳುಹಿಸಬೇಕೆಂದು ವಸಿಷ್ಠನು ದಶರಥನಿಗೆ ಸಲಹೆಯನ್ನು ಕೊಟ್ಟಿದ್ದನು. ಈತನು ದೇಹಸಹಿತ ಸ್ವರ್ಗವನ್ನು ಸೇರಬಯಸುವ ತ್ರಿಶಂಕುವಿನ ಯಜ್ಞಕ್ಕೆ ಹೋಗಲು ನಿರಾಕರಿಸಿದನು. ವಸಿಷ್ಠನೇ ಶ್ರೀರಾಮನಿಗೆ ಯೌವರಾಜ್ಯಾಭಿಷೇಕದ ಪೂರ್ವದೀಕ್ಷೆಯನ್ನು ಕೊಟ್ಟನು. ದಶರಥನ ಮರಣದನಂತರ ಭರತನನ್ನು ಕರೆಯಿಸಿ ಆತನಿಂದ ಅಂತ್ಯಕ್ರಿಯೆಗಳನ್ನು ಮಾಡಿಸಿದನು. ಸೀತೆ ವನವಾಸಕ್ಕೆ ಹೊರಟಾಗ ಆಕೆ ನಾರಿನ ಬಟ್ಟೆಗಳನ್ನು ಧರಿಸಬೇಕೆಂದು ಕೈಕೇಯಿಯ ಆಗ್ರಹವಿತ್ತು. ಆಗ ವಸಿಷ್ಠನು 'ಬೇಡಿಕೊಂಡ ವರದಲ್ಲಿ ಸೀತೆಗೆ ವನವಾಸವಿಲ್ಲ' ಎಂದು ನಿಖರವಾಗಿ ಹೇಳಿದನು. ವಸಿಷ್ಠನು ಶ್ರೀರಾಮನನ್ನು ಕಾಣಲು ಭರತನೊಡನೆ ಹೋಗಿದ್ದನು. ವಸಿಷ್ಠನು ನಿಮಿರಾಜ ಮತ್ತು ಸೌದಾಸ ರಾಜರಿಗೆ ಶಾಪಗಳನ್ನು ಕೊಟ್ಟಿದ್ದಾನೆ. ನಿಮಿಯ ಪ್ರತಿಶಾಪವು ಈತನಿಗೆ ತುಂಬ ತೊಂದರೆಮಾಡಿತು. ದುರ್ವಾಸ ಋಷಿಯು ಒಂದು ಸಂವತ್ಸರಕಾಲ ವಸಿಷ್ಠನ ಆಶ್ರಮದಲ್ಲಿ ವಾಸವಿದ್ದನು. ವಸಿಷ್ಠನು ದಶರಥನ ಕುಲದ ಎಲ್ಲ ಧಾರ್ಮಿಕ ವಿಧಿಗಳನ್ನು ನೆರವೇರಿಸಿದನು. ಶ್ರೀರಾಮನ ಮಹಾಪ್ರಸ್ಥಾನಕಾಲದಲ್ಲಿಯೂ ಧಾರ್ಮಿಕ ವಿಧಿಗಳನ್ನು ಮಾಡಿದವನು ವಸಿಷ್ಠನೇ.

ವಸಿಷ್ಠನಿಗೆ ಮಹೋದಯ ಮುಂತಾದ ನೂರು ಪುತ್ರರಿದ್ದರು. ಯಜ್ಞದ ಆಮಂತ್ರಣವನ್ನು ನಿರಾಕರಿಸಿದ್ದಕ್ಕಾಗಿ ವಿಶ್ವಾಮಿತ್ರನು ಅವರೆಲ್ಲರಿಗೂ ಶಾಪಕೊಟ್ಟನು.

### ೧೧೬. ವಸಿಷ್ಠಪುತ್ರ ಮಹೋದಯ

ವಸಿಷ್ಠನಿಗೆ ನೂರು ಗಂಡುಮಕ್ಕಳಿದ್ದರು. ಅವರೆಲ್ಲರೂ ಮಹಾತಪಸ್ವಿಗಳಾಗಿದ್ದರು. ವಿಶ್ವಾಮಿತ್ರನು ಅವರೆಲ್ಲರಿಗೂ ಶಾಪವನ್ನು ಕೊಟ್ಟಿದ್ದನು. ಅವರಲ್ಲಿ ಮಹೋದಯನೊಬ್ಬನಾಗಿದ್ದನು.

ಶಾಪ ಕ್ರಮಸಂಖ್ಯೆ ೧೫, ವಿಶ್ವಾಮಿತ್ರ > ವಸಿಷ್ಠಪುತ್ರ ಮಹೋದಯ ಪರಿಶೀಲಿಸಿ.

### ೧೧೭. ವಾಯು

ಹನುಮಾನನು ವಾಯು ಮತ್ತು ಅಂಜನಿಯಿಂದ ಹುಟ್ಟಿದನು. ವಾಯುವು ಕುಶನಾಭನ ನೂರು ಕನ್ಯೆಯರಲ್ಲಿ ಅನುರಕ್ತನಾಗಿ ತನ್ನ ಪತ್ನಿಯಾಗಲು ಅವರನ್ನು ವಿನಂತಿಸಿಕೊಂಡನು. ಆ ಕನ್ಯೆಯರು ನಿರಾಕರಿಸಿದಾಗ ವಾಯುವು ಅವರ ಅಂಗಭಂಗವನ್ನು ಮಾಡಿ ಅವರನ್ನು ಕುಬ್ಜೆಯರನ್ನಾಗಿ ಮಾಡಿದನು. ಇಂದ್ರನ ವಜ್ರದಿಂದ ಹನುಮಾನನ 'ಹನು' ಭಗ್ನವಾದಾಗ ವಾಯುವು ಕೋಪಗೊಂಡು ತನ್ನ ತ್ರೈಲೋಕ್ಯಸಂಚಾರವನ್ನು ನಿಲ್ಲಿಸಿದನು. ಆಗ ಎಲ್ಲ ಪ್ರಾಣಿಮಾತ್ರರಿಗೆ ಉಸಿರಾಟ ಅಸಾಧ್ಯವಾಯಿತು. ದೇವತೆಗಳು ಈ ಸಂಗತಿಯನ್ನು ಬ್ರಹ್ಮದೇವನಿಗೆ ತಿಳಿಸಿದಾಗ ಆತನು ವಾಯುವನ್ನು ಸಂತೈಸಿದನು. ಗಾಯಗೊಂಡ ಹನುಮಾನನ ಮೈಮೇಲೆ ಕೈಯಾಡಿಸಿ ಅವನನ್ನು ಗುಣಪಡಿಸಿದನು. ಅಷ್ಟೇ ಅಲ್ಲದೆ ಸ್ವತಃ ವಾಯು ಹನುಮಂತನಿಗೆ ಅನೇಕ ವರಗಳನ್ನು ಕೊಟ್ಟನಲ್ಲದೆ ಅನ್ಯದೇವತೆಗಳಿಂದ ಕೊಡಿಸಿದನು. ಹೀಗಾದನಂತರವೇ ವಾಯು ಮೊದಲಿನಂತೆ ತನ್ನ ಸಂಚಾರವನ್ನು ಪ್ರಾರಂಭಿಸಿದನು.

### ೧೧೮. ವಾಲಿ

ಋಷಿಪತ್ನಿಯಾದ ವಿರಜೆ ಮತ್ತು ಇಂದ್ರ ಇವರ ಪುತ್ರನೇ ವಾಲಿ. ಈತನ ಜನ್ಮದ ಕತೆ ಬಲುವಿಚಿತ್ರ. ಒಮ್ಮೆ ಋಕ್ಷರಜಸ ಎಂಬ ವಾನರನು ಬಾಯಾರಿಕೆಯನ್ನು ತಣಿಸಲು ಒಂದು ಸರೋವರದ ಬಳಿ ಬಂದು, ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ಕಂಡು, ತನ್ನ ಶತ್ರು ಅಲ್ಲಿರುವನೆಂದು ಭಾವಿಸಿ, ಆ ಸರೋವರದಲ್ಲಿ ಧುಮುಕಿದನು. ಅವನು ನೀರಿನ ಆಚೆ ಬಂದಾಗ ಮೊದಲಿನ ವಾನರನಾಗಿ ಉಳಿಯದೇ ಓರ್ವ ಸ್ತ್ರೀಯಾಗಿದ್ದನು. ಅದೇ ಕಾಲಕ್ಕೆ ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ಸೂರ್ಯ ಮತ್ತು ಇಂದ್ರರು ಈ ಸ್ತ್ರೀಯನ್ನು ಕಂಡು ಕಾಮಪರವಶರಾದರು. ಕಾಮೋದ್ರೇಕದಿಂದ ಇಂದ್ರನ ವೀರ್ಯವು ಆ ಸ್ತ್ರೀಯ ತಲೆಯ ಮೇಲೆ ಬಿದ್ದಿತು. ತಲೆಗೂದಲಿನ ಮೇಲೆ ಬಿದ್ದ ವೀರ್ಯದಿಂದ ವಾಲಿಯೂ ಮತ್ತು ಗ್ರೀವದ (ಕತ್ತಿನ) ಮೇಲೆ ಬಿದ್ದ ವೀರ್ಯದಿಂದ ಸುಗ್ರೀವನೂ ಜನ್ಮಹೊಂದಿದರು. ಅಂದಿನ ರಾತ್ರಿ ಕಳೆದನಂತರ ಆ ಸ್ತ್ರೀಯು ಮೊದಲಿನಂತೆ ವಾನರಳಾದಳು. ಆನಂದರಾಮಾಯಣದಲ್ಲಿ ಶ್ರೀರಾಮನು ವಾಲಿಯನ್ನು ವಧಿಸಿದ ಕಥೆ ಮತ್ತು ವಾಲಿ ಹಾಗೂ ಸರ್ಪ ಇವರು ಪರಸ್ಪರರಿಗೆ ಕೊಟ್ಟ ಶಾಪಗಳ ಕಥೆಗಳಿವೆ. ಪಂಚಮೇಢ್ರ ಎಂಬ ರಾಕ್ಷಸನು ವಾಲಿಯನ್ನು ನುಂಗಿದಾಗ ವೀರಭದ್ರನು ಆ ರಾಕ್ಷಸನನ್ನು ಸೀಳಿ ವಾಲಿಯ ಬಿಡುಗಡೆ ಮಾಡಿದನು. ವಾಲಿ ತನ್ನ ಸಾಮರ್ಥ್ಯದಿಂದ ರಾವಣನನ್ನು ಬೆರಗುಗೊಳಿಸಿದನು ; ಅವನೊತನೆ ಸ್ನೇಹವನ್ನು ಬೆಳೆಸಿದನು. ತಾರ ಎಂಬಾತನು ಈತನ ಅಮಾತ್ಯನಾಗಿದ್ದನು. ತಾರನ ಕನ್ಯೆಯಾದ 'ತಾರಾ' ಎಂಬಾಕೆಯು ವಾಲಿಯ ಪತ್ನಿಯಾದಳು. ಓರ್ವ ಸ್ತ್ರೀಯ ಕಾರಣದಿಂದ ದುಂದುಭಿಯ ಪುತ್ರನಾಗಿದ್ದ ಮಾಯಾವಿ ಮತ್ತು ವಾಲಿ ಇವರಲ್ಲಿ ವೈರತ್ವವುಂಟಾಯಿತು. ಆಗ ವಾಲಿಯು ಮಾಯಾವಿಯನ್ನು ಕೊಂದನು. ಈ ರಾಕ್ಷಸನನ್ನು ಕೊಲ್ಲಲೆಂದು ವಾಲಿ ಒಂದು ಗುಹೆಯಲ್ಲಿ ನುಗ್ಗಿದನು. ಆಗ ಸುಗ್ರೀವನು ಗುಹೆಯ ದ್ವಾರರಕ್ಷಣೆಯನ್ನು ಮಾಡುತ್ತಿದ್ದನು. ವಾಲಿಯು ಬಹಳ ದಿನಗಳಾದರೂ ಗುಹೆಯ ಹೊರಗೆ ಮರಳಲಿಲ್ಲ. ಅದೇ ಕಾಲಕ್ಕೆ ಗುಹೆಯಿಂದ ರಕ್ತದ ಪ್ರವಾಹ ಬರಲಾರಂಭಿಸಿತು. ಇದನ್ನು ಕಂಡು ವಾಲಿಯ ವಧೆ ರಾಕ್ಷಸನಿಂದಾಗಿರಬಹುದು ಎಂದು ಭಾವಿಸಿ ಸುಗ್ರೀವನು ಒಂದು

ಕಲ್ಲುಬಂಡೆಯನ್ನು ಗುಹೆಯ ದ್ವಾರಕ್ಕಿಟ್ಟು ಅದನ್ನು ಮುಚ್ಚಿಬಿಟ್ಟನು. ನಂತರ ಸುಗ್ರೀವನು ವಾಲಿಯ ಉತ್ತರಕ್ರಿಯೆಗಳನ್ನು ಮುಗಿಸಿ ಕಿಷ್ಕಿಂಧೆಗೆ ಬಂದನು. ಮಂತ್ರಿಗಳ ಆಗ್ರಹದ ಮೇರೆಗೆ, ಸುಗ್ರೀವನು ಸ್ವಂತದ ಇಚ್ಛೆಯ ವಿರುದ್ಧವಾಗಿ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಇತ್ತ ವಾಲಿಯು ಆ ರಾಕ್ಷಸನನ್ನು ಕೊಂದು ಮರಳಿ ಬಂದನು. ಸುಗ್ರೀವನು ರಾಜನಾದದ್ದು ವಾಲಿಗೆ ಎಳ್ಳಷ್ಟೂ ಹಿಡಿಸದೆ ಅವನು ಕೋಪಗೊಂಡನು. ಸುಗ್ರೀವನು ನಿಜಸಂಗತಿಯನ್ನು ತಿಳಿಹೇಳಲು ಎಷ್ಟೇ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ವಾಲಿಯು ಸುಗ್ರೀವನ ಪತ್ನಿಯಾದ ರುಮೆಯನ್ನು ಅಪಹರಿಸಿ ಸುಗ್ರೀವನನ್ನು ರಾಜ್ಯದಾಚೆ ತಳ್ಳಿಬಿಟ್ಟನು. ಹೀಗಾಗಿ ಸುಗ್ರೀವನು ವಾಲಿಯ ಭಯದಿಂದ ಋಷ್ಯಮೂಕ ಪರ್ವತದ ಮೇಲೆ ಹೋಗಿ ಇದ್ದುಬಿಟ್ಟನು. ಶ್ರೀರಾಮ-ಸುಗ್ರೀವರಲ್ಲಿ ಮಿತ್ರತ್ವವು ಉಂಟಾದನಂತರ ಶ್ರೀರಾಮನು ವಾಲಿಯನ್ನು ವಧಿಸಲು ಸಿದ್ಧನಾದನು. ಸುಗ್ರೀವನಿಗೆ ಶ್ರೀರಾಮನ ಬೆಂಬಲವಿದ್ದುದರಿಂದ ಆತನೊಡನೆ ಯುದ್ಧಮಾಡಬಾರದೆಂದು ತಾರಾ ಗಂಡನಾದ ವಾಲಿಗೆ ಕಳಕಳಿಯಿಂದ ಹೇಳಿದಳು. ವಾಲಿ ಅದಕ್ಕೆ ಕಿವಿಗೊಡಲಿಲ್ಲ. ಶ್ರೀರಾಮನು ವಾಲಿಯ ವಕ್ಷಃಸ್ಥಲಕ್ಕೆ ಶರಾಘಾತಮಾಡಿ ಆತನನ್ನು ಭೂಮಿಗೆ ಉರುಳಿಸಿದನು. ಶ್ರೀರಾಮನು ತನ್ನನ್ನು ಅಧರ್ಮದಿಂದ ವಧಿಸಿದನೆಂದು ವಾಲಿಯು ಶ್ರೀರಾಮನನ್ನು ನಿಂದಿಸಿದನು. ಆಗ ಶ್ರೀರಾಮನು ತನ್ನ ವರ್ತನೆಯು ಧರ್ಮಾನುಸಾರವೇ ಇತ್ತೆಂಬುದನ್ನು ತಿಳಿಸಿಹೇಳಿದನು. ವಾಲಿಯು ಶ್ರೀರಾಮನ ಕ್ಷಮೆ ಕೇಳಿದನು. ಅಂಗದನನ್ನು ರಕ್ಷಿಸಲು ಪ್ರಾರ್ಥಿಸಿದನು. ಸುಗ್ರೀವನು ಅಂಗದನನ್ನು ತನ್ನ ಸ್ವಂತ ಮಗನಂತೆ ನೋಡಿಕೊಂಡು ವಾಲಿಯ ಅಂತಿಮ ಇಚ್ಛೆಯನ್ನು ಪೂರ್ತಿಗೊಳಿಸಿದನು.

## ೧೧೯. ವಾಲ್ಮೀಕಿ

ಈತನು ಸಂಸ್ಕೃತಭಾಷೆಯ ಆದಿಕವಿ. ಈತನ ಚರಿತ್ರೆ ನಿಜಾರ್ಥದಲ್ಲಿ ಉಪಲಬ್ಧವಿಲ್ಲ. ಪ್ರಾಚೀನ ಸಾಹಿತ್ಯದಲ್ಲಿ ಭಾರ್ಗವವಾಲ್ಮೀಕಿ, ದಸ್ಯುವಾಲ್ಮೀಕಿ ಮತ್ತು ಕವಿವಾಲ್ಮೀಕಿ ಈ ರೀತಿ ಮೂರು ವಾಲ್ಮೀಕಿಗಳ ಉಲ್ಲೇಖ ಬರುತ್ತದೆ. ಇವರ ಕಥೆಗಳೂ ಭಿನ್ನಭಿನ್ನ.

ಈತನು ಒಬ್ಬ ಮಹರ್ಷಿ. ಸುಮತಿ ಎಂಬ ಬ್ರಾಹ್ಮಣನ ಮಗನಾಗಿದ್ದನು. ಇವನು ಚಿಕ್ಕವನಿದ್ದಾಗಲೇ ಈತನ ತಾಯಿತಂದೆ ಈತನನ್ನು ಒಬ್ಬ ಬೇಡನ ಬಳಿ ಬಿಟ್ಟು ತಾವು ತಪಸ್ಸಿಗೆಂದು ಹೊರಟುಹೋದರು. ಮುಂದೆ ಈ ಮಗುವು ತನ್ನ ಬ್ರಾಹ್ಮಣತ್ವವನ್ನು ಮರೆತುಬಿಟ್ಟಿತು. ದೊಡ್ಡವನಾದನಂತರ ಇವನು ಕಳ್ಳತನ ಮಾಡಲಾರಂಭಿಸಿದನು. ಜನರು ಇವನನ್ನು ಬೆಸ್ತರವನೆಂದು ತಿಳಿದರು. ಒಮ್ಮೆ ಕೆಲವು ಬ್ರಹ್ಮರ್ಷಿಗಳು ಇವನ ವಾಸಸ್ಥಾನದ ಬಳಿಯಿಂದ ಹೋಗುತ್ತಿದ್ದಾಗ ಇವನು ಅವರ ಲೂಟಿಯನ್ನಾರಂಭಿಸಿದನು. ಆಗ ಆ ಋಷಿಗಳು ಇವನಿಗೆ ಉಪದೇಶವನ್ನು ಮಾಡಿದರು. ಅಂದಿನಿಂದ ವಾಲ್ಮೀಕಿಗೆ ಜ್ಞಾನೋದಯವಾಯಿತು. ಆ ಋಷಿಗಳು ಹೇಳಿಕೊಟ್ಟ ಮಂತ್ರವನ್ನು ಜಪಿಸಹತ್ತಿದನು. ಬಹುಕಾಲದವರೆಗೆ ಒಂದೇ ಸ್ಥಳದಲ್ಲಿ ಕುಳಿತು ತಪಸ್ಸನ್ನು ಕೈಕೊಂಡ ಈತನ ಸುತ್ತಲೂ ಹುತ್ತವು ಬೆಳೆಯಿತು. ನಂತರ ಆ ಋಷಿಗಳು ಇವನ ದೇಹದ ಮೇಲೆ ಬೆಳೆದ ಹುತ್ತವನ್ನು ತೆಗೆದರು, 'ವಾಲ್ಮೀಕಿ' ಎಂಬ ಹೆಸರಿಟ್ಟರು ಎಂಬ ಕಥೆ ಸ್ಕಂದಪುರಾಣದಲ್ಲಿದೆ.

ಇನ್ನೊಂದು ಕಥೆ ಕೂಡ ಇದೇ ಸ್ಕಂದಪುರಾಣದಲ್ಲಿದೆ. ಪೂರ್ವಕಾಲದಲ್ಲಿ ಕಣು ಎಂಬ ಬ್ರಾಹ್ಮಣನಿದ್ದನು. ಆತನು ಬಹುಸಮಯದವರೆಗೆ ತಪಸ್ಸನ್ನಾಚರಿಸಿದನು. ತಪಸ್ಸು ಮುಗಿದನಂತರ ಅವನಿಗೆ ಆತನ ಹೆಂಡತಿಯ ಸ್ಮರಣೆಯಾಗಿ ವೀರ್ಯಸ್ಖಲನವಾಯಿತು. ಓರ್ವ ವನಚರಿಯು ಅದನ್ನು ನುಂಗಿದಳು. ಅದರಿಂದ ಆಕೆಗೆ ಒಬ್ಬ ಮಗನು ಹುಟ್ಟಿದನು. ಆ ಮುನಿಗೆ ಮಹರ್ಷಿಗಳಿಂದ ಪ್ರಸಾದ ದೊರೆಯಿತು. ಆತನಿಗೆ ಬ್ರಾಹ್ಮಣತ್ವ ದೊರೆಯಿತು. ಆತನು ಮುಂದೆ ವಾಲ್ಮೀಕಿ ಎಂದು ಖ್ಯಾತಿಗೊಂಡನು. ತಮಸಾ ನದಿಯ ತೀರದಲ್ಲಿ ಆಶ್ರಮವನ್ನು ಸ್ಥಾಪಿಸಿ ಅಧ್ಯಾಪನವನ್ನು ಪ್ರಾರಂಭಿಸಿದನು. ಅವನ ಶಿಷ್ಯಪರಿವಾರವು ದೊಡ್ಡದಾಗಿತ್ತು. ಅವರಲ್ಲಿ ಭರದ್ವಾಜನು ಪ್ರಮುಖ ಶಿಷ್ಯನಾಗಿದ್ದನು. ಶ್ರೀರಾಮನು ಸೀತೆಯನ್ನು ತ್ಯಾಗಮಾಡಿದನಂತರ, ವಾಲ್ಮೀಕಿಯೇ ಸೀತೆಯನ್ನು ತನ್ನ ಆಶ್ರಮದಲ್ಲಿಟ್ಟುಕೊಂಡು ರಕ್ಷಿಸಿದನು. ಸೀತೆ ಆಗ ತುಂಬುಗರ್ಭಿಣಿಯಾಗಿದ್ದಳು. ಯಥಾಕಾಲದಲ್ಲಿ ಸೀತೆಯು ಲವ-ಕುಶ ಎಂಬ ಅವಳಿಮಕ್ಕಳನ್ನು ಹೆತ್ತಳು. ಆ ಮಕ್ಕಳ ಆರೈಕೆಯನ್ನು ಮಾಡಿ ಅವರನ್ನು

ಬೆಳೆಸಿ, ಅವರ ವಿದ್ಯಾಭ್ಯಾಸವನ್ನು ಪೂರೈಸಿದವನು ವಾಲ್ಮೀಕಿಯೇ. ಅವನು ಈ ಬಾಲಕರಿಂದ ವಾಲ್ಮೀಕಿರಚಿತ ರಾಮಾಯಣವನ್ನು ಇಂಪಾಗಿ ಹಾಡಿಸಿದನು. ವಾಲ್ಮೀಕಿಯು ಒಬ್ಬ ಋಷಿಯೊಡನೆ ಪಾಖಂಡವಾದ ಮಾಡಿದ್ದಕ್ಕಾಗಿ ಅವನಿಗೆ ಬ್ರಹ್ಮಹತ್ಯಾದೋಷವು ತಗುಲಿತು. ಅನಂತರ ಮಹಾದೇವನ ಉಪಾಸನೆಯಿಂದ ಅದರ ಪರಿಹಾರವಾಯಿತು.

ವಾಲ್ಮೀಕಿ ಋಷಿಯು ಶೂದ್ರನಾಗಿದ್ದು ಋಷಿಗಳ ಪ್ರಸಾದದಿಂದ ಅವನಿಗೆ ಬ್ರಾಹ್ಮಣತ್ವವು ದೊರಕಿತು. ಆತನ ಮೊದಲನೆಯ ಹೆಸರು 'ವಾಲ್ಮಿಕೆಸ್ತ'ನೆಂದಿತ್ತು. ಈ ರೀತಿಯ ಪ್ರಚಲಿತ ದಂತಕಥೆಗೆ ಆಧಾರವಿಲ್ಲ. ವಾಲ್ಮೀಕಿರಾಮಾಯಣದಲ್ಲಿ ಬಂದ ಎಲ್ಲೆಡೆಯ ಉಲ್ಲೇಖಗಳಲ್ಲಿ ಈತನು ವಿದ್ವಾನ್ ಬ್ರಾಹ್ಮಣನಿದ್ದನೆಂದು ನಮೂದಿಸಲಾಗಿದೆ. 'ಪ್ರಾಚೇತಸೋऽಹಂ ದಶಮಃ ಪುತ್ರೋ ರಾಘವನಂದನ' (ಉತ್ತರಕಾಂಡ / ೯೬-೧೮) ಈ ಶ್ಲೋಕದಲ್ಲಿ ವಾಲ್ಮೀಕಿ ತಾನಾಗಿಯೇ ಸ್ವಂತದ ಜನ್ಮದ ಕಥೆಯನ್ನು ಹೇಳಿದ್ದಾನೆ. ಶ್ರೀರಾಮನು ಹುಟ್ಟುವ ಮೊದಲೇ ಬ್ರಹ್ಮದೇವನ ವರದಿಂದ ಇವನಿಗೆ ಆತನ ಚರಿತ್ರೆಯನ್ನು ಬರೆಯುವದು ಸಾಧ್ಯವಾಯಿತೆಂಬ ನಂಬಿಕೆ ನಿರಾಧಾರವಾದುದು. ವಾಲ್ಮೀಕಿಯು ಶ್ರೀರಾಮನ ಸಮಕಾಲೀನನು ಇಲ್ಲವೆ ಅನಂತರದ ಕಾಲದವನಿರಬಹುದು.

'ಹೇ ಮಹರ್ಷಿಯೇ, ವರ್ತಮಾನ ಸ್ಥಿತಿಯಲ್ಲಿ ಯಾವನು ಈ ಭೂಲೋಕದಲ್ಲಿ ಬಹುಗುಣ ಸಂಪನ್ನನಾದವನು? ಶೂರವೀರನು, ಧರ್ಮರಹಸ್ಯವನ್ನು ಅರಿತವನು, ಕೃತಜ್ಞನು, ಸತ್ಯವಚನಿಯು, ಸ್ವೀಕರಿಸಿದ ವ್ರತವನ್ನು ಆಪತ್ಕಾಲದಲ್ಲಿಯೂ ಬಿಡದೇ ಧರ್ಮಕ್ಕಾಗಿ ಮುಂದುವರಿಸುವವನು, ಸದಾಚಾರಸಂಪನ್ನನು, ಪ್ರಾಣಿಮಾತ್ರರ ಹಿತಕ್ಕಾಗಿ ತತ್ಪರನಾಗಿರುವವನು, ತತ್ತ್ವವೇತ್ತನು, ಸಮರ್ಥನು, ದರ್ಶನಾನಂದವನ್ನು ಬೀರುವವನು, ಮನೋನಿಗ್ರಹಿ, ಕ್ರೋಧಾದಿಗಳನ್ನು ಸಂಯಮಿಸುವವನು, ತೇಜಃಪುಂಜನು, ಪರರ ಉತ್ಕರ್ಷದ ಬಗ್ಗೆ ಮತ್ಸರಭಾವವನ್ನು ತಾಳದವನು, ಯುದ್ಧಕಾಲದಲ್ಲಿ ಕ್ರೋಧಗೊಂಡಾಗ ದೇವತೆಗಳಿಗೂ ಭಯಂಕರನೆನಿಸುವ ಅಂಥ ಯಾವ ಪುರುಷನು ಈ ಭೂಲೋಕದಲ್ಲಿದ್ದಾನೆ?' ಎಂದು ವಾಲ್ಮೀಕಿಯು ನಾರದಋಷಿಯನ್ನು ಕೇಳಿದಾಗ ಅವನು ಸಂಕ್ಷಿಪ್ತದಲ್ಲಿ ಶ್ರೀರಾಮನ ಕಥೆಯನ್ನು ನಿರೂಪಿಸಿದನು. 'ನೀನು ನಾರದನಿಂದ ಕೇಳಿಕೊಂಡಂತೆ ಆ ಬುದ್ಧಿಪ್ರೇರಕನಾದ ಶ್ರೀರಾಮನ ವೃತ್ತಾಂತವನ್ನು ಬರೆ!' ಎಂದು ಬ್ರಹ್ಮದೇವನು ವಾಲ್ಮೀಕಿಗೆ ವಿಜ್ಞಾಪಿಸಿದನೆಂಬ ಸ್ಪಷ್ಟ ಉಲ್ಲೇಖ ವಾಲ್ಮೀಕಿರಾಮಾಯಣದಲ್ಲಿದೆ.

ಕ್ರಿ.ಶ.ಪೂ. ಮೊದಲನೆಯ ಶತಕದಿಂದಲೇ ವಾಲ್ಮೀಕಿಯು ದಶರಥ-ಶ್ರೀರಾಮರ ಬಾಳ ಘಟನೆಗಳಿಗೆ ಸಮಕಾಲೀನನಿದ್ದನೆಂದು ತಿಳಿಯಲಾಗಿದೆ. ಉತ್ತರಕಾಂಡವನ್ನು ರಚಿಸುವಾಗ ವಾಲ್ಮೀಕಿಯು ಅಯೋಧ್ಯೆಯ ರಾಜವಂಶದವರೊಡನೆ ಘನಿಷ್ಠಸಂಬಂಧವನ್ನು ಇಟ್ಟುಕೊಂಡಿದ್ದನು. ಈತನು ದಶರಥರಾಜನ ಮಿತ್ರನಾಗಿದ್ದನು. ವಾಲ್ಮೀಕಿಯು ಶ್ರೀರಾಮನ ಅಶ್ವಮೇಧಯಜ್ಞಪ್ರಸಂಗದಲ್ಲಿ ಸೀತೆಯ ಶುದ್ಧಚಾರಿತ್ರ್ಯದ ಬಗ್ಗೆ ಘೋಷಿಸಿದನು. ವಿಷ್ಣುಪುರಾಣದಲ್ಲಿ ವಾಲ್ಮೀಕಿಯನ್ನು ವಿಷ್ಣುವಿನ ಅವತಾರವೆಂದೂ, ಇಪ್ಪತ್ತಾರನೆಯ ವೇದವ್ಯಾಸನೆಂದೂ ಪರಿಗಣಿಸಲಾಗಿದೆ.

### ೧೨೦. ವಿದ್ಯುತ್ಕೇಶ

ಈತ ಹೇತಿ ಎಂಬ ರಾಕ್ಷಸನ ಹಾಗೂ ಕಾಲನ ಮಗಳಾದ ಭಯಾ ಎಂಬವಳ ಪುತ್ರನಾಗಿದ್ದನು. ಸಾಲಕಟಂಕಟಾ ಎಂಬಾಕೆ ವಿದ್ಯುತ್ಕೇಶನ ಪತ್ನಿ. ಇವರಿಗೆ ಸುಕೇಶನೆಂಬ ಮಗನಿದ್ದನು. ವಿದ್ಯುತ್ಕೇಶನಿಂದ ಸಾಲಕಟಂಕಟೆಯು ಗರ್ಭವತಿಯಾಗಿ ಆ ಗರ್ಭವನ್ನು ಮಂದರಪರ್ವತದ ಮೇಲೆ ಚೆಲ್ಲಿದಳು. ಶಂಕರನು ಅದನ್ನು ರಕ್ಷಿಸಿ ಪೋಷಿಸಿದನು.

### ೧೨೧. ವಿರಾಧ

ವಿರಾಧನು ಜಯ ಮತ್ತು ಶತಹ್ರದಾ ಎಂಬ ದಂಪತಿಗಳ ಪುತ್ರ. ಈತನು ಕ್ರೌಂಚಾವಟವನದಲ್ಲಿರುವ ರಾಕ್ಷಸನಿದ್ದನು. ಬ್ರಹ್ಮದೇವನು ಕೊಟ್ಟ ವರದಿಂದ ಅವನಿಗೆ ಅವಧ್ಯತ್ವ, ಅಚ್ಛೇದ್ಯತ್ವ ಮತ್ತು ಅಭೇದ್ಯತ್ವಗಳು

ಪ್ರಾಪ್ತವಾಗಿದ್ದವು. ಶ್ರೀರಾಮಲಕ್ಷ್ಮಣರು ಈತನ ಕೈಕಾಲುಗಳನ್ನು ಬಿಗಿದು ಒಂದು ದೊಡ್ಡ ಗುಂಡಿಯಲ್ಲಿ ಹೂತುಬಿಟ್ಟರು. ವಿರಾಧನು ತನ್ನ ಪೂರ್ವವೃತ್ತಾಂತವನ್ನು ಹೇಳುವಾಗ ಪೂರ್ವಜನ್ಮದಲ್ಲಿ ತನಗೆ ದೊರೆತ ಶಾಪದ ಉಲ್ಲೇಖವನ್ನು ಮಾಡಿದ್ದಾನೆ. ಪೂರ್ವಜನ್ಮದಲ್ಲಿ ಇವನು ತುಂಬರು ಆಗಿದ್ದನು.

## ೧೨೨. ವಿರೋಚನ

ಈತ ಪ್ರಹ್ಲಾದನ ಮಗನಿದ್ದು ಈತನಿಗೆ ಬಲಿಯೆಂಬ ಮಗನಿದ್ದನು. ಕೇಶಿನಿ ಎಂಬ ರಾಜಕನ್ಯೆಯು ವಿರೋಚನ ಮತ್ತು ಸುಧನ್ವ ಎಂಬ ಅಂಗೀರಸನ ಪುತ್ರರಿಬ್ಬರಲ್ಲಿ ಶ್ರೇಷ್ಠನೆನಿಸಿದವನನ್ನು ಮದುವೆಯಾಗ ಬೇಕೆಂದು ನಿರ್ಧರಿಸಿದಳು. ಹೀಗಾಗಿ ಶ್ರೇಷ್ಠತ್ವವನ್ನು ನಿಶ್ಚಯಿಸಲು ಅವರಿಬ್ಬರೂ ಪ್ರಹ್ಲಾದ ಹಾಗೂ ಕಶ್ಯಪನ ಬಳಿಗೆ ಹೋದರು. ಸುಧನ್ವನು ಶ್ರೇಷ್ಠನೆಂದು ಕಶ್ಯಪನು ಸಾರಿದಾಗ ಕಶ್ಯಪನು ವಿರೋಚನನ ಪ್ರಾಣದ ಸ್ವಾಮಿಯಾದನು. ಆದರೆ ಪ್ರಹ್ಲಾದನ ನಿಃಸ್ಪೃಹತೆಯಿಂದ ಆತನು ತನ್ನ ಸ್ವಾಮಿತ್ವವನ್ನು ಬಿಟ್ಟುಕೊಟ್ಟನು. ವಿರೋಚನನು ಆತ್ಮಜ್ಞಾನವನ್ನು ಪಡೆಯಲೋಸುಗ ಸತ್ಯಲೋಕಕ್ಕೆ ಹೋಗಿದ್ದನು. ಇಂದ್ರನು ಸಹ ಅದೇ ಉದ್ದೇಶದಿಂದ ಅಲ್ಲಿಗೆ ಬಂದಿದ್ದನು. ಇಂದ್ರನಿಗೆ ಆತ್ಮಸಾಕ್ಷಾತ್ಕಾರವಾಯಿತಾದರೂ ವಿರೋಚನನಿಗೆ ಆಗಲಿಲ್ಲ. ವಿರೋಚನನು ತನ್ನದೇ ಒಂದು ಸಿದ್ಧಾಂತವನ್ನು ಮಂಡಿಸಿ ಅದನ್ನೇ ತನ್ನ ಅನುಯಾಯಿಗಳಲ್ಲಿ ಪ್ರಚಾರಗೊಳಿಸಿದನು.

ವಿರೋಚನನು ಸೂರ್ಯನನ್ನು ಆರಾಧಿಸಿ ಒಂದು ಮುಕುಟವನ್ನು ಪಡೆದುಕೊಂಡನು. 'ಈ ಮುಕುಟವು ಇನ್ನೊಬ್ಬರ ಕೈಸೇರಬಾರದು ! ಹಾಗೆ ಆದಲ್ಲಿ ನಿನ್ನ ನಾಶವಾಗುವದು !' ಎಂದು ಸೂರ್ಯನು ಈ ಮುಕುಟವನ್ನು ಕೊಡುವಾಗ ಅವನಿಗೆ ಹೇಳಿದ್ದನು. ವಿರೋಚನನು ಜನರನ್ನು ಪೀಡಿಸಹತ್ತಿದಾಗ ವಿಷ್ಣು ಸ್ತ್ರೀರೂಪವನ್ನು ಧರಿಸಿ ಈತನನ್ನು ಮೋಹಗೊಳಿಸಿದನು. ಅವನು ಮುಕುಟವನ್ನು ವಶಪಡಿಸಿಕೊಂಡು ವಿರೋಚನನನ್ನು ನಾಶಗೊಳಿಸಿದನೆಂದು ಗಣೇಶಪುರಾಣದಲ್ಲಿ ಹೇಳಿದೆ. ವಿರೋಚನನು ತಾರಕಾಮಯ ಯುದ್ಧದಲ್ಲಿ ಇಂದ್ರನನ್ನು ನಾಶಗೊಳಿಸಲೆಂದು ಅಣಿಯಾದಾಗ ಇಂದ್ರನಿಂದ ಈತನ ನಾಶವಾಯಿತು. ಕುಂಭ, ನಿಕುಂಭರು ಈತನ ತಮ್ಮಂದಿರಾಗಿದ್ದರು.

## ೧೨೩. ವಿಶ್ರವ (ವಿಶ್ರವಸ್)

ವಿಶ್ರವಸನು ಬ್ರಹ್ಮನ ಮಾನಸಪುತ್ರನಾದ, ನಾಲ್ಕನೆಯ ಪ್ರಜಾಪತಿಯಾದ ಪುಲಸ್ತ್ಯನ ಮಾನಸಪುತ್ರನಾಗಿದ್ದನು (ಸುಂದರಕಾಂಡ, ೨೩ / ೬-೭). ಈತ ಪುಲಸ್ತ್ಯನಿಂದ ತೃಣಬಿಂದುರಾಜನ ಮಗಳಿಗೆ ಜನಿಸಿದ ಪುತ್ರನಾಗಿದ್ದನು. ಪುಲಸ್ತ್ಯನು ವೇದಾಧ್ಯಯನವನ್ನು ಮಾಡುತ್ತಿದ್ದಾಗ ವಿಶ್ರವನ ತಾಯಿಯು ವೇದವನ್ನು ಕೇಳಿದ್ದಳು. ಆಗ ವಿಶ್ರವ ಗರ್ಭದಲ್ಲಿದ್ದನು. ಈತನು ಹುಟ್ಟಿದನಂತರ 'ವಿಶ್ರವ' ಎಂದು ನಾಮಕರಣವಾಯಿತು (ಉತ್ತರಕಾಂಡ, ೨/ ೩೧-೩೨). ಈತನು ಶ್ರುತಿವಂತನೂ, ಸಮದರ್ಶಿಯೂ, ವ್ರತಸ್ಥನೂ ಆದ ಮುನಿಯಾಗಿದ್ದನು. ಭರದ್ವಾಜನ ಕನ್ಯೆಯಾದ ದೇವವರ್ಣಿನಿ ಇವನ ಪತ್ನಿಯಾಗಿದ್ದಳು. ಈತನು ಅವಳಿಂದ ಸರ್ವಗುಣ ಸಂಪನ್ನನಾದ, ಧರ್ಮಜ್ಞನಾದ ವೈಶ್ರವಣ ಎಂಬ ಪುತ್ರನನ್ನು ಪಡೆದನು. ಸುಮಾಲಿರಾಕ್ಷಸನ ಕನ್ಯೆಯಾದ ಕೈಕಸಿಯು ಇವನನ್ನು ಮನಸಾರೆ ಮದುವೆಯಾದಳು. ಸಾಯಂಕಾಲ ವಿಶ್ರವನು ಅಗ್ನಿಯಲ್ಲಿ ಹವನ ನಡೆಸಿದ ಕ್ರೂರಗಳಿಗೆಯಲ್ಲಿ ಇವಳು ಅವನೊಂದಿಗೆ ಸಂಭೋಗದ ಇಚ್ಛೆಯನ್ನು ವ್ಯಕ್ತಪಡಿಸಿದ್ದಳು. ಈ ಕಾರಣದಿಂದ ಇವಳಿಗೆ ರಾವಣ, ಕುಂಭಕರ್ಣ, ಶೂರ್ಪನಖಿ ಮೊದಲಾದ ಕ್ರೂರ ಮಕ್ಕಳು ಹುಟ್ಟಿದರು. ಕೈಕಸಿಯ ಪ್ರಾರ್ಥನೆಯಂತೆ ಕೊನೆಯ ಪುತ್ರನಾದ ವಿಭೀಷಣನು ಧರ್ಮಾತ್ಮನಾಗಿ ಹುಟ್ಟಿದನು. ರಾವಣನು ತನಗೆ ಲಂಕಾಪಟ್ಟಣವನ್ನು ಕೊಡಲು ಕುಬೇರನಿಗೆ ಹೇಳಿದನು. ಆಗ ವಿಶ್ರವನು 'ಲಂಕೆಯನ್ನು ರಾವಣನಿಗೆ ಕೊಟ್ಟು ಕೈಲಾಸಪರ್ವತಕ್ಕೆ ಹೋಗಿ ವಾಸಿಸು !' ಎಂದು ಕುಬೇರನಿಗೆ ಹೇಳಿದನು.

## ೧೨೪. ವಿಶ್ವಕರ್ಮ

ಪ್ರಭಾಸವಸು ಮತ್ತು ವರಸ್ತ್ರೀ (ಭುವನಾ) ಈ ದಂಪತಿಗಳ ಮಗನೆಂದರೆ ವಿಶ್ವಕರ್ಮ. ಇವನು ದೇವತೆಗಳಿಗಾಗಿ ವಿಮಾನಗಳನ್ನು, ಪಟ್ಟಣಗಳನ್ನು ನಿರ್ಮಿಸಿದನು. ಘೃತಾಚಿ ಎಂಬ ಅಪ್ಸರೆಯೊಡನೆ ಇದ್ದ ಇವನ ಸಂಬಂಧದಿಂದ ನಲನೆಂಬ ಪುತ್ರನಾದನು. ಈತ ಸೂಕ್ತಗಳ ದ್ರಷ್ಟಾರ. ಇವನು ವಿಶ್ವಜಿತ ಎಂಬ ಯಾಗವನ್ನು ಮಾಡಿದನು. ಇವನ ಕನ್ಯೆಯಾದ ಸಂಜ್ಞೆ, ವಿವಸ್ವತನ ಹೆಂಡತಿ. ಸಂಜ್ಞೆಗೆ ವಿವಸ್ವತನ ತೇಜಸ್ಸನ್ನು ತಡೆದುಕೊಳ್ಳಲಾಗಲಿಲ್ಲ. ಆಗ ತನ್ನ ಸ್ಥಳದಲ್ಲಿ ಛಾಯೆಯನ್ನಿಟ್ಟು ಇವಳು ಪಿತನ ಆಶ್ರಯಕ್ಕೆ ಹೋದಳು. ತನ್ನ ಮಗಳಿಗೆ ಸಹನೆಯಾಗುವಷ್ಟು ತೇಜಸ್ಸನ್ನು ಅವಳಲ್ಲಿ ಉಳಿಸಿ, ವಿಶ್ವಕರ್ಮನು ಮಿಕ್ಕ ತೇಜಸ್ಸಿನಿಂದ ಆಯುಧಗಳನ್ನು ನಿರ್ಮಿಸಿದನು. ವಿವಸ್ವತನು ಈತನ ಬಳಿಗೆ ಬಂದಾಗ ಸಂಜ್ಞೆ ತಪಸ್ಸಿಗಾಗಿ ಹೋಗಿರುವಳೆಂದು ಹೇಳಿದನು. ವಿಶ್ವಕರ್ಮನು ವಿಷ್ಣುವಿನ ಸುದರ್ಶನಚಕ್ರವನ್ನೂ ಶಂಕರನ ತ್ರಿಶೂಲವನ್ನೂ ಇಂದ್ರನ ವಜ್ರಾಯುಧವನ್ನೂ ವಿವಸ್ವತನ ತೇಜಸ್ಸಿನಿಂದಲೇ ನಿರ್ಮಿಸಿದನು. ವಿಶ್ವಕರ್ಮನೇ ಇಂದ್ರಪ್ರಸ್ಥ, ದ್ವಾರಕಾ, ಲಂಕಾ, ವೃಂದಾವನ ಈ ನಗರಗಳನ್ನು ನಿರ್ಮಿಸಿದನು. ಈತನು ವಾಸ್ತುಶಾಸ್ತ್ರದ ಬಗ್ಗೆ ಒಂದು ಗ್ರಂಥವನ್ನು ಬರೆದಿದ್ದಾನೆ. 'ತೋಟಗಾರ, ಬಳೆಗಾರ, ಶಿಲ್ಪಿ, ಶಿಂಪಿಗ, ಬಡಿಗ, ಅಕ್ಕಸಾಲಿಗ, ಕಲ್ಲುಕುಟಿಗ ಇವರೆಲ್ಲರೂ ವಿಶ್ವಕರ್ಮ ಮತ್ತು ಘೃತಾಚಿ ದಂಪತಿಗಳಿಂದ ಜನಿಸಿದವರಾಗಿದ್ದಾರೆ' ಎಂದು ಬ್ರಹ್ಮವೈವರ್ತಪುರಾಣದಲ್ಲಿದೆ. 'ಚಕ್ರವಾನವೆಂಬ ಪರ್ವತದ ಮೇಲೆ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಸಾವಿರ ಅಚ್ಚುಗಳನ್ನು ಹೊಂದಿದ ರಥವಿದೆ' ಎಂದು ಸುಗ್ರೀವನು ಸೀತೆಯನ್ನು ಹುಡುಕಲು ಹೊರಟ ವಾನರರಿಗೆ ಹೇಳಿದ್ದನು.

## ೧೨೫. ವಿಶ್ವಾಮಿತ್ರ

ಕುಶಿಕನು ತನಗೆ ಇಂದ್ರನಂತಹ ಪುತ್ರನು ಹುಟ್ಟಬೇಕೆಂದು ತಪಸ್ಸನ್ನು ಮಾಡಿದನು. ಇನ್ನೊಬ್ಬನು ತನ್ನಂತೆ ಇರಲೇಬಾರದೆಂದು ಬಗೆದು ಇಂದ್ರನು ತಾನೇ ಕುಶಿಕನ ಮಗನಾಗುವದೆಂದು ನಿಶ್ಚಯಿಸಿದನು. ಕುಶಿಕನಿಗೆ 'ಗಾಧಿನ್ (ಗಾಧಿ) ಎಂಬ ಪುತ್ರನಾದನು. ಆ ಗಾಧಿನ್‌ನ ಮಗನೇ ವಿಶ್ವಾಮಿತ್ರನಾಗಿದ್ದಾನೆ. ವಿಶ್ವಾಮಿತ್ರನು ಮುಂಗೋಪಿಯಾಗಿದ್ದರೂ ಹಿಡಿದ ಕಾರ್ಯಗಳನ್ನು ಎಡಬಿಡದೇ ಪೂರೈಸುವವನಾಗಿದ್ದನು. ಪ್ರತಿಸೃಷ್ಟಿಯನ್ನು ನಿರ್ಮಿಸುವ ತಪೋಬಲವು ಈತನಲ್ಲಿತ್ತು. ವಸಿಷ್ಠನೊಡನೆ ಈತನ ವ್ಯಾಜ್ಯವಿತ್ತು. ವಿಶ್ವಾಮಿತ್ರನು ಒಂದು ಸಲ ವಸಿಷ್ಠನ ಆಶ್ರಮಕ್ಕೆ ಹೋದಾಗ ವಸಿಷ್ಠನು ಕಾಮಧೇನುವಿನ ಸಹಾಯದಿಂದ ವಿಶ್ವಾಮಿತ್ರನನ್ನು ಉತ್ತಮವಾಗಿ ಉಪಚರಿಸಿದನು. ಈತನು ವಸಿಷ್ಠನ ಬಳಿಯ ಕಾಮಧೇನುವನ್ನು ಬೇಡಿದನು ; ವಸಿಷ್ಠನು ಒಪ್ಪಲಿಲ್ಲ. ಆಗ ವಿಶ್ವಾಮಿತ್ರನು ಬಲಾತ್ಕಾರದಿಂದ ಕಾಮೇಧನುವನ್ನು ಎಳೆದೊಯ್ಯುವಾಗ ಆ ಹಸುವಿನಿಂದ ಶಕ, ಬರ್ಬರಾದಿಗಳ ಸೈನ್ಯವು ಪ್ರಕಟವಾಯಿತು. ಆ ಸೈನ್ಯವು ವಿಶ್ವಾಮಿತ್ರನನ್ನು ಸೋಲಿಸಿತು. ಆಗ ಕ್ಷಾತ್ರತೇಜಕ್ಕಿಂತ ಬ್ರಹ್ಮತೇಜವೇ ಶ್ರೇಷ್ಠವೆಂದು ಅರಿತು ವಿಶ್ವಾಮಿತ್ರನು ಅದನ್ನು ಅಲ್ಲಗಳೆಯಲು ಉಗ್ರತಪವನ್ನು ಆಚರಿಸಿದನು. ಬ್ರಹ್ಮರ್ಷಿಪದವನ್ನು ಪಡೆದುಕೊಂಡು ಅದಕ್ಕೆ ವಸಿಷ್ಠನಿಂದಲೂ ಮಾನ್ಯತೆಯನ್ನು ದೊರಕಿಸಿಕೊಂಡನು. ವಿಶ್ವಾಮಿತ್ರನು ವಸಿಷ್ಠರ ಮಕ್ಕಳಿಗೆ ಶಾಪಕೊಟ್ಟಂತೆ ತನ್ನ ಮಕ್ಕಳಿಗೂ ಶಾಪವನ್ನು ಕೊಡಲು ಹಿಂಜರಿಯಲಿಲ್ಲ. ಸದೇಹಸ್ವರ್ಗವನ್ನು ಸೇರುವ ಇಚ್ಛೆ ತ್ರಿಶಂಕುವಿನದಾಗಿತ್ತು. ಅವನು ಅದನ್ನು ಹೊಂದಲು ಯಜ್ಞವನ್ನು ಮಾಡಿದನು. ವಿಶ್ವಾಮಿತ್ರನು ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದನು ; ಆದರೆ ತ್ರಿಶಂಕುವನ್ನು ಅಲ್ಲಿಂದ ಕೆಳಗೆ ತಳ್ಳಲಾಯಿತು. ಹೀಗೆ ವಿಶ್ವಾಮಿತ್ರನ ಪ್ರಯತ್ನ ಸಫಲವಾಗಲಿಲ್ಲ. ಅಂಬರೀಷನು ಶುನಃಶೇಪನನ್ನು ಯಜ್ಞಪಶುವೆಂದು ಕೊಂಡುಕೊಂಡನು. ಆತನನ್ನು ಕರೆದೊಯ್ಯುತ್ತಿದ್ದಾಗ ಶುನಃಶೇಪನು ಸೋದರಮಾವನಾದ ವಿಶ್ವಾಮಿತ್ರನನ್ನು 'ಬಿಡಿಸು !' ಎಂದು ಪ್ರಾರ್ಥಿಸಿಕೊಂಡನು. ಆಗ ಸ್ವಂತದ ಒಬ್ಬ ಮಗನನ್ನು ಬಲಿಕೊಟ್ಟು ಶುನಃಶೇಪನನ್ನು ಬದುಕಿಸಬೇಕೆನ್ನುವ ವಿಶ್ವಾಮಿತ್ರನ ಪ್ರಯತ್ನ ವಿಫಲಗೊಂಡಿತು. ಏಕೆಂದರೆ ಆತನ ಮಗನು ಬಲಿಹೋಗಲು ಒಪ್ಪಲಿಲ್ಲ. ಆಗ ಆತನು ಶುನಃಶೇಪನಿಗೆ ಎರಡು ಮಂತ್ರಗಳನ್ನು ಹೇಳಿಕೊಟ್ಟು ಆತನ ಪ್ರಾಣವನ್ನುಳಿಸಿದನು. ಇಂದ್ರನು ವಿಶ್ವಾಮಿತ್ರನ ತಪೋಭಂಗವನ್ನು ಮಾಡಲು ರಂಭೆಯನ್ನು ಕಳುಹಿಸಿದ್ದಾಗ ವಿಶ್ವಾಮಿತ್ರನು ರಂಭೆಗೆ ಶಾಪಕೊಟ್ಟನು.

ಮಾರೀಚ ಹಾಗು ಸುಬಾಹು ಎಂಬ ಇಬ್ಬರು ರಾಕ್ಷಸರು ಇವನ ತಪಸ್ಸಿನಲ್ಲಿ ವಿಘ್ನಗಳನ್ನುಂಟು ಮಾಡು ತ್ತಿದ್ದರು. ತಪದ ಲೋಪವಾಗಬಾರದೆಂದು ವಿಶ್ವಾಮಿತ್ರನು ಅವರಿಗೆ ಶಾಪವನ್ನು ಕೊಡಲಿಲ್ಲ. ಅವರನ್ನು ದಂಡಿಸಲೆಂದು ದಶರಥನ ಬಳಿ ಹೋಗಿ ಶ್ರೀರಾಮನನ್ನು ಕರೆತಂದನು. ದಶರಥ ಮೊದಲು ಸಮ್ಮತಿಸಿದ್ದರೂ ಶ್ರೀರಾಮನನ್ನು ಕಳುಹಲು ಹಿಂದುಮುಂದು ನೋಡಹತ್ತಿದನು. ಆಗ ವಸಿಷ್ಠನು ದಶರಥನಿಗೆ ಸಲಹೆಯನ್ನು ಕೊಟ್ಟ ಕಾರಣ ಶ್ರೀರಾಮನು ವಿಶ್ವಾಮಿತ್ರನೊಡನೆ ಹೋಗಲು ಅನುಕೂಲವಾಯಿತು. ವಿಶ್ವಾಮಿತ್ರನು ಮಾರ್ಗ ದಲ್ಲಿ ಶ್ರೀರಾಮನಿಗೆ ಅನೇಕ ಕಥೆಗಳನ್ನು ಹೇಳಿದನು. ಶ್ರೀರಾಮಲಕ್ಷ್ಮಣರ ಪರಾಕ್ರಮದಿಂದ ಮತ್ತು ಅವರು ತಾಟಕೆಯನ್ನು ವಧಿಸಿದ್ದರಿಂದ ಆತನು ಪ್ರಸನ್ನನಾಗಿ ಶ್ರೀರಾಮನಿಗೆ ಬಲಾ ಮತ್ತು ಅತಿಬಲಾ ಎಂಬ ವಿದ್ಯೆಗಳನ್ನು ಅಲ್ಲದೆ ಅನೇಕ ಪ್ರಭಾವಪೂರ್ಣ ಅಸ್ತ್ರಗಳನ್ನು ಕೊಟ್ಟನು. ಅವನು ಶ್ರೀರಾಮಲಕ್ಷ್ಮಣರನ್ನು ಜನಕರಾಜನಲ್ಲಿ ನಡೆಯುತ್ತಿದ್ದ ಯಜ್ಞಕ್ಕಾಗಿ ಮಿಥಿಲೆಗೆ ಕರೆದೊಯ್ದನು. ಜನಕನ ಪುರೋಹಿತನಾದ ಶತಾನಂದನು ವಿಶ್ವಾಮಿತ್ರ ನಂತಹ ಪಾಲಕ ದೊರೆತದ್ದಕ್ಕಾಗಿ ಶ್ರೀರಾಮನನ್ನು ಅಭಿನಂದಿಸಿದನು. ಶ್ರೀರಾಮಲಕ್ಷ್ಮಣರ ವಿವಾಹಗಳನ್ನು ನಿರ್ವಹಿಸುವಲ್ಲಿ ಈತನ ಪಾತ್ರ ಪ್ರಮುಖವಾಗಿದೆ.

ವಿಶ್ವಾಮಿತ್ರನ ಸಿದ್ಧಾಶ್ರಮವು ತಾಟಕಾವನದ ಸಮೀಪದಲ್ಲಿತ್ತು. ಈತನಿಗೆ ನೂರು ಜನ ಮಕ್ಕಳಿದ್ದರು. ಅವರಲ್ಲಿ ಮಧುಚ್ಛಂದನು ಮಧ್ಯದವನಾಗಿದ್ದನು. ಈತನು ಮತ್ತು ಈತನ ವಂಶಜರು ಋಗ್ವೇದದ ಮೂರನೆಯ ಮಂಡಲವನ್ನು ರಚಿಸಿದ್ದಾರೆ. ಅದಕ್ಕೆ 'ಕುಶಿಕ'ವೆಂದೆನ್ನುತ್ತಾರೆ.

## ೧೨೨೬. ವಿಶ್ವಾಮಿತ್ರನ ಪುತ್ರರು

ವಿಶ್ವಾಮಿತ್ರನ ಪುತ್ರರ ಸಂಖ್ಯೆ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆಬೇರೆಯಾಗಿದೆ. ಅವನಿಗೆ ಒಂದುನೂರ ಒಂದು ಮಕ್ಕಳಿದ್ದರು. ಅವರಲ್ಲಿ ಮಧುಚ್ಛಂದನು ಮಧ್ಯದವನು. ಇವನು ಶುನಃಶೇಪನನ್ನು ಹರಿಶ್ಚಂದ್ರನ ಯಜ್ಞದಿಂದ ಬಿಡುಗಡೆಮಾಡಿದನು. ಆತನಿಗೆ ದೇವರಾತನೆಂಬ ಹೊಸ ಹೆಸರನ್ನಿಟ್ಟನು. ಶುನಃಶೇಪನನ್ನು ತಮ್ಮೆಲ್ಲರ ಅಣ್ಣನೆಂದು ತಿಳಿಯಬೇಕೆಂದು, ವಿಶ್ವಾಮಿತ್ರನು ತನ್ನ ಮಕ್ಕಳಿಗೆ ಹೇಳಿದನು. ಆಗ ಐವತ್ತು ಜನ ಮಕ್ಕಳು ಆ ಹೇಳಿಕೆಯನ್ನು ಒಪ್ಪಿಕೊಳ್ಳಲಿಲ್ಲ. ಅದಕ್ಕಾಗಿ ವಿಶ್ವಾಮಿತ್ರನು ಅವರಿಗೆ 'ನೀವು ಮ್ಲೇಂಛರಾಗಿರಿ !' ಎಂದು ಶಾಪಕೊಟ್ಟನು. ಮಿಕ್ಕ ಐವತ್ತು ಪುತ್ರರು ಶುನಃಶೇಪನಿಗೆ ಯೋಗ್ಯ ಸನ್ಮಾನವನ್ನು ಕೊಡಲು ಒಪ್ಪಿದರು, ವಿಶ್ವಾಮಿತ್ರನು ಅವರಿಗೆ ಆಶೀರ್ವಾದವನ್ನು ಕೊಟ್ಟನು. ಹಿರಿಯ ಮಕ್ಕಳ ಗೋತ್ರವು ವಿಶ್ವಾಮಿತ್ರವೆಂದಿದ್ದು ಮಿಕ್ಕ ಐವತ್ತು ಚಿಕ್ಕವರ ಗೋತ್ರವು 'ಕೌಶಿಕ'ವೆಂದಿದೆ ಎಂದು ಭಾಗವತಪುರಾಣದಲ್ಲಿ ಹೇಳಿದ್ದಾರೆ. ತನ್ನ ಇಚ್ಛೆಗೆ ವಿರುದ್ಧವಾಗಿ ವರ್ತಿಸಿದ ಮಕ್ಕಳನ್ನು ವಿಶ್ವಾಮಿತ್ರನು ಆಂಧ್ರ, ಪುಂಡ್ರ, ಶಬರ, ಪುಲಿಂದ, ಮೂತಿಬರನ್ನಾಗಿ ಪರಿವರ್ತಿಸಿದನೆಂದು ಐತರೇಯಬ್ರಾಹ್ಮಣದಲ್ಲಿದೆ. ವಾಲ್ಮೀಕಿರಾಮಾಯಣದಲ್ಲಿ ದೃಢನೇತ್ರ, ಮಧುಷ್ಪಂದ, ಮಹಾರಥ ಹಾಗೂ ಹವಿಷ್ಪಂದ ಇಷ್ಟೇ ಹೆಸರುಗಳು ಕಂಡುಬರುತ್ತವೆ (ಬಾಲಕಾಂಡ, ೫೭ / ೪).

## ೧೨೨೭. ವಿಷ್ಣು

'ವಿಷ್ಣು' ಎಂಬ ಹೆಸರು ಅನಾದಿ ಅನಂತನಾದ ಪರಮೇಶ್ವರನಿಗಿದೆ. ಅವನೇ ಸರ್ವರ ನಿರ್ಮಾಪಕನೂ ಸರ್ವಾಧಾರನೂ ಆಹುದು. ದುಷ್ಟರನ್ನು ಸಂಹರಿಸಿ ಸಜ್ಜನರನ್ನು ಸಂರಕ್ಷಿಸುವುದೇ ಈತನ ಪ್ರಮುಖಕಾರ್ಯ. ಶಂಖ, ಚಕ್ರ, ಗದೆ, ಪದ್ಮ ಇವು ವಿಷ್ಣುವಿನ ಆಯುಧ-ಭೂಷಣಗಳಿದ್ದು, ಪೀತಾಂಬರ, ವನಮಾಲೆ, ಕಿರೀಟಕುಂಡಲಗಳು, ಶ್ರೀವತ್ಸ ಇವೆಲ್ಲವೂ ಆಭೂಷಣ, ಲಾಂಛನಗಳಾಗಿವೆ. ಇವನು ಇಂದ್ರನ ಸಂಬಂಧಿಕ ನಾಗಿದ್ದಾನೆ. 'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್' ಎಂಬ ತನ್ನ ನುಡಿಯನ್ನು ಸಿದ್ಧ ಪಡಿಸಲು ಈತನು ಆಗಾಗ ಅವತಾರಗಳನ್ನು ಧರಿಸುತ್ತಾನೆ. ವಿಷ್ಣುವಿನ ದಶಾವತಾರಗಳು ಪ್ರಖ್ಯಾತವಾಗಿವೆ. ಇವುಗಳಲ್ಲಿ ರಾಮಾವತಾರವು ಏಳನೆಯ ಅವತಾರ.

ರಾವಣನ ಮಿತಿಮೀರಿದ ಘೋರವರ್ತನೆಯಿಂದ ತೊಂದರೆಗೊಳಗಾದ ಮತ್ತು ಭಯಗೊಂಡ ಜನರ ಸಂಕಷ್ಟಗಳನ್ನು ಪರಿಹರಿಸಲು ವಿಷ್ಣುವು ಮಾನವಾವತಾರವನ್ನು ತಳೆದನು. ಬ್ರಹ್ಮದೇವನ ವರದಂತೆ ರಾವಣನು

ಮಾನವನೊಬ್ಬನನ್ನು ಬಿಟ್ಟು ಇತರರಿಂದ ಸಾಯುವಂತಿರಲಿಲ್ಲ. ದಶರಥನು ಪಿತನಾಗಲು ಅರ್ಹನಿದ್ದಾನೆಂದು ತಿಳಿದು ವಿಷ್ಣುವು ಶ್ರೀರಾಮನೆಂದು ಅವನ ಪುತ್ರನಾಗಿ ಜನ್ಮತಾಳಿದನು. ಅಗಸ್ತ್ಯನು ಶ್ರೀರಾಮನಿಗೆ ಕೊಟ್ಟ ಧನುಸ್ಸು ವಿಷ್ಣುವಿನದಾಗಿತ್ತು. ರಾವಣನು ಇಂದ್ರನ ಮೇಲೆ ದಾಳಿಮಾಡಿದಾಗ ವಿಷ್ಣುವು 'ನಾನು ಯೋಗ್ಯ ಸಮಯದಲ್ಲಿ ರಾವಣನನ್ನು ವಧಿಸುವೆ' ಎಂಬ ಆಶ್ವಾಸನೆಯನ್ನು ಕೊಟ್ಟಿದ್ದನು. ದೇವ-ದೈತ್ಯರ ಕಾಳಗದಲ್ಲಿ ಭೃಗುವಿನ ಪತ್ನಿಯು ದೈತ್ಯರಿಗೆ ಆಶ್ರಯವನ್ನು ಕೊಟ್ಟ ಕಾರಣ ವಿಷ್ಣುವು ಅವಳ ಶಿರಶ್ಛೇದನವನ್ನು ಮಾಡಿದನು. ಆಗ ಭೃಗುವಿನಿಂದ ಈತನಿಗೆ ಶಾಪ ದೊರೆಯಿತು. ಹೀಗಿದ್ದರೂ ಈತನಿಗೆ ದೊರೆತ ಶಾಪವು ಲೋಕಕಲ್ಯಾಣದ ದೃಷ್ಟಿಯಿಂದ ವರವೆಂದೆನಿಸಿತು. ವಿಷ್ಣುವು ವೃತ್ರಾಸುರ ರಾಕ್ಷಸನನ್ನು ವಧಿಸಲು ತನ್ನ ಒಂದು ಭಾಗವನ್ನು ಇಂದ್ರನಿಗೂ ತನ್ನ ಒಂದು ಅಂಶವನ್ನು ವಜ್ರಾಯುಧಕ್ಕೂ, ಇನ್ನೊಂದು ಅಂಶವನ್ನು ಭೂಮಿಗೂ ಕೊಟ್ಟು ಇಂದ್ರನಿಂದ ಆತನ ವಧೆಯಾಗುವಂತೆ ಮಾಡಿದನು. ಈ ವಧೆಯಿಂದಾಗಿ ಬ್ರಹ್ಮಹತ್ಯೆಯು ಇಂದ್ರನನ್ನು ಬೆನ್ನಟ್ಟಿತು. ಈ ಪಾಪದಿಂದ ಮುಕ್ತಿಪಡೆಯಲು ಅವನು ಇಂದ್ರನಿಗೆ ವಿಷ್ಣುಯಾಗವನ್ನು ಮಾಡಲು ಹೇಳಿದನು. ಶ್ರೀರಾಮನು ದೇಹಸಹಿತ ವಿಷ್ಣುವಿನ ತೇಜದಲ್ಲಿ ಐಕ್ಯನಾದನು. ಲಕ್ಷ್ಮಿಯು ವಿಷ್ಣುವಿನ ಪತ್ನಿ.

### ೧೨೮. ವೇದವತಿ

ವೇದವತಿ ಕುಶಧ್ವಜನಾದ ಜನಕ ಮತ್ತು ಮಾಲಾವತಿ ಈ ದಂಪತಿಗಳ ಮಗಳಾಗಿ ಹುಟ್ಟಿದಳು. ಹುಟ್ಟಿದ ಕ್ಷಣವೇ ಇವಳು ವೇದಧ್ವನಿಯನ್ನು ಉಚ್ಚರಿಸಿದಳು. ಆ ಕಾರಣ ಇವಳಿಗೆ ವೇದವತಿ ಎಂಬ ಹೆಸರು ಬಂದಿತು. ಕುಶಧ್ವಜನು ವಿಷ್ಣುವಿನೊಡನೆ ಇವಳ ವಿವಾಹವನ್ನು ಮಾಡಬೇಕೆಂದು ನಿಶ್ಚಯಿಸಿದ್ದನು. ಆದ್ದರಿಂದ ಬೇರೆ ವರಗಳಿಂದ ಬೇಡಿಕೆ ಬಂದರೂ ಅವನ್ನೆಲ್ಲ ನಿರಾಕರಿಸಹತ್ತಿದನು. ಶಂಭು ಎಂಬ ರಾಕ್ಷಸನನ್ನು ಈ ರೀತಿ ನಿರಾಕರಿಸಿದಾಗ ಅವನು ಕೋಪಗೊಂಡು ಕುಶಧ್ವಜನನ್ನು ಕೊಂದುಹಾಕಿದನು. ಕುಶಧ್ವಜನ ಹೆಂಡತಿ ಸತಿಹೋದಳು. ಆಗ ವೇದವತಿ ಪುಷ್ಕರತೀರ್ಥದಲ್ಲಿ ತಪಸ್ಸನ್ನಾಚರಿಸಹತ್ತಿದಳು. 'ಮುಂದಿನ ಜನ್ಮದಲ್ಲಿ ವಿಷ್ಣುವು ನಿನ್ನ ಪತಿಯಾಗುವನು' ಎಂದು ಆಕಾಶವಾಣಿಯಾಯಿತು. ಅದೇ ಸಮಯಕ್ಕೆ ರಾವಣನು ವೇದವತಿಯನ್ನು ಮದುವೆಯಾಗಲು ವಿನಂತಿಸಿದನು. ಅವಳು ಈ ಇಚ್ಛೆಯನ್ನು ನಿರಾಕರಿಸಿದಳು. ಆಗ ರಾವಣನು ವೇದವತಿಯ ಕೇಶಪಾಶವನ್ನು ಹಿಡಿದು ಎಳೆದನು. ಅದನ್ನು ಕಿತ್ತುಬಿಟ್ಟು ಬಿಡಿಸಿಕೊಂಡ ವೇದವತಿಯು ಅಗ್ನಿ ಪ್ರವೇಶವನ್ನು ಮಾಡಿದಳು. ತನ್ನ ತಪೋಬಲವು ಕಡಿಮೆಯಾಗಬಾರದೆಂದು ಅವಳು ರಾವಣನಿಗೆ ಶಾಪವನ್ನು ಉಚ್ಚರಿಸಲಿಲ್ಲ. ಆದರೂ ಅವಳು ರಾವಣನನ್ನು ಉದ್ದೇಶಿಸಿ ಆಡಿದ ನುಡಿಗಳು ಶಾಪಸಮನಾಗಿವೆ.

### ೧೨೯. ಶತಾನಂದ

ಇವನು ಗೌತಮ ಮತ್ತು ಅಹಲ್ಯೆ ಇವರ ಜ್ಯೇಷ್ಠಪುತ್ರನು. 'ನೀನು ನನ್ನ ತಂದೆತಾಯಿಗಳ ಕಥೆಯನ್ನು ಶ್ರೀರಾಮಲಕ್ಷ್ಮಣರಿಗೆ ಹೇಳಿದೆಯಾ ? ನನ್ನ ತಾಯಿ ಮತ್ತು ತಂದೆ ಇವರು ಮತ್ತೆ ಒಂದಾದರೋ ಹೇಗೆ ?' ಎಂದು ಶತಾನಂದನು ಅನೇಕ ಪ್ರಶ್ನೆಗಳನ್ನು ವಿಶ್ವಾಮಿತ್ರನಿಗೆ ಕೇಳಿದನು. ಶತಾನಂದನು ವಿಶ್ವಾಮಿತ್ರನ ತಪದ ಸಾಮರ್ಥ್ಯವನ್ನು ಕುರಿತು ಶ್ರೀರಾಮನಿಗೆ ವಿವರಿಸಿ ಬಣ್ಣಿಸಿದ್ದನು. ಈತ ಜನಕರಾಜನ ಪುರೋಹಿತನಾಗಿದ್ದನು. ಸೀತೆಯು ಪ್ರತಿಜ್ಞೆಯನ್ನು ಮಾಡುವ ಸಮಯದಲ್ಲಿ ಈತ ಆ ಸಭೆಯಲ್ಲಿದ್ದನು. ಈತನೇ ಶ್ರೀರಾಮನ ಮದುವೆಯ ಪೌರೋಹಿತ್ಯವನ್ನು ವಹಿಸಿದ್ದನು.

### ೧೩೦. ಶತ್ರುಘ್ನ

ಈತನು ದಶರಥ ಮತ್ತು ಸುಮಿತ್ರೆಯ ಪುತ್ರನಾಗಿದ್ದಾನೆ. ಭರತನ ಮೇಲೆ ಶತ್ರುಘ್ನನ ಪ್ರೀತಿ ಬಹಳವಿತ್ತು. ಇವನು ಯಾವಾಗಲೂ ಭರತನೊಡನೆ ಇರುತ್ತಿದ್ದನು. ಭರತನು ಸೋದರಮಾವನ ಮನೆಯಿಂದ ಅಯೋಧ್ಯೆಗೆ ಮರಳಿ ಬಂದಾಗ ಶ್ರೀರಾಮನ ವನವಾಸಕ್ಕೆ ಮಂಥರೆಯೇ ಮೂಲಕಾರಣವೆಂದು ತಿಳಿದುಬಂದು ಶತ್ರುಘ್ನನು ಕೋಪಾವೇಶದಲ್ಲಿ ಮಂಥರೆಯನ್ನು ದರದರನೇ ಎಳೆದು ಅವಳನ್ನು ಕೊಲ್ಲುವವನೇ ಇದ್ದನು. ಆಗ ಭರತನು

ನಡುವೆ ಬಂದು ಮಂಥರೆಯನ್ನು ಬದುಕಿಸಿದನು. ಶತ್ರುಘ್ನನು ಹೆಂಡತಿಯ ಮಾತಿಗೆ ಮರುಳಾಗಿ ಮಗನನ್ನು ವನವಾಸಕ್ಕೆ ಕಳುಹಿದ ತಂದೆಯಾದ ದಶರಥನನ್ನು ಬಹಳವಾಗಿ ದೂಷಿಸಿದ್ದಾನೆ. ದಶರಥನ ಈ ವರ್ತನೆಯನ್ನು ಪ್ರತ್ಯಕ್ಷದಲ್ಲಿ ಕಂಡು ಲಕ್ಷ್ಮಣನು ತೆಪ್ಪಗೆ ಕುಳಿತದ್ದಕ್ಕಾಗಿ ಆತನನ್ನು ಹಳಿದಿದ್ದಾನೆ. ಶತ್ರುಘ್ನನು ಲವಣಾಸುರನನ್ನು ಸದೆಬಡಿದು ಮಧುಪುರಿಯನ್ನು (ಮಧುರಾ-ಮಥುರೆ) ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಶತ್ರುಘ್ನನು ಹನ್ನೆರಡು ವರ್ಷಗಳ ಕಾಲ ಆ ಪ್ರದೇಶದಲ್ಲಿ ಸುವ್ಯವಸ್ಥೆ ಮಾಡಿ ಶ್ರೀರಾಮನ ಭೇಟಿಗೆಂದು ಬಂದನು ; ಆತನ ಸಾನ್ನಿಧ್ಯದಲ್ಲಿರಬೇಕೆಂದು ಬಯಸಿದನು. ಆಗ ಶ್ರೀರಾಮನು ಅವನನ್ನು ಮನವೊಲಿಸಿ ಪುನಃ ಶೂರಸೇನ ಪ್ರಾಂತಕ್ಕೆ ಕಳುಹಿಸಿಕೊಟ್ಟನು. ಶ್ರೀರಾಮನ ಅಶ್ವಮೇಧಯಜ್ಞದ ಸಮಯಕ್ಕೆ ಶತ್ರುಘ್ನನನ್ನು ಅಶ್ವರಕ್ಷಣೆಗಾಗಿ ಯೋಜಿಸಲಾಗಿತ್ತು. ಆಗ ಇವನು ಅನೇಕ ಪ್ರಾಂತಗಳನ್ನು ವಶಪಡಿಸಿ ಕೊಂಡನು. ತನ್ನ ಅವಧಿ ಮುಗಿಯಲಿದೆ ಎಂದು ಅರಿತ ಶ್ರೀರಾಮನು ತನ್ನ ರಾಜ್ಯವನ್ನು ಕುಶ-ಲವರಿಗೆ ಒಪ್ಪಿಸಿದನು. ಅದೇ ರೀತಿ ಶತ್ರುಘ್ನನು ತನ್ನ ರಾಜ್ಯವನ್ನು ತನ್ನ ಇಬ್ಬರು ಮಕ್ಕಳಲ್ಲಿ ಪಾಲುಮಾಡಿಕೊಟ್ಟನು. ಈತ ಕೂಡ ಶ್ರೀರಾಮನೊಡನೆ ಸರಯೂ ನದಿಯ ಗೋಪ್ರತಾರತೀರ್ಥದಲ್ಲಿ ದೇಹಾರ್ಪಣೆ ಮಾಡಿದನು.

### ೧೩.೧. ಶಬರಿ

ಶಬರಿ ಪಂಪಾಸರೋವರದ ಪಶ್ಚಿಮ ದಡದ ಮತಂಗವನದ ಒಂದು ಆಶ್ರಮದಲ್ಲಿ ವಾಸವಾಗಿದ್ದಳು. ಇವಳು ಶ್ರೀರಾಮನ ಭಕ್ತೆ. ಕಾಡಿನ ಹಣ್ಣುಹಂಪಲಗಳಿಂದ ಶ್ರೀರಾಮನನ್ನು ಸ್ವಾಗತಿಸಿದಳು. ಶ್ರೀರಾಮನಿಗೆ ಆ ವನಪ್ರದೇಶವನ್ನು ತೋರಿಸಿದಳು. ತನ್ನನ್ನು ಅಗ್ನಿಯಲ್ಲಿ ಹವನ ಮಾಡಿಕೊಂಡು ಸ್ವರ್ಗವನ್ನು ಸೇರಿದಳು.

### ೧೩.೨. ಶಂಬರ

ತಿಮಿಧ್ವಜನೆಂಬಾತನು ಶಂಬರನೆಂಬ ಹೆಸರಿನಿಂದ ಖ್ಯಾತನಿದ್ದನು. ದಂಡಕಾರಣ್ಯದ ವೈಜಯಂತ ಎಂಬ ಪಟ್ಟಣದ ರಾಜನಾಗಿದ್ದನು. ದೇವಾಸುರರಲ್ಲಿಯ ಸಂಗ್ರಾಮದಲ್ಲಿ ಈತನು ಅಸುರರೊಂದಿಗೆ ಕೂಡಿಕೊಂಡು ಇಂದ್ರನೊಡನೆ ಯುದ್ಧಮಾಡುತ್ತಿದ್ದನು. ಇಂದ್ರನು ತನ್ನ ನೆರವಿಗಾಗಿ ದಶರಥರಾಜನನ್ನು ಕರೆಯಿಸಿಕೊಂಡನು. ಈ ಯುದ್ಧದಲ್ಲಿ ದಶರಥನು ಗಾಯಗೊಂಡನು. ಕೈಕೇಯಿ ಬಲುಚಾತುರ್ಯದಿಂದ ರಥವನ್ನು ಓಡಿಸಿ ತನ್ನ ಪತಿ ದಶರಥನ ಪ್ರಾಣರಕ್ಷಣೆ ಮಾಡಿದಳು.

### ೧೩.೩. ಶಂಬುಕ (ಶಂಬೂಕ)

ಈತ ಶೂದ್ರನಾಗಿದ್ದ ಕಾರಣ ಈತನಿಗೆ ತಪವನ್ನಾಚರಿಸಲು ಅಧಿಕಾರವಿರಲಿಲ್ಲ. ಆದರೂ ತಾನು ಸದೇಹನಾಗಿ ಸ್ವರ್ಗಕ್ಕೆ ಹೋಗಬೇಕೆಂಬ ಬಯಕೆಯಿಂದ ತಪಗೈದನು. ಇದರ ಪರಿಣಾಮದಿಂದಾಗಿ ಒಬ್ಬ ಬ್ರಾಹ್ಮಣನ ಮಗನಿಗೆ ಅಕಾಲದಲ್ಲಿ ಸಾವು ಬಂದಿತು. ಇದಕ್ಕೆಲ್ಲ ಕಾರಣನೆಂದರೆ ರಾಜನ ಕರ್ತವ್ಯವನ್ನು ಅಲಕ್ಷ್ಯಕ್ಕೀಡುಮಾಡಿದ ಶ್ರೀರಾಮ ತಪ್ಪಿತಸ್ಥನೆಂದು ಆ ಬಾಲಕನ ತಂದೆ ದೂರಿದನು. ಶ್ರೀರಾಮನು ಆತನ ದೂರನ್ನೊಪ್ಪಿಕೊಂಡು ತನ್ನ ಅದಾವ ತಪ್ಪಿನಿಂದಾಗಿ ಆ ಬಾಲಕ ಸಾವಿಗೀಡಾದನೆಂದು ಆಲೋಚಿಸಿದನು. ಆಕಾಶವಾಣಿಯಿಂದಾಗಿ ಅವನಿಗೆ ಶಂಬೂಕನ ತಪಸ್ಸಿನ ವಾರ್ತೆ ತಿಳಿಯಿತು. ಶ್ರೀರಾಮನು ತಪಸ್ಸಿಗೆ ಅನಧಿಕಾರಿಯಾದ ಶಂಬೂಕನನ್ನು ಕೊಲ್ಲುತ್ತಲೇ ಆ ಬ್ರಾಹ್ಮಣನ ಮಗ ಜೀವತಳೆದೆದ್ದನು.

### ೧೩.೪. ಶರಭಂಗ

ಈತನು ದಂಡಕಾರಣ್ಯದಲ್ಲಿ ತಪಸ್ಸನ್ನಾಚರಿಸುತ್ತಿದ್ದಾಗ ಗೌತಮನ ಕುಲಕ್ಕೆ ಸೇರಿದ ಒಬ್ಬ ಬ್ರಹ್ಮರ್ಷಿಯಾಗಿದ್ದನು. ವಿರಾಧನನ್ನು ವಧಿಸಿದನಂತರ ಶ್ರೀರಾಮನು ಈ ಋಷಿಯ ಆಶ್ರಮದತ್ತ ಬರುತ್ತಿರುವಾಗ ಪ್ರತ್ಯಕ್ಷ ಇಂದ್ರನು ಅಲ್ಲಿಗೆ ಬರುತ್ತಿರುವುದನ್ನು ಕಂಡನು. ಇಂದ್ರನ ರಥಾಶ್ವಗಳಿಂದ ಆತನ ಗುರುತು ಸಿಕ್ಕಿತೆಂದು ಶ್ರೀರಾಮನು ಸೀತೆ ಮತ್ತು ಲಕ್ಷ್ಮಣರಿಗೆ ತಿಳಿಸಿದನು. ಇಂದ್ರನು ಋಷಿಯನ್ನು ಕಂಡು ಹೊರಟುಹೋದನಂತರ

ಶ್ರೀರಾಮನು ಋಷಿಗೆ ಇಂದ್ರನು ಬಂದ ಉದ್ದೇಶವನ್ನು ವಿಚಾರಿಸಿದನು. ಆಗ ಶರಭಂಗನು, 'ತಪಸ್ಸಿನಿಂದ ನನಗೆ ಲಭಿಸಿದ ಬ್ರಹ್ಮಲೋಕಕ್ಕೆ ನನ್ನನ್ನು ಕರೆದೊಯ್ಯಲು ಇಂದ್ರನು ಬಂದಿದ್ದನು. ಆದರೆ ನಿನ್ನಂತಹ ಅತಿಥಿಗಳು ನನ್ನನ್ನು ಕಾಣಲು ಬಂದಾಗ ಆತನೊಡನೆ ಹೋಗುವ ಇಚ್ಛೆ ನನಗಿರಲಿಲ್ಲ' ಎಂದು ಶ್ರೀರಾಮನಿಗೆ ಹೇಳಿ ತಾನು ಸಂಪಾದಿಸಿದ ಲೋಕಗಳನ್ನು ಶ್ರೀರಾಮನಿಗೆ ಕೊಡಬಯಸಿದನು. ಶ್ರೀರಾಮನು ವಿನಯಪೂರ್ವಕವಾಗಿ ಬೇಡವೆಂದು ತಿಳಿಸಿ ತಾನು ಸ್ವಂತ ತಪಸ್ಸಿನಿಂದ ಪಡೆಯುವೆನೆಂದು ಹೇಳಿದನು. ಶರಭಂಗನು ಶ್ರೀರಾಮನ ಎದುರಿನಲ್ಲಿಯೇ ತನ್ನ ದೇಹವನ್ನು ಅಗ್ನಿಗೆ ಸಮರ್ಪಿಸಿ ಬ್ರಹ್ಮಲೋಕಕ್ಕೆ ತೆರಳಿದನು.

### ೧೩೫. ಶರ್ಮಿಷ್ಠೆ

ಪೂರ್ವದಲ್ಲಿ ವೃಷಭನೆಂಬ ದೈತ್ಯರಾಜನಿದ್ದನು. ಶರ್ಮಿಷ್ಠೆ ಈತನ ಮಗಳು. ದೈತ್ಯಗುರುವಾದ ಶುಕ್ರಾಚಾರ್ಯನ ಮಗಳಾದ ದೇವಯಾನಿಯು ಶರ್ಮಿಷ್ಠೆಯ ಸವತಿಯಾಗಿದ್ದಳು. ಒಮ್ಮೆ ಇವರಿಬ್ಬರಲ್ಲಿ ಜಗಳವಾದಾಗ ಶರ್ಮಿಷ್ಠೆ ದೇವಯಾನಿಯನ್ನು ಬಾವಿಯಲ್ಲಿ ತಳ್ಳಿಬಿಟ್ಟಳು. ಆಗ ಶುಕ್ರಾಚಾರ್ಯನು ಕ್ರೋಧಗೊಂಡನು. ತನ್ನ ಕುಲದ ಒಳಿತಿಗಾಗಿ ಇವಳು ದೇವಯಾನಿಯ ದಾಸ್ಯತ್ವವನ್ನು ಅಂಗೀಕರಿಸಿದಳು. ಶರ್ಮಿಷ್ಠೆ ದೇವಯಾನಿಯ ದಾಸಿಯಾಗಿ ಯಯಾತಿಯ ಬಳಿಗೆ ಹೋದಳು. ಶುಕ್ರಾಚಾರ್ಯನು ಯಯಾತಿಗೆ 'ಶರ್ಮಿಷ್ಠೆಯೊಡನೆ ಶಯನಸುಖವನ್ನು ಪಡೆಯಕೂಡದು !' ಎಂಬ ಕಟ್ಟಪ್ಪಣೆಯನ್ನು ಮಾಡಿದ್ದನು. ಹೀಗಿದ್ದರೂ ಶರ್ಮಿಷ್ಠೆಗೆ ಮೂರು ಮಕ್ಕಳಾದರು. ರಾಮಾಯಣದಲ್ಲಿ ಪುರು ಎಂಬ ಮಗನ ಹೆಸರಿನ ಉಲ್ಲೇಖ ಮಾತ್ರ ಬಂದಿದೆ. ಶರ್ಮಿಷ್ಠೆ ಯಯಾತಿಗೆ ಮೆಚ್ಚಿನವಳಾಗಿದ್ದಳು.

ದೇವಯಾನಿ, ವ್ಯಕ್ತಿವಿಶೇಷ ಕ್ರಮಸಂಖ್ಯೆ ೫೮ ಪರಿಶೀಲಿಸಿರಿ.

### ೧೩೬. ಶಿಬಿರಾಜ

ಈತನು ಉಶೀನರ ಮತ್ತು ಮಾಧವಿ ದಂಪತಿಗಳ ಪುತ್ರನಾಗಿದ್ದನು. ಮತ್ಸ್ಯಪುರಾಣ, ಬ್ರಹ್ಮಾಂಡಪುರಾಣ ಮತ್ತು ವಾಯುಪುರಾಣಗಳಲ್ಲಿ ಈತನ ತಾಯಿಯ ಹೆಸರನ್ನು ದೃಷದ್ವತಿ ಎಂದು ಕೊಡಲಾಗಿದೆ. ಈತನು ಮಂತ್ರದ್ರಷ್ಟಾರ. ಇವನನ್ನು ಪರೀಕ್ಷಿಸಲೆಂದು ಅಗ್ನಿಯು ಪಾರಿವಾಳದ ಮತ್ತು ಇಂದ್ರನು ಗಿಡುಗ ಪಕ್ಷಿಯ ರೂಪವನ್ನು ಧರಿಸಿದರು. ಗಿಡುಗವು ಪಾರಿವಾಳವನ್ನು ಬೆನ್ನಟ್ಟಿದಾಗ ಆ ಪಾರಿವಾಳವು ಶಿಬಿರಾಜನಿಗೆ ಮೊರೆ ಹೋಯಿತು. ಶಿಬಿರಾಜನು ಆ ಪಾರಿವಾಳಕ್ಕೆ ಅಭಯವನ್ನಿತ್ತನು. ಆಗ ಗಿಡುಗವು ಶಿಬಿಯನ್ನುದ್ದೇಶಿಸಿ 'ನನ್ನ ಆಹಾರವಾದ ಪಾರಿವಾಳವನ್ನು ನನಗೆ ಒಪ್ಪಿಸು ! ಇಲ್ಲವಾದರೆ ಆ ಪಾರಿವಾಳದ ತೂಕದಷ್ಟು ಮಾಂಸವನ್ನು ನಿನ್ನ ಶರೀರದಿಂದ ತೆಗೆದು ನನಗೆ ಕೊಡು !' ಎಂದಿತು. ಆಗ ಇದಕ್ಕೆ ಒಪ್ಪಿಕೊಂಡ ಶಿಬಿರಾಜನು ತನ್ನ ಶರೀರದಿಂದ ಸ್ವಲ್ಪಸ್ವಲ್ಪ ಭಾಗಗಳನ್ನು ಕತ್ತರಿಸಿ ತೂಕಹಾಕಿ, ಕೊನೆಗೆ ತನ್ನ ಇಡೀ ಶರೀರವನ್ನೇ ಗಿಡುಗನಿಗೆ ಕೊಟ್ಟು ಆ ಪಾರಿವಾಳವನ್ನು ರಕ್ಷಿಸಿದನು. ಆಗ ಅಗ್ನಿ ಮತ್ತು ಇಂದ್ರರು ತಮ್ಮ ಪಕ್ಷಿರೂಪವನ್ನು ತ್ಯಜಿಸಿ ನಿಜರೂಪವನ್ನು ಪ್ರಕಟಿಸಿದರು ; ಶಿಬಿಯನ್ನು ಕೊಂಡಾಡಿದರು. ಶಿಬಿರಾಜನ ಹಿರಿಮೆಯ ಕಥೆಗಳು ಹಲವಾರು ಕಡೆಯಲ್ಲಿ ಕಂಡು ಬರುತ್ತವೆ. ಇಂದ್ರನು ಕೆಲವು ಕಾಲದವರೆಗೆ ಶಿಬಿರಾಜನಿಗೆ ತನ್ನ ಇಂದ್ರಪದವಿಯನ್ನು ಕೊಟ್ಟನು. ಶಿಬಿರಾಜನು ಸಂಪನ್ನನು, ಉದಾರಬುದ್ಧಿಯವನು, ಪರಾಕ್ರಮಿಯು ಅಷ್ಟೇ ಅಲ್ಲದೆ ಉತ್ಕೃಷ್ಟ ರಾಜನಾಗಿದ್ದನು. ಯಯಾತಿಗೆ ಸ್ವರ್ಗ ದೊರೆಯಲೆಂದು ಈತನು ಅವನಿಗೆ ಅಂತರಿಕ್ಷದ ಪ್ರದೇಶಗಳನ್ನು ಬಿಟ್ಟುಕೊಟ್ಟನು. ಪದ್ಮಪುರಾಣದನುಸಾರ ಈತನು ಬ್ರಹ್ಮದೇವನ ಯಜ್ಞದಲ್ಲಿ ಪ್ರತಿಷ್ಠಾತನಾಗಿದ್ದನು.

### ೧೩೭. ಶುಕ (ರಾಕ್ಷಸ)

ಈತನು ರಾವಣನ ಅಮಾತ್ಯನಾಗಿದ್ದನು. ಇವನು ಸಾರಣನ ಜೊತೆಗೆ ಗೂಢಚಾರನ ಕಾರ್ಯವನ್ನು ಮಾಡಿದನು. ಇವನು ಮೊದಲು ಬ್ರಾಹ್ಮಣನಾಗಿದ್ದನು. ಒಮ್ಮೆ ಅಗಸ್ತ್ಯನು ಈತನ ಬಳಿ ಮಾಂಸದ ಊಟವನ್ನು ಕೇಳಿದ್ದನ್ನು ವಜ್ರದಂಷ್ಟ್ರನು ಕೇಳಿಸಿಕೊಂಡನು ; ಮತ್ತು ಈತನ ಹೆಂಡತಿಯ ರೂಪವನ್ನು ಹೊಂದಿ ಅಗಸ್ತ್ಯನಿಗೆ

ನರಮಾಂಸವನ್ನು ಬಡಿಸಿದನು. ಆಗ ಅಗಸ್ತ್ಯನು ಇವನಿಗೆ ರಾಕ್ಷಸನಾಗುವ ಶಾಪವನ್ನು ಕೊಟ್ಟನು. ಅನಂತರ ಶ್ರೀರಾಮನ ದರ್ಶನವಾದನಂತರ ಮತ್ತು ರಾವಣನಿಗೆ ಉಪದೇಶಿಸಿದನಂತರ ಆ ಉಃಶಾಪದಂತೆ ಈತನು ಮುಕ್ತನಾದನು. ಶ್ರೀರಾಮನ ಸೈನ್ಯದ ಬಲಾಬಲವನ್ನು ಕಂಡುಕೊಳ್ಳಲು ರಾವಣನು ಗೂಢಚಾರನಾಗಿ ಶುಕನನ್ನು ಕಳುಹಿಸಿದ್ದನು. ಆಗ ಶುಕನು ಶ್ರೀರಾಮನ ಮತ್ತು ಸುಗ್ರೀವನ ಸೈನ್ಯವನ್ನು ಕಂಡುಕೊಂಡು ತನ್ನ ಸ್ಪಷ್ಟ ಅಭಿಪ್ರಾಯವನ್ನು ರಾವಣನ ಮುಂದಿಟ್ಟನು. ಶುಕ ಗೂಢಚಾರನೆಂದು ವಿಭೀಷಣನಿಗೆ ಗೊತ್ತಾಗಿತ್ತು. ಶ್ರೀರಾಮನು ಇದನ್ನು ತಿಳಿದುಕೊಂಡರೂ ತನ್ನ ಎಲ್ಲ ಸೈನ್ಯವನ್ನು ನಿರೀಕ್ಷಿಸಲು ಶುಕನಿಗೆ ಅವಕಾಶವನ್ನು ಕೊಟ್ಟನು. ಅಲ್ಲದೆ ರಾವಣನಿಗೆ ಮರಣಕ್ಕೆ ಸಿದ್ಧನಾಗಿರಲು ಹೇಳಿಕಳುಹಿಸಿದನು. ಶುಕನು ಶ್ರೀರಾಮನ ಜಯಕಾರವನ್ನು ಮಾಡಿ, ಶ್ರೀರಾಮನನ್ನು ಗೆಲ್ಲುವುದು ಎಷ್ಟು ದುಸ್ತರವಾಗಿದೆ ಎಂಬುದನ್ನು ರಾವಣನಿಗೆ ವಿವರಿಸಿದನು. ಆಗ ರಾವಣನು ಶುಕನನ್ನು ನಿಂದಿಸಿ 'ಇಲ್ಲಿಂದ ತೊಲಗು !' ಎಂದು ಹೇಳಿದನು.

## ೧೩೭೮. ಶುಕ್ರಾಚಾರ್ಯ (ಉಶನಸ, ಭಾರ್ಗವ)

ಮತ್ಸ್ಯ ಹಾಗೂ ಬ್ರಹ್ಮಪುರಾಣಗಳ ಅಭಿಪ್ರಾಯದಂತೆ ಶುಕ್ರಾಚಾರ್ಯನು ವಾರುಣಿ ಭೃಗು ಮತ್ತು ಪುಲೋಮಾ ಇವರ ಮಗನಿದ್ದಾನೆ. ಭೃಗುವಿನಿಂದ ದಿವ್ಯಳಿಗೆ ಜನಿಸಿದ ಶುಕ್ರನೆಂದರೂ ಈತನೇ ಎಂದು ಬ್ರಹ್ಮಾಂಡಪುರಾಣದಲ್ಲಿದೆ. ಬೇರೆ ಬೇರೆ ಗ್ರಂಥಗಳಲ್ಲಿ ಈತನ ತಾಯಿ-ತಂದೆಯರ ಬಗ್ಗೆ ಬೇರೆ ಬೇರೆ ಮಾಹಿತಿ ಇದೆ. ಉಶನಸ-ಶುಕ್ರಾಚಾರ್ಯ, ಕಾವ್ಯ-ಭಾರ್ಗವ ಇವರೆಲ್ಲರೂ ಒಂದೇ ಆಗಿದ್ದಾರೆ. 'ಭಾರ್ಗವ' ಎಂಬುದು ಕುಲದ ಹೆಸರಿದ್ದರೂ ವಾಲ್ಮೀಕಿರಾಮಾಯಣದಲ್ಲಿ ಭಾರ್ಗವನ ಉಲ್ಲೇಖವು ದಂಡರಾಜ ಹಾಗೂ ದಂಡಕಾರಣ್ಯ ಇವರ ಸಂದರ್ಭದಲ್ಲಿ ಬಂದಿದೆ. ಈತನೇ ಶುಕ್ರಾಚಾರ್ಯ. ಶುಕ್ರಾಚಾರ್ಯನು ದಾನವರ ಪುರೋಹಿತನಾಗಿದ್ದನು. ಭೃಗುವಿನಿಂದ ಈತನಿಗೆ ಸಂಜೀವಿನೀವಿದ್ಯೆ ಪ್ರಾಪ್ತವಾಗಿತ್ತು. ದೇವದಾನವರ ಕಾಳಗದಲ್ಲಿ ದಾನವರು ಇದರ ಲಾಭವನ್ನು ಪಡೆದುಕೊಂಡರು.

ಬೃಹಸ್ಪತಿಯು ದೇವತೆಗಳ ಗುರುವಾಗಿದ್ದನು. ಈತನ ಮಗನೆಂದರೆ ಕಚ. ಕಚನು ಸಂಜೀವಿನೀವಿದ್ಯೆಯನ್ನು ಪಡೆದುಕೊಳ್ಳಲು ಶುಕ್ರಾಚಾರ್ಯನ ಬಳಿ ಶಿಷ್ಯನಾಗಿ ಹೋದನು. ಕಚನಿಗೆ ವಿದ್ಯೆ ಲಭಿಸಿತು ; ಆದರೆ ದೇವಯಾನಿಯ ಶಾಪದಿಂದ ಅದು ಫಲಕಾರಿಯಾಗಲಿಲ್ಲ. ಬಲಿರಾಜನು ವಾಮನನಿಗೆ ಮೂರು ಪಾದಗಳಷ್ಟು ಭೂಮಿಯನ್ನು ದಾನ ಕೊಡುವಾಗ ಶುಕ್ರಾಚಾರ್ಯನು ಅದಕ್ಕೆ ಅಡ್ಡಿಮಾಡಲೆಂದು ಕೈಮೇಲೆ ನೀರನ್ನು ಧಾರೆಯಾಗಿಸುವ ಪಾತ್ರೆಯ ಸೊಂಡಿಲಿನಲ್ಲಿ ಆತಂಕವಾಗಿ ಕುಳಿತನು. ತನ್ನ ಕನ್ಯೆಯಾದ ದೇವಯಾನಿಯೊಡನೆ ಆಕೆಯ ಗಂಡನಾದ ಯಯಾತಿಯು ಸರಿಯಾಗಿ ವರ್ತಿಸುವದಿಲ್ಲವೆಂದು ಶುಕ್ರಾಚಾರ್ಯನು ಯಯಾತಿಗೆ 'ಅಕಾಲದಲ್ಲಿ ವೃದ್ಧಾಪ್ಯ ಬರಲಿ' ಎಂಬ ಶಾಪವನ್ನು ಕೊಟ್ಟನು.

ಈ ಶುಕ್ರಾಚಾರ್ಯನು ದಂಡರಾಜನ ಪುರೋಹಿತನಾಗಿದ್ದಾಗ ದಂಡರಾಜನು ಆತನ ಕನ್ಯೆಯಾದ ಅರಜೆಯನ್ನು ಬಲಾತ್ಕಾರಮಾಡಿ ಉಪಭೋಗಿಸಿದನು. ಆಗ ಶುಕ್ರಾಚಾರ್ಯನು ದಂಡರಾಜನನ್ನು ಮತ್ತು ಆತನ ರಾಜ್ಯವಾದ ದಂಡಕಾರಣ್ಯವನ್ನು ಶಪಿಸಿದನು. ಅಲ್ಲಿಯ ಆಶ್ರಮವಾಸಿಗಳಿಗೆ ಅಲ್ಲಿಂದ ಹೊರಬೀಳಲು ಹೇಳಿ, ಒಂದು ವಾರದಲ್ಲಿ ಇಂದ್ರನಿಂದ ಧೂಳಿಯ ಮಳೆಗರೆಯಿಸಿ, ದಂಡಕಾರಣ್ಯವನ್ನು ಪಾಳುಗೆಡವಿ, ಈ ರಾಜನ ವಧೆಯನ್ನು ಮಾಡಿಸಿದನು.

ಶುಕ್ರಾಚಾರ್ಯನು ಕೆಲವು ಸೂತ್ರಗಳ ದ್ರಷ್ಟಾರನಾಗಿದ್ದಾನೆ. ಇವನು ಸಾವಿರಾರು ವರ್ಷಗಳವರೆಗೆ ತಪವನ್ನಾಚರಿಸಿ ಶಂಕರನನ್ನು ಪ್ರಸನ್ನಗೊಳಿಸಿಕೊಂಡು, ಪ್ರಜೇಶತ್ವ, ಧನೇಶತ್ವ ಮತ್ತು ಅವಧ್ಯತ್ವಗಳನ್ನು ಅವನಿಂದ ಬೇಡಿಕೊಂಡನು. ಈತನು ಧರ್ಮಶಾಸ್ತ್ರಕಾರ ; ಉಶನಸ ಧರ್ಮಶಾಸ್ತ್ರ, ಔಶನಸ ಸ್ಮೃತಿ ಎಂಬ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಶುಕ್ರನೀತಿ ಎಂಬ ರಾಜಕಾರಣವಿಷಯದ ಗ್ರಂಥವು ಪ್ರಸಿದ್ಧವಿದೆ. ಶತಪರ್ವಾ, ಅಂಗಿ, ಊರ್ಜಸ್ವತಿ, ಜಯಂತಿ, ಗೌ ಎಂಬ ಮತ್ತು ಇನ್ನೂ ಅನೇಕ ಪತ್ನಿಯರು ಆತನಿಗಿದ್ದರು. ದೇವಯಾನಿಯು ಜಯಂತಿ ಎಂಬಾಕೆಯ ಮಗಳು. ಶುಕ್ರಾಚಾರ್ಯನಿಗೆ ಇನ್ನೂ ಅನೇಕ ಮಕ್ಕಳಿದ್ದರು.

## ೧೩೯. ಶುನಃಶೇಪ

ಈತನು ಭೃಗುಕುಲೋತ್ಪನ್ನನಾದ ಋಚೀಕನ ನಡುವಿನ ಮಗ. ಹರಿಶ್ಚಂದ್ರನಿಗೆ ಗಂಡುಸಂತಾನವಿರಲಿಲ್ಲ. 'ನನಗೆ ಪುತ್ರನು ಹುಟ್ಟಿದರೆ ನಿನಗೆ ಬಲಿಯನ್ನರ್ಪಿಸುವೆ' ಎಂದು ವರುಣನಿಗೆ ಹರಕೆ ಹೊತ್ತಿದ್ದನು. ಈತನಿಗೆ ಪುತ್ರನು ಹುಟ್ಟಿದನಂತರ ಬಲಿ ಕೊಡುವ ಹರಕೆಯ ಬಗ್ಗೆ ಹಿಂದೇಟುಹಾಕತೊಡಗಿದನು. ಈತನ ಮಗನ ಹೆಸರು ರೋಹಿತನೆಂದಿತ್ತು. ಈ ಬಾಲಕನಿಗೆ ಹರಕೆಯ ಸಂಗತಿ ತಿಳಿದಾಗ ಆತನು ಮನೆ ಬಿಟ್ಟು ಓಡಿದನು. ಆಗ ಹರಿಶ್ಚಂದ್ರನಿಗೆ ಉದರರೋಗವುಂಟಾಯಿತು. ಇಂಥ ಸ್ಥಿತಿಯಲ್ಲಿ ರೋಹಿತನು ಋಚೀಕ (ಅಜೀಗರ್ತ) ಋಷಿಯಿಂದ ಶುನಃಶೇಪನನ್ನು ಬಲಿಕೊಡಲೆಂದು ಕೊಂಡುಕೊಂಡನು. ವಿಶ್ವಾಮಿತ್ರನು ಈ ಶುನಃಶೇಪನನ್ನು ಯಜ್ಞಸ್ತಂಭದಿಂದ ಬಿಡಿಸಿಕೊಂಡು ಆತನನ್ನು ತನ್ನ ಮಗನೆಂದು ಮನ್ನಿಸಿದನು. ಈತನಿಗೆ ದೇವರಾತನೆಂದು ನಾಮಕರಣವನ್ನು ಮಾಡಿದನು. ಈ ಮಾಹಿತಿಯು ಐತರೇಯಬ್ರಾಹ್ಮಣದಲ್ಲಿ ದೊರೆಯುತ್ತದೆ. ಬೇರೆ ಗ್ರಂಥಗಳಲ್ಲಿ ಈ ಕಥೆ ಸ್ವಲ್ಪ ವ್ಯತ್ಯಾಸಹೊಂದಿದೆ.

ಶುನಃಶೇಪನು ಸೋದರಮಾವನಾದ ವಿಶ್ವಾಮಿತ್ರನಿಗೆ ತನ್ನ ಪ್ರಾಣವನ್ನುಳಿಸಲು ವಿನಂತಿಸಿದಾಗ ಆತನು ಶುನಃಶೇಪನಿಗೆ ಎರಡು ಗಾಥೆಗಳನ್ನು ಕಲಿಸಿಕೊಟ್ಟನು, ಬಲಿಯ ಯಜ್ಞದ ಕಂಬದ ಬಳಿ ಹೋದನಂತರ ಅಲ್ಲಿ ಈ ಗಾಥೆಗಳಿಂದ ಅಗ್ನಿಯನ್ನು ಸ್ತುತಿಸಲು ಹೇಳಿದನು. ಶುನಃಶೇಪನಿಗೆ ಕೆಂಪುವಸ್ತ್ರಗಳನ್ನು ತೊಡಿಸಿ ಆತನನ್ನು ಯೂಪಕ್ಕೆ (ಯಜ್ಞದ ಕಂಬ) ಕಟ್ಟಿಹಾಕಲಾಯಿತು. ಶುನಃಶೇಪನು ಆಗ ಆ ಎರಡು ಗಾಥೆಗಳಿಂದ ಇಂದ್ರ ಮತ್ತು ವಿಷ್ಣುವನ್ನು ಕುರಿತು ಸ್ತುತಿಸಿದನು. ಆಗ ಪ್ರಸನ್ನಚಿತ್ತನಾದ ಇಂದ್ರನು ಶುನಃಶೇಪನಿಗೆ ದೀರ್ಘಾಯುಸ್ಸನ್ನು ಕೊಟ್ಟನು.

## ೧೪೦. ಶ್ರವಣ, ಶ್ರಾವಣ

ಶ್ರವಣನೆಂಬ ಒಬ್ಬ ಬ್ರಾಹ್ಮಣನು ಕುರುಜಾಂಗಲವೆಂಬ ದೇಶದಲ್ಲಿರುತ್ತಿದ್ದನು. ಆತನ ಪತ್ನಿಯ ಹೆಸರು ಕುಂಡಾ ಮತ್ತು ಮಗನ ಹೆಸರು ಶ್ರಾವಣನೆಂದಿತ್ತು. ಈತನ ಕುರಂಟಕನೆಂಬ ಸೋದರನು ಆಚಾರಹೀನನಾಗಿದ್ದನು. ಒಮ್ಮೆ ಒಂದು ಹಸುವನ್ನು ಕೆಸರಿನಿಂದ ಹೊರತೆಗೆದ ಕಾರಣ ಅವರೆಲ್ಲರೂ ಮುಕ್ತರಾದರೆಂದು ಪದ್ಮಪುರಾಣದಲ್ಲಿ ಹೇಳಿದೆ. ವಾಲ್ಮೀಕಿರಾಮಾಯಣದಲ್ಲಿ ಶ್ರವಣನ ಉಲ್ಲೇಖವಿಲ್ಲ. ಬ್ರಹ್ಮಪುರಾಣದಲ್ಲಿ ಶ್ರವಣ ಎಂಬ ಹೆಸರಿನ ಉಲ್ಲೇಖ ಇದೆ. ಈತನು ಪುತ್ರಶೋಕದಲ್ಲಿದ್ದಾಗ ಮಗನಿಗೆ 'ಬ್ರಾಹ್ಮಣ'ನೆಂದು ಅನ್ನದೇ 'ಬ್ರಾಹ್ಮಣರಂತೆ' ಎಂದು ಎಂದಿದ್ದಾನೆ. ಅಂದಬಳಿಕ ಈತನು ಬ್ರಾಹ್ಮಣನಾಗಿರಲಿಕ್ಕಿಲ್ಲ. ಶ್ರಾವಣನು ಸಹ ತಾನು ಬ್ರಾಹ್ಮಣನಲ್ಲವೆಂದು ಸ್ಪಷ್ಟವಾಗಿ ನುಡಿದಿದ್ದಾನೆ. ಶ್ರಾವಣನಿಗೆ ಬಾಣದಿಂದ ಮರ್ಮಾಘಾತವಾಗಿದೆ ಎಂದು ತಿಳಿದ ದಶರಥನು, ತನ್ನಿಂದ ಬ್ರಹ್ಮಹತ್ಯೆಯಾಯಿತೆಂದು ಭಾವಿಸಿ ಭಯಗೊಂಡಿದ್ದನು. ಆಗ ಶ್ರಾವಣನು :

> ನ ದ್ವಿಜಾತಿರಹಂ ರಾಜನ್ಮಾ ಭೂತೇ ಮನಸೇ ವ್ಯಥಾ । (ಅಯೋಧ್ಯಾ., ೬೩-೫೦)
> ಶೂದ್ರಾಯಾಮಸ್ಮಿ ವೈಶ್ಯೇನ ಜಾತೋ ನರವರಾಧಿಪ ॥ ೬೩-೫೧ ॥

'ರಾಜನೇ, ನಾನು ಬ್ರಾಹ್ಮಣನಲ್ಲ. ಬ್ರಹ್ಮಹತ್ಯೆಯ ಭಯವನ್ನು ನೀನು ಪಡಬೇಡ. ಹೇ ರಾಜಾಧಿರಾಜನೇ, ನಾನು ವೈಶ್ಯನೊಬ್ಬನಿಂದ ಶೂದ್ರಸ್ತ್ರೀಯಲ್ಲಿ ಜನ್ಮತಾಳಿರುವೆ.'

## ೧೪೧. ಸಂಪಾತಿ

ಈತನು ಅರುಣ ಹಾಗೂ ಗೃಧ್ರಿ ಇವರ ಮಗನೆಂದು ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ. ವಾಯುಪುರಾಣದಲ್ಲಿ ಇವನ ತಾಯಿ ಶ್ಯೇನಿ ಎಂಬಾಕೆಯಿದ್ದಾಳೆಂದಿದೆ. ಈತನು ಜಟಾಯುವಿನೊಡನೆ ನಿಶಾಕರ ಋಷಿಯ ಸೇವೆಯನ್ನು ಮಾಡುತ್ತಿದ್ದನು. ಇವನು ವೃತ್ರಾಸುರನನ್ನು ವಧಿಸಿ ಸ್ವರ್ಗಕ್ಕೆ ಮರಳುತ್ತಿದ್ದ ಇಂದ್ರನೊಡನೆ ಹೋರಾಡಿದನು. ಆಗ ಇಂದ್ರನ ವಜ್ರಾಘಾತದಿಂದ ಗಾಯಗೊಂಡನು. ಇನ್ನೊಮ್ಮೆ ಜಟಾಯು ಮತ್ತು

ಸಂಪಾತಿ ಇವರಲ್ಲಿ ಬಹುದೂರ ಹಾರಿಹೋಗುವ ಸ್ಪರ್ಧೆ ನಡೆಯಿತು. ಜಟಾಯು ಬಹು ಆಯಾಸದಿಂದ ತಳಮಳಿಸುತ್ತ ಕೆಳಗೆ ಬೀಳಹತ್ತಿದನು. ಆಗ ಸಂಪಾತಿ ತನ್ನ ರೆಕ್ಕೆಗಳನ್ನು ಹರಡಿ ಜಟಾಯುವನ್ನು ಸಂರಕ್ಷಿಸಿದನು. ಆದರೆ ಸ್ವತಃ ಜಾಗರೂಕನಾಗಿರಲಿಲ್ಲವಾದ್ದರಿಂದ ಸೂರ್ಯನ ಉಷ್ಣತೆಯ ಝಳದಿಂದ ಸಂಪಾತಿಯ ರೆಕ್ಕೆಗಳು ಸುಟ್ಟುಹೋಗಿ ಈತನು ವಿಂಧ್ಯಪರ್ವತದ ದಕ್ಷಿಣಸಮುದ್ರತೀರದಲ್ಲಿದ್ದ ಜಟಾಯುವಿನ ಜನಸ್ಥಾನದಲ್ಲಿ ಬಿದ್ದನು. ಸಂಪಾತಿ ದೇಹತ್ಯಾಗವನ್ನು ಮಾಡಲುದ್ಯುಕ್ತನಾದಾಗ ನಿಶಾಕರ ಋಷಿಯು ಶ್ರೀರಾಮನ ಕಾರ್ಯಕ್ಕೋಸುಗ ಈತನನ್ನು ಆ ವಿಚಾರದಿಂದ ಪರಾವೃತ್ತಗೊಳಿಸಿದನು. ಈತನಿಗೆ ವಾನರರಿಂದ ಜಟಾಯುವಿನ ಮೃತ್ಯುವಿನ ವಾರ್ತೆ ತಿಳಿಯಿತು. ಆಗ ಸಂಪಾತಿಯು ಸಮುದ್ರತೀರದಲ್ಲಿ ತಮ್ಮನಾದ ಜಟಾಯುವಿಗೆ ಅಂಗದನ ಸಹಾಯದಿಂದ ತರ್ಪಣಕೊಟ್ಟನು. ನಿಶಾಕರನ ವರದಿಂದ ಸಂಪಾತಿಗೆ ಪುನಃ ಹೊಸ ರೆಕ್ಕೆ ಮೂಡಿದವು.

### ೧೪೨. ಸಂವರ್ತ

ಈತ ಅಂಗೀರಸನ ಮಕ್ಕಳಲ್ಲೊಬ್ಬ. ಮರುತ್ತನು ನಾರದನ ಹೇಳಿಕೆಯಂತೆ ಈತನನ್ನು ತನ್ನ ಪುರೋಹಿತನನ್ನಾಗಿ ಮಾಡಿಕೊಂಡಿದ್ದನು. ಇಂದ್ರನು ಮರುತ್ತನ ಯಜ್ಞದಲ್ಲಿ ವಿಘ್ನವನ್ನುಂಟುಮಾಡಲು ಅಗ್ನಿಯನ್ನು ಯೋಜಿಸಿದ್ದನು. ಆದರೆ ಸಂವರ್ತನು ಶಾಪಕೊಡಬಹುದೆಂಬ ಭಯದಿಂದ ಆತನು ಮರಳಿ ಹೋದನು. ಮರುತ್ತನಿಗೆ ಸಂವರ್ತನಿಂದ ಎಲ್ಲ ರೀತಿಯಲ್ಲಿ ಬೆಂಬಲವಿದ್ದುದರಿಂದ ಮರುತ್ತನ ಯಜ್ಞದಲ್ಲಿ ಆತಂಕಗಳನ್ನುಂಟುಮಾಡಲು ಇಚ್ಛಿಸಿದ ಎಲ್ಲರ ಪ್ರಯತ್ನಗಳು ನಿಷ್ಫಲವಾದವು.

### ೧೪೩. ಸಗರ

ಚ್ಯವನಭಾರ್ಗವ ಋಷಿಯ ಆಶೀರ್ವಾದದಿಂದ ಅಸಿತ ರಾಜನಿಗೆ ಕಾಲಿಂದಿ ಎಂಬ ರಾಣಿಯಲ್ಲಿ ಜನಿಸಿದ ಮಗ. ಕಾಲಿಂದಿ ಗರ್ಭಿಣಿಯಿದ್ದಾಗ ಈಕೆಯ ಸವತಿ ಇವಳಿಗೆ ವಿಷವನ್ನು ಕೊಟ್ಟಿದ್ದಳು. ಆ ವಿಷದಿಂದ ಯಾವ ವಿಪರೀತ ಪರಿಣಾಮವಾಗದೇ ವಿಷಸಹಿತನಾಗಿ ಅಂದರೆ ಗರಸಹಿತನಾಗಿ ಈತನು ಹುಟ್ಟಿದ ಕಾರಣ ಇವನಿಗೆ ಸ-ಗರನೆಂಬ ಹೆಸರು ಬಂದಿತು. ಈತನು ಬಹು ಪರಾಕ್ರಮಿಯೂ ಸತ್ಯಧರ್ಮಿಯೂ ಸತ್ಯವನ್ನು ನುಡಿಯುವವನೂ ಆಗಿದ್ದು ದಾನಶೂರನೆಂದೂ ವಿಚಾರವಂತನೆಂದೂ ಅಯೋಧ್ಯೆಯ ರಾಜನೆಂದೂ ಖ್ಯಾತನಿದ್ದನು. ಈತನಿಗೆ ಕೇಶಿನಿ ಹಾಗೂ ಸುಮತಿ ಎಂಬ ಇಬ್ಬರು ಪತ್ನಿಯರಿದ್ದರು. ಕೇಶಿನಿಯ ಮಗನಾದ ಅಸಮಂಜನೆಂಬಾತನು ದುರಾಚಾರಿಯಾಗಿದ್ದುದರಿಂದ ರಾಜನು ಈತನನ್ನು ಗಡಿಯಾಚೆ ಅಟ್ಟಿದನು. ಸಗರನು ಅಶ್ವಮೇಧಯಜ್ಞವನ್ನು ಕೈಕೊಂಡಾಗ ಇಂದ್ರನು ಈ ಯಜ್ಞದ ಅಶ್ವವನ್ನು ಅಪಹರಿಸಿದ್ದನು. ಆ ಕುದುರೆಯನ್ನು ಹುಡುಕಿ ತರಲು ಸುಮತಿಯ ಅರವತ್ತುಸಾವಿರ ಮಕ್ಕಳನ್ನು ಕಳುಹಿಸಿದಾಗ ಕಪಿಲನು ಅವರೆಲ್ಲರನ್ನು ಸುಟ್ಟು ಭಸ್ಮಮಾಡಿದನು. ಅನಂತರ ಸಗರನ ಮೊಮ್ಮಗನಾದ ಅಂಶುಮಾನ ಎಂಬಾತನು ಈ ಅಶ್ವಮೇಧಯಜ್ಞವನ್ನು ಪೂರ್ತಿಗೊಳಿಸಿದನು.

### ೧೪೪. ಸಾರಣ

ಈತನು ಲಂಕೆಯಲ್ಲಿನ ಒಬ್ಬ ರಾಕ್ಷಸ. ಶುಕನ ಸಂಗಡ ಗೂಢಚಾರನೆಂದು ಶ್ರೀರಾಮನ ಸೈನ್ಯಬಲವನ್ನು ವೀಕ್ಷಿಸಲು ಬಂದಿದ್ದನು. ಶುಕ ಮತ್ತು ಸಾರಣರಿಬ್ಬರೂ ವಾನರರ ವೇಷವನ್ನು ಧರಿಸಿದ್ದರು. ಸಾರಣನು ರಾವಣನ ಅಮಾತ್ಯನೂ ಆಗಿದ್ದನು. ಶ್ರೀರಾಮನನ್ನು ಗೆಲ್ಲುವದು ದುಸ್ತರಕಾರ್ಯವೆಂದು ಈತನು ರಾವಣನಿಗೆ ಸಾರಿಹೇಳಿದ್ದನು. ಆಗ ರಾವಣನು ಈತನ ಮೇಲೆ ಬಲು ಕೋಪಗೊಂಡನು.

### ೧೪೫. ಸಾಲಕಟಂಕಟಾ

ಇವಳು ವಿದ್ಯುತ್ಕೇಶನೆಂಬ ರಾಕ್ಷಸನ ಮಡದಿ, ಈಕೆಯ ತಾಯಿಯ ಹೆಸರು ಸಂಧ್ಯಾ. ಇವಳು ವಿದ್ಯುತ್ಕೇಶನಿಂದ ಹೊಂದಿದ ತನ್ನ ಗರ್ಭವನ್ನು ತೆಗೆದುಹಾಕಿದಳು.

೧೪೬. ಸೀತಾ

ಸೀತೆಯು ಸೀರಧ್ವಜನಾದ ಜನಕರಾಜನ ಪುತ್ರಿ ; ಆದ್ದರಿಂದ ಜಾನಕಿ. ಹೊಲವನ್ನು ಉಳುವಾಗ ರಂಟೆಯಿಂದ ಭೂಮಿಯ ಹೊರಗೆ ಬಂದಳೆಂದು ಭೂಮಿಕನ್ಯೆ ಎನಿಸಿದ್ದಾಳೆ. ಅನಂತರ ಸೀತೆ ಎಂದು ಖ್ಯಾತ ಳಾಗಿದ್ದಾಳೆ. ಇವಳು ಪೂರ್ವಜನ್ಮದಲ್ಲಿ ವೇದವತಿಯಾಗಿದ್ದಳೆಂದು ನಂಬಿಕೆಯಿದೆ. ಇವಳು ಮಂಡೋದರಿಯ ಕನ್ಯೆ ಎಂತಲೂ ಒಂದು ಹೇಳಿಕೆ ಇದೆ. ಈಕೆ ಯಾರ ಉದರದಿಂದಲೂ ಜನಿಸಿರಲಿಲ್ಲವೆಂಬ ಅನೇಕ ಕಥೆ, ದಂತಕಥೆ, ತಿಳಿವಳಿಕೆಗಳೂ ಇವೆ. ಇವಳು ಪ್ರಾಯಕ್ಕೆ ಬಂದನಂತರ ಜನಕರಾಜನು ಶಿವಧನುಸ್ಸಿನ ಪಣವನ್ನು ಒಡ್ಡಿ ಇವಳಿಗೆ ಯೋಗ್ಯ ವರನನ್ನು ಕಂಡುಹಿಡಿಯಲು ಇಚ್ಛಿಸಿದನು. ಈ ಸ್ವಯಂವರಕ್ಕೆ ಆಗಮಿಸಿದ ರಾವಣ ನಿಂದ ಶಿವಧನುಸ್ಸನ್ನು ಎತ್ತುವದಾಗಲಿಲ್ಲ. ಶ್ರೀರಾಮನು ಲೀಲಾಜಾಲವಾಗಿ ಎತ್ತಿ ಅದನ್ನು ಭಂಗಿಸಿದನು. ಜನಕರಾಜನು ದಶರಥನ ಅನುಮತಿಯಿಂದ ಶ್ರೀರಾಮನೊಡನೆ ಸೀತೆಯ ವಿವಾಹವನ್ನು ಮಾಡಿಕೊಟ್ಟನು. ಸೀತೆಯು ಬಹುಲಾವಣ್ಯವತಿಯಾಗಿದ್ದಳಲ್ಲದೇ ತುಂಬಾ ಬುದ್ಧಿವಂತೆ, ನಿಷ್ಠಾವಂತೆ. ಶ್ರೀರಾಮನಲ್ಲಿ ಅಪಾರ ಪ್ರೇಮವಿದ್ದವಳಾಗಿ, ಆತನ ಸುಖದುಃಖಗಳಲ್ಲಿ ಸಹಚರಿಯಾಗಿದ್ದಳು. ಶ್ರೀರಾಮನಿಗೆ ಯೌವರಾಜ್ಯಾಭಿಷೇಕ ವಾಗಲಿದೆ ಎಂಬುದನ್ನು ಅರಿತ ಅವಳು ಎಷ್ಟು ಹರ್ಷಪುಲಕಿತಳಾಗಿದ್ದಳೋ ಅಷ್ಟೇ ಸಂತೋಷದಿಂದ ಶ್ರೀರಾಮನೊಡನೆ ವನವಾಸಕ್ಕೆ ಹೋಗುವೆನೆಂದು ಪಟ್ಟುಹಿಡಿದಳು. ಪತಿ ಎಂದರೆ ಈಕೆಗೆ ಪರಮದೈವತ. ಕೌಸಲ್ಯೆ ಹಾಗೂ ಅನಸೂಯೆ ಇವರು ಈಕೆಯ ಪತಿನಿಷ್ಠೆಯನ್ನು ಕುರಿತು ತುಂಬ ಕೊಂಡಾಡಿದ್ದಾರೆ. ವನವಾಸ ದಲ್ಲಿ ಸನ್ಯಾಸವೃತ್ತಿಯಿಂದ ಇರುತ್ತಿದ್ದ ಶ್ರೀರಾಮನು ಋಷಿಗಳ ಸಂರಕ್ಷಣೆಗಾಗಿ ರಾಕ್ಷಸರನ್ನು ವಧಿಸಲು ಆಲೋಚಿಸುತ್ತಿದ್ದನು. ಆಗ ಸೀತೆಯು ಅದು ತರವಲ್ಲವೆಂದು ಆತನಿಗೆ ಸ್ಪಷ್ಟವಾಗಿ ನುಡಿದಳು. ಯಾವ ಅನ್ಯಪುರುಷನ ಸ್ಪರ್ಶವೂ ತನಗಾಗಬಾರದೆಂದು ಸೀತೆ ಬಹಳ ಎಚ್ಚರಿಕೆ ವಹಿಸುತ್ತಿದ್ದಳು. ಹನುಮಾನನೊಡನೆ ಲಂಕೆಯಿಂದ ಹೋಗಲು ಬೇಡವೆಂದಳು. ಹೀಗಿದ್ದರೂ ರಾವಣನು ಇವಳ ಇಚ್ಛೆಯ ವಿರುದ್ಧ ಇವಳನ್ನು ಎತ್ತಿಕೊಂಡು ಹೋಗಿದ್ದನು. ವಿರಾಧನು ಸಹ ಸೀತೆಯನ್ನು ತನ್ನ ಕೈಗಳಿಂದ ಎಳೆದುಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಈ ರೀತಿ ಪರಪುರುಷರಿಂದಾದ ಸ್ಪರ್ಶವನ್ನು ತಪ್ಪಿಸುವುದು ಇವಳಿಗೆ ಸಾಧ್ಯವಾಗ ಲಿಲ್ಲ. ಲಕ್ಷ್ಮಣನ ಸೇವಾಭಾವ, ಶುದ್ಧಾಚರಣೆ, ನಿಷ್ಠೆ ಹಾಗೂ ಪಾಪವಿಲ್ಲದ ಸ್ವಭಾವವನ್ನು ಸೀತೆ ಮನಗಂಡಿದ್ದರೂ, ಆತನು ಶ್ರೀರಾಮನನ್ನು ಹುಡುಕಲು ಅತ್ತ ಹೋಗಲು ವಿಳಂಬಮಾಡುತ್ತಿದ್ದಾನೆ ಎಂದು ಎನಿಸಿದಾಗ ಸೀತೆಯು ಅತ್ಯಂತ ಕಠೋರವಾದ ಶಬ್ದಗಳಿಂದ ಮಾತನಾಡಿ ಆತನನ್ನು ಬಲುದುಃಖಕ್ಕೆ ಈಡುಮಾಡಿ ದಳು. ಆ ಸಂಗತಿ ಸೀತೆಗೆ ಗೌರವಾಸ್ಪದವಾಗಲಿಲ್ಲ. ಕಾಂಚನಮೃಗದ ಅವಳ ಅಭಿಲಾಷೆಯು ಸ್ತ್ರೀಯೋಗ್ಯವೆನಿಸಿ ದರೂ ಈ ದೆಸೆಯಿಂದ ಬಹಳ ಬೆಲೆ ತೆರಬೇಕಾಯಿತು. ಶ್ರೀರಾಮನು ಅವ್ಯಭಿಚಾರಿ ಇದ್ದಾನೆ ಎಂಬ ನಿಷ್ಠೆ ಯನ್ನಾಧರಿಸಿ ಇವಳು ಲಂಕೆಯಲ್ಲಿ ತನ್ನ ದಿನಗಳನ್ನು ಕಳೆದಳು. ರಾವಣನಿಂದ ವಧಿಸಲ್ಪಡುವ ಇಲ್ಲವೇ ಶೀಲ ಭ್ರಷ್ಟಳಾಗಬಹುದೆಂಬ ಭಯವು ಅವಳನ್ನು ಸತತವಾಗಿ ಕಾಡುತ್ತಿತ್ತು. ಈ ರೀತಿ ರಾವಣನ ಕೈಯಿಂದ ಸಾಯುವುದಕ್ಕಿಂತ ಆತ್ಮಾರ್ಪಣೆಯೇ ಯೋಗ್ಯವೆಂದು ಅವಳಿಗೆನಿಸಿತು. ಆಗ ಬ್ರಹ್ಮದೇವನು ಇಂದ್ರನನ್ನು ಇವಳ ಬಳಿ ಕಳುಹಿಸಿ, ಅನ್ನತ್ಯಾಗ ಮಾಡಿ ಪ್ರಾಣತ್ಯಾಗವನ್ನು ಮಾಡಬೇಕೆಂಬ ಈ ವಿಚಾರದಿಂದ ಇವಳನ್ನು ಪರಾವೃತ್ತಗೊಳಿಸುವಂತೆ ಮಾಡಿದನು. ದೇವತೆಗಳ ಕಾರ್ಯವನ್ನು ಪೂರೈಸಲು ಇಂದ್ರನಿಂದ ಹವಿಷ್ಯಾನ್ನವನ್ನು ಸ್ವೀಕರಿಸಿ, ಧೈರ್ಯತಾಳಿ ಜೀವಂತವಿರುವಂತೆ ಸೀತೆಗೆ ಪ್ರೋತ್ಸಾಹವನ್ನು ಕೊಟ್ಟನು. ರಾವಣನ ವಧೆಯಾದ ನಂತರ ಸೀತೆ ಶ್ರೀರಾಮನನ್ನು ಭೇಟಿಯಾಗಲು ಬಹು ಕಾತರಗೊಂಡಿದ್ದಳು ; ಆದರೆ ಶ್ರೀರಾಮನ ಕರ್ಣಕಠೋರ ನುಡಿಗಳನ್ನು ಕೇಳಿ ಅವಳು ಶೋಕವಿವಶಳಾದಳು. ಶ್ರೀರಾಮನನ್ನು ಬಿಟ್ಟು ಯಾವ ಪರಪುರುಷನ ವಿಚಾರವೂ ಅವಳ ಮನಸ್ಸಿನಲ್ಲಿ ಸುಳಿದಿರಲಿಲ್ಲವಾದ್ದರಿಂದ ತನ್ನ ಶುದ್ಧತೆಯನ್ನು ಖಚಿತಪಡಿಸಲು ಅಗ್ನಿದಿವ್ಯವನ್ನು ಕೈಕೊಂಡಳು. ಶ್ರೀರಾಮನು ಜನರನ್ನು ಮೆಚ್ಚಿಸಲು ಇವಳ ಬಯಕೆಗಳನ್ನು ಪೂರೈಸುವ ನೆಪದಲ್ಲಿ ಈಕೆಯನ್ನು ತ್ಯಜಿಸಿದನು. ಆಗ ಸೀತೆ ಬಲು ನೊಂದಳು. ವಾಲ್ಮೀಕಿಯು ಇವಳನ್ನು ಬರಮಾಡಿಕೊಂಡು ಆಸರೆಯಿತ್ತನು. ಅಲ್ಲಿ ಅವಳು ಲವ-ಕುಶರಿಗೆ ಜನ್ಮವನ್ನಿತ್ತಳು, ಅಂದು ಶತ್ರುಘ್ನನು ವಾಲ್ಮೀಕಿಯ ಆಶ್ರಮದಲ್ಲಿಯೇ ಇದ್ದನು. ಶ್ರೀರಾಮನು ಹೇಳಿಕಳುಹಿಸಿದ್ದರಿಂದ ವಾಲ್ಮೀಕಿಋಷಿಯು ಸೀತೆಯ ಸಹಿತವಾಗಿ ರಾಜಸಭೆಗೆ ಬಂದನು.

ತನ್ನ ತಪೋಬಲವನ್ನೇ ಪಣಕ್ಕಿಟ್ಟು, ಶಪಥಮಾಡಿ 'ಸೀತೆಯು ಪರಿಶುದ್ಧಳು' ಎಂದು ಹೇಳಿದನು, ನಂತರ ಸೀತೆಯು ಕರಗಳೆರಡನ್ನೂ ಜೋಡಿಸಿ ಭೂದೇವಿಯನ್ನು ಪ್ರಾರ್ಥಿಸಿದಳು. 'ರಘೂತ್ತಮ ಶ್ರೀರಾಮನನ್ನುಳಿದು ನಾನು ಬೇರೆ ಪುರುಷನನ್ನು ಮನಸ್ಸಿನಲ್ಲಿ ಸಹ ತಂದಿಲ್ಲ ; ನಾನು ಮನಸ್ಸಿನಿಂದ, ಶರೀರದಿಂದ ಮತ್ತು ನುಡಿಯಿಂದ ಸತತವಾಗಿ ಶ್ರೀರಾಮನನ್ನೇ ಆರಾಧಿಸಿದ್ದರೆ, ಶ್ರೀರಾಮನನ್ನು ಬಿಟ್ಟು, ಬೇರೆ ಯಾವ ಪುರುಷನ ಪರಿಚಯವೂ ನನಗಿರುವದಿಲ್ಲ ಎಂಬ ನನ್ನ ನುಡಿಯು ಸತ್ಯವಾಗಿದ್ದರೆ ವಿಷ್ಣುಪತ್ನಿಯಾದ ಈ ಭೂದೇವಿಯು ನನ್ನನ್ನು ತನ್ನ ಒಡಲಲ್ಲಿ ಅಡಗಿಸಲಿ !' ಎಂದು ಶಪಥಮಾಡಿ ತನ್ನ ಉಜ್ವಲಚಾರಿತ್ರ್ಯವನ್ನು ಸಿದ್ಧಪಡಿಸಿದಳು. ಸೀತೆಯು ಕರ್ತವ್ಯನಿಷ್ಠೆಯಲ್ಲಿ ಶ್ರೀರಾಮನಿಗಿಂತ ಎಳ್ಳಷ್ಟೂ ಕಡಿಮೆ ಇರಲಿಲ್ಲ.

### ೧೪೭. ಸುಕೇತು

ಈತನು ಮಹಾನ್ ಯಕ್ಷನಾಗಿದ್ದನು. ತಾಟಕ ಇವನ ಮಗಳಾಗಿದ್ದಳು. ಇನ್ನೊಬ್ಬ ಸುಕೇತುವಿನ ಉಲ್ಲೇಖವು ಕಂಡುಬರುತ್ತದೆ. ಇವನು ಸುಬಾಹುವಿನ ಸಹೋದರನಾಗಿದ್ದನು. ಅಶ್ವಮೇಧದ ಸಮಯದಲ್ಲಿ ಶತ್ರುಘ್ನ ಹಾಗೂ ಸುಬಾಹು ಇವರಲ್ಲಿ ಯುದ್ಧವು ನಡೆದಾಗ ಸುಕೇತು ಭಾಗವಹಿಸಿದ್ದನು. ಗದಾಯುದ್ಧದಲ್ಲಿ ಪ್ರವೀಣನೀತ.

### ೧೪೮. ಸುಕೇಶ

ಈತನು ಸಾಲಕಟಂಕಟಾ ಮತ್ತು ವಿದ್ಯುತ್ಕೇಶ ಎಂಬ ರಾಕ್ಷಸನ ಮಗಳು. ಗರ್ಭಾವಸ್ಥೆಯಲ್ಲಿದ್ದಾಗಲೇ ಈತನ ತಾಯಿ ಇವನನ್ನು ತ್ಯಜಿಸಿದಳು. ಆಗ ಶಿವ-ಪಾರ್ವತಿಯರು ಇವನನ್ನು ರಕ್ಷಿಸಿ ಪಾಲನೆಪೋಷಣೆ ಮಾಡಿದರು. ಶಿವನಿಂದ ಈತನಿಗೆ ಒಂದು ವಿಮಾನ ದೊರೆತನಂತರ ಎಲ್ಲೆಡೆಯಲ್ಲಿ ಈತನ ಅನಿರ್ಬಂಧ ಸಂಚಾರವು ನಡೆಯಿತು. ಗ್ರಾಮಣೀ ಗಂಧರ್ವನ ಕನ್ಯೆಯಾದ ವೇದವತಿಯೊಡನೆ ಇವನ ವಿವಾಹವಾಗಿತ್ತು. ಈ ದಂಪತಿಗಳಿಂದ ಮಾಲ್ಯವಾನ, ಮಾಲಿ, ಸುಮಾಲಿ ಎಂಬ ಮೂವರು ಪುತ್ರರಾದರು.

### ೧೪೯. ಸುಗ್ರೀವ

ಸೂರ್ಯನಿಂದ ಋಕ್ಷರಜಸ್ ಎಂಬ ವಾನರಸ್ತ್ರೀಯಿಂದ (ಅವಳ ಕತ್ತಿನಿಂದ) ಈತನು ಜನ್ಮಪಡೆದಿದ್ದುದರಿಂದ ಈತನಿಗೆ ಸುಗ್ರೀವನೆಂಬ ಹೆಸರುಬಂದಿತು. ವಾಲಿಯು ಈತನ ಅಣ್ಣನಾಗಿದ್ದನು. ಈ ಅಣ್ಣತಮ್ಮಂದಿರು ಬಹುಕಾಲದವರೆಗೆ ಅನ್ಯೋನ್ಯವಾಗಿದ್ದರು. ಒಮ್ಮೆ ದುಂದುಭಿಯ ಪುತ್ರನಾದ 'ಮಾಯಾವಿ' ಎಂಬ ರಾಕ್ಷಸನೊಡನೆ ವಾಲಿಯ ಯುದ್ಧ ನಡೆಯಿತು : ಆ ಪ್ರಸಂಗದಿಂದಾಗಿ ಈ ಅಣ್ಣತಮ್ಮಂದಿರಲ್ಲಿ ಅಪನಂಬಿಕೆ ಹುಟ್ಟಿಕೊಂಡಿತು. ಅದರ ಪರಿಣಾಮವಾಗಿ ವಾಲಿಯು ಸುಗ್ರೀವನ ಭಾರ್ಯೆಯಾದ ರುಮೆಯನ್ನು ಅಪಹರಿಸಿ ಸುಗ್ರೀವನನ್ನು ರಾಜ್ಯದಾಚೆ ಓಡಿಸಿದನು. ಅಂದಿನಿಂದ ಸುಗ್ರೀವನು ಋಷ್ಯಮೂಕ ಪರ್ವತದ ಮೇಲೆ ವಾಸವಿದ್ದನು. ಅಲ್ಲಿರುವಾಗ ಆತನಿಗೆ ಶ್ರೀರಾಮಲಕ್ಷ್ಮಣರ ಪ್ರಥಮ ಭೇಟಿಯಾಯಿತು. ಹನುಮಾನನ ಮೂಲಕ ಒಬ್ಬರಿಗೊಬ್ಬರು ಪರಿಚಿತರಾದರು. ಶ್ರೀರಾಮನೊಡನೆ ಸ್ನೇಹ ಬೆಳೆಯಿತು. ಅಗ್ನಿಸಾಕ್ಷಿಯಾಗಿ ಇಬ್ಬರೂ ಮಿತ್ರತ್ವವನ್ನು ದೃಢಗೊಳಿಸಿದರು. 'ಸೀತೆಯನ್ನು ಹುಡುಕಲು ಶ್ರೀರಾಮನಿಗೆ ಸಹಾಯ ಮಾಡಬೇಕು. ಶ್ರೀರಾಮನು ವಾಲಿಯನ್ನು ವಧಿಸಿ ಸುಗ್ರೀವನಿಗೆ ಆತನ ಹೆಂಡತಿಯಾದ ರುಮೆಯನ್ನು ಮತ್ತು ರಾಜ್ಯವನ್ನು ಗಳಿಸಿಕೊಡಬೇಕು' ಎಂಬುದನ್ನು ಒಪ್ಪಿಕೊಂಡರು. ಸುಗ್ರೀವನು ವಾಲಿಯ ಪರಾಕ್ರಮದ ಮಾಹಿತಿಯನ್ನು ಉದಹರಿಸಿ ತಿಳಿಸಿದನು. ಆಗ ಶ್ರೀರಾಮನು ಒಂದೇ ಬಾಣದಿಂದ ಏಳು ತಾಳೆಯ ಮರಗಳನ್ನು ಭೇದಿಸಿ ತನ್ನ ಸಾಮರ್ಥ್ಯವನ್ನು ಪ್ರಕಟಿಸಿದನು. ವಾಲಿಯನ್ನು ಕೊಲ್ಲಲು ಸುಗ್ರೀವನಿಗೆ ಅನುಕೂಲ ಅವಕಾಶವನ್ನು ಮಾಡಿಕೊಟ್ಟರೂ ಸುಗ್ರೀವನು ಅದರ ಲಾಭಪಡೆಯಲಿಲ್ಲ. ಸುಗ್ರೀವನು ಯುದ್ಧವನ್ನು ಬಿಟ್ಟು ಓಡಿದನು. ಶ್ರೀರಾಮನು ತನ್ನ ಬಾಣದಿಂದ ವಾಲಿಯನ್ನು ಮೂರ್ಛಿತಗೊಳಿಸಿದನು. ವಾಲಿಯ ವಧೆಯಿಂದ ಆತನ ಭಾರ್ಯೆಯಾದ ತಾರಾ ಶೋಕಸಾಗರದಲ್ಲಿ ಮುಳುಗಿ ವಿಲಾಪಮಾಡಹತ್ತಿದಳು. ಆಗ ಸುಗ್ರೀವನಿಗೂ

ಪಶ್ಚಾತ್ತಾಪವಾಯಿತು. ಶ್ರೀರಾಮನು ಇವರನ್ನು ಸಂತೈಸಿ, ಸುಗ್ರೀವನಿಂದ ವಾಲಿಯ ಅಂತ್ಯಕಾರ್ಯಗಳನ್ನು ಮಾಡಿಸಿದನು. ಶ್ರೀರಾಮನು ವಾಲಿಯ ಅಂತಿಮ ಇಚ್ಛೆಯನುಸಾರ ಆತನ ಪುತ್ರನಾದ ಅಂಗದನನ್ನು ತನ್ನ ಸ್ವಂತ ಮಗನಂತೆ ಪರಿಪಾಲಿಸಲು ಸುಗ್ರೀವನಿಗೆ ಹೇಳಿದನು. ಅಂಗದನು ಮಾತ್ರ ಸುಗ್ರೀವನ ಬಗ್ಗೆ ಸಂದೇಹ ತಾಳಿದ್ದನು. ವಾಲಿಯ ಹೆಂಡತಿಯಾಗಿದ್ದ ತಾರಾ ಸುಗ್ರೀವನೊಡನೆ ಪತ್ನಿಯಂತೆಯೇ ಇರತೊಡಗಿದಳು. ರಾಜ್ಯವನ್ನು ಪಡೆದನಂತರ, ವಿಷಯಾಸಕ್ತನಾದ ಸುಗ್ರೀವನಿಗೆ ತನ್ನ ಕರ್ತವ್ಯದ ಅರಿವು ಉಳಿಯಲಿಲ್ಲ. ಆಗ ಹನುಮಾನನು ಶ್ರೀರಾಮನಿಗೆ ಕೊಟ್ಟ ವಚನದ ಬಗ್ಗೆ ಸುಗ್ರೀವನಿಗೆ ಜ್ಞಾಪಿಸಿಕೊಟ್ಟನು. ಸುಗ್ರೀವನು ಸೀತೆಯ ಶೋಧಕ್ಕಾಗಿ ವಾನರಸೇನೆಯ ನೆರವಿನಿಂದ ಬಹಳ ಪ್ರಯತ್ನಪಟ್ಟನು. ಈತನಿಗೆ ಅಲ್ಲಿನ ಪರಿಸರದ ಭೂಭಾಗದ ಮಾಹಿತಿಯೂ ಚೆನ್ನಾಗಿ ಇತ್ತು. ಸುಗ್ರೀವನು ಶ್ರೀರಾಮನಿಗೆ ಕೊಟ್ಟ ವಚನವನ್ನು ಅಲಕ್ಷಿಸುತ್ತಿರುವದನ್ನು ಕಂಡ ಲಕ್ಷ್ಮಣನು ಕೂಡ ಸುಗ್ರೀವನನ್ನು ತರಾಟೆಗೆ ತೆಗೆದುಕೊಂಡನು. ಸೀತೆಯ ಪತ್ತೆಹಚ್ಚಿ ಹನುಮಾನನು ಮರಳಿ ಬಂದನಂತರ ಸುಗ್ರೀವನು ಸೀತೆಯ ಬಿಡುಗಡೆಗಾಗಿ ತನ್ನ ಸರ್ವಸ್ವವನ್ನು ಮುಡಿಪಾಗಿಟ್ಟನು. ವಾನರರ ಪ್ರಚಂಡ ಸೈನ್ಯವನ್ನು ಒಗ್ಗೂಡಿಸಿ ಶ್ರೀರಾಮನ ನೆರವಿಗೆ ಮುಂದಾದನು. ವಿಭೀಷಣನು ಶ್ರೀರಾಮನ ಆಸರೆಯನ್ನು ಕೋರಿಬಂದಾಗ ಆತನಿಗೆ ಆಶ್ರಯ ಕೊಡಬಾರದೆಂದು ಸುಗ್ರೀವನು ವಿನಂತಿಸಿದನು. ವಿಭೀಷಣನ ಬಗ್ಗೆ ಸುಗ್ರೀವನ ಮನಸ್ಸಿನಲ್ಲಿ ಸಂದೇಹವಿದ್ದುದೇ ಈ ವಿನಂತಿಗೆ ಕಾರಣವಾಗಿತ್ತು. ರಾವಣನು ಕಣ್ಣಿಗೆ ಬೀಳುತ್ತಲೇ ಸುಗ್ರೀವನು ಹಿಂದುಮುಂದಿನ ವಿಚಾರ ಮಾಡದೇ ಆತನ ಮೇಲೆ ಏರಿಹೋಗಿ ರಾವಣನ ಮುಕುಟವನ್ನು ಕೆಳಗೆ ಕೆಡವಿದನು. ರಾವಣನನ್ನು ಚನ್ನಾಗಿ ತೊಂದರೆಗೀಡುಮಾಡಿದನು. ಶ್ರೀರಾಮ-ಲಕ್ಷ್ಮಣರು ಮೂರ್ಛೆ ಹೋದಾಗ ಭಯಗೊಂಡು ದಿಕ್ಕಾಪಾಲಾಗಿ ಓಡುತ್ತಿದ್ದ ವಾನರರ ಸೇನೆಗೆ ಧೈರ್ಯ ಹೇಳಿ ಹುರುಪನ್ನು ತುಂಬಿದನು. ಸುಗ್ರೀವನು ಯುದ್ಧದಲ್ಲಿ ರಾವಣ-ಕುಂಭಕರ್ಣರ ಶರಗಳಿಂದ ಮೂರ್ಛೆಗೊಂಡನು. ಈತನು ಕುಂಭಕರ್ಣನಿಂದ ಸೆರೆಹಿಡಿಯಲ್ಪಟ್ಟಿದ್ದನು. ಆದರೆ ಸುಗ್ರೀವನು ಅಲ್ಲಿಂದ ಪಾರಾದನು. ಕುಂಭಕರ್ಣನ ವಧೆಯಾದನಂತರ ಹನುಮಾನನು ಸುಗ್ರೀವನ ಹೇಳಿಕೆಯಂತೆ ಲಂಕೆಗೆ ಬೆಂಕಿಯಿಟ್ಟನು. ಉರಿಯುತ್ತಿದ್ದ ಲಂಕೆಯಿಂದ ತಲ್ಲಣಿಸಿ ಓಡುತ್ತಿದ್ದ ರಾಕ್ಷಸರು ಆಚೆ ಓಡಿಹೋಗದಂತೆ ವಾನರರಿಂದ ಎಲ್ಲ ದ್ವಾರಗಳನ್ನು ಮುಚ್ಚಿಸಿದನು. ಈತನು ಕುಂಭಕರ್ಣನ ಮಗನಾದ ಕುಂಭನನ್ನು ವಧಿಸಿದನು. ವಿರೂಪಾಕ್ಷನನ್ನು ಕೊಂದನು. ಮಹೋದರನ ಶಿರಶ್ಛೇದನವನ್ನು ಮಾಡಿದನು. ರಾವಣನ ವಧೆಯಾದನಂತರ ಸುಗ್ರೀವನು ಶ್ರೀರಾಮನೊಡನೆ ಅಯೋಧ್ಯೆಗೆ ಹೋದನು. ರಾಜ್ಯಾಭಿಷೇಕಸಮಯದಲ್ಲಿ ಶ್ರೀರಾಮನು ಈತನಿಗೆ ಯೋಗ್ಯ ಸತ್ಕಾರಗಳನ್ನು ಸಲ್ಲಿಸಿ ಈತನನ್ನು ಕಿಷ್ಕಿಂಧೆಗೆ ಕಳುಹಿಸಿಕೊಟ್ಟನು. ಶ್ರೀರಾಮನು ಅನೇಕ ವರ್ಷಗಳ ಕಾಲ ರಾಜ್ಯವನ್ನಾಳಿ ನಿಜಧಾಮಕ್ಕೆ ತೆರಳುತ್ತಿದ್ದಾಗ ಸುಗ್ರೀವನು ಕೂಡ ತನ್ನ ರಾಜ್ಯವನ್ನು ಅಂಗದನಿಗೆ ಒಪ್ಪಿಸಿ ಶ್ರೀರಾಮನೊಡನೆ ತಾನೂ ಸೂರ್ಯಮಂಡಲವನ್ನು ಪ್ರವೇಶಿಸಿದನು.

### ೧೫೦. ಸುತೀಕ್ಷ್ಣ

ಈತನು ಅಗಸ್ತ್ಯನ ಒಬ್ಬ ಶಿಷ್ಯನಾಗಿದ್ದನು. ರಾಮಕುಂಡದಲ್ಲಿ ತಪವನ್ನಾಚರಿಸಿ ತ್ರಿಲೋಕಸಂಚಾರವನ್ನು ಮಾಡುವ ಸಾಮರ್ಥ್ಯವನ್ನು ಪಡೆದುಕೊಂಡನು. ಶ್ರೀರಾಮನು ಎರಡು ಸಲ ಇವನ ಆಶ್ರಮದಲ್ಲಿ ಉಳಿದುಕೊಂಡಿದ್ದನು. ಶರಭಂಗ ಋಷಿಯ ಹೇಳಿಕೆಯಂತೆ ಶ್ರೀರಾಮನು ಈ ಮುನಿಯನ್ನು ಭೇಟಿಯಾದನು. ಶ್ರೀರಾಮನು ತನ್ನ ಪರಿಚಯವನ್ನು ಮಾಡಿಕೊಟ್ಟನಂತರ ಸುತೀಕ್ಷ್ಣನು ಶ್ರೀರಾಮನನ್ನು ಆಲಿಂಗಿಸಿ ಸ್ವಾಗತಿಸಿದನು. ಅಗಸ್ತ್ಯಮುನಿಯ ಆಶ್ರಮವಿರುವ ಸ್ಥಳದ ಮಾಹಿತಿಯನ್ನು ಶ್ರೀರಾಮನಿಗೆ ಅರುಹಿದನು.

### ೧೫೧. ಸುಂದ - ಉಪಸುಂದ

ವಾಲ್ಮೀಕಿರಾಮಾಯಣದಲ್ಲಿ ಸುಂದೋಪಸುಂದರ ಪಿತನ ಹೆಸರು ಜಂಭ ಎಂದು ಕೊಡಲಾಗಿದೆ. ಇವರು ಯಕ್ಷರಾಗಿದ್ದರು. ಅಗಸ್ತ್ಯನ ಶಾಪದಿಂದ ರಾಕ್ಷಸರಾದರು. ಸುಂದೋಪಸುಂದರು ಹಿರಣ್ಯಕಶಿಪುವಿನ ವಂಶಜನಾದ ನಿಕುಂಭ ಎಂಬ ದೈತ್ಯನ ಪುತ್ರರಾಗಿದ್ದರೆಂಬ ಉಲ್ಲೇಖ ಮಹಾಭಾರತದಲ್ಲಿ ಇದೆ. ಇವರು

ವಿಂಧ್ಯಪರ್ವತದಲ್ಲಿ ಉಗ್ರತಪಸ್ಸನ್ನಾಚರಿಸಿ, ಬ್ರಹ್ಮದೇವನನ್ನು ಪ್ರಸನ್ನಗೊಳಿಸಿದರು. ಬ್ರಹ್ಮದೇವನು ಇವರಿಗೆ ಮಾಯಾವಿದ್ಯೆಯನ್ನು, ಅಸ್ತ್ರಗಳನ್ನು, ತುಲನೆಯಿಲ್ಲದಷ್ಟು ಶಕ್ತಿಯನ್ನು, ಇಷ್ಟವಿದ್ದ ರೂಪವನ್ನು ತಾಳುವ ಕ್ಷಮತೆಯನ್ನು, ಇದಲ್ಲದೇ ಒಬ್ಬರನ್ನೊಬ್ಬರು ಕೊಲ್ಲದಿದ್ದರೆ ಇಬ್ಬರೂ ಅಮರರಾಗಿರುವ ವರವನ್ನು ಕೊಟ್ಟನು. ಹೀಗೆ ಇದ್ದುದರಿಂದ ಯಾರೂ ಇವರನ್ನು ಕೊಲ್ಲುವಂತಿರಲಿಲ್ಲ. ವರವನ್ನು ದೊರಕಿಸಿಕೊಂಡನಂತರ ಇವರಿಬ್ಬರೂ ಯಜ್ಞಗಳಲ್ಲಿ ವಿಘ್ನಗಳನ್ನುಂಟುಮಾಡಹತ್ತಿದರು. ಋಷಿಗಳನ್ನು ನಿಶ್ಚಿಂತೆಯಿಂದ ಇರಲು ಬಿಡುತ್ತಿರಲಿಲ್ಲ. ಇವರ ಕಾಟ ಅತಿ ಹೆಚ್ಚಾದ ಬಗ್ಗೆ ಬ್ರಹ್ಮದೇವನ ಬಳಿ ದೂರು ಬಂದಿತು. ಆಗ ಸುಂದೋಪ ಸುಂದರಲ್ಲಿ ಮುನಿಸುಂಟಾಗಬೇಕೆಂದು ಬ್ರಹ್ಮದೇವನು ತುಂಬಾ ಲಾವಣ್ಯವತಿಯಾದ ಓರ್ವ ಸ್ತ್ರೀಯನ್ನು ನಿರ್ಮಿಸಲು ವಿಶ್ವಕರ್ಮನಿಗೆ ಹೇಳಿದನು. ವಿಶ್ವಕರ್ಮನು ಸೃಷ್ಟಿಯ ಸೌಂದರ್ಯದ ಕಣಕಣಗಳೆಲ್ಲವನ್ನೂ ಒಟ್ಟುಗೂಡಿಸಿ ಮನಸೂರೆಗೊಳ್ಳುವ ಓರ್ವ ಲಾವಣ್ಯವತಿಯನ್ನು ನಿರ್ಮಿಸಿದನು. ಇವಳೇ ತಿಲೋತ್ತಮಾ. ಇವಳ ಸೌಂದರ್ಯಕ್ಕೆ ಮರುಳಾದ ಸುಂದೋಪಸುಂದರು ಇವಳ ಪ್ರಾಪ್ತಿಗಾಗಿ ತಮ್ಮತಮ್ಮಲ್ಲಿಯೇ ಕಾದಾಡಿ ಕೊನೆಗೆ ಇಬ್ಬರೂ ಮಡಿದರು.

ತಾರಕಾ ಎಂಬಾಕೆಯು ಸುಂದನ ಪತ್ನಿಯಾಗಿದ್ದಳು.

## ೧೫೫೦. ಸುಮತಿ

ಇವಳು ವಿದರ್ಭದ ರಾಜಕನ್ಯೆ ; ಸಗರರಾಜನ ಎರಡನೆಯ ಹೆಂಡತಿ. ಔರ್ವನ ಕೃಪೆಯಿಂದ ಈಕೆಗೆ ಅರವತ್ತುಸಾವಿರ ಮಕ್ಕಳಾದರೆಂದು ಪದ್ಮಪುರಾಣದಲ್ಲಿದೆ. ಆದರೆ ಮಹಾಭಾರತದ ವನಪರ್ವದಲ್ಲಿ ಶಂಕರನ ವರದಿಂದ ಈಕೆ ಒಂದು ಕುಂಬಳಕಾಯಿಯನ್ನು ಪ್ರಸವಿಸಿದಳೆಂದಿದೆ. ಈ ಕುಂಬಳಕಾಯಿಯ ಬೀಜಗಳಿಂದ ಅರವತ್ತುಸಾವಿರ ಮಕ್ಕಳಾದರೆಂಬ ಮಾಹಿತಿ ಇದೆ. ಬ್ರಹ್ಮವೈವರ್ತಪುರಾಣದಂತೆ ಶಂಕರನ ಪ್ರಸಾದದಿಂದ ನೂರು ವರ್ಷಗಳನಂತರ ಇವಳಿಗೆ ಒಂದು ಮಾಂಸಪಿಂಡವಾಯಿತು. ಆ ಪಿಂಡದಿಂದ ಅರವತ್ತುಸಾವಿರ ಪುತ್ರರನ್ನಾಗಿ ಮಾಡಿದನೆಂಬ ವರ್ಣನೆ ಇದೆ.

## ೧೫೫೧. ಸುಮಂತ್ರ

ಇವನು ದಶರಥರಾಜನ ಅಷ್ಟಪ್ರಧಾನರಲ್ಲಿ ಒಬ್ಬ ; ದಶರಥನ ಸಾರಥಿಯೂ ಸ್ತುತಿಪಾಠಕನೂ ಅಹುದು. ಶ್ರೀರಾಮನು ವನವಾಸಕ್ಕೆ ತೆರಳುವ ಸಮಯದಲ್ಲಿ ಅವನನ್ನು ಬೀಳ್ಕೊಡಲು ಸುಮಂತ್ರನು ರಥವನ್ನು ತೆಗೆದುಕೊಂಡು ಹೋಗಿದ್ದನು. ದಶರಥನಿಗೆ ಪುತ್ರಪ್ರಾಪ್ತಿಯಾಗುವ ವೃತ್ತಾಂತವನ್ನು ಋತ್ವಿಜರಿಂದ ಪುರಾಣದಲ್ಲಿದ್ದಂತೆ ಕೇಳಿಸಿಕೊಂಡು ಈತನು ಈ ಭವಿಷ್ಯವಾಣಿಯನ್ನು ದಶರಥನಿಗೆ ವಿಕಾಂತದಲ್ಲಿ ತಿಳಿಸಿದನು. ಈತನು ಅಯೋಧ್ಯೆಗೆ ಮರಳುವಾಗ ಶ್ರೀರಾಮನು ಹೇಳಿಕಳಿಸಿದ ವಾರ್ತೆಯನ್ನು ಕೇಳಿಕೊಂಡು, 'ನಾನು ಈ ಬರಿದಾದ ರಥವನ್ನು ಅಯೋಧ್ಯೆಗೆ ಹೇಗೆ ಒಯ್ಯಲಿ ? ಇಂಥ ರಥವನ್ನು ಕಂಡು ಜನರಿಗೆ ಎಷ್ಟೊಂದು ದುಃಖವಾದೀತು ? ಹೇ ರಾಮನೇ, ನೀನು ಈ ರಥದಲ್ಲಿರದಾಗ ಈ ಕುದುರೆಗಳು ಈ ರಥವನ್ನು ಹೇಗೆ ತಾನೇ ಎಳೆದೊಯ್ಯಬಲ್ಲವು ? ಹೇ ರಾಮನೇ, ನಾನು ನಿನ್ನನ್ನು ಬಿಟ್ಟು ಅಯೋಧ್ಯೆಗೆ ಹಿಂದಿರುಗಲಾರೆ !' ಎಂಬ ಮಾತುಗಳಿಂದ ಶ್ರೀರಾಮನ ಬಗ್ಗೆ ಆತನಲ್ಲಿದ್ದ ಭಕ್ತಿವಿಶ್ವಾಸಗಳು ಎದ್ದುಕಾಣುವುವು. ಶ್ರೀರಾಮನು ಸುಮಂತ್ರನಿಗೆ ತಿಳಿಸಿಹೇಳಿ ಆತನನ್ನು ಅಯೋಧ್ಯೆಯತ್ತ ಕಳಿಸಿದನು. ಅಯೋಧ್ಯೆಯಿಂದ ಹೊರಡುವಾಗ ದುಃಖದಿಂದಾಗಿ ಈತನು ತನ್ನ ಮುಖವನ್ನು ಮುಚ್ಚಿಕೊಂಡಿದ್ದನು. ನಡೆದ ಎಲ್ಲ ವೃತ್ತಾಂತವನ್ನು ದಶರಥರಾಜನಿಗೆ ತಿಳಿಸಿ ನಂತರ ಕೌಸಲ್ಯೆಯನ್ನು ಸಂತೈಸಿದನು. ಶ್ರೀರಾಮನ ಅಶ್ವಮೇಧಯಜ್ಞದ ಕಾಲಕ್ಕೆ ಈತನು ಶತ್ರುಘ್ನನೊಡನೆ ಇದ್ದನು. ಶ್ರೀರಾಮನು ವನವಾಸಕ್ಕೆ ಹೋಗಲೇಬೇಕೆಂದು ಹಟ ಹಿಡಿದ ಕೈಕೇಯಿಯನ್ನು ಸಾಕಷ್ಟು ಬಿರುನುಡಿಗಳಿಂದ ಧಿಕ್ಕರಿಸಿದನು. ಈ ಹಟದ ಪರಿಣಾಮಗಳು ಬಹುದೀರ್ಘವಾಗಲಿವೆ, ಭಯಂಕರ ವಾಗಲಿವೆ ಎಂಬ ಬಗ್ಗೆ ಕೈಕೇಯಿಗೆ ವಿವರಿಸಿ ಹೇಳಿದ್ದನು.

## ೧೫೪. ಸುಮಾಲಿ

ಈತ ಲಂಕೆಯಲ್ಲಿ ವಾಸವಿದ್ದ ಒಬ್ಬ ರಾಕ್ಷಸ ; ರಾವಣನ ಸೋದರಮಾವ. ಈತನ ಪತ್ನಿಯ ಹೆಸರು ಕೇತುಮತಿ ಮತ್ತು ಮಗಳು ಕೈಕಸಿ ಅಥವಾ ಕೇಶಿನಿ. ಇವಳಲ್ಲದೆ ರಾಕಾ, ಪುಷ್ಪೋತ್ಕಟಾ, ಬಲಾಕಾ ಎಂಬ ಕನ್ಯೆಯರ ವಿವಾಹ ವಿಶ್ರವನ ಜೊತೆ ನಡೆದಿತ್ತು. ಈತ ಸುಕೇಶನ ಎರಡನೆಯ ಮಗನಿದ್ದನು. ಇವನಿಗೆ ಪ್ರಹಸ್ತ, ಅಕಂಪನಾದಿ ಎಂಬ ಹನ್ನೊಂದು ಗಂಡುಮಕ್ಕಳು ಮತ್ತು ಮೂರು ಕನ್ಯೆಯರಾದರು. ಈತನು ವೈಶ್ರವಣ ಕುಬೇರನನ್ನು ಕಂಡು, ಆತನಂತೆ ತನಗೂ ಘನವಂತಿಕೆ ದೊರೆಯಬೇಕೆಂದು, ತನ್ನ ಕನ್ಯೆಯು ವಿಶ್ರವನನ್ನು ಮದುವೆಯಾಗಬೇಕೆಂದು ತಾನಾಗಿ ಆ ಕನ್ಯೆಯನ್ನು ವಿಶ್ರವನ ಬಳಿ ಕಳುಹಿಸಿದನು. ಈ ವಿವಾಹದಿಂದ ಅವಳಿಗೂ ವೈಶ್ರವಣನಂತಹ ಗಂಡುಮಕ್ಕಳು ಹುಟ್ಟುವರೆಂದೆನಿಸುತ್ತಿತ್ತು. ರಾವಣ ಮುಂತಾದವರಿಗೆ ವರಗಳು ದೊರೆತಿವೆ ಎಂಬುದನ್ನು ಕೇಳಿ ಇವನು ರಸಾತಳದಿಂದ ಮೇಲಕ್ಕೆ ಬಂದನು. ರಾವಣನನ್ನು ಕಂಡು 'ಇನ್ನು ರಾಕ್ಷಸರಿಗೆ ವಿಷ್ಣುವಿನಿಂದ ಭಯವಿಲ್ಲದಂತಾಯಿತು. ಲಂಕಾನಗರವು ರಾಕ್ಷಸರ ಗಂಡುಮೆಟ್ಟಾಯಿತು. ನೀನು ಬೇಕಾದ ಉಪಾಯವನ್ನು ಮಾಡಿ ಲಂಕೆಯನ್ನು ವೈಶ್ರವಣ ಕುಬೇರನಿಂದ ಪಡೆದುಕೊ ! ನೀನು ಲಂಕಾಧಿಪತಿಯಾಗು' ಎಂದು ನುಡಿದನು. ಹನುಮಾನನು ಸುಮಾಲಿಯ ಮನೆಗೆ ಬೆಂಕಿಹಚ್ಚಿದನು. ದೇವತೆಗಳ ಸೈನ್ಯದೊಡನೆ ಯುದ್ಧಮಾಡುತ್ತಿದ್ದಾಗ ಸಾವಿತ್ರವಸು ಎಂಬಾತನು ಈತನನ್ನು ಈತನ ಗದೆಯಿಂದಲೇ ನುಚ್ಚುನುರಿ ಮಾಡಿದನು.

## ೧೫೫. ಸುರಸಾ

ಇವಳು ಕಶ್ಯಪ ಮತ್ತು ಕ್ರೋಧವಶ ಈ ದಂಪತಿಗಳ ಮಗಳು. ಹನುಮಾನನ ಬಲವನ್ನು ಪರೀಕ್ಷಿಸುವ ಉದ್ದೇಶದಿಂದ ದೇವತೆಗಳು ಸುರಸೆಗೆ ರಾಕ್ಷಸಿಯಾಗಲು ಬಿನ್ನೈಸಿದರು. ಸುರಸೆಗೆ ಮುಗಿಲಿನೆತ್ತರ ಬಾಯಿಯನ್ನು ವಿಸ್ತರಿಸಿ ಲಂಕೆಯತ್ತ ಹೊರಟ ಹನುಮನಿಗೆ ವಿಘ್ನವನ್ನುಂಟುಮಾಡಲು ಹೇಳಿದರು. ದೇವತೆಗಳ ಹೇಳಿಕೆಯಂತೆ ಸುರಸೆ ತನ್ನ ಬಾಯಿಯನ್ನು ಅಗಲವಾಗಿ ತೆರೆದಳು, ಲಂಕೆಯತ್ತ ಆಕಾಶಮಾರ್ಗವಾಗಿ ಹೋಗುತ್ತಿದ್ದ ಹನುಮಾನನಿಗೆ ತನ್ನ ಬಾಯಿಯಲ್ಲಿ ಪ್ರವೇಶಿಸಲು ಹೇಳಿದಳು. ಆಗ ಹನುಮಾನನು ತನ್ನ ದೇಹವನ್ನು ಅವಳ ಬಾಯಿಗಿಂತ ದೊಡ್ಡದಾಗಿ ಮಾಡಿದನು. ಆಗ ಸುರಸೆಯು ತನ್ನ ಬಾಯಿಯನ್ನು ಇನ್ನಷ್ಟು ವಿಸ್ತರಿಸಿದಳು. ತಕ್ಷಣ ಹನುಮಾನನು ತನ್ನ ಆಕಾರವನ್ನು ಹೆಬ್ಬೆರಳಿನಷ್ಟು ಚಿಕ್ಕದನ್ನಾಗಿ ಮಾಡಿ ಅವಳ ಬಾಯಿಯಲ್ಲಿ ಪ್ರವೇಶಿಸಿ ಕೂಡಲೇ ಹೊರಗೆ ನುಸುಳಿಬಂದನು. ಆಗ ಸುರಸೆಗೆ ಈತನ ಬಲದ ಅರಿವಾಗಿ ಹನುಮಾನನಿಗೆ ಮುಂದಿನ ಕಾರ್ಯದಲ್ಲಿ ಶುಭವನ್ನು ಕೋರಿದಳು.

## ೧೫೬. ಸೋಮದಾ

ಸೋಮದೆಯು ಉರ್ಮಿಳೆ ಎಂಬ ಗಂಧರ್ವಿಯ ಮಗಳು. ಚೂಲಿ ಎಂಬ ಮುನಿಯ ತಪೋಬಲದಿಂದ ಇವಳಿಗೆ ಬ್ರಹ್ಮದತ್ತನೆಂಬ ಪುತ್ರನು ಹುಟ್ಟಿದನು. ಇವಳ ಉತ್ಕೃಷ್ಟಸೇವೆಯಿಂದ ಚೂಲಿಯು ಬಹುಸಂತೋಷಗೊಂಡು ಈಕೆಗೆ ಪ್ರಿಯವಾದುದನ್ನು ಕೊಡಬಯಸಿದನು. ಇವಳು ಯಾರನ್ನೂ ಮದುವೆಯಾಗಿರಲಿಲ್ಲ ; ಮದುವೆಯಾಗಿ ಪತ್ನಿಯಾಗುವ ಇಚ್ಛೆಯೂ ಇರಲಿಲ್ಲ. ಹೀಗಿದ್ದರೂ ಆಕೆಗೆ ಒಬ್ಬ ಮಗನು ಬೇಕಿದ್ದನು. ಈಕೆಯು ಚೂಲಿಯ ಬಳಿ ತನಗೊಬ್ಬ ಪುತ್ರ ಬೇಕೆಂಬ ಇಚ್ಛೆಯನ್ನು ಪ್ರಕಟಿಸಿದಳು. ಆಗ ಆತನು ತನ್ನ ಶಕ್ತಿಯಿಂದ ಅವಳ ಇಚ್ಛೆಯನ್ನು ಪೂರೈಸಿದನು.

## ೧೫೭. ಸೌದಾಸ (ಕಲ್ಮಾಷಪಾದ)

ಸೌದಾಸನು ಸುದಾಸನೆಂಬ ರಾಜನ ಮಗ. ಮತ್ಸ್ಯಪುರಾಣದಲ್ಲಿ ಈತನು ಋತುಪರ್ಣರಾಜನ ಮಗನಾಗಿದ್ದನೆಂದು ಹೇಳಲಾಗಿದೆ. ವಸಿಷ್ಠನಿಗೆ ಶಾಪಕೊಡಲೆಂದು ಈತನು ಕೈಯಲ್ಲಿ ಹಿಡಿದ ಉದಕವನ್ನು

ತನ್ನ ಸ್ವಂತದ ಪಾದಗಳ ಮೇಲೆ ಚೆಲ್ಲಿದನು. ಆಗ ಇವನ ಪಾದಗಳ ಬಣ್ಣವು ಚಿತ್ರವಿಚಿತ್ರವಾಯಿತು. ಅಂದಿನಿಂದ ಈತನು ಕಲ್ಮಾಷಪಾದನೆಂದು ಖ್ಯಾತಿಗೊಂಡನು. ವಸಿಷ್ಠನು ಈತನಿಗೆ ಶಾಪವನ್ನು ಕೊಟ್ಟ ಕಾರಣವು (ಶಾಪ ಕ್ರಮಸಂಖ್ಯೆ ೫೭, ವಸಿಷ್ಠ > ಸೌದಾಸ) ಬೇರೆ ಗ್ರಂಥಗಳಲ್ಲಿ, ವಾಲ್ಮೀಕಿಯು ಕೊಟ್ಟ ಕಾರಣಕ್ಕಿಂತ ಬೇರೆ ಯಾಗಿದೆ. ಸೌದಾಸರಾಜನು ರೇವಾ ಮತ್ತು ನರ್ಮದಾ ನದಿಗಳ ತೀರದಲ್ಲಿ ಬೇಟೆಗೆಂದು ಹೋಗಿದ್ದನು. ಆಗ ಒಂದು ಹೆಣ್ಣು ಮತ್ತು ಗಂಡುಹುಲಿಯ ಜೋಡಿಯು ಕಾಮಕ್ರೀಡೆಯಲ್ಲಿದ್ದುದನ್ನು ಕಂಡನು. ಈತನು ಈ ಜೊತೆಯ ಹೆಣ್ಣುಹುಲಿಯನ್ನು ಕೊಂದನು. ಕೂಡಲೇ ಆ ಹೆಣ್ಣುಹುಲಿಯು ಸಾಯುವ ಮೊದಲು ದೊಡ್ಡದಾಗಿ ರಾಕ್ಷಸರೂಪವನ್ನು ತಾಳಿ 'ಎಂದಿಗಾದರೂ ಈ ಸೇಡನ್ನು ನಿನ್ನ ಮೇಲೆ ತೀರಿಸಿಕೊಳ್ಳುವೆ' ಎಂದು ಅಬ್ಬರಿಸಿ ಮಾಯವಾಯಿತು ಎಂದು ನಾರದಪುರಾಣದಲ್ಲಿದೆ. ಮಹಾಭಾರತದಲ್ಲಿ ರಾಕ್ಷಸನಾಗಲು ಕಾರಣ ಬೇರೆಯಾಗಿದೆ. ಬೇಟೆಯಿಂದ ಹಿಂದಿರುಗುವಾಗ ವಸಿಷ್ಠಪುತ್ರನಾದ ಶಕ್ತಿಯು ಈತನಿಗೆ ಎದುರಾದನು. ದಾರಿಯು ತೀರ ಇಕ್ಕಟ್ಟಿನದಿತ್ತು : ಒಬ್ಬರು ಮಾತ್ರ ದಾಟುವಂತಿತ್ತು. ಸೌದಾಸರಾಜನು ಶಕ್ತಿಗೆ ದಾರಿಯನ್ನು ಬಿಟ್ಟುಕೊಡಲು ಹೇಳಿದನು. ಶಕ್ತಿಯು ದಾರಿಯನ್ನು ಬಿಟ್ಟುಕೊಡದೇ 'ಈ ಮಾರ್ಗವು ಬ್ರಾಹ್ಮಣರದಿದೆ ; ರಾಜನು ಮೊದಲು ಬ್ರಾಹ್ಮಣರಿಗೆ ದಾರಿ ಕೊಡಬೇಕು' ಎಂಬ ಧರ್ಮೋಪದೇಶವನ್ನು ಮಾಡತೊಡಗಿದನು. ಆಗ ಸೌದಾಸನು ರಾಕ್ಷಸನ ಆವೇಶದಿಂದ ಈ ಶಕ್ತಿಯನ್ನು ಬಹಳಷ್ಟು ಹೊಡೆದನು. 'ನೀನು ನರಮಾಂಸಭಕ್ಷಕ ರಾಕ್ಷಸನಾಗುವೆ' ಎಂದು ಶಕ್ತಿಯು ಸೌದಾಸನಿಗೆ ಶಾಪವನ್ನು ಕೊಟ್ಟನು. ವಿಶ್ವಾಮಿತ್ರನು ಇವನ ಯಜ್ಞದ ಪೌರೋಹಿತ್ಯವನ್ನು ಸ್ವೀಕರಿಸಿದ್ದರಿಂದ ವಸಿಷ್ಠ-ವಿಶ್ವಾಮಿತ್ರರಲ್ಲಿ ಹಗೆತನ ಉಂಟಾಯಿತು. ತನಗೆ ಶಾಪವನ್ನು ಕೊಟ್ಟ ವ್ಯಕ್ತಿಯು ವಸಿಷ್ಠನ ಪುತ್ರನೆಂದು ತಿಳಿದಾಗ ಸೌದಾಸನು ಉಃಶಾಪವನ್ನು ಬೇಡಿದನು. 'ಈ ನಂತರ ನರಮಾಂಸಭಕ್ಷಕನಾಗು!' ಎಂಬ ಶಾಪವನ್ನು ಕೊಟ್ಟ ಶಕ್ತಿಯಿಂದಲೇ ಸೌದಾಸನು ಹಕ್ಕಿನಿಂದ ನರಮಾಂಸವನ್ನು ಭಕ್ಷಿಸಲಾರಂಭಿಸಿದನು. ಇವನು ವಸಿಷ್ಠರ ನೂರು ಪುತ್ರರನ್ನು ತಿಂದುಹಾಕಿದನು. ಒಮ್ಮೆ ಈತನು ರತಿಕ್ರೀಡೆಯಲ್ಲಿದ್ದ ಬ್ರಾಹ್ಮಣದಂಪತಿ ಗಳಲ್ಲಿ ಗಂಡನನ್ನು ತಿಂದುಬಿಟ್ಟನು. ಆಗ ಆ ಬ್ರಾಹ್ಮಣನ ಹೆಂಡತಿ 'ನೀನು ಸ್ತ್ರೀಸಮಾಗಮ ಮಾಡುವ ಸಮಯದಲ್ಲಿಯೇ ಮೃತಪಡುವೆ !' ಎಂಬ ಶಾಪವಾಣಿಯನ್ನು ಸೌದಾಸನಿಗೆ ನುಡಿದಳು. ಅನಂತರ ಆಕೆಯು ಸತಿಹೋದಳು. 'ಮೈಮೇಲೆ ಗಂಗೆಯ ಜಲಬಿಂದುಗಳು ಬಿದ್ದನಂತರ ನೀನು ಶಾಪಮುಕ್ತವನಾಗುವೆ' ಎಂಬ ಉಃಶಾಪವನ್ನು ವಸಿಷ್ಠನು ಈತನಿಗೆ ಕೊಟ್ಟಿದ್ದರೂ ಬ್ರಾಹ್ಮಣನ ಹೆಂಡತಿ 'ನೀನು ಸದಾಕಾಲವೂ ರಾಕ್ಷಸ ನಾಗಿಯೇ ಉಳಿಯುವೆ' ಎಂಬ ಶಾಪವನ್ನು ಕೊಟ್ಟಿದ್ದಳು. ಆಗ ಸೌದಾಸನು ಈಕೆಗೆ 'ನೀನು ಮಕ್ಕಳೊಂದಿಗೆ ಪಿಶಾಚಿಯಾಗು' ಎಂದು ಪ್ರತಿಶಾಪವನ್ನು ಕೊಟ್ಟನು. ಗರ್ಗಮುನಿಯು ಗಂಗಾಜಲವನ್ನು ಎತ್ತಿಕೊಂಡು ಹೋಗುತ್ತಿದ್ದಾಗ ಗಂಗೋದಕದ ಸಿಂಪಡಣೆಯಿಂದ ಇವರಿಬ್ಬರೂ ಮುಕ್ತರಾದರು. ಈತನ ಪತ್ನಿ ಮದಯಂತಿ. ಈಕೆಯು ಸೌದಾಸನನ್ನು ವಸಿಷ್ಠನಿಗೆ ಪ್ರತಿಶಾಪ ಕೊಡುವುದರಿಂದ ಪರಾವೃತ್ತಗೊಳಿಸಿದಳು.

ಈತನ ರಾಕ್ಷಸತ್ವ ಮುಗಿದನಂತರ ವಸಿಷ್ಠನು ಈತನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಪತಿವ್ರತೆಯ ಶಾಪದ ಕಾರಣ ಸೌದಾಸನಿಗೆ ಮಕ್ಕಳಾಗುತ್ತಿರಲಿಲ್ಲ. ಆಗ ವಸಿಷ್ಠನಿಂದ ಮದಯಂತಿಯಲ್ಲಿ ಗರ್ಭಸ್ಥಾಪನೆ ಯನ್ನು ಮಾಡಿಸಿದನು. ಈಕೆಯ ಆ ಪುತ್ರನೇ ಅಶ್ಮಕ. ಮಹಾಭಾರತದ ಅಶ್ವಮೇಧಪರ್ವದಲ್ಲಿ ಈ ಸೌದಾಸನ ಬಗ್ಗೆ ಇನ್ನೊಂದು ಪ್ರಸಂಗದ ಉಲ್ಲೇಖವಿದೆ : 'ಅಹಲ್ಯೆಯ ಅಪ್ಪಣೆಯಂತೆ ಗೌತಮನ ಶಿಷ್ಯನಾದ ಉತ್ತಂಕನು, ಸೌದಾಸನ ಪತ್ನಿಯಾದ ಮದಯಂತಿಯ ಕರ್ಣಕುಂಡಲಗಳನ್ನು ತರಲೆಂದು ಬರುತ್ತಿದ್ದಾಗ ಈ ರಾಕ್ಷಸನು ಉತ್ತಂಕನನ್ನು ತಿನ್ನಲು ಬಂದನು. ಆಗ ಉತ್ತಂಕನು, ತಾನು ಕೈಕೊಂಡ ಕಾರ್ಯವನ್ನು ಪೂರೈಸಿ ಮರಳಿ ನಿನ್ನ ಬಳಿ ಬರುವೆ ಎಂದು ಆಶ್ವಾಸನೆಯನ್ನು ಕೊಟ್ಟನು. ಆಗ ಸೌದಾಸರಾಕ್ಷಸನು ಈತನನ್ನು ಮದಯಂತಿಯ ಬಳಿ ಕಳುಹಿಸಿಕೊಟ್ಟನು. ಮದಯಂತಿಯು ತನ್ನ ಪತಿಯ ಬಳಿಯಿಂದ ಗುರುತಿನ ಒಂದು ಚಿಹ್ನೆಯನ್ನು ತರಲು ಹೇಳಿದ್ದಳು. ಆ ಚಿಹ್ನೆಯನ್ನು ಗುರುತಿಸಿದನಂತರ ಮದಯಂತಿ ತನ್ನ ಕರ್ಣಕುಂಡಲಗಳನ್ನು ಉತ್ತಂಕನಿಗೆ ಕೊಟ್ಟು ಜೋಪಾನವಾಗಿ ಕೊಂಡೊಯ್ಯಲು ಹೇಳಿದಳು. ರಾಕ್ಷಸನು ಉತ್ತಂಕನನ್ನು ಪ್ರತಿಜ್ಞೆಯಿಂದ ಮುಕ್ತಗೊಳಿಸಿದನು.'

## ೧೫೮. ಸ್ಥೂಲಶಿರಾ

ಈತನೊಬ್ಬ ಋಷಿ ; ಅಶ್ವಶಿರನ ಮಗ. ಈತನು ವಿಶ್ವಾವಸುವಿಗೆ ಶಾಪವನ್ನು ಕೊಟ್ಟು ಕಬಂಧ ರಾಕ್ಷಸನನ್ನಾಗಿ ಮಾಡಿದನು.

## ೧೫೯. ಸ್ವಯಂಪ್ರಭಾ

ಇವಳು ಮೇರುಸಾವರ್ಣಿಯ ಕನ್ಯೆಯಾಗಿದ್ದು ಹೇಮಾ ಎಂಬ ಅಪ್ಸರೆಯ ಗೆಳತಿಯಾಗಿದ್ದಳು. ಹೇಮಾ ಸ್ವರ್ಗಕ್ಕೆ ಹೋಗುವಾಗ, ಮಯನಿಂದ ನಿರ್ಮಿಸಲ್ಪಟ್ಟ ಸ್ಥಳವನ್ನು ಸ್ವಯಂಪ್ರಭೆಗೆ ಒಪ್ಪಿಸಿ ಅದನ್ನು ರಕ್ಷಿಸುವ ಸಾಮರ್ಥ್ಯವನ್ನೂ ಕೊಟ್ಟಳು. ಸ್ವಯಂಪ್ರಭಾ ಅಂಗದ ಮೊದಲಾದ ವಾನರರನ್ನು ಸಮುದ್ರತೀರಕ್ಕೆ ತಲುಪಿಸಿದಳು. ಇವಳು ಶ್ರೀರಾಮನ ದರ್ಶನವನ್ನು ಪಡೆದನಂತರ ಸ್ವರ್ಗಕ್ಕೆ ಹೋದಳು. ಇವಳನ್ನು 'ಪ್ರಭಾವತಿ' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರೆಂದು ತೋರುತ್ತದೆ. ಹಸಿದು ಬಂದ ವಾನರರಿಗೆಲ್ಲ ಹಣ್ಣುಹಂಪಲುಗಳನ್ನು ಕೊಟ್ಟು ಅವರಿಗೆ ಚೆನ್ನಾಗಿ ಆದರಸತ್ಕಾರವನ್ನು ಸಲ್ಲಿಸಿದಳು. ಆಗ ಹನುಮಾನನು ಈ ಉಪಕಾರವನ್ನು ಯಾವ ರೀತಿಯಿಂದ ತೀರಿಸಬೇಕೆಂದು ಕೇಳಿದಾಗ ಸ್ವಯಂಪ್ರಭಾ, 'ಧರ್ಮನಿರತಳಾದ ನಾನು ಎಲ್ಲವನ್ನೂ ಪಡೆದಿದ್ದೇನೆ' ಎಂದು ಸಾರ್ಥಕತೆಯನ್ನು ವ್ಯಕ್ತಪಡಿಸಿದಳು. ಅವಳು ಹನುಮಾನನಿಂದ ಏನನ್ನೂ ಸ್ವೀಕರಿಸಲು ಸವಿನಯವಾಗಿ ನಿರಾಕರಿಸಿದಳು.

## ೧೬೦. ಹನುಮಾನ

ಏಳು ಚಿರಂಜೀವಿಗಳಲ್ಲಿ ಒಬ್ಬ. ಸುಮೇರು ದೇಶದ ಕೇಸರಿ ಎಂಬಾತನ ಅಂಜನಿಯೆಂಬ ಪತ್ನಿಯಲ್ಲಿ ವಾಯುವಿನಿಂದ ಜನಿಸಿದ ಪುತ್ರ. ಈತನ ಜನ್ಮದ ಬಗ್ಗೆ ಇದ್ದ ಕಥೆಗಳು ಭಿನ್ನಭಿನ್ನ ಗ್ರಂಥಗಳಲ್ಲಿ ಬೇರೆಬೇರೆಯಾಗಿವೆ. ಉದಯವಾಗುತ್ತಿದ್ದ ಸೂರ್ಯನನ್ನು ಒಂದು ಪಕ್ವವಾದ ಫಲವೆಂದು ಭಾವಿಸಿ ಅದನ್ನು ತಿನ್ನಲೆಂದು ಈತನು ಅದರತ್ತ ನೆಗೆದಾಗ ರಾಹುವಿನ ಹೇಳಿಕೆಯಿಂದ ಇಂದ್ರನು ಈತನ ಮೇಲೆ ವಜ್ರಪ್ರಹಾರವನ್ನು ಮಾಡಿದನು. ಆಗ ಈತನ ಗದ್ದ ಅಂದರೆ ಹನು ಭಂಗವಾಯಿತು. ಅಂದಿನಿಂದ ಹನುಮಾನನೆಂಬ ಹೆಸರು ಬಂದಿತು. ಈ ವಜ್ರದ ಏಟಿನಿಂದ ಹನುಮಾನನು ಮೂರ್ಛೆಹೋಗಿದ್ದನು. ಆಗ ವಾಯುವು ತನ್ನ ಸಂಚಾರವನ್ನೆಲ್ಲ ನಿಲ್ಲಿಸಿಬಿಟ್ಟನು. ಜನರೆಲ್ಲರೂ ಉಸಿರುಕಟ್ಟಿದಂತಾಗಿ ಸಂಕಟದಲ್ಲಿ ಸಿಲುಕಿದರು. ವಾಯುವು ಬ್ರಹ್ಮದೇವನ ವಿನಂತಿಯನುಸಾರ ತನ್ನ ನಿಯಂತ್ರಣವನ್ನು ಹಿಂತೆಗೆದುಕೊಂಡನು. ಆಗ ಬ್ರಹ್ಮದೇವನು ಹನುಮಾನನಿಗೆ ತನ್ನ ಬ್ರಹ್ಮದಂಡದಿಂದ ವಧೆಯಾಗಲಾರದೆಂಬ ವರವನ್ನು ಕೊಟ್ಟನು. ಇತರ ದೇವತೆಗಳು ಕೂಡ ಹನುಮಾನನಿಗೆ ವರಗಳನ್ನು ಕೊಡುವಂತೆ ಮಾಡಿದನು. ಇಂದ್ರನು ತನ್ನ ವಜ್ರದಿಂದ ಮರಣವು ಬರಲಾರದೆಂಬ ವರವನ್ನು ಕೊಟ್ಟನು. ಸೂರ್ಯನು ತನ್ನ ತೇಜಸ್ಸಿನ ನೂರನೆಯ ಒಂದು ಭಾಗವನ್ನೂ, ಶಾಸ್ತ್ರಾಧ್ಯಯನಕಾಲಕ್ಕೆ ಶಾಸ್ತ್ರಜ್ಞಾನವನ್ನೂ ಕೊಟ್ಟನು. ವರುಣನು ತನ್ನ ವರುಣಪಾಶದಿಂದ ಅಥವಾ ನೀರಿನಿಂದ ಸಾವು ಬರಲಾರದೆಂಬ ವರವನ್ನು ಕೊಟ್ಟನು. ಅದೇ ರೀತಿ ಯಮನು ತನ್ನ ಯಮದಂಡದಿಂದ ಮೃತ್ಯುವಾಗಲಾರದೆಂದೂ, ಸಕಲ ಆರೋಗ್ಯ, ಸಂಗ್ರಾಮದಲ್ಲಿ ದಣಿವು ಆಗದಿರುವ ವರಗಳನ್ನು ಕರುಣಿಸಿದನು. ಆಗ ಶಂಕರನು ಹನುಮಾನನಿಗೆ ದೀರ್ಘಾಯುಸ್ಸನ್ನು ಮತ್ತು ತನ್ನಿಂದ ವಧೆಯಾಗಲಾರದೆಂಬ ವರವನ್ನು ನೀಡಿದಾಗ, ಕುಬೇರನು ತನ್ನ ಗದೆಯಿಂದ ಹನುಮಾನನಿಗೆ ಎಂದೂ ವಧೆಯ ಭಯವಿಲ್ಲವೆಂಬ ವರವನ್ನು ಇತ್ತನು. ಹನುಮಾನನು ವಿಶ್ವಕರ್ಮನಿಂದ ದಿವ್ಯಶಸ್ತ್ರಗಳನ್ನು, ಚಿರಂಜೀವಿಯಾಗುವ ಮತ್ತು ಇನ್ನೂ ಅನೇಕ ವರಗಳನ್ನು ಪಡೆದನು. ಇಷ್ಟೇ ಅಲ್ಲದೇ ಬ್ರಹ್ಮದೇವನಿಂದ ಭಯೋತ್ಪಾದಕತೆ, ಮಿತ್ರರ ಭಯವನ್ನು ಇಲ್ಲದಂತೆ ಮಾಡುವುದು, ಇಷ್ಟಬಂದಲ್ಲಿಗೆ ಹೋಗುವ ಕ್ಷಮತೆ, ಬ್ರಹ್ಮಾಸ್ತ್ರದಿಂದ ಬಂಧಿತನಾದಾಗ ಅದರಿಂದ ಬಿಡಿಸಿಕೊಳ್ಳುವ ಶಕ್ತಿ—ಇವೇ ಮೊದಲಾದ ವರಗಳನ್ನು ಪಡೆದನು. ಈ ಬಗೆಯಾಗಿ ಬ್ರಹ್ಮದೇವನು ಹನುಮಾನನಿಗೆ ಲಾಭ ಮಾಡಿಕೊಟ್ಟನು. ಈ ವರಗಳನ್ನು ಪಡೆದ ಹನುಮಾನನು ಇನ್ನಷ್ಟು ಬಲಶಾಲಿಯಾದನು. ಇವನಿಗೆ

ಲಂಕೆಯ ಪ್ರವಾಸವು ಸುಲಭವಾಯಿತಲ್ಲದೆ, ಯಾವ ಭಯವೂ ಇಲ್ಲದಂತಾಯಿತು. ವರಗಳನ್ನು ಪಡೆದ ನಂತರ ಈತನು ಭೃಗು ಮತ್ತು ಅಂಗೀರಸ ಗೋತ್ರದ ಋಷಿಗಳಿಗೆ ಬಲು ಉಪಟಳ ಕೊಡಲಾರಂಭಿಸಿದ ಕಾರಣ ಅವರು 'ನಿನ್ನ ಸ್ವಂತದ ಸಾಮರ್ಥ್ಯದ ಅರಿವು ನಿನಗೆ ಉಳಿಯಲಾರದು !' ಎಂದು ಶಾಪವನ್ನು ಈತನಿಗೆ ಕೊಟ್ಟರು.

ಹನುಮಾನನು ಬಲು ಬುದ್ಧಿವಂತ. ವ್ಯಾಕರಣ, ಸೂತ್ರವೃತ್ತಿ, ಭಾಷ್ಯ, ಸಂಗ್ರಹ ಇತ್ಯಾದಿಗಳನ್ನು ಉತ್ತಮವಾಗಿ ತಿಳಿದುಕೊಂಡಿದ್ದನು. ವಾಕ್ಪಟುತ್ವ ಹಾಗೂ ದೂತಕಾರ್ಯದಲ್ಲಿ ನಿಪುಣನಾಗಿದ್ದನು. ಸೀತೆಯ ಶೋಧ ಮತ್ತು ಲಂಕೆಯಲ್ಲಿಯ ಪರಿಸ್ಥಿತಿಯ ಕೂಲಂಕಷ ಮಾಹಿತಿ ಇವೆರಡೂ ಕಾರ್ಯಗಳು ಈತನಿಂದಲೇ ಸಾಧ್ಯವಾದವು. ಈತನು ಶ್ರೀರಾಮನ ಪರಮಭಕ್ತನಾಗಿದ್ದನು. ಶ್ರೀರಾಮ ಮತ್ತು ಸುಗ್ರೀವರಲ್ಲಿ ಸ್ನೇಹ ವುಂಟಾಗಲು ಕಾರಣನಾದನು. ಆ ಸ್ನೇಹವನ್ನು ಭದ್ರವಾಗಿಟ್ಟುಕೊಳ್ಳಲು ಸೂಕ್ತ ಸಲಹೆಯನ್ನು ಸುಗ್ರೀವನಿಗೆ ಕೊಟ್ಟನು. ಹನುಮಾನನು ಅನೇಕ ರಾಕ್ಷಸರನ್ನು ಕೊಂದನು ; ಲಂಕಾನಗರವನ್ನು ಸುಟ್ಟು ನಾಶಗೊಳಿಸಿದನು. ಇಂದ್ರಜಿತನು ಬ್ರಹ್ಮಾಸ್ತ್ರದಿಂದ ಈತನನ್ನು ಬಂಧಿಸಿದಾಗ ಇವನು ನಿಶ್ಚೇಷ್ಟನಾದನು. ಅದನ್ನು ಕಂಡ ರಾಕ್ಷಸರು ಇವನನ್ನು ಬೇರೆ ಹಗ್ಗ ಮುಂತಾದ ಬಂಧನಗಳಿಂದ ಬಿಗಿದು ಕಟ್ಟಿದರು. ಈ ಎರಡನೆಯ ಬಂಧನವು ಹನುಮಾನನಿಗೆ ಆದ್ದರಿಂದ ಬ್ರಹ್ಮಪಾಶದ ಬಂಧನವು ತಾನಾಗಿ ಇಲ್ಲದಂತಾಗಿ ಮುಕ್ತನಾದನು. ಮೃತಪಟ್ಟ ವಾನರವೀರರನ್ನು ಜೀವಿತಗೊಳಿಸಲು ಹಾಗೂ ಮೂರ್ಛೆಹೋದ ಲಕ್ಷ್ಮಣನ ಸಲುವಾಗಿ ಹನುಮಾನನು ದ್ರೋಣಗಿರಿ ಪರ್ವತವನ್ನೇ ಎತ್ತಿತಂದು ಗಿಡಮೂಲಿಕೆ ಔಷಧಿಗಳನ್ನು ಒದಗಿಸಿದನು. ಶ್ರೀರಾಮನು ಲಂಕೆಯಿಂದ ಅಯೋಧ್ಯೆಯತ್ತ ಮರಳುವಾಗ ಭರತನಿಗೆ ವಾರ್ತೆಯನ್ನು ತಿಳಿಸಲು ಈತನನ್ನೇ ಕಳುಹಿದ್ದನು. ಶ್ರೀರಾಮನು 'ನನ್ನ ಕಥೆಗಳು ಈ ಭೂಲೋಕದಲ್ಲಿ ಪ್ರಚಾರದಲ್ಲಿರುವವರೆಗೆ ನನ್ನ ಆಜ್ಞೆಯನ್ನು ಪರಿಪಾಲಿಸಿ ನೀನು ಸುಪ್ರಸನ್ನನಾಗಿ ಈ ಭೂತಲದಲ್ಲಿ ಸುಖವಾಗಿರು !' ಎಂಬ ಆಶೀರ್ವಾದವನ್ನು ಈತನಿಗೆ ಕೊಟ್ಟನು. ಆಗ ಹನುಮಾನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

### ೧೬೧. ಹೇತಿ – ಪ್ರಹೇತಿ

ಇವರಿಬ್ಬರೂ ಅಣ್ಣತಮ್ಮಂದಿರು. ಪ್ರಹೇತಿ ಧಾರ್ಮಿಕ ವೃತ್ತಿಯವನಾಗಿದ್ದರಿಂದ ರಾಕ್ಷಸರ ಅಧಿಪತಿಯಾಗಿದ್ದರೂ ಈತನು ತಪವನ್ನಾಚರಿಸಲು ಕಾಡಿಗೆ ಹೋದನು. ಹೇತಿಯ ಪತ್ನಿಯ ಹೆಸರು ಭಯಾ ಮತ್ತು ಮಗನ ಹೆಸರು ವಿದ್ಯುತ್ಕೇಶ. ಈತನು ವೃತ್ರಾಸುರನ ಅನುಯಾಯಿ. ವಿಷ್ಣುವು ಆತನನ್ನು ಪರಾಭವಗೊಳಿಸಿದನು.

### ೧೬೨. ಹೇಮಾ

ಈಕೆ ಮಯನೆಂಬ ರಾಕ್ಷಸನ ಭಾರ್ಯೆ. ಭರತನನ್ನು ಕರೆಯಿಸಿದ ಅನೇಕ ಅಪ್ಸರೆಯರಲ್ಲಿ ಈಕೆಯೂ ಒಬ್ಬಳು. ದೇವತೆಗಳೇ ಈ ಅಪ್ಸರೆಯನ್ನು ಕೊಟ್ಟಿದ್ದರೆಂಬ ಒಂದು ಉಲ್ಲೇಖವಿದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಮಯನು ಇವಳಲ್ಲಿ ಆಸಕ್ತನಾದ್ದರಿಂದ ಇಂದ್ರನು ಮಯನನ್ನು ವಧಿಸಿದನು ಎಂದು ಬರೆದಿದೆ. ಮಯನು ಒಂದು ಸುವರ್ಣವನವನ್ನು ಹಾಗೂ ಕಾಂಚನಗೃಹವನ್ನು ನಿರ್ಮಿಸಿ ಹೇಮಾಳ ಜೊತೆ ವಾಸಿಸುತ್ತಿದ್ದನು. ಮಯನ ವಧೆಯಾದನಂತರ ಬ್ರಹ್ಮದೇವನು ಈ ಸುವರ್ಣವನವನ್ನು ಹಾಗೂ ಎಂದೂ ತೀರದಷ್ಟು ಭೋಗವಸ್ತುಗಳನ್ನು ಮತ್ತು ಕಾಂಚನಮಯ ವಸತಿಸ್ಥಾನವನ್ನು ಹೇಮಾಗೆ ಕೊಟ್ಟನು. ಇವಳು ಸ್ವರ್ಗಕ್ಕೆ ಹೋಗುವಾಗ ಇದೆಲ್ಲವನ್ನೂ ಸ್ವಯಂಪ್ರಭೆಗೆ ಕೊಟ್ಟಳು. ಇವಳು ನೃತ್ಯ-ಗಾಯನವಿಶಾರದೆಯಾಗಿದ್ದಳು. ಹೇಮಾಗೆ ಮಯನಿಂದ ಹುಟ್ಟಿದ ಕನ್ಯೆಯೇ ಮಂಡೋದರಿ. ಮಂಡೋದರಿ ರಾವಣನ ಪತ್ನಿ.

## ಭಾಗ : ಎಂಟು

# ಸ್ಥಳವಿಶೇಷ

### ೧. ಋಕ್ಷಗುಹೆ

ಈ ಗುಹೆಯು ಪ್ರಯಾಗದಿಂದ ಸುಮಾರು ಒಂದು ನೂರ ಐವತ್ತು ಮೈಲಿನಷ್ಟು ದೂರದಲ್ಲಿದೆ. ಮಧ್ಯಪ್ರದೇಶದ ರಾಮಗಢವೆಂಬ ಪರ್ವತದ ಹತ್ತಿರ ವಿಂಧ್ಯಪರ್ವತದಲ್ಲಿದೆ. ಈ ಗುಹೆಗೆ 'ಸೀತಾಬೆಂಗ್ರಾಗುಂಫಾ', 'ಹಾಥೀಪ್ರೋಡ' ಎಂತಲೂ ಕರೆಯುತ್ತಾರೆ. ಈ ಗುಹೆಯಲ್ಲಿ ಶ್ರೀರಾಮ, ಲಕ್ಷ್ಮಣ, ಸೀತೆಯರ ಸ್ವತಂತ್ರವಾದ, ನೈಸರ್ಗಿಕವಾದ ಗುಹೆಗಳಿವೆ. ಮಯ ರಾಕ್ಷಸನು ಈ ಗುಹೆಯಲ್ಲಿ ಒಂದು ಸುವರ್ಣವನವನ್ನು ಮತ್ತು ಒಂದು ಕಾಂಚನಗೃಹ ವನ್ನು ನಿರ್ಮಿಸಿದ್ದನು. ಈ ಸ್ಥಾನದ ಸೌಂದರ್ಯವನ್ನೂ ವೈಭವವನ್ನೂ ಕಂಡು ಹನುಮಾನ ಮೊದಲಾದ ವಾನರರು ಆಚ್ಚರಿಗೊಂಡರು. ಈ ಸ್ಥಾನವನ್ನು ರಕ್ಷಿಸುತ್ತಿದ್ದ ತಪಸ್ವಿನಿಯಾದ ಸ್ವಯಂಪ್ರಭೆಯಿಂದ ಈ ಸ್ಥಾನದ ಬಗ್ಗೆ ಎಲ್ಲ ಮಾಹಿತಿಯನ್ನು ಪಡೆದುಕೊಂಡರು. ಈ ಗುಹೆಯಿಂದ ಸುಖರೂಪವಾಗಿ ಹೊರಬೀಳಲು ನೆರವಾಗಬೇಕೆಂದು ವಿನಂತಿಸಿದರು. ಈ ಗುಹೆಯಲ್ಲಿ ಪ್ರವೇಶಿಸಿದ ಯಾವ ಪ್ರಾಣಿಯೂ ಜೀವದಿಂದುಳಿದು ಹೊರಬೀಳುವದು ಸಾಧ್ಯವಿಲ್ಲವೆಂದು ಸ್ವಯಂಪ್ರಭೆ ನುಡಿದಳು. ವಾನರರು ಹೊರಗೆ ವಿಂಧ್ಯಗಿರಿಯ ಹತ್ತಿರ ಒಂದು ಜಲಾಶಯವನ್ನು ಕಂಡರು. ಸ್ವಯಂಪ್ರಭೆಯು ಅಲ್ಲಿಂದ ಮುಂದೆ ಸಾಗುವ ಮಾರ್ಗವನ್ನು ತಿಳಿಸಿ ಹೇಳಿದ್ದಳು.

### ೨. ಋಕ್ಷವಾನ

ಈ ಪರ್ವತದ ಭಾಗವು ವಿಂಧ್ಯಪರ್ವತದ ಪೂರ್ವ ಹಾಗೂ ಮಧ್ಯಭಾಗದಲ್ಲಿರುವ ಸಾಧ್ಯತೆಯಿದೆ. ಸಾತಪುಡಾ ಪರ್ವತದ ಕೆಲವು ಭಾಗವು ಇದರಲ್ಲಿ ಸೇರಿಕೊಂಡಿರಬಹುದು. ಗೊಂಡವನ ಪರ್ವತದ ಸಾಲು ಎಂದರೆ ಋಕ್ಷವಾನ ಪರ್ವತವೆನ್ನಬಹುದು. ಮಾರ್ಕಂಡೇಯ ಪುರಾಣದಂತೆ ಆರು ಕುಲಪರ್ವತಗಳಲ್ಲಿ ಇದೊಂದಾಗಿದೆ. ಇದರ ಹರಹು ನರ್ಮದಾ ನದಿಯ ಉಗಮದಿಂದ ಹಿಡಿದು ಬಂಗಾಲ ಕೊಲ್ಲಿಯವರೆಗೆ ಇದ್ದಂತಿದೆ. ಈ ಪರ್ವತವನ್ನು ಅನೇಕ ಪ್ರಾಚೀನ ಗ್ರಂಥಗಳಲ್ಲಿ ಅನೇಕ ಹೆಸರುಗಳಿಂದ ಕರೆದಿದ್ದಾರೆ. ಋಕ್ಷ ಅಂದರೆ ಕರಡಿ. ಈ ಕಾರಣದಿಂದಲೇ ಈ ಪರ್ವತಕ್ಕೆ ಋಕ್ಷವಾನ ಎಂಬ ಹೆಸರು ಬಂದಿರಬಹುದು. ಧೂಮ್ರ ಎಂಬಾತನು ಒಂದು ವಾನರಸಮೂಹದ ಸೇನಾಪತಿಯಾಗಿದ್ದನು. ಆತನು ಈ ಪರ್ವತದಲ್ಲಿ ವಾಸವಿದ್ದನು. ಕರಡಿಗೆ ಗ್ರೀಕರ ಭಾಷೆಯಲ್ಲಿ 'ಅರ್ಕ್ಟೋಸ' ಎಂದೂ ಟಾಲೆಮಿಯ ಗ್ರಂಥದಲ್ಲಿ 'ಅಕ್ಸೆಂತೀನ' ಎಂದೂ ಬರೆದದ್ದು ಅದು ಈ ಪರ್ವತದ ಇನ್ನೊಂದು ಹೆಸರಾಗಿದೆ. ನರ್ಮದಾ, ತಾಪಿ, ಧಸನ, ದಮುದಾ, ಸೋನ, ಮಹಾನದಿ, ಮಂದಾಕಿನಿ, ತಮಸಾ ಮುಂತಾದ ಗಂಗಾ, ಯಮುನಾ ನದಿಗಳ ಉಪನದಿಗಳು ಈ ಪರ್ವತದಲ್ಲಿ ಉಗಮಹೊಂದಿವೆ.

### ೩. ಋಷ್ಯಮೂಕ

ಇದು ಬಳ್ಳಾರಿ ಜಿಲ್ಲೆಯ ಹಂಪೆಯ ಬಳಿಯಲ್ಲಿದ್ದ ಪರ್ವತ. ಇದು ತುಂಗಭದ್ರೆಯ ನದೀತೀರದಲ್ಲಿದೆ. ಇದು ಸಹ್ಯಾದ್ರಿಪರ್ವತದ ದಕ್ಷಿಣದ ಒಂದು ಉಪಪರ್ವತ. ಇಲ್ಲಿ ಸುಗ್ರೀವ ವಾಸವಿರುತ್ತಿದ್ದನು. ಶ್ರೀರಾಮಲಕ್ಷ್ಮಣರು ಇಲ್ಲಿಯೇ ಸುಗ್ರೀವನೊಡನೆ ಮಿತ್ರತ್ವವನ್ನು ಸಂಪಾದಿಸಿದರು. ಮತಂಗ ಮುನಿಯ ಶಾಪವಿದ್ದಕಾರಣ ವಾಲಿ ಇಲ್ಲಿಗೆ ಬರುವಂತಿರಲಿಲ್ಲ. ಮಹಾಭಾರತದಲ್ಲಿ ಇದನ್ನು 'ತೀರ್ಥ'ವೆಂದು ಉಲ್ಲೇಖಿಸಲಾಗಿದೆ.

### ೪. ಕನಖಲತೀರ್ಥ

ಹರಿದ್ವಾರದಿಂದ ನಾಲ್ಕು ಕಿಲೋಮೀಟರ್ ದೂರದಲ್ಲಿದೆ. ದಕ್ಷಪ್ರಜಾಪತಿ ಇಲ್ಲಿ ಯಜ್ಞವನ್ನು ಮಾಡಿದ್ದನು. ಸತಿಯು ಆಗ ದೇಹಾರ್ಪಣೆಯನ್ನು ಮಾಡಿದ್ದರಿಂದ ಶಂಕರನು ಈ ಯಜ್ಞವನ್ನು ಹಾಳುಮಾಡಿದನೆಂಬ ದಂತಕಥೆಯಿದೆ. ಈ ತೀರ್ಥದಲ್ಲಿ ಸ್ನಾನಮಾಡಿದರೆ ಪುನರ್ಜನ್ಮವು ಬರುವುದಿಲ್ಲವೆಂಬ ಶ್ರದ್ಧೆ ಇದೆ. ಇಲ್ಲಿ ದಕ್ಷಪ್ರಜಾಪತಿಯ ಒಂದು ಮಂದಿರವಿದೆ. ಶ್ರಾದ್ಧವಿಧಿಯನ್ನು ಆಚರಿಸಲು ಈ ಕ್ಷೇತ್ರವು ಅತಿಯೋಗ್ಯವಾದುದೆಂದು ಅನೇಕ ಪುರಾಣಗಳಲ್ಲಿ ಹೇಳಲಾಗಿದೆ. ಸ್ಕಂದಪುರಾಣದಲ್ಲಿ ಹೇಳಿದನುಸಾರ ಈ ತೀರ್ಥವು ಅರುಣಾಚಲ ಪರ್ವತದಲ್ಲಿ ಶಿವನ ಸ್ಥಾನವಾಗಿದೆ. ನೃಗರಾಜನು ಒಬ್ಬ ದರಿದ್ರ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟ ಗೋವುಗಳಲ್ಲಿ, ಕಳೆದುಹೋದ ಒಂದು ಹಸು ಈ ತೀರ್ಥಕ್ಷೇತ್ರದಲ್ಲಿ ಸಿಕ್ಕಿತು. ಸನತ್ಕುಮಾರ ಋಷಿಗಳು ಈ ಕ್ಷೇತ್ರದಲ್ಲಿರುತ್ತಿದ್ದರು.

### ೫. ಕಿಷ್ಕಿಂಧೆ

ಇದು ವಾನರರ ರಾಜನಾದ ವಾಲಿ ಹಾಗೂ ಸುಗ್ರೀವನ ರಾಜಧಾನಿಯಾಗಿತ್ತು. ಇದು ದಕ್ಷಿಣಭಾರತದಲ್ಲಿ ಪಂಪಾಸರೋವರದ ಬಳಿಯಿದ್ದ ನಗರ. ಈ ಪರಿಸರದಲ್ಲಿ ಪಂಪಾಸರೋವರ, ತುಂಗಭದ್ರಾನದಿ, ಪ್ರಸ್ರವಣಪರ್ವತ, ಮತಂಗಾಶ್ರಮ ಮುಂತಾದವಿದ್ದವು. ಈ ನಗರವು ಗಿರಿಕಂದರಗಳಿಂದ ಸುತ್ತುವರಿಯಲ್ಪಟ್ಟಿತ್ತು. ಅಲ್ಲಿ ವಜ್ರವೈಡೂರ್ಯಗಳು ಅಗಣಿತವಾಗಿದ್ದವು. ಅನೇಕ ಉದ್ಯಾನ-ಉಪವನಗಳಿದ್ದವು. ಚಿತ್ರಾವಶಾಸ್ತ್ರಿಗಳ ಅಭಿಪ್ರಾಯದಂತೆ ಕರ್ನಾಟಕದಲ್ಲಿರುವ ಹಂಪೆ-ಆನೆಗುಂದಿಯ ಭಾಗವೆಂದರೆ 'ಕಿಷ್ಕಿಂಧೆ' ನಗರವಿತ್ತು. ಇದರ ಹತ್ತಿರದಲ್ಲಿಯೇ 'ವಾಲೀಪ್ರಸಾದ' ಮತ್ತು 'ಸಪ್ತತಾಲವೇಧ' ಎಂಬ ಸ್ಥಾನಗಳಿವೆ. ಬ್ರಹ್ಮದೇವನ ಆನಂದಬಾಷ್ಪಗಳಿಂದ ಜನ್ಮತಾಳಿದ ವಿಶ್ವಕರ್ಮನು ಋಕ್ಷರಾಜನೆಂಬ ವಾನರಾಧಿಪತಿಯಾಗಿ, ಬ್ರಹ್ಮದೇವನ ಆಜ್ಞೆಯಂತೆ ಈ ಪಟ್ಟಣವನ್ನು ರಚಿಸಿದನೆಂದು ಭಾವಾರ್ಥರಾಮಾಯಣದಲ್ಲಿದೆ. 'ಕಿಷ್ಕಿಂಧಾ' ಈ ಶಬ್ದದ ಅರ್ಥವು ಶಂಬರಭಾಷೆಯಲ್ಲಿ 'ಪರ್ವತದ ಹಿಂದೆ ಮೃತ್ಯು'ವೆಂದಿದೆ. ಜೈನಗ್ರಂಥಗಳಲ್ಲಿ ಈ ನಗರವನ್ನು 'ಖಿಖುಂದ'ವೆಂದು ಬರೆದದ್ದು ಕಂಡುಬರುತ್ತದೆ.

### ೬. ಕೇಕಯ

ಉತ್ತರ ದಿಕ್ಕಿನ ಪಂಚನದಿಗಳ ಪ್ರದೇಶದಲ್ಲಿ ವಿತಸ್ತಾ ಎಂಬ ನದಿಯ (ಈಗಿನ ಝೇಲಮ್ ನದಿ) ಪೂರ್ವದಂಡೆಯಲ್ಲಿನ ಒಂದು ಪ್ರದೇಶ. ಇದರ ಹೆಸರುಗಳು ಬದಲಾವಣೆಯಾಗುತ್ತಹೋಗಿವೆ. ಕೈಕಯ, ಕೈಕೇಯ, ಕೇಕಯ ಸ್ಥಾಪಿತ ದೇಶ ಇತ್ಯಾದಿ. ಈ ದೇಶದೊಡನೆ ಉಶಿನರ ಮತ್ತು ಶಿಬಿರಾಜ ಇವರ ಸಂಬಂಧವು ಇತ್ತು. ಇದರ ರಾಜಧಾನಿ 'ರಾಜಗೃಹ'ವೆಂದಿತ್ತು. ವಿಪಾಶಾ ನದೀತೀರದಲ್ಲಿದ್ದ ಈ ಪ್ರದೇಶವು ರಾಮಾಯಣ ಕಾಲದ ಬಾಹ್ಲೀಕ ಮತ್ತು ಇಕ್ಷುಮತೀ ನದಿಗಳ ಪಶ್ಚಿಮದ ಭಾಗವಿರಬಹುದು. ಸತತ ಪರಕೀಯರ ದಾಳಿಗಳನ್ನು ಎದುರಿಸುತ್ತಿದ್ದ ಇಲ್ಲಿಯ ಜನರು ಯುದ್ಧಕುಶಲರೂ ಧನುರ್ವಿದ್ಯಾಪ್ರವೀಣರೂ ಆಗಿದ್ದರು. ಸಿಕಂದರನು ಪೂರ್ವಗಾಂಧಾರ ದೇಶದ ರಾಜನಾದ ಅಂಭಿಯನ್ನು ಸೆರೆಹಿಡಿದು ಪಶ್ಚಿಮ ಸರಹದ್ದಿನಲ್ಲಿದ್ದ ವಿತಸ್ತಾ ನದಿಯನ್ನು ತಲುಪಿದ್ದನು. ದಶರಥನ ಮಾವನಾದ ಕೈಕಯ ಅಶ್ವಪತಿಯು ಇಲ್ಲಿಯ ರಾಜನಾಗಿದ್ದನು.

### ೭. ಗಂಗಾ

'ಗಮಯತಿ ಭಗವತ್ಪದಮಿತಿ ಗಂಗಾ'—ಸ್ನಾನಮಾಡುವ ಜೀವಾತ್ಮರನ್ನು ಭಗವಂತನ ಪಾದಕ್ಕೆ ತಲುಪಿಸುವವಳೆಂದು ಗಂಗೆ ಎಂದೆನ್ನಲಾಗುತ್ತದೆ.

'ಗಮ್ಯತೇ ಪ್ರಾಪ್ಯತೇ ಮೋಕ್ಷಾರ್ಥಿಭಿರಿತಿ ಗಂಗಾ'—ಮೋಕ್ಷವನ್ನು ಬಯಸುವವರು ಯಾರ ಬಳಿ ಹೋಗುತ್ತಾರೋ ಅವಳೇ ಗಂಗೆ. ಗಂಗೆಯ ಬಗ್ಗೆ ಈ ಬಗೆಯ ಶಬ್ದೋತ್ಪತ್ತಿಯನ್ನು ಕೊಡುತ್ತಾರೆ.

ಗಂಗಾನದಿಯು ಭಾರತದ ಪವಿತ್ರವೆಂದೆನಿಸಿದ ಏಳು ನದಿಗಳಲ್ಲಿ ಶ್ರೇಷ್ಠ ನದಿಯಾಗಿದೆ. ಈ ಗಂಗಾನದಿಗೆ

ವಿಷ್ಣುನದಿ, ತ್ರಿಪಥಗಾ, ಭಾಗೀರಥಿ, ಜಾಹ್ನವೀ ಮುಂತಾದ ಅನೇಕ ಹೆಸರುಗಳಿವೆ. ಈ ನದಿಯ ಉಗಮವು ಉತ್ತರಪ್ರದೇಶದ ತೇಹರಿಗಢವಾಲ ಭಾಗದಲ್ಲಿದ್ದ ಗಂಗೋತ್ರಿ ಎಂಬಲ್ಲಿ, ಸಮುದ್ರಮಟ್ಟದಿಂದ ೪೨೦೦ ಮೀಟರ್ ಎತ್ತರದಲ್ಲಿದೆ. ಈ ನದಿಯು ಹೃಷೀಕೇಶದ ಬಳಿ ಸಮತಳಪ್ರದೇಶವನ್ನು ತಲುಪಿ ಹರಿಯುತ್ತದೆ ಗಂಗಾ ಮತ್ತು ಯಮುನಾ ಈ ನದಿಗಳ ಸಂಗಮಸ್ಥಾನದವರೆಗಿನ 'ದುಆಬ್' ಪ್ರದೇಶಕ್ಕೆ ಅಂತರ್ವೇದಿ ಎಂದೆನ್ನುತ್ತಾರೆ. ಈ ಪ್ರದೇಶವು ಫಲವತ್ತಾದ ಭೂಮಿಯಾಗಿದ್ದು ಇದು ವೈದಿಕಸಂಸ್ಕೃತಿಯ ಕೇಂದ್ರವಾಗಿತ್ತು. ಗಂಗಾನದಿಗೆ ಯಮುನಾ, ಬ್ರಹ್ಮಪುತ್ರಾ, ಮೇಘನಾ ಮುಂತಾದ ಅನೇಕ ಚಿಕ್ಕದೊಡ್ಡ ನದಿಗಳು ಕೂಡಿಕೊಳ್ಳುತ್ತವೆ. ಗಂಗಾನದಿಯು ಸಹಸ್ರಮುಖವಾಗಿ ಸಾಗರವನ್ನು ಪ್ರವೇಶಿಸುತ್ತದೆ. ಗಂಗಾನದಿಯ ಮುಖದಲ್ಲಿ 'ಸಾಗರ'ವೆಂಬ ನಡುಗಡ್ಡೆ ಇದೆ. ಅಲ್ಲಿ ಕಪಿಲ ಮುನಿಯ ಆಶ್ರಮವಿತ್ತೆಂದು ಹೇಳುತ್ತಾರೆ. ಎಲ್ಲ ಸಾಧುಸಂತರು, ಮಹಾಪುರುಷರು ಗಂಗೆಯನ್ನು ಪವಿತ್ರನದಿಯೆಂದು ಮನ್ನಿಸುತ್ತಬಂದಿದ್ದಾರೆ. ಆರೋಗ್ಯದ ದೃಷ್ಟಿಯಿಂದ ಗಂಗೆಯ ನೀರು ಅತಿಶುದ್ಧ, ರೋಗನಿವಾರಕ, ಶಕ್ತಿದಾಯಕವೂ ಆಗಿದೆ. ಈ ನದಿಯ ತೀರದಲ್ಲಿ ಸುಮಾರು ಮೂರುಕೋಟಿ ತೀರ್ಥಗಳಿವೆ ಎಂದು ಧಾರ್ಮಿಕ ಶ್ರದ್ಧೆ ಇದೆ.

ಗಂಗೆಯು ಅಗ್ನಿಯಿಂದ ಬೀಜವನ್ನು ಪಡೆದು ಸ್ಕಂದನನ್ನು ಹೆತ್ತಳು. ಇವಳು ಮಹಾಸಾಗರನ ಪತ್ನಿಯಾಗಿದ್ದು ವೇದಗಳ ಬಲಭಾಗವಾಗಿದ್ದಾಳೆ. ಪುರಾಣಗಳಲ್ಲಿ ಗಂಗೆಯ ಮಾಹಾತ್ಮ್ಯವನ್ನು ವಿಸ್ತೃತವಾಗಿ ವರ್ಣಿಸಿದ್ದಾರೆ. ಋಗ್ವೇದದಲ್ಲಿ ಗಂಗೆಯ ಉಲ್ಲೇಖವಿದೆ. ಇವಳನ್ನು ಸ್ವರ್ಗದ ದೇವತೆ ಎಂದು ಬಗೆಯುತ್ತಾರೆ. ಒಮ್ಮೆ ಎಲ್ಲ ದೇವತೆಗಳು ಬ್ರಹ್ಮದೇವನ ಬಳಿ ಹೋದರು. ಅವರ ಜೊತೆಯಲ್ಲಿ ಗಂಗೆಯೂ ಹಾಗು ಇಕ್ಷ್ವಾಕುಕುಲದಲ್ಲಿ ಜನಿಸಿದ ಮಹಾಭಿಷನೂ ಇದ್ದರು. ಆಗ ಇವಳು ಉಟ್ಟ ವಸ್ತ್ರವು ಗಾಳಿಯಿಂದ ಹಾರಿದಾಗ ದೇವತೆಗಳೆಲ್ಲರೂ ತಮ್ಮ ಮುಖಗಳನ್ನು ಕೆಳಗೆ ಮಾಡಿಕೊಂಡರು ; ಆದರೆ ಮಹಾಭಿಷನು ನಿಸ್ಸಂಕೋಚವಾಗಿ ಅವಳತ್ತ ನೋಡಿದಾಗ ಬ್ರಹ್ಮದೇವನು ಆತನಿಗೆ 'ನೀನು ಮೃತ್ಯುಲೋಕದಲ್ಲಿ ಜನ್ಮತಾಳುವೆ ! ಅಲ್ಲಿ ಗಂಗೆ ನಿನ್ನ ಪತ್ನಿಯಾಗುವಳು ! ಅವಳು ನಿನಗೆ ಅಪ್ರಿಯವೆನಿಸುವ ಕೃತ್ಯಗಳನ್ನು ಮಾಡುವಳು. ಈ ಕೃತ್ಯಗಳಿಂದ ನಿನಗೆ ಕೋಪವುಂಟಾಗಿ ಮುಕ್ತಿಪಡೆಯುವೆ !' ಎಂದು ಶಾಪವನ್ನಿತ್ತನು. ಈ ಶಾಪವನ್ನು ಕೇಳಿಕೊಂಡ ಮಹಾಭಿಷನು ಪ್ರತೀಪನ ಕುಲದಲ್ಲಿ ಜನ್ಮತಾಳಲು ನಿರ್ಧರಿಸಿದನು. ವಸಿಷ್ಠರ ಶಾಪದಿಂದ ಮರಣಹೊಂದಿದ ಅಷ್ಟವಸುಗಳು ಮಾರ್ಗದಲ್ಲಿ ಗಂಗೆಗೆ ಭೇಟಿಯಾದರು. ಅವರು ಗಂಗೆಯ ಮಕ್ಕಳಾಗಿ ಹುಟ್ಟಲು ಯೋಚಿಸಿದರು. ಅವರು ತಮ್ಮ ಇಚ್ಛೆಯನ್ನು ಗಂಗೆಗೆ ತಿಳಿಸಿದರು. ಆದರೆ ಒಂದು ಶರತ್ತನ್ನು ಮುಂದಿಟ್ಟರು— ಮಗನು ಹುಟ್ಟಿದರೆ ಅವನನ್ನು ನೀರಿಗೆ ಎಸೆಯಬೇಕು. ಈ ಶರತ್ತನ್ನು ಅನುಸರಿಸಿ ಗಂಗೆಯು ಒಬ್ಬ ಮಗನನ್ನು ಮಾತ್ರ ಹೊರತುಪಡಿಸಿ ಎಲ್ಲ ಮಕ್ಕಳನ್ನು ನೀರಿಗೆ ಎಸೆಯಲು ಸಮ್ಮತಿಸಿದಳು. ಆಗ ಅಷ್ಟವಸುಗಳು ತಮ್ಮೆಲ್ಲರ ಅಂಶರೂಪವಾಗಿದ್ದ ಒಬ್ಬ ಮಗನನ್ನು ಕೊಡಲು ಒಪ್ಪಿದರು. ಮಹಾಭಿಷನು ಪ್ರತೀಪನ ಮಗನಾಗಿ ಜನ್ಮ ತಾಳಿದನು. ಆತನ ಹೆಸರು 'ಶಂತನು'. ಗಂಗೆಯು ಶಂತನುವಿನ ಜೊತೆ ವಿವಾಹವಾದಳು. ಇವಳು ಮದುವೆ ನಡೆಯುವ ಮುಂಚಿತವಾಗಿ ತನ್ನ ಮಾವನಿಗೆ 'ವಿವಾಹವಾದನಂತರ ನನ್ನ ಗಂಡನಾದ ಶಂತನು ನಾನು ಮಾಡುವ ಕೃತಿಗಳನ್ನು ಆಕ್ಷೇಪಿಸತಕ್ಕದ್ದಲ್ಲ ; ಈ ಶರತ್ತನ್ನು ಪಾಲಿಸುವವರೆಗೆ ಮಾತ್ರ ನಾನು ಆತನ ಸಹವಾಸದಲ್ಲಿ ಉಳಿಯುವೆನು' ಎಂದು ಕರಾರನ್ನು ಮಾಡಿದ್ದಳು. ಶಂತನುವಿನಿಂದ ಇವಳಿಗೆ ಎಂಟು ಜನ ಪುತ್ರರಾದರು. ಇವಳು ಅವರಲ್ಲಿಯ ಏಳು ಜನ ಪುತ್ರರನ್ನು ನೀರಿಗೆಸೆದಳು. ಗಂಗೆಯು ಎಂಟನೆಯ ಪುತ್ರನನ್ನು ಮುಳುಗಿಸ ಬೇಕೆಂದಾಗ ಶಂತನು ಅವಳಿಗೆ ಅಡ್ಡಿಮಾಡಿದನು. ಆಗ ಈಕೆ ಅವನನ್ನು ತ್ಯಜಿಸಿ ಸ್ವರ್ಗಲೋಕಕ್ಕೆ ಹೋದಳು. ಈ ರೀತಿ ಬದುಕಿ ಉಳಿದ ಎಂಟನೆಯ ಪುತ್ರನೆಂದರೆ ಭೀಷ್ಮನಾಗಿದ್ದಾನೆ. ಗಂಗೆಯು ಈ ಭೀಷ್ಮನನ್ನು ತನ್ನ ಜೊತೆಗೆ ಕರೆದೊಯ್ದು ಸ್ವರ್ಗಲೋಕದಲ್ಲಿ ಎಲ್ಲ ವಿಧದ ಶಿಕ್ಷಣವನ್ನು ಕೊಟ್ಟಳು. ಶಂತನು ಒಮ್ಮೆ ಬೇಟೆಗೆಂದು ಬಂದಾಗ ಆಕೆ ಈ ಭೀಷ್ಮನನ್ನು ಆತನ ವಶಕ್ಕೆ ಒಪ್ಪಿಸಿದಳು.

### ೮. ಗೋದಾವರಿ

ದಕ್ಷಿಣ ಭಾರತದ ಒಂದು ಅತಿಪವಿತ್ರವಾದ ನದಿ. ಇದಕ್ಕೆ 'ದಕ್ಷಿಣಗಂಗೆ' ಎಂದೂ ಹೆಸರಿದೆ. ನಾಸಿಕ

ಪಟ್ಟಣದ ಹತ್ತಿರ ತ್ರ್ಯಂಬಕೇಶ್ವರದಲ್ಲಿ ಬ್ರಹ್ಮಗಿರಿ ಎಂಬುದು ಗೋದಾವರಿಯ ಉಗಮಸ್ಥಾನ. ಗೌತಮ ಋಷಿಯಿಂದ ಒಂದು ಹಸುವಿನ ಕೊಲೆ ನಡೆಯಿತು. ಗೌತಮನು ಆ ಪಾಪದಿಂದ ಮುಕ್ತನಾಗಲು ಶಂಕರನ ತಲೆಯ ಮೇಲಿನ ಗಂಗೆಯನ್ನು ಇಲ್ಲಿಗೆ ತಂದನು. ಆದ್ದರಿಂದ ಈ ನದಿಗೆ ಗೌತಮೀ ಎಂಬ ಹೆಸರು. ಗೋದಾವರೀನದೀತೀರದಲ್ಲಿ ಸುಮಾರು ನೂರು ಪವಿತ್ರ ತೀರ್ಥಕ್ಷೇತ್ರಗಳಿವೆ. ಈ ರೀತಿ ಬಂದ ಗಂಗೆಯ ನೀರು ಮೃತಪಟ್ಟ ಹಸುವಿನ ದೇಹದ ಮೇಲೆ ಹರಿದಿದ್ದರಿಂದ ಹಸುವು ಜೀವಂತವಾಯಿತು. ಈ ನದಿಗೆ ಗೋದಾವರಿ ಎಂಬ ಹೆಸರು ಹೇಗೆ ಬಂದಿತೆಂಬ ಒಂದು ದಂತಕಥೆಯಿದೆ. ರೇವಾನದೀತೀರದಲ್ಲಿ ತಪಸ್ಸು, ಗಂಗಾತೀರದಲ್ಲಿ ಮೃತ್ಯು ಮತ್ತು ಕುರುಕ್ಷೇತ್ರದಲ್ಲಿ ದಾನ, ಇವುಗಳಿಂದ ಪುಣ್ಯ ದೊರಕುತ್ತದೆಂದು ಹಿಂದೂಗಳು ನಂಬುತ್ತಾರೆ. ಇವೇ ಮೂರು ಸಂಗತಿಗಳು ಗೋದಾವರೀತೀರದಲ್ಲಿ ನಡೆದರೆ ಮೋಕ್ಷ ದೊರಕುವದೆಂಬ ಭಾವನೆ ಇದೆ. ಗೋದಾವರೀತೀರದಲ್ಲಿದ್ದ ಪೈಠಣ ನಗರಕ್ಕೆ 'ದಕ್ಷಿಣಕಾಶೀಕ್ಷೇತ್ರ'ವೆಂದೆನ್ನುತ್ತಾರೆ. ಸಿಂಹಸ್ಥದ ಆಚರಣೆಗಾಗಿ ನಾಸಿಕವು ಒಂದು ಪವಿತ್ರಕ್ಷೇತ್ರ ಎನ್ನಿಸಿದೆ. ಮಹಾರಾಷ್ಟ್ರ ಮತ್ತು ಆಂಧ್ರ ರಾಜ್ಯಗಳಲ್ಲಿ ಹರಿಯುತ್ತಿರುವ ಈ ಪ್ರಸಿದ್ಧ ನದಿಯ ಉದ್ದ ಒಂಬೈನೂರು ಮೈಲಿ. ಪ್ರವರಾ, ವರ್ಧಾ, ವೈನಗಂಗಾ, ಧಾರಣಾ, ಇಂದ್ರಾವತಿ ಮೊದಲಾದವುಗಳೇ ಗೋದಾವರಿಯ ಹಲವು ಉಪನದಿಗಳು. ಈ ನದಿಯ ಸಾನ್ನಿಧ್ಯದಿಂದಾಗಿ ಇದರ ಪರಿಸರದ ಭೂಪ್ರದೇಶವು ಫಲವತ್ತಾಗಿದೆ. ಗೋದಾವರಿಯು ಗಂಗಾಸಾಗರಕ್ಕೆ ಸೇರುತ್ತದೆ. ರಾಜಮಹೇಂದ್ರಿಯಲ್ಲಿ 'ಪುಷ್ಕರ'ವೆಂಬ ಮಹೋತ್ಸವವನ್ನು ಆಚರಿಸುತ್ತಾರೆ.

### ೯. ಚೈತ್ರರಥವನ

ಈ ಸ್ಥಾನದ ಬಗ್ಗೆ ಹಲವಾರು ಗ್ರಂಥಗಳಲ್ಲಿ ಬಗೆಬಗೆಯ ಮಾಹಿತಿ ಇದೆ. ಈ ವನವು ಉತ್ತರಕುರುಕ್ಷೇತ್ರದಲ್ಲಿತ್ತು. ಚಿತ್ರರಥನೆಂಬ ಗಂಧರ್ವನು ಈ ವನವನ್ನು ನಿರ್ಮಿಸಿದನು. ಅದಕ್ಕಾಗಿ ಈ ವನಕ್ಕೆ ಚೈತ್ರರಥವನವೆಂಬ ಹೆಸರು ಬಂದಿತು. ಬ್ರಹ್ಮಪುರಾಣದ ಮಾಹಿತಿಯಂತೆ ಈ ಉದ್ಯಾನವು ಚಂದ್ರಪ್ರಭ ಎಂಬ ಪರ್ವತದ ಮೇಲಿತ್ತು. ಅಲ್ಲಿ ಉರ್ವಶಿ ಮತ್ತು ಐಲರ ಭೇಟಿಯಾಯಿತು. ಮತ್ಸ್ಯಪುರಾಣದಂತೆ ಈ ವನವು ಮಂದಾರಪರ್ವತದ ಮೇಲೆ ಇರುವ ಉಲ್ಲೇಖವಿದೆ. ವಾಯುಪುರಾಣದಲ್ಲಿ ಈ ವನವು ಇಲಾವೃತ್ತದ ಪೂರ್ವಕ್ಕೆ 'ಅಚ್ಛೋದಾ' ಎಂಬ ನದಿಯ ದಂಡೆಯಲ್ಲಿತ್ತೆಂದಿದೆ. ಇಂದ್ರಾದಿದೇವತೆಗಳು ವಿಹಾರಕ್ಕಾಗಿ ಇಲ್ಲಿಗೆ ಬರುತ್ತಿದ್ದರು. ಭಾಗವತಪುರಾಣದನುಸಾರ ಈ ವನವು ಮೇರು-ಮಂದರಪರ್ವತದ ಮೇಲೆ ಇತ್ತು.

### ೧೦. ತಾಟಕಾವನ

ಅಗಸ್ತ್ಯ ಋಷಿಯು ಶಾಪವನ್ನು ಕೊಟ್ಟನಂತರ ತಾಟಕೆಯು ಮಲದ ಮತ್ತು ಕರುಷಪ್ರದೇಶಕ್ಕೆ ಬಂದು ವಾಸವಿದ್ದಳು. ಈ ಪ್ರದೇಶವು ಮರುಭೂಮಿ. ಇದೇ ತಾಟಕಾವನ. ವಿಶ್ವಾಮಿತ್ರನ ಆಶ್ರಮವು ಈ ವನದ ಸಮೀಪದಲ್ಲಿತ್ತು. ಅಲಹಾಬಾದದಿಂದ ಶಹಾಬಾದ ಜಿಲ್ಲೆಯವರೆಗಿನ ಗಂಗಾನದಿಯ ದಕ್ಷಿಣದ ಕಾಡು ಭೂಪ್ರದೇಶವೆಂದರೆ ಮೊದಲಿನ ಕಾಲದ ತಾಟಕಾವನವಿರಬಹುದು.

### ೧೧. ದಂಡಕಾರಣ್ಯ

ಪ್ರಾಚೀನ ಸಂಸ್ಕೃತವಾಙ್ಮಯದಲ್ಲಿ ವಿಂಧ್ಯಪರ್ವತದ ದಕ್ಷಿಣ ಭಾಗಕ್ಕೆಲ್ಲ ದಕ್ಷಿಣಾಪಥವೆಂಬ ಹೆಸರಿತ್ತು. ಬಹುಶಃ ಅದೇ ದಂಡಕಾರಣ್ಯವೆನಿಸಿರಬಹುದು. ಭಾರ್ಗವನು ಶಾಪಕೊಟ್ಟ ಪ್ರದೇಶವು ವಿಂಧ್ಯ ಹಾಗೂ ಶೈವಲ ಇವುಗಳ ಮಧ್ಯದಲ್ಲಿದೆ ಎಂದು ವಾಲ್ಮೀಕಿ ಬಣ್ಣಿಸಿದ್ದಾನೆ. ಈ ಅರಣ್ಯದಲ್ಲಿ ತಪಸ್ವಿಗಳು ವಾಸವಿದ್ದರೆಂಬ ಕಾರಣದಿಂದ ಇದು ಜನಸ್ಥಾನವೆಂದು ಖ್ಯಾತಿಪಡೆಯಿತು. ದಂಡರಾಜನು ಈ ಅರಣ್ಯದಲ್ಲಿ ಭಾರ್ಗವನ ಕನ್ಯೆಯಾದ 'ಅರಜಾ' ಇವಳನ್ನು ಬಲಾತ್ಕರಿಸಿದನು. ಭಾರ್ಗವನು ದಂಡರಾಜನಿಗೆ ಶಾಪವನ್ನು ಕೊಟ್ಟನು. ಜೊತೆಗೆ ದಂಡರಾಜನು ವಾಸವಿದ್ದ ದಂಡಕಾರಣ್ಯಕ್ಕೂ ಶಾಪದ ಝಳ ತಗುಲಿತು. ಇಂದ್ರನ ಧೂಳಿಯ ವೃಷ್ಟಿಯಿಂದ ಈ ಪ್ರದೇಶವು ಸ್ಥಾವರಜಂಗಮ, ಪ್ರಾಣಿಗಳ ಸಮೇತ ಪೂರ್ತಿ ಹಾಳುಪ್ರದೇಶವಾಯಿತು. ಈ

ರಾಜನ ಹೆಸರಿನಿಂದಾಗಿ ಈ ಪ್ರದೇಶವು ದಂಡಕಾರಣ್ಯವೆಂದಾಯಿತು. ರಾಮಾಯಣಕಾಲದಲ್ಲಿ ಈ ಅರಣ್ಯದಲ್ಲಿ ರಾಕ್ಷಸ ಮತ್ತು ವಾನರರು ವಾಸವಿದ್ದರು. ಆರ್ಯ ಹಾಗೂ ದ್ರಾವಿಡರ ಪ್ರಥಮ ಭೇಟಿಯು ಈ ದಂಡಕಾರಣ್ಯದಲ್ಲಿ ನಡೆಯಿತೆಂದು ಕೆಲವು ಸಂಶೋಧಕರ ಮತವಿದೆ. ಮಹಾಭಾರತಕಾಲದಲ್ಲಿ ಉಲ್ಲೇಖಿಸಲ್ಪಟ್ಟ ವಿದರ್ಭ, ಅಶ್ಮಕ, ಮುಲೂಕ, ಕುಂತಲ, ಗೋಪರಾಷ್ಟ್ರ, ಮಲ್ಲರಾಷ್ಟ್ರ ಈ ಭಾಗಗಳು ಈ ಪ್ರದೇಶದ ಭಾಗಗಳೇ ಆಗಿರಬಹುದು. ಇಲ್ಲಿ ಯಾದವ ವಂಶದವರ ಭಿನ್ನಭಿನ್ನ ಗುಂಪುಗಳ ರಾಜ್ಯಗಳು ಇದ್ದವು.

ಈ ಅರಣ್ಯವು ನರ್ಮದಾ ಮತ್ತು ಗೋದಾವರಿ ನದಿಗಳ ನಡುವಣ ಪ್ರದೇಶದಲ್ಲಿ ಹಬ್ಬಿತ್ತು. ಚಿತ್ರಕೂಟ ಪರ್ವತದಿಂದ ಹಿಡಿದು ಗೋದಾವರಿಯ ಮುಖದವರೆಗೆ ಇದರ ವಿಸ್ತೀರ್ಣವಿದೆಯೆಂದು ತಿಳಿಯಲಾಗುತ್ತದೆ. ಶ್ರೀರಾಮನು ಹತ್ತು ವರ್ಷಗಳವರೆಗೆ ಈ ಕಾಡಿನಲ್ಲಿ ವಾಸಿಸಿದ್ದನು.

## ೧೨. ನಿಕುಂಭಿಲಾ

ಕೋಲಂಬೋ ಪಟ್ಟಣದಿಂದ ನಾಲ್ವತ್ತು ಮೈಲಿ ದೂರದಲ್ಲಿ ನಿಕುಂಭಿಲಾದೇವಿಯ ಸ್ಥಾನವಿದೆ. ಇಂದ್ರಜಿತನು ಈ ದೇವಿಯನ್ನು ಆರಾಧಿಸುತ್ತಿದ್ದನು. ನಿಕುಂಭಿಲಾದೇವಿಯ ಸ್ಥಾನವಿದ್ದ ಈ ವನವು ಮೊದಲಿದ್ದಂತೆ ಈಗ ಇರುವುದಿಲ್ಲ. ಸಮುದ್ರವನ್ನು ದಾಟಿಹೋದ ಹನುಮಾನನಿಗೆ ಹಲವು ಪ್ರದೇಶಗಳು ಕಂಡವು. ಅವುಗಳ ವರ್ಣನೆಯಲ್ಲಿ ನಿಕುಂಭಿಲೆಯ ಉಲ್ಲೇಖವಿದೆ.

## ೧೩. (ದ್ಯಾವಾ) ಪೃಥಿವಿ

ದ್ಯಾವಾ-ಪೃಥಿವಿ ಇವರನ್ನು ಋಗ್ವೇದದಲ್ಲಿ ತಂದೆ-ತಾಯಿಗಳೆಂದು ಬಗೆದಿದ್ದಾರೆ. ಇಲರು ಇಂದ್ರಾದಿ ದೇವತೆಗಳ ಮತ್ತು ಸಕಲ ಲೋಕದ ತಂದೆತಾಯಿಗಳಾಗಿದ್ದಾರೆ. ಶಿವಪಾರ್ವತಿಯರ ರತಿಕ್ರೀಡೆಯಲ್ಲಿ ದೇವತೆಗಳು ಆತಂಕವನ್ನೊಡ್ಡಿದಾಗ ಪೃಥಿವಿಯು ಶಂಕರನ ತೇಜಸ್ಸನ್ನು (ವೀರ್ಯ) ಧರಿಸಿದಳು. ಆಗ ಪಾರ್ವತಿಯು ಪೃಥ್ವಿಗೆ ಶಾಪವನ್ನು ಕೊಟ್ಟಳು. ಈ ಕಾರಣದಿಂದ ಪೃಥ್ವಿಗೆ ಅನೇಕ ಪತಿಗಳಿದ್ದರೂ ಯಾರೂ ಸ್ಥಿರವಾಗಿ ಉಳಿಯುವಂತಿಲ್ಲ ; ಸಂತಾನವಾಗುವಂತಿಲ್ಲ.

## ೧೪. ಪ್ರಸ್ರವಣ

ಈ ಪರ್ವತವು ತುಂಗಭದ್ರಾನದೀತೀರದ ಕಿಷ್ಕಿಂಧೆಯ ಹತ್ತಿರದಲ್ಲಿದೆ. ಇದು ಮಾಲ್ಯವಾನ ಪರ್ವತದ ಒಂದು ಭಾಗ. ಇಲ್ಲಿ ಅನೇಕ ನದಿಗಳು ಉಗಮಹೊಂದಿವೆ. ಶ್ರೀರಾಮಲಕ್ಷ್ಮಣರು ಈ ಪರ್ವತದ ಶಿಖರದ ಒಂದು ಗುಹೆಯಲ್ಲಿ ಮಳೆಗಾಲದ ನಾಲ್ಕು ತಿಂಗಳ ಕಾಲವನ್ನು ಕಳೆದಿದ್ದರು. ಈ ಪ್ರದೇಶದಲ್ಲಿ ಗಾಳಿಯು ಚೆನ್ನಾಗಿ ಬೀಸುತ್ತಿತ್ತು. ತಪಸ್ವಿನಿಯಾದ ಸ್ವಯಂಪ್ರಭೆಯು ವಾನರರೆಲ್ಲರನ್ನೂ ಋಕ್ಷಬಿಲದಿಂದ ಆಚೆ ಕಳುಹಿಸಿ ಅವರಿಗೆ ಮಹಾಸಾಗರದ ಮಾರ್ಗವನ್ನು ತೋರಿಸಿಕೊಟ್ಟಳು. ಈ ಸಂದರ್ಭದಲ್ಲಿ ಅವಳು ಈ ಪ್ರಸ್ರವಣ ಪರ್ವತವನ್ನು ಉಲ್ಲೇಖಿಸಿದ್ದಾಳೆ. ನದಿಯ ಹೆಸರಿನ ಉಲ್ಲೇಖವಿಲ್ಲ.

## ೧೫. ಭೃಗುತುಂಗ

ಭೃಗುತುಂಗ ಪರ್ವತದ ಮೇಲೆ ಋಚೀಕ ಮುನಿಯ ಆಶ್ರಮವಿತ್ತು. ಈ ಪರ್ವತದ ಮೇಲೆ ಅಂಬರೀಷನಿಗೆ ಋಚೀಕ ಮುನಿಯ ದರ್ಶನವು ಆಯಿತು.

## ೧೬. ಮಧುಪುರಿ (ಮಥುರಾ)

ಈ ನಗರವು ಮಧುದೈತ್ಯನ ಮಗನಾದ ಲವಣನದಿತ್ತು. ಇದು ಯಮುನಾ ನದಿಯ ದಂಡೆಯಲ್ಲಿದೆ. ಈ ಪಟ್ಟಣಕ್ಕೆ ಮಧುರಾ, ಮಧುಪುರ, ಮಧುಪಿಕಾ, ಮಧುಪಘ್ನಾ ಎಂಬ ಅನೇಕ ಹೆಸರುಗಳಿದ್ದವೆಂದು

ತಿಳಿದುಬರುತ್ತದೆ. ಈಚಿನ ಕಾಲದ ಮಥುರಾ ಇದು ಏಳು ಪುಣ್ಯಕ್ಷೇತ್ರಗಳಲ್ಲಿ ಒಂದಾಗಿದ್ದು ಸಂಸ್ಕೃತಿಯ ಪ್ರಮುಖ ಕೇಂದ್ರವಾಗಿದೆ. ಇದು ಶೂರಸೇನನ ರಾಜಧಾನಿಯಾಗಿತ್ತು. ಸೋಮವಂಶ ಯಾದವರು ಈ ನಗರಪ್ರದೇಶವನ್ನು ಬಹುಕಾಲ ಆಳುತ್ತಿದ್ದರು. ಹೂಣ, ಹರ್ಷವರ್ಧನ, ವರ್ಮ, ಗುರ್ಜರ, ಪ್ರತೀಹಾರ ಮೊದಲಾದವರು ಇಲ್ಲಿ ಆಳಿಹೋದರು. ಅನಂತರ ಇಲ್ಲಿ ಮುಸಲ್ಮಾನರ ಹಾಗೂ ಬ್ರಿಟಿಷರ ಅಧಿಕಾರವಿತ್ತು. ಶಕ ಮತ್ತು ಕ್ಷತ್ರಪ ಇವರ ಆಳ್ವಿಕೆಯಲ್ಲಿ ಮಧುರಾಪುರವು ಜೈನ, ಬೌದ್ಧ ಹಾಗು ಭಾಗವತ ಧರ್ಮಗಳ ಪ್ರಮುಖಕೇಂದ್ರವಾಗಿತ್ತು. ಇಂದಿಗೂ ಈ ಪಟ್ಟಣದಲ್ಲಿ ಅನೇಕ ಹಿಂದೂ ದೇವಾಲಯಗಳು ಹಾಗು ಬೌದ್ಧ ಸ್ತೂಪಗಳಿವೆ.

### ೧೭೭. ಮರುಕಾಂತಾರ

ಇದಕ್ಕೆ ದ್ರುಮಕುಲ್ಯ ದೇಶವೆಂದು ಇನ್ನೊಂದು ಹೆಸರಿದೆ. ದಕ್ಷಿಣಸಮುದ್ರರಾಜನು ಶರಣಾಗತನಾದನಂತರ ಆತನ ಹೇಳಿಕೆಯಂತೆ ಶ್ರೀರಾಮನು ಈ ಪ್ರದೇಶದತ್ತ ತನ್ನ ಬಾಣವನ್ನು ಬಿಟ್ಟನು. ನೋಡಲು ಭೀಕರರೆನಿಸುವ ಆಭೀರರೆಂಬ ದಸ್ಯು ಜನರು ಇಲ್ಲಿ ವಾಸವಿದ್ದು ಘೋರಕೃತ್ಯಗಳನ್ನು ಮಾಡುತ್ತಿದ್ದರು. ಇಂದು ಈ ದೇಶದ ನಿಶ್ಚಿತಸ್ಥಾನವನ್ನು ಗುರುತಿಸುವುದು ದುಸ್ತರವಿದೆ. ಪಂಜಾಬದ ಹಿಸ್ಸಾರ ಜಿಲ್ಲೆ, ಪ್ರಾಚೀನ ಸರಸ್ವತೀನದಿಯ ತೀರಪ್ರದೇಶ, ವಾಯವ್ಯ ಭಾರತದ ಹೆರಾತ-ಕಂದಹಾರ ಪ್ರದೇಶ, ಸಿಂಧುನದಿಯ ದುಆಬ್ ಪ್ರದೇಶ, ಕಚ್ಛ ಪ್ರಾಂತದ ತ್ರಿಭುಜ ದೇಶ ಮುಂತಾದ ಸ್ಥಾನಗಳಲ್ಲಿ ಆಭೀರರಿದ್ದರೆಂದು ಬೇರೆಬೇರೆ ಗ್ರಂಥಗಳಲ್ಲಿ ಉಲ್ಲೇಖವಿದೆ. ಅದೇ ರೀತಿ ಹೈದ್ರಾಬಾದ್ (ಪಾಕಿಸ್ತಾನ) ಮತ್ತು ಗುಜರಾತ ಪ್ರಾಂತದ ಸುರತ ಜಿಲ್ಲೆಯ ಪರಿಸರದಲ್ಲಿ ಆಭೀರರ ವಸತಿಸ್ಥಾನಗಳಿದ್ದವು.

### ೧೭೮. ಮಲದ, ಕರುಷ

ಈ ಎರಡು ಪ್ರದೇಶಗಳನ್ನು ಒಟ್ಟಿಗೇ ಉಲ್ಲೇಖಿಸಲಾಗಿದೆ. ಇಂದ್ರನು ವೃತ್ರಾಸುರನನ್ನು ಕೊಂದನಂತರ ತನ್ನ ಹಸಿವನ್ನು ಇಲ್ಲಿ ಇಂಗಿಸಿದನು ; ತನ್ನ ಕೊಳೆಯನ್ನು ಇಲ್ಲಿ ವಿಸರ್ಜಿಸಿದನು. ಇಂದ್ರನ ಮಲದಿಂದಾಗಿ ಈ ಪ್ರದೇಶಕ್ಕೆ ಮಲದವೆಂದು ಮತ್ತು ಹಸಿವನ್ನು ಇಂಗಿಸಿದ ಪ್ರದೇಶಕ್ಕೆ ಕರುಷವೆಂದು ಹೆಸರುಬಂದಿತು. ಮಧ್ಯಪ್ರದೇಶದ ಶೋಣ ಮತ್ತು ಕೇನ ನದಿಗಳ ದುಆಬ್ ಪ್ರದೇಶವಾದ ರೇವಾ ನಗರದ ಸುತ್ತಲಿನ ಪ್ರದೇಶ ಇದಾಗಿರಬಹುದು. ಪಶ್ಚಿಮಕ್ಕೆ ಕೇನ ನದಿ, ಪೂರ್ವಕ್ಕೆ ಬಿಹಾರ ಪ್ರಾಂತ್ಯ, ದಕ್ಷಿಣಕ್ಕೆ ಕೈಮೂರ ಹಾಗೂ ಉತ್ತರಕ್ಕೆ ವಿಂಧ್ಯಪರ್ವತ—ಎಂಬುದಾಗಿ ಈ ಪ್ರದೇಶದ ಮೇರೆಗಳಿದ್ದವು. 'ಕರುಷ' ಜನರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಮನುವೈವಸ್ವತಪುತ್ರನಾದ 'ಕರುಷ'ನೆಂಬಾತನು ಈ ಪ್ರದೇಶವನ್ನು ಸ್ಥಾಪಿಸಿದನು. ಈ ಪ್ರದೇಶಕ್ಕೆ ನಂತರ ದೊರೆತ ಅನೇಕ ಹೆಸರುಗಳು ಸಾಮಾಂತರದಂತಿವೆ. ಇಲ್ಲಿ ದಂತವಕ್ರನ ತಂದೆಯಾದ ವೃದ್ಧಶರ್ಮನ್ ಎಂಬಾತನು ಕರುಷಾಧಿಪತಿಯಾಗಿದ್ದನು. ಈ ಪ್ರದೇಶಕ್ಕೆ 'ಅಂಗಮಾಲಜ'ವೆಂಬ ಹೆಸರೂ ಇತ್ತು. ಅಗಸ್ತ್ಯ ಮುನಿಯು ಇದನ್ನು ತನ್ನ ತಪೋಭೂಮಿಯನ್ನಾಗಿ ಮಾಡಿಕೊಂಡಿದ್ದನು.

### ೧೭೯. ಮಿಥಿಲಾ

ಮಿಥ ಎಂದರೆ ಯುಗ್ಮ (ಜೊತೆ). ವಿದೇಹ ಹಾಗೂ ವೈಶಾಲಿ ಇವೆರಡನ್ನೂ ಸೇರಿ ಮಿಥಿಲಾ ಎಂದು ಕರೆಯುವರೆಂದು ಒಂದು ಅಭಿಪ್ರಾಯವಿದೆ. ಕೊರಡಿನಿಂದ ನಿಮಿರಾಜನ ದೇಹವನ್ನು ಉಜ್ಜಿದನಂತರ ಹುಟ್ಟಿದ ಪುತ್ರನಾದ ಮಿಥನು ಈ ನಗರವನ್ನು ರಚಿಸಿದನು ; ಆದ್ದರಿಂದ ಮಿಥಿಲಾ ಎಂಬ ಹೆಸರು ಬಂದಿದೆ ಎಂಬ ಇನ್ನೊಂದು ಅಭಿಪ್ರಾಯವಿದೆ. ಇದು ಜನಕರಾಜನ ರಾಜಧಾನಿಯಾಗಿತ್ತು. ಗೌತಮನ ಆಶ್ರಮವು ಇಲ್ಲಿಗೆ ಸಮೀಪವಾಗಿತ್ತು. ನೇಪಾಳದಲ್ಲಿ ಜನಕಪುರವೆಂಬ ಒಂದು ಕ್ಷೇತ್ರಸ್ಥಾನವಿದೆ. ಅದಕ್ಕೆ ವಿದೇಹನಗರವೆಂಬ ಇನ್ನೊಂದು ಹೆಸರಿದೆ. ಇದು ವಿದ್ಯಾಕೇಂದ್ರವಾಗಿತ್ತು. ಬೌದ್ಧ ಹಾಗು ಜೈನರಿಗೂ ಇದು ಧಾರ್ಮಿಕ ಮಹತ್ವದ ನಗರವಾಗಿದೆ.

## ೨೦. ಮೇರು

ಜಂಬೂದ್ವೀಪದ ಏಳು ಪರ್ವತಸಮೂಹದಲ್ಲಿ ಮೇರುಪರ್ವತ ಮೊದಲನೆಯದು. ಸುದರ್ಶನವೆಂಬುದು ವಿಕಲ್ಪಿತ ಹೆಸರು. ಮಹಾಮೇರು, ಸುಮೇರು ಎಂಬ ಹೆಸರುಗಳು ನಂತರ ನಾಮಾಂತರಗೊಂಡಿವೆ. ಇದು ಸುವರ್ಣಮಯವಾಗಿದ್ದು ಇಲ್ಲಿ ಪವಿತ್ರಸ್ಥಾನಗಳಿದ್ದವು ; ಇದು ಪುಣ್ಯವಂತರ ವಿಹಾರಸ್ಥಾನವಾಗಿತ್ತೆಂದು ತಿಳಿದುಬರುತ್ತದೆ. ಈ ಪರ್ವತದ ಪೂರ್ವಕ್ಕೆ ಮಂದರಪರ್ವತವೂ ದಕ್ಷಿಣಕ್ಕೆ ಗಂಧಮಾದನ ಪರ್ವತವೂ ಇದೆ. ಜಂಬೂದ್ವೀಪದ ಮಧ್ಯಭಾಗದಲ್ಲಿ ಈ ವಿಶಾಲವಾದ ಪರ್ವತ ಇದೆ. ಆಕಾರವು ಘಂಟಾಕೃತಿಯ ಹೂವಿನಂತಿದೆ. ಪರ್ವತದ ಬುಡದ ಸುತ್ತಳತೆ ಹದಿನಾರು ಸಾವಿರ ಯೋಜನಗಳಷ್ಟಿದೆ. ಶಿಖರದ ಸುತ್ತಳತೆ ಮೂವತ್ತು ಸಾವಿರ ಯೋಜನ. ಇದರ ಎತ್ತರ ಎಂಬತ್ನಾಲ್ಕು ಯೋಜನವಿದ್ದು ಈ ಪರ್ವತವು ಹದಿನಾರು ಸಾವಿರ ಯೋಜನಗಳಷ್ಟು ಆಳ ಭೂಮಿಯಲ್ಲಿದೆ. ಈ ಪರ್ವತದ ಮೇಲೆ ವಿಸ್ತೀರ್ಣವಾದ ತಪ್ಪಲು ಪ್ರದೇಶವಿದೆ. ಅದನ್ನು ಸುತ್ತುವರಿದು ಎತ್ತರದ ಪರ್ವತಶೃಂಗಗಳಿವೆ. ಈ ತಪ್ಪಲುಪ್ರದೇಶವು ವರ್ತುಲಾಕಾರ ವಿದ್ದು ಕೆಲವು ಭಾಗವು ಸಮತಟ್ಟಾಗಿದೆ ; ಕೆಲವೆಡೆ ಮಾತ್ರ ಕೋನಕೋನವಾಗಿದೆ. ಈ ಪರ್ವತದ ದಕ್ಷಿಣಕ್ಕೆ ಹಿಮಾಲಯ, ಹೇಮಕೂಟ ಮತ್ತು ನಿಷಧ ಪರ್ವತಗಳಿವೆ. ಉತ್ತರಕ್ಕೆ ನೀಲ, ಶ್ವೇತ ಹಾಗೂ ಶೃಂಗಿ ಪರ್ವತ ಗಳಿವೆ. ಇದರ ಸುತ್ತಳತೆಯಲ್ಲಿ ನಾಲ್ಕು ಶಿಖರ(ಮುಖ)ಗಳಿದ್ದು ಅವು ನಾಲ್ಕೂ ಬೇರೆ ಬೇರೆ ಬಣ್ಣದವಾಗಿವೆ. ಮೇರುವಿನ ಮೂರು ಶಿಖರಗಳ ಮೇಲೆ ಬ್ರಹ್ಮ, ವಿಷ್ಣು ಮತ್ತು ಮಹೇಶ ಇವರ ನಗರಗಳಿದ್ದು, ಎಂಟೂ ದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರ ಪುರಗಳಿವೆ.

ಮೇರುಪರ್ವತವು ನಿಶ್ಚಿತವಾಗಿ ಎಲ್ಲಿದೆ ಎಂಬ ಬಗ್ಗೆ ವಿದ್ವಾಂಸರಲ್ಲಿ ಅನೇಕ ಮತಭೇದಗಳಿವೆ.

## ೨೧. ಮೈನಾಕ

ಈ ಪರ್ವತದ ನಿಶ್ಚಿತಸ್ಥಾನದ ಬಗ್ಗೆ ವಿದ್ವಾಂಸರಲ್ಲಿ ಮತಭೇದಗಳಿವೆ. ಶ್ರೀ ನಂದಕುಮಾರ ದೇ ಇವರ ಅಭಿಪ್ರಾಯದಂತೆ ಹಿಮಾಲಯದ ಶಿವಾಲಿಕ ಪರ್ವತಶ್ರೇಣಿಯೇ ಮೈನಾಕಪರ್ವತ. ಆಲ್ಮೋಡಾ ಜಿಲ್ಲೆಯ ಪರ್ವತದ ಸಾಲೇ ಮೈನಾಕಪರ್ವತವೆಂದು ಶ್ರೀ ಪಾರ್ಜಿಟರ್ ಇವರ ಮತ. ವಾಲ್ಮೀಕಿರಾಮಾಯಣದಲ್ಲಿರುವ ಉಲ್ಲೇಖಗಳನ್ನು ಗಮನಿಸಿದರೆ ಈ ಪರ್ವತದ ಸ್ಥಾನವು ಭಾರತ ಮತ್ತು ಲಂಕೆಗಳ ನಡುವಿನ ಸಮುದ್ರದಲ್ಲಿ ಇರಬೇಕೆಂದು ತಿಳಿದುಬರುತ್ತದೆ. ಮೊದಲಿನ ಕಾಲದಲ್ಲಿ ರೆಕ್ಕೆಗಳನ್ನು ಹೊಂದಿದ್ದ ಪರ್ವತಗಳು ತಮ್ಮ ಇಚ್ಛೆಯಂತೆ ಸಂಚರಿಸುತ್ತಿದ್ದವಂತೆ. ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸತೊಡಗಿದಾಗ ಭಯಗೊಂಡ ಈ ಪರ್ವತವು ಸಮುದ್ರದಲ್ಲಿ ಅಡಗಿಕೊಂಡಿತೆಂದು ಒಂದು ಕಥೆ ಇದೆ.

## ೨೨. ಲಂಕಾಪಟ್ಟಣ

ಇದು ರಾಕ್ಷಸಾಧಿಪತಿಯಾದ ರಾವಣನ ರಾಜಧಾನಿ. ದಕ್ಷಿಣ ಸಮುದ್ರದ ಅಂಚಿನಿಂದ ನೂರು ಯೋಜನಗಳಷ್ಟು ದೂರದ ಈ ದ್ವೀಪದಲ್ಲಿ ಒಂದು ನೂರು ಯೋಜನಗಳಷ್ಟು ವಿಸ್ತೀರ್ಣವಾದ ತ್ರಿಕೂಟಾಚಲವೆಂಬಲ್ಲಿ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಈ ಪಟ್ಟಣ ನೆಲೆಸಿದೆ. ಹತ್ತು ಯೋಜನಗಳಷ್ಟು ಅಗಲ ಇಪ್ಪತ್ತು ಯೋಜನಗಳಷ್ಟು ಉದ್ದವಿದ್ದ ಈ ಸುವರ್ಣಮಯ ಲಂಕಾಪಟ್ಟಣವು ಕೋಟೆಕೊತ್ತಳಗಳಿಂದ ಸುತ್ತುಗಟ್ಟಲ್ಪಟ್ಟಿತ್ತು. ಸುಕೇಶಪುತ್ರರು ತಪಗೈದದ್ದರಿಂದ ಸಂತೋಷಗೊಂಡ ವಿಶ್ವಕರ್ಮನು ಅವರಿಗೆ ಈ ಪಟ್ಟಣವನ್ನು ಕೊಟ್ಟನು. ದೇವತೆಗಳಿಂದ ಮಾಲಿಯ ವಧೆಯಾದನಂತರ ಮಾಲ್ಯವಾನನು ತನ್ನ ಸಹೋದರ ರೊಂದಿಗೆ ಇಲ್ಲಿ ವಾಸವಿದ್ದನು. ಈತನು ದೇವತೆಗಳಿಗೆ ಉಪದ್ರವ ಕೊಡಲಾರಂಭಿಸಿದ್ದರಿಂದ ವಿಷ್ಣುವು ಈತನನ್ನು ವಧಿಸಿದನು. ಅನಂತರ ವೈಶ್ರವಣ ಕುಬೇರನು ತನ್ನ ತಂದೆಯಿಂದ ಲಂಕೆಯನ್ನು ಬೇಡಿ ಪಡೆದು ಕೊಂಡನು ; ಆದರೆ ರಾವಣನು ಕುಬೇರನನ್ನು ಪರಾಭವಗೊಳಿಸಿ ಲಂಕೆಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ರಾವಣನ ವಧೆಯಾದನಂತರ ಲಂಕಾ ರಾಜ್ಯವು ವಿಭೀಷಣನ ವಶಕ್ಕೆ ಬಂದಿತು.

ಲಂಕೆಯ ಭೌಗೋಳಿಕ ಸ್ಥಾನದ ಬಗ್ಗೆ ಸಂಶೋಧಕರಲ್ಲಿ ಮತಭೇದಗಳಿವೆ. ಕೆಲವು ಸಂಶೋಧಕರು ಮಾಲ್‌ದೀವ್ ಮತ್ತು ಜಾವಾ ದ್ವೀಪಗಳನ್ನು ಲಂಕೆಯೆಂದು ಅಭಿಪ್ರಾಯಪಡುತ್ತಾರೆ. ಇನ್ನು ಕೆಲವರ ಮತದಂತೆ ಲಂಕಾ ಪಟ್ಟಣವು ಮಧ್ಯಭಾರತದಲ್ಲಿ ವಿಂಧ್ಯಪರ್ವತದ ಬಳಿ ಇತ್ತೆಂದು ತಿಳಿಯುತ್ತಾರೆ. ಮುಂಬಯಿಯ ಸಮೀಪವಿರುವ ಈಗಿನ ಬೋರಿವಲಿ ಭಾಗವು ಲಂಕೆ ಇರಬಹುದೆಂಬ ಇನ್ನೊಂದು ಮತವಿದೆ. ಸಿಂಹಳ ದ್ವೀಪವೇ ಲಂಕೆಯಾಗಿದೆ ಎಂಬ ತಿಳುವಳಿಕೆಯು ಬಹು ಪುರಾತನ ಕಾಲದಿಂದಲೂ ಇದೆ. ಈ ಸಂಗತಿಯನ್ನು ಪುಷ್ಟೀಕರಿಸಿರುವ ಅನೇಕ ಪೋಷಕ ಸಂದರ್ಭಗಳು ವಾಲ್ಮೀಕಿರಾಮಾಯಣದಲ್ಲಿವೆ. (ಶ್ರೀರಾಮಕೋಶ, ಖಂಡ ೨, ಭಾಗ ೩/೧, ಪರಿಶಿಷ್ಟ, ಪು. ಸಂಖ್ಯೆ ೭೬-೮೬ರಲ್ಲಿ ಈ ಎಲ್ಲ ಅಭಿಪ್ರಾಯಗಳನ್ನು ವಿವರಗಳೊಂದಿಗೆ ಸಂಕಲನ ಮಾಡಲಾಗಿದೆ. ಜಿಜ್ಞಾಸುಗಳು ಪರಿಶೀಲಿಸಬಹುದು.)

ಸರ್ವಸಾಮಾನ್ಯ ಅರಿವಿನಂತೆ ಶ್ರೀಲಂಕೆಯೇ (ಸಿಲೋನ್) ರಾವಣನ ಲಂಕೆಯೆಂದು ನೆಂಬಲಾಗುತ್ತದೆ. ರಾವಣನ ಲಂಕೆಯು ಸಮುದ್ರದಲ್ಲಿ ಮುಳುಗಿಹೋಗಿರಬಹುದೆಂದು ಕೂಡ ಕೆಲವರು ಊಹಿಸುತ್ತಾರೆ. ಲಂಕೆಯೊಡನೆ ಗುಪ್ತ ಹಾಗು ಮೌರ್ಯ ರಾಜ್ಯದ ಸಂಪರ್ಕವು ಇತ್ತು. ಲಂಕೆಯ ಮೇಲೆ ವಿಜಯನಗರದ ಎರಡನೆಯ ದೇವರಾಯನ ಆಧಿಪತ್ಯವು ಇತ್ತು. ಪೋರ್ಚುಗೀಸರು, ಡಚ್ಚರು, ನಂತರ ಇಂಗ್ಲೀಷರು ಕೆಲವು ಕಾಲ ಇಲ್ಲಿ ರಾಜ್ಯವಾಳಿದರು. ಇಂದು ಶ್ರೀಲಂಕಾ ಒಂದು ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಗಿದೆ. ಕೋಲಂಬೋದಿಂದ ನಾಲ್ವತ್ತು ಮೈಲಿ ದೂರದಲ್ಲಿ ನಿಕುಂಭಿಲಾದೇವಿಯ ಸ್ಥಾನವು ಇದೆ. ಇಲ್ಲಿ ಸೀತೆಯ ಅನೇಕ ಸ್ಥಾನಗಳಿವೆ. ಅಶೋಕನ ಕಾಲದಲ್ಲಿ ಈ ದೇಶಕ್ಕೆ 'ತಾಮ್ರಪರ್ಣಿ' ಎಂದೆನ್ನುತ್ತಿದ್ದರು.

## ೨೩. ವಿಂಧ್ಯ

ಮಧ್ಯಭಾರತದ ಒಂದು ಪರ್ವತ. ವಿಂಧ್ಯಪರ್ವತದಿಂದಾಗಿ ಉತ್ತರಭಾರತ ಹಾಗೂ ದಕ್ಷಿಣ ಭಾರತ ಎಂಬ ಎರಡು ಭಾಗಗಳಾಗಿವೆ. ಇದು ಗುಜರಾತ, ಮಧ್ಯಪ್ರದೇಶ ಹಾಗೂ ಬಿಹಾರ ಪ್ರಾಂತಗಳಲ್ಲಿ ಹಬ್ಬಿಕೊಂಡಿದೆ. ಮೇರುವಿಗಿಂತ ಹೆಚ್ಚು ಎತ್ತರಕ್ಕೆ ಬೆಳೆಯಬೇಕೆಂಬ ಇಚ್ಛೆ ಈ ಪರ್ವತಕ್ಕಿತ್ತು. ಈ ರೀತಿ ಬೆಳೆಯತೊಡಗಿದಾಗ ಅಗಸ್ತ್ಯಮುನಿಗಳ ದರ್ಶನದಿಂದಾಗಿ ಲೀನವಾಗಿ ಇದು ಸ್ಥಿರಗೊಂಡಿತು ಎಂಬ ಕಥೆಯು ಮತ್ಸ್ಯಪುರಾಣ, ಪದ್ಮಪುರಾಣ ಮತ್ತು ವಾಯುಪುರಾಣಗಳಲ್ಲಿದೆ. ಇದು ತುಂಬ ಪ್ರಾಚೀನ ಪರ್ವತವಿದ್ದು ಏಳು ಕುಲಪರ್ವತಗಳಲ್ಲಿ ಒಂದಾಗಿದೆ. ಇದು 'ದಕ್ಷಿಣಗಿರಿ' ಎಂತಲೂ ಖ್ಯಾತವಿದೆ. ತಾಪಿ, ನರ್ಮದಾ, ಶೋಣ, ಮಹಾನದಿ ಮುಂತಾದವುಗಳ ಉಗಮಸ್ಥಾನವಾಗಿದೆ. ಇದು ಸಮುದ್ರದ ಪಾತಳಿಯಿಂದ ೨೫೦೦ ಅಡಿ ಎತ್ತರವಾಗಿದ್ದು ೭೦೦ ಮೈಲು ಉದ್ದವಾಗಿದೆ. ಋಕ್ಷವಾನ ಮತ್ತು ಪಾರಿಯಾತ್ರಗಳು ಈ ಪರ್ವತದ ಭಾಗಗಳು. ಇಲ್ಲಿ 'ಅರಣ್ಯ'ರೆಂಬ ಜನರು ವಾಸಿಸುತ್ತಿದ್ದರು. ಪ್ರಾಚೀನ ಕಾಲದಲ್ಲಿ ದಶಾರ್ಣ, ಭೋಜ, ಕೋಸಲ ಮುಂತಾದ ಜನಪದರ ವಸತಿಸ್ಥಾನಗಳು ಇಲ್ಲಿ ಇದ್ದವು.

## ೨೪. ವೈಜಯಂತನಗರ

ನಿಮಿರಾಜನಿಂದ ದಂಡಕಾರಣ್ಯದಲ್ಲಿ ಗೌತಮಾಶ್ರಮದ ಬಳಿ ನಿರ್ಮಿಸಲ್ಪಟ್ಟ ರಾಜಧಾನಿ.

## ೨೫. ಸಿದ್ಧಾಶ್ರಮ

ಮೊಗಲ್‌ಸರಾಯ್ ಮತ್ತು ಪಾಟಣಾ ನಗರಗಳ ಸಂಪರ್ಕದ ರೈಲುಮಾರ್ಗದಲ್ಲಿ ಬಕ್ಸರ್ ಎಂಬ ಒಂದು ನಿಲ್ದಾಣವಿದೆ. ತ್ರೇತಾಯುಗದಲ್ಲಿ ಈ ಸ್ಥಳವು ಸಿದ್ಧಾಶ್ರಮವೆಂದು ಪ್ರಸಿದ್ಧವಿತ್ತು. ಪೌರಾಣಿಕ ಕಾಲದಲ್ಲಿ ಇದಕ್ಕೆ ತಪೋವನವೆಂದೆನ್ನುತ್ತಿದ್ದರು. ಮಹಾತಪಸ್ವಿಯಾದ ವಿಷ್ಣು ಈ ಸ್ಥಳದಲ್ಲಿಯೇ ತನ್ನ ತಪೋಬಲದಿಂದ ಸಿದ್ಧಿಪಡೆದ ಕಾರಣ ಇದು ಸಿದ್ಧಾಶ್ರಮವಾಯಿತು. ವಿಶ್ವಾಮಿತ್ರನು ಇಲ್ಲಿಯೇ ಇರುತ್ತಿದ್ದನು. ಇದು ಥೋರಾ ನದಿಯ ದಡದಲ್ಲಿದೆ. ಇದು ವಾಮನನ ನಿವಾಸಸ್ಥಾನವಾಗಿತ್ತು.

## ೨೬. ಹಿಮವಾನ

ಭಾರತದ ಉತ್ತರ ಮೇರೆಯ ಪ್ರಸಿದ್ಧವಾದ ಹಿಮಾಲಯಕ್ಕೆ ಪೌರಾಣಿಕ ಕಾಲದ ಹೆಸರಿದು. ಇದಲ್ಲದೇ ಹಿಮವತ್, ಹಿಮಾಚಲ, ಹಿಮಾದ್ರಿ, ಹೈಮವತ ಮುಂತಾದ ಹೆಸರುಗಳೂ ಬೇರೆಬೇರೆ ಗ್ರಂಥಗಳಲ್ಲಿವೆ. ಇದರ ಎತ್ತರ ಹತ್ತುಸಾವಿರ ಯೋಜನಗಳಷ್ಟಿದೆ. ಇದು ಇಲಾವೃತ್ತದ ದಕ್ಷಿಣಕ್ಕೆ ಪೂರ್ವ-ಪಶ್ಚಿಮವಾಗಿ ಹಬ್ಬಿಕೊಂಡಿದೆ. ಇದರ ವಿಸ್ತಾರವು ಪೂರ್ವಸಮುದ್ರದಿಂದ ಪಶ್ಚಿಮಸಮುದ್ರದವರೆಗೆ ಇದೆ ಎಂದು ಮಾರ್ಕಂಡೇಯ ಪುರಾಣದಲ್ಲಿದೆ. ಕೂರ್ಮಪುರಾಣದಲ್ಲಿ ಇದರ ಉದ್ದಳತೆಯು ಒಂದು ಸಾವಿರದ ಎಂಬತ್ತು ಯೋಜನವೆಂದು ಬರೆದಿದೆ. ಋಗ್ವೇದ, ಅಥರ್ವವೇದ, ಯಜುರ್ವೇದ, ಐತರೇಯಬ್ರಾಹ್ಮಣ ಇತ್ಯಾದಿ ಗ್ರಂಥಗಳಲ್ಲಿ ಕೂಡ ಇದರ ಉಲ್ಲೇಖ ಕಂಡುಬರುತ್ತದೆ. ತೈತ್ತರೀಯ ಶತಪಥಬ್ರಾಹ್ಮಣ ಪಾಣಿನಿಯ ಅಷ್ಟಾಧ್ಯಾಯಿ ಈ ಗ್ರಂಥಗಳಲ್ಲೂ ಹಿಮಾಲಯ ಪರ್ವತದ ಮಾಹಿತಿ ದೊರಕುತ್ತದೆ. 'ಸ್ಥಾವರಾಣಾಂ ಹಿಮಾಲಯಃ' ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನುಡಿದಿದ್ದಾನೆ. ಕಾಳಿದಾಸನ ರಘುವಂಶದಲ್ಲಿ ಹಿಮಾಲಯದ ಬಗ್ಗೆ ಬಹುಸುಂದರವಾದ ವರ್ಣನೆಯಿದೆ. ಅನೇಕಾನೇಕ ಋಷಿಗಳು ಈ ಪರ್ವತದ ಮೇಲೆ ತಮ್ಮ ತಮ್ಮ ಆಶ್ರಮಗಳನ್ನು ಕಟ್ಟಿಕೊಂಡಿದ್ದರು. ಗೌರೀಶಂಕರ, ಕಾಂಚನಗಂಗಾ, ಧವಲಗಿರಿ ಎಂಬ ಈ ಪರ್ವತದ ಉತ್ತುಂಗಶಿಖರಗಳಿವೆ. ಇದು ಗಂಗಾ, ಯಮುನಾ, ಕಾಳಿ, ಗಂಡಕಿ, ಕೋಸಿ, ಬ್ರಹ್ಮಪುತ್ರಾ, ಸರಯೂ, ಝೇಲಮ್ ಎಂಬ ನದಿಗಳ ಉಗಮಸ್ಥಾನವಾಗಿದೆ. ಹಿಮಾಲಯದ ಅರಣ್ಯದಲ್ಲಿ ಆಯುರ್ವೇದದ ಅನೇಕ ಔಷಧೀಯ ವನಸ್ಪತಿಗಳು ಸಿಗುತ್ತವೆ. ಕೇದಾರನಾಥ, ಪಶುಪತಿನಾಥ, ಬದರೀನಾಥ ಎಂಬ ಅನೇಕ ಪವಿತ್ರ ತೀರ್ಥಸ್ಥಾನಗಳು ಈ ಪರ್ವತಶ್ರೇಣಿಯಲ್ಲಿವೆ. ಹಿಂದೂ ಜನರ ಪವಿತ್ರಸ್ಥಾನಗಳಿದ್ದಂತೆ ಇಲ್ಲಿ ಬೌದ್ಧರ ಅನೇಕ ತೀರ್ಥಕ್ಷೇತ್ರಗಳಿವೆ. ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ, ದೈವತಗಳು ಇವೆಲ್ಲವುಗಳ ದೃಷ್ಟಿಯಿಂದಲೂ ಈ ಹಿಮವಾನ್, ಹಿಮಾಲಯ ಪರ್ವತದ ಮಹತ್ವವು ಅನನ್ಯಸಾಧಾರಣವಾಗಿದೆ.

## ಭಾಗ : ಒಂಬತ್ತು

# ಪರಿಶಿಷ್ಟಗಳು

## ಪರಿಶಿಷ್ಟ ೧ : ಸಂದೇಹಾಸ್ಪದ ಶಾಪ / ವರಗಳು

[ವಾಲ್ಮೀಕಿರಾಮಾಯಣದ ಕೆಲವು ಘಟನೆಗಳು, ಸಂದರ್ಭಗಳು ಮತ್ತು ಅವುಗಳ ಸ್ವರೂಪವು ಶಾಪಗಳ, ಇಲ್ಲವೆ ವರಗಳ ಪರಿಣಾಮಗಳನ್ನು ಹೋಲುವಂತಿದ್ದರೂ ಅವುಗಳನ್ನು ನಿಶ್ಚಿತವಾಗಿ ಶಾಪಗಳೆನ್ನಬೇಕೋ ವರಗಳೆನ್ನಬೇಕೋ ಎಂಬುದರ ಬಗ್ಗೆ ಸಂದೇಹವುಂಟಾಗುತ್ತದೆ ; ಮತಭೇದಗಳಾಗುವ ಸಾಧ್ಯತೆ ಇದೆ. ಕೆಲವು ಶಾಪ/ವರಗಳು ಗೀತಾ ಪ್ರೆಸ್, ಗೋರಖಪುರದ ಪ್ರತಿಯಲ್ಲಿಲ್ಲ.]

### ೧. ಪಾಯಸ ಪಡೆದಿದ್ದು — ಬಾಲಕಾಂಡ / ೧೬

ದಶರಥನು ಪುತ್ರಪ್ರಾಪ್ತಿಯಾಗಬೇಕೆಂಬ ಉತ್ಕಟೇಚ್ಛೆಯಿಂದ ಪುತ್ರಕಾಮೇಷ್ಟಿಯಜ್ಞವನ್ನಾಚರಿಸಿದನು. ಅಗ್ನಿಕುಂಡದಿಂದ ಒಬ್ಬ ಮಹಾಪುರುಷನು ಪ್ರಕಟನಾದನು. ಆತನ ರೂಪವು ಅಗ್ನಿಯ ಜ್ವಾಲೆಯಂತೆ ಕಂಗೊಳಿಸುತ್ತಿತ್ತು. ದಿವ್ಯವಾದ ಪಾಯಸದಿಂದ ಪೂರ್ತಿ ತುಂಬಿದ, ಬೆಳ್ಳಿಯ ಮುಚ್ಚಳವಿದ್ದ ಒಂದು ಚಿನ್ನದ ಪಾತ್ರೆಯು ಆತನ ಕರಗಳಲ್ಲಿತ್ತು. ಆತನು ಯಜ್ಞಮಂಟಪದಲ್ಲಿ ಬಂದು "ಪ್ರಜಾಪತಿಯು ನನ್ನನ್ನು ನಿನ್ನ ಬಳಿ ಕಳುಹಿಸಿದ್ದಾನೆ" ಎಂದು ದಶರಥನಿಗೆ ಹೇಳಿದನು. ದಶರಥನು ಆತನನ್ನು ಯಥಾಯೋಗ್ಯವಾಗಿ ಸತ್ಕರಿಸಿದನು.

ಆತನು ದಶರಥರಾಜನಿಗೆ—

> ಇದಂ ತು ನೃಪಶಾರ್ದೂಲ ಪಾಯಸಂ ದೇವನಿರ್ಮಿತಮ್ ।
> ಪ್ರಜಾಕರಂ ಗೃಹಾಣ ತ್ವಂ ಧನ್ಯಮಾರೋಗ್ಯವರ್ಧನಮ್ ॥ ೧೯ ॥
> ಭಾರ್ಯಾಣಾಮನುರೂಪಾಣಾಮಶ್ನೀತೇತಿ ಪ್ರಯಚ್ಛ ವೈ ।
> ತಾಸು ತ್ವಂ ಲಪ್ಸ್ಯಸೇ ಪುತ್ರಾನ್ಯದರ್ಥಂ ಯಜಸೇ ನೃಪ ॥ ೨೦ ॥

"ಹೇ ರಾಜನೇ, ನೀನಿಂದು ದೇವತೆಗಳನ್ನು ಅರ್ಚಿಸುತ್ತಿರುವುದರಿಂದ ನಿನಗಿದು ಪ್ರಾಪ್ತವಾಗಿದೆ. ಎಲೈ ನೃಪಶ್ರೇಷ್ಠನೇ, ಈ ಪಾಯಸವು ಧನಕಾರಕವೂ ಆರೋಗ್ಯಕರವೂ ಸಂತಾನಕರವೂ ಆಗಿದ್ದು, ಇದು ದೇವತೆಗಳಿಂದ ನಿರ್ಮಿಸಲ್ಪಟ್ಟಿದೆ. ನೀನು ಇದನ್ನು ಸ್ವೀಕರಿಸು ! ನೀನು ಇದನ್ನು ನಿನ್ನ ಪ್ರಿಯರಾಗಿರುವ ಪತ್ನಿಯರಿಗೆ ಕೊಡು ! ನೀವೆಲ್ಲರೂ ಸೇರಿ ಇದನ್ನು ಭಕ್ಷಿಸಿರಿ ! ಅಂದರೆ ನೀನು ಯಾವ ಉದ್ದೇಶದಿಂದ ಯಜ್ಞವನ್ನು ಮಾಡುತ್ತಿರುವಿಯೋ ಆ ಉದ್ದೇಶವು ನಿನ್ನ ಪತ್ನಿಯರಿಂದ ಪುತ್ರರು ಹುಟ್ಟುವುದರಿಂದ ಸಫಲವಾಗುವದು" ಎಂದು ನುಡಿದನು.

ಪಾಯಸ ದೊರೆತದ್ದು ಯಜ್ಞದ ಫಲರೂಪವಾಗಿದೆ. ಪುತ್ರರು ಹುಟ್ಟಿದ್ದುದು ಪಾಯಸದ ಪರಿಣಾಮವಾಗಿದೆ. ಇದು ವರವೆಂದೆನಿಸಿದರೂ ಪಾಯಸ ದೊರೆತದ್ದನ್ನು ವರವೆಂದೆನ್ನುವುದು ಸರಿಯಾಗಲಾರದು. ಇದು ಪ್ರಸಾದರೂಪವಾಗಿದೆ. ಇದನ್ನು ಅನುಗ್ರಹವೆಂದೆನ್ನಬಹುದು. ಪಾಯಸದ ಪ್ರಭಾವದ ಪರಿಣಾಮರೂಪವಾಗಿ ಮಕ್ಕಳು ಹುಟ್ಟಿದರು. ವಾಲ್ಮೀಕಿರಾಮಾಯಣದಲ್ಲಿ ಸಂತಾನಪ್ರಾಪ್ತಿಗೆಂದು ಕೊಟ್ಟ ಹತ್ತು ವರಗಳ ಉಲ್ಲೇಖವಿದೆ. ಅವುಗಳಲ್ಲಿ ಒಂದರಲ್ಲೂ ಸಂತಾನಕ್ಕಾಗಿ ಪಾಯಸದ ಬಳಕೆ ನಡೆದುದು ಕಂಡುಬರುವುದಿಲ್ಲ.

ವರಗಳ ಕ್ರಮಸಂಖ್ಯೆ ೯, ೧೧, ೧೨, ೧೩, ೧೪, ೧೫, ೧೬, ೧೭, ೨೩ ಮತ್ತು ೫೦ ಪರಿಶೀಲಿಸಿರಿ.

## ೨. ತ್ರಿಶಂಕುವಿನ ಸ್ವರ್ಗಗಮನ ಬಾಲಕಾಂಡ / ೬೦

ದೇಹಸಹಿತವಾಗಿ ಸ್ವರ್ಗಕ್ಕೆ ಹೋಗಬೇಕೆಂಬ ಉತ್ಕಟೇಚ್ಛೆಯನ್ನು ಹೊಂದಿದವನಾಗಿ ಯಜ್ಞವನ್ನು ಕೈಕೊಂಡ ತ್ರಿಶಂಕುವಿಗೆ ತನ್ನಾಸೆ ಕೈಗೂಡದೆ ಬಲುದುಃಖವಾಯಿತು. ಆತನು ವಸಿಷ್ಠಪುತ್ರರ ಬಳಿಗೆ ಹೋದನು. ವಸಿಷ್ಠರ ಪುತ್ರರು ಸಹ ಈತನ ವಿನಂತಿಯನ್ನು ಅಸಡ್ಡೆಮಾಡಿದ್ದಲ್ಲದೇ "ನೀನು ಚಾಂಡಾಲನಾಗುವೆ !" ಎಂಬ ಶಾಪವನ್ನು ಕೊಟ್ಟರು. ಚಾಂಡಾಲತ್ವವನ್ನು ಹೊಂದಿದ ತ್ರಿಶಂಕು ವಿಶ್ವಾಮಿತ್ರನಿಗೆ ಶರಣುಹೋದನು. ತನ್ನನ್ನು ರಕ್ಷಿಸಬೇಕು ಮತ್ತು ತನ್ನ ಬಯಕೆಯನ್ನು ಈಡೇರಿಸಿಕೊಳ್ಳಲು ನೆರವಾಗಬೇಕೆಂದು ವಿನಂತಿಸಿದನು. ವಿಶ್ವಾಮಿತ್ರನು ತ್ರಿಶಂಕುವನ್ನು ರಕ್ಷಿಸುವ ಹೊಣೆಯನ್ನು ಸ್ವೀಕರಿಸಿದನು. ಅವನು ತನ್ನ ಸ್ವಂತದ ತಪೋಬಲದಿಂದ, ವಸಿಷ್ಠಪುತ್ರರ ಶಾಪದಿಂದ ಉಂಟಾದ ಚಾಂಡಾಲದೇಹಸಹಿತ ತ್ರಿಶಂಕುವಿಗೆ ಸ್ವರ್ಗವನ್ನು ದೊರಕಿಸಿಕೊಡುವ ದೃಢಪ್ರತಿಜ್ಞೆಯನ್ನು ಮಾಡಿದನು. ವಿಶ್ವಾಮಿತ್ರನು ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದನು. ಆದರೆ ಅಲ್ಲಿಯ ಇಂದ್ರಾದಿದೇವತೆಗಳು "ಸ್ವರ್ಗದಲ್ಲಿ ಇರುವ ಯೋಗ್ಯತೆ ನಿನಗಿಲ್ಲ" ಎಂದು ನುಡಿದು ತ್ರಿಶಂಕುವನ್ನು ತಲೆಕೆಳಗೆ ಮಾಡಿ ಸ್ವರ್ಗದಿಂದ ಪೃಥ್ವಿಯತ್ತ ತಳ್ಳಿಹಾಕಿದರು. ಆಗ ಶರಣಾಗತನಾದ ತ್ರಿಶಂಕುವನ್ನು ರಕ್ಷಿಸುವ ಮತ್ತು ಆತನ ಇಚ್ಛೆಯನ್ನು ಪೂರ್ತಿಗೊಳಿಸುವ ಪೂರ್ಣ ಹೊಣೆ ತನ್ನದೇ ಎಂದು ವಿಶ್ವಾಮಿತ್ರನು ಬಗೆದನು. ಆತನು—

> ಪಶ್ಯ ಮೇ ತಪಸೋ ವೀರ್ಯಂ ಸ್ವಾರ್ಜಿತಸ್ಯ ನರೇಶ್ವರ ।
> ಏಷಂ ತ್ವಾಂ ಸ್ವಶರೀರೇಣ ನಯಾಮಿ ಸ್ವರ್ಗಮೋಜಸಾ ॥ ೧೩ ॥
> ದುಷ್ಪ್ರಾಪಂ ಸ್ವಶರೀರೇಣ ಸ್ವರ್ಗಂ ಗಚ್ಛ ನರೇಶ್ವರ ।
> ಸ್ವಾರ್ಜಿತಂ ಕಿಂಚಿದಪ್ಯಸ್ತಿ ಮಯಾ ಹಿ ತಪಸಃ ಫಲಮ್ ॥ ೧೪ ॥

"ಹೇ ರಾಜನೇ, ನಾನು ಗಳಿಸಿದ ನನ್ನ ತಪಸ್ಸಿನ ಸಾಮರ್ಥ್ಯವನ್ನು ಅವಲೋಕಿಸು. ನಾನು ಈಗ ನನ್ನ ಆ ತಪೋಬಲದಿಂದ ನಿನ್ನ ಶರೀರಸಮೇತವಾಗಿ ನಿನ್ನನ್ನು ಸ್ವರ್ಗಕ್ಕೆ ಒಯ್ಯುತ್ತೇನೆ. ಸದೇಹವಾಗಿ ಸ್ವರ್ಗ ಸೇರುವುದು ಕಠಿಣ ; ಆದರೂ ಅಲ್ಲಿಗೆ ನೀನು ಹೋಗುವಿ ! ನಾನು ತಪಸ್ಸಿನ ಸಿದ್ಧಿಯನ್ನು ಕಾಯ್ದು ಇಟ್ಟಿದ್ದೇನೆ. ಅದರ ಪ್ರಭಾವದಿಂದ ಶರೀರದೊಂದಿಗೆ ಸ್ವರ್ಗಕ್ಕೆ ಹೋಗುವಿ !" ಎಂದನು.

ಈ ರೀತಿ ವಿಶ್ವಾಮಿತ್ರನ ಪ್ರತಿಜ್ಞೆಯು ಆತನ ಸದಿಚ್ಛೆಯನ್ನು ವ್ಯಕ್ತಗೊಳಿಸುತ್ತದೆ. ಏಕೆಂದರೆ ಆತನ ಪ್ರಯತ್ನವು ಫಲಕಾರಿಯಾಗಲಿಲ್ಲ. ಈ ಸಂದರ್ಭದಲ್ಲಿ ವಾಲ್ಮೀಕಿ ಸಹ 'ವರ' ಎಂಬ ಶಬ್ದವನ್ನು ಬಳಸಿಲ್ಲ, ಎಂಬುದು ಮಹತ್ವದ ಸಂಗತಿಯಾಗಿದೆ. ವರ ಅಥವಾ ಶಾಪದ ಫಲವು ನಿಶ್ಚಿತವಾಗಿರುತ್ತದೆ. ಅದೆಂದೂ ಸುಳ್ಳಾಗಲಾರದು. ವಿಶ್ವಾಮಿತ್ರನ ಪ್ರಯತ್ನವು ಸಫಲಗೊಂಡಿದ್ದರೆ ಅದಕ್ಕೆ ವರವೆಂದೆನ್ನಬಹುದಿತ್ತು.

## ೩. ಶುನಃಶೇಪನಿಗೆ ದೀರ್ಘ ಆಯುಸ್ಸು ದೊರೆತದ್ದು ಬಾಲಕಾಂಡ / ೬೨

ಶುನಃಶೇಪನು ಋಚೀಕನ ಮಕ್ಕಳಲ್ಲಿ ನಡುವಿನವನು. ಇವನು ವಿಶ್ವಾಮಿತ್ರನ ಸಹೋದರಿಯ ಮಗನಾಗಿದ್ದನು. ಯಜ್ಞದಲ್ಲಿ ನರಬಲಿಯನ್ನು ಕೊಡಲೋಸುಗ ಅಂಬರೀಷನು ಇವನನ್ನು ಕೊಂಡುಕೊಂಡಿದ್ದನು. ಶುನಃಶೇಪನನ್ನು ಕೊಂಡೊಯ್ಯುವಾಗ ಮಾರ್ಗದಲ್ಲಿ ವಿಶ್ವಾಮಿತ್ರನ ಭೇಟಿಯಾಯಿತು. ಶುನಃಶೇಪನು ತನ್ನ ಸೋದರಮಾವನಾದ ವಿಶ್ವಾಮಿತ್ರನಿಗೆ ಶರಣುಹೋಗಿ, "ಎಲೈ ಮುನಿಯೇ, ನನಗೆ ತಾಯಿಯೂ ಇಲ್ಲ, ತಂದೆಯೂ ಇಲ್ಲ. ಅಂದಬಳಿಕ ನನಗೆ ಮಿಕ್ಕ ನೆಂಟರಿಷ್ಟರು ಯಾರು ? ಈ ಸ್ಥಿತಿಯಲ್ಲಿರುವ ನನ್ನನ್ನು, ಹೇ ಸೌಮ್ಯನೇ, ಹೇ ಮುನಿಶ್ರೇಷ್ಠನೇ, ನೀನು ಧರ್ಮವೆಂದು ನನ್ನನ್ನು ರಕ್ಷಿಸಬೇಕು. ಹೇ ಪುರುಷಶ್ರೇಷ್ಠನೇ, ನೀನೇ ನನ್ನ ರಕ್ಷಕನು. ಶರಣಾಗತರೆಲ್ಲರನ್ನೂ ರಕ್ಷಿಸುವವನು ನೀನೇ. ಅಂಬರೀಷನ ಕಾರ್ಯವೂ ನಡೆಯಬೇಕು ; ನಾನೂ ದೀರ್ಘಾಯುವಾಗಿರಬೇಕು. ನಾನು ಉತ್ಕೃಷ್ಟ ತಪಸ್ಸನ್ನು ಮಾಡಿ ಸ್ವರ್ಗಲೋಕವನ್ನು ಪಡೆಯುವಂತಾಗಬೇಕು. ಇದಕ್ಕಾಗಿ ನೀನು ಅನಾಥನಾದ ನನಗೆ ಉದಾರ ಅಂತಃಕರಣದಿಂದ ಸ್ವಾಮಿಯಾಗಬೇಕು. ಎಲೈ ಧರ್ಮಶ್ರೇಷ್ಠನೇ, ತಂದೆಯು ಮಗನನ್ನು ಕಾಪಾಡುವಂತೆ ನೀನು ನನ್ನನ್ನು ಈ ಸಂಕಟದಿಂದ ಕಾಪಾಡಬೇಕು" ಎಂದನು. ಶುನಃಶೇಪನ ಬಗ್ಗೆ ವಿಶ್ವಾಮಿತ್ರನ ಅಂತಃಕರಣ ಕರಗಿತು.

ಶುನಃಶೇಪನನ್ನು ಬದುಕಿಸಲು ನೆರವಾಗಿರೆಂದು ವಿಶ್ವಾಮಿತ್ರನು ತನ್ನ ಮಕ್ಕಳಿಗೆ ಹೇಳಿದನು. ಅವರು ಆತನ ಹೇಳಿಕೆಯನ್ನು ಅಲಕ್ಷ್ಯಸಿದ್ದಕ್ಕಾಗಿ ವಿಶ್ವಾಮಿತ್ರನು ಅವರಿಗೆ ಶಾಪವನ್ನಿತ್ತನು.

ವಿಶ್ವಾಮಿತ್ರನು ಸರ್ವದುಃಖನಾಶಕ ರಕ್ಷಾಮಂತ್ರದಿಂದ ಶುನಃಶೇಪನನ್ನು ರಕ್ಷಿಸಿದನು. ವಿಶ್ವಾಮಿತ್ರನು ಶುನಃಶೇಪನಿಗೆ ಈ ರೀತಿ ಹೇಳಿದನು : "ನೀನು ದರ್ಭೆಯ ಹಗ್ಗಗಳಿಂದ ಕಟ್ಟಲ್ಪಟ್ಟು, ಕೆಂಪು ಪುಷ್ಪಗಳಿಂದ ಹಾಗೂ ಕೆಂಪುಗಂಧದಿಂದ ಅಲಂಕರಿಸಲ್ಪಟ್ಟು ಯಜ್ಞದ ಯೂಪದ ಬಳಿಗೆ ತರಲಾದನಂತರ ಈ ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸು. ಅಂಬರೀಷನ ಯಜ್ಞದಲ್ಲಿ ಈ ಎರಡು ಮಂತ್ರದ ಸ್ತೋತ್ರಗಳನ್ನು ಹೇಳು. ಅಂದರೆ ನಿನ್ನ ಇಷ್ಟಾರ್ಥವು ಪೂರ್ತಿಗೊಳ್ಳುವುದು" ಎಂದನು. ಆ ರೀತಿ ಶುನಃಶೇಪನು ಇಂದ್ರ ಹಾಗೂ ವಿಷ್ಣು ಈ ದೇವತೆಗಳನ್ನು ಉತ್ಕೃಷ್ಟ ಮಂತ್ರಗಳಿಂದ ಸ್ತುತಿಸಿದನು.

ತತಃ ಪ್ರೀತಃ ಸಹಸ್ರಾಕ್ಷೋ ರಹಸ್ಯಸ್ತುತಿತೋಷಿತಃ ।
ದೀರ್ಘಮಾಯುಸ್ತದಾ ಪ್ರಾದುಚ್ಛುನಃಶೇಪಾಯ ವಾಸವಃ ॥ ೨೬ ॥

ಈ ವಿಧದ ರಹಸ್ಯಸ್ತುತಿಯಿಂದ ಇಂದ್ರನು ಪ್ರಸನ್ನನಾದನು. ಶುನಃಶೇಪನಿಗೆ ಸಂತೋಷದಿಂದ ದೀರ್ಘ ಆಯುಸ್ಸನ್ನು ಕೊಟ್ಟನು.

ಹೀಗೆ ಶುನಃಶೇಪನಿಗೆ ದೀರ್ಘ ಆಯುಸ್ಸು ದೊರೆತದ್ದು ಮಂತ್ರಪ್ರಭಾವದಿಂದಾಗಿದೆ. ಶುನಃಶೇಪನು ಇಂದ್ರನನ್ನು ಯಾಚಿಸಿರಲಿಲ್ಲ ; ವಿಶ್ವಾಮಿತ್ರನ ಬಳಿ ದೀರ್ಘಾಯುವನ್ನು ಬೇಡಿದ್ದನು. ಆದ್ದರಿಂದ ಇದು ಇಂದ್ರನ ವರವಾಗಿರದೇ ಆತನ ಆಶೀರ್ವಾದವೆಂದೆನ್ನುವುದು ಸೂಕ್ತವಾಗುತ್ತದೆ. ಈ ಆಶೀರ್ವಾದದ ಸ್ವರೂಪವು ಮಾತ್ರ ವರದಂತಾಗಿದೆ. ವಾಲ್ಮೀಕಿಯು ಸಹ 'ವರ' ಎಂಬ ಶಬ್ದವನ್ನು ಬಳಸಲಿಲ್ಲ.

## ೪. ಕಾಗೆಗೆ ದೊರೆತ ಶಿಕ್ಷೆ

ಸುಂದರಕಾಂಡ / ೩೮

ಲಂಕೆಗೆ ಹೋದ ಹನುಮಾನನು ನಿಜವಾಗಿಯೂ ಸೀತೆಯನ್ನು ಕಂಡುಬಂದನು ಎಂಬುದನ್ನು ಶ್ರೀರಾಮನಿಗೆ ಮನವರಿಕೆ ಮಾಡಿಕೊಡಲು ಏನಾದರೊಂದು ಚಿಹ್ನೆಯನ್ನು ಕೊಡಲು ಸೀತೆಯನ್ನು ವಿನಂತಿಸಿದನು. ಆಗ ಸೀತೆ ಒಂದು ಪ್ರಸಂಗದ ಕಥೆಯನ್ನು ಹೇಳಿದಳು. ಆ ಕಥೆಯನ್ನು ಶ್ರೀರಾಮನಿಗೆ ತಿಳಿಸಿದರೆ ಆತನಿಗೆ ನಿಶ್ಚಿತವಾಗಿ ಮನವರಿಕೆ ಆಗುವದೆಂದು ಸೀತೆಯು ವ್ಯಕ್ತಪಡಿಸಿದಳು.

ಶ್ರೀರಾಮ-ಲಕ್ಷ್ಮಣ-ಸೀತೆಯರು ಚಿತ್ರಕೂಟಪರ್ವತದ ಅಡಿಯಲ್ಲಿ ಮಂದಾಕಿನೀ ನದೀತೀರದ ಪ್ರದೇಶದಲ್ಲಿ ವಾಸವಿದ್ದರು. ಆಗ ಊಟವಾದಬಳಿಕ ಸೀತೆಯು ಮಿಕ್ಕ ಉಳಿದ ಮಾಂಸದ ತುಂಡುಗಳನ್ನು ಕಾಯುತ್ತ ಕುಳಿತಿದ್ದಳು. ಅವಳ ನಿಕಟದಲ್ಲಿಯೇ ಶ್ರೀರಾಮನಿದ್ದನು. ಪತಿಪತ್ನಿಯರಲ್ಲಿ ಮೃದುವಾಗಿ ಸರಸಸಲ್ಲಾಪ, ಶೃಂಗಾರಚೇಷ್ಟೆಗಳು ನಡೆದಿದ್ದವು. ಆಗ ಮಾಂಸದ ತುಂಡಿನ ಆಸೆಯಿಂದ ಒಂದು ಕಾಗೆಯು ಅಲ್ಲಿಗೆ ಬಂದಿತು. ಸೀತೆಯು ಒಂದು ಮಣ್ಣಿನ ಹೆಂಟೆಯಿಂದ ಹೊಡೆದು ಅದನ್ನು ಹಾರಿಸಲು ಯತ್ನಿಸಿದಳು. ಆದರೆ ಈ ಕಾಗೆಯು ಮತ್ತೆ ಅವಳ ಸಮೀಪ ಬರಹತ್ತಿತು. ಅವಳ ಮುಖವನ್ನು ತನ್ನ ಕೊಕ್ಕಿನಿಂದ ಕುಕ್ಕಿ, ಉಗುರುಗಳಿಂದ ಪರಚಿ ಸೀತೆಗೆ ನೋವನ್ನುಂಟುಮಾಡಿತು. ಸೀತೆಗೆ ಅತಿಯಾದ ಕೋಪ ಮೂಡಿತು. ಅದು ಇನ್ನಷ್ಟು ಉಪದ್ರವ ಕೊಟ್ಟು ಸೀತೆಯನ್ನು ಬೇಜಾರುಗೊಳಿಸಿತು. ಆಗ ಸೀತೆಯು ದಣಿದು ವಿಶ್ರಮಿಸಲೆಂದು ಶ್ರೀರಾಮನ ತೊಡೆಯ ಮೇಲೆ ಮಲಗಿದಳು. ಆಗ ಶ್ರೀರಾಮ ಮತ್ತು ಸೀತೆ ಇಬ್ಬರಿಗೂ ನಿದ್ದೆಯ ಜೊಂಪುಹತ್ತಿತು.'

ಆಗ—

ಸ ತತ್ರ ಪುನರೇವಾಥ ವಾಯಸಃ ಸಮುಪಾಗಮತ್ ।
ತತಃ ಸುಪ್ತಪ್ರಬುದ್ಧಾಂ ಮಾಂ ರಾಘವಾಂಕಾತ್ಸಮುತ್ಥಿತಾಮ್ ।
ವಾಯಸಃ ಸಹಸಾಗಮ್ಯ ವಿದದಾರ ಸ್ತನಾಂತರೇ ॥ ೨೨ ॥

ಆ ಕಾಗೆಯು 'ಪುನಃ ಅಲ್ಲಿಗೇ ಬಂದಿತು. ಸೀತೆಯು ಎಚ್ಚೆತ್ತು ಶ್ರೀರಾಮನ ತೊಡೆಯ' ಮೇಲಿನಿಂದ ಎದ್ದು ಬದಿಗೆ ಕುಳಿತಳು. ಆಗ ಕಾಗೆಯು ಇವಳತ್ತ ಬಂದು ಇವಳ ವಕ್ಷಃಸ್ಥಳದ ಭಾಗವನ್ನು ಪರಚಿತು.

ಪುನಃ ಪುನರಥೋತ್ಪತ್ಯ ವಿದದಾರ ಸ ಮಾಂ ಭೃಶಮ್ ॥ ೨೩ ॥

ಈ ಪ್ರಕಾರ ಪುನಃಪುನಃ ಆ ಕಾಗೆ ಹಾರಿಬಂದು ಸೀತೆಯ ವಕ್ಷಃಸ್ಥಳವನ್ನು ಪರಚುತ್ತಿತ್ತು. ಸೀತೆಯ ಎದೆಯ ಭಾಗದಿಂದ ಬಿದ್ದ ರಕ್ತದ ಹನಿಗಳ ಕಾರಣ ಶ್ರೀರಾಮನು ಎಚ್ಚರಗೊಂಡನು. ಸೀತೆಯ ಸ್ತನಗಳೆರಡಕ್ಕೂ ಆದ ಪರಚಿದ ಗಾಯಗಳನ್ನು ವೀಕ್ಷಿಸಿ ಶ್ರೀರಾಮನು ಸಿಡಿಮಿಡಿಗೊಂಡನು. ಆತನು ಸೀತೆಗೆ —

ಕೇನ ತೇ ನಾಗನಾಸೋರು ವಿಕ್ಷತಂ ವೈ ಸ್ತನಾಂತರಮ್ ।
ಕಃ ಕ್ರೀಡತಿ ಸ ರೋಷೇಣ ಪಂಚವಕ್ತ್ರೇಣ ಭೋಗಿನಾ ॥ ೨೭ ॥

"ಎಲ್ಲೆ ರಂಭೋರು, ಯಾರು ನಿನ್ನ ಸ್ತನಗಳ ಮಧ್ಯದಲ್ಲಿ ಪರಚಿದರು ? ಯಾರು ಪಂಚಮುಖಗಳಿದ್ದ ನಾಗನೊಡನೆ ಇಂಥ ಕುಚೇಷ್ಟೆಯ ಕ್ರೀಡೆಯನ್ನು ಮಾಡುತ್ತಿದ್ದಾರೆ ?" ಎಂದೆನ್ನುತ್ತಿರುವಂತೆ ಶ್ರೀರಾಮನ ದೃಷ್ಟಿಯು ಆ ಕಾಗೆಯತ್ತ ಹೋಯಿತು. ತಕ್ಷಣ ಅದು ಪೊದೆಯ ಮರೆಯಾಯಿತು.

ಪುತ್ರಃ ಕಿಲ ಶಕ್ರಸ್ಯ ವಾಯಸಃ ಪತತಾಂ ವರಃ । ೨೮

'ಪಕ್ಷಿಗಳಲ್ಲಿ ಚಾಣಾಕ್ಷವೆನಿಸಿದ ಆ ಕಾಗೆ ಎಂದರೆ ಇಂದ್ರನ ಮಗನಾಗಿದ್ದನು.'

ಕ್ರೋಧಗೊಂಡ ಶ್ರೀರಾಮನು ಬ್ರಹ್ಮಾಸ್ತ್ರದಿಂದ ಮಂತ್ರಿಸಿದ ಒಂದು ದರ್ಭೆಯನ್ನು ಆ ಕಾಗೆಯ ಮೇಲೆ ಬಿಟ್ಟನು. ಆಗ ಕಾಗೆ ಪೊದೆಯಾಚೆಯಿಂದ ಹೊರಗೆ ಬಂದು ಆಕಾಶದತ್ತ ಹಾರಿತು. ಆ ಮಂತ್ರಿಸಿದ ದರ್ಭೆಯು ಕಾಗೆ ಹೋದತ್ತ ಅದನ್ನು ಬೆನ್ನಟ್ಟಿತು. ಈ ಕಾಗೆಯು ಮೂರೂ ಲೋಕಗಳನ್ನು ಸುತ್ತಿತು. ಅದಕ್ಕೆ ಎಲ್ಲಿಯೂ ಆಸರೆ ಸಿಗಲಿಲ್ಲ. ಅದು ಹೋದಲ್ಲೆಲ್ಲ ದರ್ಭೆಯು ಅದನ್ನು ಬೆನ್ನಟ್ಟಿತು. ಕೊನೆಗೆ ಆ ಕಾಗೆ ಮರಳಿ ಬಂದು ಶ್ರೀರಾಮನಿಗೆ ಶರಣಾಯಿತು. ತನ್ನ ಪ್ರಾಣವನ್ನು ಉಳಿಸು ಎಂದು ಅವನನ್ನು ಪ್ರಾರ್ಥಿಸಿತು. ಶರಣಾಗತರಿಗೆ ಅಭಯವನ್ನೀಯುವದು ಶ್ರೀರಾಮನ ತತ್ತ್ವವಾದ್ದರಿಂದ ಹಾಗೂ ಅವನಿಗೆ ಈ ಕಾಗೆಯ ಬಗ್ಗೆ ದಯೆ ಎನಿಸಿದ್ದರಿಂದ ಶ್ರೀರಾಮನು ಅದಕ್ಕೆ —

ಮೋಘಮಸ್ತ್ರಂ ನ ಶಕ್ಯಂ ತು ಬ್ರಾಹ್ಮಂ ಕರ್ತುಂ ತದುಚ್ಯತಾಮ್ ॥ ೩೪ ॥

"ಬ್ರಹ್ಮಾಸ್ತ್ರವು ಎಂದಿಗೂ ವ್ಯರ್ಥವಾಗಲಾರದು ; ಅಂದಬಳಿಕ ಈ ಅಸ್ತ್ರದಿಂದ ನಿನ್ನ ಯಾವ ಭಾಗವು ನಾಶವಾಗಲಿ ಎಂಬುದನ್ನು, ಆ ಅವಯವದ ಆಸೆಯನ್ನು ಬಿಟ್ಟು, ನೀನು ಹೇಳು ! ಅಂದರೆ ಈ ಅಸ್ತ್ರವೂ ನಿಜವಾಗುವುದು ; ನಿನ್ನ ಪ್ರಾಣವೂ ಉಳಿಯವದು"—ಎಂದು ನುಡಿದನು. ಆಗ ಆ ಕಾಗೆಯು, "ಈ ಅಸ್ತ್ರವನ್ನು ನನ್ನ ಒಂದು ಕಣ್ಣಿನ ಮೇಲೆ ಸಾರ್ಥಕಗೊಳಿಸು" ಎಂದಿತು. ಆಗಿನಿಂದ ಕಾಗೆಯು ಒಂದು ಕಣ್ಣಿನ ಒಕ್ಕಣ್ಣನಾಯಿತು.

ಈ ಸಂದರ್ಭವು ಶಾಪದಂತೆನಿಸಿದರೂ ಇದು ಶಾಪವಲ್ಲ. ಶ್ರೀರಾಮನು ಕಾಗೆಗೆ ಶಾಪವನ್ನು ಕೊಟ್ಟಿರದೇ ಅದರ ಅಧಿಕಪ್ರಸಂಗತನಕ್ಕಾಗಿ ಅದಕ್ಕೆ ಶಿಕ್ಷೆವಿಧಿಸಿದ್ದಾನೆ. ಶ್ರೀರಾಮನಲ್ಲಿ ಶಾಪಕೊಡುವ ಸಾಮರ್ಥ್ಯವಿದ್ದರೂ ಆತನು ಯಾರಿಗೂ ಶಾಪವನ್ನು ಕೊಟ್ಟಿರುವುದಿಲ್ಲ. ಅದೇ ರೀತಿ ಆತನಿಗೆ ಕೊಡಬಂದ ವರಗಳನ್ನು ಸಹ ವಿನಯಪೂರ್ವಕವಾಗಿ ನಿರಾಕರಿಸಿದ್ದಾನೆ. ಶ್ರೀರಾಮನು ಸ್ವೀಕರಿಸಿದ ವರಗಳು ಸ್ವಂತದ ಲಾಭಕ್ಕಾಗಿರಲಿಲ್ಲ. ಅವುಗಳನ್ನು ಸಮಾಜಕಾರ್ಯಕ್ಕಾಗಿ ಬಳಸಿಕೊಂಡಿದ್ದಾನೆ. ಶ್ರೀರಾಮನು ಪ್ರಸ್ರವಣ ಪರ್ವತಕ್ಕೂ ಮತ್ತು ನದಿಗೂ ಉದ್ದೇಶಿಸಿ ಆಡಿದ ಶಾಪಸಮವಾದ ನುಡಿಗಳು, ಒಂದು ಶರತ್ತನ್ನು ಇಟ್ಟು ಆಡಿದವುಗಳು. ಆಗ ಈತನು ಹಾಕಿದ ಶರತ್ತಿನ ಪಾಲನೆಯಾದ್ದರಿಂದ ಈ ಶಾಪವನ್ನು ಕೊಡುವ ಸಂದರ್ಭವೇ ಒದಗಲಿಲ್ಲ. ಕಾಗೆಯು ಮನುಷ್ಯರ ಭಾಷೆಯಲ್ಲಿ ಮಾತನಾಡುತ್ತಿತ್ತು ಎಂಬುದು ಸೂಚಕವಿದ್ದು ನಿಜಸ್ವರೂಪ ಬೇರೆಯೇ ಇರಬಹುದೆಂಬುದು ಸ್ಪಷ್ಟವಾಗುತ್ತದೆ.

ವಾಲ್ಮೀಕಿಯು 'ಶಾಪ'ವೆಂಬ ಶಬ್ದವನ್ನು ಬಳಸಿಲ್ಲ. ಮರಾಠಿ ಭಾಷೆಯ ಅನುವಾದದಲ್ಲಿಯೂ ಶಾಪವೆಂಬ ಶಬ್ದವಿರದೇ 'ಶಿಕ್ಷೆ' ಎಂಬ ಶಬ್ದವನ್ನು ಬಳಸಲಾಗಿದೆ.*

---

* ಈ ಕಥೆಯು ಅಯೋಧ್ಯಾಕಾಂಡ / ೯೫ರ ನಂತರ ಪ್ರಕ್ಷಿಪ್ತ ಸರ್ಗದಲ್ಲಿಯೂ ಬಂದಿದೆ. ಪ್ರಸ್ತುತ ಸರ್ಗದ ಭಾಗವು ಗೀತಾ ಪ್ರೆಸ್, ಗೋರಖಪುರ ಪ್ರತಿಯಲ್ಲಿಲ್ಲ. ಮರಾಠಿ ಭಾಷೆಯ ಅನುವಾದದಲ್ಲಿ ಈ ಸರ್ಗಕ್ಕೆ 'ವನಕ್ರೀಡೆ' ಎಂಬ ಶೀರ್ಷಿಕೆಯನ್ನು ಕೊಟ್ಟಿದ್ದಾರೆ. ಇದರಲ್ಲಿ ಆ ಕಾಗೆಯು ಸೀತೆಯ ಕೊರಳ ಹಾರದವರೆಗೆ ಅತಿರೇಕಮಾಡಿದ ವರ್ಣನೆ ಇದೆ. ಶ್ರೀರಾಮನು ಈ ಕಾಗೆಗೆ ಶಿಕ್ಷೆವಿಧಿಸಲು ಐಷಿಕಾಸ್ತ್ರದಿಂದ ಮಂತ್ರಿಸಿದ ಒಂದು ಕಡ್ಡಿಯನ್ನು ಬಾಣದಂತೆ ಈ ಕಾಗೆಯ ಮೇಲೆ ಬಿಟ್ಟನೆಂಬ ವರ್ಣನೆ ಇದೆ. ಈ ಕಾಗೆಯ ಬಗ್ಗೆ ಇನ್ನಿತರ ಮಾಹಿತಿ ಬಂದಿಲ್ಲ

**೫. ಉಮಾ, ರಂಭಾ ಮತ್ತು ವರುಣಕನ್ಯೆಯರ ಶಾಪ** **ಯುದ್ಧಕಾಂಡ / ೬೦**

ಶ್ರೀರಾಮನ ಬಾಣಗಳಿಂದ ಭಯಭೀತನಾಗಿ ಪರಾಜಯದಿಂದ ನಿಃಶಕ್ತನಾದ ರಾವಣನು ಇತರ ರಾಕ್ಷಸರ ಎದುರಿನಲ್ಲಿ ತನ್ನ ಮನದ ಅಳಲನ್ನು ತೋಡಿಕೊಳ್ಳುತ್ತಿದ್ದಾಗ "ಈ ಮಾನವನು ನನ್ನಂತಹ ಮಹೇಂದ್ರನಿಗೆ ಸಮನಾದವನನ್ನು ಪರಾಭವಗೊಳಿಸಿದನೆಂದಬಳಿಕ ಪರಿಶ್ರಮದಿಂದ ಪಡೆದ ಇಂದಿನವರೆಗಿನ ನನ್ನ ತಪೋಬಲವು ನಿರುಪಾಲಾಯಿತು. ಬ್ರಹ್ಮದೇವನಲ್ಲಿ ವರವನ್ನು ಬೇಡಿಕೊಳ್ಳುವಾಗ ನಾನು ಮಾನವನನ್ನು ಗಣಿಸಿರಲಿಲ್ಲ. ಆಗ ಬ್ರಹ್ಮದೇವನು 'ಮಾನವನಿಂದ ನಿನಗೆ ಭಯವಿದೆ ಎಂಬುದನ್ನು ಜ್ಞಾಪಕದಲ್ಲಿಟ್ಟುಕೋ !' ಎಂದಿದ್ದ ಸಂಗತಿ ಈಗ ನನ್ನ ಸ್ಮರಣೆಗೆ ಬರುತ್ತಿದೆ" ಎಂದನು. ಇದಲ್ಲದೇ ಅನರಣ್ಯ, ವೇದವತಿ ಇವರ ಶಾಪಗಳ ಬಗ್ಗೆ ರಾವಣನು —

> ಉಮಾನಂದೀಶ್ವರಶ್ಚಾಪಿ ರಂಭಾ ವರುಣಕನ್ಯಕಾ ॥ ೧೧ ॥
> ಯಥೋಕ್ತಾಸ್ತನ್ಮಯಾ ಪ್ರಾಪ್ತಂ ನ ಮಿಥ್ಯಾ ಋಷಿಭಾಷಿತಮ್ ॥ ೧೨ ॥

ಮುಂದೆ ನುಡಿದ್ದೇನೆಂದರೆ "ಉಮಾ, ನಂದೀಶ್ವರ, ರಂಭಾ ಮತ್ತು ವರುಣಕನ್ಯೆಯರು ನುಡಿದಂತೆಯೇ (ಶಾಪ ಕೊಟ್ಟಂತೆ) ನಡೆದಿದೆ. ತಪಸ್ವಿಗಳ ಮಾತು ಎಂದಿಗೂ ಸುಳ್ಳಾಗಲಾರದು" ಎಂದು.

ನಂದೀಶ್ವರ ಕೊಟ್ಟ ಶಾಪದ ಬಗ್ಗೆ ಸವಿಸ್ತರವಾಗಿ ಹೇಳಿಯಾಗಿದೆ (ಶಾಪ ಕ್ರಮಸಂಖ್ಯೆ ೪೨, ನಂದೀಶ್ವರ > ರಾವಣ ಪರಿಶೀಲಿಸಿರಿ). ಇಲ್ಲಿ ನಂದೀಶ್ವರನ ಶಾಪದ ಜೊತೆ ಉಮೆ, ರಂಭೆ ಮತ್ತು ವರುಣಕನ್ಯೆಯರ ಶಾಪಗಳ ಉಲ್ಲೇಖವನ್ನು ಮಾಡಿದ್ದರೂ ಅವರು ರಾವಣನಿಗೆ ಯಾವ ಕಾರಣಕ್ಕಾಗಿ ಯಾವ ಶಾಪಗಳನ್ನು ಕೊಟ್ಟರೆಂಬುದರ ಬಗ್ಗೆ ವಾಲ್ಮೀಕಿರಾಮಾಯಣದಲ್ಲಿ ಹೆಚ್ಚು ಮಾಹಿತಿಯು ದೊರಕುವುದಿಲ್ಲ. ಹೀಗಿರುವುದರಿಂದ ಈ ಶಾಪಗಳ ಬಗ್ಗೆ ಸ್ವತಂತ್ರವಾಗಿ ವಿಚಾರ ಮಾಡಿಲ್ಲ. ರಾವಣನು ರಂಭೆಯನ್ನು ಬಲಾತ್ಕರಿಸಿದ ಕಾರಣ ಕೋಪಗೊಂಡ ನಲಕೂಬರನು ರಾವಣನಿಗೆ ಕೊಟ್ಟ ಶಾಪವನ್ನು ರಂಭೆಯ ಶಾಪವೆಂದು ಪರಿಗಣಿಸಿದರೆ ಅದರ ಬಗ್ಗೆ ಮೊದಲು ವಿವೇಚಿಸಲಾಗಿದೆ. (ಶಾಪ ಕ್ರಮಸಂಖ್ಯೆ ೪೬, ನಲಕೂಬರ > ರಾವಣ ಪರಿಶೀಲಿಸಿರಿ.) ರಂಭೆಯು ಬೇರೆ ಶಾಪವನ್ನು ನುಡಿದ ಬಗ್ಗೆಯಾಗಲೀ ಅದೇ ರೀತಿ ಉಮೆ ಮತ್ತು ವರುಣಕನ್ಯೆಯರು ಶಾಪಗಳನ್ನು ಉಚ್ಚರಿಸಿದ ಉಲ್ಲೇಖವಾಗಲೀ ಬೇರೆ ಎಲ್ಲಿಯೂ ಬಂದಿರುವದಿಲ್ಲ.

**೬. ಶಂಬೂಕನು ವರ ಕೇಳಿದುದು** **ಉತ್ತರಕಾಂಡ / ೭೫-೭೬**

ಶ್ರೀರಾಮನು ತನ್ನ ರಾಜ್ಯದ ಪರಿಸ್ಥಿತಿಯ ಬಗೆಗೆ ನಾರದಮುನಿಯನ್ನು ಕೇಳಿದನು. ಆಗ ಮುನಿಯು ಆ ರಾಜ್ಯದಲ್ಲಿ ಒಬ್ಬ ಬ್ರಾಹ್ಮಣನ ಮಗನು ಆಕಸ್ಮಿಕದಿಂದ ತೀರಿಕೊಂಡದ್ದನ್ನೂ, ಅದರ ಕಾರಣವನ್ನೂ ಅವನಿಗೆ ಹೇಳುತ್ತಾನೆ.

ಒಮ್ಮೆ ಧಾರ್ಮಿಕಪ್ರವೃತ್ತಿಯ ಬ್ರಾಹ್ಮಣನೊಬ್ಬನು ಅಕಸ್ಮಾತ್ತಾಗಿ ತೀರಿಕೊಂಡ ತನ್ನ ಮಗನ ಕಳೇಬರದೊಂದಿಗೆ ಶ್ರೀರಾಮನಲ್ಲಿಗೆ ಬರುತ್ತಾನೆ. ಅವನಾಗಲಿ, ಅವನ ಮಗನಾಗಲಿ ಯಾವುದೇ ಅಪರಾಧವನ್ನು ಮಾಡಿರಲಿಲ್ಲ. ಎಂದಿಗೂ ಸುಳ್ಳಾಡಿರಲಿಲ್ಲ. ಹಿಂಸೆಯನ್ನೂ ಮಾಡಿರಲಿಲ್ಲ. ಹೀಗಿದ್ದೂ ಈ ಸಂಕಟ ಬಂದೆರಗಿದ ಕಾರಣ ಆ ಬ್ರಾಹ್ಮಣ ಶೋಕಪೀಡಿತನಾಗಿದ್ದನು. ರಾಜನಿಂದ ನಡೆಯಬಾರದ್ದೇನೋ ನಡೆದುದರಿಂದಲೇ ರಾಜ್ಯದಲ್ಲಿ ಈ ಬಗೆಯ ಅನರ್ಥ ಉಂಟಾಗುತ್ತಿರಬಹುದೆಂಬ ಶಂಕೆ ಅವನದಾಗಿತ್ತು. ಹಾಗೆಂದು ಅವನು ಆ ಮಾತನ್ನು ಶ್ರೀರಾಮನೆದುರು ನೇರವಾಗಿ ಆಡಿ ತೋರಿಸಿದನು. ತನ್ನ ಮಗ ಜೀವತಳೆಯುವಂತಾಗಲಿ ಎಂದನು. ಹಾಗಾಗದಿದ್ದರೆ ತಾನು, ತನ್ನ ಮಡದಿ ಅನಾಥರಂತೆ ಅರಮನೆಯ ಹೆಬ್ಬಾಗಿಲೆದುರು ಪ್ರಾಣ ತೆರುವುದಾಗಿ ಹೇಳಿದನು. ಬ್ರಾಹ್ಮಣನ ಮಾತು ಕೇಳಿ ಶ್ರೀರಾಮನು ತುಂಬ ಕಳವಳವಕ್ಕೀಡಾದನು. ವಸಿಷ್ಠ ಮೊದಲಾದವರ ಆಸ್ಥಾನವನ್ನು ಕರೆದು ಆ ಬಾಲಕನ ಸಾವಿಗೆ ಕಾರಣವೇನಿದ್ದೀತು ? ಎಂದು ಕೇಳಿದನು. ಅಲ್ಲದೆ ಈ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಹೇಳುವಂತೆ ಅವರನ್ನು ಕೇಳಿಕೊಂಡನು. ಆಗ ಋಷಿಗಳೆದುರು ನಾರದ ಹೀಗೆಂದನು ; "ತಪಸ್ಸು ಶೂದ್ರನಾದವನಿಗೆ ತೀರ ಅಧರ್ಮವೆನ್ನಿಸಿದೆ. ಆದರೆ ಎಲೈ ರಾಜನೇ, ನಿನ್ನ

ರಾಜ್ಯದಲ್ಲಿ ದುರ್ಬುದ್ಧಿಯುಳ್ಳ ಒಬ್ಬ ಶೂದ್ರ ಮಹಾತಪಸ್ವಿಯೆನ್ನಿಸಿ ತಪಸ್ಸನ್ನಾಚರಿಸಹತ್ತಿದ್ದಾನೆ. ಹೀಗಾಗಿ ಈ ಬಾಲಮೃತ್ಯು. ಒಬ್ಬ ರಾಜನಿದ್ದ ದೇಶದಲ್ಲಿಯಾಗಲಿ ಇಲ್ಲವೆ ಪಟ್ಟಣದಲ್ಲಾಗಲಿ ಅವಿಚಾರಿಯಾದವನೊಬ್ಬನು ಪಾತಕನು ಇಲ್ಲವೆ ಅಕರ್ಮಗಳನ್ನು ಎಸಗಿದವನಾದರೆ ಅದು ಅವನ ನಾಶಕ್ಕೆ ಕಾರಣವಾಗುವುದಲ್ಲದೆ ಆ ರಾಜನೂ ನರಕಕ್ಕೆ ಹೋಗುತ್ತಾನೆ. ಧರ್ಮವನ್ನು ಪರಿಪಾಲಿಸುವ ರಾಜನಿಗೆ ಬೇರೆಯವನು ಕೈಕೊಂಡ ವೇದಾಧ್ಯಯನ, ತಪಸ್ಸು ಹಾಗೂ ಸದಾಚರಣೆಗಳಲ್ಲೊಂದು ಪಾಲು ದೊರಕುತ್ತದೆ. ರಾಜ ತನ್ನ ಪ್ರಜೆಗಳ ಫಲಗಳ ಆರರದಲ್ಲೊಂದು ಪಾಲಿಗೆ ಹಕ್ಕುದಾರ. ಹೀಗಾಗಿ ಪ್ರಜಾಪರಿಪಾಲನೆ ಅವನ ಕರ್ತವ್ಯವೆನ್ನಿಸಿದೆ. ಎಲೈ ಪುರುಷಶ್ರೇಷ್ಠನೇ, ನೀನು ವಿಚಾರಿಸಿದೆಯಾದರೆ ನಿನ್ನ ರಾಜ್ಯದಲ್ಲಿ ನಡೆದ ದುಷ್ಕರ್ಮ ತಿಳಿದುಬಂದೀತು. ಅದನ್ನು ನಿವಾರಿಸು. ಅಂದರೆ ಧರ್ಮ ಹಾಗೂ ಮನುಷ್ಯರ ಆಯುಸ್ಸು ಬೆಳೆದು ಈ ಬಾಲಕನೂ ಜೀವ ತಳೆಯುವನು." ಅವನ ಈ ಮಾತು ಕೇಳಿ ಶ್ರೀರಾಮನು ಲಕ್ಷ್ಮಣನಿಗೆ ಆ ಬಾಲಕನ ಮೃತದೇಹವನ್ನು ಒಂದು ಕುಂಡದಲ್ಲಿ ಜೋಪಾನವಾಗಿ ಇರಿಸಲು ಹೇಳಿದನು. ಆ ದೇಹ ನಾಶಹೊಂದದಂತೆ ನೋಡಿಕೊಳ್ಳಲು ಹೇಳಿದನು. ತಾನು ಶಸ್ತ್ರಸಜ್ಜಿತನಾಗಿ ಪುಷ್ಪಕ ವಿಮಾನವನ್ನೇರಿ ತನ್ನ ರಾಜ್ಯದಲ್ಲಿ ಸಾಗಿದ ದುಷ್ಕೃತ್ಯವನ್ನು ಕಂಡುಹಿಡಿಯಲೆಂದು ಹೊರಟನು. ಪೂರ್ವ, ಪಶ್ಚಿಮ ಹಾಗೂ ಉತ್ತರ ದಿಕ್ಕುಗಳಲ್ಲಿ ನಿರೀಕ್ಷಣೆಯನ್ನು ಕೈಕೊಂಡನು. ಅಲ್ಲೆಲ್ಲ ತನ್ನ ಪ್ರಜೆಗಳು ಸಂತೋಷದಿಂದಿದ್ದು ಸದಾಚರಣೆಗಳಾಗಿರುವದನ್ನು ಕಂಡುಕೊಂಡನು. ಅವನು ದಕ್ಷಿಣದತ್ತ ಹೊರಟನು. ಅಲ್ಲೊಂದು ಸರೋವರ ಕಂಡಿತು. ದಂಡೆಯ ಮೇಲೊಂದು ಮರವಿತ್ತು. ಅದರ ಒಂದು ಟೊಂಗೆಯಿಂದ ತಪಸ್ವಿಯೊಬ್ಬನು ತಲೆಕೆಳಗಾಗಿ ನೇತಾಡುತ್ತಿರುವುದು ಕಂಡಿತು. ಶ್ರೀರಾಮನು ಅವನ ಬಳಿಗೆ ಹೋಗಿ ವಿಚಾರಿಸಿದನು. "ನೀನು ಹುಟ್ಟಿದುದು ಯಾವ ಯೋನಿಯಲ್ಲಿ ? ಈ ತಪಸ್ಸನ್ನು ಕೈಕೊಂಡಿರುವುದೇಕೆ ? ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ನೀನಾರು ? ನಿಜ ಹೇಳು" ಎಂದು ಕೋರಿದನು.

> ಕೋಽರ್ಥೋ ಮನೀಷಿತಸ್ತುಭ್ಯಂ ಸ್ವರ್ಗಲಾಭೋಽಪರೋಽಥವಾ ।
> ವರಾಶ್ರಯೋ ಯದರ್ಥಂ ತ್ವಂ ತಪಸ್ಯನ್ಯೈಃ ಸುದುಶ್ಚರಮ್ ॥ ೭೫ - ೧೭

"ಬೇರೆಯವನ ಕೈಲಾಗದಂತಹ ಅಸಾಧ್ಯವೆನಿಸಿದ ತಪಸ್ಸನ್ನು ಆಚರಿಸುತ್ತಿರುವೆ ಎಂದಬಳಿಕ ನಿನ್ನ ಮನಸ್ಸಿನಲ್ಲಿ ಸ್ವರ್ಗವನ್ನು ಪಡೆಯಬೇಕೆಂಬ ಬಯಕೆಯೋ ಇನ್ನಾವುದೋ ಇದ್ದಿರಲು ಸಾಕು. ಅದೇನು ?" ಎಂಬುದಾಗಿ ಶ್ರೀರಾಮನು ಅವನನ್ನು ಖಡಾಖಂಡಿತವಾಗಿ ಕೇಳಿದನು. ಆಗ ಆ ತಪಸ್ವಿ ಹೀಗೆಂದನು —

> ಶೂದ್ರಯೋನ್ಯಾಂ ಪ್ರಜಾತೋಽಸ್ಮಿ ತಪ ಉಗ್ರಂ ಸಮಾಸ್ಥಿತಃ ।
> ದೇವತ್ವ ಪ್ರಾರ್ಥಯೇ ರಾಮ ಸಶರೀರೋ ಮಹಾಯಶಃ ॥ ೭೬ - ೨
> ನ ಮಿಥ್ಯಾಹಂ ವದೇ ರಾಮ ದೇವಲೋಕಜಿಗೀಷಯಾ ।
> ಶೂದ್ರಂ ಮಾ ವಿದ್ಧಿ ಕಾಕುತ್ಸ್ಥ ಶಂಬೂಕಂ ನಾಮ ನಾಮತಃ ॥ ೭೬ - ೩

"ನಾನು ಶೂದ್ರಯೋನಿಯಲ್ಲಿ ಹುಟ್ಟಿದವನು. ತಪಸ್ಸನ್ನು ಕೈಕೊಂಡಿದ್ದೇನೆ. ಈ ದೇಹದೊಂದಿಗೇನೆ ದೇವತ್ವವನ್ನು ಪಡೆವ ಬಯಕೆ ನನ್ನದು. ನಾನು ಸುಳ್ಳಾಡುವವನಲ್ಲ. ದೇವಲೋಕವನ್ನು ಪಡೆಯಲೆಂದೇ ತಪಸ್ಸನ್ನು ಕೈಕೊಂಡಿದ್ದೇನೆ. ನಾನು ಶೂದ್ರನು. ಶಂಬೂಕನೆಂದು ಹೆಸರಾದವನು."

ಶ್ರೀರಾಮನು ತನ್ನ ಕೈಯಲ್ಲಿ ಹಿಡಿದ ಖಡ್ಗದಿಂದ ಶಂಬೂಕನ ತಲೆಯನ್ನು ಹಾರಿಸಿಬಿಟ್ಟನು. ಅದೇ ಕ್ಷಣಕ್ಕೆ ಇತ್ತ ಆ ಮೃತಬಾಲಕ ಜೀವತಳೆದಿದ್ದನು.

ಶಂಬೂಕನೇನೋ ಒಂದು ವಿಶಿಷ್ಟವಾದ ಗುರಿಯನ್ನಿರಿಸಿಕೊಂಡು ತಪಸ್ಸನ್ನು ಆಚರಿಸಿದನು. ವರವನ್ನೂ ಕೇಳಿದನು. ಆದರೂ ಅವನಿಗೆ ವರ ಮಾತ್ರ ದೊರಕಲಿಲ್ಲ. ಬದಲು ಅವನ ಕೊಲೆ ನಡೆಯಿತು.

ದೊರಕದಿದ್ದ ಯಾಚಿತ ವರ.

### ಉತ್ತರಕಾಂಡ / ೭೬

ರಾಮರಾಜ್ಯದಲ್ಲಿ ಪ್ರಜೆಗಳೆಲ್ಲ ನೆಮ್ಮದಿಯಿಂದ ಬಾಳುತ್ತಿದ್ದರು. ಎಲ್ಲರಿಗೂ ಸರಿಯಾದ ನ್ಯಾಯ ದೊರಕುತ್ತಲಿತ್ತು. ಒಂದು ಸಲ ಒಬ್ಬ ಮುಪ್ಪಿನ ಬ್ರಾಹ್ಮಣ ತನ್ನ ಹದಿನಾಲ್ಕು ವರ್ಷ ವಯಸ್ಸಿನ ಮಗನ

ಹೆಣವನ್ನು ತೆಗೆದುಕೊಂಡು ಅರಮನೆಯ ಬಾಗಿಲಿಗೆ ಬಂದನು. ಅವನು ತುಂಬ ದುಃಖದಿಂದ ಬಳಲಿದ್ದನು. ಅವನ ವಿಲಾಪವನ್ನು ಕೇಳಿ ಕರುಳು ಕಿತ್ತುಬರುತ್ತಿತ್ತು. ಆ ಬ್ರಾಹ್ಮಣ ಅದೆಂದಿಗೂ ಹಿಂಸೆಗೆ ಎಳಸಿದವನಲ್ಲ, ಸುಳ್ಳಾಡಿದವನೂ ಅಲ್ಲ. ಅದಾರನ್ನೂ ಪೀಡಿಸಿದವನೂ ಅಲ್ಲ. ಹೀಗೆ ತನ್ನ ಮಗ ಈಗ ಎಳೆಯ ವಯಸ್ಸಿನಲ್ಲೇ ಸಾವಿಗೀಡಾದುದು ಅವನನ್ನು ನಿಬ್ಬೆರಗಿಗೆ ಈಡುಮಾಡಿತ್ತು. ಇನ್ನಾರದೋ ಪಾತಕದಿಂದಾಗಿ ಹೀಗಾಗಿರಲು ಸಾಕೆಂದು ಅವನು ಬಗೆದಿದ್ದನು. ಶ್ರೀರಾಮನ ರಾಜ್ಯದಲ್ಲಿ ಹೀಗಾಗಬೇಕೆಂದರೆ ರಾಜನ ಕೈಯಿಂದಲೇ ಅದಾವುದೋ ಪಾತಕ ನಡೆದಿದೆ ಎಂದು ಅವನ ಭಾವನೆಯಾಯಿತು. ಹೀಗಾಗಿ ಅವನು ತನ್ನ ಮಗನನ್ನು ಜೀವಂತಗೊಳಿಸವಂತೆ ಶ್ರೀರಾಮನನ್ನು ಬೇಡಿಕೊಂಡನು. ಅದಾಗದಿದ್ದರೆ ತಪ್ಪಲಿಯಂತೆ ತಾನು ಅರಮನೆಯ ಬಾಗಿಲಲ್ಲೇ ಜೀವ ತೆರುವುದಾಗಿ ತನ್ನ ನಿರ್ಧಾರವನ್ನು ಸಾರಿದನು. ಬ್ರಾಹ್ಮಣನ ಮಾತು ಕೇಳಿ ಶ್ರೀರಾಮ ತುಂಬ ದುಃಖಕ್ಕೀಡಾದನು. ಅವನು ವಸಿಷ್ಠರನ್ನೊಡಗೂಡಿ ಮಾರ್ಕಂಡೇಯ, ಮೌದ್ಗಲ್ಯ, ವಾಮದೇವಾದಿ ಎಂಟು ಜನ ಬ್ರಾಹ್ಮಣರನ್ನು ಕರೆಕಳುಹಿ ಬಾಲಕನ ಸಾವಿನ ಕಾರಣವನ್ನು ಕೇಳಿದನು. ಆಗ ನಾರದನು. "ನಿನ್ನ ರಾಜ್ಯದಲ್ಲಿ ಒಬ್ಬ ಶೂದ್ರ ಅಧಿಕಾರವಿಲ್ಲದೆಯೇ ತಪಸ್ಸಿಗೆ ಕುಳಿತಿರುವ"ನೆಂಬ ಕಾರಣವನ್ನು ಹೇಳಿದನು. ಶಂಬೂಕನೆಂಬ ಶೂದ್ರ ತಪವನ್ನಾಚರಿಸುತ್ತಿರುವುದನ್ನರಿತ ಶ್ರೀರಾಮ ತಕ್ಷಣ ತನ್ನ ಖಡ್ಗದಿಂದ ಅವನ ತಲೆಯನ್ನು ಹಾರಿಸಿಬಿಟ್ಟನು. ದೇವದೇವತೆಗಳೆಲ್ಲ ಶ್ರೀರಾಮನ ಮೇಲೆ ಹೂಗಳನ್ನು ಮಳೆಗರೆದರಲ್ಲದೆ ಪ್ರಸನ್ನರಾಗಿ ಹೀಗೆಂದರು —

ಸುರಕಾರ್ಯಮಿದಂ ದೇವ ಸುಕೃತಂ ತೇ ಮಹಾಮತೇ ॥ ೭ ॥
ಗೃಹಾಣ ಚ ವರಂ ಸೌಮ್ಯ ಯಂ ತ್ವಮಿಚ್ಛಸ್ಯರಿಂದಮ ।
ಸ್ವರ್ಗಭಾಜ ನಹಿ ಶೂದ್ರೋಽಯಂ ತ್ವತ್ಕೃತೇ ರಘುನಂದನ ॥ ೮ ॥

"ಎಲೈ ಮಹಾಮತಿಯಾದ ರಾಜನೇ, ನೀನು ಈ ದೇವಕಾರ್ಯವನ್ನು ಚೆನ್ನಾಗಿಯೇ ನೆರವೇರಿಸಿರುವೆ. ಹೀಗಾಗಿ ಎಲೈ ರಘುನಂದನನೇ, ಸ್ವರ್ಗಪ್ರಾಪ್ತಿಗಾಗಿ ಅಯೋಗ್ಯನೆನ್ನಿಸಿದ ಈ ಶೂದ್ರ ನಿನ್ನಿಂದಾಗಿ ಸ್ವರ್ಗಕ್ಕೆ ಹೋಗುವುದು ತಪ್ಪಿತು. ಆದುದರಿಂದ ಎಲೈ ಶತ್ರುದಮನನೇ, ನಿನಗೆ ಬೇಕೆನ್ನಿಸಿದ ವರವನ್ನು ಕೇಳಿಕೋ."

ಶ್ರೀರಾಮನು ವಿನಯದಿಂದ ಕೈಜೋಡಿಸಿ ಇಂದ್ರನಿಗೆ ಹೀಗೆಂದನು —

ಯದಿ ದೇವಾಃ ಪ್ರಸನ್ನಾ ಮೇ ದ್ವಿಜಪುತ್ರಃ ಸ ಜೀವತು ।
ದಿಶಂತು ವರಮುತಂ ಮೇ ಈಪ್ಸಿತಂ ಪರಮಂ ಮಮ ॥ ೧೦ ॥
ಮಮಾಪಚಾರಾದ್ಬಾಲೋಽಸೌ ಬ್ರಾಹ್ಮಣಸ್ಯೈಕಪುತ್ರಕಃ ।
ಅಪ್ರಾಪ್ತಕಾಲಃ ಕಾಲೇನ ನೀತೋ ವೈವಸ್ವತಕ್ಷಯಮ್ ॥ ೧೧ ॥
ತಂ ಜೀವಯತ ಭದ್ರಂ ವೋ ನಾನೃತಂ ಕರ್ತುಮರ್ಹಥ ।
ದ್ವಿಜಸ್ಯ ಸಂಶ್ರುತೋಽರ್ಥೋ ಮೇ ಜೀವಯಿಷ್ಯಾಮಿ ತೇ ಸುತಮ್ ॥ ೧೨ ॥

"ದೇವತೆಗಳು ನನ್ನ ಮೇಲೆ ಪ್ರಸನ್ನರಾಗಿದ್ದರೆ ಆ ಬ್ರಾಹ್ಮಣನ ಮಗು ಜೀವಂತವಾಗಲಿ. ದೇವತೆಗಳು ನಿನಗೆ ತೀರ ಇಷ್ಟವಾದ ಈ ವರವನ್ನು ದಯಪಾಲಿಸಲಿ. ಏಕೆಂದರೆ ನನ್ನ ತಪ್ಪಿನಿಂದಾಗಿ ಈ ಬ್ರಾಹ್ಮಣನ ಒಬ್ಬನೇ ಒಬ್ಬ ಮಗ ಚಿಕ್ಕ ಪ್ರಾಯದಲ್ಲಿ ಸಾವನ್ನಪ್ಪಿದ್ದಾನೆ. ಹೀಗಾಗಿ ನೀವು ಅವನನ್ನು ಜೀವಂತಗೊಳಿಸಿ. ಬ್ರಾಹ್ಮಣನಿಗೆ ಅವನ ಮಗನನ್ನು ಜೀವಂತಗೊಳಿಸುವೆನೆಂದು ಮಾತುಕೊಟ್ಟಿದ್ದೇನೆ. ಅದನ್ನು ನೀವು ನಿಜಗೊಳಿಸಬೇಕು."

ಶ್ರೀರಾಮನ ಮಾತುಗಳಿಂದ ಇಂದ್ರಾದಿ ದೇವತೆಗಳು ಸಂತುಷ್ಟರಾಗಿ ಹೀಗೆಂದರು —

ನಿರ್ವೃತೋ ಭವ ಕಾಕುತ್ಸ್ಥ ಸೋಽಸ್ಮಿನ್ನಹನಿ ಬಾಲಕಃ ।
ಜೀವಿತಂ ಪ್ರಾಪ್ತವಾನ್ಭೂಯಃ ಸಮೇತಶ್ಚಾಪಿ ಬಂಧುಭಿಃ ॥ ೧೪ ॥
ಯಸ್ಮಿನ್ಮುಹೂರ್ತೇ ಕಾಕುತ್ಸ್ಥ ಶೂದ್ರೋಽಯಂ ವಿನಿಪಾತಿತಃ ।
ತಸ್ಮಿನ್ಮುಹೂರ್ತೇ ಬಾಲೋಽಸೌ ಜೀವೇನ ಸಮಯುಜ್ಯತ ॥ ೧೫ ॥
ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಸಾಧು ಯಾಮ ನರರ್ಷಭ ॥ ೧೬ ॥

"ಎಲೈ ಶ್ರೀರಾಮನೆ, ನೀನು ನೆಮ್ಮದಿ ತಳೆ. ಇಂದು ಆ ಬಾಲಕ ಜೀವತಳೆದಿದ್ದಾನೆ. ಅವನು ಮತ್ತೆ ತನ್ನ

ಬಂಧುಬಳಗದವರನ್ನು ಕಂಡಿದ್ದಾನೆ. ಈ ಶೂದ್ರ ಸಾವನ್ನಪ್ಪುತ್ತಲೇ ಆ ಬಾಲಕ ಜೀವತಳೆದಿದ್ದಾನೆ. ಎಲ್ಲೈ ಪುರುಷಶ್ರೇಷ್ಠನೇ, ನಿನಗೆ ಒಳ್ಳೆಯದಾಗಲಿ. ನಿನಗೆ ಕಲ್ಯಾಣವಾಗಲಿ."

ದೇವತೆಗಳು ಪ್ರಸನ್ನರಾಗಿ ವರ ಕೇಳೆಂದರು. ಹೀಗಾಗಿ ಇದು ಅಯಾಚಿತ.

### ೭. ರುದ್ರ > ಮಾಂಧಾತಾ ಉತ್ತರಕಾಂಡ / ಪ್ರಕ್ಷಿಪ್ತ / ೩, ಸರ್ಗ ೨೩-೨೪ರಲ್ಲಿ

ಅಗಸ್ತ್ಯಮುನಿಯು ಶ್ರೀರಾಮನಿಗೆ ರಾವಣ ಮತ್ತು ಮಾಂಧಾತಾ ಇವರ ಯುದ್ಧದ ವೃತ್ತಾಂತವನ್ನು ತಿಳಿಸುತ್ತಿದ್ದಾನೆ.

"ಅನೇಕ ಪ್ರದೇಶಗಳನ್ನು ಗೆದ್ದುಕೊಳ್ಳುತ್ತ ರಾವಣನು ಸೋಮಲೋಕಕ್ಕೆ ಬಂದಾಗ ಅಲ್ಲಿ ವಿಲಾಸದಲ್ಲಿ ತೊಡಗಿದ್ದ ಪುಣ್ಯವಂತರನ್ನು ಕಂಡನು. 'ಪರ್ವತ' ಎಂಬ ಮುನಿಯು ಆತನಿಗೆ ಅವರ ಮಾಹಿತಿಯನ್ನು ತಿಳಿಸಿದನು. ಅವರು ಯುದ್ಧಾಸಕ್ತರಿರಲಿಲ್ಲ ; ಸ್ವರ್ಗವನ್ನು ಬಯಸುವವರಾಗಿದ್ದರು. ಇಲ್ಲಿ ಯುದ್ಧವನ್ನು ಅಪೇಕ್ಷಿಸುವವರು ಯಾರಿದ್ದಾರೆ ? ಎಂಬ ರಾವಣನ ಪ್ರಶ್ನೆಗೆ ಮುನಿಯು, ಮಾಂಧಾತರಾಜನ ಹೆಸರನ್ನು ನುಡಿದನು. ಅವನನ್ನು ಸೋಲಿಸಬೇಕೆಂದು ರಾವಣನು ಯುದ್ಧಕ್ಕೆ ಸಿದ್ಧನಾಗುತ್ತಲೆ, ಸಪ್ತದ್ವೀಪ ಮತ್ತು ಸಮುದ್ರಸಹಿತ ಪೃಥ್ವಿಯನ್ನು ಗೆದ್ದುಬಂದ ಮಾಂಧಾತನು ಅಲ್ಲಿಗೆ ಬಂದು ತಲುಪಿದನು. ರಾವಣನು ಅವನನ್ನು ಯುದ್ಧಕ್ಕೆ ಆಹ್ವಾನಿಸಿದಾಗ "ನಿನಗೆ ನಿನ್ನ ಪ್ರಾಣ ಬೇಡವಾಗಿದ್ದರೆ ನನ್ನೊಡನೆ ಯುದ್ಧ ಮಾಡು !" ಎಂದು ಮಾಂಧಾತನು ಪ್ರತ್ಯುತ್ತರಿಸಿದನು. ಇಬ್ಬರಿಗೂ ತುಮುಲಯುದ್ಧವು ನಡೆಯಿತು. ಇಬ್ಬರೂ ವಿವಿಧ ಪ್ರಕಾರದ ಶಸ್ತ್ರಾಸ್ತ್ರಗಳನ್ನು ಬಳಸಿದರು. ಮಾಂಧಾತನು ಸಮಸ್ತ ಪ್ರಾಣಿಮಾತ್ರರಿಗೂ ಭಯಂಕಾರಿಯಾದ, ದಿವ್ಯ, ಪ್ರಚಂಡ ಪಾಶುಪತಾಸ್ತ್ರವನ್ನು ಅಭಿಮಂತ್ರಿಸಲು ಆರಂಭಿಸುತ್ತಲೆ, ಆ ಅಸ್ತ್ರವನ್ನು ಕಂಡ ಪ್ರಾಣಿಗಳೆಲ್ಲ ದಿಕ್ಕೆಟ್ಟವು."

> ವರದಾನಾತ್ತು ರುದ್ರಸ್ಯ ತಪಸಾರಾಧಿತಮ್ ಮಹತ್ ।
> ತತಃ ಸಂಕಂಪತೇ ಸರ್ವ ತ್ರೈಲೋಕ್ಯಂ ಸಚರಾಚರಮ್ ॥ ೫೪ ॥
> ದೇವಾಃ ಸಂಕಂಪಿತಾಃ ಸರ್ವೇ ಲಯಂ ನಾಗಾಶ್ಚ ಸಂಗತಾಃ । ೫೫

ತಪಸ್ಸಿನಿಂದ ರುದ್ರನ ವರವನ್ನು ಪಡೆದ ಕಾರಣ ಮಾಂಧಾತನಿಗೆ ಆ ಶಸ್ತ್ರವು ಲಭಿಸಿತ್ತು. ಈ ಪ್ರಖರವಾದ ಅಸ್ತ್ರದ ಪ್ರಭಾವದಿಂದ ಎಲ್ಲ ಚರಾಚರ ಪ್ರಾಣಿಗಳನ್ನೊಳಗೊಂಡ ತ್ರೈಲೋಕ್ಯವು ನಡುಗಹತ್ತಿತ್ತು ; ಅಲ್ಲದೆ ನಾಗಾದಿಗಳು ಲಯವಾಗಹತ್ತಿದರು.

ಪುಲಸ್ತ್ಯ ಮತ್ತು ಗಾಲವ ಎಂಬ ಶ್ರೇಷ್ಠ ಮುನಿಗಳು ಸಮಾಧಿಬಲದಿಂದ ಈ ಸ್ಥಿತಿಯನ್ನು ಅರಿತುಕೊಂಡು ಮಾಂಧಾತರಾಜನನ್ನು ನಿರೋಧಿಸಿದರು. ರಾಕ್ಷಸಶ್ರೇಷ್ಠ ರಾವಣನನ್ನು ಹಲವಾರು ರೀತಿಯಲ್ಲಿ ನಿರ್ಭರ್ತ್ಸನೆ ಮಾಡಿ ಆತನನ್ನು ಯುದ್ಧದಿಂದ ಪರಾವೃತ್ತಗೊಳಿಸಿದರು.

ಈ ಸಂದರ್ಭದಲ್ಲಿ ವರ ದೊರೆತ ಉಲ್ಲೇಖ ಮಾತ್ರವಿದೆ. ರುದ್ರನು ಯಾವ ವರವನ್ನು ಕೊಟ್ಟಿದ್ದನೆಂಬುದು ನಿಚ್ಚಳವಿಲ್ಲ. ತಪೋಬಲದಿಂದ ವರ ದೊರೆತ ಕಾರಣ ಇದು 'ಯಾಚಿತ' ವರವಿರಬೇಕು.*

### ೮. ರಾವಣನಿಗೆ ಮಂತ್ರ ಪ್ರಾಪ್ತಿ ಉತ್ತರಕಾಂಡ : ಪ್ರಕ್ಷಿಪ್ತ - ಪ್ರಸಂಗ ೨೩, ೯೪ರಲ್ಲಿ ೪, ೫

ರಾವಣನು ದಿಗ್ವಿಜಯ ಮಾಡಲು ಚಂದ್ರಲೋಕಕ್ಕೆ ಹೋಗಿದ್ದನು. ರಾವಣನಿಗೆ ಅಲ್ಲಿಯ ಚಂದ್ರಕಿರಣಗಳ ಶೀತಲತೆಯನ್ನು ಸಹಿಸುವದು ಅಸಾಧ್ಯವಾಯಿತು. ಆಗ ಆತನು ತನ್ನ ಧನುಸ್ಸನ್ನೆತ್ತಿಕೊಂಡು ಚಂದ್ರನಿಗೆ ಗುರಿ ಇಡಲಾರಂಭಿಸಿದನು. ಈ ರೀತಿ ಅವನು ಚಂದ್ರನನ್ನು ಪೀಡಿಸುತ್ತಿರುವುದನ್ನು ಕಂಡು ಬ್ರಹ್ಮದೇವನು ಚಂದ್ರಲೋಕಕ್ಕೆ ಬಂದನು. ರಾವಣನನ್ನು ಕುರಿತು, "ನೀನು ಚಂದ್ರನಿಗೆ ಪೀಡೆ ಕೊಡಬೇಡ ' ಈ

---

* ಈ ಸರ್ಗವು ಗೀತಾ ಪ್ರೆಸ್ (ಗೋರಖಪುರ) ಪ್ರತಿಯಲ್ಲಿ ಇರುವುದಿಲ್ಲ. ಕೈ. ಕಾಶೀನಾಥಶಾಸ್ತ್ರೀ ಲೇಲೇಯವರು ಸರ್ಗ ೨೩, ೨೪ರಲ್ಲಿ ಐದು ಪ್ರಕ್ಷಿಪ್ತ ಸರ್ಗಗಳ ಅನುವಾದವನ್ನು ಕೊಟ್ಟಿದ್ದಾರೆ.

ಮಹಾತೇಜಸ್ಸುಳ್ಳ ದ್ವಿಜರಾಜನು ಜಗತ್ತಿನ ಹಿತವನ್ನು ಬಯಸುತ್ತಾನೆ. ನಾನು ನಿನಗೆ ಒಂದು ಮಂತ್ರವನ್ನು ಉಪದೇಶಿಸುವೆ. ಈ ಮಂತ್ರವನ್ನು ಜಪಿಸುವವನು ಎಂದಿಗೂ ಮರಣಹೊಂದಲಾರನು. ಮರಣವು ಸನ್ನಿಹಿತವಾದಾಗ ಈ ಮಂತ್ರವನ್ನು ಜಪಿಸಬೇಕು" ಎಂದನು. ಆಗ ರಾವಣನು ಈ ಮಂತ್ರದ ಅಪೇಕ್ಷೆಯನ್ನು ವ್ಯಕ್ತಪಡಿಸಿ ಬ್ರಹ್ಮದೇವನಿಗೆ, "ನೀನು ನನಗೆ ಪ್ರಸನ್ನನಾಗಿದ್ದರೆ ಮತ್ತು ನನಗೆ ಮಂತ್ರೋಪದೇಶವನ್ನು ಮಾಡುವ ಇಚ್ಛೆಯು ನಿನಗಿದ್ದರೆ ಆ ಮಂತ್ರವನ್ನು ನನಗೆ ಕೊಡು ! ಇದರಿಂದ ನನಗೆ ಎಲ್ಲ ದೇವತೆಗಳ, ಅಸುರರ, ದಾನವರ ಹಾಗೂ ಸಕಲ ಪಕ್ಷಿಪ್ರಾಣಿಮಾತ್ರರ ಭಯವು ಇಲ್ಲದಂತಾಗುವುದು. ನಿನ್ನ ಕೃಪಾಪ್ರಸಾದದಿಂದಾಗಿ ನಾನು ಯಾರಿಂದಲೂ ಜಯಿಸಲ್ಪಡಲಾರೆನು. ಇದರಲ್ಲಿ ಸಂಶಯವಿಲ್ಲ" ಎಂದು ನುಡಿದನು. ಬ್ರಹ್ಮದೇವನು ಈ ಮಂತ್ರಗಳನ್ನು ಕೊಟ್ಟನಂತರ ರಾವಣನು ಅವುಗಳನ್ನು ಸ್ವೀಕರಿಸಿದನು.

ದತ್ವಾ ತು ರಾವಣಸ್ಯೈವಂ ವರಂ ಸ ಕಮಲೋದ್ಭವಃ ।
ಪುನರೇವಾಗಮಾತ್ ಕ್ಷಿಪ್ರಂ ಬ್ರಹ್ಮಲೋಕಂ ಪಿತಾಮಹಃ ॥ ೫ ॥

ಈ ಸಂದರ್ಭದಲ್ಲಿ ವಾಲ್ಮೀಕಿಯು 'ವರ' ಎಂಬ ಶಬ್ದವನ್ನು ಯೋಜಿಸಿದ್ದಾನೆ. ಅನುವಾದದಲ್ಲಿಯೂ "ಈ ರೀತಿ ರಾವಣನಿಗೆ ವರವನ್ನು ಕೊಟ್ಟನಂತರ ಪಿತಾಮಹನಾದ ಬ್ರಹ್ಮದೇವನು ಕೂಡಲೇ ಬ್ರಹ್ಮಲೋಕಕ್ಕೆ ತೆರಳಿದನು" ಎಂದಿದೆ. ಹೀಗಿದ್ದರೂ, ವರಗಳನ್ನು ಕುರಿತು ಬರೆಯುವಾಗ ಈ ವರವನ್ನು ಏಕೆ ಬರೆದಿಲ್ಲ ? ಎಂಬುದು ಕೆಳಗಿನ ಕಾರಣಗಳಿಂದ ತಿಳಿದುಬರುತ್ತದೆ.

ಯಾವುದೇ ಮಂತ್ರವು ಸಿದ್ಧಮಂತ್ರವಾಗಲು ಯಥಾಯೋಗ್ಯ ಜಪವು ಆವಶ್ಯಕವಿದೆ. ಕೆಲವು ನಿಯಮ ಬಂಧನಗಳನ್ನು ಪಾಲಿಸಬೇಕಾಗುತ್ತದೆ. ಅದರಲ್ಲಿ ಲೋಪದೋಷಗಳಾದರೆ ಇಚ್ಛಿತ ಪರಿಣಾಮವು ಫಲಕಾರಿಯಾಗಲಾರದು. ವರದ ವಿಷಯದಲ್ಲಿ, ಒಮ್ಮೆ ವರವನ್ನು ಪಡೆದನಂತರ ವರ ಪಡೆದ ವ್ಯಕ್ತಿಯ ಮೇಲೆ ಯಾವ ಬಂಧನಗಳೂ, ಕಟ್ಟಳೆಗಳೂ ಇರುವದಿಲ್ಲ. ಆ ವ್ಯಕ್ತಿಯು ವರವನ್ನು ಪಡೆದನಂತರ ಹೇಗೆ ವರ್ತಿಸಿದರೂ ವರದ ಪರಿಣಾಮವು ನಿಶ್ಚಿತಸಾಧ್ಯವಿರುತ್ತದೆ. ಜಪವು ಮಂತ್ರಸಿದ್ಧಿಯ ಸಾಧನವಿದೆ, 'ಸಾಧ್ಯ'ವಲ್ಲ. ಇದು ಕಟ್ಟಳೆಯ ವರಗಳಿಗೆ ಅನ್ವಯಿಸುವುದಿಲ್ಲ.*

## ೯. ಹನುಮಾನನ ಇಷ್ಟಾರ್ಥಪೂರ್ತಿ — ಉತ್ತರಕಾಂಡ / ೪೦

ಶ್ರೀರಾಮನ ರಾಜ್ಯಾಭಿಷೇಕವಾದನಂತರ ಆತನು ಎಲ್ಲ ಅತಿಥಿಗಳನ್ನು ಯೋಗ್ಯವಾಗಿ ಸತ್ಕರಿಸಿ ಅವರನ್ನು ಬೀಳ್ಕೊಟ್ಟನು. ವಾನರರೆಲ್ಲರ ಮಾನಸನ್ಮಾನಗಳು ಪೂರ್ತಿಯಾದನಂತರ ಹನುಮಾನನು ಶ್ರೀರಾಮನನ್ನು ಕುರಿತು,

"ಹೇ ರಾಜನೇ, ನಿನ್ನಲ್ಲಿ ಸದಾಕಾಲವೂ ನನ್ನ ಅಪಾರಪ್ರೀತಿವಿಶ್ವಾಸಗಳಿರಲಿ ! ನನ್ನ ಭಕ್ತಿಯು ಅಚ್ಚಳಿಯದೇ ಉಳಿಯಲಿ. ನನ್ನ ಮನಸ್ಸಿನ ಒಲವು ನಿನ್ನಿಂದ ವಿಚಲಿತವಾಗಬಾರದು. ಹೇ ವೀರನೇ, ಭೂಲೋಕದಲ್ಲಿ ಶ್ರೀರಾಮಕಥೆಯು ಉಳಿದಿರುವವರೆಗೆ ನನ್ನ ಪ್ರಾಣವು ನನ್ನ ದೇಹದಲ್ಲಿರಲಿದೆ ಎನ್ನುವಲ್ಲಿ ಸಂಶಯವಿರಬಾರದು. ಎಲೈ ರಘುನಂದನನೇ, ಅಪ್ಸರೆಯರು ಈ ನಿನ್ನ ದಿವ್ಯಚರಿತ್ರೆಯನ್ನು ನನಗೆ ನಿರೂಪಿಸಲಿ. ನಾನು ನಿನ್ನ ಚರಿತಾಮೃತವನ್ನು ಸೇವಿಸಿ ನಿನ್ನ ದರ್ಶನದ ಇಚ್ಛೆಯನ್ನು ಪೂರ್ಣಗೊಳಿಸಿಕೊಳ್ಳುವೆ" ಎಂದು ನುಡಿದನು.

ಆಗ ಶ್ರೀರಾಮನು ಸಿಂಹಾಸನದಿಂದ ಎದ್ದು ಹನುಮಾನನನ್ನು ಆಲಿಂಗಿಸಿದನು.

ಏವಮೇತತ್ಕಪಿಶ್ರೇಷ್ಠ ಭವಿತಾ ನಾತ್ರ ಸಂಶಯಃ ।
ಚರಿಷ್ಯತಿ ಕಥಾ ಯಾವದೇಷಾ ಲೋಕೇ ಚ ಮಾಮಿಕಾ ॥ ೨೧ ॥
ತಾವತ್ತೇ ಭವಿತಾ ಕೀರ್ತಿಃ ಶರೀರೇಽಪ್ಯಸವಸ್ತಥಾ ।
ಲೋಕಾ ಹಿ ಯಾವತ್ಸ್ಥಾಸ್ಯಂತಿ ತಾವತ್ಸ್ಥಾಸ್ಯಂತಿ ಮೇ ಕಥಾಃ ॥ ೨೨ ॥

* ಈ ಸರ್ಗಗಳು ಗೀತಾ ಪ್ರೆಸ್, ಗೋರಖಪುರದ ಪ್ರತಿಯಲ್ಲಿಲ್ಲ. ಡಿ॥ ಕಾಶೀನಾಥಶಾಸ್ತ್ರೀ ಲೇಲೇ ಇವರ ಮರಾಠಿಯ ಅನುವಾದದಲ್ಲಿ ಈ ಸರ್ಗಗಳಿವೆ.

ಶ್ರೀರಾಮನು ಹನುಮಾನನಿಗೆ "ಎಲೈ ವಾನರಶ್ರೇಷ್ಠನೇ, ಎಲ್ಲವೂ ನಿನ್ನ ಇಷ್ಟದಂತೆ ಆಗುವದು ; ಇದರಲ್ಲಿ ಸಂದೇಹ ಬೇಡ. ಈ ನನ್ನ ಕಥೆಯು ಪ್ರಪಂಚದಲ್ಲಿರುವವರೆಗೆ ನೀನು ಕೀರ್ತಿಯುಳ್ಳವನಾಗಿ ಜೀವಿಸಿರುವೆ. ಭೂಲೋಕವು ಇರುವವರೆಗೆ ನನ್ನ ಚರಿತ್ರೆಯು ಉಳಿಯುವದು" ಎಂದು ನುಡಿದು ಶ್ರೀರಾಮನು ವೈಡೂರ್ಯಗಳಿಂದ ಥಳಥಳಿಸುತ್ತಿದ್ದ, ಚಂದ್ರಪ್ರಭೆಯಂತೆ ಕಾಂತಿಮಯವಾದ ತನ್ನ ಕೊರಳ ಹಾರವನ್ನು ಹನುಮಾನನ ಕೊರಳಿಗೆ ಹಾಕಿದನು.

ಶ್ರೀರಾಮನು ಹನುಮಾನನು ವ್ಯಕ್ತಪಡಿಸಿದ ಇಚ್ಛೆಯನ್ನು ಪೂರ್ತಿಗೊಳಿಸಿದ ಸಂಗತಿಯು ನಿಜವಿದ್ದರೂ ಅದು ಆಶೀರ್ವಾದದಂತೆ ಇದೆ. ಅದನ್ನು ವರವೆಂದು ಹೇಳಲಾಗುವದಿಲ್ಲ. ವಾಲ್ಮೀಕಿಯು 'ವರ' ಎಂಬ ಶಬ್ದವನ್ನು ಉಪಯೋಗಿಸಿಲ್ಲ. ಅದಲ್ಲದೇ ಕೊಡಲಾದ ಕೊರಳಿನ ಹಾರವು ಒಂದು ಅನುಗ್ರಹವಾಗಿದೆಯೇ ಹೊರತು ವರವಲ್ಲ.

## ೧೧. ಗೌತಮ > ಬ್ರಹ್ಮದತ್ತ ಉತ್ತರಕಾಂಡ / ಪ್ರಕ್ಷಿಪ್ತ ಈ ಸರ್ಗಗಳಲ್ಲಿ ೩ / ೫೯ - ೬೦

ಒಂದು ದುರ್ಬುದ್ಧಿಯ ರಣಹದ್ದು ಒಂದು ಗೂಬೆಯ ಮನೆಯನ್ನು ಹೊಕ್ಕು ಅದು ತನ್ನದೇ ಆದ ಜಗಳ ಕಾಯ್ದಿತು. ಈ ಎರಡು ಪಕ್ಷಿಗಳು ಒಂದನ್ನೊಂದು ದ್ವೇಷಿಸಹತ್ತಿದವು. ಮನೆಯ ಒಡೆತನದ ತೀರ್ಮಾನ ವನ್ನು ಜಗತ್ತಿನ ರಾಜನಾದ ಶ್ರೀರಾಮನಿಂದ ಪಡೆಯಬೇಕೆಂದು ಆ ಎರಡೂ ಪಕ್ಷಿಗಳು ಒಮ್ಮತಕ್ಕೆ ಬಂದವು. ಅವು ಶ್ರೀರಾಮನನ್ನು ಸ್ತುತಿಸಿ ತಮ್ಮ ತಮ್ಮ ಹೇಳಿಕೆಯನ್ನು ಮುಂದಿಟ್ಟವು. ಶ್ರೀರಾಮನು ಮಂತ್ರಿಗಳ ಸಹಿತ ಅದನ್ನು ಕೇಳಿಕೊಂಡನು. ವಿಚಾರವಿನಿಮಯ ನಡೆಯಿಸಿ ಆ ಮನೆಯು ಗೂಬೆಯದು ಎಂಬ ತೀರ್ಪನ್ನಿತ್ತನು. ರಣಹದ್ದು ಗೂಬೆಯ ಮನೆಯನ್ನು ಅಪಹರಿಸಿತ್ತೆಂಬುದು ನಿಖರವಾದ್ದರಿಂದ ಆ ರಣಹದ್ದಿಗೆ ಶಿಕ್ಷೆಯಾಗಬೇಕೆಂದು ನಿಶ್ಚಿತವಾಯಿತು. ಆಗ 'ಆಕಾಶವಾಣಿ'ಯಾಯಿತು. "ಹೇ ಶ್ರೀರಾಮನೇ, ತಪೋಬಲದಿಂದ ಪೂರ್ವದಲ್ಲಿ ದಗ್ಧವಾದ ಈ ರಣಹದ್ದನ್ನು ವಧಿಸಬೇಡ ! ಕಾಲರೂಪ ಗೌತಮ ಮುನಿಯು ಇದನ್ನು ದಹಿಸಿರುವನು. ಈ ರಣಹದ್ದು, ಪೂರ್ವದಲ್ಲಿ ಬ್ರಹ್ಮದತ್ತನೆಂಬ ಹೆಸರಿನಿಂದ ಖ್ಯಾತನೂ, ಶೂರನೂ, ಸತ್ಯನಿಷ್ಠನೂ, ಶುಚಿರ್ಭೂತನೂ ಆದ ರಾಜನಾಗಿದ್ದನು. ಒಮ್ಮೆ ಒಬ್ಬ ಬ್ರಾಹ್ಮಣನು ಈ ರಾಜನ ಮನೆಗೆ ಬಂದನು. ನೂರು ವರ್ಷಗಳಿಂದ ಹಸಿದಿದ್ದ ಆ ಬ್ರಾಹ್ಮಣನಿಗೆ ಊಟ ಮಾಡುವದಿತ್ತು. ಬ್ರಹ್ಮದತ್ತರಾಜನು ಅರ್ಘ್ಯಪಾದ್ಯಾದಿಗಳಿಂದ ಆತನನ್ನು ಸ್ವಾಗತಿಸಿ ಊಟಕ್ಕೆ ಏಳುವಂತೆ ವಿನಂತಿಸಿದನು. ಆದರೆ —

> ಮಾಂಸಮತ್ಸ್ಯಭವತ್ತತ್ರ ಆಹಾರೇ ತು ಮಹಾತ್ಮನಃ ।
> ಅಥ ಕ್ರುದ್ಧೇನ ಮುನಿನಾ ಶಾಪೋ ದತ್ತೋಽಸ್ಯ ದಾರುಣಃ ॥ ೫೯ ॥
> ಗೃಧ್ರಸ್ತ್ವಂ ಭವ ವೈ ರಾಜನ್ಮಾಮೈನಂ ಕ್ಷಥ ಸೋಽಬ್ರವೀತ್ ।
> ಪ್ರಸಾದಂ ಕುರು ಧರ್ಮಜ್ಞ ಅಜ್ಞಾನಾನ್ಮೇ ಮಹಾವ್ರತ ॥ ೬೦ ॥
> ಶಾಪಸ್ಯಾಂತಂ ಮಹಾಭಾಗ ಕ್ರಿಯತಾಂ ವೈ ಮಮಾನಘ ।
> ತದಜ್ಞಾನಂ ಕೃತಂ ಮತ್ವಾ ರಾಜಾನಂ ಮುನಿರಬ್ರವೀತ್ ॥ ೬೧ ॥
> ಉತ್ಪತ್ಸ್ಯತಿ ಕುಲೇ ರಾಜ್ಞಾಂ ರಾಮೋ ನಾಮ ಮಹಾಯಶಾಃ ।
> ಇಕ್ಷ್ವಾಕೂಣಾಂ ಮಹಾಭಾಗೋ ರಾಜಾ ರಾಜೀವಲೋಚನಃ ॥ ೬೨ ॥
> ತೇನ ಸ್ಪೃಷ್ಟೋ ವಿಪಾಪಸ್ತ್ವಂ ಭವಿತಾ ನರಪುಂಗವ । ೬೩

"ಅಂದು ಆ ಮಹಾತ್ಮನ ಭೋಜನಕ್ಕಾಗಿ ಮಾಂಸವು ಸಿದ್ಧವಾಗಿತ್ತು. ಆಗ ಮುನಿಯು ರೇಗಿ "ರಾಜನೇ, ನೀನು ರಣಹದ್ದಾಗು" ಎಂದು ಶಪಿಸಿದನು. ಈ ರೀತಿ ಮಾಡಬಾರದೆಂದು ಕೇಳಿಕೊಂಡು ಆ ರಾಜನು ಮುನಿಗೆ ಈ ರೀತಿ ಎಂದನು : "ಹೇ ಧರ್ಮಜ್ಞನೇ, ಹೇ ಮಹಾತಪಸ್ವಿಯೇ, ಅಜ್ಞಾನದಿಂದ ನಡೆದ ಅಪರಾಧವನ್ನು ಕ್ಷಮಿಸು ; ಹೇ ಮುನಿವರ್ಯ, ನನಗೆ ಬಂದ ಶಾಪವನ್ನು ನಿವಾರಿಸು."

ಈ ಅಪರಾಧವು ಅಜ್ಞಾನದಿಂದಾಗಿದೆ ಎಂದು ತಿಳಿದಾಗ ಆ ಮುನಿಯು ರಾಜನಿಗೆ ಇಂತೆಂದನು : "ಇಕ್ಷ್ವಾಕುರಾಜವಂಶದಲ್ಲಿ ಮಹಾತಪಸ್ವಿ, ಮಹಾಭಾಗ್ಯಶಾಲಿಯಾದ, ಕಮಲನಯನನಾದ 'ಶ್ರೀರಾಮ' ಎಂಬ ರಾಜನು ಜನಿಸುವನು. ಹೇ ಪುರುಷಶ್ರೇಷ್ಠನೇ, ಆತನ ಸ್ಪರ್ಶದಿಂದ ನೀನು ಶಾಪಮುಕ್ತನಾಗುವೆ."

ಶ್ರೀರಾಮನು ರಣಹದ್ದನ್ನು ಸ್ಪರ್ಶಿಸುತ್ತಲೇ ಆ ದೇಹವು ಇಲ್ಲದಾಗಿ ಚಂದನಲೇಪಿತ ಮಾನವದೇಹವು ಅದಕ್ಕೆ ದೊರೆಯಿತು. "ನೀನು ನನ್ನ ಶಾಪವನ್ನು ನಿವಾರಿಸಿದ್ದರಿಂದ ಘೋರ ನರಕದಿಂದ ನಾನು ಪಾರಾಗಿದ್ದೇನೆ" ಎಂದು ಆತನು ಹೇಳಿದನು.

ಇದು ಯಾಚಿತ ಉಃಶಾಪವಾಗಿದೆ.

ಈ ಪ್ರಕ್ಷಿಪ್ತವಾದ ಸ್ವರ್ಗವು ಗೋರಖಪುರದ ಪ್ರತಿಯಲ್ಲಿಲ್ಲ.

## ೧೧. ವಿಭೀಷಣನಿಗೆ ಶ್ರೀರಾಮನ ಆಜ್ಞೆ — ಉತ್ತರಕಾಂಡ / ೧೦೮

ಮಹಾಪ್ರಸ್ಥಾನಕ್ಕೆ ಹೊರಡುವದೆಂದು ನಿಶ್ಚಿತವಾದನಂತರ ಶ್ರೀರಾಮನು ಮಿಕ್ಕೆಲ್ಲ ಸಂಗತಿಗಳ ವಿಲ್ಹೇವಾಟನಲ್ಲಿ ತೊಡಗಿದನು. ಸಹೋದರರನ್ನು, ಮಿತ್ರ-ಬಂಧುಗಳನ್ನು ಭೇಟಿಯಾದನು. ಆ ಸಮಯದಲ್ಲಿ ವಿಭೀಷಣನಿಗೆ,

> ಯಾವತ್ಪ್ರಜಾ ಧರಿಷ್ಯಂತಿ ತಾವತ್ತ್ವಂ ವೈ ವಿಭೀಷಣ ।
> ರಾಕ್ಷಸೇಂದ್ರ ಮಹಾವೀರ್ಯ ಲಂಕಾಸ್ಥಃ ಸ್ವಂ ಧರಿಷ್ಯಸಿ ॥ ೨೭ ॥
> ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ।
> ಯಾವಚ್ಚ ಮತ್ಕಥಾ ಲೋಕೇ ತಾವದ್ರಾಜ್ಯಂ ತವಾಸ್ತ್ವಿಹ ॥ ೨೮ ॥

"ವಿಭೀಷಣನೇ, ಎಲೈ ಮಹಾವೀರ ರಾಕ್ಷಸಾಧಿಪತಿಯೇ, ಈ ಭೂಲೋಕದಲ್ಲಿ ಪ್ರಜೆಗಳಿರುವವರೆಗೆ ನೀನು ದೇಹದೊಂದಿಗೆ ಜೀವಿಸಿ ಲಂಕೆಯಲ್ಲಿರು. ಸೂರ್ಯಚಂದ್ರರು ಪೃಥ್ವಿಯನ್ನು ಬೆಳಗುತ್ತಿರುವವರೆಗೆ ಮತ್ತು ನನ್ನ ಕಥೆಯು ಈ ಲೋಕದಲ್ಲಿ ಪ್ರಚಾರದಲ್ಲಿರುವವರೆಗೆ ನಿನ್ನ ರಾಜ್ಯವು ಸ್ಥಿರವಿರಲಿ" ಎಂದು ನುಡಿದನು.

ಶ್ರೀರಾಮನ ಈ ಮೇಲಿನ ಹೇಳಿಕೆಯನ್ನು ವಾಲ್ಮೀಕಿಯು 'ವರ'ವೆಂದು ಹೇಳದೇ ಅದಕ್ಕೆ 'ಆಜ್ಞೆ' ಎಂಬ ಶಬ್ದವನ್ನು ಬಳಸಿದ್ದಾನೆ. ಶ್ರೀರಾಮನು ಮತ್ತೆ,

> ಶಾಸಿತಶ್ಚ ಸಖಿತ್ವೇನ ಕಾರ್ಯಂ ತೇ ಮಮ ಶಾಸನಮ್ ॥ ೨೯ ॥

"ಮಿತ್ರತ್ವದಿಂದ ನಾನು ನಿನಗೆ ಆಜ್ಞೆಮಾಡುತ್ತಿದ್ದೇನೆ. ನೀನು ಅದರಂತೆ ನಡೆದುಕೊಳ್ಳುವದು ಅವಶ್ಯವಿದೆ" ಎಂದು ನುಡಿದನು. ಹನುಮಾನನ ಇಷ್ಟಾರ್ಥಪೂರ್ತಿಯಂತೆ (ಉತ್ತರಕಾಂಡ / ೪೦ ಪರಿಶೀಲಿಸಿರಿ). ಈ ಸಂದರ್ಭದಲ್ಲಿಯೂ ಶ್ರೀರಾಮನು ತನ್ನ ಉತ್ಕಟಪ್ರೇಮ-ಸದ್ಭಾವನೆಗಳನ್ನು ಪ್ರಕಟಿಸಿದ್ದಾನೆ. ಇದು ಆತನ ಸದಿಚ್ಛೆಯಾಗಿತ್ತು. ಇದಕ್ಕೆ ಆಶೀರ್ವಾದವೆಂದರೂ ಅಡ್ಡಿಯಿಲ್ಲ ; 'ವರ'ವೆಂದು ಮಾತ್ರ ಹೇಳಲಾಗುವುದಿಲ್ಲ.

## ಪರಿಶಿಷ್ಟ ೨ : ಶಾಪಗಳ ಕಾರಣಗಳು

| ಕ್ರಮ | ಶಾಪಗಳ ಕಾರಣಗಳು | ಶಾಪಗಳ ಕ್ರಮಾಂಕಗಳು | ಒಟ್ಟು |
|---|---|---|---|
| ೧ | ಹಟಮಾರಿತನ, ಅತಿಯಾದ ಬೇಡಿಕೆ, ಕೋಪ | ೧೯, ೨೨, ೪೩, ೫೨ | ೪ |
| ೨ | ಅನಾದರ, ಅವಮಾನ, ಆಶಾಭಂಗ | ೧೩, ೧೫, ೧೬, ೧೮, ೫೩ | ೫ |
| ೩ | ಅನಿಷ್ಟಭೋಜನ, ಅನಿಷ್ಟವೇಳೆ | ೪೨, ೫೫ | ೨ |
| ೪ | ಅಜ್ಞಾತ ಮತ್ತು ಅನಿಶ್ಚಿತ ಕಾರಣಗಳು | ೪, ೧೦, ೨೯, ೩೨ | ೪ |
| ೫ | ಆಕ್ರಮಣ, ಸೊಕ್ಕಿನ ನಡತೆ, ಅಪಹಾರ, ಮಿತಿಯಿಲ್ಲದ ನಡತೆ, ಹೆದರಿಸುವುದು, ತೊಂದರೆ ಕೊಡುವುದು, ಮುಂ. | ೫, ೭, ೨೭, ೨೮, ೩೦, ೩೪, ೩೬, ೩೭, ೫೪ | ೯ |
| ೬ | ಇಚ್ಛಿತ ಕೆಲಸಕ್ಕೆ ವಿಳಂಬ | ೨೬, ೩೩ | ೨ |
| ೭ | ಇಚ್ಛೆಗೆ ವಿರುದ್ಧವಾದ ನಡತೆ | ೫೯ | ೧ |
| ೮ | ಪ್ರಶ್ನೆಗಳಿಗೆ ಉತ್ತರಗಳನ್ನು ನೀಡದಿರುವುದು | ೨೫ | ೧ |

